
ಋಗ್ವೇದ ಸಂಹಿತಾ
ಭಾಗ—೯
ಪ್ರಥಮಾಷ್ಟಕದಲ್ಲಿ ಎಂಟನೆಯ ಅಧ್ಯಾಯವು
ಪ್ರಥಮ ಮಂಡಲದ ಸೂಕ್ತಗಳು ೧೧೩-೧೨೧

7-12-66

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೯

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೯

ಪ್ರಥಮಾಷ್ಟಕದಲ್ಲಿ ಎಂಟನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೧೧೩–೧೨೧

*Translated with Exhaustive Critical Notes*

*by*

**Asthana Mahavidwan**

**H. P. VENKATA RAO,**

*Editor.*

*Printed at*

SREE SHARADA PRESS

MYSORE.

1950

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**

## ಸಂಕೇತಾಕ್ಷರಗಳ ವಿವರಣೆಯು.

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮ ಸೂತ್ರ
ಆಪ. ಪ. ಸೂ—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ. ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದ ಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೋಯೋಪನಿಷತ್
ಐ. ಬ್ರಾ.—ಐತರೇಯ ಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

---

Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

---

**ಸಹಾಯಕ ವಿದ್ವನ್ಮಂಡಲಿ**

1. **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥ G. N. ಚಕ್ರವರ್ತಿ M. A.**
   Professor of Sanskrit. St. Philomina's College, Mysore.
7. **ಬ್ರ॥ ಶ್ರೀ॥ ವೆಂಕಟವರದಾಚಾರ್, M. A., B. T.,** ಸಾಹಿತ್ಯವಿದ್ವಾನ್.
8. **ಬ್ರ॥ ಶ್ರೀ॥ S. ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್,
   Govt. Oriental Research Institute, Mysore.
10. **ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು.
   Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ
**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**
ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ



ಋಕ್ಸಂಹಿತೆಯ ಈ ಭಾಗದಲ್ಲಿ ಪ್ರಥಮಮಂಡಲದ ೧೧೩ ರಿಂದ ೧೨೧ ರ ವರೆಗೆ ೯ ಸೂಕ್ತಗಳಿವೆ. **ರಾತ್ರ್ಯುಷಸ್ಸುಗಳು, ರುದ್ರ, ಸೂರ್ಯ, ಅಶ್ವಿನೀ, ಇಂದ್ರ** ಇವರು ಈ ಸೂಕ್ತಗಳ ದೇವತೆಗಳು. ಈ ಅಧ್ಯಾಯದಲ್ಲಿ ಅರ್ಧಕ್ಕಿಂತಲೂ ಅಧಿಕಭಾಗವು ಅಶ್ವಿನೀದೇವತೆಗಳ ಪರವಾಗಿದೆ. ಅಶ್ವಿನೀದೇವತಾಕವಾದ ಋಕ್ಕುಗಳಿಗೆಲ್ಲಾ **ಸ್ಕಂದಸ್ವಾಮಿ**ಗಳ ಭಾಷ್ಯದಲ್ಲಿರುವ ವಿವರಣೆಯು **ಸಾಯಣ**ಭಾಷ್ಯದಲ್ಲಿಲ್ಲ. ಈ ದೇವತೆಗಳಿಗೆ ಸಂಬಂಧಿಸಿದ ಸೂಕ್ತಗಳೆಲ್ಲವೂ ಉಪಾಖ್ಯಾನಮಯವಾಗಿದೆ. **ಸ್ಕಂದಸ್ವಾಮಿಯು** ಈ ಎಲ್ಲಾ ಉಪಾಖ್ಯಾನಗಳನ್ನೂ ವಿವರಿಸಿ **ಅಶ್ವಿನೀದೇವತೆ**ಗಳಿಂದ ನಾನಾ ವಿಧದಲ್ಲಿ ಸಹಾಯವನ್ನು ಹೊಂದಿದ ವ್ಯಕ್ತಿಗಳ ಕಥೆಗಳನ್ನು ಸೂಚಿಸಿದ್ದಾರೆ. **ಸಾಯಣರು** ಇವರಿಗಿಂತಲೂ ಈಚಿನವರಾದರೂ ಸಹ ಇವರ ಭಾಷ್ಯದಲ್ಲಿರುವ ಅನೇಕ ಅಂಶಗಳು **ಸಾಯಣ** ಭಾಷ್ಯದಲ್ಲಿಲ್ಲ. ಆದುದರಿಂದ ಈ ಭಾಗದ ವಿವರಣೆಯಲ್ಲಿ ಸ್ಕಂದಸ್ವಾಮಿ ಭಾಷ್ಯವನ್ನು ಧಾರಾಳವಾಗಿ ಉಪಯೋಗಿಸಿದೇವೆ. ಇವರ ಭಾಷ್ಯವು ಪೂರ್ಣವಾಗಿ ಉಪಲಬ್ಧವಾಗದಿರುವುದು ಒಂದು ದೊಡ್ಡ ನಷ್ಟವಾಗಿದೆ.

ಹದಿನಾಲ್ಕನೇ ಶತಮಾನಕ್ಕೆ ಸೇರಿದ ಸಾಯಣರಿಗಿಂತಲೂ ಸ್ಕಂದಸ್ವಾಮಿಯು ಪ್ರಾಚೀನರೆಂಬುದು ನಿರ್ವಿವಾದವಾದ ವಿಷಯವಾಗಿದೆ. ಶತಪಥಬ್ರಾಹ್ಮಣಕ್ಕೆ ಭಾಷ್ಯವನ್ನು ಬರೆದಿರುವ **ಹರಿಸ್ವಾಮಿಯು** ಇವರ ಶಿಷ್ಯನೆಂಬುದಕ್ಕೆ ಅನೇಕ ಆಧಾರಗಳಿವೆ.

**ಶ್ರೀಮತೋಽವಂತಿನಾಥಸ್ಯ ವಿಕ್ರಮಸ್ಯ ಕ್ಷಿತೀಶಿತುಃ ।**
**ಧರ್ಮಾಧ್ಯಕ್ಷೋ ಹರಿಸ್ವಾಮೀ ವ್ಯಾಖ್ಯಾಂ ಕುರ್ವೇ ಯಥಾಮತಿ ॥**

ಅವಂತಿನಾಥನೂ, ಚಕ್ರವರ್ತಿಯೂ ಆದ ವಿಕ್ರಮಾದಿತ್ಯನ ಆಸ್ಥಾನದಲ್ಲಿ ನ್ಯಾಯಾಧ್ಯಕ್ಷಪದವಿಯನ್ನು ಅಲಂಕರಿಸಿರುವವನೂ ಹರಿಸ್ವಾಮಿಯೆಂಬ ಹೆಸರುಳ್ಳವನೂ ಆದ ನಾನು ಯಥಾಮತಿ ಶತಪಥಬ್ರಾಹ್ಮಣದ ವ್ಯಾಖ್ಯೆಯನ್ನು ಬರೆಯುತ್ತೇನೆ ಎಂದು ಹರಿಸ್ವಾಮಿಯು ತನ್ನ ಭಾಷ್ಯದ ಉಪೋದ್ಘಾತದಲ್ಲಿ ಹೇಳಿದ್ದಾನೆ. ಮತ್ತು—

**ಯಃ ಸಮ್ರಾಟ್ ಕೃತವಾನ್ ಸಪ್ತ ಸೋಮಸಂಸ್ಥಾಸ್ತಥರ್ಕಶ್ರುತಿಂ ।**
**ವ್ಯಾಖ್ಯಾಂ ಕೃತ್ವಾಧ್ಯಾಪಯನ್ಮಾಂ ಶ್ರೀ ಸ್ಕಂದಸ್ವಾಮ್ಯಸ್ತಿ ಮೇ ಗುರುಃ ॥**

ಸೋಮಯಾಗಗಳ ಪ್ರಯೋಗವನ್ನು ಮತ್ತು ಋಗ್ವೇದಕ್ಕೆ ಭಾಷ್ಯವನ್ನು ಬರೆದಿರುವವರೂ, ಶಾಸ್ತ್ರಜ್ಞರುಗಳಿಗೆಲ್ಲಾ ಚಕ್ರವರ್ತಿಯೂ ಆದ ಸ್ಕಂದಸ್ವಾಮಿಗಳು ನನ್ನ ಗುರುಗಳು ಎಂದು ಹರಿಸ್ವಾಮಿಯು ಹೇಳಿರುತ್ತಾನೆ. ಹರಿಸ್ವಾಮಿಯ ಕಾಲವೂ ಸಹ ಅವನ ವಾಕ್ಯದಿಂದಲೇ ತಿಳಿಯುತ್ತದೆ.

**ಯದಾ ದೀ (=ಬ್ದಾ) ನಾಂ ಕಲೇರ್ಜಗ್ಮುಃ ಷಟ್ತ್ರಿಂಶಚ್ಛತಕಾನಿ ವೈ ।**
**ಚತ್ವಾರಿಂಶತ್ಸಮಾಶ್ಚಾನ್ಯಾಸ್ತದಾ ಭಾಷ್ಯಮಿದಂ ಕೃತಂ ॥**

ಕಲಿವತ್ಸರಗಳಲ್ಲಿ ಮೂರುಸಾವಿರದ ಆರುನೂರನಲವತ್ತು ವರ್ಷಗಳು ಕಳೆದಾಗ ನಾನು ಈ ಭಾಷ್ಯವನ್ನು ಬರೆದೆನು ಎಂದು ತನ್ನ ಕಾಲವನ್ನು ಹೇಳಿಕೊಂಡಿದ್ದಾನೆ. ಇದರಿಂದ ಐತಿಹಾಸಿಕ ಸಂಶೋಧಕರ ಗಣನೆಯಂತೆ ಕ್ರಿ. ಶ. ೫೩೮ ನೇ ವರ್ಷವೆಂದು ಹೇಳಬಹುದು. ಈ ಕಾಲದಲ್ಲಿ ಮಾಳವಕ್ಕೆ ಅಧಿಪತಿಯಾಗಿದ್ದ **ಯಶೋಧರ್ಮನೇ ಹರಿಸ್ವಾಮಿಗೆ**

ಆಶ್ರಯದಾತನಾದ ವಿಕ್ರಮಾದಿತ್ಯನಾಗಿರಬೇಕು. ಯಶೋಧರ್ಮನು ಕ್ರಿ. ಶ. ೫೨೮ ರಲ್ಲಿ ಹೂಣರನ್ನು ಗೆದ್ದು ತನ್ನ ರಾಜ್ಯವನ್ನು ಸುಸಂಘಟಿತವಾಗುವಂತೆ ಮಾಡಿದನು. ಅವನ ಆಶ್ರಯದಲ್ಲಿದ್ದ **ಹರಿಸ್ವಾಮಿಯು** ಭಾಷ್ಯವನ್ನು ೫೩೮ ರಲ್ಲಿ ಬರೆದಿರಬೇಕು. ಇವನಿಗೆ ಗುರುಗಳಾದ ಸ್ಕಂದಸ್ವಾಮಿಗಳು ಕ್ರಿ. ಶ. ಐದನೆಯ ಶತಮಾನದ ಅಂತ್ಯದಲ್ಲಾಗಲಿ ಅಥವಾ ಆರನೆಯ ಶತಮಾನದ ಆರಂಭದಲ್ಲಾಗಲಿ ಇದ್ದಿರಬೇಕೆಂದು ಮೇಲಿನ ಆಧಾರಗಳಿಂದ ಹೇಳಬಹುದು.

[ಯಶೋಧರ್ಮನೇ ವಿಕ್ರಮಾದಿತ್ಯನೆಂಬುದೂ, ಇವನು ಕ್ರಿ. ಶ. ಆರನೆಯ ಶತಮಾನಕ್ಕೆ ಸೇರಿದವನೆಂಬುದೂ Harsha By Radhakumuda Mukherji, ಎಂಬ ಗ್ರಂಥದಿಂದ ತಿಳಿಯುತ್ತದೆ.]

ಎಂಟನೆಯ ಅಧ್ಯಾಯವು ಉಷೋದೇವತಾಕವಾದ ಸೂಕ್ತದಿಂದ ಪ್ರಾರಂಭವಾಗುತ್ತದೆ. **ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿಃ, ಭಾಸ್ವತೀ ನೇತ್ರೀ ಸೂನೃತಾನಾಂ, ಏಷಾ ದಿವೋ ದುಹಿತಾ, ಯಾವಯದ್ದ್ವೇಷಾ ಋತಪಾ ಋತೇಜಾಃ,** ಇತ್ಯಾದಿ ವರ್ಣನೆಗಳಿಂದ ಸಮಸ್ತವಾದ ಗ್ರಹನಕ್ಷತ್ರಾದಿಗಳಿಗಿಂತಲೂ ಶ್ರೇಷ್ಠಳೂ, ತೇಜಸ್ವಿನಿಯೂ, ಪ್ರಿಯಸತ್ಯಾತ್ಮಕಗಳಾದ ವಾಗ್ವ್ಯವಹಾರಗಳಿಗೆ ಕಾರಣಭೂತಳೂ, ದ್ಯುಲೋಕೋತ್ಪನ್ನಳೂ, ಸಮಸ್ತ ಭೂತಗಳಿಗೂ ಚೈತನ್ಯದಾತಳೂ ಆದ ಉಷೋದೇವಿಯು ಸ್ತುತಳಾಗಿದ್ದಾಳೆ.

ಋತ್ಸಂಹಿತೆಯಲ್ಲೆಲ್ಲಾ ಉಷೋದೇವತಾಕವಾದ ಸೂಕ್ತಗಳು ಇಪ್ಪತ್ತಕ್ಕಿಂತ ಅಧಿಕವಾಗಿದೆ. ನೂರಾರು ಋಕ್ಕುಗಳಲ್ಲಿ ಈ ದೇವತೆಯ ವರ್ಣನೆಯೂ, ಸ್ತುತಿಯೂ ಸೂಕ್ತದ್ರಷ್ಟೃವಿನ ಕವಿತಾಪ್ರತಿಭೆಯನ್ನು ಬೆಳಗುವಂತೆ ಮಾಡುತ್ತವೆ. ಆದರೆ **ಪುನಃಪುನರ್ಜಾಯಮಾನಾ ಪುರಾಣೀ, ದೇವೀ ಯುವತಿಃ,** ಇತ್ಯಾದಿ ಋಕ್ಕುಗಳಲ್ಲಿ ವ್ಯಕ್ತವಾಗುವ ಹರ್ಷದೊಡನೆ ಒಂದು ವಿಧವಾದ ವ್ಯಾಕುಲವೂ ಮಿಶ್ರಿತವಾಗಿದೆ. ಲೋಕಕ್ಕೆಲ್ಲಾ ಚೈತನ್ಯವನ್ನೂ, ಬೆಳಕನ್ನೂ ಕೊಟ್ಟು ಜೀವಕಳೆಯನ್ನು ತುಂಬತಕ್ಕ ಉಷಸ್ಸಿನ ಸೊಬಗು ಮತ್ತು ಸೌಂದರ್ಯಗಳನ್ನು ವರ್ಣಿಸಿ ಆನಂದಾನುಭವವನ್ನು ವ್ಯಕ್ತಪಡಿಸುವುದರ **ಮೂಲಕ** ಜೊತೆಯಲ್ಲಿಯೇ ನಿತ್ಯವಾಗಿ ತಾರುಣ್ಯಾವಸ್ಥೆಯನ್ನೇ ಹೊಂದಿರುವ ಉಷಸ್ಸಿನ ಎದುರಿಗೇ ಮಾನವಾದಿ ಸಕಲಪ್ರಾಣಿಗಳೂ ಸಹ ಅಲ್ಪಕಾಲದಲ್ಲಿಯೇ ವಾರ್ಧಿಕ್ಯವನ್ನು ಹೊಂದಿ ಮೃತರಾಗುವ ಭಾವನೆಯಲ್ಲಿ ಬಹುಮಟ್ಟಿಗೆ ಉದ್ವೇಗವೂ ತೋರುತ್ತದೆ. ಸೌಂದರ್ಯಾನುಭವದೊಡನೆ ಸದ್ಯದ ಸಾಕ್ಷಾತ್ಕಾರವೂ ಜೊತೆಗೂಡಿದೆ. ಉಷೋದೇವತೆಯ ವಿಷಯವಾಗಿ **ಪ್ರೊ|| ಮಾಕ್ಸ್ ಮುಲ್ಲರ್** ಎಂಬ ಆಗ್ಲಪಂಡಿತನು ಹೇಳಿರುವ ವಿಮರ್ಶಾತ್ಮಕವಾದ ವಾಕ್ಯಗಳು ಗಮನಾರ್ಹವಾದುದರಿಂದ ಅವುಗಳನ್ನು ಇಲ್ಲಿ ಉದಹರಿಸಿದೆ.

"The dawn, which to us is merely a beautiful sight, was to the early gazer and thinker, the broblem of all problems. It was the unknown land from whence rose every day those bright emblemes of a divine power which left in the mind of man the first impression and intimation of another world, of power above, of order and wisdom. What we simply call the sun-rise, brought before their eyes every day, the riddle of the riddles, the riddle of existence. The days of their life sprang from that dark abyss which

every morning seemed instinct with light and life, Their Youth, their manhood, their old age, all were to the she Vedic bards the gift of that heavenly mother who appeared bright, young, unchanged, immortal every morning while everything else seemed to grow old, to change and drop and at last to set, never to return. It was there, in that bright chamber, that as their poets said, mornings and days were spun, or under a different image, where mornings and days were nourished, where life or time was drawn ont"

[Lectures ou the Science of Language. Vol. II P. 481-482]

**ಉಷಸ್ಸು ಸೂರ್ಯನಿಗೆ** ಪ್ರಿಯತಮಳಾದ ಪತ್ನಿಯೆಂದು ಕೆಲವು ಕಡೆಗಳಲ್ಲಿಯೂ (ಸೂರ್ಯಸ್ಯ ಯೋಷಾ : ೭-೭೫-೫) ಸೂರ್ಯಮಾತೆಯೆಂದು ಕೆಲವು ಕಡೆಗಳಲ್ಲಿಯೂ (ಅಜೀಜನನ್ ಸೂರ್ಯಂ ; ೭-೭೮-೩) ವರ್ಣಿತಳಾಗಿದ್ದಾಳೆ. ೧-೧೧೩-೨ ; ೧೦-೧೨೭-೩ ; ೧-೧೨೪-೮ ಇತ್ಯಾದಿ ಋಕ್ಕುಗಳಲ್ಲಿ ರಾತ್ರಿಯ ಸಹೋದರಿಯೆಂದೂ, ೧-೧೨೩-೫ ರಲ್ಲಿ **ಭಗಸ್ಯ ಸ್ವಸಾ ವರುಣಸ್ಯ ಜಾಮಿಃ ।** ಭಗನ ಸಹೋದರಿ ಮತ್ತು ವರುಣನಿಗೆ ನಿಕಟವಾದ ಬಂಧುವೆಂದೂ ಹೇಳಿದೆ. ಈ ಎಲ್ಲಾ ಸಂಬಂಧಗಳಂತೆಯೇ **ಉಷಸ್ಸಿಗೂ, ಅಶ್ವಿನೀದೇವತೆಗಳಿಗೂ** ಇರತಕ್ಕ ಸಂಬಂಧವೂ ಸಹ ಅತ್ಯಂತ ನಿಕಟವಾದುದು. **ದಿವೋ ದುಹಿತ್ರೋಷಸಾ ಸಚೇಥೇ ।** (೧-೧೮೩-೨), **ಸಖಾಭೂದಶ್ವಿನೋರುಷಾಃ ।** (೪-೫೨-೩) **ಉತ ಸಖಾಸ್ಯಶ್ವಿನೋಃ** (೪-೫೨-೩) ಎಂಬ ವಾಕ್ಯಗಳು ಉಷಸ್ಸಿಗೂ **ಅಶ್ವಿನೀ**ದೇವತೆಗಳಿಗೂ ಇರತಕ್ಕ ಸಂಬಂಧವನ್ನು ತಿಳಿಸುತ್ತವೆ

ಈ ಅಧ್ಯಾಯದ ಐದು ಸೂಕ್ತಗಳು ಅಶ್ವಿನೀದೇವತಾಪರವಾಗಿವೆ. ಈ ದೇವತೆಗಳನ್ನು ಸ್ತುತಿಸುವ ಸೂಕ್ತಗಳು ಋಕ್ಸಂಹಿತೆಯಲ್ಲೆಲ್ಲಾ ಒಟ್ಟು ಐವತ್ತಕ್ಕೆ ಮೇಲ್ಪಟ್ಟು ಇವೆ. ಅನೇಕ ವಿಷಯಗಳಲ್ಲಿ ದ್ವಿಗುಣಾತ್ಮಕವಾದ ಸ್ವರೂಪವು ಇವರ ವೈಶಿಷ್ಟ್ಯ. ಇವರಿಗೆ ಹೋಲಿಸತಕ್ಕ ವಸ್ತುಗಳೂ ಸಹ ಈ ರೂಪವುಳ್ಳವಾಗಿಯೇ ಇವೆ. **ಗ್ರಾವಾಣೇವ, ಗೃಧ್ರೇವ, ಬ್ರಹ್ಮಾಣೇವ** (೨-೩೯-೧) **ಮೇನೇ ಇವ ತನ್ವಾ ೩ ಶುಂಭಮಾನೇ ದಂಪತೀವ ಕ್ರತುವಿದಾ ಜನೇಷು** (೨-೩೯-೨) **ಶೃಂಗೇವ, ಶಫಾವಿವ, ಚಕ್ರವಾಕೇವ** (೨-೩೯-೩) **ಹಸ್ತಾವಿವ, ಪಾದೇವ** (೫) **ಓಷ್ಠಾವಿವ, ನಾಸೇವ, ಕರ್ಣಾವಿವ** (೬) ಹೀಗೆ ಉಭಯಾತ್ಮಕವಾದ ವಸ್ತುಗಳಿಗೇ ಯಾವಾಗಲೂ ಅವರನ್ನು ಹೋಲಿಸಿದೆ. ಅವರು ಯಾವಾಗಲೂ ಯುವಕರೆಂದೂ (೭-೬೭-೧೦); ಪ್ರಾಚೀನರೆಂದೂ (೬-೬೨-೫); ಸುಂದರರೆಂದೂ (೬-೬೨-೫), ಮಧುವರ್ಣವುಳ್ಳವರೆಂದೂ (೮-೨೬-೬) ತೇಜಸ್ಸುಗಳಿಗೆ ಅಧಿಪತಿಗಳೆಂದೂ (೮-೨೨-೪) ಅತ್ಯಂತ ವೀರ್ಯವುಳ್ಳವರೆಂದೂ (೬-೬೨-೫) ಹೀಗೆಯೇ ಇನ್ನೂ ಅನೇಕ ವಿಧವಾಗಿಯೂ ವರ್ಣಿತರಾಗಿದ್ದಾರೆ. ಇವರ ನಾನಾ ಗುಣಗಳನ್ನು ವರ್ಣಿಸತಕ್ಕ ಬೇರೆ ಬೇರೆ ಋಕ್ಕುಗಳ ವಿಶೇಷ ವಿಷಯಗಳನ್ನು ವಿವರಿಸುವಾಗ ಇವರ ಮಹಿಮೆಯು ವಿಶದವಾಗಿ ಹೇಳಲ್ಪಟ್ಟಿರುವುದು.

ಅಶ್ವಿನೀದೇವತೆಗಳ ಅನಂತವಾದ ಗುಣಗಳ ವೈಶಿಷ್ಟ್ಯವೇನೆಂದರೆ—ಇವರು ಆಪತ್ತಿಗೆ ಸಿಕ್ಕಿದ ಭಕ್ತರನ್ನು ರಕ್ಷಿಸುವುದೂ ಮತ್ತು ಅವರಿಗೆ ಅಪೇಕ್ಷಿತಗಳಾದ ಸಂಪತ್ತನ್ನೊದಗಿಸುವುದೂ ಆಗಿದೆ. ಇಂದ್ರಾದಿದೇವತೆಗಳೂ ಸಹ ತಮ್ಮ ಭಕ್ತರಿಗೆ ಸಹಾಯಮಾಡಿದರೂ ಅಶ್ವಿನೀದೇವತೆಗಳ ಸಹಾಯವು ಎಲ್ಲಕ್ಕಿಂತಲೂ ವಿಶೇಷರೀತಿಯದಾಗಿದೆ. ಇಂದ್ರಾದಿಗಳು ಯುದ್ಧದಲ್ಲಿ ತೊಂದರೆಗೆ ಸಿಕ್ಕಿದ ಭಕ್ತರನ್ನು ಮಾತ್ರ ಶತ್ರುಗಳಿಂದ ಬಿಡಿಸಿ ರಕ್ಷಣೆಯನ್ನು ನೀಡುವುದರಲ್ಲಿ ಪ್ರಸಿದ್ಧರಾಗಿದ್ದರೂ, **ಅಶ್ವಿನೀ** ದೇವತೆಗಳು ಎಲ್ಲಾ ವಿಧವಾದ ಆಪತ್ತುಗಳನ್ನೂ ಬಿಡಿಸಿ ತಮ್ಮ ರಕ್ಷಣೆಯನ್ನು ನೀಡುವುದರಲ್ಲಿ ಪ್ರಸಿದ್ಧರಾಗಿದ್ದಾರೆ. ಇವರು ಸಾಗರಕ್ಕೆ ಸಂಬಂಧಿಸಿದ ದೇವತೆಗಳಾದುದರಿಂದ **ನೌಕಾ** ವಿಪತ್ತಿನಿಂದ ತೊಂದರೆಗೆ ಸಿಕ್ಕಿದ **ತುಗ್ರ**ಪುತ್ರನಾದ **ಭುಜ್ಯುವನ್ನು** ಉತ್ತಮವಾದ ನೌಕೆಯನ್ನೊದಗಿಸಿ ರಕ್ಷಿಸಿದರು. ಇವರು **ದೇವವೈದ್ಯ**ರಾದುದರಿಂದ ಅನೇಕ ವಿಧವಾದ ವ್ಯಾಧಿಗಳಿಂದ ನರಳುತ್ತಿದ್ದ ಭಕ್ತರನ್ನು ಗುಣಪಡಿಸಿದರು. ಇವರಿಂದ ಈ ವಿಧವಾದ ಸಹಾಯವನ್ನು ಪಡೆದು ವಾರ್ಧಕ್ಯದ ನಾಶವಾಗಿ ಯೌವನವನ್ನು ಪಡೆದ **ಚ್ಯವಾನ**ನೆಂಬ ಋಷಿಯ ಕಥೆಯು ಶತಪಥಾದಿ ಬ್ರಾಹ್ಮಣಗಳಲ್ಲೆಲ್ಲಾ ಉಕ್ತವಾಗಿದೆ. ಹೀಗೆಯೇ **ವಿಮದ, ಅತ್ರಿ** ಮೊದಲಾದ ನೂರಾರು ಭಕ್ತರೊಂದಿಗೆ ಇದ್ದು ಅವರಿಗೆ ಸಹಾಯಮಾಡಿದ ಸನ್ನಿವೇಶಗಳು ಋಕ್ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ವರ್ಣಿತವಾಗಿವೆ.

ಈ ಅಧ್ಯಾಯದಲ್ಲಿ **ಋತಪಾಃ** (೧-೧೧೩-೧೨) ಎಂಬ ಉಷಸ್ಸಿನ ವಿಶೇಷಣವೂ **ಋತಾಯುನ್** (೧-೧೧೭-೨೨) ಎಂಬ ಅಶ್ವಿನೀದೇವತೆಗಳ ಸ್ವರೂಪವರ್ಣನವೂ ಅವರವರ ಪರಸ್ಪರವಾದ ಸಮಾನಧರ್ಮವನ್ನು ತೋರಿಸುತ್ತವೆ. ಋತಪಾಃ ಎಂದರೆ **ಸತ್ಯಸ್ಯ ಯಜ್ಞಸ್ಯ** ವಾ **ಪಾಲಯಿತ್ರೀ** । ಸತ್ಯದ ಅಥವಾ ಯಜ್ಞದ ರಕ್ಷಕಳು ಎಂದರ್ಥ. **ಋತಾಯುನ್** ಎಂದರೆ **ಸತ್ಯಮಾತ್ಮನ ಇಚ್ಛನ್** ಸತ್ಯಾತ್ಮರಾಗಿಯೂ ಸತ್ಯವ್ಯವಹಾರವುಳ್ಳವರಾಗಿಯೂ ಇರುವ ಇಚ್ಛೆಯುಳ್ಳವರು ಎಂದರ್ಥ.

ಋತ ಶಬ್ದವು ಭೌತಿಕವಾದುದೂ, ನೈತಿಕವಾದುದೂ ಆದ ವಿಶ್ವನಿಯಮವನ್ನು ಸೂಚಿಸುತ್ತದೆ. **ಆದಿತ್ಯ**ರಲ್ಲಿ ಪ್ರಧಾನರಾದ **ಮಿತ್ರಾವರುಣರು** ಈ ನಿಯಮದ ಪಾಲಕರು. ಈ ನಿಯಮದ ಪಾಲನದಲ್ಲಿಯೂ ಇದೇ ನಿಯಮದಿಂದ ವಿಶ್ವವ್ಯವಹಾರಗಳನ್ನು ನಡೆಸುವುದರಲ್ಲಿಯೂ **ಮಿತ್ರಾವರುಣರ** ಸ್ಥಾನವೇನೆಂಬುದನ್ನು ಅವರಿಗೆ ಸಂಬಂಧಿಸಿದ ಎರಡನೇ ಅಷ್ಟಕದ ಎರಡನೇ ಅಧ್ಯಾಯದ ಸೂಕ್ತಗಳಲ್ಲಿ ವಿವರಿಸಲಾಗಿರುವುದು. **ಉಷೋದೇವತೆಯೂ, ಅಶ್ವಿನೀ ದೇವತೆಗಳೂ** ಈ ನಿಯಮವನ್ನು ಯಾವ ರೀತಿಯಲ್ಲಿ ತಾವು ಅನುಸರಿಸಿ ಲೋಕದ ಅನುಸರಣೆಗೂ ಯಾವ ವಿಧದಲ್ಲಿ ಸಹಾಯಮಾಡುತ್ತಾರೆಂಬುದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಲಾಗಿದೆ.

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ॥**

(ಋ. ಸಂ. ೧-೧೬೪-೧೧)

ಎಂಬ ಋಕ್ಕಿನಲ್ಲಿ ಹನ್ನೆರಡು ಅರೆಗಳುಳ್ಳ (ತಿಂಗಳು) **ಋತ**ವೆಂಬ ಚಕ್ರವು ಅಂತರಿಕ್ಷದಲ್ಲಿ ಸತತವಾಗಿ ಪರಿಭ್ರಮಣ ಮಾಡುತ್ತಿರುವುದು ವರ್ಣಿತವಾಗಿದೆ. ಈ **ಋತದ** ಮಾರ್ಗವನ್ನು **ಉಷಸ್ಸು** ನಿಯಮದಿಂದ ಅನುಸರಿಸುತ್ತಿರುವುದನ್ನು—

**ಋತಸ್ಯ ದೇವೀಃ ಸದಸೋ ಬುಧಾನಾ ಗವಾಂ ನ ಸರ್ಗಾ ಉಷಸೋ ಜರಂತೇ ।**

(ಋ. ಸಂ. ೪-೫೧-೮)

**ಋತಸ್ಯ ಯೋಷಾ ನ ಮಿನಾತಿ ಧಾಮಾಹರಹರ್ನಿಷ್ಕೃತಮಾಚರಂತೀ ।**

(ಋ. ಸಂ. ೧-೧೨೩-೯)

**ಋತಸ್ಯ ಪಂಥಾಮನ್ವೇತಿ ಸಾಧು ಪ್ರಜಾನತೀವ ನ ದಿಶೋ ಮಿನಾತಿ ।**

(ಋ. ಸಂ. ೧-೧೨೪-೩)

**ಋತಸ್ಯ ಬುಧ್ನ ಉಷಸಾಮಿಷಣ್ಯನ್ವೃಷಾ ಮಹೀ ರೋದಸೀ ಆ ವಿವೇಶ ।**

(ಋ. ಸಂ. ೩-೬೧-೭)

ಮೊದಲಾದ ಋಕ್ಕುಗಳಲ್ಲಿ **ಉಷಸ್ಸು ಋತದ** ಮಾರ್ಗವನ್ನನುಸರಿಸುವುದೂ, ಪ್ರತಿದಿನವೂ ವಿಚ್ಛಿತ್ತಿಯಿಲ್ಲದೇ **ಋತಾನುಯಾಯಿಯಾಗಿ** ತನ್ನ ನಿಯಮವನ್ನು ಪಾಲಿಸುವುದೂ ವಿವರಿಸಲ್ಪಟ್ಟಿದೆ. ಇದೇ ಋತದ ಮಾರ್ಗವನ್ನನುಸರಿಸಬೇಕೆಂದು,

**ಉಪ ನೋ ವಾಜಿನೀವಸೂ ಯಾತಮೃತಸ್ಯ ಪಥಿಭಿಃ ।**
**ಯೇಭಿಸ್ತೃಕ್ಷಿಂ ವೃಷಣಾ ತ್ರಾಸದಸ್ಯವಂ ಮಹೇ ಕ್ಷತ್ರಾಯ ಜಿನ್ವಥಃ ।**

(ಋ. ಸೂ. ೮-೨೨-೭)

ಎಂಬ ಋಕ್ಕಿನಲ್ಲಿ ಅಶ್ವಿನೀದೇವತೆಗಳೂ ಪ್ರಾರ್ಥಿತರಾಗಿದ್ದಾರೆ. **ಋತದ ಪಥವನ್ನು** ಅನುಸರಿಸುವುದರಲ್ಲಿ **ಉಷಸ್ಸಿಗೂ, ಅಶ್ವಿನೀದೇವತೆಗಳಿಗೂ** ಸಾಪೇಕ್ಷಿತವಾದ ಸಂಬಂಧವಿದೆ.

**ಯಹ್ವೀ ಋತಸ್ಯ ಮಾತರಾ** (೧-೧೪೨-೭) **ಸುಪ್ರತೀಕೇ ವಯೋವೃಧಾ ಯಹ್ವೀ ಋತಸ್ಯ ಮಾತರಾ ।** (೫-೫-೬) ಇತ್ಯಾದ್ಯನೇಕ ಋಕ್ಕುಗಳಲ್ಲಿ ಹೇಳಿರುವಂತೆ **ಋತಕ್ಕೆ** ಮಾತೃಗಳಾದ ರಾತ್ರ್ಯುಷಸ್ಸುಗಳ ಆವಿರ್ಭಾವದೊಡನೆಯೇ ಅಶ್ವಿನೀದೇವತೆಗಳ ಆಗಮನವೂ ಸೂಚಿತವಾಗಿರುವುದು.

**ನೃವದ್ದಸ್ರಾ ಮನೋಯುಜಾ ರಥೇನ ಪೃಥುಪಾಜಸಾ ।**
**ಸಚೇಥೇ ಅಶ್ವಿನೋಷಸಂ ॥**

(ಋ. ಸಂ. ೮-೫-೨)

ಆಶ್ಚರ್ಯಕರವಾದ ಕಾರ್ಯಗಳನ್ನು ಮಾಡತಕ್ಕ **ಅಶ್ವಿನೀದೇವತೆಗಳು** ತಮ್ಮ ರಥಗಳಲ್ಲಿ ಕುಳಿತು ಉಷಸ್ಸುಗಳ ಮಾರ್ಗವನ್ನೇ ಅನುಸರಿಸುತ್ತಾರೆ. ಇಂತಹ ಅಶ್ವಿನೀದೇವತೆಗಳನ್ನು ಎಚ್ಚರಗೊಳಿಸಬೇಕೆಂದು **ಪ್ರ ಬೋಧಯೋಷೋ ಅಶ್ವಿನಾ ।** (೮-೯-೧೭) ಎಂಬ ವಾಕ್ಯದಿಂದ ಉಷಸ್ಸು ಪ್ರಾರ್ಥಿತಳಾಗಿದ್ದಾಳೆ. ಅಬೋಧ್ಯಗ್ನಿರ್ಜ್ಮ **ಉದೇತಿ ಸೂರ್ಯೋ ವ್ಯುಷಾಶ್ಚಂದ್ರಾ ಮಹ್ಯಾವೋ ಅರ್ಚಿಷಾ । ಆಯುಕ್ಷಾತಾ ಮಶ್ವಿನಾ ಯಾತವೇ ರಥಂ ಪ್ರಾಸಾವೀದ್ದೇವಃ ಸವಿತಾ ಜಗತ್ಪೃಥಕ್ ।** (ಋ. ಸಂ. ೧-೫೭-೧) ಎಂಬ ಋಕ್ಕಿನಲ್ಲಿ **ಸೂರ್ಯ, ಉಷಸ್ಸು** ಇವರುಗಳ ಉದಯಕ್ಕೂ **ಅಶ್ವಿನೀದೇವತೆಗಳ** ಆಗಮನಕ್ಕೂ ಕಾಲಿಕಸಂಬಂಧವನ್ನು ಹೇಳಿದೆ. ಹೀಗೆ **ಭೌತಿಕವಾದ**

ವಿಶ್ವವ್ಯವಹಾರಗಳಲ್ಲಿ **ಋತದ** ನಿಯಮವನ್ನೂ ಈ ನಿಯಮಪಾಲನೆಯಲ್ಲಿ ಜಾಗರೂಕರಾಗಿರುವ **ಉಷಸ್ಸು** ಮತ್ತು **ಅಶ್ವಿನೀದೇವತೆಗಳ** ಕರ್ತವ್ಯತತ್ಪರತೆಯನ್ನೂ **ಋತಪಾಃ, ಋತಾಯನ್** ಎಂಬ ವಿಶೇಷಣಗಳಿಂದ ಪ್ರಕೃತವಾದ ಅಧ್ಯಾಯದಲ್ಲಿ ವಿವರಿಸಿದೆ. ಋತದ ನೈತಿಕನಿಯಮದ ಸ್ವರೂಪವನ್ನೂ ಈ ಕಾರ್ಯದಲ್ಲಿ **ಮಿತ್ರಾವರುಣರ** ಅಧ್ಯಕ್ಷತೆಯನ್ನೂ ಮುಂದಿನ ಭಾಗಗಳಲ್ಲಿ ವಿವರಿಸಿ ಹೇಳಲಾಗುವುದು.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ **ಗಾಯತ್ರೀ** ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಆಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ವಿಕೃತಿನಾಮ ಸಂ॥ ಚೈತ್ರ ಶುದ್ಧ ಪ್ರಥಮಾ ಭಾನುವಾರ
19—3—1950

ಅನುವಾದಕ :
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.

|| ಶ್ರೀಃ ||

# ವಿ ಷ ಯಾ ನು ಕ್ರ ಮ ಣಿ ಕೆ

## ಪ್ರಥಮಾಷ್ಟಕದಲ್ಲಿ ಎಂಟನೆಯ ಅಧ್ಯಾಯವು

## ಪ್ರಥಮಮಂಡಲದ ಸೂಕ್ತಗಳು ೧೧೩—೧೨೧


| | | ಪುಟಸಂಖ್ಯೆ |
|---|---|---|
| ೧೧೩ | **ಇದಂ ಶ್ರೇಷ್ಠಂ ಎಂಬ ನೂರ ಹದಿಮೂರನೆಯ ಸೂಕ್ತವು—** | |
| | ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು | 2 |
| | ಉಷಃಕಾಲದ ಉತ್ಪತ್ತಿವಿಚಾರ ಇತ್ಯಾದಿ | 3 |
| | ರಾತ್ರಿ ಮತ್ತು ಉಷಸ್ಸುಗಳ ಸಮಾನತ್ವಾಸಮಾನತ್ವವಿಚಾರ | 13 |
| | ರಾತ್ರಿ ಮತ್ತು ಉಷಸ್ಸುಗಳ ಭಿನ್ನಾಭಿನ್ನತೆಗಳು | 20 |
| | **ವಿಸದೃಶಾ** ಎಂಬ ಶಬ್ದಾರ್ಥವಿವರಣೆ ಇತ್ಯಾದಿ | 34 |
| | **ಪರಾಯತೀನಾಂ, ಆಯತೀನಾಂ** ಮೊದಲಾದ ಶಬ್ದಗಳ ಅರ್ಥಾನುವಾದವಿವರಣೆ | 42 |
| | ಉಷಃಕಾಲದ ಭೂತಭವಿಷ್ಯದ್ವರ್ತಮಾನಕಾಲಗಳ ವ್ಯಾಪ್ತಿತ್ವವು | 54 |
| | **ಸುಮ್ನಾವರೀ ಸೂನೃತಾ** ಇತ್ಯಾದಿ ಶಬ್ದಗಳ ವಿವರಣೆ | 59 |
| | ಉಷಸ್ಸಿನ ವರ್ತಮಾನ ಭೂತಕಾಲಗಳ ಪರಸ್ಪರ ಸಂಬಂಧವು | 73 |
| | **ಅಸು** ಶಬ್ದಾರ್ಥವಿವರಣೆ ಇತ್ಯಾದಿ | 77 |
| | **ಅಸ್ಮೇ** ಎಂಬ ಶಬ್ದವು ಏಳು ವಿಭಕ್ತಿಗಳಲ್ಲಿಯೂ ಉಪಯೋಗಿಸಲ್ಪಡುವ ವಿಚಾರ ಮತ್ತು ಉದಾಹರಣೆಗಳು | 82 |
| | **ಅದಿತೇರನೀಕಂ** ಎಂಬ ಶಬ್ದಗಳ ಅರ್ಥಾನುವಾದ | 92 |
| ೧೧೪ | **ಇಮಾ ರುದ್ರಾಯ ಎಂಬ ನೂರಹದಿನಾಲ್ಕನೆಯ ಸೂಕ್ತವು—** | |
| | ಸೂಕ್ತದ ವಿನಿಯೋಗವು | 97 |
| | ಋಷಿದೇವತಾಛಂದಸ್ಸುಗಳು | 98 |
| | **ರುದ್ರ**ಶಬ್ದನಿರ್ವಚನ ಇತ್ಯಾದಿ | 101 |
| | **ಕ್ಷಯದ್ವೀರ** ಶಬ್ದಾರ್ಥವಿವರಣೆ | 101 |
| | **ಮನುವಿನ** ವಿಷಯ | 107 |
| | **ವರಾಹ** ಶಬ್ದಾರ್ಥದ ವಿಚಾರ | 120 |
| | ಅಂಗಿರಸರಿಗೂ ವರಾಹರೆಂದು ಹೆಸರು | 121 |

ಪುಟಸಂಖ್ಯೆ

ರುದ್ರನು ಮರುದ್ದೇವತೆಗಳಿಗೆ ತಂದೆಯೆಂಬ ವಿಚಾರ 126
**ಆಯುಃ** ಎಂಬ ಶಬ್ದದ ಅರ್ಥಾನುವಾದ ವಿವರಣೆ 134
**ದ್ವಿಬರ್ಹ** ಶಬ್ದಾರ್ಥ ವಿಚಾರ 143

**೧೧೫. ಚಿತ್ರಂ ದೇವಾನಾಂ ಎಂಬ ನೂರ ಹದಿನೈದನೆಯ ಸೂಕ್ತವು—**

ಸೂಕ್ತದ ವಿನಿಯೋಗ 149
ಋಷಿದೇವತಾ ಛಂದಸ್ಸುಗಳು 150
ಸೂರ್ಯನೇ ಚರಾಚರಾತ್ಮಕವಾದ ಜಗತ್ತಿಗೆ ಆತ್ಮಸ್ವರೂಪನಾಗಿರುವನೆಂಬ ವಿಚಾರ 153
**ಯುಗ** ಶಬ್ದಾರ್ಥವಿವರಣೆ 157
ಸೂರ್ಯನ ಕುದುರೆಗಳ ಮಹಿಮೆ 161
ಸೂರ್ಯನ ಉದಯಾಸ್ತಗಳ ಮಹಿಮೆ 165

**೧೧೬ ನಾಸತ್ಯಾಭ್ಯಾಂ ಎಂಬ ನೂರಹದಿನಾರನೆಯ ಸೂಕ್ತವು—**

ಸೂಕ್ತದ ವಿನಿಯೋಗ 177
ಋಷಿದೇವತಾ ಛಂದಸ್ಸುಗಳು 178
**ಕಕ್ಷೀವಾನ್** ಎಂಬ ಋಷಿಯ ಜನ್ಮಕಥನ ಇತ್ಯಾದಿ 180
**ವಿಮದ**ನೆಂಬ ರಾಜರ್ಷಿಯ ವಿಚಾರ 181
ಬರ್ಹಿಶ್ಶಬ್ದಾರ್ಥವಿವರಣೆ ಇತ್ಯಾದಿ 182
ಅಶ್ವಿನೀದೇವತೆಗಳ ವಾಹನವಾದ ರಾಸಭವು ದೇವತೆಗಳ ಪಂದ್ಯದಲ್ಲಿ ಗೆದ್ದವಿಚಾರ 187
ಇಂದ್ರಾದಿದೇವತೆಗಳ ವಿಧವಿಧವಾದ ವಾಹನಗಳು 188
ಸೂರ್ಯಪುತ್ರಿಯಾದ ಸೂರ್ಯಾದೇವಿಯ ಸ್ವಯಂವರ ವಿಚಾರ 189
**ತುಗ್ರ**ನೆಂಬ ರಾಜನ ವಿಷಯ 193
**ಭುಜ್ಯು**ವೆಂಬ ತುಗ್ರಪುತ್ರನನ್ನು **ಅಶ್ವಿನೀ**ದೇವತೆಗಳು ಸಮುದ್ರಮಧ್ಯದಲ್ಲಿ ರಕ್ಷಿಸಿದ ವಿಚಾರ 194
ಸಮುದ್ರಶಬ್ದನಿರ್ವಚನ ಇತ್ಯಾದಿ 201
**ಪೇದು**ವೆಂಬ ರಾಜನಿಗೆ ಅಶ್ವಿನೀದೇವತೆಗಳು ಬಿಳೀ ಕುದುರೆಯನ್ನು ಕೊಟ್ಟ ವಿಚಾರ 209
**ಪಜ್ರಾ** ಎಂದು ಅಂಗಿರಸರಿಗೆ ಹೆಸರಿರುವ ವಿಚಾರ 215
**ಕಕ್ಷೀವಾನ್** ಎಂಬ ಶಬ್ದದ ರೂಪನಿಷ್ಪತ್ತಿ 215
ಅಶ್ವಿನೀದೇವತೆಗಳು ತಮ್ಮ ಕುದುರೆಯ ಗೊರಸಿನಿಂದ ಮದ್ಯವನ್ನು ಸ್ರವಿಸು
ವಂತೆ ಮಾಡಿದ ವಿಚಾರ 216
**ಪುರಂಧಿ** ಶಬ್ದದ ಅರ್ಥಾನುವಾದ ವಿವರಣೆ 216

| | ಪುಟಸಂಖ್ಯೆ |
|---|---|
| **ಅತ್ರಿ**ಯೆಂಬ ಋಷಿಯನ್ನು ಅಸುರರು ತುಷಾಗ್ನಿಯಲ್ಲಿ ಹಾಕಿ ದಹಿಸುತ್ತಿರುವಾಗ ಅಶ್ವಿನೀದೇವತೆಗಳು ಶೀತೋದಕದಿಂದ ಆ ಅಗ್ನಿಯನ್ನು ಆರಿಸಿ ಅವನನ್ನು ಕಾಪಾಡಿದ ವಿಚಾರ | 222 |
| **ಸ್ವಸ್ತಿ** ಶಬ್ದಾರ್ಥವಿವರಣೆ | 225 |
| **ಗೋತಮ**ನೆಂಬ ಋಷಿಯು ಬಾಯಾರಿಕೆಯಿಂದ ಅಶ್ವಿನೀದೇವತೆಗಳನ್ನು ಜಲಪಾನಕ್ಕಾಗಿ ಪ್ರಾರ್ಥಿಸಲು ಅವರು ದೂರದೇಶದಲ್ಲಿದ್ದ ಒಂದು ನೀರಿನ ಭಾವಿಯನ್ನೇ ಅವನ ಸಮೀಪಕ್ಕೆ ತಂದುಕೊಟ್ಟು ಅವನ ದಾಹೋಪಶಮನಮಾಡಿದ ವಿಚಾರ | 230 |
| **ಚ್ಯವನ**ನೆಂಬ ಋಷಿಯು ವಾರ್ಧಕ್ಯದಿಂದ ತೊಂದರೆಪಡುತ್ತಿದ್ದುದನ್ನು ಅಶ್ವಿನೀದೇವತೆಗಳು ನೋಡಿ ಅವನಿಗೆ ಯೌವನವನ್ನುಂಟುಮಾಡಿದ ವಿಚಾರ | 233 |
| ನಿರ್ಜನವಾದ ಕಾಡಿನ ಮಧ್ಯದಲ್ಲಿರುವ ಭಾವಿಯಲ್ಲಿ ಬಿದ್ದಿದ್ದ **ವಂದನ**ನೆಂಬ ಋಷಿಯನ್ನು ಭಾವಿಯಿಂದ ಮೇಲಕ್ಕೆತ್ತಿ ರಕ್ಷಿಸಿದ ವಿಚಾರ | 239 |
| **ದಧೀಚ**ಋಷಿಯ ವೃತ್ತಾಂತ. ದಧೀಚಋಷಿಯು ಅಶ್ವಿನೀದೇವತೆಗಳಿಗೆ ಮಧುವಿದ್ಯೆಯನ್ನುಪದೇಶಿಸಿದ ವಿಚಾರ | 245 |
| ಈ ವಿಷಯದಲ್ಲಿ ಸ್ಕಂದಸ್ವಾಮಿಯು ಹೇಳಿರುವ ಇತಿಹಾಸ | 247 |
| ದಧೀಚಋಷಿಗೆ ಅಶ್ವಶಿರಸ್ಸು ಹೇಗೆ ಬಂದಿತೆಂಬ ವಿಚಾರ | 247 |
| ಈ ವಿಷಯದಲ್ಲಿ Wilson ಪಂಡಿತನ ಅಭಿಪ್ರಾಯ | 248 |
| **ವಧ್ರಿಮತೀ** ಎಂಬ ಸ್ತ್ರೀಗೆ **ಹಿರಣ್ಯಹಸ್ತ**ನೆಂಬ ಪುತ್ರನನ್ನನುಗ್ರಹಿಸಿದ ವಿಚಾರ | 252 |
| ಅಶ್ವಿನೀದೇವತೆಗಳು ಚಟಕಸದೃಶ (ಗುಬ್ಬಚ್ಚಿ) ಪಕ್ಷಿಯನ್ನು ತೋಳನ ಬಾಯಿನಿಂದ ಬಿಡಿಸಿ ರಕ್ಷಿಸಿದ ವಿಚಾರ | 255 |
| **ವೃಕ** ಶಬ್ದಾರ್ಥ ವಿವರಣೆ | 257 |
| ಅಗಸ್ತ್ಯಪುರೋಹಿತನಾದ **ಖೇಲ**ನೆಂಬ ರಾಜನ ಸಂಬಂಧಿಯಾದ **ವಿಶ್ಪಲಾ** ಎಂಬ ಸ್ತ್ರೀಯ ಕತ್ತರಿಸಿಹೋದ ಕಾಲನ್ನು ಅಶ್ವಿನೀದೇವತೆಗಳು ಸರಿಮಾಡಿದ ವಿಚಾರ | 262 |
| ಅಶ್ವಿನೀದೇವತೆಗಳ ವಾಹನವಾದ ರಾಸಭವು ತೋಳನ ರೂಪದಿಂದಿರುವಾಗ ಅದಕ್ಕೆ **ಋಜ್ರಾಶ್ವ**ನೆಂಬುವನು ನೂರು ಆಡುಗಳನ್ನು ಕತ್ತರಿಸಿ ಆಹಾರವಾಗಿ ಕೊಟ್ಟಿದ್ದರಿಂದ ಕೋಪಗೊಂಡ ಅವನ ತಂದೆಯು ಋಜ್ರಾಶ್ವನನ್ನು ಕುರುಡನನ್ನಾಗಿ ಮಾಡಲು ಅಶ್ವಿನೀದೇವತೆಗಳು ಅವನಿಗೆ ಪೂರ್ವದಂತೆ ಕಣ್ಣುಬರುವಂತೆ ಮಾಡಿದ ವಿಚಾರ | 266 |
| ಅಶ್ವಿನೀದೇವತೆಗಳ ರಥವು ದೇವತೆಗಳ ಸ್ಪರ್ಧೆಯಲ್ಲಿ ಗೆದ್ದ ವಿಚಾರ | 271 |
| **ದಿವೋದಾಸ**ನ ವೃತ್ತಾಂತ | 276 |

ಪುಟಸಂಖ್ಯೆ

ಜಹ್ನುಮಹರ್ಷಿಯ ಪುತ್ರಿಯಾದ **ಜಾಹ್ನವೀ** ಎಂಬುವಳಿಗೆ ಅಶ್ವಿನೀದೇವತೆಗಳು ಅನುಗ್ರಹಮಾಡಿದ ವಿಚಾರ 280

**ಜಾಹುಷ**ನೆಂಬ ರಾಜನ ವಿಷಯ 284

ಅಶ್ವಿನೀದೇವತೆಗಳು **ಪೃಥುಶ್ರವ**ಸ್ಸೆಂಬ ರಾಜನನ್ನೂ **ವಶ**ನೆಂಬುವನನ್ನೂ ರಕ್ಷಿಸಿದ ವಿಷಯ 289

**ಶರ**ನೆಂಬ ಋಷಿಯು ಬಾಯಾರಿಕೆಯಿಂದ ಪರಿತಪಿಸುತ್ತಾ ದಾರಿಯಲ್ಲಿ ಸಿಕ್ಕಿದ ಆಳವಾದ ಬಾವಿಯಲ್ಲಿರುವ ನೀರನ್ನು ಕುಡಿಯಲಸಮರ್ಥನಾಗಿ ಅಶ್ವಿನೀದೇವತೆಗಳನ್ನು ಸ್ತುತಿಸಲು ಅವರು ಬಂದು ಭಾವಿಯಲ್ಲಿದ್ದ ನೀರು ಮೇಲಕ್ಕೆ ಉಕ್ಕಿಬರುವಂತೆ ಮಾಡಿ ಶರನ ದಾಹವನ್ನು ಶಮನಮಾಡಿದರೆಂಬ ವಿಚಾರ 293

**ಶಯು**ವೆಂಬ ಋಷಿಯ ಬಂಜೆಯಾಗಿದ್ದ ಹಸುವನ್ನು ಕರುವು ಹಾಕುವಂತೆ ಮಾಡಿ ಹಾಲು ಕರೆಯುವಂತೆ ಮಾಡಿದ ವಿಚಾರ 294

**ವಿಶ್ವಕ**ನೆಂಬ ರಾಜನ ಮಗನಾದ **ವಿಷ್ಣ್ವಾಪಿ** ಎಂಬುವನು ತಪ್ಪಿಸಿಕೊಂಡು ಹೋಗಿರುವಾಗ ಅಶ್ವಿನೀದೇವತೆಗಳು ಅವನನ್ನು ಹುಡುಕಿ ತಂದು ಅವನ ತಂದೆಗೆ ಕೊಟ್ಟರೆಂಬ ವಿಚಾರ 298

ಅಸುರರಿಂದ ಭಾವಿಯಲ್ಲಿ ಹಾಕಲ್ಪಟ್ಟು ಹತ್ತು ದಿನಗಳ ವರೆಗೂ ದುಃಖಪಡುತ್ತಿದ್ದ **ರೇಭ** ಎಂಬ ಋಷಿಯನ್ನು ಅಶ್ವಿನೀದೇವತೆಗಳು ಭಾವಿಯಿಂದ ಮೇಲಕ್ಕೆತ್ತಿ ರಕ್ಷಿಸಿದ ವಿಚಾರ 302

೧೧೭ **ಮಧ್ವಃ ಸೋಮಸ್ಯ ಎಂಬ ನೂರ ಹದಿನೇಳನೆಯ ಸೂಕ್ತವು—**

ಸೂಕ್ತದ ವಿನಿಯೋಗವು 308

ಋಷಿದೇವತಾ ಛಂದಸ್ಸುಗಳು 309

ದ್ಯುಸ್ಥಾನದೇವತೆಗಳಲ್ಲಿ ಅಶ್ವಿನೀದೇವತೆಗಳದೇ ಪ್ರಥಮಸ್ಥಾನವು 315

**ವಸಾತಿ**ಶಬ್ದದ ಅರ್ಥವಿವರಣೆ ಇತ್ಯಾದಿ 316

**ಪಂಚಜನ**ಶಬ್ದಾರ್ಥವಿವರಣೆ 321

**ರೇಭ**ನೆಂಬ ಋಷಿಯನ್ನು ಅಶ್ವಿನೀದೇವತೆಗಳು ನೀರನಿಂದ ಮೇಲಕ್ಕೆತ್ತಿ ರಕ್ಷಿಸಿದ ವಿಚಾರ 324

**ವಂದನ** ಋಷಿಯನ್ನು ಬಾವಿಯಿಂದ ಮೇಲಕ್ಕೆತ್ತಿ ರಕ್ಷಿಸಿದ ವಿಚಾರ 329

**ವಿಷ್ಣಾಪು**ವೆಂಬುವನನ್ನು ಕರೆತಂದು ಅವನ ತಂದೆಯಾದ ವಿಶ್ವಕನಿಗೆ ಒಪ್ಪಿಸಿದ ವಿಚಾರ ಮತ್ತು ಘೋಷಾ ಎಂಬ ಸ್ತ್ರೀಗೆ ಪತಿಯನ್ನು ಒದಗಿಸಿಕೊಟ್ಟ ವಿಚಾರ 337

ಕುಷ್ಠರೋಗದಿಂದ ನರಳುತ್ತಿದ್ದ **ಶ್ಯಾವ**ನೆಂಬ ಋಷಿಗೆ ರೋಗಪರಿಹಾರಮಾಡಿ ರಕ್ಷಿಸಿದ ವಿಚಾರ—ನೃಷದಪುತ್ರನಾದ ಕಣ್ಣುಕಾಣಿಸದ **ಕಣ್ವ**ನೆಂಬ ಋಷಿಗೆ ಕಣ್ಣನ್ನು ಕೊಟ್ಟು ರಕ್ಷಿಸಿದ ವಿಚಾರ 341

ಪುಟಸಂಖ್ಯೆ

**ಪೇದು**ವೆಂಬ ರಾಜನಿಗೆ ಉತ್ತಮವಾದ ಬಿಳೀ ಕುದುರೆಯನ್ನು ಕೊಟ್ಟ ವಿಚಾರ 346

ಅಗಸ್ತ್ಯ ಪುರೋಹಿತನಾದ ಖೇಲನೆಂಬ ರಾಜನ ಸಂಬಂಧಿಯಾದ **ವಿಶ್ಪಲೀ** ಎಂಬ ಸ್ತ್ರೀಗೆ ಕತ್ತರಿಸಿಹೋದ ಕಾಲನ್ನು ಸರಿಪಡಿಸಿದ ವಿಚಾರ ಮತ್ತು **ಅಗಸ್ತ್ಯ ವಸಿಷ್ಠ ಋಷಿಗಳ** ಜನ್ಮಕಥನವು 355

**ರೇಭ**ನನ್ನು ಬಾವಿಯಿಂದ ಎತ್ತಿ ರಕ್ಷಿಸಿದ ವಿಚಾರ 360

ವೃದ್ಧನಾಗಿದ್ದ **ಚ್ಯವನ** ಋಷಿಯನ್ನು ಪುನಃ ಯುವಕನನ್ನಾಗಿ ಮಾಡಿದ ವಿಚಾರ, ಸೂರ್ಯಪುತ್ರಿಯು ಅಶ್ವಿನೀದೇವತೆಗಳ ರಥವನ್ನು ಏರಿದಳೆಂಬ ವಿಷಯ 365

ತುಗ್ರಪುತ್ರನಾದ **ಭುಜ್ಯು**ವನ್ನು ಸಮುದ್ರದಿಂದ ಕಾಪಾಡಿ ಕರೆತಂದ ವಿಚಾರ 369

ಅಶ್ವಿನೀದೇವತೆಗಳು **ವರ್ತಿಕಾ** ಎಂಬ ಪಕ್ಷಿಯನ್ನು ತೋಳನ ಬಾಯಿನಿಂದ ಬಿಡಿಸಿದ ವಿಚಾರ 377

**ವಿಶ್ವಾಂಚ**ನೆಂಬ ಅಸುರನನ್ನು ವಧಿಸಿದ ವಿಚಾರ 378

ಅಂಧನಾದ **ಋಜ್ರಾಶ್ವ**ನೆಂಬ ಋಷಿಗೆ ಕಣ್ಣು ಕಾಣುವಂತೆ ಮಾಡಿದ ವಿಷಯ 382

**ಸೀಂ** ಎಂಬ ಶಬ್ದದ ಅರ್ಥಾನುವಾದ ವಿವರಣೆ ಇತ್ಯಾದಿ 389

**ಶಯು**ವೆಂಬ ಋಷಿಯ ಗೊಡ್ಡಾದ ಹಸುವು ಹಾಲುಕರೆಯುವಂತೆ ಮಾಡಿದ ವಿಚಾರ 393

ಅಸುರರಿಂದ ಅಪಹೃತಳಾದ **ವಿಮದ** ಎಂಬುವನ ಪತ್ನಿಯನ್ನು ರಕ್ಷಿಸಿ ಕರೆತಂದ ವಿಚಾರ 394

**ದಧೀಚ** ಋಷಿಯು ಅಶ್ವಿನೀದೇವತೆಗಳಿಗೆ ಮಧುವಿದ್ಯೆಯನ್ನು ಉಪದೇಶಿಸಿದ ವಿಚಾರ 401

**ವಧ್ರಿಮತೀ** ಎಂಬ ಸ್ತ್ರೀಗೆ **ಹಿರಣ್ಯಹಸ್ತ**ನೆಂಬ ಪುತ್ರನನ್ನು ಅನುಗ್ರಹಿಸಿದ ವಿಚಾರ 408

೧೧೮ ಆ ವಾಂ ರಥಃ ಎಂಬ ನೂರ **ಹದಿನೆಂಟನೆಯ ಸೂಕ್ತವು**—

ಸೂಕ್ತವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 415

ಅಶ್ವಿನೀದೇವತೆಗಳ ರಥ ವರ್ಣನೆ ಇತ್ಯಾದಿ 417

ಅಶ್ವಿನೀದೇವತೆಗಳು **ವಂದನ, ರೇಭ, ಭುಜ್ಯು, ಚ್ಯವನ** ಮುಂತಾದವರನ್ನು ರಕ್ಷಿಸಿದ ವಿಚಾರ 433

ಅಂಧನಾದ **ಕಣ್ವ** ಋಷಿಗೆ ಕಣ್ಣು ಕಾಣುವಂತೆ ಮಾಡಿದ ವಿಚಾರ 436

**ಶಯು**ವೆಂಬ ಋಷಿಯ ಹಸುವನ್ನು ಹಾಲು ಕರೆಯುವಂತೆ ಮಾಡಿ, **ವರ್ತಿಕಾ** ಪಕ್ಷಿಯನ್ನು ತೋಳನ ಬಾಯಿನಿಂದ ಬಿಡಿಸಿ, **ವಿಶ್ಪಲೆ** ಎಂಬ ಸ್ತ್ರೀಗೆ ಕತ್ತರಿಸಿಹೋಗಿದ್ದ ಕಾಲಿಗೆ ಬೇರೆ ಕಾಲನ್ನು ಜೋಡಿಸಿ ನಿರ್ವಹಿಸಿದ ಅಶ್ವಿನೀದೇವತೆಗಳ ಅನೇಕ ಸಾಹಸಕೃತ್ಯಗಳು 440

**ಪೇದು**ವೆಂಬ ರಾಜನಿಗೆ ಶ್ವೇತಾಶ್ವವನ್ನು ಕೊಟ್ಟ ವಿಚಾರ 443

ಪುಟಸಂಖ್ಯೆ

೧೧೯ **ಆ ವಾಂ ರಥಂ ಪುರುಮಾಯಾ ಎಂಬ ನೂರಹತ್ತೊಂಭತ್ತನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 452
ಅಶ್ವಿನೀದೇವತೆಗಳ ರಥದ ಮಹಿಮೆ ಇತ್ಯಾದಿ 455
**ಭುಜ್ಯು**ವನ್ನೂ **ದಿವೋದಾಸ**ನನ್ನೂ ರಕ್ಷಿಸಿದ ವಿಚಾರ 467
ಸೂರ್ಯಪುತ್ರಿಯು ಸ್ವಯಂಪ್ರೇರಿತಳಾಗಿ ಅಶ್ವಿನೀದೇವತೆಗಳ ರಥವನ್ನು ಏರಿದ ವಿಚಾರ 471
**ರೇಭ**ನೆಂಬ ಋಷಿಯನ್ನು ಬಾವಿಯಿಂದ ಮೇಲಕ್ಕೆತ್ತಿ ರಕ್ಷಿಸಿದ ವಿಚಾರ 475
**ವಂದನ** ಋಷಿಯ ಜೀರ್ಣವಾದ ಶರೀರವನ್ನು ಹೋಗಲಾಡಿಸಿ ಅವನನ್ನು ಯೌವನವುಳ್ಳವನಾಗುವಂತೆ ಮಾಡಿದ ವಿಚಾರ—**ವಾಮದೇವ** ಋಷಿಯನ್ನು ತಾಯಿಯ ಗರ್ಭದಿಂದ ಜನಿಸುವಂತೆ ಮಾಡಿದ ವಿಚಾರ 479
ಸಮುದ್ರ ಮಧ್ಯದಲ್ಲಿ ಮುಳುಗಿಹೋಗುತ್ತಿದ್ದ **ಭುಜ್ಯು**ವನ್ನು ರಕ್ಷಿಸಿದ ವಿಚಾರ 484
ಅಶ್ವಿನೀದೇವತೆಗಳು ಜೇನು ನೊಣಗಳಿಗೆ ಮಧುವು ಸಿಕ್ಕುವಂತೆ ಮಾಡಿದ ವಿಚಾರ 488
**ಕಕ್ಷೀವಾನ್** ಎಂಬ ಋಷಿಯು ಮೂವತ್ತಮೂರು ಶ್ರೇಷ್ಠರಾದ ಅಂಗಿರಸವಂಶಸ್ಥರಲ್ಲಿ ಪ್ರಮುಖನೆಂಬ ವಿಚಾರ 489
**ಪೇದು** ರಾಜನಿಗೆ ಒಂದು ದಿವ್ಯಾಶ್ವವನ್ನು ಕೊಟ್ಟ ವಿಚಾರ 493

೧೨೦ **ಕಾ ರಾಧದ್ಧೋತ್ರಾ ಎಂಬ ನೂರ ಇಪ್ಪತ್ತನೆಯ ಸೂಕ್ತವು—**

ಸೂಕ್ತದ ವಿನಿಯೋಗ, ಛಂದೋ ವಿವರಣೆ ಇತ್ಯಾದಿ 496
ಋಷಿದೇವತಾ ಛಂದಸ್ಸುಗಳು 498
**ಋಜ್ರಾಶ್ವನು** ಅಂಧನಾಗಿದ್ದಾಗ ದೃಷ್ಟಿಪ್ರದಾನಕ್ಕಾಗಿ ಅಶ್ವಿನೀದೇವತೆಗಳನ್ನು ಸ್ತುತಿಸಿದ ವಿಚಾರ 517
**ವೃಕ** ಶಬ್ದದ ನಾನಾರ್ಥಗಳು 520
**ಸ್ತನಾಭುಜಃ** ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ 524
**ವಾಜಿನೀವತಿ** ಶಬ್ದಾರ್ಥ ವಿವರಣೆ ಇತ್ಯಾದಿ 530

೧೨೧ **ಕದಿತ್ಥಾ ನೄಃ ಎಂಬ ನೂರ ಇಪ್ಪತ್ತೊಂದನೆಯ ಸೂಕ್ತವು—**

ಸೂಕ್ತದ ವಿನಿಯೋಗ ಮತ್ತು ಋಷಿದೇವತಾ ಛಂದಸ್ಸುಗಳು 537
**ಗೋ** ಶಬ್ದಾರ್ಥ ವಿವರಣೆ 544
ಇಂದ್ರನು ಹೆಣ್ಣುಕುದುರೆಯಲ್ಲಿ ಗೋವು ಉತ್ಪತ್ತಿಯಾಗುವಂತೆ ಮಾಡಿದ ವಿಚಾರ 546
**ಪಯಃ** ಶಬ್ದಾರ್ಥಾನುವಾದ ವಿವರಣೆ ಇತ್ಯಾದಿ 558
**ಸ್ವೇದುಮಹ್ಯ** ಶಬ್ದಾರ್ಥಾನುವಾದ ಇತ್ಯಾದಿ 562

**ಅದ್ರಿವಃ** ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ 580
**ಫಲಿಗ, ಶುಷ್ಣ** ಮೊದಲಾದ ಶಬ್ದಗಳ ವಿವರಣೆ 581
ತ್ವಷ್ಟೃವು ಇಂದ್ರನಿಗೆ ವಜ್ರಾಯುಧವನ್ನು ಮಾಡಿಕೊಟ್ಟ ವಿಚಾರ 589
**ಏತಶ** ಶಬ್ದಾರ್ಥ ವಿವರಣೆ 593
**ವಾಜಪ್ರಮಹಃ, ಸಧಮಾದಃ** ಇತ್ಯಾದಿ ಶಬ್ದಗಳ ವಿವರಣೆ 601

ವಿಷಯಾನುಕ್ರಮಣಿಕೆ ಸಮಾಪ್ತವು.





॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ—೯

## ॥ ಪ್ರಥಮಾಷ್ಟಕೇಽಷ್ಟಮೋಽಧ್ಯಾಯಃ ॥

### ಮೊದಲನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು

### ಪ್ರಥಮಮಂಡಲದಲ್ಲಿ

## ನೂರಹದಿಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇತ್ಥಂ ಸಪ್ತಮಮಧ್ಯಾಯಂ ವ್ಯಾಖ್ಯಾಯಾಷ್ಟಮೋಽಧ್ಯಾಯೋ ವ್ಯಾಖ್ಯಾತುಮಾರಭ್ಯತೇ । ಪ್ರಥಮೇ ಮಂಡಲೇ ಷೋಡಶೇಽನುವಾಕೇ ಸಪ್ತ ಸೂಕ್ತಾನಿ ಗತಾನಿ । ಇದಮಿತಿ ವಿಂಶತ್ಯೃಚಮಷ್ಟಮಂ ಸೂಕ್ತಂ ಅತ್ರಾನುಕ್ರಮ್ಯತೇ । ಇದಂ ವಿಂಶತಿರುಷಸ್ಯಂ ದ್ವಿತೀಯೋಽರ್ಧರ್ಚೋ ರಾತ್ರೇಶ್ಚೇತಿ । ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾನುವೃತ್ತೇರಾಂಗಿರಸಃ ಕುತ್ಸ ಋಷಿಃ । ಅನಾದೇಶಪರಿಭಾಷಯಾ ತ್ರಿಷ್ಟುಪ್ ಛಂದಃ । ಉಷಾ ದೇವತಾ ದ್ವಿತೀಯಸ್ಯಾರ್ಧರ್ಚಸ್ಯ ರಾತ್ರಿರಪಿ ॥ ಪ್ರಾತರನುವಾಕ ಉಷಸ್ಯೇ ಕ್ರತೌ ತ್ರೈಷ್ಟುಭೇ ಛಂದಸ್ಯೇತತ್ಸೂಕ್ತಂ । ಸೂತ್ರಿತಂ ಚ । ಇದಂ ಶ್ರೇಷ್ಠಂ ಪೃಥೂ ರಥ ಇತಿ ಸೂಕ್ತೇ । ಆ. ೪–೧೪ । ಇತಿ ॥ ಆಶ್ವಿನಶಸ್ತ್ರೇ ಚೇದಂ ಸೂಕ್ತಂ ಪ್ರಾತರನುವಾಕಾತಿದೇಶಾತ್ ॥

ಅನುವಾದವು— ಇದುವರೆಗೆ ಏಳನೆಯ ಅಧ್ಯಾಯದ ಅರ್ಥಾನುವಾದ ವಿವರಣೆಯನ್ನು ಮಾಡಿ ಈಗ ಎಂಟನೆಯ ಅಧ್ಯಾಯವನ್ನು ಪ್ರಾರಂಭಿಸುವೆವು. ಪ್ರಥಮಮಂಡಲದಲ್ಲಿರುವ ಹದಿನಾರನೆಯ ಅನುವಾಕದಲ್ಲಿ ಏಳು ಸೂಕ್ತಗಳು ಮುಗಿದಿರುವವು. ಈಗ ನಾವು ಪ್ರಾರಂಭಿಸುವ **ಇದಂ ಶ್ರೇಷ್ಠಂ** ಎಂಬ ಸೂಕ್ತವು ಎಂಟನೆಯ ಸೂಕ್ತವು. ಇದರಲ್ಲಿ ಇಪ್ಪತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಇದಂ ವಿಂಶತಿರುಷಸ್ಯಂ ದ್ವಿತಿಯೋಽರ್ಧರ್ಚೋ ರಾತ್ರೇಶ್ಚೇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಅಂಗಿರಸಪುತ್ರನಾದ ಕುತ್ಸನು ಋಷಿಯು. ತ್ರಿಷ್ಟುಪ್ ಛಂದಸ್ಸು ಉಷೋದೇವತೆಯು. ಪ್ರಥಮ ಋಕ್ಕಿನ ಉತ್ತರಾರ್ಧವು ರಾತ್ರಿದೇವತಾಕವಾಗಿಯೂ ಇರುವುದು. ಪ್ರಾತರನುವಾಕಮಂತ್ರ ಪಠನಕಾಲದಲ್ಲಿ ಉಷಸ್ಯಕ್ರತುಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಇದಂ ಶ್ರೇಷ್ಠಂ ಪೃಥೂ ರಥ ಇತಿ ಸೂಕ್ತೇ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪–೧೪). ಪ್ರಾತರನುವಾಕಮಂತ್ರಗಳಲ್ಲಿ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದು.

## ಸೂಕ್ತ—೧೧೩

॥ ಮಂಡಲ—೧ ॥ ಅನುವಾಕ—೧೬ ॥ ಸೂಕ್ತ—೧೧೩ ॥

॥ ಅಷ್ಟಕ—೧ ॥ ಅಧ್ಯಾಯ ೮ ॥ ವರ್ಗ—೧, ೨, ೩, ೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೦ ॥

॥ ಋಷಿಃ— ಕುತ್ಸ ಆಂಗಿರಸಃ ॥

॥ ದೇವತಾ—೧, ೧–೨ ಪಾದೌ ; ೨–೨೦ ಉಷಾಃ ।

೧, ೩–೪ ಪಾದೌ ಉಷಾ ರಾತ್ರಿಶ್ಚ ॥

॥ ಛಂದಃ— ಪಂಕ್ತಿಃ ॥

॥ ಸಂಹಿತಾಪಾಠಃ ॥

ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ

ಅಜನಿಷ್ಟ ವಿಭ್ವಾ ।

ಯಥಾ ಪ್ರಸೂತಾ ಸವಿತುಃ ಸವಾಯ ಏವಾ ರಾತ್ರ್ಯುಷಸೇ

ಯೋನಿಮಾರೈಕ್ ॥ ೧ ॥

॥ ಪದಪಾಠಃ ॥

ಇದಂ । ಶ್ರೇಷ್ಠಂ । ಜ್ಯೋತಿಷಾಂ । ಜ್ಯೋತಿಃ । ಆ । ಅಗಾತ್ । ಚಿತ್ರಃ । ಪ್ರಽಕೇತಃ । ಅಜನಿಷ್ಟ । ವಿಽಭ್ವಾ ।

ಯಥಾ । ಪ್ರಸೂತಾ । ಸವಿತುಃ । ಸವಾಯ । ಏವ । ರಾತ್ರೀ । ಉಷಸೇ । ಯೋನಿಂ । ಅರೈಕ್ ॥ ೧ ॥

॥ ಸಾಯಣಭಾಷ್ಯಂ ॥

ಜ್ಯೋತಿಷಾಂ ಗ್ರಹನಕ್ಷತ್ರಾದೀನಾಂ ದ್ಯೋತಮಾನಾನಾಂ ಮಧ್ಯ ಇದಮುಷಆಖ್ಯಂ ಜ್ಯೋತಿಃ ಶ್ರೇಷ್ಠಂ। ಪ್ರಶಸ್ಯತಮಂ। ಅಸ್ಯ ಕೋಽತಿಶಯ ಇತಿ ಚೇತ್ ಉಚ್ಯತೇ । ನಕ್ಷತ್ರಾದಿಕಂ ಜ್ಯೋತಿಃ ಸ್ವಾತ್ಮಾನಮೇವ ಪ್ರಕಾಶಯತಿ ನಾನ್ಯತ್ ।• ಚಂದ್ರಸ್ತು ಯದ್ಯಪ್ಯನ್ಯತ್ಪ್ರಕಾಶಯತಿ ತಥಾಪಿ ನ ವಿಸ್ಪಷ್ಟ-ಪ್ರಕಾಶಃ। ಔಷಸಂ ತು ಜ್ಯೋತಿರ್ಯುಗಪದೇವ ಸರ್ವಸ್ಯ ಜಗತೋಽಂಧಕಾರನಿರಾಕರಣೇನ ವಿಶೇಷೇಣ ಪ್ರಕಾಶಕಂ। ಅತಃ ಪ್ರಶಸ್ಯತಮಮಿತ್ಯರ್ಥಃ। ತಾದೃಶಂ ಜ್ಯೋತಿರಾಗಾತ್। ಪೂರ್ವಸ್ಯಾಂ ದಿಶ್ಯಾಗಮತ್। ಆಗತೇ ಚ ತಸ್ಮಿನ್ ಚಿತ್ರಶ್ಚಾಯನೀಯಃ ಪ್ರಕೇತೋಽಂಧಕಾರಾವೃತಸ್ಯ ಸರ್ವಸ್ಯ ಪದಾರ್ಥಸ್ಯ ಪ್ರಜ್ಞಾ-ಪಕಸ್ತದೀಯೋ ರಶ್ಮಿರ್ವಿಭ್ವಾ ವಿಭುರ್ವ್ಯಾಪ್ತಃ ಸನ್ನಜನಿಷ್ಟ । ಪ್ರಾದುರಭೂತ್ । ಕಿಂಚ । ಯಥಾ ರಾತ್ರೀ ರಾತ್ರಿಃ ಸ್ವಯಂ ಸವಿತುಃ ಸೂರ್ಯಪ್ರಕಾಶಾತ್ಪ್ರಸೂತಾ ಉತ್ಪನ್ನಾ । ಸೂರ್ಯೋ ಹ್ಯಸ್ತಂ ಗಚ್ಛನ್ ರಾತ್ರಿಂ ಜನಯತಿ। ತಸ್ಮಿನ್ನನಸ್ತಮಿತೇ ರಾತ್ರೇರುತ್ಪತ್ತ್ಯಭಾವಾತ್। ಏವಮೇವ ರಾತ್ರಿರಪ್ಯುಷಸೇ ಸವಾಯೋಷಸ ಉತ್ಪತ್ತಯೇ ತದರ್ಥಂ ಯೋನಿಂ ಸ್ಥಾನಂ ಸ್ವಕೀಯಾಪರಭಾಗಲಕ್ಷಣಮಾರೈಕ್ । ಆರೇಚಿತವತೀ । ಕಲ್ಪಿತವತೀತ್ಯರ್ಥಃ। ಯದ್ವಾ ಪ್ರಸೂತಾ ರಾತ್ರಿಸಕಾಶಾದುತ್ಪನ್ನೋಷಾಃ ಸವಿತುಃ ಸೂರ್ಯಸ್ಯ ಸವಾಯ ಪ್ರಸವಾಯ ಜನ್ಮನೇ ಯಥಾ ಭವತಿ ಏವಂ ರಾತ್ರಿರಪ್ಯುಷಸ ಉಷಸೋ ಯಜ್ಜನ್ಮ ತದರ್ಥಂ ಯೋನಿಂ ಸ್ವಾಪರಭಾಗಲಕ್ಷಣಂ ಸ್ಥಾನಂ ಕೃತವತೀ। ಅತ್ರ ನಿರುಕ್ತಂ। ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗ-ಮತ್ ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ :ರಾತ್ರಿರಾದಿತ್ಯಸ್ಯೈವಂ ರಾತ್ರ್ಯುಷಸೇ ಯೋನಿಮರಿಚತ್ಸ್ಥಾನಂ । ನಿ. ೨-೧೯ । ಇತಿ ॥ ಶ್ರೇಷ್ಠಂ। ಪ್ರಶಸ್ಯಶಬ್ದಾದಾತಿಶಾಯನಿಕ ಇಷ್ಠನ್ । ಪ್ರಶಸ್ಯಸ್ಯ ಶ್ರಃ। ಪಾ. ೫-೩-೬೦ । ಇತಿ ಶ್ರಾದೇಶಃ। ಪ್ರಕೃತ್ಯೈಕಾಚ್ । ಪಾ. ೬-೪-೧೬೩ । ಇತಿ ಪ್ರಕೃತಿಭಾವಾಟ್ಟಿಲೋಪಾಭಾವಃ । ಅಗಾತ್ । ಏತೇರ್ಲುಙಿಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್। ಪ್ರಕೇತಃ। ಕಿತ ಜ್ಞಾನೇ।

ಅಂತರ್ಭಾವಿತಣ್ಯರ್ಥಾತ್ಕರ್ಮಣಿ ಘಞ್ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಅಜನಿಷ್ಟ । ಜನೀ ಪ್ರಾದುರ್ಭಾವೇ । ಲುಙಿ ಸಿಚಿ ಇಡಾಗಮಃ । ವಿಭ್ವಾ । ವಿಪ್ರಸಂಭ್ಯೋ ಡ್ವಸಂಜ್ಞಾಯಾಮಿತಿ ಭವತೇರ್ಡುಪ್ರತ್ಯಯಃ । ಸುಪಾಂ ಸುಲುಗಿತ್ಯಾದಿನಾ ಸೋರಾಕಾರಾದೇಶಃ । ಓಃ ಸುಪೀತಿ ಯಣಾದೇಶಸ್ಯ ನ ಭೂಸುಧಿಯೋರಿತಿ ಪ್ರತಿಷೇಧೇ ಪ್ರಾಪ್ತೇ ಛಂದಸ್ಯುಭಯಥೇತಿಯಣಾದೇಶಃ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವಾ ವಿಪೂರ್ವಾದ್ಭವತೇರೌಣಾದಿಕೋ ಡುನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಪ್ರಸೂತಾ । ಷೂಙ್ ಪ್ರಾಣಿಪ್ರಸವೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸವಾಯ । ಛಂದಸಿ ಜವಸವೌ ವಕ್ತವ್ಯೌ । ಪಾ. ೩-೩-೫೬-೪ । ಇತಿ ನಿಪಾತನಾದಚ್ । ಚಿತ್ತ್ವಾದಂತೋದಾತ್ತತ್ವಂ । ಅಣೋಽಪ್ರಗೃಹ್ಯಸ್ಯಾನುನಾಸಿಕ ಇತಿ ಸಂಹಿತಾಯಾಮಾಕಾರಃ ಸಾನುನಾಸಿಕಃ । ಏವ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ । ರಾತ್ರೀ ರಾತ್ರೇಶ್ಚಾಜಸಾವಿತಿ ಙೀಪ್ । ಯಸ್ಯೇತಿ ಚೇತೀಕಾರಲೋಪಃ । ಆರೈಕ್ । ರಿಚಿರ್ ವಿರೇಚನೇ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಲಘೂಪಧಗುಣೇ ಹಲ್ಙ್ಯಾಬ್ಭ್ಯ ಇತಿ ತಿಲೋಪಃ । ವರ್ಣವ್ಯಾಪತ್ತ್ಯಾ ವ್ಯತ್ಯಯೇನ ಏಕಾರಸ್ಯ ಐಕಾರಃ ॥

॥ ಪ್ರತಿಪದಾರ್ಥ ॥

**ಜ್ಯೋತಿಷಾಂ**—ಗ್ರಹನಕ್ಷತ್ರಾದಿಗಳ ಮಧ್ಯೆ । **ಇದಂ**—ಈ (ಉಷಸ್ಸೆಂಬ) । **ಶ್ರೇಷ್ಠಂ**—ಅತಿ ಶ್ರೇಷ್ಠವಾದ । **ಜ್ಯೋತಿಃ**—ತೇಜೋರಾಶಿಯು । **ಆಗಾತ್**—(ಪೂರ್ವದಿಕ್ಕಿನಲ್ಲಿ) ಉದಿಸಿತು । (ಅದು ಉದಿಸಿದಾಗ) । **ಚಿತ್ರಃ**—ವಿಚಿತ್ರವಾದ । **ಪ್ರಕೇತಃ**—(ಅಂಧಕಾರಾವೃತವಾದ ಪದಾರ್ಥಗಳನ್ನು) ದೃಷ್ಟಿಗೋಚರವಾಗುವಂತೆ ಮಾಡುವ (ರಶ್ಮಿಗಳು) । **ವಿಭ್ವಾ**—ವ್ಯಾಪ್ತವಾಗಿ । **ಅಜನಿಷ್ಟ**—ಉತ್ಪನ್ನವಾಯಿತು । **ರಾತ್ರೀ**—ರಾತ್ರಿಯು । **ಯಥಾ**—ಹೇಗೆ । **ಸವಿತುಃ**—ಸೂರ್ಯನಿಂದ । **ಪ್ರಸೂತಾ** —ಉತ್ಪನ್ನವಾಯಿತೋ । **ಏವಾ**—ಅದೇ ಪ್ರಕಾರವಾಗಿ (ರಾತ್ರಿಯೂ ಕೂಡ) । **ಉಷಸೇ**—ಉಷಸ್ಸಿನ । **ಸವಾಯ**—ಉತ್ಪತ್ತಿಗಾಗಿ । **ಯೋನಿಂ**—ಉತ್ಪತ್ತಿಸ್ಥಾನವನ್ನು (ರಾತ್ರಿಯ ಕಡೆಯ ಭಾಗವನ್ನು । **ಅರೈಕ್**—ಕಲ್ಪಿಸಿತು.

॥ ಭಾವಾರ್ಥ ॥

ಗ್ರಹನಕ್ಷತ್ರಾದಿಗಳಲ್ಲಿ ಅತ್ಯಂತ ಶ್ರೇಷ್ಠವಾದ (ಉಷಸ್ಸೆಂಬ) ತೇಜೋರಾಶಿಯು ಪೂರ್ವದಿಕ್ಕಿನಲ್ಲಿ ಉದಯಿಸಿತು. ಅಂಧಕಾರಾವೃತವಾದ ಪದಾರ್ಥಗಳನ್ನು ದೃಷ್ಟಿಗೋಚರವಾಗುವಂತೆ ಮಾಡುವ ಆಶ್ಚರ್ಯಕರವಾದ ಈ ಉಷಸ್ಸಿನ ರಶ್ಮಿಗಳು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿತು. ರಾತ್ರಿಯು ಸೂರ್ಯನಿಂದ ಹೇಗೆ ಉತ್ಪನ್ನವಾಯಿತೋ ಹಾಗೆ ಉಷಃಕಾಲದ ಉದಯಕ್ಕಾಗಿ ರಾತ್ರಿಯು ತನ್ನ ಕಡೆಯ ಯಾಮವನ್ನು ಉಂಟುಮಾಡಿತು

## English Translation

This most excellent luminary of all luminaries has arrived; the wonderful and diffusive manifester (of all things) has been born; in like manner as night is the offspring of the sun, so she becomes the birth-place of the dawn.

॥ ವಿಶೇಷವಿಷಯಗಳು ॥

**ಜ್ಯೋತಿಷಾಂ ಶ್ರೇಷ್ಠಂ ಇದಂ ಜ್ಯೋತಿಃ—ಗ್ರಹನಕ್ಷತ್ರಾದೀನಾಂ ದ್ಯೋತಮಾನಾನಾಂ ಮಧ್ಯೇ ಉಷಆಖ್ಯಂ ಜ್ಯೋತಿಃ ಪ್ರಶಸ್ಯತಮಮ್ ।** ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವ ಗ್ರಹಗಳೂ ನಕ್ಷತ್ರಗಳೂ ಇವುಗಳಲ್ಲಿ ನಕ್ಷತ್ರಗಳ ಪ್ರಕಾಶವು ತಮ್ಮನ್ನು ತಾವೇ ಪ್ರಕಾಶಗೊಳಿಸುತ್ತವೆ. ಇತರ ಪದಾರ್ಥಗಳ ಅಭಿವ್ಯಕ್ತಿಯು ಉಂಟಾಗುವುದಿಲ್ಲ. ಚಂದ್ರನ ಪ್ರಕಾಶವು ಎಲ್ಲವನ್ನೂ ಕಾಣುವಂತೆ ಮಾಡುವುದಾದರೂ ಅದರಿಂದ ವಸ್ತುಜ್ಞಾನವು ಅಷ್ಟು ಚೆನ್ನಾಗಿ ಉಂಟಾಗುವುದಿಲ್ಲ. ಉಷಃಕಾಲದಲ್ಲಿ ಸಮಸ್ತ ವಸ್ತುಗಳೂ ಸ್ಪಷ್ಟವಾಗಿ ಕಾಣಿಸುವುದರಿಂದ ಚಂದ್ರ ಮತ್ತು ನಕ್ಷತ್ರ ಇವುಗಳ ತೇಜಸ್ಸಿಗಿಂತಲೂ ಉಷಸ್ಸಿನ ಪ್ರಕಾಶವು ಬಹಳ ಮಟ್ಟಿಗೆ ಅತಿಶಯವಾಗಿರುವುದು. ಉಷಸ್ಸಿನ ಪ್ರಕಾಶವು. ಪೂರ್ವದಿಕ್ಕಿನಲ್ಲಿ ಕೊಂಚಮಟ್ಟಿಗಾದರೂ ಉಂಟಾದ ಕೂಡಲೆ ಜಗತ್ತಿನಲ್ಲಿ ಇರುವ ಅಂಧಕಾರವೆಲ್ಲವೂ ಆ ಕ್ಷಣದಲ್ಲಿಯೇ ತೊಲಗಿಹೋಗುವುದು. ಆದ್ದರಿಂದಲೇ ಉಷಸ್ಸಿನ ತೇಜಸ್ಸನ್ನು **(ಶ್ರೇಷ್ಠಂ-ಪ್ರಶಸ್ಯತಮಮ್)** ಗೃಹನಕ್ಷತ್ರಾದಿಗಳ ತೇಜಸ್ಸಿಗಿಂತಲೂ ಅತ್ಯಧಿಕವೆಂದು ವ್ಯಾಖ್ಯಾನಮಾಡಿರುತ್ತಾರೆ. ಆದರೆ ಧರ್ಮವಾದ ತೇಜಸ್ಸಿಗೂ, ಧರ್ಮಿಯಾದ ತೇಜಸ್ಸನ್ನು ಹೊಂದಿರುವ ವಸ್ತುವಿಗೂ ಅಭೇದವನ್ನು ಆಶ್ರಯಿಸಿ ಇಲ್ಲಿ **ಜ್ಯೋತಿಷಾಂ ಜ್ಯೋತಿಃ—** ಎಂದು ಪ್ರಯೋಗವು ಇರುತ್ತದೆ.

**ಪ್ರಕೇತಃ—ಕೇತಃ ಕೇತುಃ** ಎಂಬ ಹನ್ನೊಂದು ಪ್ರಜ್ಞಾನಾಮಗಳಲ್ಲಿ **ಕೇತಃ** ಶಬ್ದವು (ನಿ. ೩–೧೩) ಉಕ್ತವಾಗಿರುತ್ತದೆ. ಪ್ರ ಎಂಬ ಉಪಸರ್ಗದಿಂದ ಕೂಡಿರುವ ಕಾರಣ ಪ್ರಕೃಷ್ಟಜ್ಞಾನವು ಎಂದು ಅರ್ಥವು. ಸ್ಕಂದಸ್ವಾಮಿಗಳು ಕೇತಃ ಎಂಬ ಶಬ್ದವು ಪ್ರಜ್ಞಾನಾಮಗಳಲ್ಲಿ ಉಕ್ತವಾಗಿರುವುದರಿಂದ **ಪ್ರಕೇತಃ ಪ್ರಕೃಷ್ಟಜ್ಞಾನಂ** ಎಂದು ಅರ್ಥವನ್ನು ವಿವರಿಸಿ ಚಿತ್ರಶಬ್ದಕ್ಕೆ ಪೂಜ್ಯವೆಂದು ಅರ್ಥವನ್ನು ಹೇಳಿ ಉಷಸ್ಸು ಉದ್ಗತವಾದ ಕ್ಷಣದಲ್ಲಿಯೇ ಪೂಜ್ಯವಾದ ಸರ್ವವನ್ನೂ ಗೋಚರವಾಗುವಂತೆ ಮಾಡುವ ಉತ್ತಮವಾದ ಜ್ಞಾನವೆಂಬ ಪ್ರಕಾಶವು ಉಂಟಾಗುವುದರಿಂದ ಪ್ರಶಸ್ಯತಮವಾದ ಜ್ಯೋತಿಸ್ಸೆಂದು ಅರ್ಥವನ್ನು ಹೇಳಿರುವರು.

**ಯಥಾ ಪ್ರಸೂತಾ ಸವಿತುಸ್ಸವಾಯ ಏವಾ ರಾತ್ರ್ಯುಷಸೇ ಯೋನಿಮಾರೈಕ್**—ಸೂರ್ಯನು ಅಸ್ತನಾದ ನಂತರ ರಾತ್ರಿಯ ಉತ್ಪತ್ತಿಕಾಲವಾಗಿರುವುದು. ಇದರಿಂದ ರಾತ್ರಿಯು ಸೂರ್ಯನಿಂದ ಉತ್ಪನ್ನವಾಗಿರುವುದು ಎಂಬ ಅರ್ಥವು ಸಿದ್ಧವಾಗಿರುತ್ತದೆ ಇದರಂತೆಯೇ ರಾತ್ರಿಯು ಕಳೆದಮೇಲೆ ಉಷಃಕಾಲವು ಉಂಟಾಗುವುದರಿಂದ ರಾತ್ರಿಯೂ ಕೂಡ ಉಷಸ್ಸಿನ ಉತ್ಪತ್ತಿಗೆ ಕಾರಣಭೂತವಾಗಿರುವುದು. ಎಂದರೆ ಸೂರ್ಯನಿಂದ ರಾತ್ರಿಯು ಉತ್ಪನ್ನವಾದಂತೆ ರಾತ್ರಿಯಿಂದ ಉಷಸ್ಸು ಉತ್ಪನ್ನವಾಗಿರುತ್ತದೆ ಎಂದಭಿಪ್ರಾಯವು. ಅಥವಾ ಉಷಸ್ಸು ಉದ್ಗತವಾದ ನಂತರ ಸೂರ್ಯನ ಉದಯವು ಆಗುವುದರಿಂದ ಸೂರ್ಯನ (ಉತ್ಪತ್ತಿಗೆ) ಉದಯಕ್ಕೆ ಉಷಸ್ಸು ಕಾರಣವಾಗಿರುವ ಹಾಗೆ, ರಾತ್ರಿಯೂ ಕೂಡ ಉಷಸ್ಸಿನ ಉತ್ಪತ್ತಿಗೆ ಕಾರಣವಾಗಿರುವುದು ಎಂದು ಅರ್ಥವನ್ನು ವಿವರಿಸಿರುವರು. ಈ ಎರಡು ವಿಧವಾದ ಅರ್ಥವೂ ಎರಡು ಭಾಷ್ಯಗಳಲ್ಲಿಯೂ ಒಂದೇ ಸಮನಾಗಿರುವುದು.

ಯಾಸ್ಕರು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಗಮತ್ । ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ ರಾತ್ರಿರಾದಿತ್ಯಸ್ಯ । ಏವಂ ರಾತ್ರ್ಯುಷಸೇ ಯೋನಿಮರಿಚತ್ ಸ್ಥಾನಂ । ಸ್ತ್ರೀಯೋನಿರಭಿಯುತ ಏನಾಂ ಗರ್ಭಃ ॥**

(ನಿ. ೨-೧೯)

ರಾತ್ರೇರಪರಃ ಕಾಲ ಉಷ ಇತ್ಯುಚ್ಯತೇ ಎಂಬ ವಚನಾನುಸಾರವಾಗಿ ರಾತ್ರಿಯ ಕೊನೆಯ ಭಾಗವು ಎಂದರೆ ಸೂರ್ಯೋದಯಕ್ಕೆ ಮುಂಚಿತವಾದ ಕಾಲವು ಉಷಃಕಾಲವೆನಿಸುವುದು. ಈ ಉಷಃಕಾಲದ ತೇಜಸ್ಸು ಎಂದರೆ ಬೆಳಕು ಎಲ್ಲಾ ಬೆಳಕುಗಳಿಗಿಂತಲೂ ಶ್ರೇಷ್ಠವಾದದ್ದು. ಪ್ರಪಂಚದಲ್ಲಿ ಸೂರ್ಯಚಂದ್ರನಕ್ಷತ್ರಗಳು ಪ್ರಕಾಶಯುತವಾದವು. ಇವುಗಳಲ್ಲಿ ಸೂರ್ಯನ ಬೆಳಕು ಬಹಳ ತೀಕ್ಷ್ಣವಾಗಿರುವುದು. ನಕ್ಷತ್ರಗಳ ಬೆಳಕು ನಕ್ಷತ್ರಗಳನ್ನು ಮಾತ್ರವೇ ಪ್ರಕಾಶಿಗೊಳಿಸುತ್ತಾ ಇತರ ಪದಾರ್ಥಗಳನ್ನು ಪ್ರಕಾಶಪಡಿಸುವುದಿಲ್ಲ ಎಂದರೆ ನಕ್ಷತ್ರಗಳ ಬೆಳಕಿನಿಂದ ಇತರ ವಸ್ತುಗಳನ್ನು ನೋಡಲು ಸಾಧ್ಯವಾಗುವುದಿಲ್ಲ. ಚಂದ್ರನ ಬೆಳಕು ಶೀತಳವಾಗಿದ್ದರೂ ಹೆಚ್ಚುಪ್ರಕಾಶವಿಲ್ಲದ್ದರಿಂದ ಪದಾರ್ಥಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಆದರೆ ಉಷಃಕಾಲದ ಬೆಳಕು ಸೂರ್ಯನ ಬೆಳಕಿನಂತೆ ತೀಕ್ಷ್ಣವೂ ಅಲ್ಲ, ಚಂದ್ರನ ಪ್ರಕಾಶದಂತೆ ಶೀತಳವೂ ಅಲ್ಲ, ಅಸ್ಪಷ್ಟವೂ ಅಲ್ಲ. ಎಲ್ಲಾ ವಸ್ತುವನ್ನೂ ಬಹಳ ಚೆನ್ನಾಗಿ ಪ್ರಕಾಶಪಡಿಸುವ ಸಾಮರ್ಥ್ಯವುಳ್ಳದ್ದಾಗಿರುವುದು. ಆದುದರಿಂದಲೇ ಈ ಉಷಃಕಾಲದ ಪ್ರಕಾಶವು ಸೂರ್ಯಚಂದ್ರನಕ್ಷತ್ರಾದಿಗಳ ಪ್ರಕಾಶಕ್ಕಿಂತಲೂ ಅತ್ಯಂತ ಶ್ರೇಷ್ಠವಾದುದೆಂದು ಇಲ್ಲಿ ಹೇಳಿರುವುದು. ಇದಲ್ಲದೆ ಈ ಉಷಃಕಾಲದ ಪ್ರಕಾಶವು ಎಲ್ಲಾ ಪ್ರದೇಶಗಳಲ್ಲಿಯೂ ಏಕಕಾಲದಲ್ಲಿ ಹರಡಿ ಮನಸ್ಸಿಗೆ ಬಹು ಆಹ್ಲಾದಕರವಾಗಿರುವುದು. ಇಂತಹ ಉಷಃಕಾಲದ ಉದಯವು ಈಗ ಪ್ರಾಪ್ತವಾಗಿರುವುದು. ಇದು ಈ ಋಕ್ಕಿನ ಪೂರ್ವಾರ್ಧದ ಅನುವಾದವು

ಪ್ರಪಂಚದಲ್ಲಿ ಸೂರ್ಯನು ಮುಳುಗಿದನಂತರ ರಾತ್ರಿಯು ಉಂಟಾಗುವುದು. ರಾತ್ರಿಯು ಕಳೆದನಂತರ ಉಷಃಕಾಲವೂ, ಉಷಃಕಾಲಾನಂತರ ಸೂರ್ಯೋದಯವೂ ಉಂಟಾಗುವುದು. ಈ ರೀತಿ ಒಂದಾಗುತ್ತಲೊಂದು ಕ್ರಮವಾಗಿ ಪ್ರಾಪ್ತವಾಗುವುದರಿಂದ ಒಂದರ ಉತ್ಪತ್ತಿಗೆ ಒಂದು ಕಾರಣವೆಂದು ಹೇಳಲ್ಪಡುವುದು. ಹೇಗೆಂದರೆ ಸೂರ್ಯನು ಅಸ್ತನಾದನಂತರ ರಾತ್ರಿಯು ಉಂಟಾಗುವುದರಿಂದ ರಾತ್ರಿಯ ಉತ್ಪತ್ತಿಗೆ ಸೂರ್ಯನು ಕಾರಣನು ಎಂದರೆ ಸೂರ್ಯನಿಂದ ರಾತ್ರಿಯ ಉತ್ಪತ್ತಿಯುಂಟಾಗುವುದು. ಅದರಂತೆಯೇ ರಾತ್ರಿಯಿಂದ ಉಷಃಕಾಲದ ಉತ್ಪತ್ತಿಯಾಗುವುದು. ಉಷಃಕಾಲದಿಂದ ಸೂರ್ಯನ ಉದಯವಾಗುವುದು. ಈ ಅಭಿಪ್ರಾಯವನ್ನೇ ಈ ಋಕ್ಕಿನಲ್ಲಿ—ರಾತ್ರಿಯು ಸೂರ್ಯನಿಂದ ಹೇಗೆ ಉತ್ಪನ್ನವಾಯಿತೋ ಹಾಗೆ ರಾತ್ರಿಯಿಂದ ಉಷಃಕಾಲವು ಆವಿರ್ಭವಿಸಿತು ಎಂದು ವರ್ಣಿಸಿರುವುದು.

**ಪ್ರಕೇತಃ—ಕಿತ ಜ್ಞಾನೇ । ಅಂಧಕಾರಾವೃತಸ್ಯ ಸರ್ವಸ್ಯ ಪದಾರ್ಥಸ್ಯ ಪ್ರಜ್ಞಾಪಕಃ ।** ಕತ್ತಲೆಯಿಂದ ಕಾಣಿಸದಿರುವ ಪದಾರ್ಥಗಳನ್ನು ತನ್ನ ಬೆಳಕಿನಿಂದ ಕಾಣುವಂತೆ ಮಾಡುವ.

**ವಿಭ್ವಾ—ವಿಭುರ್ವ್ಯಾಪ್ತಃ ।** ವ್ಯಾಪ್ತವಾದ, ಆವರಿಸಿರುವ.

**ಸವಾಯ—ಉತ್ಪತ್ತ್ಯೈ ।** ಹುಟ್ಟುವುದಕ್ಕೆ, ಉದಯಿಸುವುದಕ್ಕೆ

**ಯೋನಿಃ—**ಉತ್ಪತ್ತಿಸ್ಥಾನವು, ಕಾರಣಭೂತವಾದುದು.

॥ ವ್ಯಾಕರಣಪ್ರಕ್ರಿಯಾ ॥

**ಶ್ರೇಷ್ಠಮ್**—ಅತಿಶಯೇನ ಪ್ರಶಸ್ಯಃ ಶ್ರೇಷ್ಠಃ ಪ್ರಶಸ್ಯ ಶಬ್ದಕ್ಕೆ ಅತಿಶಯಾರ್ಥ ತೋರುವಾಗ **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ಪ್ರಶಸ್ಯಸ್ಯ ಶ್ರಃ** (ಪಾ. ಸೂ. ೫-೩-೬೦) ಎಂಬುದರಿಂದ ಪ್ರಶಸ್ಯ ಶಬ್ದಕ್ಕೆ ಶ್ರಾದೇಶ. ಟಿಲೋಪ ಪ್ರಾಪ್ತವಾದರೆ, **ಪ್ರಕೃತ್ಯೈಕಾಚ್** (ಪಾ. ಸೂ. ೬-೪-೧೬೩) ಎಂಬುದರಿಂದ ಏಕಾಚಾದುದರಿಂದ ಪ್ರಕೃತಿಭಾವ ಬರುತ್ತದೆ. ಆಗ ಗುಣ ಪ್ರತ್ಯಯು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತ ರೂಪ.

**ಅಗಾತ್**—ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** (ಪಾ. ಸೂ. ೩-೪-೧೦೦) ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಇಣೋ ಗಾ ಲುಙಿ** (ಪಾ. ಸೂ ೨-೪-೪೫) ಎಂಬುದರಿಂದ ಧಾತುವಿಗೆ ಗಾ ಆದೇಶ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಕೇತಃ**—ಪ್ರ ಉಪಸರ್ಗ. ಕಿತ ಜ್ಞಾನೇ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕ ವಾದ ಇದಕ್ಕೆ ಕರ್ಮಣಿಯಲ್ಲಿ ಘಞ್ ಪ್ರತ್ಯಯನಿಮಿತ್ತವಾಗಿ **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಗತಿಸಮಾಸವಾದಾಗ **ಥಾಥಘಞ್ಕ್ತಾ**—(ಪಾ. ಸೂ ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಜನಿಷ್ಟ**—ಜನೀ ಪ್ರಾದುರ್ಭಾವೇ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚ್ಲೇಃ ಸಿಚ್** (ಪಾ. ಸೂ. ೩-೧-೪೪) ಎಂಬುದರಿಂದ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಸೂತ್ರದಿಂದ ಅದಕ್ಕೆ ಇಡಾಗಮ. **ಆದೇಶಪ್ರತ್ಯಯಯೋಃ** ಸೂತ್ರದಿಂದ ಸಿಚ್ಚಿನ ಸಕಾರಕ್ಕೆ ಷತ್ವ. ಅಂಗಕ್ಕೆ ಅಡಾಗಮ. ಷಕಾರನಿಮಿತ್ತವಾಗಿ ಪ್ರತ್ಯಯಕ್ಕೆ ಷ್ಟುತ್ವ. ಅಜನಿಷ್ಟ ಎಂದು ರೂಪವಾಗುತ್ತದೆ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವಿಭ್ವಾ**—ವಿ ಉಪಸರ್ಗ. ಭೂ ಸತ್ತಾಯಾಂ ಧಾತು. ವಿ ಉಪಪದವಾಗಿರುವಾಗ **ವಿಪ್ರಸಂಭ್ಯೋ ಡ್ವಸಂಜ್ಞಾಯಾಂ** (ಪಾ. ಸೂ. ೩-೨-೧೮೦) ಎಂಬುದರಿಂದ ಈ ಧಾತುವಿಗೆ ಡುಪ್ರತ್ಯಯ. ವಿಭು ಶಬ್ದವಾಗುತ್ತದೆ. ಇದಕ್ಕೆ ಪ್ರಥಮಾ ಏಕವಚನ ಸು ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ವಿಭೂ+ಆ ಎಂದಿರುವಾಗ **ಓಃ ಸುಪಿ** (ಪಾ. ಸೂ. ೬-೪-೮೩) ಎಂಬುದರಿಂದ ಉಕಾರಕ್ಕೆ ಯಣಾದೇಶ ಪ್ರಾಪ್ತವಾದರೆ ಅದಕ್ಕೆ **ನ ಭೂ ಸುಧಿಯೋಃ** (ಪಾ. ಸೂ. ೬-೪-೮೫) ಎಂಬುದರಿಂದ ನಿಷೇಧವು ವಾಸ್ತವವಾಗಿ ಬರುತ್ತದೆ. ಆದರೆ **ಛಂದಸ್ಯುಭಯಥಾ** (ಪಾ. ಸೂ. ೬-೪-೮೬) ಎಂಬುದರಿಂದ ಇಲ್ಲಿ ಯಣಾದೇಶ ಬರುತ್ತದೆ. ಕೃದುತ್ತರಪದಪ್ರಕೃತಿಸ್ವರ ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ವಿಪೂರ್ವಕವಾದ

ಭೂಧಾತುವಿಗೆ ಔಣಾದಿಕವಾದ ಡುನ್ ಪ್ರತ್ಯಯ. ರೂಪಸಿದ್ಧಿ ಮೊದಲಿನಂತೆಯೇ ಆದರೂ ಪ್ರತ್ಯಯನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬ ಅನುಶಾಸನದಿಂದಲೇ ಆದ್ಯುದಾತ್ತಸ್ವರ ಸಿದ್ಧವಾಗುತ್ತದೆ.

**ಪ್ರಸೂತಾ**—ಪ್ರ ಉಪಸರ್ಗ. ಷೂಙ್ ಪ್ರಾಣಿಪ್ರಸವೇ ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಧಾತುವಿನ ಆದಿಗೆ ಸತ್ವ. ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ.

**ಸವಾಯ**— **ಛಂದಸಿ ಜವಸವೌ ವಕ್ತವ್ಯೌ** (ಪಾ. ಸೂ. ೩-೩-೫೬-೪) ಎಂಬುದರಿಂದ ನಿಪಾತಮಾಡಿರುವುದರಿಂದ ಷೂಧಾತುವಿಗೆ ಅಪ್ ಪ್ರತ್ಯಯ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ. **ಅಣೋಽಪ್ರಗೃಹ್ಯಸ್ಯಾನುನಾಸಿಕಃ** (ಪಾ. ಸೂ ೮-೪-೫೭) ಎಂಬುದರಿಂದ ಸಂಹಿತಾದಲ್ಲಿ ಆಕಾರವು ಅನುನಾಸಿಕವಾಗುತ್ತದೆ.

**ಏವ**— **ಚಾದಯೋಽಸತ್ವೇ** ಸೂತ್ರದಿಂದ ನಿಪಾತಸಂಜ್ಞೆಯನ್ನು ಹೊಂದುವುದರಿಂದ **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘವನ್ನು ಹೊಂದುತ್ತದೆ.

**ರಾತ್ರೀ**—**ರಾತ್ರೇಶ್ಚಾಜಸೌ** (ಪಾ. ಸೂ. ೪-೧-೩೧) ಎಂಬುದರಿಂದ ರಾತ್ರಿ ಶಬ್ದಕ್ಕೆ ಙೀಪ್. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಇಕಾರಕ್ಕೆ ಲೋಪ. ಸುಪರವಾದಾಗ **ಹಲ್ಙ್ಯಾಭ್ಯೋ**—ಸೂತ್ರದಿಂದ ಅದಕ್ಕೆ ಲೋಪ.

**ಅರೈಕ್**—ರಿಚಿರ್ ವಿರೇಚನೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನಮ್) ಲುಕ್. **ಪುಗಂತಲಘೂಪಧಸ್ಯ ಚ** ಸೂತ್ರದಿಂದ ಧಾತುವಿನ ಲಘೂಪಧೆಗೆ ತಿಪ್ ನಿಮಿತ್ತವಾಗಿ ಗುಣ. **ಹಲ್ಙ್ಯಾಭ್ಯೋ**—(ಪಾ. ಸೂ. ೬-೧-೬೮) ಎಂಬುದರಿಂದ ಹಲಂತದ ಪರದಲ್ಲಿರುವುದರಿಂದ ಅಪೃಕ್ತ ತಿಪ್ಪಿಗೆ ಲೋಪ. **ಚೋಃ ಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕುತ್ವ. ಅಂಗಕ್ಕೆ ಅಡಾಗಮ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಏಕಾರಕ್ಕೆ ಐಕಾರ. **ಅರೈಕ್** ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿ ಬಂದುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ರುಶದ್ವತ್ಸಾ ರುಶತೀ ಶ್ವೇತ್ಯಾಗಾದಾರೈಗು ಕೃಷ್ಣಾ ಸದನಾ-
ನ್ಯಸ್ಯಾಃ ।
ಸಮಾನಬಂಧೂ ಅಮೃತೇ ಅನೂಚೀ ದ್ಯಾವಾ ವರ್ಣಂ ಚರತ
ಆಮಿನಾನೇ ॥ ೨ ॥

॥ ಪದಪಾಠಃ ॥

ರುಶತ್ ಽ ವತ್ಸಾ । ರುಶತೀ । ಶ್ವೇತ್ಯಾ । ಆ । ಅಗಾತ್ । ಅರೈಕ್ । ಊಂ ಇತಿ ।
ಕೃಷ್ಣಾ । ಸದನಾನಿ । ಅಸ್ಯಾಃ ।
ಸಮಾನಬಂಧೂ ಇತಿ ಸಮಾನ ಽ ಬಂಧೂ । ಅಮೃತೇ ಇತಿ । ಅನೂಚೀ ಇತಿ ।
ದ್ಯಾವಾ । ವರ್ಣಂ । ಚರತಃ । ಆಮಿನಾನೇ ಇತ್ಯಾ ಽ ಮಿನಾನೇ ॥ ೨ ॥

॥ ಸಾಯಣಭಾಷ್ಯಂ ॥

ಶ್ವೇತ್ಯೇತ್ಯುಷಸೋ ನಾಮಧೇಯಂ । ರುಶತೀ ದೀಪ್ತಾ ಶ್ವೇತ್ಯಾ ಶ್ವೇತವರ್ಣೋಷಾ ರುಶದ್ವತ್ಸಾ ರುಶದ್ದೀಪ್ತಃ ಸೂರ್ಯೋ ವತ್ಸೋ ಯಸ್ಯಾಃ ಸಾ ತಥೋಕ್ತಾ । ಯಥಾ ಮಾತುಃ ಸಮೀಪೇ ವತ್ಸಃ ಸಂಚರತಿ । ಏವಮುಷಸಃ ಸಮೀಪೇ ಸೂರ್ಯಸ್ಯ ನಿತ್ಯಮವಸ್ಥಾನಾತ್ತದ್ವತ್ಸತ್ವಂ । ಅಥವಾ ಯಥಾ ವತ್ಸೋ ಮಾತುಃ ಸ್ತನ್ಯಂ ರಸಂ ಪಿಬನ್ಚರತಿ । ಏವಮುಷಸೋಽವಶ್ಯಾಯಾಖ್ಯಂ ರಸಂ ಪಿಬನ್ವತ್ಸ ಇತ್ಯುಚ್ಯತೇ । ತಾದೃಶೀ ಸತ್ಯಾಗಾತ್ । ಆಗತವತೀ ಆಗತವತೀ । ಆಗತಾಯಾ ಅಸ್ಯಾ ಉಷಸಃ ಕೃಷ್ಣಾ ಕೃಷ್ಣವರ್ಣಾ ರಾತ್ರಿಃ ಸದನಾನಿ ಸ್ಥಾನಾನಿ ಸ್ವಕೀಯೋಂತ್ಯಾರ್ಥಯಾಮಲಕ್ಷಣಾನ್ಯರೈಕ್ । ಅರೇಚಿತವತೀ । ಕಲ್ಪಿತವತೀ । ದತ್ತವತೀತ್ಯರ್ಥಃ । ಉ ಇತ್ಯೇತತ್ಪಾದಪೂರಣಂ । ಅಪಿ ಚೈತೇ ರಾತ್ರ್ಯುಷಸಾ ಸಮಾನ-ಬಂಧೂ ಸಮಾನೇನೈಕೇನ ಸೂರ್ಯಾಖ್ಯೇನ ಬಂಧುನಾ ಸಖ್ಯಾ ಯುಕ್ತೇ । ಯದ್ವಾ । ಸೂರ್ಯೇಣ ಸಹ

ಸಂಬದ್ಧೇ । ಯಥೋಷಾ ಉದೇಷ್ಯತಾ ಸೂರ್ಯೇಣ ಸಂಬದ್ಧಾ ಏವಂ ರಾತ್ರಿರಪ್ಯಸ್ತಂಯತಾ ಸೂರ್ಯೇಣ ಸಂಬದ್ಧಾ । ಅಮೃತೇ ಮರಣರಹಿತೇ ಕಾಲಾತ್ಮಕತಯಾ ನಿತ್ಯತ್ವಾತ್ ಅನೂಚೀ ಅನ್ವಂಚಂತ್ಯೌ । ಪ್ರಥಮಂ ರಾತ್ರಿಃ ಪಶ್ಚಾದುಷಾ ಇತ್ಯನೇನ ಕ್ರಮೇಣ ಗಚ್ಛಂತ್ಯೌ । ಯದ್ವಾ ಸೂರ್ಯ-ಗತ್ಯನುಸಾರೇಣ ಗಚ್ಛಂತ್ಯೌ । ಏವಂಭೂತೇ ವರ್ಣಂ ಸರ್ವೇಷಾಂ ಪ್ರಾಣಿನಾಂ ರೂಪಮಾಮಿನಾನೇ । ಜರಯಂತ್ಯೌ । ಯದ್ವಾ ಸ್ವಕೀಯಂ ರೂಪಂ ಹಿಂಸಂತ್ಯೌ । ಉಷಸಾ ನೈಶಂ ತಮೋ ನಿವರ್ತ್ಯತೇ ಪ್ರಕಾಶಾತ್ಮಕಮುಷಸೋ ರೂಪಂ ರಾತ್ರ್ಯಾ । ಏವಂವಿಧೇ ಸತ್ಯೌ ದ್ಯಾವಾ ದ್ಯೋತಮಾನೇ ಚರತಃ । ಪ್ರತಿದಿವಸಮಾವರ್ತೇತೇ । ಯದ್ವಾ । ದ್ಯಾವಾ ನಭಸಾಂತರಿಕ್ಷಮಾರ್ಗೇಣ ಚರತಃ । ಪ್ರತಿದಿವಸಂ ಗಚ್ಛತಃ । ಅತ್ರ ನಿರುಕ್ತಂ । ರುಶದ್ವತ್ಸಾ ಸೂರ್ಯವತ್ಸಾ ರುಶದಿತಿ ವರ್ಣನಾಮ ರೋಚತೇರ್ಜ್ವಲತಿಕರ್ಮಣಃ । ಸೂರ್ಯಮಸ್ಯಾ ವತ್ಸಮಾಹ ಸಾಹಚರ್ಯಾದ್ರಸಹರಣಾದ್ವಾ । ರುಶತೀ ಶ್ವೇತ್ಯಾಗಾತ್ । ಶ್ವೇತ್ಯಾ ಶ್ವೇತ-ತೇರರಿಚತ್ಕೃಷ್ಣಾ ಸದನಾನ್ಯಸ್ಯಾಃ ಕೃಷ್ಣವರ್ಣಾ ರಾತ್ರಿಃ ಕೃಷ್ಣಂ ಕೃಷ್ಯತೇರ್ನಿಕೃಷ್ಟೋ ವರ್ಣಃ । ಅಥೈನೇ ಸಂಸ್ತೌತಿ ಸಮಾನಬಂಧೂ ಸಮಾನಬಂಧನೇ ಅಮೃತೇ ಅಮರಣಧರ್ಮಾಣಾವನೂಚೀ ಅನೂಚ್ಯಾವಿತರೇತರಮಭಿಪ್ರೇತ್ಯ ದ್ಯಾವಾ ವರ್ಣಂ ಚರತಸ್ತೇ ಏವ ದ್ಯಾವೌ ದ್ಯೋತನಾದಪಿ ವಾ ದ್ಯಾವಾ ಚರತಸ್ತಯಾ ಸಹ ಚರತ ಇತಿ ಸ್ಯಾದಾಮಿನಾನೇ ಆಮಿನ್ವಾನೇ ಅನ್ಯೋನ್ಯಸ್ಯಾಧ್ಯಾತ್ಮಂ ಕುರ್ವಾಣೇ । ನಿ. ೨-೨೦ । ಇತಿ । ಶ್ವೇತ್ಯಾ । ಶ್ವಿತಾ ವರ್ಣೇ । ಅಸ್ಮಾಣ್ಣ್ಯಂತಾದಚೋ ಯದಿತಿ ಭಾವೇ ಯತ್ । ಣಿಲೋಪಃ । ಅರ್ಶಆದಿತ್ವಾನ್ಮತ್ವರ್ಥೀಯೋಽಚ್ । ಅಮೃತೇ । ಮೃತಂ ಮರಣಮನಯೋ-ರ್ನಾಸ್ತೀತಿ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಅನೂಚೀ । ಅನುಪೂರ್ವಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಅಂಚತೇಶ್ಚೋಪ-ಸಂಖ್ಯಾನಮಿತಿ ಙೀಪ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘಃ । ಅನುದಾತ್ತಸ್ಯ ಚ ಯತ್ರೋ-ದಾತ್ತಲೋಪ ಇತಿ ಙೀಪ ಉದಾತ್ತತ್ವಂ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಆಮಿನಾನೇ । ಮೀಞ್ ಹಿಂಸಾಯಾಂ । ಕ್ರ್ಯಾದಿಕಃ । ಶಾನಚಿ ಮಿನಾತೇರ್ನಿಗಮ ಇತಿ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ರುಶತೀ**—ಪ್ರಕಾಶಮಾನವಾದ । **ಶ್ವೇತ್ಯಾ**—ಶ್ವೇತವರ್ಣವುಳ್ಳ ಉಷಸ್ಸು । **ರುಶದ್ವತ್ಸಾ**—ಪ್ರಕಾಶಮಾನನಾದ ಸೂರ್ಯನೇ ವತ್ಸನಾಗಿ ಉಳ್ಳದ್ದಾಗಿ । **ಆಗಾತ್**—ಉದಿಸಿತು । **ಕೃಷ್ಣಾ**—ಕೃಷ್ಣವರ್ಣವಾದ ರಾತ್ರಿಯು । **ಅಸ್ಯಾಃ**—ಈ ಉಷಸ್ಸಿಗೆ । **ಸದನಾನಿ**—(ರಾತ್ರಿಯ ಕಡೆಯ ಅರ್ಧ ಯಾಮವನ್ನು) ಜನ್ಮಸ್ಥಾನವನ್ನಾಗಿ । **ಆರೈಕ್ ಉ**—ಕಲ್ಪಿಸಿತು । **ಏತೇ**—ಈ ರಾತ್ರಿ ಮತ್ತು ಉಷಸ್ಸುಗಳು । **ಸಮಾನ ಬಂಧೂ**—ಸಮಾನನಾದ (ಸೂರ್ಯನು) ಬಂಧು ಉಳ್ಳವರಾಗಿ (ಸೂರ್ಯನೊಡನೆ ಸಂಬಂಧವುಳ್ಳವರಾಗಿ) । **ಅಮೃತೇ**—ನಿತ್ಯರಾಗಿ । **ಅನೂಚೀ**—ಒಬ್ಬರನ್ನೊಬ್ಬರು ಅನುಸರಿಸುವವರಾಗಿ (ರಾತ್ರಿಯಾದಮೇಲೆ ಉಷಸ್ಸು ಮತ್ತು ಪುನಃ ಪುನಃ ಅದೇ ಕ್ರಮದಲ್ಲಿ) । **ವರ್ಣಂ**—(ಪದಾರ್ಥಗಳ) ರೂಪವನ್ನು । **ಆಮಿನಾನೇ**—ಜರಾಯುಕ್ತವನ್ನಾಗಿ ಮಾಡುವವುಗಳಾಗಿ (ಸವೆಯುವಂತೆ ಮಾಡುತ್ತಾ) । **ದ್ಯಾವಾ**—(ಅಂತರಿಕ್ಷದಲ್ಲಿ) ವಿರಾಜಿಸುತ್ತಾ । **ಚರತಃ**—ಪ್ರತಿದಿವಸವೂ ಸಂಚರಿಸುತ್ತವೆ.

॥ ಭಾವಾರ್ಥ ॥

ಸೂರ್ಯನಿಗೆ ಮಾತೃಭೂತವಾದ ಉಷಸ್ಸು ಪ್ರಕಾಶಮಾನವಾಗಿ ಕೃಷ್ಣವರ್ಣವಾದ ರಾತ್ರಿಯ ಕಡೆಯ ಯಾಮದಿಂದ ಜನಿಸಿತು. ಈರಾತ್ರಿ ಉಷಸ್ಸುಗಳೆರಡೂ ಸೂರ್ಯನೊಡನೆ ನಿಕಟಸಂಬಂಧವುಳ್ಳವು (ರಾತ್ರಿಯು ಸೂರ್ಯಾಸ್ತವಾದ ಮೇಲೂ ಉಷಸ್ಸು ಸೂರ್ಯೋದಯಕ್ಕೆ ಮೊದಲೂ ಬರುತ್ತವೆ); ಕಾಲರೂಪವಾದುದರಿಂದ ನಿತ್ಯವಾದುವು; ಎರಡೂ ಒಂದೇ ಕ್ರಮದಲ್ಲಿ ಬರುತ್ತವೆ, (ರಾತ್ರಿಯನಂತರ ಉಷಸ್ಸು): ಪರಸ್ಪರ (ಉಷಸ್ಸು ಅಂಧಕಾರವನ್ನೂ ರಾತ್ರಿಯು ಪ್ರಕಾಶವನ್ನೂ) ರೂಪನಾಶ ಮಾಡುತ್ತವೆ; ಅಥವಾ ಇವುಗಳ ಗತಿಯಿಂದ ಪದಾರ್ಥಗಳ ರೂಪವು ಜರಾಯುಕ್ತವಾಗುತ್ತವೆ(ಸವೆಯುತ್ತವೆ); ಈ ರೀತಿ ಇವೆರಡೂ ಅಂತರಿಕ್ಷದಲ್ಲಿ ಸಂಚರಿಸುತ್ತಿರುತ್ತವೆ.

English Translation.

The white-shining dawn, the parent of the Sun has arrived; dark night has sought her own abode; both allied to the same (sun); immortal, succeeding to each other and mutually effacing each other's complexion, they traverse the heavens.

॥ ವಿಶೇಷವಿಷಯಗಳು ॥

**ಶ್ವೇತ್ಯಾ—ವಿಭಾವರೀ, ಸೂನರೀ** ಎಂಬ ಹದಿನಾರು **ಉಷೋ**ನಾಮಗಳಲ್ಲಿ (ನಿ. ೨-೧೯) ಉಕ್ತವಾಗಿರುವುದರಿಂದ ಉಷಸ್ಸೆಂದು ಅರ್ಥವು. **ಶ್ವೇತ್ಯಾ—ಶ್ವೇತವರ್ಣಾ** ಸಾಯಣರು ಶುಭ್ರವಾದ ಕಾಂತಿಯುಳ್ಳದ್ದೆಂದು ಅರ್ಥವನ್ನು ವಿವರಿಸಿರುವರು. ಯಾಸ್ಕರೂ, **ಶ್ವೇತ್ಯಾಗಾತ್ ಶ್ವೇತ್ಯಾ ಶ್ವೇತತೇಃ ಧಾತೋಃ ಶ್ವೇತವರ್ಣೇತ್ಯರ್ಥಃ** ಶ್ವೇತತಿ ಎಂಬ ಭ್ವಾದಿಗಣದ ಧಾತುವಿನಿಂದ ನಿಷ್ಪನ್ನವಾದ ಶ್ವೇತ್ಯಾ ಎಂಬ ಪದಕ್ಕೆ ಶ್ವೇತವರ್ಣವುಳ್ಳದ್ದು ಎಂದು ಅರ್ಥವನ್ನು ಹೇಳಿರುತ್ತಾರೆ.

**ರುಶದ್ವತ್ಸಾ—ರುಶತ್ ದೀಪ್ತಃ ಸೂರ್ಯೋ ವತ್ಸೋ ಯಸ್ಯಾಃ ಸಾ** ಕಾಂತಿಯುಳ್ಳ ಸೂರ್ಯನನ್ನು ವತ್ಸ (ಮಗು)ವನ್ನಾಗಿ ಹೊಂದಿರುವುದು. ತಾಯಿಯ ಸಮೀಪದಲ್ಲಿ ಮಗುವು ನುಳಿದಾಡುವುದು **ಲೋಕರೂಢಿ**ಯಾಗಿರುವುದು. ಇದನ್ನನುಸರಿಸಿ ಉಷಸ್ಸಿನ ವತ್ಸನಾಗಿ ಸೂರ್ಯನು ಉಷಸ್ಸಿನ ಸಮೀಪದಲ್ಲಿ ಇರುವನು. ಉಷಸ್ಸಿಗೂ ಸೂರ್ಯನಿಗೂ ಮಾತಾಪುತ್ರಭಾವವು ಉಷಸ್ಸಿನ ಕಾಂತಿಯನ್ನು ಹೊಂದುವುದು, ಸಮೀಪದಲ್ಲಿ ಸಂಚರಿಸುವುದು ಎಂಬ ಧರ್ಮಗಳನ್ನು ನಿಮಿತ್ತಮಾಡಿಕೊಂಡು ಉಂಟಾಗಿರುವುದು. ಸಾಯಣರು ಮಗುವು ತಾಯಿಯ ಸ್ತನ್ಯವನ್ನು ಪಾನಮಾಡಿ ಎಂದು ವಿವರಿಸುವಂತೆ, ಸೂರ್ಯನೂ ಉಷಸ್ಸಿನ ಕಾಂತಿಯನ್ನು ಸಮಗ್ರವಾಗಿ ಹೊಂದಿ ಕಾಂತಿಯುಳ್ಳವನಾಗಿ ಇರುವನೆಂದು ಹೇಳಿರುವರು. ನಿರುಕ್ತಕಾರರು—

**ರುಶದ್ವತ್ಸಾ ಸೂರ್ಯವತ್ಸಾ । ರುಶದಿತಿ ವರ್ಣನಾಮ । ರೋಚತೇರ್ಜ್ವಲತಿಕರ್ಮಣಃ ।**
**ಸೂರ್ಯಮಸ್ಯಾ ವತ್ಸಮಾಹ ಸಾಹಚರ್ಯಾತ್ ರಸಹರಣಾದ್ವಾ ॥**

(ನಿ. ೨-೨೦)

ರುಶದ್ವತ್ಸಾ ಎಂಬ ಪದಕ್ಕೆ ಕಾಂತಿಯುಳ್ಳ ಸೂರ್ಯನೆಂಬ ಮಗುವುಳ್ಳದ್ದು. ಕಾಂತಿ ಎಂಬ ಅರ್ಥವುಳ್ಳ ರುಚಧಾತುವಿನಿಂದ ರುಶತ್ ಎಂಬ ಪದವು ನಿಷ್ಪನ್ನವಾಗಿರುವುದು ಎಂದು ಅರ್ಥವನ್ನು ವಿವರಿಸಿ ಸಾಯಣರು ಹೇಳಿರುವ ಹಾಗೆಯೇ ಸೂರ್ಯನಿಗೆ ಉಷಸ್ಸಿನ (ಪುತ್ರತ್ವ) ವತ್ಸಭಾವವನ್ನು ಉಪಪಾದನೆ ಮಾಡಿರುವರು. ಮತ್ತು ಇವರು ಇದಂ ಶ್ರೇಷ್ಠಂ ಎಂಬ ಋಕ್ಕಿನಿಂದ ಹೇಳಲ್ಪಟ್ಟ ಅರ್ಥದ ದೃಢತ್ವಕ್ಕಾಗಿ ರುಶದ್ವತ್ಸಾ ಎಂಬ ಎರಡನೆಯ ಋಕ್ಕು ಪ್ರವೃತ್ತವಾಗಿರುವುದು. ರಾತ್ರಿಯ ಕೊನೆಯ ಭಾಗವು ಉಷಸ್ಸೆಂದು ವ್ಯವಹರಿಸಲ್ಪಡುವುದು ಎಂದು ಉಷಃಕಾಲವನ್ನು ನಿರ್ದೇಶಮಾಡಿ ಹೇಳಿರುತ್ತಾರೆ. ಸ್ಕಂದಸ್ವಾಮಿಗಳು ಸಾಯಣರೂ ಯಾಸ್ಕರೂ ಉಪಪಾದನೆ ಮಾಡಿರುವಂತೆಯೇ ಸೂರ್ಯನಿಗೆ ಉಷಸ್ಸಿನ ಪುತ್ರತ್ವವನ್ನೂ ವಿವರಿಸಿರುವುದಲ್ಲದೆ ಇನ್ನೊಂದು ವಿಧವಾಗಿಯೂ ಹೇಳಿರುವರು. ಮತ್ತು ಐತರೇಯ ಬ್ರಾಹ್ಮಣದ ವಾಕ್ಯವನ್ನು ಉದಹರಿಸಿರುವರು—

**ವತ್ಸ ಇತ್ಯಾದಿತ್ಯ ಉಚ್ಯತೇ । ಸ ಹ್ಯುಷಸೋ ವತ್ಸಸ್ಥಾನೀಯಃ ಅಪತ್ಯತ್ವಾತ್ । ಶ್ರುತೇರ್ದರ್ಶನಾತ್ । ಏವಂ ಹಿ ಶ್ರುತೌ ಶ್ರೂಯತೇ—ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯತ್ ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ । ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್** (ಐ. ಬ್ರಾ. ೩-೩೩) **ಇತ್ಯೇವಮಾದ್ಯುಪಕ್ರಮ್ಯ ತದ್ವಾ ಇದಂ ಪ್ರಜಾಪತೇ ರೇತಸ್ಸಿಕ್ತಮಧಾವತ್ತದ್ಸರೋಽಭವತ್** (ಐ. ಬ್ರಾ. ೩-೩೩) **ಇತಿ ಚ । ತದಗ್ನಿನಾ ವೈಶ್ವಾನರೇಣ ಪರ್ಯಾದಧುಃ ತಂ ಮರುತೋಽಧೂನ್ವನ್ । ತದಗ್ನಿರ್ವೈಶ್ವಾನರಃ ಪ್ರಚ್ಯಾವಯತ್ । ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವತ್** (ಐ.ಬ್ರಾ ೪-೩೪) **ಇತ್ಯೇವಂ ಪ್ರಜಾಪತೇಃ ಸಕಾಶಾದುಷಸಿ ಜಾತ ಆದಿತ್ಯ ಇತಿ ಶ್ರೂಯತೇ । ಅತಶ್ಚೋಪಪನ್ನಮಸ್ಯ ತದಪತ್ಯತ್ವಂ ॥**

ಐತರೇಯ ಬ್ರಾಹ್ಮಣದ ೩-೩೩ ಮತ್ತು ೩೪ನೇ ಖಂಡಗಳಲ್ಲಿ ಆದಿತ್ಯನು ಉಷಸ್ಸಿನ ಪುತ್ರನೆಂಬುವುದಾಗಿ ಹೇಳಲ್ಪಟ್ಟಿರುತ್ತದೆ ಪ್ರಜಾಪತಿಯಾದ ಬ್ರಹ್ಮನು ತಾನೇ ಸೃಷ್ಟಿಮಾಡಿರುವ ತನ್ನ ಪುತ್ರಿಯಾದ ದಿವ ಎಂಬವಳನ್ನೋ ಅಥವಾ ಉಷಸ್ಸೆಂಬುವಳನ್ನೋ ಭೋಗಿಸಲು ಪ್ರವೃತ್ತನಾಗಿ ಜಿಂಕೆಯ ರೂಪವನ್ನು ಹೊಂದಿದನು. ಆ ಸ್ತ್ರೀಯೂ ಕೂಡ ಬೊಟ್ಟುಗಳುಳ್ಳ ಜಿಂಕೆಯ ರೂಪವನ್ನು ಧರಿಸಿದಾಗ ಬ್ರಹ್ಮನ ವೀರ್ಯವು ನೀರಿನ ರೂಪವನ್ನು ಹೊಂದಿತು ವೈಶ್ವಾನರಾಗ್ನಿಯು ಅದನ್ನು ಧರಿಸಿದನು. ಮರುತ್ತುಗಳೂ ವೈಶ್ವಾನರನೂ ಕೂಡ ಅದನ್ನು ಬೇರೆಯ ಸ್ಥಾನಕ್ಕೆ ಸೇರಿಸಿದರು. ಬ್ರಹ್ಮನ ರೇತಸ್ಸಿನ ಕಾಂತಿಯುಳ್ಳ ಮೊದಲನೆಯ ಭಾಗವು ಆದಿತ್ಯನ ರೂಪವನ್ನು ಹೊಂದಿತು. ಪ್ರಜಾಪತಿಯಿಂದ ಉಷಸ್ಸಿನಲ್ಲಿ ಆದಿತ್ಯನು ಈ ಪ್ರಕಾರವಾಗಿ ಉತ್ಪನ್ನನಾಗಿರುವನು ಎಂದು ಸೂರ್ಯನಿಗೆ ಉಷಸ್ಸಿನ ಪುತ್ರತ್ವವನ್ನು ವಿವರಿಸಿ ಇರುವರು. ಮತ್ತು ಇವರು **ಯದ್ವಾ ಪ್ರಾತಃ ಪ್ರಾತಃ ಉಷಸಃ ಸಕಾಶಾದಾದಿತ್ಯೋ ಜಾಯತೇ ತದಭಿಪ್ರಾಯಮಸ್ಯಾಽಪತ್ಯತ್ವಂ**—ಪ್ರತಿದಿನ ಪ್ರಾತಃಕಾಲಗಳಲ್ಲಿ ಸೂರ್ಯನ ಉದಯವೂ ಕೂಡ ಉಷಸ್ಸಿನಿಂದಲೇ ಆಗುವುದರಿಂದ ಸೂರ್ಯನು ಉಷಸ್ಸಿನ ವತ್ಸನಾಗಿರುವನು ಎಂದು ಈ ರೀತಿಯಿಂದಲೂ ಸೂರ್ಯನಿಗೆ ಉಷಸ್ಸಿನ ಪುತ್ರತ್ವವನ್ನು ಹೇಳಬಹುದಾಗಿರುತ್ತದೆ ಎಂದು ಹೇಳಿರುತ್ತಾರೆ.

**ಕೃಷ್ಣಾ ಸದನಾನಿ ಅಸ್ಯಾಃ ಆರೈಕ್**—ಕಪ್ಪುಬಣ್ಣದಿಂದ ಇರುವ ಕತ್ತಲೆಯಿಂದ ಕೂಡಿರುವ ರಾತ್ರಿಯು-ತನ್ನ ಕೊನೆಯ ಯಾಮದಲ್ಲಿ ಇರುವಂತೆ ಉಷಸ್ಸಿಗೆ ವಸತಿಯನ್ನು ಕಲ್ಪಿಸಿ ತಾನು ಉಷಸ್ಸಿಗೆ ಉತ್ಪತ್ತಿಸ್ಥಾನವಾಗಿರುವುದು.

**ಇದಂ ಶ್ರೇಷ್ಠಂ** ಎಂಬ ಋಕ್ಕಿನಲ್ಲಿ ಈ ಅಂಶವನ್ನೇ **ರಾತ್ರ್ಯುಷಸೇ ಯೋನಿಮಾರೈಕ್** ಎಂಬುದಾಗಿ ವ್ಯಕ್ತವಾಗಿ ಹೇಳಿರುತ್ತದೆ. ನಿರುಕ್ತದಲ್ಲಿಯೂ ಕೂಡ—

**ಕೃಷ್ಣಾ ಸದನಾನ್ಯಸ್ಯಾಃ ಅರಿಚೆತ್ । ಕೃಷ್ಣವರ್ಣಾ ರಾತ್ರಿಃ ಕೃಷ್ಣಾ । ಕೃಷ್ಣಂ ಕೃಷ್ಯತೇ-**
**ರ್ನಿಕೃಷ್ಟೋ ವರ್ಣಃ**

ಎಂಬುದಾಗಿ ಈ ಅಂಶವು ವಿವೃತವಾಗಿರುತ್ತದೆ.

**ಅಮೃತೇ—**ಮೃತವೆಂದರೆ ಮರಣವು ಮರಣವಿಲ್ಲದವರಾದ ಎಂದರೆ ನಾಶವಿಲ್ಲದ ರಾತ್ರಿಯೂ ಉಷಸ್ಸೂ ಅಮೃತಶಬ್ದದಿಂದ ವ್ಯವಹೃತರಾಗಿರುವರು.

**ಅನೂಚೀ— ಅನ್ವಗಚ್ಛಂತ್ಯೌ ।** ರಾತ್ರಿ ಮತ್ತು ಉಷಸ್ಸುಗಳು ಎರಡೂ ಪರಸ್ಪರವಾಗಿ ಗಮನವನ್ನು ಅನುಸರಿಸಿ ನಡೆಯುತ್ತಿರುವರು. ಮೊದಲು ರಾತ್ರಿಯೂ, ಅಥವಾ ಉಷಸ್ಸು ಎಂಬುದಾಗಿಯೂ, ಮೊದಲು ಉಷಸ್ಸು ಅನಂತರ ರಾತ್ರಿಯೂ ಎಂಬ ಕ್ರಮದಿಂದಲೂ ಒಬ್ಬರನ್ನೊಬ್ಬರು ಅನುಸರಿಸಿ ಇವರಿಬ್ಬರೂ ಸಂಚರಿಸುತ್ತಿರುವರು, ಅಥವಾ ಇವರು ಸೂರ್ಯನ ಗಮನವನ್ನು ಅನುಸರಿಸುವರು ಎಂದೂ ಹೇಳಿರುತ್ತಾರೆ.

**ಸಮಾನಬಂಧೂ** –ರಾತ್ರಿಯೂ, ಉಷಸ್ಸೂ ಕೂಡ ಸೂರ್ಯನೊಬ್ಬನನ್ನೇ ಬಂಧುವನ್ನಾಗಿ ಹೊಂದಿರುವರು. ಅಥವಾ ಸೂರ್ಯನ ಉದಯಾಸ್ತಗಳನ್ನು ಸಂಬಂಧಿಸಿಕೊಂಡು ಇರುವರು ಉಷಸ್ಸು ಸೂರ್ಯನ ಉದಯದಿಂದ ಸಂಬದ್ಧವಾಗಿರುವುದು. ರಾತ್ರಿಯು ಸೂರ್ಯನ ಅಸ್ತದಿಂದ ಸಂಬಂಧವನ್ನು ಹೊಂದಿರುವುದು. ಇದರಿಂದ ಸಮಾನಬಂಧುತ್ವವೂ ಇವರಿಗೆ ಈರೀತಿಯಾಗಿ ಇರುವುದು ಎಂದು ಸಾಯಣರು ಹೇಳಿರುವರು. ನಿರುಕ್ತಕಾರರು **ಸಮಾನಬಂಧೂ**-ಎಂಬ ಪದಕ್ಕೆ **ಸಮಾನಬಂಧನೇ—**ಒಂದೇ ವಿಧವಾದ ನಿಯಮವನ್ನು ಹೊಂದಿರುವರು ಎಂದು ಅರ್ಥವನ್ನು ಮಾಡಿರುವರು. ಸ್ಕಂದಸ್ವಾಮಿಗಳು. **ಸಮಾನ ಬಂಧೂ— ಉಭೇ ರಾತ್ರ್ಯುಷಸೀ** ರಾತ್ರಿಯು ಮತ್ತು ಉಷಸ್ಸುಗಳು ಒಂದೇ ಸಮನಾದ ಬಂಧುವನ್ನು ಅಥವಾ ಬಂಧವನ್ನು ಹೊಂದಿರುವವರು ಎಂದು ಹೇಳಿ ಸಮಾನ. ಬಂಧುತ್ವವನ್ನು ವಿವರಿಸಿರುತ್ತಾರೆ.—

**ಸಮಾನೋ ಬಂಧುರ್ಯಯೋಸ್ತೇ ಸಮಾನಬಂಧೂ । ಪ್ರಜಾಪತಿಪತಿರ್ಹಿ ರಾತ್ರ್ಯುಷಸೋಃ ಸಮಾನಬಂಧುಃ ಜನಯಿತೃತ್ವಾತ್। ಆದಿತ್ಯೋ ವಾ। ಸ ಹಿ ಜನಯಿತೃತ್ವೇನ ರಾತ್ರೇರ್ಬಂಧುಃ। ಜನ್ಯತ್ವೇನ ಉಷಸಃ । ಜನಯಿತೃತ್ವೇನ ವಾ ಉಭಯೋಃ ಸ ಹ್ಯಸ್ತಮಯೇನ ರಾತ್ರಿಂ ಜನಯತಿ, ಉದಯೇನ ಚೋಷಸಂ ।**

ಎಂದು ವ್ಯಾಖ್ಯಾನಮಾಡಿರುವರು. ರಾತ್ರಿ ಮತ್ತು ಉಷಸ್ಸೆಂಬ ಇಬ್ಬರೂ ಒಂದೇ ಸಮನಾದ ಬಂಧುವನ್ನು ಹೊಂದಿರುವರು. ಪ್ರಜಾಪತಿಯು ರಾತ್ರ್ಯುಷಸ್ಸುಗಳ ಉತ್ಪಾದಕನಾಗಿರುವುದರಿಂದ ಇವರಿಗೆ ಬಂಧುವಾಗಿರುವನು. ಅಥವಾ ಆದಿತ್ಯನು ರಾತ್ರಿಯ ಉತ್ಪತ್ತಿಗೆ, ಕಾರಣನಾಗಿರುವುದರಿಂದ ರಾತ್ರಿಗೆ ಬಂಧುವೂ, ತಾನು ಉಷಸ್ಸಿನ ಅನಂತರ ಉದಯವನ್ನು

ಹೊಂದುವುದರಿಂದ ಉಷಸ್ಸಿಗೆ ಬಂಧುವೂ, ಆಗಿರುವನೆಂಬ ಈ ವ್ಯಾಖ್ಯಾನದಲ್ಲಿ ಆದಿತ್ಯನು ರಾತ್ರಿಜನಕನೂ, ಉಷೋಜನ್ಯನೂ ಆಗಿರುವನು. ರಾತ್ರಿಯ ಉದಯವು ಆದಿತ್ಯನ ಅಸ್ತದಿಂದ ಆಗುವುದು. ಉಷಸ್ಸಿನ ಉದಯದಿಂದ ತಾನು ಉದಿತನಾಗುವನು ಎಂದು ಅರ್ಥವು.

**ದ್ಯಾವಾ ವರ್ಣಂ ಚರತ ಆಮಿನಾನೇ**—ಈ ವಾಕ್ಯಕ್ಕೆ ಸಾಯಣರೂ, ಸ್ಕಂದಸ್ವಾಮಿಗಳೂ, ನಿರುಕ್ತಕಾರರೂಬೇರೆ ಬೇರೆಯ ಅರ್ಥವುಳ್ಳ ವ್ಯಾಖ್ಯಾನವನ್ನು ಮಾಡಿರುವರು. ಆಙ್ ಉಪಸರ್ಗದಿಂದ ಕೂಡಿರುವ **ಮೀಙ್ ಹಿಂಸಾಯಾಂ** ಎಂಬ ಧಾತುವಿನಿಂದ ನಿಷ್ಪನ್ನವಾದ **ಆಮಿನಾನೇ** ಎಂಬ ಶಬ್ದವು ಹಿಂಸಾರ್ಥಕವಾಗಿರುವುದು. ಈ **ಆಮಿನಾನೇ** ಎಂಬ ಶಬ್ದವನ್ನು **ವರ್ಣಂ** ಎಂಬ ಶಬ್ದದೊಡನೆ ಅನ್ವಯವನ್ನು ಹೇಳಿ **ವರ್ಣಂ ಆಮಿನಾನೇ ರಾತ್ರ್ಯುಷಸೀ ದ್ಯಾವಾ ಚರತಃ** ರಾತ್ರಿಯು ಕಪ್ಪುಬಣ್ಣವನ್ನು ಉಷಸ್ಸು ತನ್ನ ಶುಭ್ರವಾದ ಪ್ರಕಾಶದಿಂದಲೂ, ಉಷಸ್ಸಿನ ಪ್ರಕಾಶವನ್ನು ರಾತ್ರಿಯು ತನ್ನ ಕಪ್ಪುಬಣ್ಣದಿಂದಲೂ ಪರಸ್ಪರವಾಗಿ ನಾಶಮಾಡುತ್ತಾ ಇವರಿಬ್ಬರೂ ಅಂತರಿಕ್ಷದಲ್ಲಿ ಸಂಚರಿಸುವರು ಎಂದು ಅರ್ಥವನ್ನು ಹೇಳಿರುವರು. ಮತ್ತು ಈ ರಾತ್ರ್ಯುಷಸ್ಸುಗಳು ಪ್ರಾಣಿಗಳ **ವರ್ಣಂ**—ರೂಪವನ್ನು **ಆಮಿನಾನೆ** ಹಿಂಸೆಮಾಡುತ್ತಾ. **ದ್ಯಾವಾ ಚರತಃ**—ಅಂತರಿಕ್ಷದಲ್ಲಿ ಸಂಚರಿಸುವವರು ಎಂಬ ಈ ವ್ಯಾಖ್ಯಾನದಲ್ಲಿ ಪ್ರಾಣಿಗಳ ಶರೀರದ ಆಕಾರದ ಬದಲಾವಣೆಯನ್ನು ಉಂಟುಮಾಡುವ ಮುಪ್ಪನ್ನೂ ಉಂಟು ಮಾಡುತ್ತಾ ಸಂಚರಿಸುವರು ಎಂದು ಅರ್ಥವಾಗುತ್ತದೆ. ಈ ಎರಡು ವಿಧವಾದ ಅರ್ಥವೂ ಸಾಯಣಭಾಷ್ಯದಲ್ಲಿ ಉಕ್ತವಾಗಿರುವುದು. ಸ್ಕಂದಸ್ವಾಮಿಗಳು—

**ದ್ಯುತೇರ್ದೀಪ್ಯತೇರ್ವಾ ದೀಪ್ತ್ಯರ್ಥಸ್ಯೇದಂ ರೂಪಂ । ಸ್ವೇನ ಸ್ವೇನ ತೇಜಸಾ ದೀಪ್ತೇ ।**
**ಶುಕ್ಲಂ ಕೃಷ್ಣಂ ಚ ಆತ್ಮೀಯಂ ವರ್ಣಂ ಚರತಃ ಗಚ್ಛತಃ ಪ್ರಾಪ್ನುತಃ ।**

**ದ್ಯುತೀ ದೀಪ್ತೌ, ದೀಪೀ ದೀಪ್ತೌ** ಎಂಬ ದೀಪ್ತಿ ಎಂಬ ಅರ್ಥವುಳ್ಳ ಧಾತುವಿನಿಂದ **ದ್ಯಾವಾ** ಎಂದು ರೂಪವು ನಿಷ್ಪನ್ನವಾಗಿರುವುದು. ರಾತ್ರಿ ಮತ್ತು ಉಷಸ್ಸುಗಳು ತಮ್ಮ ತಮ್ಮ ಕಪ್ಪಾದ ಮತ್ತು ಶುಭ್ರವಾದ ಕಾಂತಿಗಳಿಂದ ಇರುವರು ಎಂದು ಒಂದು ವಿಧವಾದ ಅರ್ಥವು.

**ದ್ಯಾವೇತಿ ದಿವಃ ಪರ್ಯಾಯಃ ತೃತೀಯೈಕವಚನಾಂತಶ್ಚ ದಿವಾ ಸಹ ಮುಹತ್ತ್ವಾದಿನಾ ಗುಣೇನ**
**ಸ್ಪರ್ಧಮಾನೇ ದಿವಾ ವಾ ಅನುಗ್ರಹಮಾಣೇ ಸ್ವಂ ಸ್ವಂ ವರ್ಣಂ ಪ್ರಾಪ್ನುತಃ ।**

**ದ್ಯಾವಾ** ಎಂಬ ಪದವು ತೃತೀಯಾವಿಭಕ್ತಿಯ ಏಕವಚನಾಂತವಾಗಿರುವುದು. ಇದು **ದಿವಃ ಅಂತರಿಕ್ಷ** ಎಂಬ ಅರ್ಥವನ್ನು ಕೊಡುವ ಶಬ್ದಗಳ ಪರ್ಯಾಯಶಬ್ದವಾಗಿರುವುದು. ಈ ರಾತ್ರ್ಯುಷಸ್ಸುಗಳು ಅಂತರಿಕ್ಷದಲ್ಲಿರುವ ಮುಹತ್ವವೇ ಮೊದಲಾದ ಗುಣಗಳನ್ನು ನೋಡಿ ಅದರೊಡನೆ ಸ್ಪರ್ಧೆಮಾಡುತ್ತಿರುವುವು. ಅಥವಾ ಅಂತರಿಕ್ಷದ ಪ್ರಕಾಶರೂಪದಿಂದ ಅನುಗ್ರಹವನ್ನು ಹೊಂದಿ ತಮ್ಮ ತಮ್ಮ ವರ್ಣಗಳನ್ನು ಹೊಂದಿರುವುವು ಎಂದು ಎರಡನೆಯ ವಿಧವಾದ ಅರ್ಥವು.

**ದ್ಯೌರ್ಹಿ ತೇನುಸಾ ಜ್ಯೋತಿಷಶ್ಚಾತ್ಮನ್ಯವದಾನೇನ ವಾ ಅನುಗೃಹ್ಣಾತಿ ರಾತ್ರ್ಯುಷಸೋಃ ।**

ಅಂತರಿಕ್ಷವು ತನ್ನಲ್ಲಿರುವ ಕತ್ತಲೆ ಮತ್ತು ಪ್ರಕಾಶಗಳೆಂಬ ಎರಡನ್ನೂ ಈ ರಾತ್ರ್ಯುಷಸ್ಸುಗಳಿಗೆ ಅನುಗ್ರಹಿಸಿರುವುದರಿಂದ ಈ ರಾತ್ರ್ಯುಷಸ್ಸುಗಳು ತಮ್ಮ ತಮ್ಮ ವರ್ಣಗಳನ್ನು ಹೊಂದಿ ಇರುವುವು ಎಂದು ಮೂರನೆಯ ವಿಧವಾದ ಅರ್ಥವು. **ಆಮಿನಾನೇ** ಎಂಬ ಪದದ ಅರ್ಥವನ್ನು ಸಾಯಣರು ಹೇಳಿರುವಂತೆಯೇ ಇವರೂ ಹೇಳಿರುವರು.

**ಆಮಿನಾನೇ—ಆಙೀಷದರ್ಥೇ ಮೀಙ್ ಹಿಂಸಾಯಾಂ ಈಷತ್ ಹಿಂಸತ್ಯೌ । ರಾತ್ರಿರ್ಹ್ಯು-ಷಸೋ ರೂಪಂ ಜ್ಯೋತಿರೀಷದ್ಧಿನಸ್ತಿ । ಉಷಾ ಅಪಿ ರಾತ್ರೇಸ್ತಮಃ ॥**

ರಾತ್ರ್ಯುಷಸ್ಸುಗಳು ಅನ್ಯೋನ್ಯವಾಗಿ ತಮ್ಮ ತಮ್ಮ ರೂಪಗಳನ್ನು ನಾಶಮಾಡುವರು. ಎಂದರೆ ರಾತ್ರಿಯ ಕತ್ತಲೆಯನ್ನು ಉಷಸ್ಸೂ, ಉಷಸ್ಸಿನ ಬೆಳಕನ್ನು ರಾತ್ರೆಯೂ ನಾಶಮಾಡುವುದು ಎಂದು ಅರ್ಥವನ್ನು ವಿವರಿಸಿ ಬೇರೆ ವಿಧವಾಗಿಯೂ ಅರ್ಥವನ್ನು ವಿವರಿಸಿರುವರು.

**ಆಮಿನಾನೇ ಇತ್ಯಾಕಾರೋ ಅಧ್ಯರ್ಥೇ । ಮಿನತಿರಪಿ ಸಾಮರ್ಥ್ಯಾತ್ ಕರೋತ್ಯರ್ಥಃ । ಆತ್ಮೀಯಂ ರೂಪಂ ದಿವ ಉಪರಿ ಕುರ್ವಾಣೇ ।**

ಆಮಿನಾನೇ ಎಂಬ ಶಬ್ದದಲ್ಲಿ ಆಕಾರವು ಅಧಿ ಎಂಬ ಅರ್ಥದಲ್ಲಿ ಇರುವುದು. ಮೀಙ್ ಧಾತುವು ಮಾಡುವುದು ಎಂಬ ಅರ್ಥದಲ್ಲಿ ಇರುವುದು. ಇದರಿಂದ ರಾತ್ರೆ ಮತ್ತು ಉಷಸ್ಸುಗಳು ತಮ್ಮ ತಮ್ಮ ರೂಪಗಳಿಂದ ಅಂತರಿಕ್ಷವನ್ನು ಮೀರಿ ಬೆಳಗುತ್ತಿರುವುವು ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳಿರುವರು. ನಿರುಕ್ತಕಾರರು—

**ದ್ಯಾವಾ ವರ್ಣಂ ಚರತಃ—ದ್ಯಾವೌ ತೇ ಏವ ದ್ಯೋತನಾತ್ ಅಪಿ ವಾ ದ್ಯಾವಾ ಚರತಃ ತಯೊ ಸಹ ಚರತ ಇತಿ ಸ್ಯಾತ್ ಆಮಿನಾನೇ ಆಮಿನ್ವಾನೇ ಅನ್ಯೋನ್ಯಸ್ಯಾಧ್ಯಾತ್ಮಂ ಕುರ್ವಾಣೇ ।**

(ನಿ. ೨-೨೦)

ಎಂದು ಅರ್ಥವನ್ನು ವಿವರಿಸಿ, **ಆಮಿನಾನೇ**—ಎಂಬ ಶಬ್ದಕ್ಕೆ ಒಬ್ಬರನ್ನು ಮೀರಿ ಇನ್ನೊಬ್ಬರು ತಮ್ಮ ತಮ್ಮ ರೂಪಗಳಿಂದ ಪ್ರಕಾಶಿಸುವರು ಎಂದು ಅರ್ಥವನ್ನು ಹೇಳಿ ಆಮಿನಾನೇ ಎಂಬ ಪದದ ಆಙ್ ಉಪಸರ್ಗಕ್ಕೆ ಅಧಿ ಎಂಬ ಅರ್ಥವನ್ನು ಹೇಳಿರುವುದಕ್ಕಾಗಿ ಒಂದು ಋಕ್ಕನ್ನು ಉದಾಹರಿಸಿರುವರು. (ನಿ. ೫-೭)

**ಪುರು ತ್ವಾ ದಾಶ್ವಾನ್ ವೋಚೇರಿರಗ್ನೇ ತವ ಸ್ವಿದಾ । ತೋದಸ್ಯೇವ ಶರಣ ಆ ಮಹಸ್ಯ ॥**

(ಋ. ಸಂ. ೧-೧೫೦-೧)

ಇಲ್ಲಿ **ಆ ಮಹತಃ** ಎಂಬ ಪದಗಳಿಗೆ **ಅಧಿ ಮಹತಃ** ಎಂದು ಅರ್ಥವನ್ನು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ರುಶದ್ವತ್ಸಾ**—ರುಶನ್ ವತ್ಸಃ ಯಸ್ಯಾಃ ಸಾ ರುಶದ್ವತ್ಸಾ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಶ್ವೇತ್ಯಾ**—ಶ್ವಿತಾ ವರ್ಣೇ ಧಾತು. ಪ್ರಯೋಜಕವ್ಯಾಪಾರತೋರುವಾಗ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಣಿಜಂತದ ಮೇಲೆ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಭಾವಾರ್ಥದಲ್ಲಿ ಯತ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಲೋಪ. ಣಿಚ್ ನಿಮಿತ್ತವಾಗಿ **ಪುಗಂತಲ**—(ಪಾ. ಸೂ. ೭-೩-೮೬) ಎಂಬುದರಿಂದ ಲಘೂಪಧಗುಣ. ಶ್ವೇತಮಸ್ಯಾ ಅಸ್ತಿ ಎಂಬರ್ಥ ವಿವಕ್ಷಾ ಮಾಡಿದಾಗ **ಅರ್ಶಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥೀಕವಾದ ಅಚ್ ಪ್ರತ್ಯಯ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರಲೋಪ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್** (ಪಾ. ಸೂ. ೪-೧-೪) ಸೂತ್ರದಿಂದ ಟಾಪ್. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಅಗಾತ್ । ಆರೈಕ್**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಸದನಾನಿ**—ಸೀದಂತಿ ಅಸ್ಮಿನ್ ಇತಿ ಸದನಂ । ಷದ್ ಲೃ ವಿಶರಣ ಗತ್ಯವಸಾದನೇಷು. ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ ೭-೧-೧) ಎಂಬುದರಿಂದ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸಮಾನಬಂಧೂ**—ಸಮಾನಃ ಬಂಧುಃ ಯಯೋಃಸ್ತೇ. ಸಮಾನಬಂಧೂ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅಮೃತೇ**—ಮೃತಂ ಮರಣಮನಯೋರ್ನಾಸ್ತೀತಿ ಅಮೃತೇ. ಬಹುವ್ರೀಹಿಸಮಾಸ. **ನಞೋಜರಮರಮಿತ್ರಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾಂತೋದಾತ್ತಕ್ಕೆ ಬಾಧಕವಾಗಿ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ. ಪ್ರಥಮಾದ್ವಿವಚನಾಂತರೂಪ.

**ಅನೂಚೀ**—ಅನು ಉಪಸರ್ಗಪೂರ್ವಕವಾದ ಅಂಚು ಧಾತುವಿಗೆ **ಋತ್ವಿಕ್ ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ಅನಿದಿತಾಂ ಹಲ**—(ಪಾ. ಸೂ ೬-೪-೨೪) ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ಅಂಚತೇಶ್ಚೋಪಸಂಖ್ಯಾನಂ** ಎಂಬ ವಚನದಿಂದ ಸ್ತ್ರೀತ್ವದಲ್ಲಿ ಙೀಪ್. ಭಸಂಜ್ಞಾ ಇರುವುದರಿಂದ **ಅಚಃ**—(ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತಾಕಾರನಕಾರವುಳ್ಳ ಅಂಚಧಾತುವು ಪರದಲ್ಲಿರುವುದರಿಂದ **ಚೌ** (ಪಾ. ಸೂ.

೬-೩-೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. ಅನುದಾತ್ತವಾದ ಙೀಪನ್ನು ನಿಮಿತ್ತೀಕರಿಸಿ ಉದಾತ್ತವಾದ ಧಾತು ಆಕಾರ ಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ಅಂತೋದಾತ್ತವಾದ ಪದವಾಗುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಚರತಃ**—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವ **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ಆಮಿನಾನೇ**—ಮೀಙ್ ಹಿಂಸಾಯಾಂ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಇದಕ್ಕೆ ಶಾನಚ್ ಪ್ರತ್ಯಯ. ಇದು ಪರವಾದಾಗ **ಮೀನಾತೇರ್ನಿಗಮೇ** (ಪಾ. ಸೂ. ೭-೩-೮೧) ಎಂಬುದರಿಂದ ಧಾತುವಿಗೆ ಹ್ರಸ್ವ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. ಚಿತ್ಪ್ರತ್ಯಯಾಂತವಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಸಮಾನೋ ಅಧ್ವಾ ಸ್ವಸ್ರೋರನಂತಸ್ತಮನ್ಯಾನ್ಯಾ ಚರತೋ
ದೇವಶಿಷ್ಟೇ ।
ನ ಮೇಥೇತೇ ನ ತಸ್ಥತುಃ ಸುಮೇಕೇ ನಕ್ತೋಷಾಸಾ ಸಮ-
ನಸಾ ವಿರೂಪೇ ॥ ೩ ॥

॥ ಪದಪಾಠಃ ॥

ಸಮಾನಃ । ಅಧ್ವಾ । ಸ್ವಸ್ರೋಃ । ಅನಂತಃ । ತಂ । ಅನ್ಯಾಽಅನ್ಯಾ । ಚರತಃ ।
ದೇವಶಿಷ್ಟೇ ಇತಿ ದೇವಽಶಿಷ್ಟೇ ।
ನ । ಮೇಥೇತೇ ಇತಿ । ನ । ತಸ್ಥತುಃ । ಸುಮೇಕೇ ಇತಿ ಸುಽಮೇಕೇ । ನಕ್ತೋಷಸಾ । ಸಽಮನಸಾ । ವಿರೂಪೇ ಇತಿ ವಿಽರೂಪೇ ॥ ೩ ॥

॥ ಸಾಯಣಭಾಷ್ಯಂ ॥

ಸ್ವಸ್ರೋರ್ಭಗಿನ್ಯೋ ರಾತ್ರ್ಯುಷಸೋರಧ್ವಾ ಸಂಚರಣಸಾಧನಭೂತೋ ಮಾರ್ಗಃ ಸಮಾನ ಏಕ ಏವ। ಯೇನೈವಾಕಾಶಮಾರ್ಗೇಣೋಷಾ ನಿರ್ಗಚ್ಛತಿ ತೇನೈವ ರಾತ್ರಿರಪಿ। ಸ ಚ ಮಾರ್ಗೋಽನಂತೋಽವಸಾನರಹಿತಃ । ತಂ ಮಾರ್ಗಂ ದೇವಶಿಷ್ಟೇ ದೇವೇನ ದ್ಯೋತಮಾನೇನ ಸೂರ್ಯೇಣಾನುಶಿಷ್ಟೇ ಶಿಕ್ಷಿತೇ ಸತ್ಯಾವನ್ಯಾನ್ಯಾ ಏಕೈಕಾ ಚರತಃ । ಕ್ರಮೇಣ ಗಚ್ಛತಃ । ಅಪಿ ಚ ಸುಮೇಕೇ ಶೋಭನಮೇಹನೇ ಸರ್ವೇಷಾಮುತ್ಪಾದಕತ್ವಾತ್ ಶೋಭನಪ್ರಜನನೇ ನಕ್ತೋಷಾಸಾ ರಾತ್ರಿರುಷಾಶ್ಚ ವಿರೂಪೇ ತಮಃಪ್ರಕಾಶಲಕ್ಷಣಾಭ್ಯಾಂ ವಿರುದ್ಧರೂಪಾಭ್ಯಾಂ ಯುಕ್ತೇ ಅಪಿ ಸಮನಸಾ ಸಮಾನಮನಸ್ಕೇ ಐಕಮತ್ಯಂ ಪ್ರಾಪ್ತೇ ಸತ್ಯೌ ನ ಮೇಥೇತೇ । ಪರಸ್ಪರಂ ನ ಹಿಂಸ್ತಃ । ತಥಾ ನ ತಸ್ಥತುಃ । ಕ್ವಚಿದಪಿ ನ ತಿಷ್ಠತಃ । ಸರ್ವದಾ ಲೋಕಾನುಗ್ರಹಾರ್ಥಂ ಗಚ್ಛತ ಇತ್ಯರ್ಥಃ ॥ ಅನ್ಯಾನ್ಯಾ । ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತ ಇತಿ ವಕ್ತವ್ಯಂ ಸಮಾಸವಚ್ಚ ಬಹುಲಂ । ಮ. ೮-೧-೧೨-೧೧ । ಇತ್ಯನ್ಯಶಬ್ದಸ್ಯ ದ್ವಿರ್ಭಾವಃ । ತಸ್ಯ ಪರಮಾಮ್ರೇಡಿತಮಿತ್ಯಾಮ್ರೇಡಿತಸಂಜ್ಞಾಯಾಮನುದಾತ್ತಂ ಚೇತ್ಯಾಮ್ರೇಡಿತಾನುದಾತ್ತತ್ವಂ । ದೇವಶಿಷ್ಟೇ । ಶಾಸು ಅನುಶಿಷ್ಟೌ । ಅಸ್ಮಾತ್ಕರ್ಮಣಿ ನಿಷ್ಠಾ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಶಾಸ ಇದಙ್ಹಲೋಃ । ಪಾ. ೬-೪-೩೪ । ಇತ್ಯುಪಧಾಯಾ ಇತ್ವಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಮೇಥೇತೇ । ಮಿಥೃ ಮೇಥೃ ಮೇಧಾಹಿಂಸನಯೋಃ । ಭೌವಾದಿಕಃ । ಅನುದಾತ್ತೇತ್ । ಸುಮೇಕೇ । ಮಿಹ ಸೇಚನೇ । ಭಾವೇ ಘಞ್ । ಶೋಭನೋ ಮೇಹೋ ಯಯೋಸ್ತೇ । ವ್ಯತ್ಯಯೇನ ಕಕಾರಃ । ಉತ್ತರಪದಸ್ಯ ಞಿತ್ಸ್ವರೇಣಾದ್ಯುದಾತ್ತತ್ವಂ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ನಕ್ತೋಷಾಸಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಮುಪಧಾದೀರ್ಘಃ ॥

॥ ಪ್ರತಿಪದಾರ್ಥ ॥

**ಸ್ವಸ್ರೋಃ**—ಸೋದರಿಯರಾದ ರಾತ್ರ್ಯುಷಸ್ಸುಗಳಿಗೆ । **ಅಧ್ವಾ**—ಸಂಚಾರಮಾರ್ಗವು । **ಸಮಾನಃ**—ಸಮಾನವಾದುದು (ಮತ್ತು) । **ಅನಂತಃ**—ಅಂತರಹಿತವಾದುದು । **ತಂ**—ಆ ಮಾರ್ಗದಲ್ಲಿ । **ದೇವಶಿಷ್ಟೇ**—ಸೂರ್ಯನಿಂದ ಶಿಕ್ಷಿತರಾಗಿ । **ಅನ್ಯಾನ್ಯಾ**—ಒಬ್ಬರಾದ ಮೇಲೊಬ್ಬರು ಕ್ರಮವಾಗಿ । **ಚರತಃ**—ಸಂಚರಿಸುತ್ತಾರೆ । **ಸುಮೇಕೇ**—ಸಮಸ್ತಪದಾರ್ಥಗಳಿಗೂ ಉತ್ಪಾದಕರಾದ । **ನಕ್ತೋಷಾಸಾ**—ರಾತ್ರಿ ಮತ್ತು ಉಷಸ್ಸುಗಳು । **ವಿರೂಪೇ**—ಪರಸ್ಪರ ವಿರುದ್ಧವಾದ ರೂಪವುಳ್ಳವರಾದರೂ । **ಸಮನಸಾ**—ಏಕಮನಸ್ಕರಾಗಿ । **ನ ಮೇಥೇತೇ**—ಒಬ್ಬರನ್ನೊಬ್ಬರು ನಿರೋಧಿಸುವುದಿಲ್ಲ (ಹಾಗೂ) । **ನ ತಸ್ಥತುಃ**—ಒಂದೆಡೆಯಲ್ಲಿ ನಿಲ್ಲುವುದೂ ಇಲ್ಲ.

॥ ಭಾವಾರ್ಥ ॥

ರಾತ್ರ್ಯುಷಸ್ಸುಗಳೆರಡಕ್ಕೂ ಸಂಚಾರಮಾರ್ಗವೊಂದೇ ; ಅದು ಅಂತರಹಿತವಾದುದು ; ಇಬ್ಬರೂ ಸೂರ್ಯನಿಂದ ಶಿಕ್ಷಿತರಾಗಿ ಒಂದೇ ಕ್ರಮದಲ್ಲಿ ಸಂಚರಿಸುತ್ತಾರೆ ; ರೂಪ ಬೇರೆಬೇರೆಯಾದರೂ, ಇಬ್ಬರ ಉದ್ದಿಷ್ಟಕಾರ್ಯವೂ ಒಂದೇ. ಆದುದರಿಂದ, ಸಮಸ್ತಪದಾರ್ಥಗಳಿಗುತ್ಪಾದಕರಾಗಿ, ಒಬ್ಬರಿಗೊಬ್ಬರು ಅಡ್ಡಿಮಾಡುವುದಿಲ್ಲ ; ಒಂದೆಡೆಯಲ್ಲಿ ನಿಲ್ಲದೇ ಯಾವಾಗಲೂ ಸಂಚರಿಸುತ್ತಿರುತ್ತಾರೆ.

## English Translation.

The path of the sisters is unending; they travel it alternately, guided by the radiant (sun); combined in purpose, though of different forms, night and dawn, giving birth (to all things), obstruct not each other, neither do they stand still.

॥ ವಿಶೇಷವಿಷಯಗಳು ॥

**ಸ್ವಸ್ರೋಃ—ಭಗಿನ್ಯೋಃ-ರಾತ್ರ್ಯುಷಸೋಃ । ರಾತ್ರ್ಯುಷಸೌ ಹ್ಯೇಕೇನ ಪ್ರಜಾಪತಿನಾ ಆದಿತ್ಯೇನ ವಾ ಜನ್ಯೇತೇ ಇತಿ ಉಪಪನ್ನಮನಯೋರ್ಭಗಿನೀತ್ವಂ ।** ರಾತ್ರಿ ಮತ್ತೂ ಉಷಸ್ಸು ಇವರು ಇಬ್ಬರೂ ಬ್ರಹ್ಮನು ಅಥವಾ ಆದಿತ್ಯನು ಎಂಬ ಒಬ್ಬನಿಂದಲೇ ಉತ್ಪತ್ತಿಯನ್ನು ಹೊಂದಿರುವವರಾದಕಾರಣ ಭಗಿನಿಯರು (ಸೋದರಿ) ಆಗಿರುವರು. ಅಥವಾ ಇವರಿಬ್ಬರೂ ಒಂದೇ ಮಾರ್ಗದಲ್ಲಿ ಸಂಚರಿಸುವವರಾದ್ದರಿಂದ ಇವರಿಬ್ಬರೂ ಅಕ್ಕತಂಗಿಯರೆಂದು ಹೇಳಲ್ಪಡುವರು.

**ದೇವಶಿಷ್ಟೇ—ಶಾಸಿರತ್ರ ಶುದ್ಧೋಽಪಿ ಸಾಮರ್ಥ್ಯಾತ್ ಸೋಪಸರ್ಗಾರ್ಥೋ ದ್ರಷ್ಟವ್ಯಃ । ಸರ್ವಪ್ರಾಣಿನಾಮುಪಕಾರಾಯ ದೇವೈರನುಶಿಷ್ಟೇ । ಅನುಜ್ಞಾತೇ ಇತ್ಯರ್ಥಃ ।** ಉಪಸರ್ಗಸಂಬಂಧವಿಲ್ಲದಿರುವ ಶಾಸು ಧಾತುವು ಇಲ್ಲಿ ಪ್ರಯುಕ್ತವಾಗಿದ್ದರೂ ಅದಕ್ಕೆ ಉಪಸರ್ಗದಿಂದ ಕೂಡಿದಾಗ ಬೋಧಿಸುವ ಅರ್ಥವನ್ನೇ ಇಲ್ಲಿ ಹೇಳಬೇಕು. ಎಲ್ಲಾ ಪ್ರಾಣಿಗಳಿಗೂ ಉಪಕಾರವನ್ನು ಮಾಡುವುದಕ್ಕಾಗಿ ದೇವತೆಗಳು ಅನುಜ್ಞೆಯನ್ನು ಕೊಟ್ಟರು

ವರು. ಇವರಿಬ್ಬರೂ ಲೋಕೋಪಕಾರವನ್ನು ಮಾಡುವುದಕ್ಕಾಗಿಯೇ ನಿರತರಾಗಿರುವರು ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುವರು. ಸಾಯಣರು **ದೇವೇನ—ದ್ಯೋತಮಾನೇನ ಸೂರ್ಯೇಣ ಅನುಶಿಷ್ಟೇ ಶಿಕ್ಷಿತೇ** ಪ್ರಕಾಶಮಾನನಾಗಿ ಇರುವ ಸೂರ್ಯನಿಂದ ಶಿಕ್ಷಿತರಾಗಿರುವ ರಾತ್ರಿಯೂ ಮತ್ತು ಉಷಸ್ಸೂ ಕೂಡ ಒಂದೇ ಮಾರ್ಗದಲ್ಲಿ ಕ್ರಮವಾಗಿ ಸಂಚರಿಸುವರು. ರಾತ್ರಿಯು ಸಂಚರಿಸಿದ ಮಾರ್ಗದಲ್ಲಿಯೇ ಉಷಸ್ಸೂ ಕೂಡ ಸಂಚರಿಸುವುದು. ಪುನಃ ಉಷಸ್ಸು ಸಂಚರಿಸಿದ ಮಾರ್ಗದಲ್ಲಿ ರಾತ್ರಿಯು ಸಂಚರಿಸುವುದು ಎಂದು ಅರ್ಥವನ್ನು ವಿವರಿಸಿರುವರು.

**ವಿರೂಪೇ ಸಮನಸಾ ನ ಮೇಥೇತೇ**—ರಾತ್ರಿಯು ತಮೋರೂಪದಿಂದ ಇರುವುದು. ಉಷಸ್ಸು ತನ್ನ ಪ್ರಕಾಶರೂಪದಿಂದ ಇರುವುದು. ಆದ್ದರಿಂದ ಇವರಿಬ್ಬರಿಗೂ ಸಮಾನವಾದ ವರ್ಣವು ಇಲ್ಲದಿರುವುದರಿಂದಲೇ ವಿರೂಪೇ ಎಂದು ಉಕ್ತವಾಗಿರುವುದು. ಈ ರಾತ್ರಿಯೂ ಮತ್ತೂ ಉಷಸ್ಸೂ ಕೂಡ ಲೋಕೋಪಕಾರಮಾಡುವ ಕೆಲಸದಲ್ಲಿ ನಿರತರಾಗಿ ಒಂದೇ ಅಭಿಪ್ರಾಯವುಳ್ಳ ಮನಸ್ಸುಳ್ಳವರಾಗಿರುವರು. ಆದರೂ ಇವರಿಬ್ಬರೂ ಒಂದೇ ಕಡೆಯಲ್ಲಿ ಸೇರದೆ ಬೇರೆಬೇರೆಯಾಗಿಯೇ ಇರುವರು. ಒಬ್ಬರನ್ನೊಬ್ಬರು ಅನುಸರಿಸಿಕೊಂಡು ಹೋಗುತ್ತಿರುವರು. ಎಂದರೆ ಹಗಲಾದಮೇಲೆ ರಾತ್ರಿಯೂ ರಾತ್ರಿಯಾದಮೇಲೆ ಉಷಃಕಾಲವೂ ಒಂದನ್ನೊಂದು ಅನುಸರಿಸಿ ನಡೆಯುತ್ತಿರುವುದು. ಸ್ಕಂದಸ್ವಾಮಿಗಳು ಮೇಥಧಾತುವು ಆಕ್ರೋಶವನ್ನು ಮಾಡುವುದು ಎಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿರುವುದರಿಂದ ಸರ್ವದಾ ಬೇಜಾರಿಲ್ಲದೆ ಕೆಲಸಮಾಡುವವರು. ಇನ್ನೊಬ್ಬರಮೇಲೆ ಸಿಟ್ಟಿನಿಂದ ಆಕ್ರೋಶಮಾಡುವಂತೆ ಇವರು ಆಕ್ರೋಶಮಾಡದೆ ಇರುವರು ಎಂದು ಅರ್ಥವನ್ನು ವಿವರಿಸಿರುವರು.

**ಸುಮೇಕೇ—ಮೇಕಶಬ್ದಃ ಮುಖವಚನ ಇತಿಕೇಚಿದಾಹುಃ । ಸುಮುಖ್ಯೌ । ಸೃಷ್ಟೇಃ ಪ್ರಥಮಃ ಸಂವತ್ಸರಃ ಮೇಕ ಇತ್ಯುಚ್ಯತೇ ಇತ್ಯನ್ಯೇ । ತಥಾಹಿ । ಮೇಕಸ್ಸಂವತ್ಸರಃ ಋತವೋ ಮೇಕಪುತ್ರಾ ಇತಿ ಪೌರಾಣಿಕಾಃ ಸ್ಮರಂತಿ । ಶೋಭನೋ ಮೇಕೋ ಯಯೋಃ ಸಂಬಂಧೀ ಸೃಷ್ಟಿಕಾಲಜನ್ಯತಯಾ ತೇ ಸುಮೇಕೇ । ಆದ್ಯ ಸಂವತ್ಸರಸೃಷ್ಟೇ ಇತ್ಯರ್ಥಃ ।** ಸ್ಕಂದಸ್ವಾಮಿಗಳು ಸಾಯಣರು ಹೇಳಿರುವ **ಸುಮೇಕೇ—ಶೋಭನಮೇಹನೇ ಸರ್ವೇಷಾಮುತ್ಪಾದಕತ್ವಾತ್ ಶೋಭನ ಪ್ರಜನನೇ** ಎಲ್ಲರನ್ನೂ ಉತ್ಪತ್ತಿಮಾಡಲು ಮುಖ ಸಾಧನವಾದ ಉತ್ತಮವಾದ ಇಂದ್ರಿಯವನ್ನು ಇವರು ಹೊಂದಿರುವರು ಎಂಬ ಅರ್ಥಕ್ಕಿಂತಲೂ ಬೇರೆ ಅರ್ಥವನ್ನು ಹೇಳಿರುವರು.

ಇವರು ಮೇಕಶಬ್ದವು ಮುಖವೆಂಬ ಅರ್ಥವನ್ನು ಬೋಧಿಸುವ ಕಾರಣ ಸುಂದರವಾದ ಮುಖವುಳ್ಳವರು ಎಂತಲೂ, ಪೌರಾಣಿಕ ಮತದವರು ಸೃಷ್ಟಿಯಾದ ಮೊದಲನೆಯುವರ್ಷವನ್ನು ಮೇಕಶಬ್ದದಿಂದ ವ್ಯವಹಾರಮಾಡಿ ವಸಂತಾದಿಋತುಗಳು ಮೇಕಪುತ್ರರೆಂದು ಹೇಳುವುದನ್ನು ಅಂಗೀಕರಿಸಿ, ರಾತ್ರ್ಯುಷಸ್ಸುಗಳು ಸೃಷ್ಟಿಕಾಲದ ಮೊದಲನೆಯು ಸಂವತ್ಸರದಲ್ಲಿ ಸೃಷ್ಟರಾಗಿರುವರು ಎಂದು ಅರ್ಥವನ್ನು ವಿವರಿಸಿರುತ್ತಾರೆ.

**ಅನ್ಯಾನ್ಯಾ—ಏಕೈಕಾ । ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತ ಇತಿ ವಕ್ತವ್ಯಂ ಸಮಾಸವಚ್ಚ ಬಹುಲಂ** ಅನ್ಯಶಬ್ದವು । ಸರ್ವನಾಮಶಬ್ದಗಳಲ್ಲಿ ಪಠಿತವಾಗಿ ಪರಸ್ಪರಕರ್ಮಾಚರಣರೂಪವಾದ ಅರ್ಥವನ್ನು ಬೋಧಿಸುವಾಗ ದ್ವಿರುಕ್ತವಾಗಿ ಪ್ರಯೋಗಿಸಲ್ಪಟ್ಟು ಸಮಾಸವನ್ನು ಹೊಂದುವುದು. ಆದ್ದರಿಂದ ಇಲ್ಲಿ

ಅನ್ಯಶಬ್ದಕ್ಕೆ ದ್ವಿರುಕ್ತಿಯು ಬಂದಿರುವುದು. ರಾತ್ರ್ಯುಷಸ್ಸುಗಳು ಇಬ್ಬರೂ ಒಟ್ಟಿಗೆ ಸೇರದೆ ಒಂಟೊಂಟಿಯಾಗಿರುವರು ಎಂದು ಅಭಿಪ್ರಾಯವು. ಸ್ಕಂದಸ್ವಾಮಿಗಳು—**ಅನ್ಯಾನ್ಯಾ ಶಬ್ದಃ ಪರಸ್ಪರಪರ್ಯಾಯಃ ತೃತೀಯೈಕವಚನಾಂತಶ್ಚ । ಪರಸ್ಪರಸಂಬದ್ಧೇ ಚರತಃ ಗಚ್ಛತಃ ।** ಅನ್ಯಾನ್ಯಾ ಎಂಬ ಶಬ್ದವು ಪರಸ್ಪರ ಎಂಬ ಶಬ್ದದ ಪರ್ಯಾಯಪದವಾಗಿರುವುದು. ಇದು ತೃತೀಯಾಏಕವಚನಾಂತವಾಗಿರುತ್ತದೆ. ರಾತ್ರ್ಯುಷಸ್ಸುಗಳು ಒಬ್ಬರ ಸಂಗಡ ಇನ್ನೊಬ್ಬರು ಕೆಲಸಮಾಡುವುದರಲ್ಲಿ ಸೇರಿಕೊಂಡು ಸಂಚರಿಸುವರು ಎಂದು ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅನಂತಃ**—ನ ವಿದ್ಯತೇ ಅಂತಃ ಯಸ್ಯ ಸಃ ಅನಂತಃ **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨)ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅನ್ಯಾನ್ಯಾ**—**ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತಃ ಇತಿ ವಕ್ತವ್ಯಂ ಸಮಾಸವಚ್ಚ ಬಹುಲಂ** (ಪಾ. ಸೂ. ೮-೧-೧೨-೧೧) ಎಂಬ ವಚನದಿಂದ ವ್ಯತಿಹಾರದಲ್ಲಿ ಅನ್ಯ ಶಬ್ದಕ್ಕೆ ದ್ವಿರ್ಭಾವ. ಸಮಾಸವದ್ಭಾವಹೇಳಿದುದರಿಂದ **ಸುಪೋ ಧಾತುಪ್ರಾತಿಪದಿಕಯೋಃ** (ಪಾ. ಸೂ. ೨-೪-೭೧) ಎಂಬುದರಿಂದ ಸುಬ್‌ಲುಕ್ ಆಗುತ್ತದೆ. **ತಸ್ಯಪರಮಾಮ್ರೇಡಿತಂ** (ಪಾ. ಸೂ. ೮-೧-೨) ಎಂಬುದರಿಂದ ದ್ವಿರ್ಭಾವಬಂದಾಗ ಪರರೂಪಕ್ಕೆ ಆಮ್ರೇಡಿತಸಂಜ್ಞೆ ಬರುತ್ತದೆ. **ಅನುದಾತ್ತಂಚ** (ಪಾ. ಸೂ. ೮-೧-೩) ಎಂಬುದರಿಂದ ಆಮ್ರೇಡಿತಕ್ಕೆ ಅನುದಾತ್ತಸ್ವರ ಬರುತ್ತದೆ.

**ದೇವಶಿಷ್ಟೇ**—ಶಾಸು ಅನುಶಿಷ್ಟೌ ಧಾತು. ಅದಾದಿ. ಇದಕ್ಕೆ ಕರ್ಮಣಿಯಲ್ಲಿ ನಿಷ್ಠಾ (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಯಸ್ಯವಿಭಾಷಾ** (ಪಾ. ಸೂ. ೮-೨-೧೫) ಎಂಬುದರಿಂದ ಇಣ್ನಿಷೇಧ ಬರುತ್ತದೆ. **ಶಾಸ ಇದಙ್‌ಹಲೋಃ** (ಪಾ. ಸೂ. ೬-೪-೩೪) ಎಂಬುದರಿಂದ ಧಾತುವಿನ ಉಪಧೆಗೆ ಇತ್ವ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಅದರ ಸಕಾರಕ್ಕೆ ಷತ್ವ. ಷಕಾರವನ್ನು ನಿಮಿತ್ತೀಕರಿಸಿ ಪ್ರತ್ಯಯತಕಾರಕ್ಕೆ ಷ್ಟುತ್ವದಿಂದ ಟಕಾರಾದೇಶ. ದೇವೇನ ಶಿಷ್ಟಃ ದೇವಶಿಷ್ಟಃ ತಸ್ಮಿನ್ ದೇವಶಿಷ್ಟೇ. **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಮೇಥೇತೇ**—ಮಿಥೃ **ಮೇಥೃ** ಮೇಧಾಹಿಂಸನಯೋಃ ಧಾತು. ಭ್ವಾದಿ. ಅನುದೇತ್ತೇತ್ತ್ವಾದುದರಿಂದ **ಅನುದಾತ್ತಙಿತ ಆತ್ಮನೇಪದಂ** (ಪಾ. ಸೂ. ೧-೩-೧೨) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಆತಾಮ್ ಪ್ರತ್ಯಯ. **ಟಿತ ಆತ್ಮನೇ ಪದಾನಾಂ** (ಪಾ.ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. **ಆತೋ ಙಿತಃ** (ಪಾ. ಸೂ. ೭-೨-೮೧) ಸೂತ್ರದಿಂದ ಆಕಾರಕ್ಕೆ ಇಯಾದೇಶ. **ಲೋಪೋ-ವ್ಯೋರ್ವಲಿ** ಸೂತ್ರದಿಂದ ಯಕಾರಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತಸ್ಥತುಃ**—ಷ್ಠಾ ಗತಿನಿವೃತ್ತೌ. ಧಾತು. ಲಿಟ್ ಪ್ರಥಮಪುರುಷದ್ವಿವಚನರೂಪ. **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ಸುಮೇಕೇ**— ಮಿಹ ಸೇಚನೇ. ಧಾತು. ಭಾವಾರ್ಥದಲ್ಲಿ ಇದಕ್ಕೆ ಘಞ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ **ಪುಗಂತಲಘೂಪಧಸ್ಯ ಚ** ಸೂತ್ರದಿಂದ ಧಾತುವಿನ ಲಘೂಪಧೆಗೆ ಗುಣ. ಮೇಹಃ ಎಂದು ರೂಪವಾಗುತ್ತದೆ. ಶೋಭನಃ ಮೇಹಃ ಯಯೋಸ್ತೇ ಸುಮೇಕೇ. ಛಂದಸ್ಸಿನಲ್ಲಿ ವರ್ಣವ್ಯತ್ಯಯದಿಂದ ಹಕಾರಕ್ಕೆ ಕಕಾರಾದೇಶ. ಮೇಹಶಬ್ದವು **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೩) ಎಂಬುದರಿಂದ ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಸಮಾಸವಾದಾಗ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬–೨–೧೧೯) ಎಂಬುದರಿಂದ ಉತ್ತರ ಪದಾದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ವಿಭಕ್ತಿ ದ್ವಿವಚನಾಂತರೂಪ.

**ನಕ್ತೋಷಸಾ**—ನಕ್ತಂ ಚ ಉಷಾಶ್ಚ ನಕ್ತೋಷಸೌ. ಛಂದಸ್ಸಿನಲ್ಲಿ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬–೩–೧೩೭) ಎಂಬುದರಿಂದ ಸಂಹಿತಾದಲ್ಲಿ ಉಪಧಾ ಅಕಾರಕ್ಕೆ ದೀರ್ಘ ಬರುತ್ತದೆ.

**ಸಮನಸಾ**—ಸಮಾನಂ ಮನಃ ಯಯೋಸ್ತೇ ಸಮನಸೌ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬–೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಿರೂಪೇ**— ವಿರುದ್ಧಂ ರೂಪಂ ಯಯೋಸ್ತೇ ವಿರೂಪೇ. ಹಿಂದಿನಂತೆ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾದ್ವಿವಚನಾಂತರೂಪ. ‖ ೩ ‖



‖ ಸಂಹಿತಾಪಾಠಃ ‖

ಭಾಸ್ವತೀ ನೇತ್ರೀ ಸೂನೃತಾನಾಮಚೇತಿ ಚಿತ್ರಾ ವಿ ದುರೋ ನ ಆವಃ ।
ಪ್ರಾರ್ಪ್ಯಾ ಜಗದ್ವ್ಯು ನೋ ರಾಯೋ ಅಖ್ಯದುಷಾ ಅಜೀಗರ್ಭುವನಾನಿ ವಿಶ್ವಾ ‖ ೪ ‖

॥ ಪದಪಾಠಃ ॥

ಭಾಸ್ವತೀ । ನೇತ್ರೀ । ಸೂನೃತಾನಾಂ । ಅಚೇತಿ । ಚಿತ್ರಾ । ವಿ । ದುರಃ । ನಃ ।
ಆವರಿತ್ಯಾವಃ ।

ಪ್ರಽಅರ್ಪ್ಯ । ಜಗತ್ । ವಿ । ಊಂ ಇತಿ । ನಃ । ರಾಯಃ । ಅಖ್ಯತ್ । ಉಷಾಃ ।
ಅಜೀಗಃ । ಭುವನಾನಿ । ವಿಶ್ವಾ ॥ ೪ ॥

॥ ಸಾಯಣಭಾಷ್ಯಂ ॥

ಭಾಸ್ವತೀ ವಿಶಿಷ್ಟಪ್ರಕಾಶನಯುಕ್ತಾ । ಸೂನೃತೇತಿ ವಾಙ್ನಾಮ । ಸೂನೃತಾನಾಂ ವಾಚಾಂ ನೇತ್ರ್ಯುತ್ಪಾದಯಿತ್ರೀ । ಉಷಸಃ ಪ್ರಾದುರ್ಭಾವಾನಂತರಂ ಹಿ ಪಶುಪಕ್ಷಿಮೃಗಾದಯಃ ಸರ್ವೇ ಶಬ್ದಂ ಕುರ್ವಂತಿ । ಏವಂಭೂತೋಷಾ ಅಚೇತಿ । ಅಸ್ಮಾಭಿರಜ್ಞಾಯಿ । ಚಿತ್ರಾ ಚಾಯನೀಯಾ ಜ್ಞಾತಾ ಸಾ ನೋಽಸ್ಮಾಕಂ ದುರೋ ದ್ವಾರಾಣಿ ತಮಸಾ ತಿರೋಹಿತಾನಿ ವ್ಯಾವಃ । ವ್ಯವೃಣೋತ್ । ಯಥಾಸ್ಮಾಭಿರ್ದೃಶ್ಯಂತೇ ತಥಾ ತಮೋ ನಿವಾರ್ಯ ಪ್ರಕಾಶಯತೀತ್ಯರ್ಥಃ । ಅಪಿ ಚ ಜಗತ್ಸರ್ವಂ ಭುವನಂ ಪ್ರಾರ್ಪ್ಯ ಪ್ರಕಾಶಂ ಗಮಯಿತ್ವಾ ನೋಽಸ್ಮಾಕಂ ರಾಯೋ ಧನಾನಿ ವ್ಯಖ್ಯತ್ । ವಿಶಿಷ್ಟಪ್ರಕಾಶನಯುಕ್ತಾನ್ಯಕರೋತ್ । ಉ ಇತ್ಯೇತತ್ಪಾದಪೂರಣಂ । ಸೈಷೋಷಾ ವಿಶ್ವಾ ಭುವನಾನಿ ಸರ್ವಾಣಿ ಭುವನಾನಿ ತಮಸಾ ತಿರೋಹಿತತ್ವೇನಾವಿದ್ಯಮಾನಕಲ್ಪಾನ್ಯಜೀಗಃ । ಉದ್ಗಿರತಿ । ಸ್ವಮುಖಾನ್ನಿರ್ಗಮಯತಿ । ಸ್ವಕೀಯೇನ ಪ್ರಕಾಶೇನ ತಮೋ ನಿಃಸಾರ್ಯ ಪುನರುತ್ಪನ್ನಾನೀವ ಕರೋತೀತ್ಯರ್ಥಃ ॥ ನೇತ್ರೀ । ಣೀಞ್ ಪ್ರಾಪಣೇ । ತೃಚ್ । ಋನ್ನೇಭ್ಯೋ ಙೀಪ್ । ಉದಾತ್ತಯಣೋ ಹಲ್ಪೂರ್ವಾದಿತಿ ಙೀಪ ಉದಾತ್ತತ್ವಂ । ಅಚೇತಿ । ಚಿತೀ ಸಂಜ್ಞಾನೇ । ದುರಃ । ದ್ವಾರಶಬ್ದಸ್ಯ ರಯೋರ್ವರ್ತೌ ಬಹುಲಂ । ಪಾ. ೬-೧-೩೪-೬ । ಇತಿ ಬಹುಲವಚನಾತ್ಸಂಪ್ರಸಾರಣಂ । ಆವಃ । ವೃಞ್ ವರಣೇ । ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಗುಣಃ । ಹಲ್ಙ್ಯಾಬ್ಭ್ಯ ಇತಿ ತಿಲೋಪಃ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ । ಪ್ರಾರ್ಪ್ಯ । ಋ ಗತೌ । ಣಾವರ್ತಿಹ್ರೀತ್ಯಾದಿನಾ ಪುಕ್ । ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಪ್ । ಅಖ್ಯತ್ । ಖ್ಯಾ ಪ್ರಕಥನೇ । ಲುಙ್ಯಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ । ಅಜೀಗಃ । ಗೄ ನಿಗರಣೇ । ಲಙಿ ತಿಪಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ದ್ವಿರ್ವಚನೋರದತ್ವಹಲಾದಿಶೇಷಾಃ । ಅರ್ತಿಪಿಪರ್ತ್ಯೋಶ್ಚ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಛಾಂದಸ ಈಕಾರಃ । ಯದ್ವಾ । ಅಸ್ಮಾಣ್ಣ್ಯಂತಾಲ್ಲುಙಿ ಚಙಿ ದ್ವಿರ್ಭಾವಸನ್ವದ್ಭಾವೇತ್ವದೀರ್ಘಾಃ । ಛಾಂದಸಶ್ಚಙೋ ಲೋಪಃ ॥

॥ ಪ್ರತಿಪದಾರ್ಥ ॥

**ಭಾಸ್ವತೀ**—ಪ್ರಕಾಶಯುಕ್ತಳಾದ । **ಸೂನೃತಾನಾಂ**—ವಾಕ್ಕುಗಳ । **ನೇತ್ರೀ**—ಉತ್ಪಾದಕಳಾದ ಉಷಸ್ಸು । **ಅಚೇತಿ**—(ನಮ್ಮಿಂದ) ತಿಳಿಯಲ್ಪಡುತ್ತಾಳೆ । **ಚಿತ್ರಾ**—ನಾನಾವರ್ಣಳಾದ ಅವಳು । **ನಃ**—ನಮ್ಮ । **ದುರಃ**—(ಅಂಧಕಾರದಿಂದ ತಿರೋಹಿತವಾಗಿದ್ದ) ದ್ವಾರಗಳನ್ನು । **ವಿ ಆವಃ**—ತೆರೆದಳು (ಮತ್ತೂ) । **ಜಗತ್**—(ಸಮಸ್ತ) ಪ್ರಪಂಚವನ್ನೂ । **ಪ್ರಾರ್ಪ್ಯ**—ಪ್ರಕಾಶಗೊಳಿಸಿ । **ನಃ**—ನಮ್ಮ । **ರಾಯಃ**—ಧನವನ್ನು । **ವಿ ಅಖ್ಯತ್ ಉ**—ಪ್ರಕಾಶಯುಕ್ತವನ್ನಾಗಿ ಮಾಡಿದಳು (ಅಂಥಾ) । **ಉಷಾಃ**—ಉಷಸ್ಸು । **ವಿಶ್ವಾ ಭುವನಾನಿ**—(ತಮಸ್ಸಿನಿಂದ ಆವೃತವಾಗಿದ್ದ) ಸಮಸ್ತ ಪ್ರಪಂಚವನ್ನೂ । **ಅಜೀಗಃ** – ಪ್ರಕಟಗೊಳಿಸುತ್ತಾಳೆ.

॥ ಭಾವಾರ್ಥ ॥

ಪ್ರಕಾಶಮಾನಳಾದ ಉಷಸ್ಸು (ಪ್ರಾಣಿಗಳು ಬೆಳಗಾದ ಮೇಲೆಯೇ ಶಬ್ದಮಾಡಲು ಪ್ರಾರಂಭಿಸುವುದರಿಂದ) ಶಬ್ದದ ಜನಯಿತ್ರಿಯಾಗಿ ನಮಗೆ ಗೋಚರವಾಗುತ್ತಾಳೆ; ಅಂಧಕಾರದಿಂದ ತಿರೋಹಿತವಾಗಿದ್ದ ದ್ವಾರಗಳನ್ನು ಕಾಣುವಂತೆಮಾಡಿ, ನಮ್ಮ ಐಶ್ವರ್ಯಾದಿಗಳನ್ನು ಪ್ರಕಾಶಗೊಳಿಸುತ್ತಾಳೆ; (ತಮಸ್ಸಿನಿಂದಾವೃತವಾಗಿ ನಷ್ಟಪ್ರಾಯವಾಗಿದ್ದ) ಸಮಸ್ತ ಪ್ರಪಂಚವನ್ನೂ ಪ್ರಕಟಪಡಿಸುತ್ತಾಳೆ.

## English Translation

Brilliant guide of the speakers of truth, the many-tinted dawn, is recognised by us; she has opened our doors; having illuminated the world, she has made our riches manifest. Ushas gives back all the regions (that had been swallowed up by night.)

॥ ವಿಶೇಷವಿಷಯಗಳು ॥

**ಸೂನೃತಾನಾಂ ನೇತ್ರೀ—ವಾಚಾಂ ಉತ್ಪಾದಯಿತ್ರೀ । ಸೂನೃತಾ** ಶಬ್ಗವು ಹದಿನಾರು ಉಷಸ್ಸಿನ ನಾಮಗಳಲ್ಲಿ (ನಿ. ೨–೧೯) ಯೂ, ಇಪ್ಪತ್ತೆಂಟು ಅನ್ನನಾಮಗಳಲ್ಲಿಯೂ (ನಿ. ೩–೯) ಉಕ್ತವಾಗಿರುವುದು. ವಾಙ್ನಾಮಗಳಲ್ಲಿ ಇದು ಪಠಿತವಾಗದಿದ್ದರೂ ವಾಕ್ಕೆಂದು ಅರ್ಥಬೋಧಕವಾಗಿರುವುದು. ಉಷಃಕಾಲದಲ್ಲಿ ಪಶು ಪಕ್ಷಿ ಮೃಗಗಳೆಲ್ಲವೂ ಕೂಡ ಶಬ್ದಮಾಡಲು ಉಪಕ್ರಮಮಾಡುವಕಾರಣ ಉಷಸ್ಸು ಮಾತನಾಡುವ ಸಾಮರ್ಥ್ಯವನ್ನು ಉಂಟುಮಾಡುವುದು ಎಂದಭಿಪ್ರಾಯವು.

**ಅಚೇತಿ— ಚೇತ್ಯತೇ ಜ್ಞಾಯತೇ ದೃಶ್ಯತ ಇತ್ಯರ್ಥಃ ।** ಉಷಸ್ಸು ನಮಗೆ ಎಲ್ಲವನ್ನೂ ತಿಳಿಯುವಂತೆ ಬುದ್ಧಿಯ ಬಲವನ್ನು ಉಂಟುಮಾಡಿ ಜ್ಞಾನವಂತರನ್ನಾಗಿಯೂ ಮಾಡುವುದು. ಎಲ್ಲವೂ ಕಣ್ಣಿಗೆ ಕಾಣುವಂತೆಮಾಡಿ ತಿಳಿಸುವುದು.

**ನಃ ದುರಃ ವಿ ಆವಃ—ಸರ್ವಾರ್ಥಾನಾಂ ದೃಶಾಂ ವಾಗ್ದ್ವಾರಾಣಿ ನಃ ಅಸ್ಮಭ್ಯಂ ವಿವೃಣೋತಿ ಪ್ರಕಾಶಯತೀತ್ಯರ್ಥಃ ।** ಉಷಃಕಾಲವು ಪದಾರ್ಥಗಳು ಎಲ್ಲವೂ ಗೋಚರವಾಗುವಂತೆ ಕತ್ತಲೆಯನ್ನು ಪರಿಹರಿಸಿ ಮಾತನಾಡುವ ಮತ್ತು ವ್ಯವಹಾರಮಾಡುವ ಶಕ್ತಿಯು ಪ್ರಕಟವಾಗುವಹಾಗೆ ಮಾಡುವುದು ಎಂದು ಅರ್ಥವು.

**ಪ್ರಾಪ್ಯಾರಾಯಃ ಅಖ್ಯತ್ ವಿಶ್ವಾ ಅಜೀಗಃ—ತೇಷು ತೇಷು ವ್ಯಾಪಾರೇಷು ಕೃತ್ಸ್ನಂ ಜಗತ್ ಪ್ರವರ್ತ್ಯ । ವಿವಿಧಂ ಖ್ಯಾಪಿತವತೀ । ಜಗರ್ತಿರತ್ರ ಸಾಮರ್ಥ್ಯಾತ್ ಗತ್ಯರ್ಥಃ । ಯೋ ವಾಂ ದೂತೋ ನ ಧಿಷ್ಣ್ಯೌ (ಋ. ಸಂ. ೭-೬೭-೧) ಇತಿ ಯಥಾ ।** ಉಷಸ್ಸು—ಜಗತ್ತು ಎಲ್ಲವೂ ಆಯಾಯ ಕಾರ್ಯಗಳನ್ನು ನೆರವೇರಿಸುವ ಹಾಗೆ ಪ್ರವರ್ತನೆಯನ್ನು ಉಂಟುಮಾಡಿ ಜಗತ್ತಿನ ವೈವಿಧ್ಯವನ್ನು ಪ್ರಕಟಮಾಡಿರುವುದು—**ಉಷಾಃ ಗಚ್ಛತಿ** (ಪ್ರಪಂಚ) ಲೋಕಗಳು ಎಲ್ಲವೂ ಕತ್ತಲೆಯಿಂದ ಮುಚ್ಚಿಕೊಂಡಿದ್ದಕಾರಣ ಇಲ್ಲದಂತೆ (ಅಸತ್ಕಲ್ಪಗಳಾಗಿ) ಇದ್ದವುಗಳನ್ನು ಉಷಸ್ಸು ತನ್ನ ಪ್ರಕಾಶಗಳಿಂದ ಪುನಃ ಉತ್ಪನ್ನವಾದಂತೆಮಾಡಿ ಚೇತನಗೊಳಿಸಿರುವುದು. ನಮಗೆ ಧನವು ಸಿಕ್ಕುವ ಮಾರ್ಗಗಳು ತಿಳಿಯುವ ಹಾಗೆ ಬುದ್ಧಿಯಲ್ಲಿ ಪ್ರಕಾಶವನ್ನು ಉಂಟುಮಾಡುವುದು. ಈ ವಿಧವಾದ ಉಪಕಾರವನ್ನು ಜಗತ್ತಿಗೆ ಎಲ್ಲಕ್ಕೂ ಉಂಟುಮಾಡುತ್ತಿರುವ ಉಷಸ್ಸು ಎಲ್ಲಾ ಕಡೆಯಲ್ಲಿಯೂ ತಾನೇ ತಾನಾಗಿ ಪ್ರವರ್ತಿಸುವುದೆಂದು ತಾತ್ಪರ್ಯವು ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಭಾಸ್ವತೀ**—ಭಾಃ ಅಸ್ಯಾ ಅಸ್ತಿ ಇತಿ ಭಾಸ್ವತೀ. ಮತುಪ್ ಪ್ರತ್ಯಯ. ಅದುಪಧೆಯಾಗಿರುವುದರಿಂದ **ಮಾದುಪಧಾಯಾಶ್ಚ**—(ಪಾ ಸೂ. ೮-೨-೯) ಎಂಬುದರಿಂದ ಮಕಾರಕ್ಕೆ ವತ್ವ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್.

**ನೇತ್ರೀ**—ಣೀಞ್ ಪ್ರಾಪಣೇ ಧಾತು. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. **ನೇತೃ** ಶಬ್ದವಾಗುತ್ತದೆ. ಋದಂತವಾದುದರಿಂದ ಸ್ತ್ರೀತ್ವತೋರುವಾಗ **ಋನ್ನೇಭ್ಯೋಙೀಪ್** (ಪಾ. ಸೂ. ೪-೧-೫) ಎಂಬುದರಿಂದ ಙೀಪ್. ಯಣಾದೇಶ. ತೃಚ್ ಚಿತ್ತಾದುದರಿಂದ ಅಂತೋದಾತ್ತವಾದಾಗ ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ ಅದರ ಪರದಲ್ಲಿರುವ ಙೀಪಿಗೆ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೭-೧-೧೭೪) ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಅಚೇತಿ**—ಚಿತೀ ಸಂಜ್ಞಾನೇ. ಧಾತು. ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಚಿಣ್ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವ ತಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಅಚೇತಿ ಎಂದು ರೂಪವಾಗುತ್ತದೆ.

**ದುರಃ**—ದ್ವಾರ್ ಶಬ್ದ. **ರಯೋರ್ಮತೌ ಬಹುಲಂ** (ಪಾ. ಸೂ. ೬–೧–೩೭–೬) ಎಂಬಲ್ಲಿ **ಬಹುಲವಚನದಿಂದ** ಇದಕ್ಕೂ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** (ಪಾ. ಸೂ. ೬–೧–೧೦೮) ಸೂತ್ರದಿಂದ ಪೂರ್ವರೂಪ. ದ್ವಿತೀಯಾ ಬಹುವಚನಾಂತರೂಪ.

**ಅವಃ**—ವೃಞ್ ವರಣೇ ಧಾತು. ಲುಙ್ ಪ್ರಥಮ ಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಇಕಾರಲೋಪ ಚ್ಲಿ ಬಂದಾಗ **ಮಂತ್ರೇಘಸಹ್ವರ**—(ಪಾ. ಸೂ. ೨–೪–೮೦) ಎಂಬುದರಿಂದ ಅದಕ್ಕೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರ ಪರವಾಗಿ ಬರುತ್ತದೆ. ಹಲಂತದ ಪರದಲ್ಲಿ ಅಪೃಕ್ತ ತಿಪ್ ಬಂದುದರಿಂದ **ಹಲಙ್ಯಾಭ್ಯೋ ದೀರ್ಘಾ**—(ಪಾ. ಸೂ ೬–೧–೬೮) ಎಂಬುದರಿಂದ ಅದಕ್ಕೆ ಲೋಪ. ಅಜಾದಿಯಾಗದಿದ್ದರೂ **ಛಂದಸ್ಯಪಿದೃಶ್ಯತೇ** (ಪಾ. ಸೂ. ೬–೪–೭೩) ಎಂಬುದರಿಂದ ಆಡಾಗಮ. ರೇಫಕ್ಕೆ **ಖರವಸಾನಯೋರ್ವಿಸರ್ಜನೀಯಃ** ಸೂತ್ರದಿಂದ ವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪ್ರಾರ್ಪ್ಯ**—ಋ ಗತೌ ಧಾತು. **ಹೇತುಮತಿ ಚ** (ಪಾ. ಸೂ. ೩–೧–೨೬) ಎಂಬುದರಿಂದ ಣಿಚ್. **ಅರ್ತಿಹ್ರೀ ವ್ಲೀ**—(ಪಾ. ಸೂ. ೭–೩–೩೬) ಎಂಬುದರಿಂದ ಧಾತುವಿಗೆ ಪುಕಾಗಮ. ಣಿಜಂತದಮೇಲೆ ಕ್ತ್ವಾ ಪ್ರತ್ಯಯ ಬಂದಾಗ ಪ್ರ–ಉಪಸರ್ಗದೊಡನೆ ಸಮಾಸವಾದುದರಿಂದ ಸಮಾಸೇಽನಞ್ಪೂರ್ವೇಕ್ತ್ವೋಲ್ಯಪ್ (ಪಾ. ಸೂ ೭–೧–೩೭) ಎಂಬುದರಿಂದ ಅದಕ್ಕೆ ಲ್ಯಬಾದೇಶ. **ಣೇರನಿಟಿ** (ಪಾ. ಸೂ. ೬–೪–೫೧) ಎಂಬುದರಿಂದ ಣಿಚಿಗೆ ಲೋಪ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬–೩–೧೩೭) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ರಾಯಃ ಊಡಿದಂಪದಾದಿ**—(ಪಾ. ಸೂ ೬–೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಖ್ಯತ್**—ಖ್ಯಾ ಪ್ರಕಥನೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಅದರ ಇಕಾರಕ್ಕೆ ಲೋಪ. **ಚ್ಲಿಲುಙಿ** ಸೂತ್ರದಿಂದ ಚ್ಲಿ ವಿಕರಣ ಬಂದಾಗ **ಅಸ್ಯತಿವಕ್ತಿಖ್ಯಾತಿಭ್ಯೋಙ್** (ಪಾ. ಸೂ. ೩–೧–೫೨.) ಎಂಬುದರಿಂದ ಅದಕ್ಕೆ ಅಙಾದೇಶ. ಇದು ಙಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ಆತೋಲೋಪ ಇಟಿ ಚ** (ಪಾ. ಸೂ. ೬–೪–೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಜೀಗಃ**—ಗೄ ನಿಗರಣೇ. ಧಾತು. ಲಙ್ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಹಿಂದಿನಂತೆ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನಾ) ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಉರತ್** (ಪಾ. ಸೂ. ೭–೪–೬೬) ಎಂಬುದರಿಂದ ಅಭ್ಯಾಸ ಋಕಾರಕ್ಕೆ ಅತ್ವ. ರಪರವಾಗಿ ಬಂದಾಗ ಆದಿಹಲ್ಶೇಷ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭–೪–೭೭) ಎಂಬಲ್ಲಿ **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಛಾಂದಸವಾಗಿ ಅದಕ್ಕೆ ದೀರ್ಘ ಬರುತ್ತದೆ. ಅಂಗಕ್ಕೆ ಆಡಾಗಮ ಅಥವಾ ಇದೇ ಧಾತುವಿಗೆ

ಣಿಚ್ ಮಾಡಿದಾಗ ಣ್ಯಂತದಮೇಲೆ ಲುಙ್ **ಣಿಶ್ರಿದ್ರುಸ್ರು**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಸನ್ವಲ್ಲಘುನಿ ಚ**—(ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯.) ಸೂತ್ರದಿಂದ ಅಭ್ಯಾಸಕ್ಕೆ ಇತ್ವ. **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. ಇಲ್ಲಿಯೂ ಛಾಂದಸವಾಗಿ ಚಙ್‌ಗೆ ಲೋಪ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಜಿಹ್ಮಶ್ಯೇ೩ ಚರಿತವೇ ಮಘೋನ್ಯಾಭೋಗಯ ಇಷ್ಟಯೇ
ರಾಯ ಉ ತ್ವಂ ।
ದಭ್ರಂ ಪಶ್ಯದ್ಭ್ಯ ಉರ್ವಿಯಾ ವಿಚಕ್ಷ ಉಷಾ ಅಜೀಗರ್ಭುವ-
ನಾನಿ ವಿಶ್ವಾ ॥ ೫ ॥

॥ ಪದಪಾಠಃ ॥

**ಜಿಹ್ಮಽಶ್ಯೇ । ಚರಿತವೇ । ಮಘೋನೀ । ಆಽಭೋಗಯೇ । ಇಷ್ಟಯೇ ।**
**ರಾಯೇ । ಊಂ ಇತಿ । ತ್ವಂ ।**
**ದಭ್ರಂ । ಪಶ್ಯತ್ಽಭ್ಯಃ । ಉರ್ವಿಯಾ । ವಿಽಚಕ್ಷೇ । ಉಷಾಃ । ಅಜೀಗಃ ।**
**ಭುವನಾನಿ । ವಿಶ್ವಾ ॥ ೫ ॥**

॥ ಸಾಯಣಭಾಷ್ಯಂ ॥

ಮಘೋನೀತ್ಯುಷಸೋ ನಾಮಧೇಯಂ । ಮಘೋನೀ ಧನವತ್ಯುಷಾ ಜಿಹ್ಮಶ್ಯೇ ಜಿಹ್ಮಂ ವಕ್ರಂ ಶಯಾನಾಯ ಪುರುಷಾಯ ಚರಿತವೇ ಚರಿತುಂ ಶಯನಾದುತ್ಥಾಯ ಸ್ವಾಪೇಕ್ಷಿತಂ ಪ್ರತಿ ಗಂತುಂ ವ್ಯುಚ್ಛಂತೀ ಭವತಿ । ತ್ವಂ । ಅಯಮೇಕಶಬ್ದಪರ್ಯಾಯಃ ಸರ್ವನಾಮಶಬ್ದಃ । ಯದಾಹ ತ್ವ ಇತಿ ವಿನಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ । ನಿ. ೧-೭ । ಇತಿ । ತ್ವಮೇಕಂ ಪ್ರತ್ಯಾಭೋಗಯ ಆಭೋಗ್ಯಾಯ ಶಬ್ದಾದಿವಿಷಯಾರ್ಥಂ । ತಥಾಪರಂ ಪ್ರತೀಷ್ಟಯೇ ಯಾಗಾರ್ಥಂ । ತಥಾನ್ಯಂ ಪ್ರತಿ ರಾಯೇ ಧನಾರ್ಥಂ ಚ ವ್ಯುಚ್ಛಂತೀತಿ ಶೇಷಃ । ಉಶಬ್ದಶ್ಚಾರ್ಥೇ। ಅಪಿ ಚ ದಭ್ರಮಲ್ಪಂ ಪಶ್ಯದ್ಭ್ಯೋಽಂಧಕಾರಾವೃತತ್ವೇನೇಷದ್ದ್ರಷ್ಟೃಭ್ಯೋ ಮನುಷ್ಯೇಭ್ಯೋ ವಿಚಕ್ಷೇ ವಿಶಿಷ್ಟಪ್ರಕಾಶಾಯ ವ್ಯುಚ್ಛಂತ್ಯುರ್ವಿಯಾ ಉರ್ವೀ ವಿಸ್ತೀರ್ಣೋಷಾಃ ಸರ್ವಾಣಿ ಭೂತಜಾತಾನಿ ತಮಸಾ ತಿರೋಹಿತಾನಿ ಪ್ರಕಾಶದಾನೇನೋದ್ಗೀರ್ಣಾನೀವ ಕರೋತಿ ॥ ಜಿಹ್ಮಶ್ಯೇ । ಶೀಙ್ ಸ್ವಪ್ನೇ । ಜಿಹ್ಮಂ ಶೇತೇ ಇತಿ ಜಿಹ್ಮಶೀಃ । ಕ್ವಿಪ್ಚೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಏರನೇಕಾಚ ಇತಿ ಯಣ್ । ಉದಾತ್ತಸ್ವರಿತಯೋರ್ಯಣ ಇತಿ ವಿಭಕ್ತೇಃ ಸ್ವರಿತತ್ವಂ । ಆಭೋಗಯೇ । ಆಭೋಗಶಬ್ದಾಚ್ಚತುರ್ಥ್ಯೇಕವಚನೇ ಯಕಾರೋಪಜನಃ । ಯದ್ವಾ ॥ ಆಙ್ಪೂರ್ವಾದ್ಭುಜೇರ್ಬಹುಲವಚನಾದೌಣಾದಿಕಃ ಕಿಪ್ರತ್ಯಯಃ ಕುತ್ವಂ ಚ । ಉರ್ವಿಯಾ । ಇಯಾಡಿಯಾಜೀಕಾರಾಣಾಮುಪಸಂಖ್ಯಾನಂ । ಪಾ. ೭-೧-೩೯-೧ । ಇತ್ಯುರ್ವೀಶಬ್ದಾದುತ್ತರಸ್ಯ ಸೋರ್ಡಿಯಾಜಾದೇಶಃ । ವಿಚಕ್ಷೇ । ಚಕ್ಷಿಙ್ ವ್ಯಕ್ತಾಯಾಂ ವಾಚಿ । ವಿಪೂರ್ವಾದಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ ॥

॥ ಪ್ರತಿಪದಾರ್ಥ ॥

**ಮಘೋನೀ**—ಉದಾರಳಾದ ಉಷಸ್ಸು । **ಜಿಹ್ಮಶ್ಯೇ**—ವಕ್ರ ವಕ್ರವಾಗಿ ಮಲಗಿ ನಿದ್ರಿಸುತ್ತಿರುವ ಮನುಷ್ಯನನ್ನು । **ಚರಿತವೇ**—ಎದ್ದು ಸಂಚರಿಸಲು (ಸಹಾಯಕಳಾಗುತ್ತಾ) । **ತ್ವಂ**—ಒಬ್ಬನನ್ನು । **ಆಭೋಗಯೇ**—ವಿಷಯಸುಖಕ್ಕೋಸ್ಕರ । (**ತ್ವಂ**—ಮತ್ತೊಬ್ಬನನ್ನು) । **ಇಷ್ಟಯೇ**—ಯಜ್ಞಮಾಡುವುದಕ್ಕೋಸ್ಕರ । (**ತ್ವಂ**—ಮತ್ತೊಬ್ಬನನ್ನು) । **ರಾಯೇ**—ಧನಕ್ಕೋಸ್ಕರ ಮತ್ತೂ **ದಭ್ರಂ**—ಅಸ್ಪಷ್ಟವಾಗಿ (ಅಂಧಕಾರದಿಂದ) । **ಪಶ್ಯದ್ಭ್ಯಃ**—ಕಾಣಿಸುವವರಿಗೆ । **ವಿಚಕ್ಷೇ**—ಚೆನ್ನಾಗಿ ಕಾಣಿಸುವುದಕ್ಕೋಸ್ಕರ । **ಉಷಾಃ**—ಉಷಸ್ಸು । **ವಿಶ್ವಾ ಭುವನಾನಿ**—ಸಮಸ್ತ ಜಗತ್ತನ್ನೂ । **ಅಜೀಗಃ**—ಪ್ರಕಟಪಡಿಸುತ್ತಾಳೆ.

॥ ಭಾವಾರ್ಥ ॥

ಉಷಸ್ಸು ವಕ್ರ ವಕ್ರವಾಗಿ ಮಲಗಿ ನಿದ್ರಿಸುತ್ತಿರುವ ಮನುಷ್ಯರನ್ನು ಎಬ್ಬಿಸಿ, ಒಬ್ಬೊಬ್ಬರನ್ನು ಒಂದೊಂದು ಕಾರ್ಯಕ್ಕೆ ಎಂದರೆ-ಒಬ್ಬನನ್ನು ವಿಷಯಸುಖಭೋಗಕ್ಕೆ, ಒಬ್ಬನನ್ನು ದ್ರವ್ಯ ಸಂಪಾದನೆಗೆ, ಮತ್ತೊಬ್ಬನನ್ನು ಯಾಗಾದಿಗಳಲ್ಲಿ ತೊಡಗುವಂತೆ ಮಾಡುತ್ತಾಳೆ. ಅಸ್ಪಷ್ಟವಾಗಿ ಕಾಣಿಸುವ ಪದಾರ್ಥಗಳು ಸ್ಪಷ್ಟವಾಗಿ ಕಾಣಿಸುವುದಕ್ಕೂ ಸಹಾಯಕಳಾಗಿ (ತಮಸ್ಸಿನಿಂದ ಆವೃತವಾದ) ಸಮಸ್ತ ಜಗತ್ತನ್ನೂ ಉದಾರಮನಸ್ಸಿನಿಂದ ಸ್ಪಷ್ಟಪಡಿಸುತ್ತಾಳೆ.

## English Translation.

The opulent (dawn) arouses to exertion the man bowed down in sleep,—one man to enjoyments, another to devotion, another to (the acquirement of) wealth; she has enabled those who were almost sightless to see distinctly. The expansive Ushas has given back all the regions.

॥ ವಿಶೇಷವಿಷಯಗಳು ॥

**ಮಘೋನೀ—ಧನವತೀ ಉಷಾಃ** ಮೊದಲಾದ ೨೮ ಧನನಾಮಗಳಲ್ಲಿ ಮಘಶಬ್ದವು (ನಿ. ೩-೯) ಉಕ್ತವಾಗಿರುವುದರಿಂದ ಮಘವೆಂದರೆ ಧನವೆಂದು ಅರ್ಥವು. ಧನವುಳ್ಳದ್ದು ಆದಕಾರಣ ಧನವತೀ ಉಷಾಃ ಎಂದು ಸಾಯಣರು ಹೇಳಿರುತ್ತಾರೆ. **ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ** (ಋ. ಸಂ. ೨-೧೧-೨೧) ಎಂಬ ಮಂತ್ರದಲ್ಲಿಯೂ **ಮಘೋನೀ** (ನಿ. ೧-೭) ಪದಕ್ಕೆ **ಮಘಮಿತಿ ಧನನಾಮಧೇಯಂ ಮಂಹತೇರ್ದಾನಕರ್ಮಣಃ** ಎಂದು ಯಾಸ್ಕರು ವ್ಯಾಖ್ಯಾನಮಾಡಿರುವರು. **ಮಘಾ** ಶಬ್ದವು ಹದಿನಾರು ಉಷಸ್ಸಿನ ನಾಮಗಳಲ್ಲಿ (ನಿ. ೨-೧೯) ಉಕ್ತವಾಗಿರುವುದು.

**ಜಿಹ್ಮಶ್ಯೇ ಚರಿತವೇ—ಜಿಹ್ಮಂ ಶೇತೇ ಇತಿ ಜಿಹ್ಮಶೀಃ** । ಜಿಹ್ಮ ಶಬ್ದವು ಕುಟಿಲವೆಂಬ ಅರ್ಥವನ್ನು ಬೋಧಿಸುವುದು. ವಕ್ರವಾಗಿ ಹಸ್ತಪಾದವಿಕ್ಷೇಪದಿಂದ ಮಲಗಿರುವವನು ಜಿಹ್ಮಶೀಯಾಗಿರುವನು. ಈ ರೀತಿಯಾಗಿ ಮಲಗಿರುವ ಸ್ವಭಾವವುಳ್ಳ, ಸೋಮಾರಿಗೂ ಸಂಚರಿಸಬೇಕೆಂಬ ಇಚ್ಛೆಯು ಉಂಟಾಗುವಂತೆ ಉತ್ಸಾಹವನ್ನು ಉಷಸ್ಸು ಕಲ್ಪಿಸಿಕೊಡುವುದು.

**ತ್ವಂ—ಅಯಮೇಕಶಬ್ದಪರ್ಯಾಯಃ ಸರ್ವನಾಮಶಬ್ದಃ । ಯದಾಹ—ತ್ವ ಇತಿ ವಿನಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ** (ನಿ. ೧-೯) **ಇತಿ ಏಕಮಿತ್ಯರ್ಥಃ** । ತ್ವ ಎಂಬ ಪದವು ಏಕ (ಒಂದು) ಎಂಬ ಅರ್ಥವನ್ನು ಬೋಧಿಸುವ ಶಬ್ದಕ್ಕೆ ಪರ್ಯಾಯಪದವಾಗಿರುವುದು. ಇದು ಸರ್ವನಾಮಪದಗಳ ಗುಂಪಿನಲ್ಲಿ ಸೇರಿರುವುದು. ಇದು ಅನುದಾತ್ತಸ್ವರವುಳ್ಳದ್ದಾಗಿರುವುದು. **ಅರ್ಧನಾಮೇತ್ಯೇಕೇ** ಈ ಶಬ್ದವು ಅರ್ಧಭಾಗವೆಂಬ ಅರ್ಥವನ್ನು ಬೋಧಿಸುವುದು ಎಂದು ಕೆಲವರು ಅಭಿಪ್ರಾಯಪಡುವರು. **ನಿಪಾತ ಇತ್ಯೇಕೇ ।** ತ್ವ ಎಂಬ ಶಬ್ದವು ನಿಪಾತವು (ಅವ್ಯಯವು) ಎಂದು ಕೆಲವರು ಹೇಳುವರು.

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**
**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥**

(ಋ. ಸಂ. ೧೦-೭೧-೧೧)

ಇಲ್ಲಿ ತ್ವಃ ಎಂಬ ಪದವು ಏಕಃ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಆದ್ದರಿಂದ ಉಷಸ್ಸು ಎಂಬುವದು ತಾನು ಒಂದೇ ಆಗಿದ್ದಾಗ್ಯೂ ಕೆಲಸಮಾಡದಿರುವ ಸ್ವಭಾವದಿಂದ ವಕ್ರವಾಗಿ ಮಲಗಿರುವವನಿಗೂ ಸಂಚರಿಸುವಂತೆ ಉತ್ಸಾಹ

ವನ್ನು ಉಂಟುಮಾಡುವುದು. ವಿಷಯೋಪಯೋಗವನ್ನು ಅನುಭವಿಸುವಂತೆ ಇನ್ನೊಬ್ಬನಿಗೆ ಇಚ್ಛೆಯನ್ನು ಉಂಟು ಮಾಡುವದು. ಮತ್ತೊಬ್ಬನು ಉಷಃಕಾಲವಾದ ಕೂಡಲೇ ಯಾಗಮಾಡಲು ಪ್ರವೃತ್ತನಾಗುವನು. ಧನಿಕನು ತನಗೆ ಬೇಕಾಗಿರುವ ಧನವನ್ನು ಸಂಗ್ರಹಮಾಡಲು ಯತ್ನವುಳ್ಳವನಾಗುವನು. ಈ ಪ್ರಕಾರವಾಗಿ ಆಯಾಯ ಜನರಿಗೆ ಅವ ರವರ ಸಂಕಲ್ಪಗಳನ್ನು ನೆರವೇರಿಸುವ ಉಷಸ್ಸು ಉಗತ್ತೆಲ್ಲದರಲ್ಲಿಯೂ ವ್ಯಾಪಿಸಿರುವುದು ಎಂದು ಅರ್ಥವು.

**ದಭ್ರಂ ಪಶದ್ಭ್ಯಃ ಉರ್ವಿಯಾ ವಿಚಕ್ಷೇ ದಭ್ರಂ—ಅಲ್ಪಂ ದಭ್ರಮರ್ಭಕಮಿತ್ಯಲ್ಪಸ್ಯ। ದಭ್ರಂ ದಭ್ನೋತೇಃ ಸುದಮ್ಭಂ ಭವತಿ। ಉಪೋಪ ಮೇ ಪರಾ ಮೃಶ ಮಾ ಮೇ ದಭ್ರಾಣಿ ಮನ್ಯಥಾಃ। ಸರ್ವಾಹಮಸ್ಮಿ ರೋಮಶಾ ಗಾಂಧಾರೀಣಾಮಿವಾವಿಕಾ** (ಋ. ಸಂ. ೧-೧೨೬-೭) ದಭ್ರ ಶಬ್ದವು (ನಿ.೩-೨೦) ಅಲ್ಪವೆಂಬ ಅರ್ಥವುಳ್ಳದ್ದೆಂದು ಯಾಸ್ಕರು ಅರ್ಥವನ್ನು ವಿವರಿಸಿ **ಉಪೋಪ ಮೇ** ಎಂಬ ಋಕ್ಕನ್ನು ಉದಾಹರಣೆಗಾಗಿ ಕೊಟ್ಟಿರುವರು. ಆದ್ದರಿಂದ ದಭ್ರವೆಂದರೆ ಅಲ್ಪವೆಂದು ಅರ್ಥವು. ಕತ್ತಲೆಯಿಂದ ವಸ್ತುಗಳ ಸ್ವರೂಪವು ಸರಿಯಾಗಿ ತಿಳಿಯದಿರುವಾಗ ಪದಾರ್ಥಗಳು ಅಲ್ಪಪರಿಮಾಣವುಳ್ಳವುಗಳಾಗಿ ತೋರುವುವು. ಹೀಗೆ ತಮಸ್ಸಿನಿಂದ ಆಚ್ಛಾದಿತವಾಗಿ ರುವ ಜಗತ್ತು ಅಲ್ಪ ಪ್ರಮಾಣವುಳ್ಳದ್ದಾಗಿರುವುದನ್ನು ಉಷಸ್ಸು ತನ್ನ ಪ್ರಕಾಶದಿಂದ ದೊಡ್ಡದಾಗಿರುವ ಹಾಗೆ ಅದರ ನಿಜವಾದ ರೀತಿಯನ್ನು ವ್ಯಕ್ತಗೊಳಿಸುವುದು.

॥ ವ್ಯಾಕರಣಪ್ರಕ್ರಿಯಾ ॥

**ಜಿಹ್ಮಶ್ಯೇ**—ಶೀಙ್ ಸ್ವಪ್ನೇ. ಧಾತು. ಜಿಹ್ಮಂ ಶೇತೇ ಇತಿ ಜಿಹ್ಮಶೀಃ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ ೬-೨-೧೩೯) ಎಂಬುದ ರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನ ಙೇ ಪರವಾದಾಗ **ಏರನೇಕಾಚಃ**—(ಪಾ ಸೂ.— ೬-೪-೮೨) ಎಂಬುದರಿಂದ ಯಣ್. ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ ಅದರ ಪರದಲ್ಲಿ ವಿಭಕ್ತಿ ಬಂದುದ ರಿಂದ ಅದಕ್ಕೆ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತ ಸ್ವರ ಬರುತ್ತದೆ.

**ಚರಿತವೇ**—ಚರ ಗತಿಭಕ್ಷಣಯೋಃ ಧಾತು. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ**— (ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಸೂತ್ರದಿಂದ ಇಡಾ ಗಮ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದ ಕೃದಂತವಾದುದರಿಂದ **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಆಭೋಗಯೇ**—ಆಭೋಗ ಶಬ್ದ. ಚತುರ್ಥೀ ಏಕವಚನ ಪರವಾದಾಗ ಛಾಂದಸವಾಗಿ ಯಕಾರ ಅಂತಾ ಗಮವಾಗಿ ಬರುತ್ತದೆ. ಅಥವಾ ಆಙ್ ಉಪಸರ್ಗ. ಭುಜ ಪಾಲನಾಭ್ಯವಹಾರಯೋಃ ಧಾತು. **ಉಣಾದಯೋ ಬಹುಲಂ** ಎಂಬಲ್ಲಿ ಬಹುಲ ವಚನವಿರುವುದರಿಂದ ಔಣಾದಿಕವಾದ ಕಿಪ್ರತ್ಯಯ. ತತ್ಸನ್ನಿಯೋಗದಿಂದ ಧಾತುವಿನ ಜಕಾರಕ್ಕೆ ಕುತ್ವ. ಆಭೋಗಿ ಶಬ್ದವಾಗುತ್ತದೆ. ಇದಕ್ಕೆ ಚತುರ್ಥೀವಿಭಕ್ತಿ ಙೇ ಪರವಾದಾಗ **ಘೇಙಿತಿ** (ಪಾ. ಸೂ. ೭-೩-೧೧೧) ಎಂಬುದರಿಂದ ಗುಣ. ಅಯಾದೇಶ. ಪ್ರತ್ಯಯಸ್ವರದಿಂದ ಗಕಾರೋತ್ತರಾಕಾರವು ಉದಾತ್ತ ವಾಗುತ್ತದೆ. ಗತಿ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಇಷ್ಟಯೇ**—ಇಷು ಇಚ್ಛಾಯಾಂ. ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿನ್ ಪ್ರತ್ಯಯ. ಷಕಾರ ನಿಮಿತ್ತವಾಗಿ ಪ್ರತ್ಯಯಕ್ಕೆ ಷ್ಟುತ್ವ. ಚತುರ್ಥೀ ಏಕವಚನಾಂತರೂಪ.

**ರಾಯೇ— ಊಡಿದಂ ಪದಾದಿ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪಶ್ಯದ್ಭ್ಯಃ**—ದೃಶಿರ್ ಪ್ರೇಕ್ಷಣೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಶ್ಯಾದೇಶ. ಶಪ್ ಲಸಾರ್ವಧಾತುಕ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಚತುರ್ಥೀ ಏಕವಚನಾಂತರೂಪ.

**ಉರ್ವಿಯಾ**—ಉರ್ವೀ ಶಬ್ದ. ಇದಕ್ಕೆ ಪ್ರಥಮಾ ಸು ಪರವಾದಾಗ ಅದಕ್ಕೆ **ಇಯಾಡಿಯಾಜೀಕಾರಾಣಾಮುಪಸಂಖ್ಯಾನಂ** (ಪಾ. ಸೂ. ೭-೧-೩೯-೧) ಎಂಬ ವಚನದಿಂದ ಡಿಯಾಜಾದೇಶ. ಡಿತ್ವ ಸಾಮರ್ಥ್ಯದಿಂದ ಟಿಗೆ (ಈ) ಲೋಪ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಿಚಕ್ಷೇ**—ವಿ ಉಪಸರ್ಗ. ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ವಿ ಉಪಪದವಾಗಿರುವಾಗ **ಸಂಪದಾದಿಭ್ಯಃ ಕ್ವಿಪ್** (ಪಾ. ೨೨-೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ ವಿಚಕ್ಷ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬---೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ವಿಶ್ವಾ**—ನಪುಂಸಕದಲ್ಲಿ ಜಸಿಗೆ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. || ೫ ||



|| ಸಂಹಿತಾಪಾಠಃ ||

ಕ್ಷತ್ರಾಯ ತ್ವಂ ಶ್ರವಸೇ ತ್ವಂ ಮಹೀಯಾ ಇಷ್ಟಯೇ ತ್ವಮ-
ರ್ಥಮಿವ ತ್ವಮಿತ್ಯೈ ।
ವಿಸದೃಶಾ ಜೀವಿತಾಭಿಪ್ರಚಕ್ಷ ಉಷಾ ಅಜೀಗರ್ಭುವನಾನಿ
ವಿಶ್ವಾ || ೬ ||

॥ ಪದಪಾಠಃ ॥

ಕ್ಷತ್ರಾಯ । ತ್ವಂ । ಶ್ರವಸೇ । ತ್ವಂ । ಮಹೀಯೈ । ಇಷ್ಟಯೇ । ತ್ವಂ । ಅರ್ಥಂ-
ಽಇವ । ತ್ವಂ । ಇತ್ಯೈ ।

ವಿಽಸದೃಶಾ । ಜೀವಿತಾ । ಅಭಿಽಪ್ರಚಕ್ಷೇ । ಉಷಾಃ । ಅಜೀಗಃ । ಭುವನಾನಿ ।
ವಿಶ್ವಾ ॥ ೬ ॥

॥ ಸಾಯಣಭಾಷ್ಯಂ ॥

ಕ್ಷತ್ರಾಯ । ಧನನಾಮೈತತ್ । ಧನಾರ್ಥಂ ತ್ವಮೇಕಂ ಪ್ರತ್ಯುಷಾ ವ್ಯುಚ್ಛಂತೀತಿ ಶೇಷಃ । ತಥಾ ಶ್ರವಸೇಽನ್ನಾರ್ಥಂ ತ್ವಮೇಕಂ ಪ್ರತಿ ಮಹೀಯೈ ಮಹತ್ಯೈ ಇಷ್ಟಯೇಽಗ್ನಿಷ್ಟೋಮಾದಿಮಹಾಯಜ್ಞಾರ್ಥಂ ತ್ವಮೇಕಂ ಪ್ರತಿ ವ್ಯುಚ್ಛಂತೀ । ತಥಾರ್ಥಮಿವಾಪೇಕ್ಷಿತಮರ್ಥಂ ಪ್ರತೀತ್ಯೈ ಗಮನಾರ್ಥಂ ತ್ವಮೇಕಂ ಪ್ರತಿ ವ್ಯುಚ್ಛಂತೀ । ಅಪಿ ಚ ವಿಸದೃಶಾ ವಿಲಕ್ಷಣಾನಿ ನಾನಾರೂಪಾಣಿ ಜೀವಿತಾ ಜೀವಿತಾನಿ ಜೀವನೋಪಾಯಭೂತಾನಿ ಕೃಷಿವಾಣಿಜ್ಯಾದೀನ್ಯಭಿಪ್ರಚಕ್ಷ ಆಭಿಮುಖ್ಯೇನ ಪ್ರಕಾಶಯಿತುಂ ವ್ಯುಚ್ಛಂತ್ಯುಷಾಃ ಸರ್ವಾಣಿ ಭೂತಜಾತಾನಿ ತಮಸಾ ನಿಗೀರ್ಣಾನ್ಯಜೀಗಃ । ಪ್ರಕಾಶನೇನೋದ್ಗೀರ್ಣಾನೀವಾಕರೋತ್ ॥ ತ್ವಂ । ತ್ವಸಮಸಿಮನೇಮೇತ್ಯನುಚ್ಚಾನಿ । ಫಿ. ೪-೧೦ । ಇತಿ ಸರ್ವಾನುದಾತ್ತತ್ವಂ । ಮಹೀಯೈ । ಮಹ್ಯೈ । ಮಹೇರಿನ್ಸರ್ವಧಾತುಭ್ಯ ಇತೀನ್ಪ್ರತ್ಯಯಃ । ಕೃದಿಕಾರಾದಕ್ತಿನ ಇತಿ ಙೀಷ್ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಛಾಂದಸ ಈಕಾರೋಪಜನಃ । ಯದ್ವಾ ಮಹೀಶಬ್ದಾದುತ್ತರಸ್ಯ ಚತುರ್ಥ್ಯೇಕವಚನಸ್ಯ ಯಾಡಾಪಃ । ಪಾ. ೭-೩-೧೧೩ । ಇತಿ ವ್ಯತ್ಯಯೇನ ಯಾಡಾಗಮಃ । ಛಾಂದಸಮಂತೋದಾತ್ತತ್ವಂ । ವಿಸದೃಶಾ । ತ್ಯದಾದಿಷು ದೃಶೋಽನಾಲೋಚನೇ ಕಞ್ಚೇತ್ಯತ್ರ ಸಮಾನಾನ್ಯಯೋಶ್ಚ । ಪಾ. ೩-೨-೬೦-೧ । ಇತಿ ವಚನಾದ್ದೃಶೇಃ ಕಞ್ । ಸಮಾನಸ್ಯ ಛಂದಸೀತಿ ಸಭಾವಃ । ವಿಗತಸಾದೃಶ್ಯಾನಿ ವಿಸದೃಶಾನಿ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಭಿಪ್ರಚಕ್ಷೇ । ಚಕ್ಷೇಸ್ತುಮರ್ಥೇ ಸೇಸೇನಿತಿ ಸೇನ್ಪ್ರತ್ಯಯಃ । ಸ್ಕೋಃ ಸಂಯೋಗಾದ್ಯೋರಿತಿ ಕಲೋಪಃ ಕತ್ವಷತ್ವೇ ॥

॥ ಪ್ರತಿಪದಾರ್ಥ ॥

**ತ್ವಂ**—ಒಬ್ಬನನ್ನು । **ಕ್ಷತ್ರಾಯ**—ದ್ರವ್ಯಕ್ಕೋಸ್ಕರವೂ । **ತ್ವಂ**—ಮತ್ತೊಬ್ಬನನ್ನು । **ಶ್ರವಸೇ**—ಅನ್ನಕ್ಕೋಸ್ಕರವೂ । **ತ್ವಂ**—ಮತ್ತೊಬ್ಬನನ್ನು । **ಮಹೀಯೈ**—ದೊಡ್ಡ ದೊಡ್ಡ (ಅಗ್ನಿಷ್ಟೋಮಾದಿ) । **ಇಷ್ಟಯೇ**—ಯಾಗಗಳಿಗೋಸ್ಕರವೂ । **ತ್ವಂ**—ಮತ್ತೊಬ್ಬನನ್ನು । **ಅರ್ಥಮಿವ**—ಅಭೀಪ್ಸಿತವಾದ ಪದಾರ್ಥವನ್ನು ಕುರಿತು । **ಇತ್ಯೈ**—ಹೊರಡುವುದಕ್ಕೋಸ್ಕರವೂ । **ವಿಸದೃಶಾ**—ನಾನಾ ವಿಧವಾದ । **ಜೀವಿತಾ**—ಉದ್ಯೋಗಗಳನ್ನು । **ಅಭಿಪ್ರಚಕ್ಷೇ**—ಚೆನ್ನಾಗಿ ಪ್ರಕಾಶಗೊಳಿಸುವುದಕ್ಕೂ (ಪ್ರೇರಿಸುತ್ತಾ) । **ಉಷಾಃ**—ಉಷಸ್ಸು । **ವಿಶ್ವಾ ಭುವನಾನಿ**—(ಅಂಧಕಾರಾವೃತವಾದ) ಸಮಸ್ತ ಪ್ರಪಂಚವನ್ನೂ । **ಅಜೀಗಃ**—ಪುನಃ ವ್ಯಕ್ತಪಡಿಸುತ್ತಾಳೆ.

॥ ಭಾವಾರ್ಥ ॥

ಜನರು, ದ್ರವ್ಯ, ಅನ್ನ, ಯಾಗಾದಿಗಳು ಮತ್ತಿತರ ಇಷ್ಟಾರ್ಥಗಳು, ಇವುಗಳ ಸಾಧನೆಗಾಗಿ ಮತ್ತು ಅವರವರ ಉದ್ಯೋಗಗಳನ್ನು ಅವಲಂಭಿಸುವುದಕ್ಕಾಗಿಯೂ, ಉಷಸ್ಸು, ಜನರನ್ನು ಪ್ರೇರಿಸುತ್ತಾ (ಅಂಧಕಾರಾವೃತವಾಗಿ ನಷ್ಟಪ್ರಾಯವಾಗಿದ್ದ) ಸಮಸ್ತ ಜಗತ್ತನ್ನೂ ವ್ಯಕ್ತಪಡಿಸುತ್ತಾಳೆ.

English Translation.

The dawn rouses one man to acquire wealth, another to earn food, another to achieve greatness, another to sacrifices, another to his own (persuits), another to activity, and lights all men to their various means of maintaining life. Ushas has given back all the regions.

॥ ವಿಶೇಷವಿಷಯಗಳು ॥

**ಕ್ಷತ್ರಾಯ—ಮಘಂ, ರೇಕ್ಣಃ** ಎಂಬ ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ **ಕ್ಷತ್ರ** ಶಬ್ದವು ಧನವಾಚಿಯಾಗಿರುವುದು. ಧನವನ್ನು ಹೊಂದುವುದಕ್ಕಾಗಿ ಎಂದು ಅರ್ಥವು.

**ಶ್ರವಸೇ—ಶ್ರವಸ್** ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಧನವಾಚಿಯಾಗಿರುವುದು. ಈ ಶಬ್ದವು ಯಶಸ್ಸು, ಅಥವಾ **ಕೀರ್ತಿ** ಎಂಬ ಅರ್ಥದಲ್ಲಿಯೂ, **ಅನ್ನ** ಎಂಬ ಅರ್ಥದಲ್ಲಿಯೂ ಪ್ರಯುಕ್ತವಾಗಿರುತ್ತದೆ.

**ಪ್ರ ವೋ ಮಹೇ ಮನ್ದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾಭುವೇ ।**
**ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ॥**

(ಋ. ಸಂ. ೧೦-೫೦-೧).

ಎಂಬ ಋಕ್ಕಿನಲ್ಲಿ—**ಮಹಚ್ಚ ಶ್ರವಣೀಯಂ ಯಶಃ** (ನಿ. ೧೧-೧೦) **ಶ್ರವಸ್** ಶಬ್ದವು ಕೀರ್ತಿವಾಚಕವಾಗಿರುವುದು.

**ಅಮಂದಾನ್ತ್ಸ್ತೋಮಾನ್ ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।**

**ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥**

(ಋ. ಸಂ. ೧-೧೨೬-೧).

ಇಲ್ಲಿಯೂ—**ಶ್ರವಃ ಪ್ರಶಂಸಾಂ ಇಚ್ಛಮಾನಃ** (ನಿ. ೯-೧೧) ಎಂದರೆ **ಶ್ರವಸ್** ಶಬ್ದವು ಕೀರ್ತಿವಾಚಕವಾಗಿರುತ್ತದೆ

**ಉತ ಸ್ಮೈನಂ ವಸ್ತ್ರಮಥಿಂ ನ ತಾಯುಮನು ಕ್ರೋಶನ್ತಿ ಕ್ಷಿತಯೋ ಭರೇಷು ।**

**ನೀಚಾಯಮಾನಂ ಜಸುರಿಂ ನ ಶ್ಯೇನಂ ಶ್ರವಶ್ಚಾಚ್ಛಾ ಪಶುಮಚ್ಚ ಯೂಥಮ್ ॥**

(ಋ. ಸಂ. ೪-೩೮-೫).

ಇಲ್ಲಿಯೂ ಕೂಡ—**ಶ್ರವಶ್ಚಾಚ್ಛಾ ಪಶುಮಚ್ಚ ಯೂಥಂ । ಶ್ರವಶ್ಚಾಪಿ ಪಶುಮಚ್ಚ ಯೂಥಂ ಪ್ರಶಂಸಾಂ ಚ ॥** (ನಿ. ೪-೨೪) **ಶ್ರವಸ್** ಶಬ್ದವು ಕೀರ್ತಿವಾಚಕವಾಗಿರುವುದು.

**ಆಸಸ್ರಾಣಾಸಃ ಶವಸಾನಮಚ್ಛೇಂದ್ರಂ ಸುಚಕ್ರೇ ರಥ್ಯಾಸೋ ಅಶ್ವಾಃ ।**

**ಅಭಿ ಶ್ರವ ಋಜ್ಯಂತೋ ವಹೇಯುರ್ನೂ ಚಿನ್ನು ವಾಯೋರಮೃತಂ ವಿದಸ್ಯೇತ್ ॥**

(ಋ. ಸಂ. ೬-೩೭-೩).

ಇಲ್ಲಿ—**ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ ವಾಯೋಶ್ಚಾಸ್ಯ ಭಕ್ಷೋ ನ ವಿದಸ್ಯೇದಿತಿ** । (ನಿ. ೧೦-೩) **ಶ್ರವಃ** ಶಬ್ದಕ್ಕೆ ಅನ್ನವೆಂಬ ಅರ್ಥವಿರುವುದು. ಈ ಉದಾಹರಣೆಗಳಿಂದ **ಶ್ರವಸ್** ಶಬ್ದಕ್ಕೆ ಅನೇಕಾರ್ಥಗಳು ಇರುವ ಕಾರಣ, ಸಾಯಣರು ಅನ್ನಕ್ಕಾಗಿ ಎಂದು ಅರ್ಥವನ್ನು ಹೇಳಿರುವರು.

**ವಿಸದೃಶಾ---ವಿಗತಸಾದೃಶ್ಯಾನಿ । ವಿಲಕ್ಷಣಾನಿ ನಾನಾರೂಪಾಣಿ ।** ಉಷಃಕಾಲವು ಪ್ರಾಪ್ತವಾದ ಕೂಡಲೆ ಧನವನ್ನು ಸಂಪಾದಿಸುವವನು, ಅನ್ನಕ್ಕಾಗಿ ಶ್ರಮಪಡುವವನು, ದೊಡ್ಡದಾದ ಯಜ್ಞವನ್ನು ಮಾಡುವವನು, ಅನೇಕ ಪ್ರಕಾರವಾಗಿರುವ ಇಷ್ಟಗಳನ್ನು ಸಾಧಿಸಲು ಅಪೇಕ್ಷಿಸುವವನು, ಜೀವನೋಪಾಯವನ್ನು ಸಾಧಿಸುವವನು ಇವರೆಲ್ಲರಿಗೂ ಉತ್ಸಾಹವೂ, ಜ್ಞಾನವೂ, ಉಂಟಾಗುವುದು. ಇದು ಉಷಸ್ಸಿನ ಪ್ರಭಾವವಾಗಿರುವ ಕಾರಣ. ಎಲ್ಲಾ ಲೋಕಗಳನ್ನೂ ಉಷಸ್ಸು ಎಚ್ಚರಗೊಳಿಸುತ್ತಿರುವುದು ಎಂದು ಅರ್ಥವು. ಪ್ರಾತಃಕಾಲವಾಗಿ ಬೆಳಕಾದ ಕೂಡಲೆ ಜನರು ನಾನಾವಿಧವಾದ ಅವರವರ ಕೆಲಸಗಳಲ್ಲಿ ಪ್ರವೃತ್ತರಾಗುವರು. ಇದೆಲ್ಲವೂ ಉಷಸ್ಸಿನ ಪ್ರಭಾವವೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಕ್ಷತ್ರಾಯ—**ಕ್ಷತ್ರವೆಂಬುದು ಅವ್ಯುತ್ಪನ್ನಪ್ರಾತಿಪದಿಕ. ಧನದ ಹೆಸರು. **ಫಿಷೋಂತ ಉದಾತ್ತಃ** (ಫಿ. ಸೂ. ೧) ಎಂಬುದರಿಂದ ಅಂತೋದಾತ್ತವಾಗುತ್ತದೆ.

**ತ್ವಮ್—**ಯುಷ್ಮಚ್ಛಬ್ದ. ಪ್ರಥಮಾ ಸುವಿಗೆ ಅಮಾದೇಶ. (ಮಪರ್ಯಂತಕ್ಕೆ ತ್ವಮಾದೇಶ) ಅದಿಗೆ **ಶೇಷೇಲೋಪಃ** ಎಂಬುದರಿಂದ ಲೋಪ. **ತ್ವ ಸಮಸಿಮ ನೇಮೇತ್ಯನುಚ್ಚಾನಿ** (ಫಿ. ಸೂ. ೭೮) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ.

**ಶ್ರವಸೇ**—ಶ್ರು ಶ್ರವಣೇ ಧಾತು. ಅಸುನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಉಕಾರಕ್ಕೆ ಗುಣ. ಅವಾದೇಶ. ಚತುರ್ಥೀ ಏಕವಚನರೂಪ.

**ಮಹೀಯೈ**—ಮಹ್ಯೈ ಎಂದು ರೂಪವಾಗಬೇಕು. ಮಹ ಪೂಜಾಯಾಂ ಧಾತು. **ಸರ್ವಧಾತುಭ್ಯ ಇನ್** (ಉ. ಸೂ. ೪-೫೫೭) ಸೂತ್ರದಿಂದ ಇನ್ ಪ್ರತ್ಯಯ. ಮಹಿ ಎಂದು ರೂಪವಾಗುತ್ತದೆ. ಸ್ತ್ರೀತ್ವವಿವಕ್ಷೆಮಾಡಿದಾಗ ಇಕಾರಾಂತ ಕೃದಂತವಾದುದರಿಂದ **ಕೃದಿಕಾರಾದಕ್ತಿನಃ** (ಪಾ. ಸೂ. ೪-೧-೪೫-೧ ಗ) ಎಂಬುದರಿಂದ ಙೀಷ್ ಬರುತ್ತದೆ. ಮಹೀ ಶಬ್ದವಾಗುತ್ತದೆ. ಇದಕ್ಕೆ ಚತುರ್ಥೀ ಏಕವಚನ ಙೇ ಪರವಾದಾಗ ಆಟಾಗಮ. **ಆಟಶ್ಚ** (ಪಾ. ಸೂ. ೬-೧-೯೦) ಎಂಬುದರಿಂದ ವೃದ್ಧಿ. ಛಾಂದಸವಾಗಿ ಮಹ್ಯೈ ಈಕಾರ ಬರುತ್ತದೆ. ಮಹೀಯೈ ಎಂದು ರೂಪ ವಾಗುತ್ತದೆ. ಉದಾತ್ತ ಸ್ಥಾನದಲ್ಲಿ ಯಣಾದೇಶ ಬಂದುದರಿಂದ ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತ-ಯಣೋ ಹಲ್ಪೂರ್ವಾತ್** (ಪಾ. ಸೂ ೬-೧-೧೭೪) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ. ಅಥವಾ ಮಹೀ ಶಬ್ದದ ಪರದಲ್ಲಿರುವ ಚತುರ್ಥೀ ಏಕವಚನಕ್ಕೆ **ವ್ಯತ್ಯಯೋ ಬಹುಲಂ** ಸೂತ್ರದಿಂದ ವ್ಯತ್ಯಯವಾಗಿ **ಯಾಡಾಪಃ** (ಪಾ. ಸೂ. ೭-೩-೧೧೩) ಎಂಬುದರಿಂದ ಯಾಡಾಗಮ. ಆಗ ಛಾಂದಸವಾಗಿ ಅಂತೋದಾತ್ತಸ್ವರವನ್ನು ಹೇಳಬೇಕು.

**ಅರ್ಥಂ**—ಋ ಗತೌ ಧಾತು. ಇದಕ್ಕೆ ಔಣಾದಿಕ ಥನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಇತ್ಯೈ**—ಇಣ್ ಗತೌ ಧಾತು. ಅದಾದಿ. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಅಥವಾ ಕ್ತಿಚ್ ಪ್ರತ್ಯಯ. ಹಿಂದಿನಂತೆ ಚತುರ್ಥೀ ಏಕವಚನದಲ್ಲಿ ರೂಪವಾದಾಗ **ಉದಾತ್ತಯಣೋ ಹಲ್ಪೂರ್ವಾತ್** ಸೂತ್ರದಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ವಿಸದೃಶಾ**— **ತ್ಯದಾದಿಷು ದೃಶೋಽನಾಲೋಚನೇ ಕಞ್ಚ** (ಪಾ. ಸೂ. ೩-೨-೬೪) ಎಂಬಲ್ಲಿ **ಸಮಾನಾನ್ಯಯೋಶ್ಚ** ಎಂಬ ವಚನವಿರುವುದರಿಂದ ಸಮಾನ ಶಬ್ದ ಉಪಪದವಾಗಿರುವಾಗ, ದೃಶಿರ್ ಪ್ರೇಕ್ಷಣೇ ಧಾತುವಿಗೆ ಕಞ್ ಪ್ರತ್ಯಯ. **ಸಮಾನಸ್ಯ ಛಂದಸ್ಯಮೂರ್ಧ**—(ಪಾ. ಸೂ. ೬-೩-೮೪) ಎಂಬುದರಿಂದ ಸಮಾನ ಶಬ್ದಕ್ಕೆ ಸಭಾವ. ಸದೃಶ ಎಂದು ರೂಪವಾಗುತ್ತದೆ. ವಿಗತ ಸಾದೃಶ್ಯಾನಿ ವಿಸದೃಶಾನಿ ನಪುಂಸಕದಲ್ಲಿ ಜಸ್ಸಿಗೆ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ. ಬಹುವ್ರೀಹಿ ಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. (ಹೀಗೆಯೇ ಜೀವಿತಾನಿ ಎಂದು ರೂಪವಾದಾಗ ಶಿಗೆ ಲೋಪಬಂದು ಜೀವಿತಾ ಎಂದು ರೂಪವಾಗಿದೆ.)

**ಅಭಿ ಪ್ರಚಕ್ಷೇ**—ಅಭಿ ಉಪಸರ್ಗ. ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಪ್ರಕಾಶಾರ್ಥದಲ್ಲಿ ಪ್ರಯುಕ್ತವಾಗಿದೆ. ತುಮನರ್ಥ ತೋರುವಾಗ **ತುಮರ್ಥೇ ಸೇಸೇನಸೇ** (ಪಾ. ಸೂ. ೩-೪-೯) ಎಂಬುದರಿಂದ ಸೇನ್ ಪ್ರತ್ಯಯ. **ಸ್ಕೋಃ ಸಂಯೋಗಾದ್ಯೋರಂತೇ ಚ** (ಪಾ. ಸೂ. ೮-೨-೨೯) ಎಂಬುದರಿಂದ ಧಾತುವಿನ ಕಕಾರಕ್ಕೆ ಲೋಪ. ಚಷ್+ಸೇ ಎಂದಿರುವಾಗ **ಷಢೋಃ ಕಃ ಸಿ** (ಪಾ. ಸೂ. ೮-೨-೪೧) ಎಂಬುದರಿಂದ ಷಕಾರಕ್ಕೆ ಕತ್ವ. ಕಕಾರನಿಮಿತ್ತವಾಗಿ ಪ್ರತ್ಯಯ ಸಕಾರಕ್ಕೆ **ಆದೇಶ ಪ್ರತ್ಯಯಯೋಃ** ಎಂಬುದರಿಂದ ಷತ್ವ. ಅಭಿಚಕ್ಷೇ ಎಂದು ರೂಪವಾಗುತ್ತದೆ. **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಏಜಂತವಾದ ಕೃದಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಏಷಾ ದಿವೋ ದುಹಿತಾ ಪ್ರತ್ಯದರ್ಶಿ ವ್ಯುಚ್ಛಂತೀ ಯುವತಿಃ
ಶುಕ್ರವಾಸಾಃ ।
ವಿಶ್ವಸ್ಯೇಶಾನಾ ಪಾರ್ಥಿವಸ್ಯ ವಸ್ವ ಉಷೋ ಅದ್ಯೇಹ ಸುಭಗೇ
ವ್ಯುಚ್ಛ ॥ ೭ ॥

॥ ಪದಪಾಠಃ ॥

**ಏಷಾ । ದಿವಃ । ದುಹಿತಾ । ಪ್ರತಿ । ಅದರ್ಶಿ । ವಿಽಉಚ್ಛಂತೀ । ಯುವತಿಃ ।**
**ಶುಕ್ರಽವಾಸಾಃ ।**
**ವಿಶ್ವಸ್ಯ । ಈಶಾನಾ । ಪಾರ್ಥಿವಸ್ಯ । ವಸ್ವಃ । ಉಷಃ । ಅದ್ಯ । ಇಹ । ಸುಽಭಗೇ ।**
**ವಿ । ಉಚ್ಛ ॥ ೭ ॥**

॥ ಸಾಯಣಭಾಷ್ಯಂ ॥

ದಿವೋ ದುಹಿತಾ ವ್ಯೋಮ್ನೋ ದುಹಿತೃಸ್ಥಾನೀಯಾ । ತಸ್ಯ ಹಿ ಪೂರ್ವಾರ್ಧ ಉಷಾ ಉತ್ಪದ್ಯತೇ । ಸೈಷಾ ವ್ಯುಚ್ಛಂತೀ ತಮೋ ವರ್ಜಯಂತೀ ಪ್ರತ್ಯದರ್ಶಿ । ಸರ್ವೈಃ ಪ್ರಾಣಿಭಿರ್ದೃಷ್ಟಾಭೂತ್ । ಕೀದೃಶೀ ಸಾ । ಯುವತಿರ್ಯೋಜಯಿತ್ರೀ ಫಲಾನಾಂ ಪುರುಷೈಃ ಪ್ರಾಪಯಿತ್ರೀ ನಿತ್ಯಯೌವನೋಪೇತಾ ವಾ ಶುಕ್ರವಾಸಾಃ ಶ್ವೇತವಸನಾ ನಿರ್ಮಲದೀಪ್ತಿರ್ವಾ ತಥಾ ವಿಶ್ವಸ್ಯ ಸರ್ವಸ್ಯ ಪಾರ್ಥಿವಸ್ಯ ಪೃಥಿವ್ಯಾಃ ಸಂಬಂಧಿನೋ ವಸ್ವೋ ಧನಸ್ಯೇಶಾನೇಶ್ವರೀ । ಹೇ ಸುಭಗೇ ಶೋಭನಧನ ಉಷಃ ತಾದೃಶೀ ತ್ವಮದ್ಯಾಸ್ಮಿನ್ಕಾಲ ಇಹಾಸ್ಮಿನ್ದೇವಯಜನದೇಶೇ ವ್ಯುಚ್ಛ । ತಮಾಂಸಿ ವಿವಾಸಯ । ವರ್ಜಯೇತ್ಯರ್ಥಃ ॥ ದಿವಃ ಊಡಿದಮಿತಿ ವಿಭಕ್ತೇರುದಾತ್ತತ್ವಂ । ವ್ಯುಚ್ಛಂತೀ । ಉಚ್ಛೀ ವಿವಾಸೇ । ವಿವಾಸೋ ವರ್ಜನಂ । ತೌದಾದಿಕಃ । ಯುವತಿಃ । ಯೂನಸ್ತಿಃ । ಪಾ. ೪-೧-೭೭ । ಶುಕ್ರವಾಸಾಃ । ವಸ ಆಚ್ಛಾದನೇ । ವಸ್ತೇ ಸರ್ವಮಾಚ್ಛಾದಯತೀತಿ ಪ್ರಕಾಶೋ ವಾಸಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಈಶಾನಾ । ಈಶ ಐಶ್ವರ್ಯೇ । ಅದಾದಿತ್ವಾಚ್ಛಪೋ ಲುಕ್ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಪಾರ್ಥಿವಸ್ಯ । ಪೃಥಿವ್ಯಾ ಞಾಞಾವಿತಿ ಪ್ರಾಗ್ದೀವ್ಯತೀಯೋಽಞ್ಪ್ರತ್ಯಯಃ । ವಸ್ವಃ । ಲಿಂಗವ್ಯತ್ಯಯಃ । ಘೇರ್ಙಿತೀತಿ ಗುಣಸ್ಯ ಜಸಾದಿಷು ಛಂದಸಿ ವಾವಚನಮಿತಿ ವಿಕಲ್ಪಿತತ್ವಾದಭಾವೇ ಯಣಾದೇಶಃ ॥

॥ ಪ್ರತಿಪದಾರ್ಥ ॥

**ಯುವತಿಃ**—ಮನುಷ್ಯರಿಗೆ ಫಲಗಳನ್ನು ದೊರಕಿಸುವವಳೂ ಅಥವಾ ನಿತ್ಯಯೌವನಯುಕ್ತಳೂ । **ಶುಕ್ರವಾಸಾಃ**—ಶ್ವೇತವಸ್ತ್ರ ಧಾರಿಣಿಯೂ ಅಥವಾ ಶುಭ್ರಕಾಂತಿಯುತಳೂ । **ವಿಶ್ವಸ್ಯ**— ಸಮಸ್ತವಾದ । **ಪಾರ್ಥಿವಸ್ಯ**—ಭೂಸಂಬಂಧವಾದ । **ವಸ್ವಃ**—ದ್ರವ್ಯಕ್ಕೆ । **ಈಶಾನಾ**—ಈಶ್ವರಿಯೂ ಆದ । **ದಿವೋ ದುಹಿತಾ**—ಅಂತರಿಕ್ಷದ ಪುತ್ರಿಯಾದ । **ಏಷಾ**—ಈ ಉಷಸ್ಸು । **ವ್ಯುಚ್ಛಂತೀ**—ತಮಸ್ಸನ್ನು ನಿವಾರಿಸುವವಳಾಗಿ । **ಪ್ರತ್ಯದರ್ಶಿ**—ಪ್ರಾಣಿಗಳಿಗೆ ಗೋಚರಿಸಿದಳು । **ಸುಭಗೇ**—ಮಂಗಳಕರವಾದ ಧನಯುಕ್ತಳಾದ । **ಉಷಃ**—ಎಲೈ ಉಷೋ ದೇವತೆಯೇ (ನೀನು) । **ಅದ್ಯ**—ಈಗ । **ಇಹ**—ಈ ಯಜ್ಞದಲ್ಲಿ । **ವ್ಯುಚ್ಛ**—ತಮಸ್ಸನ್ನು ನಿವಾರಿಸು.

॥ ಭಾವಾರ್ಥ ॥

ನಿರ್ಮಲಕಾಂತಿಯುಕ್ತಳೂ, ನಿತ್ಯ ಯೌವನಯುಕ್ತಳೂ, ಭೂಸಂಬಂಧವಾದ ಸಮಸ್ತ ಐಶ್ವರ್ಯಕ್ಕೂ ಯಜಮಾನಿಯೂ, ಅಂತರಿಕ್ಷಕ್ಕೆ ದುಹಿತೃಪ್ರಾಯಳೂ ಆದ ಉಷೋದೇವತೆಯು ತಮೋ ನಿವಾರಕಳಾಗಿ ಎಲ್ಲರಿಗೂ ಕಾಣಿಸುತ್ತಾಳೆ. ಇಂತಹ ಎಲೈ ಉಷೋ ದೇವತೆಯೇ ಇಲ್ಲಿ ಈ ಯಾಗಶಾಲೆಯಲ್ಲಿ, ಈಗ ಅಂಧಕಾರವನ್ನು ಹೋಗಲಾಡಿಸು.

## English Translation.

The daughter of heaven, young, white-robed, the mistress of all earthly treasure, is beheld dissipating the darkness. Auspicious Ushas, shine upon us to-day in this (hall of sacrifice.)

॥ ವಿಶೇಷವಿಷಯಗಳು ॥

**ದಿವಃ ದುಹಿತಾ—ವ್ಯೋಮ್ನೋ ದುಹಿತೃಸ್ಥಾನೀಯಾ ।** ಉಷೋ ದೇವತೆಯು ನಿತ್ಯ ಪ್ರಕಾಶವುಳ್ಳ ಸ್ವರ್ಗಕ್ಕೆ ಪುತ್ರಿಯಾಗಿರುವಳು. ದುಹಿತೃಶಬ್ದದ ಅರ್ಥವನ್ನು **ದುಹಿತಾ ದುರ್ಹಿತಾ ದೂರೇ ಹಿತಾ ದೋಗ್ಧೇರ್ವಾ** (ನಿ. ೩-೪) ಸ್ತ್ರೀಯು ಯಾವನಿಗೆ ದಾನವಾಗಿ ಕೊಡಲ್ಪಡುವಳೋ ಅವನಿಗೆ ದುಃಖವನ್ನೂ ಹಿತವನ್ನೂ ಉಂಟುಮಾಡುವಳು, ಅಥವಾ ತಂದೆತಾಯಿಗಳಿಗೆ ಯಾವಾಗಲೂ ದೂರದಲ್ಲಿರುವವಳಾದರೂ ಹಿತವನ್ನು ಕೋರುವವಳಾದ ಕಾರಣ ದುಹಿತಾ ಎಂದು ಹೆಸರನ್ನು ಹೊಂದಿ ಇರುವಳು ಎಂದು ಯಾಸ್ಕರು ವಿವರಿಸಿರುವರು. ಸ್ವರ್ಗವು ಬಹಳ ಪ್ರಕಾಶವುಳ್ಳದ್ದಾಗಿ ಇರುವುದರಿಂದ ಸ್ವರ್ಗದ ಪೂರ್ವಾರ್ಧದಿಂದ ಉತ್ಪನ್ನವಾಗುವ ಉಷಸ್ಸೂ ಪ್ರಕಾಶವುಳ್ಳದ್ದಾಗಿ ಇತರ ಪದಾರ್ಥಗಳನ್ನೂ ಪ್ರಕಾಶಗೊಳಿಸುತ್ತಾ ಪ್ರಾಣಿಗಳಿಗೂ ಜ್ಞಾನರೂಪವಾದ ಪ್ರಕಾಶವನ್ನು ಉಂಟುಮಾಡುವುದರಿಂದ ಸ್ವರ್ಗದ ಪುತ್ರಿಯಾಗಿರುವಳು ಎಂದು ಅರ್ಥವನ್ನು ವಿವರಿಸಿರುವರು.

**ಶುಕ್ರವಾಸಾಃ—ವಸ್ತೇ ಸರ್ವಮಾಚ್ಛಾದಯತೀತಿ ಪ್ರಕಾಶೋ ವಾಸಃ । ಶ್ವೇತವಸನಾ ನಿರ್ಮಲದೀಪ್ತಿರ್ವಾ ।** ಎಲ್ಲವನ್ನೂ ಮುಚ್ಚುವುದರಿಂದ ಹೊದೆಯುವ, ಉಡುವ ವಸ್ತ್ರವು ವಾಸಃ ಎಂಬ ಪದಕ್ಕೆ ಅರ್ಥವಾಗಿರುವುದು. ಉಷಸ್ಸು ಯಾವ ವಿಧವಾದ ಕೊಳೆಯೂ ಇಲ್ಲದಿರುವುದರಿಂದ ಶುಭ್ರವಾದ ಕಾಂತಿಯನ್ನು ಅತಿಶಯವಾಗಿ ಹೊಂದಿರುವ ಕಾರಣ ಬಿಳಿಯ ಬಣ್ಣದ ವಸ್ತ್ರವುಳ್ಳದ್ದೆಂದೂ, ಅಥವಾ ಶುಭ್ರವಾದ ಕಾಂತಿಯುಳ್ಳದ್ದೆಂದೂ ಇಲ್ಲಿ ವರ್ಣಿತವಾಗಿರುತ್ತದೆ.

**ಯುವತಿಃ—ಯೋವಯಿತ್ರೀ ಫಲಾನಾಂ ಪುರುಷೈಃ ಪ್ರಾಪಯಿತ್ರೀ । ನಿತ್ಯಯೌವ್ವನೋಪೇತಾ ವಾ ।** ಪ್ರಯೋಜನವನ್ನೂ ಅಥವಾ ಫಲವನ್ನೂ ಆಯಾಯ ಪುರುಷರು ಹೊಂದುವಂತೆ ವರ್ತಿಸುವವಳು. ಅಥವಾ ಯಾವಾಗಲೂ ಯೌವನದಿಂದ ಕೂಡಿದವಳು. ಯುವತಿಯಾಗಿರುವವಳು ಎಂದು ಅರ್ಥವು.

**ಸುಭಗೇ—ಶೋಭನಧನವತಿ ।** ಉತ್ತಮವಾದ ಧನವನ್ನು ಹೊಂದಿರುವವಳು **ಭಗ** ಶಬ್ದವು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದು.

**ನೂನಂ ಸಾ ತೇ ಪ್ರತಿ ವರಂ ಜರಿತ್ರೇ ದುಹೀಯದಿಂದ್ರ ದಕ್ಷಿಣಾ ಮಘೋನೀ ।**
**ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ॥**

(ಋ. ಸಂ. ೨-೧೧-೨೧).

ಇಲ್ಲಿ **ಭಗೋ ನಃ । ಧನಂ ನೋ ಅಸ್ತು** ಎಂದು ಭಗಶಬ್ದಕ್ಕೆ ಧನವೆಂದು ಅರ್ಥವನ್ನೂ ಹೇಳಿರುವರು. ಭಗ ಶಬ್ದವು ಸೂರ್ಯ, ಧರ್ಮ, ಧನ, ಸ್ತ್ರೀ ಅವಯವ, ಎಂಬ ಅರ್ಥಗಳನ್ನು ಬೋಧಿಸುವುದಾಗಿರುವುದು. ಇಲ್ಲಿ ಧನವೆಂದು ಅರ್ಥವನ್ನು ಅಂಗೀಕರಿಸಿ ವ್ಯಾಖ್ಯಾನಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ದಿವಃ ಊಡಿದಂ ಪದಾದಿ**--(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅದರ್ಶಿ**—ದೃಶಿರ್ ಪ್ರೇಕ್ಷಣೇ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಚ್ಲಿ ವಿಕರಣ ಬಂದಾಗ **ಚಿಣ್‌ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಅದಕ್ಕೆ ಚಿಣಾದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣ್ಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ವ್ಯುಚ್ಛಂತೀ**—ಉಛೀ ವಿವಾಸೇ. ಧಾತು. ತುದಾದಿ. ವಿವಾಸವೆಂದರೆ ವರ್ಜನ (ಬಿಡುವಿಕೆ) ಎಂದರ್ಥ. ಲಡರ್ಥದಲ್ಲಿ ಶತೃ ಪ್ರತ್ಯಯ. **ಛೇ ಚ** ಎಂಬುದರಿಂದ ಹ್ರಸ್ವಕ್ಕೆ ತುಕಾಗಮ ಅದಕ್ಕೆ ಶ್ಚುತ್ವದಿಂದ ಚಕಾರಾದೇಶ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಉಗಿತ್ತಾದುದರಿಂದ ನುಮಾಗಮ. ತುದಾದಿಗೆ ಶ ವಿಕರಣ ಬರುವುದರಿಂದ ವಿಕರಣಸ್ವರ ಉಳಿಯುತ್ತದೆ. ವಿ ಎಂಬ ಗತಿಯೊಡನೆ ಸಮಾಸ ವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯುವತಿಃ**—ಯುವನ್ ಶಬ್ದ. ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ **ಯೂನಸ್ತಿಃ** (ಪಾ. ಸೂ. ೪-೧-೭೭) ಎಂಬುದರಿಂದ ತಿ ಪ್ರತ್ಯಯ. **ಸ್ವಾದಿಷ್ವಸರ್ವನಾಮಸ್ಥಾನೇ** ಸೂತ್ರದಿಂದ ಪದಸಂಜ್ಞಾ ಬರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** (ಪಾ. ಸೂ ೮-೨-೭) ಎಂಬುದರಿಂದ ನಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ.

**ಶುಕ್ರವಾಸಾಃ**—ವಸ ಆಚ್ಛಾದನೇ. ಧಾತು. ವಸ್ತ್ರೇ ಸರ್ವಮಾಚ್ಛಾದಯತಿ ಇತಿ ಪ್ರಕಾಶಃ ವಾಸಃ ಘಞ್ ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಶುಕ್ರಃ ವಾಸಃ ಯಸ್ಯ ಸಃ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಈಶಾನಾ**—ಈಶ ಐಶ್ವರ್ಯೇ. ಧಾತು. ಅದಾದಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ಪ್ರಾಪ್ತ ವಾದಾಗ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಅದಕ್ಕೆ ಲುಕ್. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್** ಸೂತ್ರದಿಂದ ಟಾಪ್. ಧಾತುವು ಅನುದಾತ್ತೇತ್ತಾದುದರಿಂದ ಇದರ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

**ಪಾರ್ಥಿವಸ್ಯ**—ಪೃಥಿವ್ಯಾಃ ಇದಮ್. ಪಾರ್ಥಿವಮ್. **ಪೃಥಿವ್ಯಾ ಞಾಞೌ** (ಪಾ. ಸೂ. ೪-೧-೮೫-೨) ಎಂಬುದರಿಂದ ಪ್ರಾಗ್ದೀವ್ಯತೀಯವಾದ ಅಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ವಸ್ವಃ**—ವಸು ಶಬ್ದ ನಿತ್ಯನಪುಂಸಕ ಶಬ್ದ. **ವ್ಯತ್ಯಯೋಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಲಿಂಗವ್ಯತ್ಯಯದಿಂದ ಪುಲ್ಲಿಂಗವಾಗುತ್ತದೆ. ಇದಕ್ಕೆ ಷಷ್ಠೀಏಕವಚನ ಪರವಾದಾಗ **ಘೇರ್ಙಿತಿ** (ಪಾ. ಸೂ. ೭-೩-೧೧೧) ಎಂಬುದರಿಂದ ಗುಣವು ಪ್ರಾಪ್ತವಾದರೂ **ಜಸಾದಿಷು ಛಂದಸಿ ವಾ ವಚನಮ್** ಎಂಬ ವಚನದಿಂದ ವಿಕಲ್ಪವೆಂಬುದರಿಂದ ಇಲ್ಲಿ ಬರುವುದಿಲ್ಲ. ಆಗ ಯಣಾದೇಶ ಬರುತ್ತದೆ.

**ಸುಭಗೇ**—ಶೋಭನಂ ಭಗಂ ಯಸ್ಯಾಃ ಸಾ. ಸುಭಗಾ ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವ್ಯುಚ್ಛ**—ಉಚ್ಛಿ ವಿವಾಸೇ. ಧಾತು. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಬಂದಿರುವ ಹಿಗೆ ಲೋಪ- ಅತಿಙಂತದ ಪರದಲ್ಲಿ ಬಂದಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ಪರಾಯತೀನಾಮನ್ವೇತಿ ಪಾಥ ಆಯತೀನಾಂ ಪ್ರಥಮಾ ಶಶ್ವತೀನಾಂ ।

ವ್ಯುಚ್ಛಂತೀ ಜೀವಮುದೀರಯನ್ತ್ಯುಷಾ ಮೃತಂ ಕಂ ಚನ ಬೋಧಯಂತೀ ॥ ೮ ॥

॥ ಪದಪಾಠಃ ॥

ಪರಾ ಽ ಯತೀನಾಂ । ಅನು । ಏತಿ । ಪಾಥಃ । ಆ ಽ ಯತೀನಾಂ । ಪ್ರಥಮಾ । ಶಶ್ವತೀನಾಂ ।

ವಿ ಽ ಉಚ್ಛಂತೀ । ಜೀವಂ । ಉತ್ ಽ ಈರಯಂತೀ । ಉಷಾಃ । ಮೃತಂ । ಕಂ । ಚನ । ಬೋಧಯಂತೀ ॥ ೮ ॥

॥ ಸಾಯಣಭಾಷ್ಯಂ ॥

ಪರಾಯತೀನಾಂ ಪರಾಗಚ್ಛಂತೀನಾಮತೀತಾನಾಮುಷಸಾಂ ಸಂಬಂಧಿ ಪಾಥೋಽಂತರಿಕ್ಷೈಕದೇಶಲಕ್ಷಣಂ ಸ್ಥಾನಂ । ಪಾಥೋಽಂತರಿಕ್ಷಂ ಪಥಾ ವ್ಯಾಖ್ಯಾತಂ । ನಿ. ೬-೭ । ಇತಿ ಯಾಸ್ಕಃ । ಅದ್ಯತನ್ಯುಷಾ ಅನ್ವೇತಿ । ಅನುಗಚ್ಛತಿ । ಅತೀತಾ ಉಷಸೋ ಯಥಾ ವ್ಯುಷ್ಟಾ ಏವಮೇಷೈಷಾಪಿ ವ್ಯುಚ್ಛತೀತ್ಯರ್ಥಃ । ತಥಾಯತೀನಾಮಾಗಚ್ಛಂತೀನಾಂ ಶಶ್ವತೀನಾಂ ಬಹ್ವೀನಾಮುಷಸಾಂ ಪ್ರಥಮಾದ್ಯಾ ಭವತಿ । ಏಷಾ ಯಥಾ ವರ್ತತೇ ಏವಮೇವಾಗಾಮಿನ್ಯೋಽಪ್ಯುಷಸ ಇತ್ಯರ್ಥಃ । ತಾದೃಶೀ ವ್ಯುಚ್ಛಂತೀ ತಮೋ ವರ್ಜಯಂತೀ ಜೀವಂ ಪ್ರಾಣಿನಾಂ ಜೀವಾತ್ಮಾನಮುದೀರಯಂತೀ ಶಯನಾದೂರ್ಧ್ವಂ ಪ್ರೇರಯಂತ್ಯುಷಾ ಮೃತಂ ಸ್ವಾಪಸಮಯೇ ಪ್ರಲೀನೇಂದ್ರಿಯತ್ವಾನ್ಮೃತಮಿವ ಸಂತಂ ಕಂ ಚನ ಕಮಪಿ ಪುರುಷಂ ಬೋಧಯಂತೀ ಪುನರಿಂದ್ರಿಯಪ್ರವೇಶೇನ ಚೇತನಂ ಕುರ್ವತೀ ಪ್ರವರ್ತತ ಇತಿ ಶೇಷಃ ॥ ಪರಾಯತೀನಾಂ । ಇಣ್ ಗತೌ । ಲಟಃ ಶತೃ । ಇಣೋ ಯಣ್ । ಉಗಿತಶ್ಚೇತಿ ಙೀಪ್ । ವ್ಯತ್ಯಯೋ ಬಹುಲಮಿತಿ ನಾಮ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಉಷಾಃ**—ಉಷಸ್ಸು । **ಪರಾಯತೀನಾಂ**—ಕಳೆದುಹೋದ ಉಷಃಕಾಲಗಳ । **ಪಾಥಃ**—ಮಾರ್ಗವನ್ನೇ । **ಅನ್ವೇತಿ**—ಅನುಸರಿಸುತ್ತದೆ । **ಆಯತೀನಾಂ**—ಮುಂದೆ ಬರುವ । **ಶಶ್ವತೀನಾಂ**—ಅಸಂಖ್ಯಾತವಾದ ಉಷಃಕಾಲಗಳಿಗೂ । **ಪ್ರಥಮಾ**—ಮೊದಲನೆಯದು ಆಗಿರುವುದು । **ವ್ಯುಚ್ಛಂತೀ**—ತಮಸ್ಸನ್ನು ಹೋಗಲಾಡಿಸುವ ಉಷಸ್ಸು । **ಮೃತಂ**—(ನಿದ್ರೆಯಲ್ಲಿರುವುದರಿಂದ) ಮೃತಪ್ರಾಯನಾದ । **ಕಂಚನ ಜೀವಂ**—ಯಾವನೊಬ್ಬ ಪುರುಷನನ್ನು (ಅಥವಾ ಪ್ರಾಣಿಯನ್ನು) । **ಉದೀರಯಂತೀ**—ಹಾಸಿಗೆಯಿಂದ ಎಬ್ಬಿಸಿ । **ಬೋಧಯಂತೀ**—ಜಾಗೃತವಾದ ಇಂದ್ರಿಯಗಳುಳ್ಳವನನ್ನಾಗಿ (ಮಾಡುತ್ತದೆ).

॥ ಭಾವಾರ್ಥ ॥

ಈಗಿನ ಉಷಸ್ಸು, ಹಿಂದೆ ಕಳೆದುಹೋದ ಅನೇಕ ಉಷಸ್ಸುಗಳ ಮಾರ್ಗವನ್ನು ಅನುಸರಿಸುತ್ತದೆ (ಅಂದರೆ ಅವುಗಳಂತೆ ತಾನೂ ತಮೋನಿವಾರಕವಾಗಿದೆ) ಮತ್ತೂ ಮುಂದೆ ಬರುವ ಅಸಂಖ್ಯಾತ ಉಷಸ್ಸುಗಳಿಗೆ ಮೊದಲನೆಯದಾಗಿದೆ (ಮುಂದೆ ಬರುವುವೂ ಕೂಡ ಇದರಂತೆ ತಮೋನಿವಾರಕಗಳೇ ಆಗಿರುತ್ತವೆ) ಕತ್ತಲನ್ನು ಹೋಗಲಾಡಿಸಿ, ಉಷಸ್ಸು, ಪ್ರಾಣಿಗಳನ್ನು (ಹಾಸಿಗೆಯಿಂದ) ಎಬ್ಬಿಸಿ, (ನಿದ್ರಾವಸ್ಥೆಯಲ್ಲಿ ಮೃತಪ್ರಾಯರಾದ) ಪ್ರತಿಯೊಬ್ಬರಿಗೂ, ಚೇತನವನ್ನು ಕೊಡುತ್ತದೆ.

## English Translation.

Following the path of the mornings that have passed, and first of the endless mornings that are to come, Ushas, the disperser of darkness, arouses living beings, and awakens every one (that lay) as dead.

॥ ವಿಶೇಷವಿಷಯಗಳು ॥

**ಪರಾಯತೀನಾಂ ಪಾಥಃ — ಅಂತರಿಕ್ಷೈಕದೇಶಲಕ್ಷಣಂ ಸ್ಥಾನಂ ।** ಅಂತರಿಕ್ಷದ ಒಂದು ಭಾಗವೆಂಬ ಪ್ರದೇಶವು. **ಪಾಥಃ** ಎಂಬ ಶಬ್ದವು ಅನೇಕಾರ್ಥವಾಗಿರುವುದು. ಇಲ್ಲಿ ಮಾರ್ಗವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. **ಪಾಥೋಂತರಿಕ್ಷಂ ಪಥಾ ವ್ಯಾಖ್ಯಾತಂ** ಎಂದು (ನಿ. ೬-೭) ಯಾಸ್ಕರು **ಪಾಥಸ್** ಶಬ್ದವು ಅಂತರಿಕ್ಷವಾಚಕವಾಗಿ ಇರುವುದು **ಪಂಥಾಃ** ಎಂಬ ಶಬ್ದದ ನಿರ್ವಚನವನ್ನು ಮಾಡುವಾಗ ಈ ಶಬ್ದದ ಅರ್ಥವೂ ವಿವರಿಸಲ್ಪಟ್ಟಿರುವುದು ಎಂದು ಹೇಳಿ, ಈ ಶಬ್ದವು ಅನೇಕಾರ್ಥವುಳ್ಳದ್ದಾಗಿರುವುದಕ್ಕೆ ಉದಾಹರಣೆಯನ್ನು ಕೊಟ್ಟಿರುವರು—

**ಯತ್ರಾ ಚಕ್ರುರಮೃತಾ ಗಾತುಮಸ್ಮೈ ಶ್ಯೇನೋ ನ ದೀಯನ್ನನ್ವೇತಿ ಪಾಥಃ ।**
**ಪ್ರತಿ ವಾಂ ಸೂರ ಉದಿತೇ ವಿಧೇಮ ನಮೋಭಿರ್ಮಿತ್ರಾವರುಣೋತ ಹವ್ಯೈಃ ॥**

(ಋ. ಸಂ. ೭-೬೩-೫).

ಈ ಋಕ್ಕಿನಲ್ಲಿರುವ **ಪಾಥಃ** ಎಂಬ ಶಬ್ದವು ಅಂತರಿಕ್ಷವಾಚಕವಾಗಿರುತ್ತದೆ.

**ಉಪಾವಸೃಜ ತ್ಮನ್ಯಾ ಸಮಂಜನ್ದೇವಾನಾಂ ಪಾಥ ಋತುಥಾ ಹವೀಂಷಿ ।**
**ವನಸ್ಪತಿಃ ಶಮಿತಾ ದೇವೋ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ ॥**

(ಋ. ಸಂ. ೧೦-೧೧೦-೧೦).

ಇಲ್ಲಿ **ಪಾಥಃ** ಎಂದರೆ ಅನ್ನವೆಂದು ಅರ್ಥವು. ಉಷಸ್ಸು ಸೂರ್ಯೋದಯಕ್ಕಿಂತ ಪೂರ್ವಭಾವಿಯಾಗುವುದರಿಂದ ಪ್ರತಿಯೊಂದು ದಿನವೂ ಆಯಾಯ ಸೂರ್ಯೋದಯಕ್ಕಿಂತ ಮುಂಚಿತವಾಗಿ ಉದಿತವಾಗುವುದು. ಇದರಿಂದ ಇದು ಹಿಂದಿನ ಉಷಸ್ಸುಗಳಿಗಿಂತ ಈಚಿನದಾಗಿರುವುದಾದರೂ ಹಿಂದೆ ಕಳೆದುಹೋದ ಉಷಸ್ಸುಗಳಂತೆ ಅವುಗಳ ಹಾಗೆಯೇ ಕಳೆದುಹೋಗುವಕಾರಣ ಅವುಗಳು ಅಂತರಿಕ್ಷಮಾರ್ಗದಲ್ಲಿ ನಶಿಸಿಹೋಗುವುದನ್ನು ಅನುಸರಿಸಿ ಇದೂ ನಾಶವಾಗುವುದು.

**ಪ್ರಥಮಾ ಆಯತೀನಾಂ—ಆಗಚ್ಛಂತೀನಾಂ ಪ್ರಥಮಾ ಆದ್ಯಾ ಭವತಿ ।** ಆಗಾಮಿಯಾಗಿ ಮುಂದೆ ಬರುವ ಉಷಸ್ಸುಗಳೆಲ್ಲಕ್ಕೂ ಈಗತಾನೇ ಉದಯವಾಗಿ ಬರುತ್ತಿರುವ ಉಷಸ್ಸು ಮೊದಲನೆಯದಾಗಿ ಇರುತ್ತದೆ ಎಂದರ್ಥವು ಸ್ಕಂದಸ್ವಾಮಿಗಳು—**ಪರಾಯತೀನಾಂ ಪರಾಗಚ್ಛಂತೀನಾಂ ಗವಾದಿಜಾತೀನಾಮನುಗಚ್ಛತಿ ಪಂಥಾನಃ । ಆಗಚ್ಛಂತೀನಾಂ ಚ ಪ್ರಥಮಾ ಬಹ್ವೀನಾಂ ನಿತ್ಯಾನಾಂ ವಾ । ಯಾಶ್ಚ ದೂರವರ್ತಿನ್ಯೋ ಗವಾದಿಜಾತಯೋ ಯಾಶ್ಚ ಸನ್ನಿಕೃಷ್ಟಾಃ ಸರ್ವವ್ಯಾಪಿತ್ವಾತ್ ತಾಸ್ಸರ್ವಾ ಅನುಗಚ್ಛತೀತ್ಯರ್ಥಃ ।** ಉಷಸ್ಸು ಎಲ್ಲದರಲ್ಲಿಯೂ ವ್ಯಾಪಿಸಿರುವುದರಿಂದ ದೂರದಲ್ಲಿರುವ ಮತ್ತು ಹತ್ತಿರದಲ್ಲಿ ಇರುವ ನಿತ್ಯಪದಾರ್ಥಗಳ ವರ್ತನೆಯನ್ನು ಅನುಸರಿಸಿ ಇರುತ್ತದೆ. ಗವಾದಿ ಜಾತಿಗಳು ಆಯಾಯ ವ್ಯಕ್ತಿಗತವಾಗಿ ಇರುವುದಾದರೂ ವ್ಯಕ್ತಿನಾಶದಿಂದ ತಾನೂ ನಾಶವಾಗುವಂತೆ ನಾಶವಾಗುವ ವಸ್ತುಗಳ ಮಾರ್ಗವನ್ನು ಅನುಸರಿಸುವುದು. ಮತ್ತು ಅವಶಿಷ್ಟವಾದ ವಸ್ತುಗಳ ಉತ್ಪತ್ತಿಯಲ್ಲಿ ಮೊದಲನೆಯದಾಗಿ ಇರುತ್ತದೆ ಎಂದು ವ್ಯಾಖ್ಯಾನಮಾಡಿರುವರು.

**ಜೀವಮುದೀರಯಂತೀ ಮೃತಂ ಬೋಧಯಂತೀ–ಜೀವಾತ್ಮಾನಂ ಪ್ರಾಣಿನಾಂ ಶಯನಾದೂರ್ಧ್ವಂ ಪ್ರೇರಯಂತೀ ಉಷಾಃ ಮೃತಮಿವ ಸಂತಂ ಪುರುಷಂ ಪುನರಿಂದ್ರಿಯಪ್ರವೇಶೇನ ಚೇತನಂ ಕುರ್ವತೀ ಪ್ರವರ್ತತೇ ।** ಕತ್ತಲೆಯನ್ನು ಹೋಗಲಾಡಿಸುತ್ತಿರುವ ಉಷಸ್ಸು ಸುಖದಿಂದ ಹಾಸಿಗೆಯಲ್ಲಿ ಮಲಗಿರುವ ಪ್ರಾಣಿಗಳ ಜೀವಾತ್ಮನನ್ನು ಎಚ್ಚರಗೊಳಿಸುವುದೂ, ಮತ್ತು ಮೃತನಾದವನಂತೆ ನಿಶ್ಚೇಷ್ಟನಾಗಿ ಮಲಗಿ ನಿದ್ರಿಸುತ್ತಿರುವ ಯಾವ ಪ್ರಾಣಿಯಾದರೂ ಅದನ್ನು ಎಚ್ಚರಗೊಳಿಸಿ ಜ್ಞಾನವುಳ್ಳದ್ದನ್ನಾಗಿ ಮಾಡಿ ಅವುಗಳ ಕಾರ್ಯಗಳಲ್ಲಿ ಪ್ರವರ್ತಿಸುವಂತೆ ಮಾಡುವುದು ಎಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಪರಾಯತೀನಾಮ್**—ಪರಾ ಉಪಸರ್ಗ. ಇಣ್ ಗತೌ ಧಾತು. ಲಡರ್ಥದಲ್ಲಿ **ಲಟಃ ಶತೃಶಾನಚ್**—(ಪಾ. ಸೂ. ೩-೧-೧೨೪) ಎಂಬುದರಿಂದ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪಿಗೆ ಲುಕ್. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಯತ್ ಎಂದು ರೂಪವಾಗುತ್ತದೆ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ ಶತೃ ಉಗಿತ್ತಾದುದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್ ಬರುತ್ತದೆ. ಪರಾಯತೀ ಶಬ್ದಕ್ಕೆ ಷಷ್ಠೀಬಹುವಚನ ಆಮ್ ಪರವಾದಾಗ **ಹ್ರಸ್ವನದ್ಯಾಪೋನುಟ್** (ಪಾ. ಸೂ. ೭-೧-೫೪) ಎಂಬುದರಿಂದ ನುಡಾಗಮ. ಙ್ಯಂತದ ಪರದಲ್ಲಿ ನಾಮ್ ಬಂದುದರಿಂದ **ಙ್ಯಾಶ್ಛಂದಸಿ ಬಹುಲಮ್** (ಪಾ. ಸೂ. ೬-೧-೧೭೮) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಏತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉದೀರಯಂತೀ**—ಈರ ಕ್ಷೇಪೇ, ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ

ಣಿಚ್ಚಿಗೆ ಗುಣ. ಅಯಾದೇಶ. ಸ್ತ್ರೀತ್ವದಲ್ಲಿ ಹಿಂದಿನಂತೆ **ಉಗಿತಶ್ಚ** ಎಂಬುದರಿಂದ ಙೀಪ್ ಪ್ರತ್ಯಯ. ನುಮಾಗಮ. ಣಿಚ್ ಸ್ವರದಿಂದ ಧೇಪ್ರೋತ್ತರಾಕಾರ ಉದಾತ್ತವಾಗುತ್ತದೆ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ.

**ಮೃತೆಮ್**—ಮೃಙ್ ಪ್ರಾಣತ್ಯಾಗೇ. ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಬೋಧಯಂತೀ**—ಬುಧ ಅವಗಮನೇ. ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಸ್ತ್ರೀತ್ವದಲ್ಲಿ ಙೀಪ್. ಣಿಚ್ ಸ್ವರದಿಂದ ಧಕಾರೋತ್ತರಾಕಾರ ಉದಾತ್ತವಾಗುತ್ತದೆ. || ೮ ||



|| ಸಂಹಿತಾಪಾಠಃ ||

ಉಷೋ ಯದಗ್ನಿಂ ಸಮಿಧೇ ಚಕರ್ಥ ವಿ ಯದಾವಶ್ಚಕ್ಷಸಾ ಸೂರ್ಯಸ್ಯ |
ಯನ್ಮಾನುಷಾನ್ಯಕ್ಷ್ಯಮಾಣಾ ಅಜೀಗಸ್ತದ್ದೇವೇಷು ಚಕೃಷೇ ಭದ್ರಮಪ್ನಃ || ೯ ||

|| ಪದಪಾಠಃ ||

ಉಷಃ | ಯತ್ | ಅಗ್ನಿಂ | ಸಂಽಇಧೇ | ಚಕರ್ಥ | ವಿ | ಯತ್ | ಆವಃ | ಚಕ್ಷಸಾ | ಸೂರ್ಯಸ್ಯ |

ಯತ್ । ಮಾನುಷಾನ್ । ಯಕ್ಷ್ಯಮಾಣಾನ್ । ಅಜೀಗರಿತಿ । ತತ್ । ದೇವೇಷು । ಚಕೃಷೇ । ಭದ್ರಂ । ಅಪ್ನಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಉಷಸ್ತ್ವಮಗ್ನಿಂ ಗಾರ್ಹಪತ್ಯಾದಿರೂಪಂ ಸಮಿಧೇ ಸಮಿಂಧನಾಯ ಪ್ರಜ್ವಲನಾರ್ಥಂ ಯಚ್ಚಕರ್ಥ ಕೃತವತೀ । ಉಷಃಕಾಲೇ ಹ್ಯಗ್ನಯೋ ಹೋಮಾರ್ಥಮುಪಸಮಿಧ್ಯಂತೇ । ಅಪಿ ಚ ತಮಸಾ ತಿರೋಹಿತಂ ಜಗತ್ಸೂರ್ಯಸ್ಯ ಚಕ್ಷಸಾ ಪ್ರಕಾಶೇನ ಯದ್ವ್ಯಾವಃ ವ್ಯವೃಣೋಃ ತಮಸಾ ವಿಶ್ಲಿಷ್ಟಮಕರೋಃ । ತಥಾ ಮಾನುಷಾನ್ಮನೋಃ ಪುತ್ರಾನ್ಮನುಷ್ಯಾನ್ಯಕ್ಷ್ಯಮಾಣಾನ್ಯಾಗಂ ಕರಿಷ್ಯತಸ್ತ್ವಂ ಯದಜೀಗಃ ಪೂರ್ವಂ ತಮಸಾ ಗ್ರಸ್ತಾನ್ಪ್ರಕಾಶೇನೋದ್ಗೀರ್ಣಾನಿವಾಕರೋಃ । ಹೇ ಉಷೋ ದೇವೇಷು ಮಧ್ಯೇ ತ್ವಮೇವ ಭದ್ರಂ ಭಜನೀಯಂ ತದೇತತ್ತ್ರಿವಿಧಮಪ್ನಃ ಕರ್ಮ ಚಕೃಷೇ । ಕೃತವತೀ ॥ ಆವಃ । ವೃಞ್ ವರಣೇ । ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಗುಣೇ ಹಲ್ಙ್ಯಾಬ್ಭ್ಯ ಇತಿ ಸಿಲೋಪಃ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ । ಮಾನುಷಾನ್ । ಮನೋರ್ಜಾತಾವಞ್ಯತೌ ಷುಕ್ಚೇತ್ಯಞ್ ಷುಗಾಗಮಶ್ಚ ॥

॥ ಪ್ರತಿಪದಾರ್ಥ ॥

**ಹೇ ಉಷಃ**—ಎಲೈ ಉಷಸ್ಸೇ । **ತ್ವಂ**—ನೀನು । **ಅಗ್ನಿಂ**—ಗಾರ್ಹಪತ್ಯಾದಿ ಅಗ್ನಿಗಳನ್ನು । **ಸಮಿಧೇ** (ಸಮಿಧಾದಿಗಳಿಂದ) ಜ್ವಲಿಸುವುದಕ್ಕೋಸ್ಕರ । **ಯತ್**—ಯಾವಕಾರಣದಿಂದ । **ಚಕರ್ಥ**—ಉಂಟುಮಾಡಿದೆಯೋ । **ಸೂರ್ಯಸ್ಯ ಚಕ್ಷಸಾ**—ಸೂರ್ಯನ ಕಾಂತಿಯಿಂದ । **ಯತ್**—ಏತಕ್ಕೋಸ್ಕರ । **ವಿ ಆವಃ**—(ತಮಸ್ಸಿನಿಂದಾವೃತವಾದ ಜಗತ್ತನ್ನು) ವ್ಯಕ್ತಪಡಿಸಿದೆಯೋ (ಹಾಗೆಯೇ) । **ಯಕ್ಷ್ಯಮಾಣಾನ್**—ಯಾಗ ಮಾಡುವ । **ಮಾನುಷಾನ್**—ಮನುಷ್ಯರನ್ನು । **ಯತ್ ಅಜೀಗಃ**—ಏತಕ್ಕೋಸ್ಕರ ಕಾರ್ಯತತ್ಪರರನ್ನಾಗಿ ಮಾಡಿದೆಯೋ । **ತತ್**—ಆದುದರಿಂದ । **ದೇವೇಷು**—ದೇವತೆಗಳಲ್ಲಿ (ನೀನೇ) । **ಭದ್ರಂ**—ಮಂಗಳಕರವಾದ । **ಅಪ್ನಃ**—(ಈ ಮೇಲೆ ಹೇಳಿದ ಮೂರುವಿಧವಾದ) ಕರ್ಮಗಳನ್ನು । **ಚಕೃಷೇ**—ಮಾಡಿದ್ದೀಯೆ.

॥ ಭಾವಾರ್ಥ ॥

ಎಲೈ ಉಷಸ್ಸೇ, ದೇವತೆಗಳಲ್ಲಿ ನೀನೇ, ಗಾರ್ಹಪತ್ಯಾದಿ ಅಗ್ನಿಗಳ ಜ್ವಲನಕಾರ್ಯ, ತಮಸ್ಸಿನಿಂದ ಆವೃತವಾಗಿದ್ದ ಸಮಸ್ತಪ್ರಪಂಚದ ಅಭಿವ್ಯಕ್ತಿ ಮತ್ತು ಯಜ್ಞಕರ್ತೃಗಳಾದ ಮನುಷ್ಯರ ಕಾರ್ಯತತ್ಪರತೆ, ಎಂಬ ಮೂರು ಶುಭ ಕರ್ಮಗಳನ್ನು ಮಾಡಿರುವವಳು.

## English Translation

Ushas, inasmuch as you have caused the sacred fire to be kindled, inasmach as you have lighted the world with the light of the sun, inasmuch as you have wakened men to perform sacrifice, you have done good service to the gods.

॥ ವಿಶೇಷವಿಷಯಗಳು ॥

**ಅಪ್ನಃ**— ಅಪ್ನಶಬ್ದವು ಹದಿನಾರು ರೂಪನಾಮಗಳಲ್ಲಿಯೂ (ನಿ. ೩-೧೩) ಇಪ್ಪತ್ತಾರು ಕರ್ಮನಾಮಗಳ (ನಿ. ೩-೨) ಉಕ್ತವಾಗಿದೆ. ಉಷಸ್ಸು ತಾನು ಉದಯವನ್ನು ಹೊಂದಿದಕೂಡಲೇ ಗಾರ್ಹಪತ್ಯಾಗ್ನಿಯನ್ನು ಹೋಮಕ್ಕಾಗಿ ಪ್ರಜ್ವಲಮಾಡಿಸುವುದು, ಕತ್ತಲೆಯಿಂದ ಕಾಣಿಸದೆ ಇರುವಂತೆ ಮರೆಯಾಗಿರುವ ಜಗತ್ತನ್ನು ಸೂರ್ಯನ ಪ್ರಕಾಶದಿಂದ ಕಾಣಿಸುವಂತೆ ಮಾಡುವುದು, ಯಾಗಮಾಡುವವರು ಮತ್ತು ಇತರರೂ ಎಲ್ಲರೂ ಕತ್ತಲೆಯ ತೊಂದರೆಯಿಂದ ರಕ್ಷಣೆಯನ್ನು ಹೊಂದಿ ಆಯಾಯ ಕಾರ್ಯಗಳಲ್ಲಿ ಜಾಗರೂಕರಾಗಿರುವಂತೆ ಮಾಡುವುದು, ಎಂಬ ಈ ಮೂರು ವಿಧ ಕಾರ್ಯಗಳನ್ನು ನೆರವೇರಿಸುತ್ತಿರುವುದರಿಂದ ದೇವತೆಗಳ ಮಧ್ಯದಲ್ಲಿ ಪೂಜ್ಯತೆಯನ್ನು ಹೊಂದಿರುತ್ತದೆ.

ಸಾಯಣಭಾಷ್ಯ ಮತ್ತು ಸ್ಕಂದಸ್ವಾಮಿಗಳ ಭಾಷ್ಯಗಳ ಅಭಿಪ್ರಾಯವು ಒಂದೇ ಆಗಿದ್ದಾಗ್ಯೂ ಇವೆರಡು ಗ್ರಂಥಗಳಲ್ಲಿಯೂ ಪದಗಳ ಅನ್ವಯಕ್ರಮವು ಬೇರೆ ಬೇರೆಯಾಗಿರುವುದು. **ಉಷಸಿ ಹ್ಯುದಿತಾಯ ಅಗ್ನಿಹೋತ್ರೇಣ ಆಹವನೀಯಂ ಸಮಿಂಧಯಂತಿ ನಾನುದಿತಾಯಾಂ ಅತಸ್ತಮುಷಾ ಏವ ಸಮಿಂಧವತೀತ್ಯುಚ್ಯತೇ ।** ಉಷಸ್ಸು ಉದಯವಾದ ಕೂಡಲೇ ಅಗ್ನಿಹೋತ್ರವನ್ನು ಆಚರಿಸುವವರು ಆಹವನೀಯವೆಂಬ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವರು. ಉಷಸ್ಸು ಉದಯವಾಗುವುದಕ್ಕಿಂತ ಮುಂಚಿತವಾಗಿ ಆಹವನೀಯಾಗ್ನಿಯನ್ನು ಪೂಜಿಸುವುದಿಲ್ಲವಾದಕಾರಣ ಉಷಸ್ಸು ಅಗ್ನಿಯನ್ನು ಉದ್ದೀಪನೆಮಾಡಿಸುವುದು ಎಂದು ಸ್ಕಂದಸ್ವಾಮಿಗಳು ಹೇಳಿರುವರು. ಮತ್ತು **ಉಷಸೋ ಹಿ ಪ್ರಕಾಶಃ ಸೂರ್ಯಾತ್ ಉದೇಷ್ಯತಃ ಪ್ರಭವತಿ** ಉಷಸ್ಸಿನ ಪ್ರಕಾಶವು ಉದಯಿಸುತ್ತಿರುವ ಸೂರ್ಯನಿಂದ ಉಂಟಾಗುವುದು ಎಂದು ವಿವರಿಸಿರುವರು.

**ಉಷಃಕಾಲೇ ಹೋಮಾರ್ಥಮುಪಸಮಿಂಧಂತೇಹ್ಯಗ್ನಯಃ । ಸೂರ್ಯಸ್ಯ ಪ್ರಕಾಶೇನ ತಮಸಾ ವಿಶ್ಲಿಷ್ಟಮಕರೋಃ ।** ಉಷಃಕಾಲದಲ್ಲಿಯೇ ಅಗ್ನಿಯನ್ನು ಹೋಮಮಾಡುವುದಕ್ಕಾಗಿ ಉದ್ದೀಪನೆಮಾಡುವರು. ಸೂರ್ಯನ ಪ್ರಕಾಶದಿಂದಲೇ ಉಷಸ್ಸು ಕತ್ತಲೆಯಿಲ್ಲದಿರುವಂತೆಮಾಡುವುದು ಎಂದು ಸಾಯಣರೂ ವಿವರಿಸುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಉಷಃ**— ಸಂಬುದ್ಧಿಯರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಮಿಧೇ**—ಸಮ್ ಉಪಸರ್ಗ ಞಿಇನ್ಧೀ ದೀಪ್ತೌ. ಧಾತು. ಕ್ವಿಪ್ ಪ್ರತ್ಯಯ. ಗತಿಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಚಕರ್ಥ**—ಡುಕೃಞ್ ಕರಣೇ. ಧಾತು. ಲಿಟ್ ಮಧ್ಯಮಪುರುಷ ಏಕವಚನರೂಪ. **ಕೃಸೃಭೃವೃ**—(ಪಾ. ಸೂ. ೭-೨-೧೩) ಎಂದು ನಿಯಮಮಾಡಿರುವುದರಿಂದ ಇಡಾಗಮ ಬರುವುದಿಲ್ಲ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಅವಃ—ವೃಞ್ ವರಣೇ. ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಮಂತ್ರೇ ಘಸಹ್ವರ**—(ಪಾ. ಸೂ. ೨-೪-೮೦) ಎಂಬುದರಿಂದ ಲುಙ್‌ನಲ್ಲಿ ಪ್ರಾಪ್ತವಾದ ಚ್ಲಿಗೆ ಲುಕ್. ಸಿಪ್ ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ** (ಪಾ. ಸೂ. ೭-೩-೮೪) ಎಂಬುದರಿಂದ ಧಾತುವಿನ ಇಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ಹಲ್‌ಙ್ಯಾಭ್ಯೋ**—(ಪಾ. ಸೂ. ೬-೧-೬೮) ಎಂಬುದರಿಂದ ಅಪೃಕ್ತವಾದ ಪ್ರತ್ಯಯಕ್ಕೆ **ಲೋಪ**. **ಛಂದಸ್ಯಪಿದೃಶ್ಯತೇ** (ಪಾ. ಸೂ. ೬-೪-೭೩) ಎಂಬುದರಿಂದ ಅಜಾದಿಯಾಗಿದ್ದರೂ ಅಡಾಗಮ ಬರುತ್ತದೆ. ಯದ್ಯೋಗವಿರುವುದರಿಂದ ಹಿಂದಿನಂತೆ ತಿಙಂತ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಚಕ್ಷಸಾ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಪ್ರಕಾಶಾರ್ಥದಲ್ಲಿ ಪ್ರಯುಕ್ತವಾಗಿದೆ. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಮಾನುಷಾನ್**—ಮನೋಃ ಅಪತ್ಯಾನಿ ಪುಮಾಂಸಃ ಮಾನುಷಾಃ **ಮನೋರ್ಜಾತಾವಞ್ಯತೌ ಷುಕ್ ಚ** (ಪಾ. ಸೂ. ೪-೧-೧೬೧) ಎಂಬುದರಿಂದ ಅಞ್ ಪ್ರತ್ಯಯ. ತತ್ಸಂನಿಯೋಗದಿಂದ ಷುಕಾಗಮ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಯಕ್ಷಮಾಣಾನ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲೃಡರ್ಥದಲ್ಲಿ **ಲೃಟಃ ಸದ್ವಾ** (ಪಾ. ಸೂ. ೩-೪-೧೪) ಎಂಬುದರಿಂದ ಶಾನಚ್ ಪ್ರತ್ಯಯ. **ಸ್ಯತಾಸೀಲೃಲುಟೋಃ** ಎಂಬುದರಿಂದ ಸ್ಯ ವಿಕರಣ. **ಚೋಃಕುಃ** ಸೂತ್ರದಿಂದ ಜಕಾರಕ್ಕೆ ಕುತ್ವ. ಚರ್ತ್ವ. ಪ್ರತ್ಯಯ ಸಕಾರಕ್ಕೆ ಕತ್ವನಿಮಿತ್ತವಾಗಿ ಷತ್ವ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅಂಗಕ್ಕೆ ಮುಕಾಗಮ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—

(ಪಾ. ಸೂ. ೬-೧-೧೮೨) ಎಂಬುದರಿಂದ ವಿಕರಣಸ್ವರ ಉಳಿಯುತ್ತದೆ. ದ್ವಿತೀಯಾ ಬಹುವಚನಾಂತರೂಪ. ಅದಕ್ಕೆ ಆಕಾರ ಪರವಾದುದರಿಂದ **ದೀರ್ಘಾದಟಿ ಸಮಾನಪಾದೇ** ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿನಿತ್ಯಂ** ಎಂಬುದರಿಂದ ಅದರ ಹಿಂದಿನ ಆಕಾರಕ್ಕೆ ಅನುನಾಸಿಕತ್ವ. ‖ ೯ ‖

‖ ಸಂಹಿತಾಪಾಠಃ ‖

ಕಿಯಾತ್ಯಾ ಯತ್ಸಮಯಾ ಭವಾತಿ ಯಾ ವ್ಯೂಷುರ್ಯಾಶ್ಚ
ನೂನಂ ವ್ಯುಚ್ಛಾನ್ ।
ಅನು ಪೂರ್ವಾಃ ಕೃಪತೇ ವಾವಶಾನಾ ಪ್ರದೀಧ್ಯಾನಾ ಜೋಷ-
ಮನ್ಯಾಭಿರೇತಿ ‖ ೧೦ ‖

ಪದಪಾಠಃ ‖

ಕಿಯತಿ । ಆ । ಯತ್ । ಸಮಯಾ । ಭವಾತಿ । ಯಾಃ । ವಿಽಊಷುಃ । ಯಾಃ ।
ಚ । ನೂನಂ । ವಿಽಉಚ್ಛಾನ್ ।
ಅನು । ಪೂರ್ವಾಃ । ಕೃಪತೇ । ವಾವಶಾನಾ । ಪ್ರಽದೀಧ್ಯಾನಾ । ಜೋಷಂ ।
ಅನ್ಯಾಭಿಃ । ಏತಿ ‖ ೧೦ ‖

॥ ಸಾಯಣಭಾಷ್ಯಂ ॥

ಸಮಯೇತ್ಯವ್ಯಯಂ ಸಮೀಪವಚನಂ । ಉಷಾಃ ಸಮಯಾ ಭವಾತಿ ಸಮೀಪಸ್ಥಾ ಭವತೀತಿ ಯದೇತತ್ ಕಿಯತಿ ಕಾಲೇ ಪ್ರವೃತ್ತಂ ಪರಿಸಮಾಪ್ತಂ ವೇತ್ಯಾಕಾರಃ ಪ್ರಶ್ನಾರ್ಥಃ । ಏತದುಕ್ತಂ ಭವತಿ । ಉಷಾ ಯೇನ ಕಾಲೇನ ಸಂಯುಕ್ತಾ ಸ ಕಾಲಃ ಕಿಯಾನ್ ತಸ್ಯ ಕಾಲಸ್ಯ ಕಿಂ ಪರಿಮಾಣಮಿತಿ । ಅನೇನೋಷಸೋಽನಂತತ್ವಮುಕ್ತಂ । ತದೇವ ಸ್ಪಷ್ಟೀಕರೋತಿ । ಪುರಾ ಯಾ ಉಷಸೋ ವ್ಯೂಷುಃ ವ್ಯುಷ್ಟಾಃ ಸಂಜಾತಾಃ । ನೂನಮವಶ್ಯಮಿತಃ ಪರಂ ಯಾಶ್ಚೋಷಸೋ ವ್ಯುಚ್ಛಾನ್ । ವ್ಯುಚ್ಛಂತಿ ವ್ಯುಷ್ಟಾ ಭವಿಷ್ಯಂತಿ । ತತ್ರ ಪೂರ್ವಾಃ ವ್ಯುಷ್ಟಾ ಅತೀತಾ ಉಷಸೋ ವಾವಶಾನಾ ಕಾಮಯಮಾನೇದಾನೀಂ ವರ್ತಮಾನೋಷಾ ಅನು ಕೃಪತೇ । ಅನುಕಲ್ಪ್ಯತೇ । ಸಮರ್ಥಾ ಭವತಿ । ಅತೀತಾ ಉಷಸೋ ಯಥಾ ಪ್ರಕಾಶಮಕುರ್ವನ್ ತದ್ವದೇಷಾಪಿ ಪ್ರಕಾಶಂ ಕರೋತೀತ್ಯರ್ಥಃ । ತಥಾ ಪ್ರದೀಧ್ಯಾನಾ ಪ್ರಕರ್ಷೇಣ ದೀಪ್ಯಮಾನೋಷಾ ಅನ್ಯಾಭಿರಾಗಾಮಿನೀಭಿರುಷೋಭಿರ್ಜೋಷಂ ಸಚತೇ । ಸಂಗಚ್ಛತೇ । ಆಗಾಮಿನ್ಯೋಽಪ್ಯೇತದೀಯಂ ಪ್ರಕಾಶಮನುಕುರ್ವಂತೀತ್ಯರ್ಥಃ ॥ ಕಿಯತೀತಿ । ಕಿಂ ಪರಿಮಾಣಮಸ್ಯಾ । ಕಿಮಿದಂಭ್ಯಾಂ ವೋ ಘಃ । ಪಾ. ೫-೨-೪೦ । ಇತಿ ಘತ್ವವಿಧಾನಸಾಮರ್ಥ್ಯಾತ್ಕಿಮ್ ಶಬ್ದಾದಪಿ ಪರಿಮಾಣಾರ್ಥೇ ವತುಬ್ವಕಾರಸ್ಯ ಘತ್ವಂ । ಇದಂಕಿಮೋರೀಶ್ಕೀ । ಪಾ. ೬-೩-೯೦ । ಇತಿ ಕಿಮಃ ಕೀಆದೇಶಃ । ಘಸ್ಯೇಯಾದೇಶೇ ಯಸ್ಯೇತಿ ಲೋಪಃ । ಪ್ರತ್ಯಯಾದ್ಯುದಾತ್ತತ್ವಂ । ಛಾಂದಸಃ ಸಾಂಹಿತಿಕೋ ದೀರ್ಘಃ । ಭವಾತಿ । ಲೇಟ್ಯಾಡಾಗಮಃ । ವ್ಯೂಷುಃ । ವಿಪೂರ್ವೋ ವಸತಿರ್ವ್ಯುಚ್ಛನೇ ವರ್ತತೇ । ಲಿಟ್ಯುಸಿ ಕಿತ್ತ್ವೇ ಯಜಾದಿತ್ವಾತ್ಸಂಪ್ರಸಾರಣಂ ದ್ವಿರ್ವಚನಾದಿ । ವ್ಯುಚ್ಛಾನ್ । ಉಚ್ಛೀ ವಿವಾಸೇ । ವಿವಾಸೋ ವರ್ಜನಂ । ಲೇಟ್ಯಡಾಗಮಃ । ಸಂಯೋಗಾಂತಸ್ಯ ಲೋಪಃ । ಕೃಪತೇ । ಕೃಪೂ ಸಾಮರ್ಥ್ಯೇ । ವ್ಯತ್ಯಯೇನ ಶಃ । ವಾವಶಾನಾ । ವಶ ಕಾಂತೌ । ಅಸ್ಮಾದ್ಯಙ್ಲುಗಂತಾತ್ತಾಚ್ಛೀಲಿಕಶ್ಚಾನಶ್ । ಪ್ರದೀಧ್ಯಾನಾ । ದೀಧೀಙ್ ದೀಪ್ತಿದೇವನಯೋಃ । ಲಟಃ ಶಾನಚ್ । ಅದಾದಿತ್ವಾಚ್ಛಪೋ ಲುಕ್ । ಜಕ್ಷಿತ್ಯಾದಯಃ ಷಡಿತ್ಯಭ್ಯಸ್ತಸಂಜ್ಞಾಯಾಮಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಗತಿಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಉಷಾಃ**—ಉಷಸ್ಸು । **ಸಮಯಾ ಭವಾತಿ**—ಸಮೀಪಸ್ಥವಾಗಿದೆ (ಎಂಬುದು) । **ಯತ್**—ಯಾವುದೋ (ಅದು) । **ಕಿಯತಿ ಆ**—ಯಾವ ಕಾಲದಿಂದ? । **ಯಾಃ**—ಯಾವ ಉಷಃಕಾಲಗಳು । **ವ್ಯೂಷುಃ**—ಕಳೆದುಹೋದುವೋ । **ನೂನಂ**—ಅವಶ್ಯವಾಗಿ । **ಯಾಃ ಚ**—ಯಾವ ಉಷಃಕಾಲಗಳು । **ವ್ಯುಚ್ಛಾನ್**—ಉಂಟಾಗುತ್ತವೆಯೋ । (**ತತ್ರ**—ಅವುಗಳ ಮಧ್ಯೆ) । **ಪೂರ್ವಾಃ**—ಮೊದಲಿನವು (ಕಳೆದುಹೋದುವು) ಗಳನ್ನು । **ವಾವಶಾನಾಃ**—ಅಪೇಕ್ಷೆ ಉಳ್ಳವುಗಳಾಗಿ (ಈಗಿನ ಉಷಸ್ಸುಗಳು) । **ಅನು ಕೃಪತೇ**—ಅನುಕರಿಸುತ್ತವೆ । **ಪ್ರದೀಧ್ಯಮಾನಾ**—ವಿಶೇಷಪ್ರಕಾಶಯುಕ್ತವಾದ ಉಷಸ್ಸು । **ಅನ್ಯಾಭಿಃ ಜೋಷಂ**—(ಮುಂದೆ ಬರುವ) ಇತರ ಉಷಸ್ಸುಗಳೊಡನೆ । ಏತಿ—ಸೇರಿಕೊಳ್ಳುತ್ತದೆ.

॥ ಭಾವಾರ್ಥ ॥

ಉಷಸ್ಸು ಯಾವಕಾಲದಿಂದ ಈ ರೀತಿ ಇದೆ ? ವಿಶೇಷ ಕಾಂತಿಯುಳ್ಳ ಉಷಸ್ಸು (ಬೆಳಕುಕೊಡಬೇಕೆಂಬ) ಅಪೇಕ್ಷೆ ಉಳ್ಳದ್ದಾಗಿ, ಕಳೆದುಹೋದ ಉಷಸ್ಸುಗಳ ಕ್ರಮವನ್ನನುಸರಿಸಿ (ಕೆಲಸಮಾಡುತ್ತಾ) ಬರುವ ಉಷಸ್ಸುಗಳೊಡನೆ ಮುಂದುವರಿಯುತ್ತದೆ.

## English Translation.

For how long a period is it that the dawns have risen ? for how long a period will they rise ? still desirous to bring us light, Ushas pursues the functions of those that have gone before, and shinning brightly, proceeds with the others (that are to follow.)

॥ ವಿಶೇಷವಿಷಯಗಳು ॥

**ಅನುಕೃಪತೇ—ಅನುಕಲ್ಪತೇ ಸಮರ್ಥಾ ಭವತಿ ।** ಉಷಸ್ಸುಗಳು ಪ್ರತಿದಿನವೂ ಸೂರ್ಯನ ಉದಯಕ್ಕಿಂತ ಪೂರ್ವದಲ್ಲಿ ಉದಯವಾಗುವ ಕಾರಣದಿಂದ ಇವುಗಳಲ್ಲಿಯೂ ಅತೀತ ಅಂದರೆ ಕಳೆದುಹೋದವುಗಳು, ವರ್ತಮಾನ ಅಂದರೆ ಆಯಾಯ ಕಾಲದಲ್ಲಿ ಪ್ರಾಪ್ತವಾಗಿರುವವುಗಳು, ಆಗಾಮಿ ಅಂದರೆ ಮುಂದೆ ಬರತಕ್ಕವುಗಳು ಎಂದು ಮೂರು ವಿಧವಾಗಿ ವ್ಯವಹರಿಸಲ್ಪಡುವುವು. ಅವುಗಳಲ್ಲಿ ಹಿಂದೆ ಕಳೆದುಹೋಗಿರುವ ಉಷಸ್ಸಿನ ಪ್ರಕಾಶವನ್ನು ಈಗ ನಡೆಯುತ್ತಿರುವ ಉಷಸ್ಸು ತನ್ನ ಪ್ರಕಾಶದಿಂದ ಅನುಕರಿಸಲು ಸಮರ್ಥವಾಗುವುದು ಎಂದು ಸಾಯಣರು ಅತೀತ ವರ್ತಮಾನ ಉಷಸ್ಸುಗಳಿಗೆ ಪ್ರಕಾಶದ ವಿಷಯದಲ್ಲಿ ಸಾದೃಶ್ಯವನ್ನು ವರ್ಣಿಸಿರುವರು. **ಸ್ಕಂದಸ್ವಾಮಿಗಳು, ಅರ್ಚತಿ ಗಾಯತಿ** ಎಂಬ ನಲವತ್ತುನಾಲ್ಕು ಅರ್ಚತಿ ಕರ್ಮಗಳಲ್ಲಿ ಕೃಪಧಾತುವನ್ನು ಪಾಠಮಾಡಿರುವುದರಿಂದ (ನಿ. ೩-೧೪) **ಅನುಕೃಪತೇ** ಎಂದರೆ ಪೂಜಿಸುವುದು ಎಂದು ಅರ್ಥಮಾಡಿ **ಯಚ್ಚ ಉಷಸ್ಯುದಿತಾಯಾಂ ಸ್ತೋತಾರಃ ಸ್ತುವಂತಿ ತದುಷಾ ಏವ ಸ್ತೌತೀತ್ಯುಚ್ಯತೇ ।** ಉಷಸ್ಸು ಉದಿತವಾದ ಕೂಡಲೇ ಆಯಾಯ ದೇವತೆಗಳನ್ನು ಸ್ತುತಿಮಾಡುವವರು ಸ್ತುತಿಮಾಡುವುದೂ ಉಷಸ್ಸಿಗೆ ಸೇರಿದ್ದಾಗಿ ಉಷಃಕಾಲವೇ ಸ್ತುತಿಮಾಡಿದಂತೆ (ಉಪಚಾರವನ್ನು) ಔಪಚಾರಿಕಪ್ರಯೋಗವೆಂದು ವರ್ಣಿಸಿರುವರು. ಇದೇ ರೀತಿಯಾಗಿ ಈ ಎರಡು ಭಾಷ್ಯಗಳಲ್ಲಿಯೂ ಅರ್ಥದ ವಿಷಯದಲ್ಲಿ ವ್ಯತ್ಯಾಸವು ಕಂಡುಬರುತ್ತದೆ. **ಆಕಾರೋಽತ್ರ ಪಾದಪೂರಣಃ । ನೂನಮಪಿಪಾದಪೂರಣಃ ।** ಆಕಾರವು ವಾಕ್ಯಪೂರ್ತಿಮಾಡುವುದಕ್ಕಾಗಿ ಪ್ರಯುಕ್ತವಾಗಿದೆ. ಇದರಂತೆಯೇ ನೂನಂ ಎಂಬುದೂ ವಾಕ್ಯಪೂರ್ತಿಗಾಗಿ ಪ್ರಯುಕ್ತವಾದದ್ದು ಎಂದು ಸ್ಕಂದಸ್ವಾಮಿಗಳ ವ್ಯಾಖ್ಯಾನದಲ್ಲಿರುವುದು. ಸಾಯಣರು—ಆಕಾರಃ **ಪ್ರಶ್ನಾರ್ಥಃ । ಉಷಾ ಯೇನ ಕಾಲೇನ ಸಂಯುಕ್ತಾ ಸ ಕಾಲಃ ಕಿಯಾನ್ ಕಿಂ ಪರಿಮಾಣಂ ಇತಿ ।** ಆಕಾರವು ಪ್ರಶ್ನೆಯನ್ನು ಬೋಧಿಸುವುದಾಗಿರುವುದು. ಇದರಿಂದ (ಉಷಃಕಾಲದಿಂದ) ಉಷಃಕಾಲದ ವ್ಯಾಪನೆಯಿಂದ ಕೂಡಿರುವ ಕಾಲದ ಪ್ರಮಾಣವು ಗೋಚರವಾಗತಕ್ಕದ್ದಲ್ಲ ಎಂದು ಹೇಳಿ ಅನಂತವಾಗಿರುವ ಉಷಃಕಾಲದ ವಿಷಯದಲ್ಲಿ ಇರುವ ಸೂಕ್ಷ್ಮವಾದ ಪ್ರಕಾರಗಳನ್ನು ವಿವರಿಸಿರುವರು.

**ವಾವಶಾನಾ—ಕಾಮಯಮಾನಾ ।** ಅಪೇಕ್ಷಿತವಾಗಿರುವುದು ಎಂದು ಸಾಯಣರೂ, **ವಾವಶಾನಾ, ವಶ ಕಾಂತೌ, ವಾಶ್ರ ಶಬ್ದನೇ ಇತ್ಯನಯೋರನ್ಯತರಸ್ಯೇದಂ ರೂಪಂ ಕಾಮಯಮಾನಾ ಶಬ್ದಂ ವಾ ಕುರ್ವಂತೀತ್ಯರ್ಥಃ । ಯಚ್ಚ ಉಷಸ್ಯುದಿತಾಯಾಂ ಕಾಮಯಂತೇ ಶಬ್ದಂ ವಾ ಕುರ್ವಂತೀ ತದುಷಸ್ಯೇವೋಪಚರ್ಯತೇ ।** ಕಾಂತಿ ಎಂಬ ಅರ್ಥವುಳ್ಳ ವಶಧಾತುವಿನಿಂದಾಗಲೀ, ಶಬ್ದಮಾಡುವುದು ಎಂಬ ಅರ್ಥವುಳ್ಳ ವಾಶ್ರಧಾತುವಿನಿಂದಾಗಲೀ ವಾವಶಾನಾ ಎಂದು ಶಬ್ದರೂಪವಾಗುವುದು. ಇದರಿಂದ ಅಪೇಕ್ಷಿತವಾಗಿರುವುದು ಅಥವಾ ಉಷಃಕಾಲವನ್ನು ಎಲ್ಲರೂ ಅಪೇಕ್ಷಿಸುವಂತೆ ಇರುವ ಉಷಸ್ಸಿನ ರಮಣೀಯತೆಯೂ, ಉಷಃಕಾಲದಲ್ಲಿ ಆಚರಿಸುವ ಸ್ತೋತ್ರಪಠನ ಪಾಠನಾದಿಗಳೂ ಉಷಃಕಾಲದಲ್ಲಿಯೇ ಇರುವುದರಿಂದ ಉಷಸ್ಸಿನ ಸ್ವರೂಪನ್ನು ವ್ಯಕ್ತಗೊಳಿಸುತ್ತವೆ. ಎಂದು ಸ್ಕಂದಸ್ವಾಮಿಗಳೂ ವ್ಯಾಖ್ಯಾನಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಕಿಯತಿ**—ಕಿಮ್ ಪರಿಮಾಣಂ ಅಸ್ಯ ಇತಿ ಕಿಯಾನ್ **ಕಿಮಿದಂಭ್ಯಾಂ ವೋ ಘಃ** (ಪಾ. ಸೂ. ೫-೨-೪೦) ಎಂಬುದರಿಂದ ವಕಾರಕ್ಕೆ ಘತ್ವವಿಧಾನ ಸಾಮರ್ಥ್ಯದಿಂದ ಕಿಮ್‌ಶಬ್ದಕ್ಕೂ ಪರಿಮಾಣಾರ್ಥತೋರುವಾಗ ವತುಪ್ ಪ್ರತ್ಯಯ ಬರುತ್ತದೆ ಎಂದು ಸ್ವೀಕರಿಸಬೇಕು. ತತ್ಸಂನಿಯೋಗದಿಂದ ವಕಾರಕ್ಕೆ ಘತ್ವ. ಇದು ಪರವಾದಾಗ **ಇದಂಕಿಮೋರೀಶ್ಕೀ** (ಪಾ. ಸೂ. ೬-೩-೬೦) ಎಂಬುದರಿಂದ ಕಿಮ್ ಶಬ್ದಕ್ಕೆ ಕೀ ಆದೇಶ. **ಆಯನೇಯಿ—** (ಪಾ. ಸೂ. ೭-೧-೨) ಎಂಬುದರಿಂದ ಘ ಎಂಬುದಕ್ಕೆ ಇಯಾದೇಶ. ಇಯತ್ ಎಂದು ಪ್ರತ್ಯಯಸ್ವರೂಪವಾಗುತ್ತದೆ. ಅಜಾದಿಪ್ರತ್ಯಯ ಪರವಾದುದರಿಂದ ಭಸಂಜ್ಞಾ ಬರುವುದರಿಂದ **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಪ್ರಕೃತಿಭೂತವಾದ ಕೀ ಎಂಬುದರ ಈಕಾರಕ್ಕೆ ಲೋಪ. ಕಿಯತ್ ಎಂದು ಶಬ್ದಸ್ವರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಕಕಾರೋತ್ತರ ಇಕಾರವು ಉದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ. ಸಂಹಿತಾದಲ್ಲಿ ಛಾಂದಸವಾಗಿ ಮಧ್ಯೆ ದೀರ್ಘ ಬರುತ್ತದೆ.

**ಭವಾತಿ**—ಭೂ ಸತ್ತಾಯಾಂ ಧಾತು. ಲೇಟ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ಶಪ್ ವಿಕರಣ. ಗುಣ ಅವಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ತಿಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ವ್ಯೂಷುಃ**—ವಿಪೂರ್ವಕವಾದ ವಸ ಧಾತುವು ವ್ಯುಚ್ಛನಾರ್ಥ (ವಿವಾಸ) ದಲ್ಲಿ ಇಲ್ಲಿ ಪ್ರಯುಕ್ತವಾಗಿದೆ. ಲಿಟ್ ಪ್ರಥಮಪುರುಷಬಹುವಚನದಲ್ಲಿ **ಪರಸ್ಮೈಪದಾನಾಂ**—ಸೂತ್ರದಿಂದ ಝಿಗೆ ಉಸಾದೇಶ. **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಇದಕ್ಕೆ ಕಿತ್ವಾತಿದೇಶವಿರುವುದರಿಂದ ವಸಧಾತುವು ಯಜಾದಿಯಲ್ಲಿ ಸೇರಿರುವುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಲಿಣ್‌ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಹಲಾದಿಶೇಷ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಸಕಾರಕ್ಕೆ ಷತ್ವ. ಯಾಃ ಎಂದು ಹಿಂದೆ ಯಚ್ಛಬ್ದಸಂಬಂಧ

ವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವ್ಯುಚ್ಛಾನ್**—ಉಚ್ಛೀ ವಿವಾಸೇ. ಧಾತು. ವಿವಾಸವೆಂದರೆ ವರ್ಜನ (ಬಿಡುವಿಕೆ) ಎಂದರ್ಥ. ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ** ಎಂಬುದರಿಂದ ಅಂತಾದೇಶ. **ಇತಶ್ಚ ಲೋಪಃ ಪರಸ್ಮೈ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಸೂತ್ರದಿಂದ ಅದಕ್ಕೆ ಅಡಾಗಮ. **ಸಂಯೋಗಾಂತಸ್ಯ ಲೋಪಃ** ಸೂತ್ರದಿಂದ ಅಂತ್ಯ ತಕಾರಕ್ಕೆ ಲೋಪ. **ತುದಾದಿಭ್ಯಃ ಶಃ** (ಪಾ. ಸೂ ೩-೧-೭೭) ಎಂಬುದರಿಂದ ಶವಿಕರಣ. ಇಲ್ಲಿಯೂ ಯಚ್ಛಬ್ದಸಂಬಂಧ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಕೃಪತೇ**—ಕೃಪೂ ಸಾಮರ್ಥ್ಯೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಟಿತ ಆತ್ಮನೇಪದಾನಾಂ**—ಸೂತ್ರದಿಂದ ಟಿಗೆ ಏತ್ವ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಶಪ್ಪಿಗೆ ಶವಿಕರಣ ಬರುತ್ತದೆ. **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವಾತಿದೇಶವಿರುವುದರಿಂದ ಧಾತುವಿನ ಲಘೂಪಧೆಗೆ ಗುಣಾದಿಗಳು ಬರುವುದಿಲ್ಲ. ಅತಿಙಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಾವಶಾನಾ**—ವಶ ಕಾಂತೌ ಧಾತು. **ಧಾತೋರೇಕಾಚಃ**—ಎಂಬುದರಿಂದ ಭೃಶಾರ್ಥದಲ್ಲಿ ಯಙ್ ಬಂದಾಗ **ಯಙೋಽಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. ಯಙ್‌ಲುಙಂತದ ಮೇಲೆ ತಾಚ್ಛೀಲ್ಯಾರ್ಥದಲ್ಲಿ **ತಾಚ್ಛೀಲ್ಯವಯೋವಚನೇ**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. ಯಙ್‌ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪ್ರದೀಧ್ಯಾನಾ**—ದೀಧೀಙ್ ದೀಪ್ತಿದೇವನಯೋಃ ಧಾತು ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ಪಿಗೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಲುಕ್. ಯಣಾದೇಶ. ಸ್ತ್ರೀತ್ವದಲ್ಲಿ ಟಾಪ್. ಜಕ್ಷಿತ್ಯಾದಿಯಲ್ಲಿ ಈ ಧಾತುವು ಸೇರಿರುವುದರಿಂದ **ಜಕ್ಷಿತ್ಯಾದಯಃ ಷಟ್** (ಪಾ. ಸೂ. ೬-೧-೬) ಎಂಬುದರಿಂದ ಅಭ್ಯಸ್ತಸಂಜ್ಞಾ ಬರುವುದರಿಂದ **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರ ಎಂಬ ಗತಿಯೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

ಈಯುಷ್ಟೇ ಯೇ ಪೂರ್ವತರಾಮಪಶ್ಯನ್ವ್ಯುಚ್ಛಂತೀಮುಷಸಂ ಮರ್ತ್ಯಾಸಃ ।

ಅಸ್ಮಾಭಿರೂ ನು ಪ್ರತಿಚಕ್ಷ್ಯಾಭೂದೋ ತೇ ಯಂತಿ ಯೇ ಅಪರೀಷು ಪಶ್ಯಾನ್ ॥ ೧೧ ॥

॥ ಪದಪಾಠಃ ॥

ಈಯುಃ । ತೇ । ಯೇ । ಪೂರ್ವಽತರಾಂ । ಅಪಶ್ಯನ್ । ವಿಽಉಚ್ಛಂತೀಂ । ಉಷಸಂ । ಮರ್ತ್ಯಾಸಃ ।

ಅಸ್ಮಾಭಿಃ । ಊಂ ಇತಿ । ನು । ಪ್ರತಿಽಚಕ್ಷ್ಯಾ । ಅಭೂತ್ । ಓ ಇತಿ । ತೇ । ಯಂತಿ । ಯೇ । ಅಪರೀಷು । ಪಶ್ಯಾನ್ ॥ ೧೧ ॥

॥ ಸಾಯಣಭಾಷ್ಯಂ ॥

ಯೇ ಮರ್ತ್ಯಾಸೋ ಮರಣಧರ್ಮಾಣೋ ಮನುಷ್ಯಾ ವ್ಯುಚ್ಛಂತೀಂ ವಿವಾಸಯಂತೀಂ ಪೂರ್ವತರಾಮತಿಶಯೇನ ಪೂರ್ವಾಂ ವಿಪ್ರಕೃಷ್ಟಾಮುಷಸಮಪಶ್ಯನ್ ದೃಷ್ಟವಂತಃ ತೇ ಮನುಷ್ಯಾ ಈಯುಃ । ಗತಾಃ । ತಥಾಸ್ಮಾಭಿರಪಿ ನು ಇದಾನೀಂ ಪ್ರತಿಚಕ್ಷ್ಯಾ ಪ್ರಕರ್ಷೇಣ ದ್ರಷ್ಟವ್ಯಾಭೂತ್। ಜಾತಾ । ತಥಾಪರೀಷು ಭಾವಿನೀಷು ರಾತ್ರಿಷು ಯೇ ಮನುಷ್ಯಾ ಏತಾಮುಷಸಂ ಪಶ್ಯಾನ್ ಪಶ್ಯಂತಿ ತೇ । ಆ ಉ ಇತಿ ನಿಪಾತದ್ವಯಸಮುದಾಯಃ । ತತ್ರ ಉ ಇತ್ಯೇತದವಧಾರಣೇ । ಏವ ಯಂತಿ । ಆಗಚ್ಛಂತ್ಯೇವ । ಕಾಲತ್ರಯೇಽಪ್ಯೇಷಾ ವ್ಯಾಪ್ಯ ವರ್ತತ ಇತ್ಯರ್ಥಃ ॥ ಈಯುಃ । ಇಣ್ ಗತೌ । ಲಿಟ್ಯುಸೀಣೋ ಯಣಿತಿ ಯಣಾದೇಶಃ । ದ್ವಿರ್ವಚನೇಽಚೀತಿ ತಸ್ಯ ಸ್ಥಾನಿವದ್ಭಾವಾದ್ದ್ವಿರ್ಭಾವೇ ದೀರ್ಘ ಇಣಃ ಕಿತಿ । ಪಾ. ೭-೪-೬೯ । ಇತ್ಯಭ್ಯಾಸದೀರ್ಘತ್ವಂ । ತೇ । ಯುಷ್ಮತ್ತತ್ತತಕ್ಷುಃಷ್ವಂತಃಪಾದಮಿತಿ ಸಕಾರಸ್ಯ ಷತ್ವಂ ಷ್ಟುತ್ವಂ ಚ । ಮರ್ತ್ಯಾಸಃ । ಆಜ್ಜಸೇರಸುಕ್ ॥

॥ ಪ್ರತಿಪದಾರ್ಥ ॥

**ಯೇ ಮರ್ತ್ಯಾಸಃ**—ಯಾವ ಮನುಷ್ಯರು । **ಉಚ್ಛಂತೀಂ**—ಉದಯಿಸುತ್ತಿರುವ । **ಪೂರ್ವತರಾಂ**—ಅತ್ಯಂತಪುರಾತನವಾದ । **ಉಷಸಂ**—ಉಷಸ್ಸನ್ನು । **ಅಪಶ್ಯನ್**—ನೋಡಿದರೋ । **ತೇ**—ಅವರು **ಈಯುಃ**—ಮೃತರಾದರು; । (**ತಥಾ**—ಹಾಗೆಯೇ) । **ಅಸ್ಮಾಭಿಃ ಉ**—ನಮ್ಮಿಂದಲೂ (ಉಷಸ್ಸು) । **ನು**—ಈಗ । **ಪ್ರತಿಚಕ್ಷ್ಯ**—ಚೆನ್ನಾಗಿ ಪರಿದೃಶ್ಯಮಾನವಾಗಿ । **ಅಭೂತ್**—ಆಯಿತು (ಹಾಗೆಯೇ) । **ಅಪರೀಷು**—ಮುಂದೆ ಬರುವ ರಾತ್ರಿಗಳಲ್ಲಿ । **ಯೇ**—ಯಾವ ಮನುಷ್ಯರು । **ಪಶ್ಯಾನ್**—(ಈ ಉಷಸ್ಸನ್ನು) ನೋಡುತ್ತಾರೋ । **ತೇ**—ಅವರು । **ಆಯಂತಿ ಉ**—ಬಂದೇಬರುತ್ತಾರೆ (ಮುಂದೆ ಉತ್ಪನ್ನರಾಗುತ್ತಾರೆ.)

॥ ಭಾವಾರ್ಥ ॥

ಪುರಾತನವಾದ ಎಂದರೆ ಹಿಂದಿನ ಕಾಲದಲ್ಲಿ ಉದಯಿಸಿದ್ದ ಉಷಸ್ಸನ್ನು ನೋಡಿದ ಮನುಷ್ಯರು ಈಗ ಇಲ್ಲ; ಈಗ ಉದಯಿಸುತ್ತಿರುವ ಉಷಸ್ಸು ನಮಗೆ ಕಾಣಿಸುತ್ತದೆ; ಇನ್ನು ಮುಂದೆ ಉದಯಿಸುವ ಉಷಸ್ಸನ್ನು ನೋಡುವ ಮನುಷ್ಯರು ಮುಂದೆ ಹುಟ್ಟುತ್ತಾರೆ (ಅಂದರೆ ಉಷಸ್ಸು ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಈರೀತಿ ದೃಶ್ಯಮಾನವಾಗಿ ನಿತ್ಯವಾಗಿದೆ.)

## English Translation.

Those mortals who beheld the pristine Ushas dawning have passed away; to us she is now visible, and they approach who may behold her in aftertimes.

॥ ವಿಶೇಷವಿಷಯಗಳು ॥

**ಯೇ ಮರ್ತ್ಯಾಸಃ ವ್ಯುಚ್ಛಂತೀಂ ಪೂರ್ವತರಾಂ ಉಷಸಂ ಅಪಶ್ಯನ್ ತೇ ಈಯುಃ । ಅಸ್ಮಾಭಿ ನು ಪ್ರತಿಚಕ್ಷ್ಯಾ ಅಭೂತ್ ।** ಮರಣವನ್ನು ಹೊಂದುವ ಸ್ವಭಾವವುಳ್ಳ ಮನುಷ್ಯರು ಹಿಂದೆ ಉದಯವಾಗಿ ತನ್ನ ರಮಣೀಯತೆಯನ್ನು ಪ್ರಪಂಚಕ್ಕೆ ವ್ಯಕ್ತಮಾಡಿರುವ ಉಷಸ್ಸುಗಳನ್ನೂ ನೋಡಿ ಆನಂದವನ್ನು ಅನುಭವಿಸಿದರು. ಮತ್ತು ಅದು ತನ್ನ ಸೊಬಗನ್ನು ತೋರಿಸಿ ಕಳೆದುಹೋದ ಹಾಗೆ ಇವರೂ ಕೂಡ ಕಾಲವಾದರು. ವರ್ತಮಾನಕಾಲವನ್ನು ಅನುಸರಿಸಿ ಪ್ರಾಪ್ತವಾಗಿರುವ ಈ ಉಷಃಕಾಲದ (ಮನೋಹರತ್ವವನ್ನು) ಸೌಂದರ್ಯವನ್ನು ನೋಡಿ ನಾವುಗಳು ಆನಂದಪಡುತ್ತೇವೆ. ಮುಂದೆ ಉದಯವಾಗುವ ಉಷಸ್ಸನ್ನು ನೋಡಿ ಆನಂದಿಸುವ ಮನುಷ್ಯರು ಮುಂದೆ ಹುಟ್ಟುತ್ತಾರೆ. ಈ ರೀತಿ ಉಷಸ್ಸು ಮೂರು ಕಾಲಗಳನ್ನೂ ಅನುಸರಿಸಿ ಉದಯವಾಗುತ್ತದೆ ಎಂದೂ ಕಾಲತ್ರಯಗಳಲ್ಲಿಯೂ ವ್ಯಾಪಿಸಿರುವುದು ಎಂದೂ ತಿಳಿಯಬೇಕು. ಮರಣವನ್ನು ಹೊಂದುವವರಾದರೂ ಮನುಷ್ಯರು ಅತೀತಾನಾಗತವರ್ತಮಾನವೆಂಬ ಮೂರು ಕಾಲಗಳಲ್ಲಿಯೂ ವ್ಯಾಪಿಸಿರುವ ಉಷಸ್ಸಿನ ಆನಂದವನ್ನು ಅನುಭವಿಸುವವರಾದಕಾರಣ ಉಷಸ್ಸಿನ ವ್ಯಾಪ್ತಿಯೂ ಆಯಾಯ ಕಾಲಾನುಗುಣವಾಗಿ ಆಯಾಯ ಮನುಷ್ಯರಿಗೆ ಗೋಚರವಾಗುವುದೆಂಬ ತಾತ್ಪರ್ಯವನ್ನು ಸಾಯಣರು ವಿವರಿಸಿರುವರು.

ಸ್ಕಂದಸ್ವಾಮಿಗಳು ಇದೇ ಅಭಿಪ್ರಾಯವನ್ನು ಅನುಸರಿಸಿ **ಅತೀತೈರ್ವರ್ತಮಾನೈರಾಗಾಮಿಭಿಶ್ಚ ಸರ್ವೈರ್ಮನುಷ್ಯೈರುಷಾ ದೃಶ್ಯತೇ ನಾಸ್ಮದಾದಿವತ್ ಕೈಶ್ಚಿದೇವ ಇತಿ ಸಮುಸ್ತಾರ್ಥಃ** । ಉಷಃಕಾಲವನ್ನು ಹಿಂದೆ ಇದ್ದ ಮನುಷ್ಯರೂ ನೋಡಿ ಆನಂದವನ್ನು ಅನುಭವಿಸಿದರು. ಈಗ ಇರುವವರೂ ನೋಡಿ ಆನಂದಿಸುತ್ತಿರುವರು. ಇದರಂತೆಯೇ ಮುಂದೆ ಉತ್ಪನ್ನರಾಗುವವರೂ ನೋಡಿ ಆನಂದಿಸುವರು. ಆದ್ದರಿಂದ ನಾವು ಅನಿತ್ಯರಾದ ಕಾರಣ ಕೆಲವರು ಮಾತ್ರ ಉಷಃಕಾಲವನ್ನು ನೋಡುವರು ಎಂದು ಅಭಿಪ್ರಾಯವು ಇಲ್ಲಿ ಪ್ರತಿಪಾದ್ಯವಾಗಿರುವುದಿಲ್ಲ. ಉಷಸ್ಸು ಸರ್ವರಿಗೂ ಗೋಚರವಾಗುವುದು ಎಂದು ಅರ್ಥವನ್ನು ವಿವರಿಸಿರುವರು.

**ಮರ್ತ್ಯಾಸಃ— ಮಾನುಷ್ಯಾಃ ನರಃ** ಎಂಬ ಇಪ್ಪತ್ತೈದು ನಾಮಗಳಲ್ಲಿ ಮರ್ತ್ಯಶಬ್ದವು (ನಿ. ೩-೮) ಉಕ್ತವಾಗಿರುವುದರಿಂದ ಮರ್ತ್ಯಶಬ್ದಕ್ಕೆ ಮನುಷ್ಯರೆಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಈಯುಃ**— ಇಣ್ ಗತೌ ಧಾತು, ಅದಾದಿ. ಲಿಟ್‌ಪ್ರಥಮಪುರುಷಬಹುವಚನದಲ್ಲಿ **ಪರಸ್ಮೈಪದಾನಾಂ**— (ಪಾ. ಸೂ. ೩-೪-೮೨) ಎಂಬುದರಿಂದ ಝಿಗೆ ಉಸಾದೇಶ. ಅಜಾದಿಪ್ರತ್ಯಯಪರದಲ್ಲಿರುವುದರಿಂದ **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ದ್ವಿತ್ವಮಾಡುವಾಗ **ದ್ವಿರ್ವಚನೇಚಿ** (ಪಾ. ಸೂ. ೧-೧-೫೯) ಎಂಬುದರಿಂದ ಸ್ಥಾನಿವದ್ಭಾವ ಬರುತ್ತದೆ. ದ್ವಿತ್ವ ಬಂದಾಗ **ದೀರ್ಘಇಣಃ ಕಿತಿ** (ಪಾ. ಸೂ. ೭-೪-೬೯) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಈಯುಃ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪೂರ್ವತರಾಂ**—ಅತಿಶಯೇನ ಪೂರ್ವಾ ಪೂರ್ವತರಾ ತಾಮ್. **ದ್ವಿವಚನವಿಭಜ್ಯೋ—**(ಪಾ. ಸೂ ೫-೩-೫೭) ಎಂಬುದರಿಂದ ತರಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಅಪಶ್ಯನ್—**ದೃಶಿರ್ ಪ್ರೇಕ್ಷಣೇ ಧಾತು. ಲಙ್ ಪ್ರಥಮಪುರುಷ ಬಹುವಚನರೂಪ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಅಡಾಗಮು ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಮರ್ತ್ಯಾಸಃ**—ಮರ್ತ್ಯ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ. ಅಂತ್ಯಸಕಾರಕ್ಕೆ ರುತ್ವವಿಸರ್ಗ.

**ಪ್ರತಿಚಕ್ಷ್ಯಾ**— ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಇಲ್ಲಿ ದರ್ಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಕರ್ಮಣಿಯಲ್ಲಿ **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್** ಎಂಬುದರಿಂದ ಟಾಪ್.

**ಯಂತಿ**—ಇಣ್ ಗತೌ ಧಾತು. ಅದಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ ಬಂದಾಗ **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಶ್ಯಾನ್**—ದೃಶಿರ್ ಪ್ರೇಕ್ಷಣೇ ಧಾತು ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅಂತಾದೇಶಬಂದಾಗ **ಇತಶ್ಚಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಶಪ್ ವಿಕರಣ ಬಂದಾಗ ಪ್ರಕೃತಿಗೆ ಪಶ್ಯಾದೇಶ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಆಡಾಗಮ. **ಸಂಯೋಗಾಂತಸ್ಯಲೋಪಃ** ಎಂಬುದರಿಂದ ಅಂತ್ಯ ತಕಾರಕ್ಕೆ ಲೋಪ. ಪಶ್ಯಾನ್ ಎಂದು ರೂಪವಾಗುತ್ತದೆ. ಯೇ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಯಾವಯದ್ದ್ವೇಷಾ ಋತಪಾ ಋತೇಜಾಃ ಸುಮ್ನಾವರೀ ಸೂನೃತಾ ಈರಯಂತೀ ।

ಸುಮಂಗಲೀರ್ಬಿಭ್ರತೀ ದೇವವೀತಿಮಿಹಾದ್ಯೋಷಃ ಶ್ರೇಷ್ಠತಮಾ ವ್ಯುಚ್ಛ ॥ ೧೨ ॥

॥ ಪದಪಾಠಃ ॥

ಯವಯತ್ಽದ್ವೇಷಾಃ । ಋತಽಪಾಃ । ಋತೇಽಜಾಃ । ಸುಮ್ನಽವರೀ । ಸೂನೃತಾಃ । ಈರಯಂತೀ ।

ಸುಽಮಂಗಲೀಃ । ಬಿಭ್ರತೀ । ದೇವಽವೀತಿಂ । ಇಹ । ಅದ್ಯ । ಉಷಃ ।
ಶ್ರೇಷ್ಠಽತಮಾ । ವಿ । ಉಚ್ಛ ॥ ೧೨ ॥

॥ ಸಾಯಣಭಾಷ್ಯಂ ॥

ಯಾವಯದ್ದ್ವೇಷಾಃ । ಯಾವಯಂತಿ ಅಸ್ಮತ್ತಃ ಪೃಥಕ್ಕೃತಾನಿ ದ್ವೇಷಾಂಸಿ ದ್ವೇಷ್ಟ್ರೂಣಿ ರಾಕ್ಷಸಾದೀನಿ ಯಯಾ ಸಾ ತಥೋಕ್ತಾ । ನ ಹ್ಯುಷಸಿ ಜಾತಾಯಾಂ ರಾಕ್ಷಸಾದಯೋಽವತಿಷ್ಠಂತೇ ಯತಸ್ತೇ ನಿಶಾಚರಾಃ । ಋತಪಾ ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ಪಾಲಯಿತ್ರೀ ಋತೇಜಾ ಯಜ್ಞಾರ್ಥಂ ಪ್ರಾದುರ್ಭೂತಾ । ಸತ್ಯಾಮುಷಸ್ಯಹನಿ ಯಾಗಾ ಅನುಷ್ಠೀಯಂತೇ ಅತೋ ಯಜ್ಞಾರ್ಥಂ ಜಾತೇತ್ಯುಚ್ಯತೇ । ಸುಮ್ನಾವರೀ । ಸುಮ್ನಮಿತಿ ಸುಖನಾಮ । ತದ್ವತೀ ಸೂನೃತಾಃ । ವಾಚ್ನಾಮೈತತ್ । ಪಶುಪಕ್ಷಿಮೃಗಾದೀನಾಂ ವಚಾಂಸೀರಯಂತೀ ಪ್ರೇರಯಂತ್ಯುತ್ಪಾದಯಂತೀ ಸುಮಂಗಲೀಃ ಸೌಮಂಗಲ್ಯೋಪೇತಾ । ಪತ್ಯಾ ಕದಾಚಿದಪಿ ನ ವಿಯುಕ್ತೇತ್ಯರ್ಥಃ । ದೇವವೀತಿಂ ದೇವೈಃ ಕಾಮ್ಯಮಾನಂ ಯಜ್ಞಂ ಬಿಭ್ರತೀ ಧಾರಯಂತೀ ಹೇ ಉಷಃ ಶ್ರೇಷ್ಠತಮೋಕ್ತೇನ ಪ್ರಕಾರೇಣಾತಿಪ್ರಶಸ್ತಾ ತ್ವಮಿಹಾಸ್ಮಿನ್ದೇವಯಜನದೇಶೇಽದ್ಯಾಸ್ಮಿನ್ಯಾಗಸಮಯೇ ವ್ಯುಚ್ಛ । ವಿವಾಸಯ ॥ ಯಾವಯದ್ದ್ವೇಷಾಃ । ಯು ಮಿಶ್ರಣಾಮಿಶ್ರಣಯೋಃ । ಅಸ್ಮಾಣ್ಣ್ಯಂತಾಲ್ಲಟಃ ಶತೃ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವಾಭಾವಾತ್ಪ್ರತ್ಯಯಸ್ವರ ಏವ ಶಿಷ್ಯತೇ । ಪುನರ್ಬಹುವ್ರೀಹೌ ಸ ಏವ ಸ್ವರಃ । ಛಾಂದಸಃ ಪದಕಾಲೀನೋ ಹ್ರಸ್ವಃ । ಋತಪಾಃ । ಋತಂ ಪಾತಿ ರಕ್ಷತೀತ್ಯೃತಪಾಃ । ಪಾ ರಕ್ಷಣೇ । ವಿಚ್ । ಋತೇಜಾಃ । ಋತೇ ನಿಮಿತ್ತಭೂತೇ ಜಾಯತ ಇತ್ಯೃತೇಜಾಃ । ಜನೀ ಪ್ರಾದುರ್ಭಾವೇ । ಜನಸನಖನಕ್ರಮಗಮೋ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ತತ್ಪುರುಷೇ ಕೃತಿ ಬಹುಲಮಿತ್ಯಲುಕ್ । ಸುಮ್ನಾವರೀ । ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ವನೋ ರ ಚೇತಿ ಙೀಪ್ ನಕಾರಸ್ಯ ರೇಫಾದೇಶಶ್ಚ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘಃ । ವ್ಯತ್ಯಯೇನ ಪ್ರತ್ಯಯಾದ್ಯುದಾತ್ತತ್ವಂ । ಸುಮಂಗಲೀಃ । ಸುಮಂಗಲಾತ್ಸಂಜ್ಞಾಯಾಂ । ಪಾ. ೪-೧-೪೧ । ಇತಿ ಗೌರಾದಿಷು ಪಾಠಾತ್ ಙೀಷ್ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ಹಲ್ಙ್ಯಾಬ್ಭ್ಯ ಇತಿ ಸುಲೋಪಸ್ಯ ವಿಕಲ್ಪಿತತ್ವಾದಭಾವೇ ರುತ್ವವಿಸರ್ಗೌ । ದೇವವೀತಿಂ । ವೀ ಗತಿಪ್ರಜನಕಾಂತ್ಯಸನಖಾದನೇಷು । ದೇವೈರ್ವೀಯತೇ ಕಾಮ್ಯತ ಇತಿ ದೇವವೀತಿರ್ಯಜ್ಞಃ । ಕರ್ಮಣಿ ಕ್ತಿನ್ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಯಾವಯದ್ದ್ವೇಷಾಃ—ರಾಕ್ಷಸರನ್ನು ವಿಫಲಗೊಳಿಸುವ ಎಂದರೆ ನಾಶಮಾಡುವ । ಋತಪಾಃ—ಸತ್ಯವನ್ನು, ಯಜ್ಞವನ್ನು ರಕ್ಷಿಸುವ । ಋತೇಜಾಃ—ಯಾಗಗಳಿಗೋಸ್ಕರ ಜನಿಸಿರುವ । ಸುಮ್ನಾವರೀ—ಸುಖ

ವುಳ್ಳ, (ಸುಖವನ್ನುಂಟುಮಾಡುವ) । **ಸೂನೃತಾಃ**—ಒಳ್ಳೆಯ ಶಬ್ದಗಳನ್ನು । **ಈರಯಂತೀ**—(ಪಶುಪಕ್ಷ್ಯಾದಿಗಳಿಂದ) ಹೊರಡಿಸುವ । **ಸುಮಂಗಲೀಃ**—ಸೌಮಂಗಲ್ಯಯುಕ್ತಳಾದ । **ದೇವವೀತಿಂ**—ದೇವತೆಗಳಿಗೆ ಕಾಮ್ಯವಾದ ಯಜ್ಞಗಳನ್ನು । **ಬಿಭ್ರತೀ**—ಧರಿಸಿರುವ । **ಹೇ ಉಷಃ**—ಎಲೈ ಉಷಸ್ಸೇ (ಉಷೋದೇವತೆಯೇ) । **ಶ್ರೇಷ್ಠತಮಾ**—(ಮೇಲೆ ಹೇಳಿದ ಪ್ರಕಾರ) ಅತ್ಯಂತ ಶ್ರೇಷ್ಠಳಾದ (ನೀನು) । **ಇಹ**—ಈ ಯಾಗ ಸ್ಥಳದಲ್ಲಿ । **ಅದ್ಯ**—ಈಗ (ಯಾಗಸಮಯದಲ್ಲಿ) । **ವ್ಯುಚ್ಛ**—ಪ್ರಕಾಶಿಸು.

॥ ಭಾವಾರ್ಥ ॥

ಉಷಸ್ಸು ರಾಕ್ಷಸ ನಾಶಕಳು; (ನಿಶಾಚರರಾದ ರಾಕ್ಷಸರು ಬೆಳಗಾದ ಮೇಲೆ ಹೊರಹೊರಡುವುದಿಲ್ಲ) ಯಾಗಗಳಿಗೋಸ್ಕರ ಜನಿಸಿರುವವಳು; (ಬೆಳಗಾದ ಮೇಲೆಯೇ ಯಾಗಾದಿಗಳನ್ನು ಮಾಡುತ್ತಾರೆ) ಒಳ್ಳೆಯ ಶಬ್ದಗಳುಂಟಾಗುವಂತೆ ಮಾಡುವಳು; ಸುಮಂಗಲಿಯು; (ಪತಿಯಿಂದ ವಿಯೋಗವೇ ಇಲ್ಲ) ಸುಖಿಯು; ದೇವಕಾಮ್ಯವಾದ ಯಜ್ಞಧಾರಕಳು; ಈ ರೀತಿ ಅತ್ಯಂತ ಶ್ರೇಷ್ಠಳಾದ ಉಷಸ್ಸು ಈಗ ನಮ್ಮ ಯಾಗಶಾಲೆಯಲ್ಲಿ ಉದಯಿಸಲಿ.

English Translation.

The beings hostile (to acts of devotion) now withdraw, for she is the protectress of sacred rites, who is manifested for their performance; she is the giver of happiness, the awakener of pleasant voices, the enjoyer of felicity, and provider of food for the gods: most excellent Ushas, dawn to-day on this (sacrificial hall.)

॥ ವಿಶೇಷವಿಷಯಗಳು ॥

**ಯಾವಯದ್ದ್ವೇಷಾಃ—ಯಾವಯಂತಿ ಅಸ್ಮತ್ತಃ ಪೃಥಕ್ ಕೃತಾನಿ ದ್ವೇಷಾಂಸಿ ದ್ವೇಷ್ಟೄಣಿ ರಾಕ್ಷಸಾದೀನಿ ಯಯಾ ಸಾ ।** ಮನುಷ್ಯರನ್ನು ದ್ವೇಷಮಾಡಿ ಹಿಂಸೆಪಡಿಸುವ ರಾಕ್ಷಸರೇ ಮೊದಲಾದವರು ರಾತ್ರಿಯಲ್ಲಿಯೇ ಸಂಚರಿಸುವ ಸ್ವಭಾವವುಳ್ಳವರಾದಕಾರಣ ಉಷಸ್ಸು ತನ್ನ ಪ್ರಕಾಶದಿಂದ ಅವರನ್ನು ಬೇರೆಯಾಗಿ ಇರಿಸಿರುವುದು. ಉಷಃಕಾಲವು ಬಂದ ಒಡನೆಯೇ ರಾಕ್ಷಸರೇ ಮೊದಲಾದವರು ಅಡಗಿ ಹೋಗುವರು ಎಂದು ಅಭಿಪ್ರಾಯವು.

**ಋತಪಾಃ—ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ಪಾಲಯಿತ್ರೀ**—ಸತ್ಯವನ್ನೂ ಮತ್ತು ಯಜ್ಞವನ್ನೂ ರಕ್ಷಿಸುವುದು ಎಂದು ಅರ್ಥವು. ಋತ ಶಬ್ದವು ಉದಕನಾಮಗಳಲ್ಲಿ (ನಿ. ೨—೨೪) ಪಠಿತವಾಗಿರುವುದು. ನಿರುಕ್ತಕಾರರು ಋತಶಬ್ದವು ಸತ್ಯ ಬೋಧಕವಾಗಿಯೂ ಯಜ್ಞ ಎಂಬ ಅರ್ಥವನ್ನು ಬೋಧಿಸುವುದೆಂದೂ ಹೇಳಿ ಉದಾಹರಣೆಯನ್ನೂ ಕೊಟ್ಟಿರುವರು—

**ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।**
**ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ ॥**

(ಋ. ಸಂ. ೭-೨೧-೫)

ಈ ಋಕ್ಕಿನಲ್ಲಿ **ಋತ** ಶಬ್ದವು **ಸತ್ಯ** ಅಥವಾ **ಯಜ್ಞ** ಎಂಬ ಅರ್ಥವನ್ನು ಬೋಧಿಸುವುದು **ಸತ್ಯಂ ವಾ ಯಜ್ಞಂ ವಾ** (ನಿ. ೪-೧೯) ಎಂದು ಹೇಳಿರುವರು.

**ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।**
**ಮನ್ಮಾನಿ ಧೀಭಿರುತ ಯಜ್ಞಮೃಂಧನ್ದೇವತ್ರಾ ಚ ಕೃಣುಹ್ಯಧ್ವರಂ ನಃ ॥**

(ನಿ. ೮-೭) ಮತ್ತು (ಋ. ಸಂ. ೧೦-೧೧೦-೨)

ಎಂಬ ಈ ಋಕ್ಕಿನಲ್ಲಿಯೂ

**ದೇವೇಭ್ಯೋ ವನಸ್ಪತೇ ಹವೀಂಷಿ ಹಿರಣ್ಯಪರ್ಣ ಪ್ರತಿವಸ್ತೇ ಅರ್ಥಮ್ ।**
**ಪ್ರದಕ್ಷಿಣಿದ್ರಶನಯಾ ನಿಯೂಯ ಋತಸ್ಯ ವಕ್ಷಿ ಪಥಿಭೀ ರಜಿಷ್ಠೈಃ ॥**

(ನಿ. ೮-೨೦)

ಎಂಬ ಈ ಋಕ್ಕಿನಲ್ಲಿಯೂ **ಋತ** ಶಬ್ದವು ಯಜ್ಞವಾಚಕವಾಗಿರುವುದು.

**ಋತೇಜಾಃ—ಯಜ್ಞಾರ್ಥಂ ಪ್ರಾದುರ್ಭೂತಾ ।** ಯಜ್ಞಮಾಡುವವರು ಯಜ್ಞವನ್ನು ಆಚರಿಸುವುದಕ್ಕಾಗಿಯೇ ಉಷಸ್ಸು ಉದಯವನ್ನು ಹೊಂದುವುದು. ಉಷಃಕಾಲವು ಪ್ರಾಪ್ತವಾದನಂತರ ಹಗಲಿನಲ್ಲಿ ಯಜ್ಞಗಳು ನಡೆಸಲ್ಪಡುತ್ತವೆಯಾದಕಾರಣ ಯಜ್ಞಾಚರಣೆಗಾಗಿಯೇ ಉಷಸ್ಸು ಉದಯವಾಗಿರುತ್ತದೆಂದು ಇಲ್ಲಿ ಹೇಳಿರುತ್ತದೆ. ಸ್ಕಂದಸ್ವಾಮಿಗಳು—

**ಋತಶಬ್ದೋತ್ರ ಆದಿತ್ಯವಚನಃ । ಪಂಚಮ್ಯಾಶ್ಚ ಸ್ಥಾನೇ ಸಪ್ತಮೀ । ಆದಿತ್ಯಾಜ್ಜನಿತ್ರೀ ।**

ಋತಶಬ್ದಕ್ಕೆ ಆದಿತ್ಯನೆಂದು ಅರ್ಥವು. ಪಂಚಮೀ ವಿಭಕ್ತಿಯ ಅರ್ಥದಲ್ಲಿ ಸಪ್ತಮೀ ವಿಭಕ್ತಿಯು ಪ್ರಯುಕ್ತವಾಗಿರುತ್ತದೆ. ಉಷಸ್ಸು ಸೂರ್ಯನಿಂದ ಉತ್ಪನ್ನವಾಗಿರುವುದು ಎಂದು ಅರ್ಥವನ್ನು ವಿವರಿಸಿ ಇರುವರು.

**ಸುಮ್ನಾವರೀ—ಸುಮ್ನಮಿತಿ ಸುಖನಾಮ । ತದ್ವತೀ । ವಿಭಾವರೀ ಸೂನರೀ ಭಾಸ್ವತೀ** ಎಂಬ ಹದಿನಾರು ಉಷೋನಾಮಗಳಲ್ಲಿ **ಸುಮ್ನಾವರೀ** ಎಂಬ ಪದವು (ನಿ. ೨-೧೯) ಉಕ್ತವಾಗಿರುವುದರಿಂದ ಉಷಸ್ಸೆಂದು ಅರ್ಥವು. **ಸುಮ್ನ** ಶಬ್ದವು **ಶಿಂಬಾತಾ ಶತರಾ** ಎಂಬ ಇಪ್ಪತ್ತು ಸುಖನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ಸುಮ್ನ** ಎಂದರೆ ಸುಖವೆಂದು ಅರ್ಥವು, **ಪ್ರಾಣಿನಾಂ ಸುಖಕರೀ** ಪ್ರಾಣಿಗಳಿಗೆ ಸುಖವನ್ನು ಉಷಃಕಾಲವು ಉಂಟುಮಾಡುವುದೆಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುವರು.

**ಸೂನೃತಾ ಈರಯಂತೀ—ವಾಙ್ನಾಮೈತತ್ । ವಾಕ್** ಎಂದು ಅರ್ಥವು. **ಸೂನೃತಾ** ಎಂಬ ಪದವು **ಉಷೋ**ನಾಮಗಳಲ್ಲಿ (ನಿ. ೨-೧೯) ಉಕ್ತವಾಗಿರುತ್ತದೆ ಮತ್ತು ಅನ್ನನಾಮಗಳಲ್ಲಿ (ನಿ. ೩-೯) ಯೂ ಉಕ್ತವಾಗಿರುತ್ತದೆ. ಆದರೆ ಭಾಷ್ಯಕಾರರು **ಸೂನೃತೆ** ಶಬ್ದವು ವಾಕ್ ಎಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿ,—**ಸಸೂನೃತಾ ವಾಚಃ ಈರಯಂತೀ ಪ್ರೇರಯಂತೀ । ಉಷ ಉದಯೋತ್ತರಕಾಲಂ ಹಿ ಪ್ರಾಣಿನಾಂ ವಚಃ ಪ್ರವರ್ತಂತೇ । ಅತಃ ಸೈವ ತಾಃ ಪ್ರೇರಯಂತೀತಿ ವ್ಯಪದಿಶ್ಯತೇ ।** ಉಷಃಕಾಲದ ಉದಯವು ಉತ್ಪನ್ನವಾದಕೂಡಲೆ ಪಶುಪಕ್ಷಿ ಮೃಗಗಳೇ ಮೊದಲಾದವೆಲ್ಲವೂ ಧ್ವನಿಮಾಡಲು ಉಪಕ್ರಮಮಾಡುವುದರಿಂದ (ಉಷಃಕಾಲವೇ) ಉಷಸ್ಸೇ ಎಲ್ಲರನ್ನೂ ಮಾತನಾಡುವಂತೆ ಪ್ರೇರಿಸುವುದು ಎಂದು ವಿವರಿಸಿರುತ್ತಾರೆ.

**ಸುಮಂಗಲೀಃ—ಸುಷ್ಠು ಮಂಗಲಯೋಪೇತಾ । ಪತ್ಯಾ ಕದಾಚಿದಪಿ ನ ವಿಯುಕ್ತಾ ।** ಉತ್ತಮವಾದ ಮಂಗಳಗಳಿಂದ ಕೂಡಿರುವುದು. ಉಷಸ್ಸು ಯಾವಾಗಲೂ ತನ್ನ ಪತಿಯನ್ನು ಎಡಬಿಡದೆ ಜೊತೆಯಲ್ಲಿಯೇ ಇರುವುದೆಂದು ಅಭಿಪ್ರಾಯವು. ಯಾಸ್ಕರು—

**ಕನಿಕ್ರದಜ್ಜನುಷಂ ಪ್ರಬ್ರುವಾಣ ಇಯರ್ತಿ ವಾಚಮರಿತೇವ ನಾವಂ ।**
**ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ ಕಾ ಚಿದಭಿಭಾ ವಿಶ್ವ್ಯಾ ವಿದತ್ ।**

(ಋ. ಸಂ. ೨-೪೨-೧)

ಎಂದು ಋಕ್ಕನ್ನು ಉದಹರಿಸಿ ಮಂಗಲ ಶಬ್ದದ ಅರ್ಥವನ್ನು ವಿವರಿಸುವುದರಲ್ಲಿ (ನಿ ೯-೫) **ಸುಮಂಗಲಶ್ಚ ಶಕುನೇ ಭವಕಲ್ಯಾಣ ಮಂಗಲಃ । ಮಂಗಲಂ ಗಿರತೇಃ ಗೃಣಾತ್ಯರ್ಥೇ । ಗಿರತ್ಯನರ್ಥಾನಿತಿ ವಾ । ಅಂಗಲಮಂಗವತ್ । ಮಜ್ಜಯತಿ ಪಾಪಕಮಿತಿ ನೈರುಕ್ತಾಃ । ಮಾಂ ಗಚ್ಛಂತ್ವಿತಿ ವಾ । ಮಾ ಚ ತ್ವಾ ಕಾಚಿದಭಿಭೂತಿಃ ಸರ್ವತೋ ವಿದತ್ ॥** ಸುಮಂಗಲ ಎಂಬ ಶಬ್ದಕ್ಕೆ **ಕಲ್ಯಾಣಮಂಗಲ**ವೆಂಬುದಾಗಿ ಅರ್ಥವನ್ನು ವಿವರಿಸಿ ಮಂಗಲ ಶಬ್ದವು **ಗಿರತಿ ಅನರ್ಥಾನ್** ತೊಂದರೆಗಳನ್ನು ನಾಶಮಾಡುವುದು ಎಂದು ಅರ್ಥವನ್ನು ಹೇಳಿರುವರು. ಪಾಪವನ್ನು ಮುಳುಗಿಸಿ ನಾಶವಾಡುವುದು ಎಂದು ನಿರುಕ್ತಕಾರರು ಹೇಳುವರು. ಅಥವಾ ಇದು ಒಳ್ಳೆಯದಾದ್ದರಿಂದ ಯಾವಾಗಲೂ ನನ್ನಲ್ಲಿಯೇ ಬಂದು ಸೇರಲಿ ಅಥವಾ ನಿನಗೆ ಯಾವಾಗಲೂ ಪರಾಭವವುಂಟಾಗದಂತೆ ಮಾಡಲಿ ಎಂಬರ್ಥವಿರುವುದರಿಂದ ಈ ಶಬ್ದಕ್ಕೆ ಮಂಗಲವೆಂದು ಹೆಸರು.

॥ ವ್ಯಾಕರಣಪ್ರಕ್ರಿಯಾ ॥

**ಯಾವಯದ್ದ್ವೇಷಾಃ**—ಯು ಮಿಶ್ರಣಾಮಿಶ್ರಣಯೋಃ ಧಾತು ಅದಾದಿ. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಇದಕ್ಕೆ ಣಿಚ್. ಣಿಚ್ ನಿಮಿತ್ತವಾಗಿ **ಅಚೋಞ್ಣಿತಿ** ಸೂತ್ರದಿಂದ ಊಕಾರಕ್ಕೆ ವೃದ್ಧಿ. ಆವಾದೇಶ. ಯಾವಿ ಎಂಬ ಣಿಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್‌ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ಅತೋಗುಣೇ** ಸೂತ್ರದಿಂದ ಪರರೂಪ. ಯಾವಯತ್ ಎಂದು ರೂಪವಾಗುತ್ತದೆ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಶತೃವಿಗೆ ಆರ್ಧಧಾತುಕ ಸಂಜ್ಞೆ ಬರುವುದರಿಂದ

ಅದುಪದೇಶನಿಬಂಧನವಾಗಿ ಬರುವ ಲಸಾರ್ವಧಾತುಕಾನುದಾತ್ತ ಸ್ವರವು ಬಾರದಿರುವುದರಿಂದ **ಸತಿಶಿಷ್ಟಸ್ವರ ಬಲೀಯಸ್ತ್ವಮ್** ಎಂಬ ವಚನದಿಂದ ಶತೃ ಪ್ರತ್ಯಯ ಸ್ವರವೇ ಉಳಿಯುತ್ತವೆ. ಯಕಾರೋತ್ತರ ಅಕಾರವು ಉದಾತ್ತ ವಾಗುತ್ತದೆ. ಯೂವಯಂತಿ ದ್ವೇಷಾಂಸಿ ಯಯಾ ಸಾ ಯಾವಯದ್ದ್ವೇಷಾಃ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಛಾಂದಸವಾಗಿ ಪದಕಾಲದಲ್ಲಿ ಯವಯತ್ ದ್ವೇಷಾಃ ಎಂದು ಹ್ರಸ್ವ ಬರುತ್ತದೆ

**ಋತೇಪಾಃ**—ಋತಂ ಪಾತಿ ರಕ್ಷತಿ ಇತಿ ಋತಪಾಃ ಪಾ ರಕ್ಷಣೇ ಧಾತು. ಅದಾದಿ. **ಆತೋ ಮನಿನ್‌ಕ್ವನಿಬ್ವನಿಪಶ್ಚ** (ಪಾ. ಸೂ. ೩-೨-೭೪) ಎಂಬುದರಿಂದ ವಿಚ್ ಪ್ರತ್ಯಯ. ಅಲ್ಲಿ ಚಕಾರದಿಂದ ವಿಚ್ ಅನುಕೃಷ್ಟ ವಾಗುತ್ತದೆ ಆಕಾರಾಂತ ಶಬ್ದವಾಗುತ್ತದೆ. ಪ್ರಥಮಾ ಏಕವಚನಾಂತರೂಪ.

**ಋತೇಜಾಃ**—ಋತೇ ನಿಮಿತ್ತಭೂತೇ ಜಾಯತೇ ಇತಿ ಋತೇಜಾಃ. ಜನೀ ಪ್ರಾದುರ್ಭಾವೇ ಧಾತು **ಜನಸನಖನಕ್ರಮಗಮೋ ವಿಟ್** (ಪಾ. ಸೂ. ೩-೩-೬೭) ಎಂಬುದರಿಂದ ವಿಟ್ ಪ್ರತ್ಯಯ. ಇದು ಪರವಾದಾಗ **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಧಾತುವಿಗೆ ಆತ್ವ. ಅಂತಾದೇಶವಾಗಿ ಬರುತ್ತದೆ. **ತತ್ಪುರುಷೇ ಕೃತಿಬಹುಲಮ್** (ಪಾ. ಸೂ. ೬-೩-೧೪) ಎಂಬುದರಿಂದ ಸಮಾಸದಲ್ಲಿ ಸಪ್ತಮಿಗೆ ಅಲುಕ್. ಹಿಂದೆಯೂ ಇಲ್ಲಿಯೂ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಮ್ನಾವರೀ**—ಸುಮ್ನಂ ಸುಖಂ ಅಸ್ಯ ಅಸ್ತಿ ಇತಿ ಸುಮ್ನಾವರೀ. ಛಂದಸೀವನಿಪೌ ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಸುಮ್ನವನ್ ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವವಿವಕ್ಷಾ ಮಾಡಿದಾಗ **ವನೋರಚ** (ಪಾ. ಸೂ. ೪-೧-೭) ಎಂಬುದರಿಂದ ಙೀಪ್. ತತ್ಸಂನಿಯೋಗದಿಂದ ನಕಾರಕ್ಕೆ ರೇಫಾದೇಶ **ಅನ್ಯೇಷಾಮಪಿದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ದೀರ್ಘ ಬರುತ್ತದೆ. ವನಿಪ್ ಪಿತ್ತಾದರೂ ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಈರಯಂತೀ**—ಈರ ಗತೌ ಪ್ರೇರಣೇ ಚ. ಧಾತು. ಪ್ರಯೋಜಕವ್ಯಾಪಾರ ತೋರುವಾಗ ಣಿಚ್. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ಣಿಚ್ ಸ್ವರ ಬರುತ್ತದೆ

**ಸುಮಂಗಲೀಃ**—**ಸುಮಂಗಲಾತ್ ಸಂಜ್ಞಾಯಾಮ್** (ಪಾ ಸೂ. ೪-೧-೪೧. ಗ) ಎಂದು ಗೌರಾದಿಯಲ್ಲಿ ಪಾಠಮಾಡಿರುವುದರಿಂದ ಸಂಜ್ಞಾದಲ್ಲಿ ಙೀಷ್ ಬರುತ್ತದೆ. ಸುಮಂಗಲೀ+ಸು ಎಂದಿರುವಾಗ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ **ಹಲ್‌ಙ್ಯಾಭ್ಯೋ**—(ಪಾ. ಸೂ. ೬-೧-೬೭) ಎಂಬುದರಿಂದ ಸುಲೋಪ ಬರುವುದಿಲ್ಲ. **ಸಸಜುಷೋರುಃ** ಎಂಬುದರಿಂದ ರುತ್ವವೂ **ಖರವಸಾನಯೋರ್ವಿಸರ್ಜನೀಯಃ** ಸೂತ್ರದಿಂದ ಅದಕ್ಕೆ ವಿಸರ್ಗವೂ ಬರುತ್ತದೆ.

**ದೇವವೀತಿಮ್**—ವೀ ಗತಿಪ್ರಜನಕಾಂತ್ಯಶನಖಾದನೇಷು ಧಾತು. ದೇವೈರ್ವೀಯತೇ ಕಾಮ್ಯತೇ ಇತಿ ದೇವವೀತಿಃ ಯಜ್ಞಃ **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕರ್ಮಣಿಯಲ್ಲಿ ಕ್ತಿನ್ ಪ್ರತ್ಯಯ ಕಿತ್ತಾದುದರಿಂದ ಗುಣಬರುವುದಿಲ್ಲ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೧೨ ॥



॥ ಸಂಹಿತಾಪಾಠಃ ॥

ಶಶ್ವತ್ಪುರೋಷಾ ವ್ಯುವಾಸ ದೇವ್ಯಥೋ ಅದ್ಯೇದಂ ವ್ಯಾವೋ ಮಘೋನೀ ।
ಅಥೋ ವ್ಯುಚ್ಛಾದುತ್ತರಾँ ಅನು ದ್ಯೂನಜರಾಮೃತಾ ಚರತಿ ಸ್ವಧಾಭಿಃ ॥ ೧೩ ॥

॥ ಪದಪಾಠಃ ॥

**ಶಶ್ವತ್ । ಪುರಾ । ಉಷಾಃ । ವಿ । ಉವಾಸ । ದೇವೀ । ಅಥೋ ಇತಿ । ಅದ್ಯ । ಇದಂ । ವಿ । ಆವಃ । ಮಘೋನೀ ।**
**ಅಥೋ ಇತಿ । ವಿ । ಉಚ್ಛಾತ್ । ಉತ್ ऽ ತರಾನ್ । ಅನು । ದ್ಯೂನ್ । ಅಜರಾ । ಅಮೃತಾ । ಚರತಿ । ಸ್ವಧಾಭಿಃ ॥ ೧೩ ॥**

॥ ಸಾಯಣಭಾಷ್ಯಂ ॥

**ದೇವೀ ದೇವನಶೀಲೋಷಾಃ ಪುರಾ ಪೂರ್ವಸ್ಮಿನ್ಕಾಲೇ ಶಶ್ವನ್ನಿತ್ಯಂ ಸಂತತಂ ವ್ಯುವಾಸ । ವ್ಯೌಚ್ಛತ್ । ಅಥೋ ಅನಂತರಮದ್ಯಾಸ್ಮಿನ್ಕಾಲೇ ಮಘೋನೀ ಧನವತ್ಯುಷಾಸ್ತಮಸಾ ತಿರೋಹಿತಮಿದಂ ಸರ್ವಂ ಜಗದ್ವ್ಯಾವಃ । ವಿವಾಸಿತಂ ಪ್ರಕಾಶನೇನ ತಮಸಾ ವಿಯುಕ್ತಮಕರೋತ್ । ಅಥೋ ಅನಂತರಮುತ್ತರಾನೂರ್ಧ್ವ್ಸ್ತರಾನ್ಭಾವಿನೋ ದ್ಯೂನ್ ದಿವಸಾನನುಲಕ್ಷ್ಯಾಗಾಮಿಷ್ವಪಿ ದಿವಸೇಷು ವ್ಯುಚ್ಛಾತ್ ವ್ಯುಚ್ಛತಿ । ವಿವಾಸಯತಿ । ಅತಃ ಕಾಲತ್ರಯವ್ಯಾಪಿನೀ ಸೋಷಾ ಅಜರಾ ಜರಾರಹಿತಾ ಸರ್ವದೈಕರೂಪಾಮೃತಾ ಮರಣರಹಿತಾ ಚ ಸತೀ ಸ್ವಧಾಭಿರಾತ್ಮೀಯೈಸ್ತೇಜೋಭಿಃ ಸಹ ಚರತಿ । ವರ್ತತೇ ॥ ಉವಾಸ । ವಸ ನಿವಾಸೇ । ಲಿಟ್ಯಭ್ಯಾಸಸ್ಯೋಭಯೇಷಾಮಿತ್ಯಭ್ಯಾಸಸ್ಯ ಸಂಪ್ರಸಾರಣಂ । ಆವಃ । ತಸ್ಮಾದೇವ ಧಾತೋರ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹಲ್ಙ್ಯಾಬ್ಭ್ಯ ಇತಿ ತಿಲೋಪಃ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ । ಉಚ್ಛಾತ್ । ಲೇಟ್ಯಾಡಾಗಮಃ । ಉತ್ತರಾನ್ । ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ಅನು । ಅನುರ್ಲಕ್ಷಣೇ । ಪಾ. ೧-೪-೮೪ । ಇತ್ಯನೋಃ ಕರ್ಮಪ್ರವಚನೀಯತ್ವಂ । ಅಜರಾ ಅಮೃತಾ । ತತ್ರ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ದೇವೀ ಉಷಾಃ**—ಉಷೋದೇವಿಯು । **ಪುರಾ**—ಪೂರ್ವಕಾಲದಲ್ಲಿ । **ಶಶ್ವತ್**—ನಿರಂತರವೂ । **ವ್ಯುವಾಸ**—ಉದಿಸುತ್ತಿದ್ದಳು । **ಅಥೋ**—ಅನಂತರ । **ಅದ್ಯ**—ಈಗ (ವರ್ತಮಾನಕಾಲದಲ್ಲಿ) । **ಮಘೋನೀ**—ಸಂಪದ್ಯುಕ್ತಳಾದ ಉಷಸ್ಸು । **ಇದಂ**—(ತಮಸ್ಸಿನಿಂದ ಆವೃತವಾದ) ಈ ಸಮಸ್ತ ಜಗತ್ತನ್ನೂ । **ವ್ಯಾವಃ**—ತಮೋರಹಿತವನ್ನಾಗಿ ಮಾಡಿದಳು । **ಅಥೋ**—ಅನಂತರ । **ಉತ್ತರಾನ್**—ಮುಂದೆ ಬರುವ । **ದ್ಯೂನ್**—ದಿವಸಗಳನ್ನು । **ಅನು ವ್ಯುಚ್ಛಾತ್**—ಪ್ರಕಾಶಗೊಳಿಸುತ್ತಾಳೆ । **ಅಜರಾ**—(ಆದುದರಿಂದ) ಜರಾರಹಿತಳಾದ । **ಅಮೃತಾ**—ಅಮರಳಾದ ಉಷಸ್ಸು । **ಸ್ವಧಾಭಿಃ**—(ತನ್ನ) ತೇಜಸ್ಸಿನಿಂದ (ಯುಕ್ತಳಾಗಿ) । **ಚರತಿ**—ಸಂಚರಿಸುತ್ತಾಳೆ.

॥ ಭಾವಾರ್ಥ ॥

ಉಷೋದೇವಿಯು ಪೂರ್ವಕಾಲದಲ್ಲಿ ಪ್ರತಿದಿನವೂ ಉದಿಸುತ್ತಿದ್ದಳು ; ಸಂಪತ್ತಿಗಾಶ್ರಯಳಾದ ಆ ದೇವತೆಯು ಈಗಲೂ ಈ ಪ್ರಪಂಚದಲ್ಲಿ ಉದಿಸುತ್ತಿದ್ದಾಳೆ ; ಮುಂದೆಯೂ, ಬರುವ ದಿನಗಳಲ್ಲಿಯೂ ಪ್ರಕಾಶವನ್ನು ಬೀರುತ್ತಾಳೆ ; ಜರಾಮರಣರಹಿತಳಾದ ಉಷಸ್ಸು ತೇಜೋಯುಕ್ತಳಾಗಿ ಸಂಚರಿಸುತ್ತಾಳೆ.

## English Translation.

The divine Ushas dawned continually in former times; the source of wealth, she still rises on this (world); so will she give light hereafter, through future days, for, exempt from decay or death, she goes on in her splendour.

॥ ವಿಶೇಷವಿಷಯಗಳು ॥

**ದೇವೀ ಉಷಾಃ—ದೇವನಶೀಲಾ** । ಪ್ರಕಾಶದಿಂದ ಕೂಡಿರುವ ಸ್ವಭಾವವುಳ್ಳ ಎಂದರೆ ಪ್ರಕಾಶಮಾನಳಾದ ಉಷೋದೇವಿಯು—ಎಂದು ಅರ್ಥವು । ನಿರುಕ್ತಕಾರರು **ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃಕಾಲಃ ।** (ನಿ. ೨-೧೮) **ಉಚ್ಛೀ ವಿವಾಸೇ** ಎಂಬ ಧಾತುವಿನಿಂದ **ಉಚ್ಛತಿ ತಮಾಂಸಿ ವಿವಾಸಯತಿ** ಕತ್ತಲೆಗಳನ್ನು ನಾಶ ಮಾಡುತ್ತದೆ ಎಂಬ ಅರ್ಥವನ್ನು ಬೋಧಿಸುವುದು. ಎಂದು ಉಷಶ್ಶಬ್ದದ ರೂಪನಿಷ್ಪತ್ತಿಯನ್ನು ವಿವರಿಸಿ ರಾತ್ರಿಯ ಕೊನೆಯ ಭಾಗದ ಕಾಲವು ಉಷಸ್ಸೆಂದು ವ್ಯವಹಾರವನ್ನು ಹೊಂದಿರುತ್ತದೆ ಎಂದು ಹೇಳಿರುವರು. ಮತ್ತು— ಈ ಉಷಸ್ಸು ಉದಯವನ್ನು ಹೊಂದಿ ಕ್ರಮವಾಗಿ ಕಳೆದುಹೋಗುವುದು ಎಂಬ ವಿಷಯದಲ್ಲಿ ಕೆಲವು ಋಕ್ಕುಗಳನ್ನು ಉದಹರಿಸಿರುವರು—

**ಅಪೋಷಾ ಅನಸಃ ಸರತ್ಸಂಪಿಷ್ಟಾದಹ ಬಿಭ್ಯುಷೀ ।**
**ನಿಯುತ್ಸೀಂ ಶಿಶ್ನಥದ್ವೃಷಾ ॥**

(ಋ. ಸಂ. ೪-೩೦-೧೦)

ಎಂಬ ಈ ಋಕ್ಕಿನಲ್ಲಿ **ಅಪಾಸರದುಷಾ ಅನಸಃ ಸಂಪಿಷ್ಟಾನ್ಮೇಘಾತ್ ಬಿಭ್ಯುಷೀ ।** (ನಿ.೧೧-೪೮) ವಾಯುವಿನಿಂದ ಓಡಿಸಲ್ಪಟ್ಟ ಮೇಘಗಳನ್ನು ನೋಡಿ ವಾಯುವು ತನ್ನನ್ನೂ ಓಡಿಸುವುದೆಂದು ಹೆದರಿಕೆಯಿಂದ ಉಷಃಕಾಲವೂ ತಾನಾಗಿ (ತನ್ನ ಸ್ವರೂಪವನ್ನು ಮರೆಮಾಡಿಕೊಂಡಿತು) ಕಳೆದುಹೋಯಿತು ಎಂದು ಇಲ್ಲಿ ವರ್ಣಿಸಿದೆ.

**ಏತದಸ್ಯಾ ಅನಶ್ಶಯೇ ಸುಸಂಪಿಷ್ಟಂ ವಿಪಾಶ್ಯಾ ।**
**ಸಸಾರ ಸೀಂ ಪರಾವತಃ ॥**

(ಋ. ಸಂ. ೪-೩೦-೧೧)

**ಏತದಸ್ಯಾ ಅನಃ ಆಶೇತೇ ವಿಮುಕ್ತಪಾಶಿ ಸಸಾರೋಷಾಃ ಪರಾವತಃ ಪ್ರೇರಿತವತಃ ಪರಾಗತಾದ್ವಾ** (ನಿ. ೧೧-೪೮) (ಉದಕಭಾವಕ್ಕೆ) ನೀರಿನ ರೂಪಕ್ಕೆ ಪರಿವರ್ತಿತವಾಗಿರುವ ಮೇಘವನ್ನು ನೋಡುತ್ತಾ ಹೇಳುವ ಈ ವಚನದಲ್ಲಿ ವಾಯುವಿನಿಂದ ಉಷಸ್ಸಿನ ರಥವು ಮೇಘದ ಆಶ್ರಯದಿಂದ ಇದ್ದು ವಾಯುವಿನ ವೇಗದಿಂದ ಶಿಥಿಲವಾದ ಸಂಧಿಬಂಧಗಳುಳ್ಳದ್ದಾಗಿ ಇಲ್ಲಿ ಇರುವುದು ಎಂದು ವರ್ಣಿತವಾಗಿರುವುದರಿಂದ **ಉಷಸ್ಸು ಮಧ್ಯಸ್ಥಾನದೇವತೆಯೆಂದು** ತಿಳಿದುಬರುತ್ತದೆ.

**ಉಷಾಃ । ಉಷಾ ವಷ್ಟೇಃ ಕಾಂತಿಕರ್ಮಣಃ ಉಚ್ಛತೇರಿತರಾ ಮಾಧ್ಯಮಿಕಾ । ವಶ ಕಾಂತೌ** ಎಂಬ ಧಾತುವಿನಿಂದ ಕಾಂತಿಯುಳ್ಳದ್ದು ಎಂಬ ಅರ್ಥದಲ್ಲಿ ಉಷಶ್ಶಬ್ದದ ರೂಪವು ಉಂಟಾಗಿರುವುದು. ಅಥವಾ **ಉಚ್ಛೀ ವಿವಾಸೇ** ಎಂಬ ಧಾತುವಿನಿಂದ **ಉಷಾಃ** ಎಂಬ ಶಬ್ದದ ರೂಪವು ನಿಷ್ಪನ್ನವಾಗುವುದು. ಮೇಘದಲ್ಲಿರುವ ಉದಕಗಳನ್ನು ಸುರಿಸುತ್ತದೆ. ಅಥವಾ ಮೇಘಗಳನ್ನು ಮಧ್ಯದಲ್ಲಿ ಇರುವಂತೆ ತಳ್ಳುತ್ತದೆ ಎಂದು ವಿಕಲ್ಪವಾಗಿ ಅರ್ಥ ಮಾಡಿರುವರು. ಮತ್ತು ಇದರಿಂದ ಕಾಂತಿಯುಳ್ಳ ರೂಪದಿಂದ ದ್ಯುಸ್ಥಾನದೇವತೆಯಾಗಿರುವ ಉಷಸ್ಸು, ಬೇರೆ ಯಾಗಿರುವುದು. ಇದರಲ್ಲಿ ವಿಕಲ್ಪವು ಇರುವುದು. **ಯಥೋಕ್ತಂ—ತದ್ವಾ ಇದಂ ವಿಕಲ್ಪೇನ ದ್ಯುಸ್ಥಾನಾಯಾಃ ಯಾ ಪುನರಿತರಾ ಮಾಧ್ಯಮಿಕಾ ಉಷಾಃ ನ ತಸ್ಯಾಃ ವಿಕಲ್ಪಃ ಕಿಂ ತರ್ಹಿ ಉಚ್ಛತೇರೇವ ಸಾ ವಿವಾಸನಾರ್ಥಸ್ಯ ವಿವಾಸಯತಿ ಉದಕಾನಿ ವಿವಾಸ್ಯತೇ ವಾ ಮೇಘಾರ್ಥ ಮಧ್ಯಮೇನೇತಿ** (ನಿ. ೧೨-೭).

ವಿವಾಸನಾರೂಪವಾದ ಅರ್ಥವುಳ್ಳ ಉಚ್ಛಧಾತುವಿನಿಂದ ಉಂಟಾದ ಶಬ್ದಬೋಧ್ಯವಾದ **ಉಷಸ್ಸು** ಮೇಘದಲ್ಲಿರುವ ಉದಕಗಳನ್ನು ಸುರಿಸುವುದಾಗಿ ಮಧ್ಯಸ್ಥಾನದಲ್ಲಿ (ಅಂತರಿಕ್ಷದಲ್ಲಿ) ದೇವತಾ ರೂಪದಿಂದ ಪ್ರಕಾಶಿಸುತ್ತಿರುವುದು ಎಂದು ವಿಕಲ್ಪವು ಇರುವುದು.

**ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ ।**
**ಯೇನ ತೋಕಂ ಚ ತನಯಂ ಚ ಧಾಮಹೇ ॥**

(ಋ. ಸಂ. ೧-೯೨-೧೩)

ಈ ಋಕ್ಕಿನಲ್ಲಿ ಉಭಯಸಾಧಾರಣವಾದ ಧನಪಶುಪುತ್ರಾದಿಗಳನ್ನು ಅನುಗ್ರಹಿಸುವಂತೆ ಪ್ರಾರ್ಥನೆಯು ಹೇಳಿರುತ್ತದೆ.

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
**ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ ಮಾತರಃ ॥**

(ಋ. ಸಂ. ೧-೯೨-೧)

ಈ ಋಕ್ಕಿನಲ್ಲಿ **ಪೂರ್ವೇ ಅರ್ಧೇ ಅಂತರಿಕ್ಷಲೋಕಸ್ಯ । ಪೂರ್ವಾರ್ಧ**ವೆಂದರೆ ಅಂತರಿಕ್ಷಲೋಕವೆಂದೂ, **ಕೇತುಮಕ್ರತ** ಎಂಬಲ್ಲಿ **ಕೇತು** ಶಬ್ದಕ್ಕೆ **ಪ್ರಜ್ಞಾನ**ವೆಂದೂ, ಗಾವಃ ಎಂಬುವುದಕ್ಕೆ ಕಿರಣಗಳೆಂದೂ, ಅರ್ಥ ಮಾಡಿ, ಸೂರ್ಯನಿಂದಲೇ ಪ್ರಕಾಶವನ್ನು ಹೊಂದುವ ಈ **ಉಷೋದೇವಿಯು** ಎರಡು ರೂಪಗಳಿಂದ ಪ್ರಕಾಶಿಸುತ್ತಾ ಎರಡುವಿಧವಾದ ಕಾರ್ಯಗಳನ್ನು ನಿರ್ವಹಿಸುವಳೆಂದು ವಿವರಿಸಿದೆ.

**ಸ್ವಧಾಭಿಃ—ಆತ್ಮೀಯೈಸ್ತೇಜೋಭಿಃ ।** ತನ್ನ ತೇಜಸ್ಸುಗಳಿಂದ ಎಂದು ಅರ್ಥವು. **ಸ್ವಧಾ** ಶಬ್ದವು-ಇಪ್ಪತ್ತೆಂಟು ಅನ್ನನಾಮಗಳಲ್ಲಿಯೂ (ನಿ. ೩-೯) ನೂರೊಂದು **ಉದಕ** ನಾಮಗಳಲ್ಲಿಯೂ, (ನಿ. ೨-೨೪) ಪಠಿತವಾಗಿರುವುದಾದರೂ ಇಲ್ಲಿ **ಸಾಯಣರೂ ಸ್ಕಂದಸ್ವಾಮಿಗಳೂ** ಕೂಡ ತೇಜಸ್ಸೆಂದು ಅರ್ಥವನ್ನು ವಿವರಿಸಿರುವರು.

**ಮಘೋನೀ ಉಷಾಃ**—(ಧನವತೀ,) ಈ ಶಬ್ದಗಳೂ ನಿರುಕ್ತದಲ್ಲಿ ಉಷೋವಾಚಕಗಳಲ್ಲಿ ಉಕ್ತವಾಗಿಲ್ಲದಿದ್ದರೂ ಇಲ್ಲಿ ಉಷಸ್ಸೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ದ್ಯೂನ್**—**ದಿವಸಾನ್** ದಿನಗಳೆಂದು ಅರ್ಥವು। ನಿರುಕ್ತಕಾರರು-**ದ್ಯುರಿತ್ಯಹ್ನೋ ನಾಮಧೇಯಂ ದ್ಯೋತತ ಇತಿ ಸತಃ ।** (ನಿ. ೧-೭) ದ್ಯು ಎಂಬ ಶಬ್ದವು ಪ್ರಕಾಶವುಳ್ಳದ್ದೆಂಬ ಅರ್ಥವುಳ್ಳದ್ದಾಗಿ ಹಗಲು ಎಂಬ ಅರ್ಥವನ್ನು ಬೋಧಿಸುವುದು ಎಂದೂ, ಹನ್ನೆರಡು **ಅಹರ್ನಾಮ**ಗಳಲ್ಲಿ (ನಿ. ೨-೨೧) ದ್ಯು ಶಬ್ದವು ಉಕ್ತವಾಗಿರುವುದರಿಂದ ಹಗಲು ಎಂದೂ, ಅರ್ಥವನ್ನು ವಿವರಿಸಿ,—

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ॥**
(ಋ. ಸಂ. ೨-೧-೧)

ಎಂಬ ಈ ಋಕ್ಕಿನಲ್ಲಿ ದ್ಯುಭಿಃ-ಅಹೋಭಿಃ (ನಿ. ೬-೧) ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಉವಾಸ**—ವಸ ನಿವಾಸೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ತಿಪಿಗೆ ಣಲಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಲಿಟ್ಯಭ್ಯಾಸಸ್ಯೋಭಯೇಷಾಂ** (ಪಾ. ಸೂ. ೬-೧-೧೭) ಎಂಬುದರಿಂದ ಅದಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆವಃ**—ವಸ ನಿವಾಸೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಹಲ್‌ಙ್ಯಾಭ್ಯೋ**-(ಪಾ. ಸೂ. ೬-೧-೬೮) ಎಂಬುದರಿಂದ ಅಪೃಕ್ತವಾದ ತಿಪ್ಪಿಗೆ ಲೋಪ. **ಛಂದಸ್ಯಪಿ ದೃಶ್ಯತೇ** (ಪಾ. ಸೂ. ೬-೪-೭೩) ಎಂಬುದರಿಂದ ಅಂಗಕ್ಕೆ ಆಡಾಗಮ ಬರುತ್ತದೆ. ಧಾತುಸಕಾರಕ್ಕೆ ರುತ್ವವಿಸರ್ಗ. ಆವಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉಚ್ಛಾತ್**—ಉಛೀ ವಿವಾಸೇ. ಧಾತು ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ ಪ**—(ಪಾ. ಸೂ ೪-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಉತ್ತರಾನ್**—ಅತಿಶಯಾರ್ಥತೋರುವಾಗ ಉತಿಗೆ **ದ್ವಿವಚನವಿಭಜ್ಯೋಪೆ**—(ಪಾ. ಸೂ. ೫-೩-೫೭) ಎಂಬುದರಿಂದ ತರಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತ. ದ್ವಿವಚನಬಹುವಚನಾಂತರೂಪ. ಉತ್ತರಾನ್+ಅನು ಎಂದಿರುವಾಗ **ದೀರ್ಘಾದಟಿಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿನಿತ್ಯಂ** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವಕ್ಕೆ ಅನುನಾಸಿಕವಿಶಿಷ್ಟ ಆಕಾರ ಬರುತ್ತದೆ.

**ಅನು—ಅನುರ್ಲಕ್ಷಣೇ** (ಪಾ. ಸೂ. ೧-೪-೮೪) ಎಂಬುದರಿಂದ ಅನು ಎಂಬುದಕ್ಕೆ ಕರ್ಮಪ್ರವಚನೀಯ ಸಂಜ್ಞೆ ಬರುತ್ತದೆ. **ಕರ್ಮಪ್ರವಚನೀಯಯುಕ್ತೇ ದ್ವಿತೀಯಾ** (ಪಾ. ಸೂ. ೨-೩-೮) ಎಂಬುದರಿಂದ ಉತ್ತರಾನ್ ದ್ಯೂನ್ ಎಂದು ದ್ವಿತೀಯಾವಿಭಕ್ತಿ ಬಂದಿದೆ.

ಅಜರಾ | **ಅಮೃತಾ**—ನ ವಿದ್ಯತೇ ಜರಾ ಯಸ್ಯಾ ಸಾ ಅಜರಾ. ಹೀಗೆಯೇ ಅಮೃತಾ ಎಂಬಲ್ಲಿಯೂ ಸಮಾಸ. ಬಹುವ್ರೀಹಿಸ್ವರವು ಬಾಧಿತವಾಗಿ **ನಞೋ ಜರಮರಮಿತ್ರಮೃತಾಃ** (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಚರತಿ**—ಚರ ಗತಿಭಕ್ಷಣಯೋಃ ಧಾತು. ಲಟ್‌ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ. || ೧೩ ||



|| ಸಂಹಿತಾಪಾಠಃ ||

ವ್ಯ೧ಞ್ಜಿಭಿರ್ದಿವ ಆತಾಸ್ವದ್ಯೌದಪ ಕೃಷ್ಣಾಂ ನಿರ್ಣಿಜಂ
ದೇವ್ಯಾವಃ |
ಪ್ರಬೋಧಯಂತ್ಯರುಣೇಭಿರಶ್ವೈರೋಷಾ ಯಾತಿ ಸುಯುಜಾ
ರಥೇನ || ೧೪ ||

|| ಪದಪಾಠಃ ||

ವಿ | ಅಂಜಿಽಭಿಃ | ದಿವಃ | ಆತಾಸು | ಅದ್ಯೌತ್ | ಅಪ | ಕೃಷ್ಣಾಂ | ನಿಃಽನಿಜಂ |
ದೇವೀ | ಆವರಿತ್ಯಾವಃ |
ಪ್ರಽಬೋಧಯಂತೀ | ಅರುಣೇಭಿಃ | ಅಶ್ವೈಃ | ಆ | ಉಷಾಃ | ಯಾತಿ |
ಸುಽಯುಜಾ | ರಥೇನ || ೧೪ ||

॥ ಸಾಯಣಭಾಷ್ಯಂ ॥

ದಿವೋ ನಭಸಃ ಸಂಬಂಧಿನೀಷ್ವಾಶಾಸು । ದಿಙ್ನಾಮೈತತ್ । ಅತತಾಸು ವಿಸ್ತೀರ್ಣಾಸು ದಿಕ್ಷೂಷಾ ಅಂಜಿಭಿರ್ವ್ಯಂಜಕೈಃ ಪ್ರಕಾಶಕೈಸ್ತೇಜೋಭಿರ್ವ್ಯದ್ಯೌತ್ । ವಿದ್ಯೋತತೇ । ಪ್ರಕಾಶತೇ । ಸೈಷಾ ದೇವೀ ದೇವನಶೀಲಾ ಕೃಷ್ಣಾಂ ನಿರ್ಣಿಜಂ । ನಿರ್ಣಿಗಿತಿ ರೂಪನಾಮ । ರಾತ್ರಿಕೃತಂ ಕೃಷ್ಣಂ ರೂಪಮಪಾವಃ । ಅಪಾವೃಣೋತ್ । ಪ್ರಕಾಶೇನ ತಿರಸ್ಕೃತವತೀ । ಅಪಿ ಚಾರುಣೇಭಿರರುಣೈರ್ಲೋಹಿತವರ್ಣೈರಶ್ವೈರ್ವ್ಯಾಪನಶೀಲೈಃ ಸ್ವಕೀಯೈಃ ಕಿರಣೈಸ್ತುರಗೈರ್ವಾ ಸುಯುಜಾ ಸಮ್ಯಗ್ಯುಕ್ತೇನ ರಥೇನೋಷಾ ಆ ಯಾತಿ । ಆಗಚ್ಛತಿ । ಕಿಂ ಕುರ್ವತೀ । ಪ್ರಬೋಧಯಂತೀ ಸುಪ್ತಾನ್ಪ್ರಾಣಿನಃ ಪ್ರಬುದ್ಧಾನ್ಕುರ್ವತೀ ॥ ಅದ್ಯೌತ್ । ದ್ಯುತ ದೀಪ್ತೌ । ಲುಙ್ । ದ್ಯುದ್ಭ್ಯೋ ಲುಙಃ । ಪಾ. ೧-೩-೯೧ । ಇತಿ ಪರಸ್ಮೈಪದಂ । ವ್ಯತ್ಯಯೇನ ಚ್ಲೇರ್ಲುಕ್ । ಗುಣೇ ಪ್ರಾಪ್ತೇ ವೃದ್ಧಿಶ್ಛಾಂದಸೀ । ಯದ್ವಾ । ದ್ಯು ಅಭಿಗಮನೇ । ಅದಾದಿಕಃ । ಉತೋ ವೃದ್ಧಿರ್ಲುಕಿ ಹಲಿ । ಪಾ. ೭-೩-೮೯ । ಇತಿ ವೃದ್ಧಿಃ ॥

॥ ಪ್ರತಿಪದಾರ್ಥ ॥

(ಉಷಸ್ಸು) ದಿವಃ—ಅಂತರಿಕ್ಷದ । ಆಶಾಸು—ದಿಕ್ಕುಗಳಲ್ಲಿ । ಅಂಜಿಭಿಃ—ಪ್ರಕಾಶಕವಾದ ತೇಜಸ್ಸಿನಿಂದ । ವಿ ಅದ್ಯೌತ್—ಪ್ರಕಾಶಪಡಿಸುತ್ತದೆ । ದೇವೀ—ಪ್ರಕಾಶನಶೀಲಳಾದ ಉಷಸ್ಸು । ಕೃಷ್ಣಾಂ ನಿರ್ಣಿಜಂ—ಕೃಷ್ಣರೂಪವನ್ನು (ಕತ್ತಲೆಯನ್ನು) । ಅಪ ಅವಃ—ಪರಿಹರಿಸಿದಳು । ಅರುಣೇಭಿಃ—ರಕ್ತವರ್ಣವಾದ । ಅಶ್ವೈಃ—ವ್ಯಾಪಕಗಳಾದ ಕಿರಣಗಳಿಂದ (ಅಶ್ವಗಳಿಂದ) । ಸುಯುಜಾ—ಯುಕ್ತವಾದ । ರಥೇನ—ರಥದಿಂದ । ಪ್ರಬೋಧಯಂತೀ—(ಮಲಗಿರುವ ಪ್ರಾಣಿಗಳನ್ನು) ಎಬ್ಬಿಸುತ್ತಾ । ಆ ಯಾತಿ—ಬರುತ್ತಾಳೆ.

॥ ಭಾವಾರ್ಥ ॥

ಉಷಸ್ಸು ಅಂತರಿಕ್ಷದ ನಾನಾಮೂಲೆಗಳನ್ನೂ ತನ್ನ ಕಿರಣಗಳಿಂದ ಪ್ರಕಾಶಪಡಿಸುತ್ತಾಳೆ; ರಾತ್ರಿಸಂಬಂಧವಾದ ಕೃಷ್ಣರೂಪವನ್ನು (ಕತ್ತಲೆಯನ್ನು) ಪ್ರಕಾಶನಶೀಲಳಾದ ಪರಿಹರಿಸಿಕೊಳ್ಳುತ್ತಾಳೆ. ರಕ್ತವರ್ಣವಾದ ಅಶ್ವಗಳಿಂದ ಯುಕ್ತವಾದ ರಥದಲ್ಲಿ ಬಂದು ನಿದ್ರಿಸುತ್ತಿರುವ ಪ್ರಾಣಿಗಳನ್ನು ಎಚ್ಚರಗೊಳಿಸುತ್ತಾಳೆ.

## English Translation.

The divine Ushas lights up with her beams the quarters of the heavens; she has thrown off her gloomy form, and awaking (those who sleep), comes in her car, drawn by purple steeds.

॥ ವಿಶೇಷವಿಷಯಗಳು ॥

**ಆಶಾಸು— ಆತತಾಸು ವಿಸ್ತೀರ್ಣಾಸು ದಿಕ್ಷು ।** ಆಶಾಃ, ಆಶಾಃ, ಉಪರಾಃ, ಎಂಬ ಎಂಟುದಿಙ್ನಾಮಗಳಲ್ಲಿ ಆಶಾ ಎಂಬ ಶಬ್ದವು (ನಿ. ೨-೧೬) ಉಕ್ತವಾಗಿರುವುದರಿಂದ ದಿಕ್ಕುಗಳೆಂದು ಅರ್ಥವು.

**ನಿರ್ಣಿಜಮ್—ರೂಪಮ್ । ನಿರ್ಣಿಕ್ ವವ್ರಿಃ** ಎಂಬ ಹದಿನಾರು ರೂಪನಾಮಗಳಲ್ಲಿ ಈ ಶಬ್ದವು ಉಕ್ತವಾಗಿರುವುದರಿಂದ (ನಿ. ೩-೧೩) ರೂಪ ಎಂದು ಅರ್ಥ.

**ಅರುಣೇಭಿಃ ಅಶ್ವೈಃ—ಅರುಣೈಃ ಲೋಹಿತವರ್ಣೈಃ ವ್ಯಾಪನಶೀಲೈಃ ಸ್ವಕೀಯೈಃ ಕಿರಣೈಃ ತುರಗೈರ್ವಾ** ಕೆಂಪು ಬಣ್ಣವುಳ್ಳ ಮತ್ತು ವ್ಯಾಪಿಸುವ ಸ್ವಭಾವವುಳ್ಳದ್ದಾದ ತನ್ನ ಕಿರಣಗಳಿಂದ ಅಥವಾ ಕುದುರೆಗಳಿಂದ ಎಂದು ಅರ್ಥ. **ಅರುಣ್ಯೋ ಗಾವ ಉಷಸಃ** (ನಿ. ೨-೭೮) ಕೆಂಪು ಬಣ್ಣದಿಂದಕೂಡಿರುವ ಗೋವುಗಳು ಅಥವಾ ಕಿರಣಗಳು ಉಷಸ್ಸಿಗೆ ವಾಹನವಾಗಿರುವುವು ಎಂದು ಯಾಸ್ಕರು ಹೇಳಿರುವರು. ಉಷೋದೇವಿಯು ತನ್ನ ಪ್ರಕಾಶದಿಂದ ಅಂತರಿಕ್ಷವನ್ನು ವ್ಯಾಪಿಸಿ ದಿಕ್ಕುಗಳೆಲ್ಲದರಲ್ಲಿಯೂ ಹರಡಿ, ರಾತ್ರಿಯ ಸಂಬಂಧವಾದ ಜಗತ್ತಿನ ಕಪ್ಪು ಬಣ್ಣದ ರೂಪವನ್ನು ನಾಶಗೊಳಿಸುತ್ತಾ ತನ್ನ ಕೆಂಪುಬಣ್ಣವುಳ್ಳ ಕುದುರೆಗಳನ್ನು ಕಟ್ಟಿದ ಅಥವಾ ಕೆಂಪಾದಕಿರಣಗಳಿಂದ ಕೂಡಿರುವ ರಥದಿಂದ ಪ್ರಕಾಶಿಸುತ್ತಾ ಬರುತ್ತಿರುವಳು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಂಜಿಭಿಃ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಔಣಾದಿಕ ಇ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ.

**ದಿವಃ—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅದ್ಯೌತ್**—ದ್ಯುತ ದೀಪ್ತೌ. ಧಾತು. ಲುಙ್. ಇದು ಆತ್ಮನೇಪದಿಯಾದರೂ **ದ್ಯುದ್ಭ್ಯೋ ಲುಙಿ** (ಪಾ. ಸೂ. ೧-೩-೯೧) ಎಂಬುದರಿಂದ ಲುಙಿನಲ್ಲಿ ಮಾತ್ರ ಪರಸ್ಮೈಪದಿಯಾಗುತ್ತದೆ. **ಚ್ಲಿ ಲುಙಿ** ಎಂಬುದರಿಂದ ಚ್ಲಿವಿಕರಣ ಪ್ರಾಪ್ತವಾದಾಗ **ವ್ಯತ್ಯಯೋಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಲುಕ್. **ಇತಶ್ಚ** ಎಂಬುದರಿಂದ ತಿಪಿನ ಇಕಾರಕ್ಕೆ ಲೋಪ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧ**—(ಪಾ. ೭-೩-೮೪) ಸೂತ್ರದಿಂದ ಗುಣವು ಪ್ರಾಪ್ತವಾದಾಗ ಛಾಂದಸವಾಗಿ ವೃದ್ಧಿ ಬರುತ್ತದೆ. ಅಥವಾ ದ್ಯು ಅಭಿಗಮನೇ ಧಾತು ಅದಾದಿ. ಲಙ್ ಪ್ರಥಮಪುರುಷಏಕವಚನದಲ್ಲಿ ತಿಪ್. **ಇತಶ್ಚ** ಸೂತ್ರದಿಂದ ಇಕಾರಲೋಪ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. **ಉತೋವೃದ್ಧಿರ್ಲುಕಿಹಲಿ** (ಪಾ. ಸೂ. ೭-೩-೮೯) ಎಂಬುದರಿಂದ ಧಾತುವಿನ ಉಕಾರಕ್ಕೆ ವೃದ್ಧಿ. ಅಂಗಕ್ಕೆ ಅಡಾಗಮ. ಅದ್ಯೌತ್ ಎಂದು ರೂಪವಾಗುತ್ತದೆ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪ್ರಬೋಧಯಂತೀ**—ಬುಧ ಅವಗಮನೇ. ಧಾತು. ಪ್ರಯೋಜಕವ್ಯಾಪಾರತೋರುವುದರಿಂದ ಣಿಚ್. ಣಿಜಂತದಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಉಗಿತ್ತಾದುದರಿಂದ **ಉಗಿತಶ್ಚ** ಸೂತ್ರದಿಂದ ಙೀಪ್.

**ಅರುಣೇಭಿಃ**—ಅರುಣ+ಭಿಸ್ ಎಂದಿರುವಾಗ **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ವಿಕಲ್ಪವಾಗಿ ಭಿಸ್ಸಿಗೆ ಐಸ್‌ಭಾವಹೇಳಿರುವುದರಿಂದ ಇಲ್ಲಿ ಬರುವುದಿಲ್ಲ. **ಬಹುವಚನೇ. ಝುಲ್ಯೇತ್** ಎಂಬುದರಿಂದ ಏತ್ವ.

**ಯಾತಿ**—ಯಾ ಪ್ರಾಪಣೇ ಧಾತು. ಲಟ್ ಪ್ರಥಮಪುರುಷಏಕವಚನರೂಪ. ಅತಿಜಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಯುಜಾ**—ಯುಜಿರ್ ಯೋಗೇ. ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ ಭಾವಾರ್ಥದಲ್ಲಿ ಕ್ವಿಪ್. ಸುಯುಜ್ ಶಬ್ದ. ತೃತೀಯಾ ಏಕವಚನಾಂತರೂಪ. **ನಞ್‌ಸುಭ್ಯಾಂ** (ಪಾ. ಸೂ ೬-೨-೧೭೨) ಉತ್ತರ ಪದಾಂತೋದಾತ್ತಸ್ವರ ಬರುತ್ತದೆ. || ೧೪ ||

॥ ಸಂಹಿತಾಪಾಠಃ ॥

ಆವಹಂತೀ ಪೋಷ್ಯಾ ವಾರ್ಯಾಣಿ ಚಿತ್ರಂ ಕೇತುಂ ಕೃಣುತೇ ಚೇಕಿತಾನಾ ।
ಈಯುಷೀಣಾಮುಪಮಾ ಶಶ್ವತೀನಾಂ ವಿಭಾತೀನಾಂ ಪ್ರಥಮೋಷಾ ವ್ಯಶ್ವೈತ್ ॥ ೧೫ ॥

॥ ಪದಪಾಠಃ ॥

ಆಽವಹಂತೀ । ಪೋಷ್ಯಾ । ವಾರ್ಯಾಣಿ । ಚಿತ್ರಂ । ಕೇತುಂ । ಕೃಣುತೇ । ಚೇಕಿತಾನಾ ।
ಈಯುಷೀಣಾಂ । ಉಪಽಮಾ । ಶಶ್ವತೀನಾಂ । ವಿಽಭಾತೀನಾಂ । ಪ್ರಥಮಾ । ಉಷಾಃ । ವಿ । ಅಶ್ವೈತ್ ॥ ೧೫ ॥

|| ಸಾಯಣಭಾಷ್ಯಂ ||

ದೇವಾನಾಂ ಹವೀಂಷ್ಯಾವಹಂತೀತ್ಯೇಷೋಽಸ್ಯೋ ಯಾಜ್ಯಾ । ಸೂತ್ರಿತಂ ಚ । ಆ ದ್ಯಾಂ ತನೋಷಿ ರಶ್ಮಿಭಿರಾವಹಂತೀ ಪೋಷ್ಯಾ ವಾರ್ಯಾಣಿ ನ ತಾ ಅರ್ವಾ ರೇಣುಕಕಾಟೋ ಅಶ್ನುತೇ । ಆ. ೬-೧೪ । ಇತಿ ||

ಪೋಷ್ಯಾ ಯಾವಜ್ಜೀವಂ ಪೋಷಣಸಮರ್ಥಾನಿ ವಾರ್ಯಾಣಿ ವರಣೀಯಾನಿ ಧನಾನ್ಯಾವಹಂತ್ಯಸ್ಮಭ್ಯಮಾನಯಂತೀ ಚೇಕಿತಾನಾ ಸರ್ವಂ ಜನಂ ಪ್ರಜ್ಞಾಪಯಂತ್ಯುಷಾಶ್ಚಿತ್ರಂ ವಿಚಿತ್ರಮಾಶ್ಚರ್ಯಭೂತಂ ಚಾಯನೀಯಂ ವಾ ಕೇತುಂ ಪ್ರಜ್ಞಾಪಕಂ ರಶ್ಮಿಂ ಕೃತ್ಸ್ನಜಗತ್ಪ್ರಕಾಶನಸಮರ್ಥಂ ಕೃಣುತೇ । ಸ್ವಾತ್ಮನಃ ಪ್ರಕಾಶಾತ್ಕುರುತೇ । ಸೈಷೇಯುಷೀಣಾಂ ಗಮನವತೀನಾಂ ಪೂರ್ವನಿಷ್ಪನ್ನಾನಾಂ ಶಶ್ವತೀನಾಂ ಬಹ್ವೀನಾಮುಷಸಾಮುಪಮಾ ಉಪ ಸಮೀಪೇ ನಿರ್ಮಿತೋಪಮಾನಭೂತಾ ವಾ ವಿಭಾತಿನಾಂ ವಿಶೇಷೇಣ ಪ್ರಕಾಶಮಾನಾನಾಮಾಗಾಮಿನೀನಾಮುಷಸಾಂ ಪ್ರಥಮಾದ್ಯಾ ಏವಂಭೂತೋಷಾ ವ್ಯಶ್ವೈತ್ । ತೇಜಸಾ ಪ್ರವೃದ್ಧಾಸೀತ್ ॥ ಪೋಷ್ಯಾ । ಪುಷ ಪುಷ್ಟೌ । ಪೋಷಣಂ ಪೋಷಃ । ಭಾವೇ ಘಞ್ । ತತ್ರ ಭವಾನಿ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ವಾರ್ಯಾಣಿ । ವೃಞ್ ಸಂಭಕ್ತೌ । ಋಹಲೋರ್ಣ್ಯತ್ । ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ । ಚೇಕಿತಾನಾ । ಕಿತ ಜ್ಞಾನೇ । ಅಸ್ಮಾದ್ಯಙಂತಾಲ್ಲಟಃ ಶಾನಚ್ । ಛಂದಸ್ಯುಭಯಥೇತಿ ತಸ್ಯಾರ್ಧಧಾತುಕತ್ವಾದತೋಲೋಪಯಲೋಪೌ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಈಯುಷೀಣಾಂ । ಇಣ್ ಗತೌ । ಲಿಟಃ ಕ್ವಸುಃ । ದ್ವಿರ್ಭಾವಾದಿ । ಉಗಿತಶ್ಚೇತಿ ಙೀಪ್ । ವಸೋಃ ಸಂಪ್ರಸಾರಣಂ । ಇಣೋ ಯಣ್ಣಿತಿ ಯಣಾದೇಶಃ । ದೀರ್ಘ ಇಣಃ ಕಿತೀತ್ಯಭ್ಯಾಸಸ್ಯ ದೀರ್ಘತ್ವಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಙೀಪ್ಸುಪೌ ಪಿತ್ವಾದನುದಾತ್ತೌ । ವಿಭಾತೀನಾಂ । ಭಾ ದೀಪ್ತೌ । ಅಸ್ಮಾಚ್ಛತೃಂತಾತ್ಪೂರ್ವವತ್ ಙೀಪ್ । ಙ್ಯಾಶ್ಛಂದಸಿ ಬಹುಲಮಿತಿ ನಾಮ ಉದಾತ್ತತ್ವಂ । ವಿಶ್ವೈತ್ । ಟುಓಶ್ವಿ ಗತಿವೃದ್ಧ್ಯೋಃ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಗುಣೇ ಕೃತೇ ವ್ಯತ್ಯಯೇನೈತ್ವಂ ॥

|| ಪ್ರತಿಪದಾರ್ಥ ||

**ಪೋಷ್ಯಾ**—ಪೋಷಕಗಳಾದ । **ವಾರ್ಯಾಣಿ**—ವರಣೀಯವಾದ ಧನವನ್ನು । **ಆವಹಂತೀ**—ತರುವ । **ಚೇಕಿತಾನಾ**—(ಅಜ್ಞಾನಿಗಳಿಗೆ) ಜ್ಞಾನದಾಯಕಳಾದ । **ಉಷಾಃ**—ಉಷಸ್ಸು (ಉಷೋದೇವತೆಯು) । **ಚಿತ್ರಂ**—ವಿಚಿತ್ರವಾದ । **ಕೇತುಂ**—ಜ್ಞಾಪಕವಾದ ರಶ್ಮಿಯನ್ನು । **ಕೃಣುತೇ**—ಉಂಟುಮಾಡುತ್ತಾಳೆ । **ಈಯುಷೀಣಾಂ**—ಹಿಂದೆ ಕಳೆದುಹೋದ । **ಶಶ್ವತೀನಾಂ**—ಅನೇಕ ಉಷಸ್ಸುಗಳ । **ಉಪಮಾ**—ಸಮೀಪವರ್ತಿಯಾಗಿಯೂ । **ವಿಭಾತೀನಾಂ**—ವಿಶೇಷವಾಗಿ ಪ್ರಕಾಶಿಸುವ (ಮುಂದೆ ಬರುವ ಉಷಸ್ಸುಗಳ) । **ಪ್ರಥಮಾ**—ಮೊದಲನೆಯವಳಾಗಿಯೂ ಬರುವ (ಉಷಸ್ಸು) । **ವ್ಯಶ್ವೈತ್**—ತೇಜೋಯುಕ್ತಳಾಗಿ ಈಗ (ಉದಿಸಿದಳು) ।

॥ ಭಾವಾರ್ಥ ॥

(ತನ್ನ ಜೊತೆಯಲ್ಲಿ) ಜೀವನಾಧಾರವಾದ ವಸ್ತುವನ್ನು ತರುವವಳೂ, (ಸುಪ್ತರಾಗಿ ಜ್ಞಾನರಹಿತರಾದವರಿಗೆ) ಜ್ಞಾನದಾಯಕಳೂ, ಆದ ಉಷಸ್ಸು ವಿಚಿತ್ರವಾದ ಕಾಂತಿಯನ್ನು ಬೀರುತ್ತಾಳೆ. ಕಳೆದುಹೋದ ಅನೇಕ ಉಷಸ್ಸುಗಳಿಗೆ ಸಮಾನಳೂ, ಮುಂದೆ ಬರುವ ದೇದೀಪ್ಯಮಾನವಾದ ಉಷಸ್ಸುಗಳಿಗೆ ಆದ್ಯಳೂ ಆಗಿ ಈಗ ಪ್ರಕಾಶಿಸುತ್ತಿದ್ದಾಳೆ.

## English Translation.

Bringing with her life-sustaining blessings, and giving consciousness (to the unconscious), she imparts (to the world) her wonderful radiance. The similitude of the numerous dawns that have gone by, the first of the brilliant (dawns that are to come), Ushas has to-day appeared.

॥ ವಿಶೇಷವಿಷಯಗಳು ॥

**ಕೇತುಂ ಕೃಣುತೇ—ಪ್ರಜ್ಞಾಪಕಂ ರಶ್ಮಿಂ ।** ಲೋಕವೆಲ್ಲವನ್ನೂ ಜ್ಞಾನವುಳ್ಳದ್ದನ್ನಾಗಿ ಮಾಡುವ ಕಿರಣವನ್ನು ಎಂದು ಸಾಯಣರು ಅರ್ಥಮಾಡಿರುವರು. ಕೇತುಶಬ್ದಕ್ಕೆ ಜ್ಞಾನ, ಕರ್ಮ, ರಶ್ಮಿ ಎಂಬ ಅರ್ಥಗಳು ಇರುವುವೆಂದು ಹೇಳಿ ನಿರುಕ್ತಕಾರರು ಉದಾಹರಣೆಯನ್ನು ಕೊಟ್ಟಿರುವರು. **ಕೇತಃ ಕೇತುಃ ಚೇತಃ** ಎಂಬ ಹನ್ನೊಂದು ಪ್ರಜ್ಞಾನಾಮಗಳಲ್ಲಿ ಕೇತುಶಬ್ದವು ಉಕ್ತವಾಗಿರುವುದರಿಂದ ಪ್ರಜ್ಞೆ ಎಂದು ಅರ್ಥ—

**ನವೋನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ ॥**
**ಭಾಗಂ ದೇವೇಭ್ಯೋ ವಿ ದಧಾತ್ಯಾಯನ್ ಪ್ರ ಚಂದ್ರಮಾಸ್ತಿರತೇ ದೀರ್ಘಮಾಯುಃ ॥**

(ಋ. ಸಂ. ೧೦-೮೫-೧೯)

**ಅಹ್ನಾಂ ಕೇತುರುಷಸಾಮೇತ್ಯಗ್ರಂ** ಎಂಬಲ್ಲಿ **ಕೇತು** ಶಬ್ದವು **ಅಹ್ನಃ ಕರ್ತಾ ಸೂರ್ಯಃ** ಎಂದು ವ್ಯಾಖ್ಯಾನಮಾಡಿರುವುದರಿಂದ ಕೇತುಶಬ್ದವು ಕರ್ಮಕರ್ತೃರೂಪವಾದ ಅರ್ಥವನ್ನು ಬೋಧಿಸುವುದಾಗಿ ಇರುತ್ತದೆ.

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**

(ಋ. ಸಂ. ೧-೯೨-೧)

ಈ ಋಕ್ಕಿನಲ್ಲಿ ಕೇತು ಶಬ್ದವು ಪ್ರಜ್ಞಾನರೂಪವಾದ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ।**
**ದೃಶೇ ವಿಶ್ವಾಯ ಸೂರ್ಯಂ ॥**

(ಋ. ಸಂ. ೧-೫೦-೧)

ಇಲ್ಲಿ ಕೇತವಃ-ರಶ್ಮಯಃ ಎಂದು ಕೇತು ಶಬ್ದಕ್ಕೆ ರಶ್ಮಿ ಎಂದು ಅರ್ಥ. ಉಷಸ್ಸು ಜಗತ್ತೆಲ್ಲವನ್ನೂ ಎಚ್ಚರಗೊಳಿಸುವ ಅಥವಾ ಜ್ಞಾನವನ್ನು ಉಂಟುಮಾಡುವ ತನ್ನ ರಶ್ಮಿಯನ್ನು ವ್ಯಕ್ತಗೊಳಿಸಿ ಜಗತ್ತನ್ನು ಪ್ರಕಾಶಗೊಳಿಸುತ್ತದೆ.

**ಚಿತ್ರಂ—ವಿಚಿತ್ರಮಾಶ್ಚರ್ಯಭೂತಂ ಚಾಯನೀಯಂ ವಾ।** ಚಿತ್ರ ಶಬ್ದಕ್ಕೆ ಆಶ್ಚರ್ಯಕರವಾಗಿರುವುದು. ಅಥವಾ ಪೂಜ್ಯವಾಗಿರುವುದು ಎಂದು ಅರ್ಥವು—

**ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ ।**
**ಯೇನ ತೋಕಂ ಚ ತನಯಂ ಚ ಧಾಮಹೇ ॥**

(ಋ. ಸಂ. ೧-೯೨-೧೩)

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

(ಋ. ಸಂ. ೧-೧೧೫-೧)

ಎಂಬ ಈ ಋಕ್ಕುಗಳಲ್ಲಿ ಚಿತ್ರ ಶಬ್ದವು ಪೂಜ್ಯವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಈಯುಷೀಣಾಂ ಉಪಮಾ ಶಶ್ವತೀನಾಂ—ಶಶ್ವದಿತಿ ಬಹುನಾಮ। ಗನ್ತ್ರೀಣಾಂ ಬಹ್ವೀನಾಂ ಮಧ್ಯೇ ಉಪಮಾನಭೂತಾ । ಅತ್ಯಂತೋತ್ಕೃಷ್ಟೇತ್ಯರ್ಥಃ ।** ಶಶ್ವತ್ ಎಂಬ ಪದವು ಬಹು ಎಂಬ ಅರ್ಥವನ್ನು ಬೋಧಿಸುವುದು. ಕಳೆದುಹೋದ ಅನೇಕ ಉಷಸ್ಸುಗಳಿಗೂ ಈ ವರ್ತಮಾನಕಾಲದ ಉಷಸ್ಸು ಉಪಮಾನವಾಗಿರುವುದು. ಎಂದರೆ ಉಪಮಾನವನ್ನು ಕೊಡುವ ಪದಾರ್ಥವು ಯಾವಾಗಲೂ ಅಧಿಕವಾದ ಗುಣವುಳ್ಳದ್ದಾಗಿರುವುದು. ಇಲ್ಲಿ ಅಧಿಕವಾಗುತ್ತಿರುವ ಉಷಸ್ಸಿಗೆ ವರ್ತಮಾನಕಾಲದ ಉಷಸ್ಸನ್ನು ಹೋಲಿಸುವುದರಿಂದ ಉಪಮಾನವಾದ ಉಷಸ್ಸಿನಲ್ಲಿರುವ ಕಾಂತಿಯೇ ಮೊದಲಾದವುಗಳ ಅತಿಶಯವು ಎಂದು ತಿಳಿದುಬರುತ್ತದೆ. ಹಿಂದೆ ಕಳೆದುಹೋದ ಉಷಃಕಾಲಗಳೂ ಈಗಿನಂತೆಯೇ ಪ್ರಕಾಶಮಾನವಾಗಿದ್ದವು. ಮುಂದೆ ಬರುವ ಉಷಃಕಾಲಗಳೂ ಹೀಗೆಯೇ ಇರುತ್ತವೆ ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಆವಹಂತೀ**—ವಹ ಪ್ರಾಪಣೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಸ್ತ್ರೀತ್ವದಲ್ಲಿ ಙೀಪ್. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಪೋಷ್ಯಾ**—ಪುಷ ಪುಷ್ಟೌ ಧಾತು. ಪೋಷಣಂ ಪೋಷಃ (ಪುಷ್ಟಿಯಾಗುವಿಕೆ) ಭಾವಾರ್ಥದಲ್ಲಿ ಘಞ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪೋಷೇ ಭವಾನಿ ಪೋಷ್ಯಾಣಿ. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಅಕಾರಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ

ಸ್ವರ ಬರುತ್ತದೆ. ನಪುಂಸಕದಲ್ಲಿ ಶಿ ಆದೇಶ (ಶಸ್ಸಿಗೆ) ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ವಾರ್ಯಾಣಿ**—ವೃಙ್ ಸಂಭಕ್ತೌ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಕರ್ಮಣಿಯಲ್ಲಿ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಸೂತ್ರದಿಂದ ಋಕಾರಕ್ಕೆ ವೃದ್ಧಿ. **ಉರಣ್ರಪರಃ** ಸೂತ್ರದಿಂದ ರಪರವಾಗಿ ಬರುತ್ತದೆ. ತಿತ್‌ಸ್ವರವು ಪ್ರಾಪ್ತವಾದರೆ **ಈಡವಂದವೃಶಂಸದುಹಾಂ ಣ್ಯತಃ** (ಪಾ. ಸೂ ೬-೧-೧೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕದಲ್ಲಿ ದ್ವಿತೀಯಾ ಬಹುವಚನಾಂತರೂಪ.

**ಕೃಣುತೇ**—ಕೃವಿ ಹಿಂಸಾಕರಣಯೋಶ್ಚ ಧಾತು. **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ. **ಧಿನ್ವಿಕೃಣ್ವ್ಯೋರಚ** (ಪಾ. ಸೂ, ೩-೧-೮೦) ಎಂಬುದರಿಂದ ಉಪ್ರತ್ಯಯ. ಅಕಾರ ಅಂತಾದೇಶ. ಲಟ್ ಪ್ರಥಮ ಪುರುಷ ಏಕವಚನರೂಪ. ಅತಿಙಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಈಯುಷೀಣಾಂ**—ಇಣ್ ಗತೌ. ಧಾತು. ಅದಾದಿ. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ತನ್ನಿಮಿತ್ತವಾಗಿ ದ್ವಿತ್ವ. ಇ ಇ+ವಸ್ ಎಂದಿರುವಾಗ ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ** (ಪಾ. ಸೂ. ೪-೧-೯) ಎಂಬುದರಿಂದ ಙೀಪ್. ಅಜಾದಿಪ್ರತ್ಯಯಪರವಾದುದರಿಂದ ಭಸಂಜ್ಞಾಇರುವುದರಿಂದ **ವಸೋಃಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಎಂಬುದರಿಂದ ವಸುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಅಜಾದಿಪ್ರತ್ಯಯ ಧಾತುವಿಗೆ ಪರವಾದುದರಿಂದ **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. ಪ್ರತ್ಯಯ ಕಿತ್ತಾದುದರಿಂದ **ದೀರ್ಘಇಣಃ ಕಿತಿ**-(ಪಾ ಸೂ. ೭-೪-೬೯) ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ದೀರ್ಘ. **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಈಯುಷೀ ಎಂದು ರೂಪವಾಗುತ್ತದೆ. ಷಷ್ಠೀಬಹುವಚನದಲ್ಲಿ ನದ್ಯಂತನಿಬಂಧನವಾಗಿ ನುಟ್. ಙೀಪ್ ಸುಪ್ ಪಿತ್ತಾದುದರಿಂದ **ಅನುದಾತ್ತೌಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತವೆ. ವಸುವಿನ ಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಚೇಕಿತಾನಾ**—ಕಿತ ಜ್ಞಾನೇ. ಧಾತು. **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಸನ್ಯಙೋಃ** ಸೂತ್ರದಿಂದ ಧಾತುವಿಗೆ ದ್ವಿತ್ವ. ಹಲಾದಿಶೇಷ ಬಂದಾಗ **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಯಙಂತದಮೇಲೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಯಙಿನ ಅಕಾರಕ್ಕೆ ಲೋಪ. **ಯಸ್ಯಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಕಾರಕ್ಕೆ ಲೋಪ. **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಭಾತೀನಾಮ್**—ಭಾ ದೀಪ್ತೌ ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಹಿಂದಿನಂತೆ ಙೀಪ್. ಙ್ಯಂತದ ಪರದಲ್ಲಿ ನಾಮ್ ಬಂದುದರಿಂದ **ಙ್ಯಾಶ್ಛಂದಸಿ ಬಹುಲಂ** (ಪಾ. ಸೂ. ೬-೧-೧೭೮) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಅಶ್ವೈತ್**—ಟುಓಶ್ವಿ ಗತಿವೃದ್ಧ್ಯೋಃ ಧಾತು. ಲಙ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ತಿಪ್‌ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಾರಕ್ಕೆ ಗುಣ ಬಂದಾಗ ಛಾಂದಸವಾಗಿ ಐಕಾರ ಬರುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ. ॥ ೧೫ ॥



॥ ಸಂಹಿತಾಪಾಠಃ ॥

ಉದೀರ್ಧ್ವಂ ಜೀವೋ ಅಸುರ್ನ ಆಗಾದಪ ಪ್ರಾಗಾತ್ತಮ
ಆ ಜ್ಯೋತಿರೇತಿ ।
ಆರೈಕ್ಪಂಥಾಂ ಯಾತವೇ ಸೂರ್ಯಾಯಾಗನ್ಮ ಯತ್ರ ಪ್ರತಿರಂತ
ಆಯುಃ ॥ ೧೬ ॥

॥ ಪದಪಾಠಃ ॥

**ಉತ್ । ಈರ್ಧ್ವಂ । ಜೀವ । ಅಸುಃ । ನಃ । ಆ । ಅಗಾತ್ । ಅಪ । ಪ್ರ । ಅಗಾತ್ ।**
**ತಮಃ । ಆ । ಜ್ಯೋತಿಃ । ಏತಿ ।**
**ಅರೈಕ್ । ಪಂಥಾಂ । ಯಾತವೇ । ಸೂರ್ಯಾಯ । ಅಗನ್ಮ । ಯತ್ರ । ಪ್ರऽತಿ-**
**ರಂತೇ । ಆಯುಃ ॥ ೧೬ ॥**

॥ ಸಾಯಣಭಾಷ್ಯಂ ॥

ಹೇ ಮನುಷ್ಯಾ ಉದೀರ್ಧ್ವಂ । ಶಯನಂ ಪರಿತ್ಯಜ್ಯೋದ್ಗಚ್ಛತ । ನೋಽಸ್ಮಾಕಮಸುಃ ಶರೀರಸ್ಯ ಪ್ರೇರಯಿತಾ ಜೀವೋ ಜೀವಾತ್ಮಾಗಾತ್ । ಆಗತವಾನ್ । ತಮೋಽಪಪ್ರಾಗಾತ್ । ಅಪಕ್ರಾಂತಂ । ಉಷಸಃ ಪ್ರಕಾಶೇ ಸತಿ ಸರ್ವಜೀವನವ್ಯಾಪಾರಯೋಗಃ । ತಸ್ಮಾತ್ಪರಮಾತ್ಮರೂಪತಯಾ ಸ ಚ ಜೀವಸ್ತ್ವದೇವ ಜ್ಯೋತಿರ್ಯೈತಿ । ಆಗಚ್ಛತಿ । ಸೂರ್ಯಾಯ ಸೂರ್ಯಸ್ಯ ಪಂಥಾಂ ಮಾರ್ಗಮಾರೈಕ್ । ವಿವಿಕ್ತೀಕರೋತಿ । ಯಾತವೇ ಗಮನಾಯ । ತಸ್ಮಿನ್ದೇಶೇಽಗನ್ಮ ಗಚ್ಛಾಮೋ ಯತ್ರ ಯಸ್ಮಿನ್ದೇಶ ಆಯುಃ । ಅನ್ನನಾಮೈತತ್ । ಅನ್ನಂ ಪ್ರತಿರಂತೇ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ಉದಾರಾ ದಾನೇನ ಪ್ರವರ್ಧಯಂತಿ ॥ ಈರ್ಧ್ವಂ । ಈರ ಗತೌ । ಅದಾದಿಕೋಽನುದಾತ್ತೇತ್ । ಅರೈಕ್ । ರಿಚಿರ್ ವಿರೇಚನೇ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಗುಣೇ ವ್ಯತ್ಯಯೇನೈತ್ವಂ । ಪಂಥಾಂ । ದ್ವಿತೀಯಾಯಾಮಪಿ ಪಥಿಮಥ್ಯೃಭುಕ್ಷಾಮಾದಿತಿ ವ್ಯತ್ಯಯೇನಾತ್ವಂ । ಅಗನ್ಮ । ಗಮೇರ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಮ್ವೋಶ್ಚ । ಪಾ. ೮-೨-೬೫ । ಇತಿ ಮಕಾರಸ್ಯ ನಕಾರಃ ॥

॥ ಪ್ರತಿಪದಾರ್ಥ ॥

(**ಹೇ ಮನುಷ್ಯಾಃ**—ಎಲೈ ಮನುಷ್ಯರೇ) । **ಉದೀರ್ಧ್ವಂ**—(ಹಾಸಿಗೆಯಿಂದ) ಏಳಿ । **ನಃ**—ನಮಗೆ । **ಅಸುಃ**—ಪ್ರೇರಕನಾದ । **ಜೀವಃ**—(ಜ್ಯೋತಿಸ್ವರೂಪನಾದ) ಜೀವಾತ್ಮನು । **ಆಗಾತ್**—ಬಂದಿದ್ದಾನೆ । **ತಮಃ**—ಅಂಧಕಾರವು । **ಅಪ ಪ್ರಾಗಾತ್**—ಹೊರಟುಹೋಯಿತು । **ಜ್ಯೋತಿಃ**—ಬೆಳಕು । **ಆ ಏತಿ**—ಬರುತ್ತದೆ । **ಸೂರ್ಯಾಯ**—ಸೂರ್ಯನಿಗೆ । **ಯಾತವೇ**—ಸಂಚಾರಕ್ಕೆ । **ಪಂಥಾಂ**—ಮಾರ್ಗವನ್ನು । **ಅರೈಕ್**—ಬಿಡಿಸುತ್ತದೆ । **ಯತ್ರ**—ಎಲ್ಲಿ । **ಆಯುಃ**—ಅನ್ನವನ್ನು । **ಪ್ರ ತಿರಂತೇ**—ಅಭಿವೃದ್ಧಿಪಡಿಸುತ್ತಾರೆಯೋ । (**ತತ್ರ**—ಅಲ್ಲಿ) । **ಅಗನ್ಮ**— ಹೋಗೋಣ.

॥ ಭಾವಾರ್ಥ ॥

ಎಲೈ ಮನುಷ್ಯರೇ, ಏಳಿ ; ನಮಗೆ ಪ್ರೇರಕವಾದ ಜೀವಾತ್ಮನು ಆಗಮಿಸಿದ್ದಾನೆ; (ಬೆಳಕಾದ ಮೇಲೆ ಪ್ರಾಣಿಗಳೆಲ್ಲವೂ ಕಾರ್ಯೋನ್ಮುಖರಾಗುತ್ತಾರೆ) ಕತ್ತಲೆಯು ಹೋಗಿದೆ ; ಬೆಳಗಾಗಿದೆ; ಸೂರ್ಯನ ಮಾರ್ಗವು ಸ್ಪಷ್ಟಪಡಿಸಲ್ಪಟ್ಟಿದೆ ; ಅನ್ನ ಸಿಗುವ ಸ್ಥಳಕ್ಕೆ ಹೋಗೋಣ.

## English Translation

Arise; inspiring life revives; darkness has departed; light approaches. Ushas has opened the road for the sun to travel: let us repair to where they distribute food.

॥ ವಿಶೇಷವಿಷಯಗಳು ॥

**ಆಯುಃ—ಅಂಧಃ, ವಾಜಃ** ಮೊದಲಾದ ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೩-೯) ಆಯುಃ ಎಂಬ ಪದವು ಉಕ್ತವಾಗಿರುವುದರಿಂದ ಆಯುಸ್ಸೆಂದರೆ ಅನ್ನವೆಂದು ಅರ್ಥ.

ಈ ಋಕ್ಕಿನಲ್ಲಿ ವಿವರಿಸಿರುವ ಅರ್ಥವು ಋತ್ವಿಜರಾಗಲಿ ಅಥವಾ ಯಜ್ಞಮಾಡುವ ಯಜಮಾನರ ಪುತ್ರಪೌತ್ರರಾಗಲಿ ಉಷೋದೇವತೆಯನ್ನು ಕುರಿತು ಬೇಡಿಕೊಳ್ಳುವ ಪ್ರಾರ್ಥನಾರೂಪವಾಗಿರುತ್ತದೆ. ಈಗ ಉಷಃಕಾಲವು ಪ್ರಾಪ್ತವಾಗಿರುವುದು. ಕತ್ತಲೆಯು ಕಳೆದುಹೋಗಿ ಉಷಸ್ಸಿನ ಪ್ರಕಾಶವು ಅಧಿಕವಾಗಿ ಉಂಟಾಗಿರುವುದು. ಮೃತರಂತೆ ನಿಶ್ಚೇಷ್ಟರಾಗಿದ್ದ ನಮ್ಮ ಜೀವಸ್ಥಾನೀಯವಾದ ಪ್ರಾಣವು ಕ್ರಿಯೋನ್ಮುಖವಾಗುವುದಕ್ಕಾಗಿ ಉಷಸ್ಸು ಉದಯವನ್ನು ಹೊಂದಿರುವುದು. ನಮ್ಮ ಪ್ರಾಣಸ್ಥಾನೀಯವಾಗಿ ಇರುವ ಉಷಸ್ಸು ಈಗ ಉದಯವನ್ನು ಹೊಂದಿ ಮುಂದಕ್ಕೆ ಸಂಚರಿಸುವ ಸೂರ್ಯನಿಗೆ ಮಾರ್ಗವನ್ನು ತೋರಿಸುತ್ತಿದೆ. ಸೂರ್ಯನ ಉದಯದಿಂದ ಉಷಸ್ಸು ಮುಗಿಯುವುದರಿಂದ ಅಧ್ವರ್ಯುವೇ ಮೊದಲಾದ ಋತ್ವಿಜರು ಸೋಮವೇ ಮೊದಲಾದ ಹವಿಸ್ಸಿನ ರೂಪದ ಅನ್ನವನ್ನು ಯಜ್ಞಕ್ಕಾಗಿ ಸಿದ್ಧಪಡಿಸುತ್ತಿರುವರೆಂದು ಸ್ಕಂದಸ್ವಾಮಿಗಳು ಅರ್ಥಮಾಡಿರುವರು.

ಉಷಸ್ಸಿನ ಪ್ರಕಾಶವು ಉಂಟಾದ ಕೂಡಲೆ ಪ್ರಾಣಿಗಳೆಲ್ಲಕ್ಕೂ ತಮ್ಮ ತಮ್ಮ ವ್ಯವಹಾರಗಳಲ್ಲಿ ಕಾರ್ಯವನ್ನು ಸಾಧಿಸಲು ಪ್ರವೃತ್ತಿಯು ಉಂಟಾಗಿರುವುದು. ಈ ಶರೀರದಲ್ಲಿ ಪರಮಾತ್ಮರೂಪದಿಂದ ಇರುವ ಜೀವಜ್ಯೋತಿಯ ಪ್ರಕಾಶವು ಬೆಳಗುತ್ತದೆ. ಉಷಸ್ಸು ಸೂರ್ಯನ ಸಂಚಾರಕ್ಕಾಗಿ ಮಾರ್ಗವನ್ನು ಸರಿಮಾಡಿ ಇರುವುದು. ಆದ್ದರಿಂದ ಉತ್ತಮವಾದ ಮನುಸ್ಸುಳ್ಳವರು ಯಾವ ಪ್ರದೇಶದಲ್ಲಿ ಅನ್ನವನ್ನು ಅತಿಶಯವಾಗಿ ದಾನಮಾಡುವರೋ ಅಲ್ಲಿಗೆ ನಾವುಗಳು ಹೋಗೋಣ ಎಂದು ಸಾಯಣರು ಅರ್ಥವನ್ನು ವಿವರಿಸಿದ್ದಾರೆ.

**ಅಸುರ್ನ ಆಗಾತ್—ಅಸುರಿತಿ ಪ್ರಾಣನಾಮ । ಅಸುಃ—ಶರೀರಸ್ಯ ಪ್ರೇರಯಿತಾ** ಅಸು ಶಬ್ದವು ಪ್ರಾಣವೆಂಬ ಅರ್ಥವನ್ನು ಬೋಧಿಸುವುದು ಎಂದು ಸ್ಕಂದಸ್ವಾಮಿಗಳು ವಿವರಿಸಿರುವರು. ನಿರುಕ್ತಕಾರರು—ಅಸು ಶಬ್ದಕ್ಕೆ ಪ್ರಾಣವೆಂತಲೂ ಪ್ರಜ್ಞಾ ಎಂಬುದಾಗಿಯೂ ಅರ್ಥವನ್ನು ವಿವರಿಸಿ ಎರಡುವಿಧವಾದ ಅರ್ಥಕ್ಕೂ ಅನುಗುಣವಾಗಿ ಉದಾಹರಣೆಯನ್ನು ಕೊಟ್ಟಿರುವರು—

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥**
(ಋ. ಸಂ. ೧೦-೫೩-೪)

ಮತ್ತು—

**ಅಸುರಾಃ ಅಸುರತಾಃ ಸ್ಥಾನೇಷ್ವಸ್ತಾಃ ಸ್ಥಾನೇಭ್ಯ ಇತಿ ವಾ । ಅಪಿ ವಾ ಆಸುರಿತಿ ಪ್ರಾಣನಾಮಾಸ್ತಃ ಶರೀರೇ ಭವತಿ ತೇನ ತದ್ವಂತಃ । ಅಸೋರಸುರಾನಸೃಜತ ತದಸುರಾಣಾಮಸುರತ್ವಂ ॥**
**ಇತಿ ವಿಜ್ಞಾಯತೇ**
(ನಿ. ೩-೮)

ಇಲ್ಲಿ ಅಸುಶಬ್ದವು ಪ್ರಾಣವಾಚಿಯಾಗಿರುವುದೆಂದು ವಿವರಿಸಿರುವರು.

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥**

(ಋ. ಸಂ. ೧೦-೧೫-೧)

ಇಲ್ಲಿಯೂ **ಅಸು** ಶಬ್ದವು ಪ್ರಾಣವಾಚಿಯಾಗಿರುವುದು. (ನಿ. ೧೧-೧೯)

**ಅಸುರಿತಿ ಪ್ರಜ್ಞಾನಾಮ ಅಸ್ಯತ್ಯನರ್ಥಾನ್ ಅಸ್ತಾಶ್ಚಾಸ್ಯಾಮರ್ಥಾಃ ॥**

(ನಿ ೧೦-೩೪)

ಅಸು ಶಬ್ದವು ಪ್ರಜ್ಞಾ ಎಂಬ ಅರ್ಥವನ್ನು ಬೋಧಿಸುವುದು. ಪ್ರಜ್ಞೆಯು ಅನರ್ಥವನ್ನು ಹೋಗಲಾಡಿಸುವುದು. ಪ್ರಜ್ಞಾವಂತರಾದವರ್ಗೆ ಪ್ರಜ್ಞೆಗೆ ಸಿಕ್ಕದಿರುವುದು ಯಾವುದೂ ಇರುವುದಿಲ್ಲ ಎಂದು ವ್ಯಾಖ್ಯಾನಮಾಡಿರುವರು. ಇವೆರಡು ಪಕ್ಷಗಳಲ್ಲಿ ಪ್ರಾಣವೆಂಬ ಅರ್ಥವನ್ನು ಅವಲಂಬಿಸಿ ಸ್ಕಂದಸ್ವಾಮಿಗಳೂ, ಪ್ರಜ್ಞಾ ಎಂಬ ಪಕ್ಷವನ್ನು ಅವಲಂಬಿಸಿ ಸಾಯಣರೂ ವ್ಯಾಖ್ಯಾನವನ್ನು ಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಈರ್ಧ್ವಂ**—ಈರ ಗತೌ. ಧಾತು. ಅದಾದಿ. ಅನುದಾತ್ತೇತ್. ಲೋಟ್‌ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. **ಟಿತಆತ್ಮನೇ**—ಸೂತ್ರದಿಂದ ಏತ್ವ ಬಂದಾಗ **ಸವಾಭ್ಯಾಂವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಅಮಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಗಾತ್**—ಆಙ್ ಉಪಸರ್ಗ. ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಏಕವಚನ ಪರವಾದಾಗ **ಇಣೋಗಾಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ. **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಸೂತ್ರದಿಂದ ಚ್ಲಿಗೆ ಲುಕ್. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಆರೈಕ್**—ರಿಚಿರ್ ವಿರೇಚನೇ ಧಾತು. **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಬಂದಾಗ ಇತಶ್ಚ ಎಂಬುದರಿಂದ ಇಕಾರಲೋಪ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ತಿಪ್ ನಿಮಿತ್ತವಾಗಿ **ಪುಗಂತಲಘೂಪಧಸ್ಯಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಹಲ್‌ಙ್ಯಾಭ್ಯೋ**—(ಪಾ. ಸೂ. ೬-೧-೬೮) ಎಂಬುದರಿಂದ ಪ್ರತ್ಯಯಕ್ಕೆ ಲೋಪ, **ಚೋಃಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕುತ್ವ. ಅಂಗಕ್ಕೆ ಆಡಾಗಮ. ವ್ಯತ್ಯಯದಿಂದ ಏಕಾರಕ್ಕೆ ಐಕಾರ ಬರುತ್ತದೆ. ಹಿಂದೆ ಏತಿ ಎಂದು ತಿಙಂತವಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) **ಸೂತ್ರದಲ್ಲಿ** ಅತಿಙಃ ಎಂದು ಪರ್ಯುದಾಸಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಸಂಥಾಂ**—ಪಥಿನ್ ಶಬ್ದ. ದ್ವಿತೀಯಾವಿಭಕ್ತಿ ಏಕವಚನ ಪರವಾದಾಗ ವ್ಯತ್ಯಯದಿಂದ **ಪಥಿಮಥ್ಯೃ-ಭುಕ್ಷಾಮಾತ್** (ಪಾ. ಸೂ. ೭-೧-೮೫) ಎಂಬುದರಿಂದ ಆತ್ವ ಬರುತ್ತದೆ. **ಥೋನ್ಥಃ** (ಪಾ. ಸೂ. ೭-೧-೮೭) ಸೂತ್ರದಿಂದ ನ್ಥಾದೇಶ. ಪನ್ಥಾಮ್ ಎಂದು ರೂಪವಾಗುತ್ತದೆ.

**ಯಾತವೇ**—ಯಾ ಪ್ರಾಪಣೇ ಧಾತು. ಇದಕ್ಕೆ ತುಮುನರ್ಥದಲ್ಲಿ **ತುಮರ್ಥೇಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಗನ್ಮ**—ಗಮ್ಲೃ ಗತೌ. ಧಾತು. ಹಿಂದಿನಂತೆ ಛಾಂದಸವಾಗಿ ಲಙ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಉತ್ತಮಪುರುಷ ಬಹುವಚನ ಮಸ್ ಪ್ರತ್ಯಯ. ಸಕಾರಕ್ಕೆ **ನಿತ್ಯಂಙಿತಃ** ಎಂಬುದರಿಂದ ಲೋಪ. **ಮ್ವೋಶ್ಚ** (ಪಾ. ಸೂ. ೮-೨-೬೫) ಎಂಬುದರಿಂದ ಧಾತುವಿನ ಮಕಾರಕ್ಕೆ ಮಕಾರಪರವಾದುದರಿಂದ ನಕಾರಾದೇಶ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಪ್ರ ತಿರಂತೇ**—ತಿರ ವೃದ್ಧೌ. ಧಾತು. ಲಟ್ ಪ್ರಥಮಪುರುಷ ಬಹುವಚನರೂಪ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಆದುಪದೇಶವ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ. ॥ ೧೬ ॥



॥ ಸಂಹಿತಾಪಾಠಃ ॥

ಸ್ಯೂಮನಾ ವಾಚ ಉದಿಯರ್ತಿ ವಹ್ನಿಃ ಸ್ತವಾನೋ ರೇಭ
ಉಷಸೋ ವಿಭಾತೀಃ ।
ಅದ್ಯಾ ತದುಚ್ಥ ಗೃಣತೇ ಮಘೋನ್ಯಸ್ಮೇ ಆಯುರ್ನಿ ದಿದೀಹಿ
ಪ್ರಜಾವತ್ ॥ ೧೭ ॥

॥ ಪದಪಾಠಃ ॥

ಸ್ಯೂಮನಾ । ವಾಚಃ । ಉತ್ । ಇಯರ್ತಿ । ವಹ್ನಿಃ । ಸ್ತವಾನಃ । ರೇಭಃ ।
ಉಷಸಃ । ವಿಽಭಾತೀಃ ।

ಅದ್ಯ । ತತ್ । ಉಚ್ಛ । ಗೃಣತೇ । ಮಘೋನಿ । ಅಸ್ಮೇ ಇತಿ । ಆಯುಃ ।
ನಿ । ದಿದೀಹಿ । ಪ್ರಜಾಽವತ್ ॥ ೧೭ ॥

॥ ಸಾಯಣಭಾಷ್ಯಂ ॥

ವಹ್ನಿಃ ಸ್ತೋತ್ರಾಣಾಂ ವೋಢಾ ರೇಭಃ । ಸ್ತೋತೃನಾಮೈತತ್ । ಸ್ತೋತೋಷಸೋ ವಿಭಾತೀಸ್ತಮಸೋಽಪನೋದನೇನ ಪ್ರಕಾಶಮಾನಾ ಉಷೋದೇವತಾಃ ಸ್ತವಾನಃ ಸ್ತುವನ್ ವಾಚೋ ವೇದರೂಪಾಯಾಃ ಸಂಬಂಧೀನಿ ಸ್ಯೂಮನಾ ಸ್ಯೂಮಾನ್ಯನುಸ್ಯೂತಾನಿ ಸಂತತಾನ್ಯುಕ್ಥಾನ್ಯುದಿಯರ್ತಿ । ಉದ್ಗಮಯತಿ । ಉಚ್ಚಾರಯತಿ । ಅತೋ ಹೇ ಮಘೋನಿ ಮಘವತ್ಯುಷಃ ಅದ್ಯಾಸ್ಮಿನ್ಸಮಯೇ ಗೃಣತೇ ಸ್ತುವತೇ ತಸ್ಮೈ ಪುರುಷಾಯ ತದುಚ್ಛ । ದೃಷ್ಟಿನಿರೋಧಕತಯಾ ಪ್ರಸಿದ್ಧಂ ನೈಶಂ ತಮೋ ವಿವಾಸಯ । ವರ್ಜಯ । ಅಸ್ಮೇ ಅಸ್ಮಭ್ಯಂ ಚ ಪ್ರಜಾವತ್ ಪ್ರಜಾಭಿಃ ಪುತ್ರಪೌತ್ರಾದಿಭಿರ್ಯುಕ್ತಮಾಯುರನ್ನಂ ನಿ ದಿದೀಹಿ । ನಿತರಾಂ ಪ್ರಕಾಶಯ । ದೀದೇತಿಶ್ಛಂದಸೋ ದೀಪ್ತಿಕರ್ಮಾ । ಪ್ರಯಚ್ಛೇತ್ಯರ್ಥಃ ॥ ಸ್ಯೂಮನಾ । ಷಿವು ತಂತುಸಂತಾನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ದೃಶಿಗ್ರಹಣಸ್ಯ ಸರ್ವೋಪಾಧಿವ್ಯಭಿಚಾರಾರ್ಥತ್ವಾತ್ಕರ್ಮಣಿ ಮನಿನ್ । ಛ್ವೋಃ ಶೂಡಿತ್ಯೂಠ್ । ಆಜಯಾಜಯೋರಾಂ ಚೋಪಸಂಖ್ಯಾನಂ । ಮ. ೭-೧-೩೯-೧ । ಇತಿ ವಿಭಕ್ತೇರಾಜಾದೇಶಃ । ಯದ್ವಾ ಔಣಾದಿಕೋ ಭಾವೇ ಮುಕ್ । ಪಾಮಾದಿಲಕ್ಷಣೋ ಮತ್ವರ್ಥೀಯೋ ನಃ । ಬಂಧನಯುಕ್ತಾನೀತ್ಯರ್ಥಃ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ವ್ಯತ್ಯಯೇನಾದ್ಯುದಾತ್ತತ್ವಂ । ವಾಚಃ । ಸಾವೇಕಾಚ ಇತಿ ಜಸ ಉದಾತ್ತತ್ವಂ । ಇಯರ್ತಿ । ಋ ಗತೌ । ಜೌಹೋತ್ಯಾದಿಕಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಸ್ತವಾನಃ । ಷ್ಟುಞ್ ಸ್ತುತೌ । ಶಾನಚ್ಯದಾದಿತ್ವಾಚ್ಛಪೋ ಲುಕ್ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾದ್ಗುಣಾವಾದೇಶೌ । ವ್ಯತ್ಯಯೇನಾದ್ಯುದಾತ್ತತ್ವಂ । ವಿಭಾತೀಃ । ಶತುರನುಮೋ ನದ್ಯಜಾದೀ ಇತಿ ಙೀಪ ಉದಾತ್ತತ್ವಂ । ಗೃಣತೇ । ಗೄ ಶಬ್ದೇ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವಃ । ಪೂರ್ವೋಕ್ತೇನ ಸೂತ್ರೇಣ ವಿಭಕ್ತೇರುದಾತ್ತತ್ವಂ । ಅಸ್ಮೇ । ಸುಪಾಂ ಸುಲುಗಿತಿ ಚತುರ್ಥ್ಯಾಃ ಶೇಆದೇಶಃ ॥

॥ ಪ್ರತಿಪದಾರ್ಥ ॥

**ವಹ್ನಿಃ**—ಸ್ತೋತ್ರಗಳನ್ನು ಆರ್ಪಿಸುವ । **ರೇಭಃ**—ಸ್ತೋತೃವು । **ವಿಭಾತೀಃ**—ಅಂಧಕಾರನಾಶದಿಂದ ಪ್ರಕಾಶಿಸುತ್ತಿರುವ । **ಉಷಸಃ**—ಉಷಸ್ಸಿನ ದೇವತೆಗಳನ್ನು । **ಸ್ತವಾನಃ**—ಸ್ತುತಿಸುತ್ತಾ । **ವಾಚಃ**—ವೇದಸಂಬಂಧವಾದ । **ಸ್ಯೂಮನಾ**—ಉಕ್ಥಗಳನ್ನು (ಸ್ತೋತ್ರಗಳನ್ನು) । **ಉದಿಯರ್ತಿ**—ಉಚ್ಚರಿಸುತ್ತಾನೆ । (ಆದ್ದರಿಂದ) । **ಮಘೋನಿ**—ಸಂಪದ್ಯುಕ್ತಳಾದ ಎಲೈ ಉಷೋದೇವಿಯೇ । **ಅದ್ಯ**—ಈಗ । **ಗೃಣತೇ**—ಸ್ತೋತೃವಿಗೆ । **ತತ್ ಉಚ್ಛ**—(ದೃಷ್ಟಿನಿರೋಧಕವಾದ) ಆ ತಮಸ್ಸನ್ನು ಪರಿಹರಿಸು । **ಅಸ್ಮೇ**—ನಮಗೂ । **ಪ್ರಜಾವತ್**—ಪುತ್ರಪೌತ್ರಾದಿಸಂತಾನಸಹಿತವಾದ । **ಆಯುಃ**—ಅನ್ನವನ್ನು । **ನಿ ದಿದೀಹಿ**—ಚೆನ್ನಾಗಿ ಪ್ರಕಾಶಗೊಳಿಸು (ಅನುಗ್ರಹಿಸು.)

॥ ಭಾವಾರ್ಥ ॥

ಸ್ತೋತೃವು ದೇದೀಪ್ಯಮಾನಳಾದ ಉಷಸ್ಸನ್ನು ವೈದಿಕವಾದ ಸ್ತೋತ್ರಗಳಿಂದ ಸ್ತುತಿಸುತ್ತಾನೆ. ಸಂಪದ್ಯುಕ್ತಳಾದ ಎಲೈ ಉಷೋದೇವಿಯೇ, ಅಂತಹ ಸ್ತೋತೃವಿಗಾಗಿ ತಮಸ್ಸನ್ನು ಪರಿಹರಿಸು. ನಮಗೂ ಪ್ರಜಾಸಹಿತವಾದ ಅನ್ನವನ್ನು ಕೊಡು.

## English Translation

The offerer of praise, the reciter of praise, celebrating the brilliant Ushas, repeats the well-connected words (of the *Veda*). Possessor of affluence, dawn to-day upon him who praise you ; bestow upon us food, whence progeny may be obtained.

॥ ವಿಶೇಷವಿಷಯಗಳು ॥

**ಸ್ಯೂಮನಾ—ಸುಖನಾಮ** । ಇಪ್ಪತ್ತು ಸುಖನಾಮಗಳಲ್ಲಿ (ನಿ ೩-೧೩) **ಸ್ಯೂಮನ** ಶಬ್ದವು ಉಕ್ತವಾಗಿದೆ. ಸುಖವೆಂದು ಅರ್ಥ.

**ರೇಭಃ—ಸ್ತೋತೃನಾಮೈತತ್** । ಸ್ತುತಿಮಾಡುವವನು, **ಜರಿತಾ, ಕಾರುಃ** ಮೊದಲಾದ ಹದಿಮೂರು ಸ್ತೋತೃನಾಮಗಳ ಮಧ್ಯದಲ್ಲಿ **ರೇಭಃ** (ನಿ. ೩-೧೯) ಎಂಬ ಶಬ್ದವು ಉಕ್ತವಾಗಿರುತ್ತದೆ.

ಸಾಯಣರು **ಸ್ಯೂಮನಾ** ಎಂಬ ಶಬ್ದಕ್ಕೆ **ಸ್ಯೂಮಾನಿ ಅನುಸ್ಯೂತಾನಿ ಸಂಗತಾನಿ ಉಕ್ಥಾನಿ** ಸ್ತೋತ್ರವನ್ನು ಪಠಿಸುವಾಗ ಸ್ತೋತ್ರದ ವಚನಗಳು ಪರಸ್ಪರವಾಗಿ ಸೇರಿ ಚೆನ್ನಾಗಿ ಅರ್ಥವನ್ನು ಬೋಧಿಸುವವು. ಹೀಗಿರುವ ಸ್ತೋತ್ರಗಳನ್ನು ಸ್ತೋತೃವಾದವನು ಪಠಿಸುವನೆಂದು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು **ಸ್ಯೂಮನಾ** ಎಂಬ ಶಬ್ದವು ಸುಖವಚನವಾಗಿರುವುದರಿಂದ **ಸುಖೇನ ಅಕ್ಲೇಶೇನ ಸ್ತುತಿಲಕ್ಷಣಾ ವಾಚಃ ಉದಿಯರ್ತಿ** ಸ್ತುತಿರೂಪವಾದ **ವೇ**ದವಾಕ್ಯನ್ನು ಸುಖವಾಗಿ ಸ್ತೋತೃವಾದವನು ಪಠಿಸುವನು ಎಂದು ಅರ್ಥವನ್ನು ವಿವರಿಸಿ **ಆತ್ಮನ**

**ವಿವಾಯಂ ಪರೋಕ್ಷರೂಪೇಣ ಪ್ರಥಮಪುರುಷೇಣ ವ್ಯಪದೇಶಃ ಹೋತ್ರಾಖ್ಯಂ ಋತ್ವಿಕ್ ಕುತ್ಸನಾಮಾ ವಾ ಋಷಿಃ ಉದ್ಗಮಯತಿ ಉಚ್ಚಾರಯತಿ ।** ಈ ಸ್ತೋತ್ರವನ್ನು ಪಠಿಸಿರುವ ತನ್ನನ್ನು ಇಲ್ಲಿ ಪರೋಕ್ಷದಿಂದ ನಿರ್ದೇಶಮಾಡಿ ಪ್ರಥಮಪುರುಷವನ್ನು ಪ್ರಯೋಗಮಾಡಿರುವುದರಿಂದ ಹೋತೃವಾಗಿರುವ ಕುತ್ಸಋಷಿಯೇ ಈ ಸ್ತುತಿಯನ್ನು ಉಚ್ಚರಿಸಿರುವನು ಎಂದು ಅರ್ಥವನ್ನು ಹೇಳಿರುವರು. ವತ್ತು **ರೇಭಃ**—ಸ್ತೋತೃವಾದವನೂ, **ವಹ್ನಿಃ—ವಹನ ಸಮರ್ಥತ್ವಾತ್** ಹವಿರ್ಭಾಗಗಳನ್ನು ವಹಿಸುವ ಸಮರ್ಥನಾದ ಅಗ್ನಿಯೂ ಕೂಡ ಉಷಸ್ಸಿನ ಅನೇಕ ವಿಧವಾದ ಪ್ರಕಾಶಗಳನ್ನು ಸ್ತುತಿಮಾಡುವರು ಎಂದು ಉಷಸ್ಸಿನ ಮಹಿಮೆಯನ್ನು ವಿವರಿಸಿರುವರು.

**ಅಸ್ಮೇ—ಅಸ್ಮಭ್ಯಂ ಚ ।** ಸ್ತೋತೃವಾದವರಿಗೂ, ಯಜ್ಞಮಾಡುವ ಯಜಮಾನರಾದವರಿಗೂ, ಕೂಡ ಪುತ್ರಪೌತ್ರಾದಿಗಳನ್ನೂ ಅನ್ನವನ್ನೂ ಅನುಗ್ರಹಿಸು ಎಂದು ಉಷೋದೇವತೆಯ ಪ್ರಾರ್ಥನೆಯು ಇಲ್ಲಿ ವರ್ಣಿತವಾಗಿರುವುದು ಎಂದು ಇಬ್ಬರು ವ್ಯಾಖ್ಯಾಕಾರರೂ ಅರ್ಥವನ್ನು ವಿವರಿಸಿರುವರು. ನಿರುಕ್ತಕಾರರು **ಅಸ್ಮೇ** ಎಂಬ ಪದವು ಎಲ್ಲಾ ವಿಭಕ್ತಿಗಳಲ್ಲಿಯೂ ಒಂದೇ ವಿಧವಾದ ರೂಪವನ್ನು ಹೊಂದಿರುವುದಾದರೂ ಆಯಾಯ ವಿಭಕ್ತಿಯ ಅರ್ಥವನ್ನು ಆಯಾಯ ಪ್ರಕರಣಕ್ಕನುಸಾರವಾಗಿ ಬೋಧಿಸುತ್ತಿರುವುದು ಎಂದು ವಾಖ್ಯಾನಮಾಡಿ ಆಯಾಯ ಉದಾಹರಣೆಗಳಲ್ಲಿ ಆಯಾಯ ವ್ಯತ್ಯಾಸವನ್ನು ತೋರಿಸಿರುವರು—

**(೧) ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥**

**ಅಸ್ಮೇ ಇತ್ಯೇತತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ—ಪ್ರಥಮಾಯಾಸ್ತಾವತ್—ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥** ಎಂದರೆ ಅಸ್ಮೇ ಎಂಬ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಸಂದರ್ಭಾನುಸಾರವಾಗಿ ಉಪಯೋಗಿಸಲ್ಪಡುವುದು. ಎಂದರೆ ಆಯಾ ಪ್ರಕರಣಾನುಸಾರವಾಗಿ ಈ ಶಬ್ದಕ್ಕೆ ಏಳು ವಿಭಕ್ತಿಗಳಲ್ಲಿ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು. ಹೇಗೆಂದರೆ—**ಅಸ್ಮೇ ತೇ ಬಂಧುಃ** ಎಂಬ ವಾಕ್ಯದಲ್ಲಿ **ಅಸ್ಮೇ** ಎಂಬ ಶಬ್ದಕ್ಕೆ **ವಯಂ**—ನಾವು ಎಂದರ್ಥವಿರುವುದು. ಇದು ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಉದಾಹರಣೆಯು.

**(೨) ಅಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ॥**

**ದ್ವಿತೀಯಾಯಾಸ್ತಾವತ್—**ಅಸ್ಮೇ ಎಂಬ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಾದ ಅಸ್ಮಾನ್-ನಮ್ಮನ್ನು ಎಂದು ಅರ್ಥವು ಈ ಅರ್ಥದ ಉದಾಹರಣೆಗಾಗಿ—

**ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।**
**ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ॥**

(ಋ. ಸಂ. ೧-೧೧೮-೧೧).

ಎಂಬ ಋಕ್ಕನ್ನು ಕೊಟ್ಟಿರುವರು. ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾನ್-ನಮ್ಮನ್ನು ಎಂದರ್ಥವು.

(೩) ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ ॥

**ತೃತೀಯಾಯಾಸ್ಸ್ಥಾನೇ**—ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ-ನಮ್ಮಿಂದ ಎಂದು ತೃತೀಯಾವಿಭಕ್ತ್ಯರ್ಥವು. ಈ ವಿಷಯದಲ್ಲಿ—

**ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।**
**ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥**

(ಋ. ಸಂ. ೧-೧೬೫-೭).

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ-ನಮ್ಮಿಂದ ಎಂದರ್ಥವು.

(೪) ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ ॥

**ಚತುರ್ಥ್ಯಾಸ್ಸ್ಥಾನೇ**—ಇಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ-ನಮಗಾಗಿ ಎಂದು ಚತುರ್ಥೀವಿಭಕ್ತ್ಯರ್ಥವು. ಉದಾಹರಣೆ-

**ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
**ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥**

(ಋ. ಸಂ ೩-೩೬-೧೦).

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಗಳಿಗೆ ಅಸ್ಮಭ್ಯಂ-ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು.

(೫) ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ ।

**ಪಂಚಮ್ಯಾಸ್ಸ್ಥಾನೇ**—ಇಲ್ಲಿ ಅಸ್ಮೇ ಎಂದರೆ ಅಸ್ಮತ್-ನಮ್ಮ ದೆಶೆಯಿಂದ ಎಂದರ್ಥವು. ಉದಾಹರಣೆ-

**ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।**
**ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ॥**

(ಋ. ಸಂ. ೬-೪೭-೧೩).

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮತ್ ನಮ್ಮ ದೆಶೆಯಿಂದ ಎಂದು ಪಂಚಮೀವಿಭಕ್ತ್ಯರ್ಥವು.

(೬) ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ ।

**ಷಷ್ಠ್ಯಾಸ್ಸ್ಥಾನೇ**—ಇಲ್ಲಿ ಅಸ್ಮೇ ಎಂದರೆ ಅಸ್ಮಾಕಂ-ನಮಗೆ ಎಂದರ್ಥವು. ಈ ಅರ್ಥವಿವರಣೆಗಾಗಿ—

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥**

(ಋ. ಸಂ. ೩-೩೦-೧೯).

ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಕಂ-ನಮ್ಮ, ನಮಗೆ ಎಂದು ಷಷ್ಠೀವಿಭಕ್ತ್ಯರ್ಥವು.

(೭) **ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ ॥**

**ಸಪ್ತಮ್ಯಾಸ್ತಾವತ್**—ಇಲ್ಲಿ ಅಸ್ಮೇ ಎಂದರೆ ನಮ್ಮಲ್ಲಿ ಎಂದರ್ಥವು. ಉದಾಹರಣೆ—

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**

(ಋ ಸಂ. ೧-೭೯-೪).

ಈ ಋಕ್ಕಿನಲ್ಲಿರುವ ಅಸ್ಮೇ-ಎಂಬ ಶಬ್ದಕ್ಕೆ ಅಸ್ಮಾಸು-ನಮ್ಮಲ್ಲಿ ಎಂದು ಸಪ್ತಮೀವಿಭಕ್ತ್ಯರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸ್ಯೂಮನಾ**—ಷಿವು ತಂತುಸಂತಾನೇ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬಲ್ಲಿ ದೃಶಿಗ್ರಹಣವು ಎಲ್ಲಾ ವಿಶೇಷಗಳಿಲ್ಲದಿದ್ದರೂ ಕಾರ್ಯ ಬರುತ್ತದೆ ಎಂದು ಪ್ರತಿಪಾದಿಸಿರುವುದರಿಂದ ಈ ಧಾತುವಿಗೂ ಮನಿನ್ ಪ್ರತ್ಯಯ. ಕರ್ಮಣಿಯಲ್ಲಿ ಈ ಪ್ರತ್ಯಯ ಬಂದುಪರವಾದಾಗ **ಚ್ಛ್ವೋಃಶೂಠ್ ಅನುನಾಸಿಕೇಚ** (ಪಾ. ಸೂ. ೬-೪-೧೯) ಎಂಬುದರಿಂದ ವಕಾರಕ್ಕೆ ಊಠಾದೇಶ. ತನ್ನಿಮಿತ್ತವಾಗಿ ಇಕಾರಕ್ಕೆ ಯಣ್. ಸ್ಯೂಮನ್ ಶಬ್ದವಾಗುತ್ತದೆ. **ಆಜ್ಯಾಜಯೋರಾಂ ಚೋಪಸಂಖ್ಯಾನಮ್** (ಪಾ. ಮ. ೭-೧-೩೯-೧) ಎಂಬ ವಚನದಿಂದ ವಿಭಕ್ತಿಗೆ ಆಜಾದೇಶ. ಅಥವಾ ಈ ಧಾತುವಿಗೆ ಔಣಾದಿಕವಾದ ಮಕ್ ಪ್ರತ್ಯಯವು ಭಾವಾರ್ಥದಲ್ಲಿ ಬರುತ್ತದೆ. ಹಿಂದಿನಂತೆ ಊಠಾದೇಶ. ಸ್ಯೋಮ ಅಸ್ಯ ಅಸ್ತಿ ಎಂದು ಮತ್ವರ್ಥವಿವಕ್ಷಾಮಾಡಿದಾಗ, ಪಾಮಾದಿಯಲ್ಲಿ ಸೇರಿರುವುದರಿಂದ **ಲೋಮಾದಿಪಾಮಾದಿ**—(ಪಾ. ಸೂ. ೫-೨-೧೦೦) ಎಂಬುದರಿಂದ ನ ಪ್ರತ್ಯಯ. ಸ್ಯೂಮನ ಎಂದು ರೂಪವಾಗುತ್ತದೆ. ನಪುಂಸಕದಲ್ಲಿ ಶಸ್ಸಿಗೆ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಬಂಧನದಿಂದ ಕೂಡಿದವುಗಳು ಎಂದರ್ಥ. ದ್ವಿತೀಯಪಕ್ಷದಲ್ಲಿ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಾಚಃ**—**ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ಜಸ್ಸಿಗೆ ಉದಾತ್ತಸ್ವರ ಬರುತ್ತದೆ

**ಇಯರ್ತಿ**—ಋ ಗತೌ ಧಾತು. ಜುಹೋತ್ಯಾದಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು ವಿಕರಣ **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಧಾತು ಋಕಾರಕ್ಕೆ ತಿಪ್ ನಿಮಿತ್ತವಾಗಿ **ಸಾರ್ವಧಾತುಕಾರ್ಧ**—ಎಂಬುದರಿಂದ ಗುಣ. ರಪರವಾಗಿ ಬರುತ್ತದೆ. **ಅಭ್ಯಾಸಸ್ಯಾಸವರ್ಣೇ** (ಪಾ. ಸೂ. ೬-೪-೭೮) ಸೂತ್ರದಿಂದ ಅಭ್ಯಾಸ ಇಕಾರಕ್ಕೆ ಇಯಙಾದೇಶ. ಇಯರ್ತಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸ್ತವಾನಃ**—ಷ್ಟುಞ್ ಸ್ತುತೌ ಧಾತು. ಅದಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಅರ್ಧ ಧಾತುಕ ಸಂಜ್ಞೆಯು ಬರುವುದರಿಂದ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವ ಬರುವುದಿಲ್ಲ. ಆಗ ತನ್ನಿಮಿತ್ತ ವಾಗಿ ಧಾತುವಿನ ಇಕ್ಕಿಗೆ ಗುಣ. ಅವಾದೇಶ. ಶಾನಚ್ ಚಿತ್ತಾದರೂ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಉಚ್ಛ**—ಉಛೀ ವಿವಾಸೇ. ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಗೃಣತೇ**—ಗೄ ಶಬ್ದೇ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ಟಿತಆತ್ಮನೇಪದಾ**—ಸೂತ್ರ ದಿಂದ ಟಿಗೆ ಏತ್ವ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಕ್ರ್ಯಾದಿಭ್ಯ ಶ್ನಾ** ಎಂಬುದರಿಂದ ಶ್ನಾ ವಿಕರಣ. **ಸಾರ್ವಧಾತುಕಮಪಿತ್** ಸೂತ್ರದಿಂದ ಶತೃವಿಗೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಆಕಾರಕ್ಕೆ ಲೋಪ. ಋಕಾರದ ಪರದಲ್ಲಿರುವುದ ರಿಂದ ನಕಾರಕ್ಕೆ ಣತ್ವ. ಗೃಣತ್ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ಅಜಾದಿಪ್ರತ್ಯಯ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಭಾತೀಃ**—ಭಾ ದೀಪ್ತೌ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಉಗಿತಶ್ಚ** ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ನುಮ್‌ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ ಹಿಂದಿನಂತೆ **ಶತುರನುಮೋ**—(ಪಾ. ಸೂ. ೬-೧-೧೭೩) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅಸ್ಮೇ**—ಅಸ್ಮದ್ ಶಬ್ದ. ಚತುರ್ಥೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಶೇ ಆದೇಶ. **ಶೇಷೇಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪಬರುತ್ತದೆ. ॥ ೧೭ ॥



॥ ಸಂಹಿತಾಪಾಠಃ ॥

ಯಾ ಗೋಮತೀರುಷಸಃ ಸರ್ವವೀರಾ ವ್ಯುಚ್ಛಂತಿ ದಾಶುಷೇ ಮರ್ತ್ಯಾಯ ।
ವಾಯೋರಿವ ಸೂನೃತಾನಾಮುದರ್ಕೇ ತಾ ಅಶ್ವದಾ ಅಶ್ನವತ್ಸೋಮಸುತ್ವಾ ॥ ೧೮ ॥

॥ ಪದಪಾಠಃ ॥

ಯಾಃ । ಗೋಽಮತೀಃ । ಉಷಸಃ । ಸರ್ವಽವೀರಾಃ । ವಿಽಉಚ್ಛಂತಿ । ದಾಶುಷೇ । ಮರ್ತ್ಯಾಯ ।
ವಾಯೋಃಽಇವ । ಸೂನೃತಾನಾಂ । ಉತ್ಽಅರ್ಕೇ । ತಾಃ । ಅಶ್ವಽದಾಃ । ಅಶ್ನವತ್ । ಸೋಮಽಸುತ್ವಾ ॥ ೧೮ ॥

॥ ಸಾಯಣಭಾಷ್ಯಂ ॥

ದಾಶುಷೇ ಹವೀಂಷಿ ದತ್ತವತೇ ಮರ್ತ್ಯಾಯ ಮನುಷ್ಯಾಯ ಯಜಮಾನಾಯ ಗೋಮತೀರ್ಗೋಮತ್ಯೋ ಬಹುಭಿರ್ಗೋಭಿರ್ಯುಕ್ತಾಃ ಸರ್ವವೀರಾಃ ಸರ್ವೈಃ ಸರಣಸಮರ್ಥೈರ್ವೀರೈಃ ಶೂರೈರ್ಯುಕ್ತಾ ಯಾ ಉಷಸೋ ವ್ಯುಚ್ಛಂತಿ । ತಮೋ ವರ್ಜಯಂತಿ ವಾಯೋರಿವ ವಾಯುವಚ್ಛೀಘ್ರಂ ಪ್ರವರ್ತಮಾನಾನಾಂ ಸೂನೃತಾನಾಂ ಸ್ತುತಿರೂಪಾಣಾಂ ವಾಚಾಮುದರ್ಕೇ ಸಮಾಪ್ತಾವಶ್ವದಾ ಅಶ್ವಾನಾಂ ದಾತ್ರೀಸ್ತಾ ಉಷಸಃ ಸೋಮಸುತ್ವಾ ಸೋಮಾನಾಮಭಿಷೋತಾ ಯಜಮಾನೋಽಶ್ನವತ್ ವ್ಯಾಪ್ನೋತು ॥ ದಾಶುಷೇ । ದಾಶೃ ದಾನೇ । ದಾಶ್ವಾನ್ಸಾಹ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತ್ಯತೇ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಅಶ್ನವತ್ । ಅಶೂ ವ್ಯಾಪ್ತೌ । ವ್ಯತ್ಯಯೇನ ಪರಸ್ಮೈಪದಂ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಸೋಮಸುತ್ವಾ । ಷುಞ್ ಅಭಿಷವೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಕ್ವನಿಪ್ । ಹ್ರಸ್ವಸ್ಯ ಪಿತೀತಿ ತುಕ್ ॥

॥ ಪ್ರತಿಪದಾರ್ಥ ॥

**ದಾಶುಷೇ**— ಹವಿಸ್ಸನ್ನು ಅರ್ಪಿಸುವ । **ಮರ್ತ್ಯಾಯ**—ಮನುಷ್ಯನಾದ ಯಜಮಾನನಿಗೆ । **ಗೋಮತೀಃ**—ಕಿರಣಗಳಿಂದ ಕೂಡಿದ । **ಸರ್ವವೀರಾಃ**—ಎಲ್ಲಾ ಸಮರ್ಥರಿಂದಲೂ ಯುಕ್ತರಾದ । **ಯಾಃ ಉಷಸಃ**—ಯಾವ ಉಷಸ್ಸುಗಳು । **ವಾಯೋರಿವ**—ವಾಯುವಿನಂತೆ (ಶೀಘ್ರವಾಗಿ ನಡೆಯುತ್ತಿರುವ) । **ಸೂನೃತಾನಾಂ**—ಸ್ತುತಿವಾಕ್ಯಗಳು । **ಉದರ್ಕೇ**—ಮುಗಿದಮೇಲೆ । **ಅಶ್ವದಾಃ**—ಅಶ್ವಗಳನ್ನು ಕೊಡುವವೋ । **ತಾಃ**—ಅಂತಹ ಉಷಸ್ಸುಗಳು । **ಸೋಮಸುತ್ವಾ**—ಸೋಮರಸವನ್ನು ಸಿದ್ಧಪಡಿಸುವ ಯಜಮಾನನ ಸಮೀಪಕ್ಕೆ । **ಅಶ್ನವತ್**—ಬರಲಿ.

॥ ಭಾವಾರ್ಥ ॥

ಯಜ್ಞದಲ್ಲಿ ಯಜಮಾನರಾದಿ ಜನರು ಪ್ರಕಾಶಮಾನವಾದ ಉಷೋದೇವತೆಯನ್ನು ಬೇಗಬೇಗನೆ ಪಠಿಸುವ ಮಂತ್ರಗಳಿಂದ ಸ್ತುತಿಸುವರು. ಅವರ ಸ್ತೋತ್ರವು ಮುಗಿದ ಬಳಿಕ ಸ್ತೋತ್ರಮಾಡುವವರಿಗೆ ಅಶ್ವಾದಿಧನಗಳನ್ನು ಅನುಗ್ರಹಿಸುವ ಉಷೋದೇವತೆಯು ಸೋಮರಸವನ್ನು ಸಿದ್ಧಪಡಿಸಿ ಇಟ್ಟುಕೊಂಡಿರುವ ಯಜಮಾನನ ಸಮೀಪಕ್ಕೆ ಬರಲಿ.

## English Translation.

May he who has offered the libation obtain, upon the conclusion of his praises, (enunciated), like the wind, (with speed), (the favour of) those Ushasas who are givers of horses, and of cattle, and of progeny, and who shed light upon the mortal presenting to them (offerings).

॥ ವಿಶೇಷವಿಷಯಗಳು ॥

**ದಾಶುಷೇ—ಹವೀಂಷಿ ದತ್ತವತೇ ।** ಹವಿಸ್ಸುಗಳನ್ನು ಅರ್ಪಿಸುವ ಯಜಮಾನನಿಗೆ ಎಂದು ಅರ್ಥ. ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ ಎಂದು ನಿಪಾತಿತವಾಗಿರುವುದು. ನಿರುಕ್ತಕಾರರು **ದಾಶುಷೇ** ಎಂಬ ಪದಕ್ಕೆ **ದತ್ತವತೇ** ಎಂದು ಅರ್ಥವನ್ನು ವಿವರಿಸಿ,

**ಧಾತಾ ದದಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ ।**
**ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ ॥**

(ಅಥ. ಸಂ. ೭-೧೭-೨)

ಎಂಬ ಋಕ್ಕನ್ನು ಉದಹರಿಸಿರುವರು.

ದಾಶುಷೇ ಮರ್ತ್ಯಾಯ—**ದಾಶ್ವಾನಿತಿ ಯಜಮಾನನಾಮ ಶಾಕಪೂಣಿನಾ ಪಠಿತಂ । ತಾದರ್ಥ್ಯೇ ಚತುರ್ಥೀ ಯಜಮಾನಸ್ಯ ಮಾನುಷ್ಯಸ್ಯ ಚಾರ್ಥಾಯ ।** ಸ್ಕಂದಸ್ವಾಮಿಗಳು–ದಾಶ್ವಾನ್ ಎಂಬುದು ಯಜಮಾನನ ನಾಮವೆಂದು ಶಾಕಪೂಣಿನಿಯ ಮತವೆಂದು ಹೇಳಿರುವರು.

**ಗೋಮತೀಃ—ಗೋಮತ್ಯಃ ಬಹುಭಿರ್ಗೋಭಿರ್ಯುಕ್ತಾಃ** । ಉಷಸ್ಸುಗಳು ಬಹಳ ಗೋವುಗಳಿಂದ ಕೂಡಿರುವವುಗಳು ಎಂದು ಅರ್ಥವು. **ಅರುಣ್ಯೋ ಗಾವ ಉಷಸಾಂ** ಎಂದು ನಿರುಕ್ತದಲ್ಲಿ ಹೇಳಿರುವ ಪ್ರಕಾರ **ಅರುಣೀಭಿಃ ಸ್ವಾಭಿಃ ಗೋಭಿಃ ಗೋಮತ್ಯಃ** ಕೆಂಪು ಬಣ್ಣವುಳ್ಳ ಗೋವುಗಳನ್ನು ತಮ್ಮ ರಥಕ್ಕೆ ಕಟ್ಟಿರುವುದರಿಂದ ಉಷಸ್ಸುಗಳು ಗೋವುಗಳುಳ್ಳವರೆಂದು **ಸ್ಕಂದಸ್ವಾಮಿಗಳು** ವಿವರಣೆಯನ್ನು ಮಾಡಿರುವರು. **ನಿರುಕ್ತಕಾರರು** ಗೋಶಬ್ದವು **ಪೃಥಿವೀ, ಗೋವಿನ ಚರ್ಮ, ಶ್ಲೇಷ್ಮ, ಧನುಸ್ಸಿಗೆ ಕಟ್ಟುವ ಮೌರ್ವೀ ( ಜ್ಯಾ), ಆದಿತ್ಯ ಕಿರಣ,** ಎಂದು ಅನೇಕ ಅರ್ಥಗಳುಳ್ಳದ್ದಾಗಿರುವುದು ಎಂದು ಅರ್ಥವನ್ನು ವಿವರಿಸಿ ಪ್ರತಿಯೊಂದು ಅರ್ಥಕ್ಕೂ ಬೇರೆ ಬೇರೆಯಾಗಿ ಉದಾಹರಣೆಗಳನ್ನು ಕೊಟ್ಟಿರುತ್ತಾರೆ.

**ಸರ್ವವೀರಾಃ—ಸರ್ವೈಃ ಸರಣಸಮರ್ಥೈಃ ವೀರೈಃ ಶೂರೈಃ ಯುಕ್ತಾಃ** ಎಲ್ಲಾ ವಿಧದಲ್ಲಿಯೂ ಮುನ್ನುಗ್ಗುತ್ತಿರುವ ಬಲವುಳ್ಳ ಮತ್ತು ಧೈರ್ಯಶಾಲಿಗಳಾದ ಮನುಷ್ಯರಿಂದ ಉಷಸ್ಸುಗಳು ಕೂಡಿರುವುವು.

**ಉದರ್ಕೇ—ಸಮಾಪ್ತೌ** । ಮುಗಿಯುವಿಕೆ ಎಂದು **ಸೂನೃತಾನಾಮುದರ್ಕೇ** ಸ್ತೋತ್ರರೂಪವಾದ ವಾಕ್ಯಗಳ ಕೊನೆಯಲ್ಲಿ ಎಂದು ಸಾಯಣರೂ **ಉದರ್ಕ ಇತ್ಯುದ್ಭವ ಉಚ್ಯತೇ ಯಾದೃಕ್ ವಾಯೋಃ....ಕಾದಿ ವಾಚಾಂ ಉದ್ಭವೇ ಪ್ರಭಾತವೇಲಾಯಾಂ ಇತ್ಯರ್ಥಃ** ವಾಯುವಿನ ವೇಗದ ಉತ್ಪತ್ತಿಯಂತೆ ಇರುವ ಸ್ತೋತ್ರರೂಪವಾದ ನಿರಂತರವಾದ ಉತ್ಪತ್ತಿಯುಳ್ಳ ಪ್ರಭಾತಕಾಲದಲ್ಲಿ ಎಂದು ಸ್ಕಂದಸ್ವಾಮಿಗಳೂ ಹೇಳಿರುವರು. ಹೋತೃಗಳು ಉಷಃಕಾಲಕ್ಕೆ ಸರಿಯಾಗಿ ಎದ್ದು ಯಾಗಶಾಲೆಗಳಲ್ಲಿ ಸ್ತೋತ್ರಗಳನ್ನು ವೇಗದಿಂದ ಪಠಿಸುತ್ತಿರುವರು. ಆದಕಾರಣ ಉಷಃಕಾಲವು ಕಳೆದನಂತರ ಉತ್ಪನ್ನವಾಗುವ ಪ್ರಭಾತಕಾಲವೂ ಸಹ ಸ್ತೋತ್ರವಾಕ್ಯಗಳ ಉತ್ಪತ್ತಿಯುಳ್ಳವುಗಳಾಗಿ ಇರುತ್ತವೆ ಎಂದಭಿಪ್ರಾಯವು.

**ಅಶ್ವದಾಃ—ಅಶ್ವಾನಾಂ ದಾತ್ರೀಃ** । ಕುದುರೆಗಳನ್ನು ಉಷಸ್ಸುಗಳು ಯಜ್ಞಮಾಡುವ ಯಜಮಾನರಿಗೆ ಕೊಡುವುವು ಎಂದು ಸಾಯಣರೂ, ಉಷಸ್ಸುಗಳು **ಸ್ತೋತೃಭ್ಯಃ ಯಷ್ಟೃಭ್ಯಶ್ಚ ಅಶ್ವಾನ್ ದಾತ್ರೀಃ** ಸ್ತೋತ್ರ ಮಾಡುವವರಿಗೂ, ಯಜ್ಞಮಾಡುವವರಿಗೂ, ಅಶ್ವಗಳನ್ನು ಕೊಡುವುವು ಅಥವಾ **ದಕ್ಷಿಣಾದಾನೇ ಅಶ್ವಸ್ಯಾಪಿ ದಾನ ವಿಧಾನಾತ್ ಅಶ್ವದಾ ಇತಿ ಸೋಮಸುತ್ವನೋ ವಿಶೇಷಣಂ ನೋಷಸಾಂ । ಅಶ್ವಸ್ಯ ದಾತಾ ಯಜಮಾನಃ ।** ದಕ್ಷಿಣೆಯನ್ನು ಕೊಡುವಾಗ ಅಶ್ವವನ್ನು ದಾನಮಾಡುವುದರಿಂದ ಸೋಮರಸವನ್ನು ಹಿಂಡುವ ಯಾಗಮಾಡುವವರೂ ಅಶ್ವದಾತೃಗಳಾಗಿರುವರು, ಅಶ್ವದಾ ಎಂಬ ಪದವು ಉಷಸ್ಸಿಗೆ ವಿಶೇಷಣವಾಗಿ ಇರುವುದಿಲ್ಲ. ಯಜಮಾನನು ಅಶ್ವದಾನಕರ್ತನು ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಗೋಮತೀ—**ಗಾವಃ ಅಸಾಂ ಸಂತಿ. ಗೋಮತ್ಯಃ **ತದಸ್ಯಾಸ್ತ್ಯ—**(ಪಾ. ಸೂ. ೫-೨-೯೪) ಎಂಬುದರಿಂದ **ಮತುಪ್** ಪ್ರತ್ಯಯ. ಉಗಿತ್ತಾದುದರಿಂದ ಅನುದಾತ್ತವಾಗುತ್ತದೆ. ಪ್ರಥಮಾ ಜಸ್ ಪರವಾದಾಗ **ಸುಪಾಂ ಸುಲುಕ್—**(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಸರ್ವವೀರಾಃ**—ಸರ್ವೇ ವೀರಾಃ ಯಾಸಾಂ ತಾಃ ಸರ್ವವೀರಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪ್ರಕೃತಿಸ್ವರ ಬರುತ್ತದೆ.

**ವ್ಯಚ್ಛಂತಿ**—ಉಛೀ ವಿವಾಸೇ. ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಯಾಃ ಎಂದು ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶ ವಿಕರಣ ಸ್ವರ ಉಳಿಯುತ್ತದೆ.

**ದಾಶುಷೇ**—ದಾಶೃ ದಾನೇ. ಧಾತು. **ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ವಸೋಃ ಸಂಪ್ರಸಾರಣಮ್** (ಪಾ. ಸೂ ೬-೪-೧೩೧) ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಪ್ರತ್ಯಯ ಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಅಶ್ವದಾಃ**—ಅಶ್ವಾನ್ ದದಾತಿ ಇತಿ ಅಶ್ವದಾಃ ತಾಃ ಅಶ್ವದಾಃ **ಆತೋಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವಿಚ್ ಪ್ರತ್ಯಯ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಶ್ನವತ್**—ಅಶೂ ವ್ಯಾಪ್ತೌ. ಧಾತು. ಆತ್ಮನೇಪದಿಯಾದರೂ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಪ್ರತ್ಯಯ ಬರುತ್ತದೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಸೂತ್ರದಿಂದ ಅಡಾಗಮ. **ಸ್ವಾದಿಭ್ಯಃ ಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ಶ್ನು ವಿಕರಣ. ಪ್ರತ್ಯಯನಿಮಿತ್ತವಾಗಿ ವಿಕರಣ ಉಕಾರಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ಸೋಮಸುತ್ವಾ**—ಷುಞ್ ಅಭಿಷವೇ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಕ್ವನಿಪ್ ಪ್ರತ್ಯಯ. **ಲಶಕ್ವತದ್ಧಿತೇ** ಸೂತ್ರದಿಂದ ಕಕಾರ ಇತ್ತಾಗುತ್ತದೆ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣಬರುವುದಿಲ್ಲ. **ಧಾತ್ವಾದೇಃ ಷಃ ಸಃ** ಎಂಬುದರಿಂದ ಧಾತುವಿಗೆ ಆದಿಗೆ ಸತ್ವ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಹ್ರಸ್ವಕ್ಕೆ ತುಕಾಗಮ. ಪಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೧೮ ॥



॥ ಸಂಹಿತಾಪಾಠಃ ॥

ಮಾತಾ ದೇವಾನಾಮದಿತೇರನೀಕಂ ಯಜ್ಞಸ್ಯ ಕೇತುರ್ಬೃಹತೀ
ವಿ ಭಾಹಿ ।
ಪ್ರಶಸ್ತಿಕೃದ್ಬ್ರಹ್ಮಣೇ ನೋ ವ್ಯು೧ಚ್ಛಾ ನೋ ಜನೇ ಜನಯ
ವಿಶ್ವವಾರೇ ॥ ೧೯ ॥

॥ ಪದಪಾಠಃ ॥

ಮಾತಾ । ದೇವಾನಾಂ । ಅದಿತೇಃ । ಅನೀಕಂ । ಯಜ್ಞಸ್ಯ । ಕೇತುಃ । ಬೃಹತೀ ।
ವಿ । ಭಾಹಿ ।
ಪ್ರಶಸ್ತಿಽಕೃತ್ । ಬ್ರಹ್ಮಣೇ । ನಃ । ವಿ । ಉಚ್ಛ । ಆ । ನಃ । ಜನೇ । ಜನಯ ।
ವಿಶ್ವಽವಾರೇ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಉಷಸ್ತ್ವಂ ದೇವಾನಾಂ ಮಾತಾ ಜನನೀ । ಉಷಸಿ ಸರ್ವೇ ದೇವಾಃ ಸ್ತುತ್ಯಾ ಪ್ರಬೋಧ್ಯಂತೇ ಅತಃ ಸಾ ತಜ್ಜನನವತೀತ್ಯುಚ್ಯತೇ । ಅತ ಏವಾದಿತೇರ್ದೇವಾನಾಂ ಮಾತುರನೀಕಂ ಪ್ರತ್ಯನೀಕಂ ಪ್ರತಿಸ್ಪರ್ಧಿನೀ ತ್ವಮಿತ್ಯರ್ಥಃ । ಯದ್ವಾ । ದೀವ್ಯಂತೀತಿ ದೇವಾ ರಶ್ಮಯಃ । ತೇಷಾಂ ನಿರ್ಮಾತ್ರೀ ಅದಿತೇರಖಂಡನೀಯಾಯಾ ಭೂಮೇರನೀಕಂ ಮುಖಂ । ಯಥೇಂದ್ರಿಯಾಶ್ರಯತ್ವಾನ್ಮುಖಂ ಪ್ರಕಾಶಕಂ ಏವಮುಷಾ ಭೂಮೇಃ ಪ್ರಕಾಶಯಿತ್ರೀತ್ಯರ್ಥಃ । ಯಜ್ಞಸ್ಯ ಕೇತುಃ ಕೇತಯಿತ್ರೀ ಜ್ಞಾಪಯಿತ್ರೀ ಬೃಹತೀ ಮಹತೀ ಸತೀ ವಿ ಭಾಹಿ । ಪ್ರಕಾಶಯಸ್ವ । ಅಪಿ ಚ ಪ್ರಶಸ್ತಿಕೃತ್ ಸಮ್ಯಕ್ ಸ್ತುತಮಿತಿ ಪ್ರಶಂಸನಂ ಕುರ್ವತೀ ನೋಽಸ್ಮದೀಯಾಯ ಬ್ರಹ್ಮಣೇ ಮಂತ್ರರೂಪಾಯ ಸ್ತೋತ್ರಾಯ ವ್ಯುಚ್ಛ । ವಿವಾಸಯ । ತದನಂತರಂ ಹೇ ವಿಶ್ವವಾರೇ ಸರ್ವೈರ್ವರಣೀಯ ಉಷೋ ನೋಽಸ್ಮಾನ್ ಜನೇ ಜನಪದ ಆಜನಯ । ಆಭಿಮುಖ್ಯೇನ ಪ್ರಾದುರ್ಭಾವಯ । ಅವಸ್ಥಾಪಯೇತ್ಯರ್ಥಃ ॥ ಬೃಹತೀ ।

**ಬೃಹನ್ಮಹತೋರುಪಸಂಖ್ಯಾನಮಿತಿ ಙೀಪ ಉದಾತ್ತತ್ವಂ । ಪ್ರಶಸ್ತಿಕೃತ್ । ಶಸ್ಸು ಸ್ತುತೌ । ಭಾವೇ ಕ್ತಿನ್ । ತಿತುತ್ರೇತೀಟ್ಪ್ರತಿಷೇಧಃ । ಅನಿದಿತಾಮಿತಿ ನಲೋಪಃ । ತಸ್ಮಿನ್ನುಪಪದೇ ಕರೋತೇಃ ಕ್ವಿಪ್ಚೇತಿ ಕ್ವಿಪ್ । ಜನಯ । ಜನೀ ಪ್ರಾದುರ್ಭಾವೇ । ಣಿಚ್ಯುಪಧಾವೃದ್ಧಿಃ । ಜನೀಜ್ರ್ಯಷ್ಕ್ನಸುರಂಜೋಽಮಂತಾಶ್ಚ । ಧಾ. ೧೯, ೬೩-೬೭ । ಇತಿ ಮಿತ್ತ್ವೇ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ ॥**

॥ ಪ್ರತಿಪದಾರ್ಥ ॥

(**ಹೇ ಉಷಃ ತ್ವಂ**—ಎಲೈ ಉಷೋದೇವತೆಯೇ ನೀನು) । **ದೇವಾನಾಂ**—ಎಲ್ಲದೇವತೆಗಳಿಗೂ (ರಶ್ಮಿಗಳಿಗೂ) । **ಮಾತಾ**—ಜನನಿಯು (ಉತ್ಪತ್ತಿಸ್ಥಾನವು) । **ಅದಿತೇಃ**—ದೇವಮಾತೆಯಾದ ಅದಿತಿಗೆ (ಅಖಂಡನೀಯವಾದ ಭೂಮಿಗೆ) । **ಅನೀಕಂ**—ಪ್ರತಿಸ್ಪರ್ಧಿಯು (ಮುಖದಂತಿರುವವಳು) । **ಯಜ್ಞಸ್ಯ**—ಯಜ್ಞಗಳನ್ನು । **ಕೇತುಃ**—ಜ್ಞಾಪಿಸುವವಳು (ಇಂತಹ ನೀನು) । **ಬೃಹತೀ**—ಬೃಹದಾಕಾರಳಾಗಿ । **ವಿ ಭಾಹಿ** ಚೆನ್ನಾಗಿ ಪ್ರಕಾಶಿಸು । **ಪ್ರಶಸ್ತಿಕೃಕ್**—ಸ್ತೋತ್ರಗಳ ಪ್ರಶಂಸೆಮಾಡುವವಳಾಗಿ । **ನಃ**—ನಮ್ಮ । **ಬ್ರಹ್ಮಣೇ**—ಸ್ತೋತ್ರಗಳನ್ನು ಕೇಳುವುದಕ್ಕಾಗಿ । **ವ್ಯುಚ್ಛ**—ಉದಿಸು (ಅನಂತರ) । **ವಿಶ್ವವಾರೇ**—ಎಲ್ಲರಿಂದಲೂ ಅಪೇಕ್ಷಣೀಯಳಾದ ಎಲೈ ಉಷೋದೇವತೆಯೇ (ನೀನು) । **ನಃ**—ನಮ್ಮನ್ನು । **ಜನೇ**—ಜನಗಳಲ್ಲಿ । **ಆ ಜನಯ** ಮುಖಂಡರನ್ನಾಗಿ ಮಾಡು.

॥ ಭಾವಾರ್ಥ ॥

ಎಲೈ ಉಷೋ ದೇವಿಯೇ, ನೀನು ಎಲ್ಲಾದೇವತೆಗಳಿಗೂ (ರಶ್ಮಿಗಳಿಗೂ) ಮಾತೃವು; ಅದಿತಿಗೆ ಪ್ರತಿಸ್ಪರ್ಧಿಯು; (ಭೂಮಿಗೆ ಮುಖಪ್ರಾಯಳು); ಯಜ್ಞಪ್ರಕಾಶಕಳು; ಇಂತಹ ನೀನು ಬೃಹದಾಕಾರಳಾಗಿ ಪ್ರಕಾಶಿಸು. ನಮ್ಮ ಸ್ತುತಿವಾಕ್ಯವನ್ನು ಮೆಚ್ಚಿ, ನಮಗಾಗಿ ಉದಿಸು; ಎಲ್ಲರಿಂದಲೂ ಅಪೇಕ್ಷಣೀಯಳಾದ ನೀನು ನಮ್ಮನ್ನು ಜನಗಳಲ್ಲಿ ಮುಖ್ಯರನ್ನಾಗಿ ಮಾಡು.

## English Translation.

Mother of the gods, rival of Aditi, illuminator of the sacrificc, mighty Ushas, shine forth; approving of our prayer, dawn upon us. you are cherished by all; make us eminent among the people.

॥ ವಿಶೇಷವಿಷಯಗಳು ॥

**ಮಾತಾ ದೇವಾನಾಂ—ಹೇ ಉಷಃ ತ್ವಂ ದೇವಾನಾಂ ಜನನೀ** । ಉಷಸ್ಸು ದೇವತೆಗಳಿಗೆ ಜನನಿಯಾಗಿರುವಳು. ಉಷಸ್ಸಿನ ಉದಯವಾದ ಕೂಡಲೆ ದೇವತೆಗಳನ್ನು ಸ್ತುತಿಮಾಡುವ ಋತ್ವಿಕ್ಕುಗಳು ಯಜ್ಞಗಳಲ್ಲಿ ದೇವತೆಗಳನ್ನು ಎಚ್ಚರಗೊಳಿಸುವುದರಿಂದ ದೇವಮಾತೃತ್ವವು ಉಷಸ್ಸಿಗೆ ಉಪಪನ್ನವಾಗಿರುವುದು.

**ದೇವಶಬ್ದೇನಾತ್ರ ಆದಿತ್ಯಾ ಉಚ್ಯಂತೇ । ತೇಷಾಂ ಹಿ ಮಾತಾ ಉಷಾಃ । ಪ್ರತಿಮಾಸಂ ಚ ಆದಿತ್ಯಭೇದಂ ಅಂಗೀಕೃತ್ಯ ಬಹುವಚನಂ ॥**

(ಸ್ಕಂ. ಭಾ.)

**ದೇವ** ಶಬ್ದದಿಂದ **ಆದಿತ್ಯ**ರೆಂದೂ, ಆದಿತ್ಯರಿಗೆ **ಉಷಸ್ಸು** ಜನನಿಯಾಗಿರುವಳೆಂದೂ, (ಆದಿತ್ಯೋದಯಕ್ಕಿಂತ ಪೂರ್ವದಲ್ಲಿ ಉಷಸ್ಸಿನ ಉದಯವಾಗಿರುವುದರಿಂದ) ಪ್ರತಿ ತಿಂಗಳಿನಲ್ಲಿಯೂ ಆದಿತ್ಯರ ಭೇದವನ್ನು ಅಂಗೀಕರಿಸಿ **ದೇವಾನಾಂ** ಎಂಬಲ್ಲಿ ಬಹುವಚನವು ಪ್ರಯುಕ್ತವಾಗಿರುವುದೆಂದೂ ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುವರು.

**ಅದಿತೇರನೀಕಂ—ದೇವಾನಾಂ ಮಾತುಃ ಅನೀಕಂ ಪ್ರತ್ಯನೀಕಂ ಪ್ರತಿಸ್ಪರ್ಧಿನೀ ।** ದೇವತೆಗಳಿಗೆ ಅಥವಾ ಆದಿತ್ಯರಿಗೆ ಜನನಿಯಾಗಿರುವುದರಿಂದ ಅದಿತಿದೇವಿಗೆ ಪ್ರತಿಸ್ಪರ್ಧಿಯಾಗಿರುವಳು. ಗುಣ ಅಥವಾ ಕ್ರಿಯರೂಪವಾದ ಧರ್ಮವನ್ನು ಪುರಸ್ಕರಿಸಿ ಉಪಮಾದ್ಯಲಂಕಾರಗಳನ್ನು ನಿರ್ವಚನೆಮಾಡುವುದರಿಂದ ಕಾವ್ಯಶೈಲಿಯನ್ನು ಬಹಳ ಮಟ್ಟಿಗೆ ಹೋಲುವ ಈ ಋಕ್ಕಿನಲ್ಲಿ ಉಷಸ್ಸಿಗೆ ದೇವಮಾತೃತ್ವನಿರೂಪಣದಂತೆ, ಅದಿತ್ಯನೀಕತ್ವವೂ ಉಕ್ತವಾಗಿ ಇರುವುದು. ಅಥವಾ ಪ್ರಕಾಶಕಳಾಗಿ ಇರುವುದರಿಂದ ದೇವ ಶಬ್ದಕ್ಕೆ ರಶ್ಮಿಗಳೆಂದು ಅರ್ಥವು. ಹೀಗೆ ಇರುವುದರಿಂದ ರಶ್ಮಿಗಳನ್ನು ಸೃಷ್ಟಿಮಾಡುತ್ತಿರುವುದರಿಂದ ಉಷಸ್ಸಿಗೆ ದೇವಮಾತೃತ್ವವು ಉಂಟಾಗಿರುವುದು ಇದರಹಾಗೆಯೇ ಅದಿತಿ ಶಬ್ದಕ್ಕೆ ಅಖಂಡನೀಯವಾಗಿರುವ ಭೂಮಿಯು ಎಂದು ಅರ್ಥವು. ಈ ಭೂಮಿಗೆ ಮುಖದಂತೆ ಉಷಸ್ಸು ಇರುವುದು. ಇಂದ್ರಿಯಾದಿಗಳನ್ನು ಪ್ರಕಾಶಿಸುವುದರಿಂದ **ಅನೀಕಂ** ಶಬ್ದವು ಮುಖ ಎಂದು ಅರ್ಥವನ್ನು ಬೋಧಿಸುವುದಾಗಿ ಭೂಮಿಯನ್ನು ಪ್ರಕಾಶಮಾಡುವುದು ಎಂದು ಭಾಷ್ಯಕಾರರ ವಿವರಣೆಯು.

**ಅದಿತಿಶಬ್ದೇನ ಅತ್ರ ಅದೀನಕತ್ವಾತ್ ಸಮಗ್ರಜ್ಯೋತಿರುಚ್ಯತೇ । ಅನೀಕಶಬ್ದೋಽಪಿ ಬ್ರಾಹ್ಮಣಾನೀಕಂ ಇತಿವತ್ ಸಮೂಹವಚನಂ । ಅದೀನಸ್ಯ ಸಮಗ್ರಸ್ಯ ಪ್ರಕಾಶಾಖ್ಯಸ್ಯ ಜ್ಯೋತಿಷಃ ಸಮೂಹಃ । ಅಥವಾ ಅನೀಕಶಬ್ದಃ ಸ್ವಾಂಗಮುಖವಚನಃ ಇಹಾಗ್ರತ್ವಸಾಮಾನ್ಯಾತ್ ಉಷಸಿ ಪ್ರಯುಜ್ಯತೇ । ಅದೀನಸ್ಯ ಸಮಗ್ರಸ್ಯ ಅಹರ್ಲಕ್ಷಣಸ್ಯ ಜ್ಯೋತಿಷಃ ಮುಖಭೂತೇತ್ಯರ್ಥಃ**

(ಸ್ಕಂ. ಭಾ).

ಅದಿತಿ ಶಬ್ದಕ್ಕೆ ಇಲ್ಲಿ ಅದೀನವಾಗಿರುವುದರಿಂದ ಸಂಪೂರ್ಣವಾದ ಜ್ಯೋತಿಸ್ಸೆಂದು ಅರ್ಥವು. ಅನೀಕ ಶಬ್ದವು (ಬ್ರಾಹ್ಮಣಾನೀಕ) ಬ್ರಾಹ್ಮಣ ಸಮೂಹ ಎಂಬಂತೆ ಸಮೂಹವಾಚಿಯಾಗಿರುತ್ತದೆ. ಇದರಿಂದ **ಅದಿತೇರನೀಕಂ**—ಎಂದರೆ ಸಂಪೂರ್ಣವಾದ (ಪ್ರಕಾಶದಸಮೂಹ) ಪ್ರಕಾಶವೆಂದು ಹೆಸರುಳ್ಳ ತೇಜಸ್ಸಿನ ಸಮೂಹವೆಂದು ಅರ್ಥವಾಗುತ್ತದೆ. ಅಥವಾ ಅನೀಕ ಎಂಬ ಶಬ್ದಕ್ಕೆ ಎಲ್ಲಾ ಅವಯವಗಳಿಂದಲೂ ಪೂರ್ಣವಾದ ಮುಖವೆಂದು ಅರ್ಥವು. ಇಲ್ಲಿ ಶ್ರೇಷ್ಠವಾಗಿರುವ ಕಾರಣ ಉಷಸ್ಸು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಇದರಿಂದ ಉಷಸ್ಸೆಂಬುವುದು ಜ್ಯೋತೀರೂಪದಿಂದ ಬೆಳಗುತ್ತಿರುವ ಅಹಸ್ಸೆಂಬ ಪ್ರಕಾಶದ ಮುಖವಾಗಿರುವುದೆಂದು ಸ್ಕಂದಸ್ವಾಮಿಗಳು ಹೇಳುತ್ತಾರೆ.

**ಯಜ್ಞಸ್ಯ ಕೇತುಃ—ಕೇತು** ಶಬ್ದವು ಜ್ಞಾನವಾಚಿಯಾಗಿರುವುದರಿಂದ ಯಜ್ಞವನ್ನು ಆಚರಿಸುವ ಜ್ಞಾನವನ್ನು ಉಂಟುಮಾಡುವುದೆಂದು ಅರ್ಥವು.

**ಬ್ರಹ್ಮಣೇ—ಮನ್ತ್ರರೂಪಾಯ ಸ್ತೋತ್ರಾಯ ।** ಬ್ರಹ್ಮಶಬ್ದವು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಧನವೆಂದು ಅರ್ಥವನ್ನು ಬೋಧಿಸುವುದು. ಆದರೂ ಇಲ್ಲಿ ಯಜ್ಞಮಾಡುವವರು ಪಠಿಸುವ ಸ್ತೋತ್ರವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯಜ್ಞಸ್ಯ**— ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಯಜಯಾಚಯತ**—(ಪಾ. ಸೂ. ೩-೩-೯೧) ಎಂಬುದರಿಂದ ನಙ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಬೃಹತೀ—ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್ ಬಂದಾಗ **ಬೃಹನ್ಮ-ಹತೋರುಪಸಂಖ್ಯಾನಮ್** ಎಂಬ ವಚನದಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ಪ್ರಥಮಾ ಸುವಿಭಕ್ತಿಗೆ **ಹಲ್ಙ್ಯಾಭ್ಯೋ** ಸೂತ್ರದಿಂದ ಲೋಪ.

**ಭಾಹಿ**—ಭಾ ದೀಪ್ತೌ ಧಾತು. ಲೋಣ್ಮಧ್ಯಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಶಸ್ತಿಕೃತ್**—ಶಂಸು ಸ್ತುತೌ ಧಾತು. **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ತಿತುತ್ರಥಸಿ**—(ಪಾ. ಸೂ. ೭-೨-೯) ಎಂಬುದರಿಂದ ಇಡಾಗಮನಿಷೇಧ ಬರುತ್ತದೆ. **ಅನಿದಿತಾಂ ಹಲ ಉಪಧಾಯಾಃ**—(ಪಾ. ಸೂ. ೬-೪-೨೪) ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಪ್ರಶಸ್ತಿ ಎಂಬುದು ಉಪಪದವಾಗಿರುವಾಗ ಡುಕೃಞ್ ಕರಣೇ. ಈ ಧಾತುವಿಗೆ **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿನ ಉಕಾರಕ್ಕೆ ತುಕಾಗಮ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಉಚ್ಛ—**ಉಛೀ ವಿವಾಸೇ. ಧಾತು. ತುದಾದಿ. ಲೋಣ್ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ .

**ಜನಯ**—ಜನೀ ಪ್ರಾದುರ್ಭಾವೇ. ಧಾತು. ಪ್ರಯೋಜಕವ್ಯಾಪಾರತೋರುವುದರಿಂದ **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. **ಜನೀಜ್ರೃಷ್ಕ್ನಸುರಂಜೋಽಮಂತಾಶ್ಚ** ಎಂಬುದರಿಂದ ಈ ಧಾತುವಿಗೆ ಮಿತ್‌ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಪುನಃ ಉಪಧಾಹ್ರಸ್ವ ಬರುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಬಂದಾಗ ಶಪ್ಪಿನ ಅಕಾರ ನಿಮಿತ್ತವಾಗಿ **ಅತೋಹೇಃ**—(ಪಾ. ಸೂ. ೬-೪-೧೦೫) ಎಂಬುದರಿಂದ ಅದಕ್ಕೆ **ಲೋಪ.** ಶಪ್ ನಿಮಿತ್ತವಾಗಿ ಣಿಚ್ಚಿಗೆ ಗುಣ. ಅಯಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ವಿಶ್ವವಾರೇ**–ವಿಶ್ವೈಃ ವ್ರಿಯತೇ ಇತಿ ವಿಶ್ವವಾರಾ. ವೃಞ್ ವರಣೇ ಧಾತು. ಕರ್ಮಣಿಯಲ್ಲಿ ಘಞ್ ಪ್ರತ್ಯಯ. **ಅಚೋಽಞ್ಣಿತಿ** ಸೂತ್ರದಿಂದ ಋಕಾರಕ್ಕೆ ವೃದ್ಧಿ. **ಆಮಂತ್ರಿತಸ್ಯ ಚ**—(ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೯ ॥

॥ ಸಂಹಿತಾಪಾಠಃ ॥

ಯಚ್ಚಿತ್ರಮಪ್ನ ಉಷಸೋ ವಹಂತೀಜಾನಾಯ ಶಶಮಾನಾಯ ಭದ್ರಂ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೨೦ ॥

॥ ಪದಪಾಠಃ ॥

**ಯತ್ । ಚಿತ್ರಂ । ಅಪ್ನಃ । ಉಷಸಃ । ವಹಂತಿ । ಈಜಾನಾಯ । ಶಶಮಾನಾಯ । ಭದ್ರಂ ।**
**ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ । ಉತ । ದ್ಯೌಃ ॥ ೨೦ ॥**

॥ ಸಾಯಣಭಾಷ್ಯಂ ॥

**ಚಿತ್ರಂ ಚಾಯನೀಯಮಪ್ನ ಆಪ್ತವ್ಯಂ ಯದ್ಧನಮುಷಸೋ ವಹಂತಿ ಆನಯಂತಿ ಈಜಾನಾಯ ಹವಿರ್ಭಿರಿಷ್ಟವತೇ ಶಶಮಾನಾಯ ಸ್ತುತಿಭಿಃ ಸಂಭಜಮಾನಾಯ ಪುರುಷಾಯ ಭದ್ರಂ ಭಜನೀಯಂ ತದ್ಭವತೀತಿ ಶೇಷಃ । ಯದನೇನ ಸೂಕ್ತೇನಾಸ್ಮಾಭಿಃ ಪ್ರಾರ್ಥಿತಂ ತನ್ಮಿತ್ರಾದಯಃ ಷಟ್ ದೇವತಾ ಮಾಮಹಂತಾಂ । ಪೂಜಿತಂ ಕುರ್ವಂತು ॥ ಅಪ್ನಃ । ಆಪ್ಲೃ ವ್ಯಾಪ್ತೌ । ಆಪಃ ಕರ್ಮಾಖ್ಯಾಯಾಂ**

**ಹ್ರಸ್ವೋ ನುಟ್ಚ ವೇತಿ ಬಹುಲಗ್ರಹಣಾದಕರ್ಮಾಖ್ಯಾಯಾಮಪ್ಯಸುನ್ । ಧಾತೋರ್ಹ್ರಸ್ವೋ ನುಡಾಗಮಶ್ಚ । ಈಜಾನಾಯ । ಯಜತೇಶ್ಛಂದಸಿ ಲಿಟ್ । ಲಿಟಃ ಕಾನಜ್ವಾ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ। ದ್ವಿರ್ವಚನಾದಿ । ಶಶಮಾನಾಯ । ಶಶ ಪ್ಲುತಗತೌ । ತಾಚ್ಛೀಲಿಕಶ್ಚಾನಶ್ । ತಸ್ಯ ಲಸಾರ್ವಧಾತುಕತ್ವಾಭಾವಾದದುಪದೇಶಾಲ್ಲಸಾರ್ವಧಾತುಕಸ್ವರಾಭಾವೇ ಚಿತ್ಸ್ವರ ಏವ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ಚಿತ್ರಂ**—ವಿಚಿತ್ರವಾದ । **ಅಪ್ನಃ**—ಹೊಂದಲ್ಪಡಬೇಕಾದ । **ಯತ್**—ಯಾವ ಧನವನ್ನು । **ಉಷಸಃ**—ಉಷೋದೇವತೆಗಳು । **ವಹಂತಿ**—ಹೊತ್ತು ತರುತ್ತಾರೋ (ಅದು) । **ಈಜಾನಾಯ**—ಹವಿರಾದಿಗಳಿಂದ ಯಜ್ಞಮಾಡುವವನಿಗೂ । **ಶಶಮಾನಾಯ**—ಸ್ತುತಿಸುವವನಿಗೂ । **ಭದ್ರಂ**—ಮಂಗಳಕರ(ವಾಗುತ್ತದೆ) । **ನಃ**—ನಮ್ಮ । **ತತ್**—(ಈ ಸೂಕ್ತದಿಂದ ಮಾಡಲ್ಪಟ್ಟ) ಪ್ರಾರ್ಥನೆಯನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಭೂಮಿಯೂ । **ಉತ**—ಮತ್ತು । **ದ್ಯೌಃ**—ಅಂತರಿಕ್ಷವೂ (ಸ್ವರ್ಗಾಧಿದೇವತೆಯೂ) । **ಮಮಹಂತಾಂ**—ರಕ್ಷಿಸಲಿ (ಮನ್ನಿಸಲಿ).

॥ ಭಾವಾರ್ಥ ॥

ಉಷಸ್ಸುಗಳು ತರುವ ಎಲ್ಲರೂ ಅಪೇಕ್ಷಿಸುವ ಧನವು ಯಾಗ ಮತ್ತು ಸ್ತೋತ್ರಮಾಡುವವರಿಗೆ ಮಂಗಳವನ್ನುಂಟುಮಾಡುತ್ತದೆ. ಈ ಸೂಕ್ತದಿಂದ ಮಾಡಿದ ಸ್ತುತಿಯನ್ನು ಅಥವಾ ಪ್ರಾರ್ಥನೆಯನ್ನು ಮಿತ್ರ, ವರುಣ, ಅದಿತಿ, ಸಿಂಧು, ಭೂ ಮತ್ತು ಅಂತರಿಕ್ಷದೇವತೆಗಳು ರಕ್ಷಿಸಲಿ (ಮನ್ನಿಸಲಿ).

English Translation.

Whatever valuable wealth the Ushasas convey, is beneficial to the sacrificer and to the praiser. May Mitra, Varuna, Aditi,—ocean, earth and heaven, be favourable to this our prayer.

॥ ವಿಶೇಷವಿಷಯಗಳು ॥

**ಅಪ್ನಃ**—**ಆಪ್ತವ್ಯಂ** ಹೊಂದಲರ್ಹವಾದದ್ದು, ಎಲ್ಲರಿಗೂ ಬೇಕಾದದ್ದು. ಅಪ್ನಶಬ್ದವು ಇಪ್ಪತ್ತಾರು ಕರ್ಮವಾಚಕಗಳಲ್ಲಿ (ನಿ. ೩-೨) ಉಕ್ತವಾಗಿರುತ್ತದೆ.

**ಚಿತ್ರಂ**—**ಚಾಯನೀಯಂ** ಪೂಜ್ಯವಾದದ್ದು. ಚಿತ್ರಶಬ್ದವು (ನಿ. ೧೨-೧೭ ಮತ್ತು ೧೨-೭) **ಚಾಯನೀಯಂ ಮಂಹನೀಯಂ** ಎಂಬ ಅರ್ಥದಲ್ಲಿ ಪಠಿತವಾಗಿದೆ.

**ಶಶಮಾನಾಯ**—**ಸ್ತುತಿಭಿಃ ಸಂಭಜಮಾನಾಯ ಪುರುಷಾಯ ।** ಸ್ತೋತ್ರಗಳಿಂದ ಪ್ರಶಂಸೆಮಾಡಿ ಸೇವಿಸುವ ಮನುಷ್ಯನಿಗೆ ಎಂದರೆ ಯಜಮಾನನಿಗೆ ಎಂದು ಅರ್ಥ. ನಿರುಕ್ತಕಾರರು **ಶಶಮಾನಃ ಶಂಸಮಾನಃ ।**

**ಶಶಮಾನ** ಎಂಬ ಶಬ್ದಕ್ಕೆ (ನಿ. ೬-೮) **ಶಂಸಮಾನೆ** ಎಂದು ಅರ್ಥವನ್ನು ವಿವರಿಸಿ **ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಇತ್ಯಪಿ ನಿಗಮೋ ಭವತಿ** ಎಂದು ವ್ಯಾಖ್ಯಾನಮಾಡಿ—

**ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಕವಿರ್ಹೋತಾ ಯಜತಿ ಮನ್ಮಸಾಧನಃ ।**
**ಉಪಾಹ ತಂ ಗಚ್ಛಥೋ ವೀಥೋ ಅಧ್ವರಮಚ್ಛಾ ಗಿರಃ ಸುಮತಿಂ ಗಂತಮಸ್ಮಯೂ ॥**

(ಋ. ಸಂ. ೧-೧೫೧-೭)

ಎಂಬ ಈ ಋಕ್ಕನ್ನು ಉದಹರಿಸಿರುವರು.

**ಭದ್ರಂ—ಭಜನೀಯಂ** ಹೊಂದಲು ಅರ್ಹವಾದದ್ದು. ಉಷೋದೇವತೆಯು ಹವಿಸ್ಸುಗಳಿಂದ ಯಾಗ ಮಾಡುವವನಿಗೂ ಸ್ತುತಿಗಳಿಂದ ಸ್ತೋತ್ರಮಾಡುವವನಿಗೂ ಹೊಂದಲು ಅರ್ಹವಾದ ಧನವೇ ಮೊದಲಾದವುಗಳನ್ನು ಒದಗಿಸಿಕೊಡುತ್ತದೆ. ಈ ಉಷೋದೇವಿಯ ಸ್ತೋತ್ರರೂಪವಾದ ಸೂಕ್ತದ ಪಠನದಿಂದ ಮಿತ್ರ, ವರುಣ, ಅದಿತಿ, ಸಮುದ್ರದ ಅಭಿಮಾನದೇವತೆಯು, ಭೂಮಿ, ಅಂತರಿಕ್ಷ, ಇವುಗಳು ನಮಗೆ ನಮ್ಮ ಪ್ರಾರ್ಥನೆಯನ್ನು ನೆರವೇರಿಸಿ ನಮಗೆ ಅನುಗ್ರಹವನ್ನು ಉಂಟುಮಾಡಲಿ ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅಪ್ನಃ—**ಆಪ್ಲೃ ವ್ಯಾಪ್ತೌ ಧಾತು. **ಆಪಃ ಕರ್ಮಾಖ್ಯಾಯಾಂ ಹ್ರಸ್ವೋ ನುಟ್ ಚವಾ** (ಉ. ಸೂ. ೪-೬೪೨) ಎಂಬುದರಿಂದ ಉಣಾದಿಯಲ್ಲಿ ಬಹುಲಗ್ರಹಣವಿರುವುದರಿಂದ ಅಕರ್ಮಾಖ್ಯದಲ್ಲಿ (ಕರ್ಮಾರ್ಥವಿಲ್ಲದಿದ್ದರೂ) ಅಸುನ್ ಪ್ರತ್ಯಯ ಬರುತ್ತದೆ. ತತ್ಸಂನಿಯೋಗದಿಂದ ಧಾತುವಿಗೆ ಹ್ರಸ್ವ. ನುಡಾಗಮ. ಅಪ್ನಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಹಂತಿ—**ವಹ ಪ್ರಾಪಣೇ ಧಾತು. ಲಟ್ ಪ್ರಥಮಪುರುಷ ಬಹುವಚನರೂಪ. ಯದ್ಯೋಗವಿರುವುದರಿಂದ **ನಿಪಾತೈರ್ಯದ್ಯದಿ—**(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅದುಪದೇಶ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನು—**(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಈಜಾನಾಯ—**ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಛಾಂದಸಿಕವಾದ ಲಿಟ್ ಬಂದಾಗ **ಲಿಟಃ ಕಾನಜ್ವಾ** ಎಂಬುದರಿಂದ ಅದಕ್ಕೆ ಕಾನಚ್ ಆದೇಶ. **ವಚಿಸ್ವಪಿಯಜಾ**-ಎಂಬುದರಿಂದ ಯಕಾರಕ್ಕೆ ಸಂಪ್ರಸಾರಣ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ವರ್ಜ ಲೋಪ ಸವರ್ಣದೀರ್ಘ. ಈಜಾನ ಎಂದು ರೂಪವಾಗುತ್ತದೆ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ಚತುರ್ಥೀ ಏಕವಚನಾಂತರೂಪ.

**ಶಶಮಾನಾಯ—**ಶಶ ಪ್ಲುತಗತೌ ಧಾತು. ಇದಕ್ಕೆ ತಾಚ್ಛೀಲ್ಯಾರ್ಥ ತೋರುವಾಗ **ತಾಚ್ಛೀಲ್ಯವಯೋವ—**ಎಂಬುದರಿಂದ ಚಾನಶ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ.

ಚಾನಶ್ ಲಸಾರ್ವಧಾತುಕವಾಗದಿದ್ದುದರಿಂದ ಅದುಪದೇಶ ನಿಬಂಧನವಾದ ಲಸಾರ್ವಧಾತುಕಾನುದಾತ್ತಸ್ವರವು ಬರುವುದಿಲ್ಲ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರವೇ ಬರುತ್ತದೆ. ಹಿಂದಿನಂತೆ ಚತುರ್ಥೀರೂಪ.

**ಭದ್ರಮ್**—ಭದಿ ಕಲ್ಯಾಣೇ ಸುಖೇಚ. ಧಾತು. ಇದಕ್ಕೆ ಔಣಾದಿಕ ರಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಉಳಿದ ಶಬ್ದಗಳು ಹಿಂದೆ ವ್ಯಾಖ್ಯಾತಗಳಾಗಿವೆ. ॥ ೨೦ ॥

ನೂರಹದಿಮೂರನೆಯ ಸೂಕ್ತ ಸಮಾಪ್ತವು.



# ನೂರಹದಿನಾಲ್ಕನೆಯ ಸೂಕ್ತವು

**ಇಮಾ ರುದ್ರಾಯೇತ್ಯೇಕಾದಶರ್ಚಂ ನವಮಂ ಸೂಕ್ತಂ ಕುತ್ಸಸ್ಯಾರ್ಷಂ । ದಶಮ್ಯೇಕಾದಶ್ಯೌ ತ್ರಿಷ್ಟುಭೌ । ಶಿಷ್ಟಾ ನವ ಜಗತ್ಯಃ । ರುದ್ರೋ ದೇವತಾ । ತಥಾ ಚಾನುಕ್ರಾಂತಂ । ಇಮಾ ಏಕಾದಶ ರೌದ್ರಂ ದ್ವಿತ್ರಿಷ್ಟುಬಂತಮಿತಿ ॥ ಶೂಲಗವಾದಿಷು ರುದ್ರದೇವತ್ಯೇಷು ಕರ್ಮಸ್ವನೇನ ಸೂಕ್ತೇನ ದಿಗುಪಸ್ಥೇಯಾ । ತಥಾ ಚ ಸೂತ್ರಿತಂ । ಕದ್ರುದ್ರಾಯೇಮಾ ರುದ್ರಾಯಾ ತೇ ಪಿತರಿಮಾ ರುದ್ರಾಯ ಸ್ಥಿರಧನ್ವನೇ ಗಿರ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ । ಆ. ಗೃ. ೪-೯-೨೧ । ಇತಿ ॥**

ಅನುವಾದವು—ಇಮಾ ರುದ್ರಾಯ ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು. ರುದ್ರನು ದೇವತೆಯು. ಈ ಸೂಕ್ತದ ಹತ್ತು ಮತ್ತು ಹನ್ನೊಂದನೆಯ ಋಕ್ಕುಗಳು ತ್ರಿಷ್ಟುಪ್ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—ಇಮಾ ಏಕಾದಶ ರೌದ್ರಂ ದ್ವಿತ್ರಿಷ್ಟುಬಂತಮಿತಿ ಎಂದು ಹೇಳಿರುವುದು. ಶೂಲಗವ ಮೊದಲಾದ ರುದ್ರದೇವತಾಸಂಬಂಧವಾದ ಕರ್ಮಗಳಲ್ಲಿ ಈ ಸೂಕ್ತದಿಂದ ದಿಕ್ಕುಗಳನ್ನು ಉಪಸ್ಥಾನಮಾಡಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—ಕದ್ರುದ್ರಾಯೇಮಾ ರುದ್ರಾಯಾ ತೇ ಪಿತರಿಮಾ ರುದ್ರಾಯ ಸ್ಥಿರಧನ್ವನೇ ಗಿರ ಇತಿ ಸರ್ವರುದ್ರಯಜ್ಞೇಷು ದಿಶಾಮುಪಸ್ಥಾನಂ, ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ಗೃ. ೪-೯-೨೧)

## ಸೂಕ್ತ—೧೧೪

॥ ಮಂಡಲ—೧ ॥ ಅನುವಾಕ—೧೬ ॥ ಸೂಕ್ತ—೧೧೪ ॥
॥ ಅಷ್ಟಕ—೧ ॥ ಅಧ್ಯಾಯ ೮ ॥ ವರ್ಗ—೫, ೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ—ಕುತ್ಸ ಆಂಗಿರಸಃ ॥
॥ ದೇವತಾ—ರುದ್ರಃ ॥
॥ ಛಂದಃ—೧-೯. ಜಗತೀ । ೧೦-೧೧ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಮಾ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರ
ಭರಾಮಹೇ ಮತೀಃ ।
ಯಥಾ ಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ
ಅಸ್ಮಿನ್ನನಾತುರಂ ॥ ೧ ॥

॥ ಪದಪಾಠಃ ॥

ಇಮಾಃ । ರುದ್ರಾಯ । ತವಸೇ । ಕಪರ್ದಿನೇ । ಕ್ಷಯತ್ಽವೀರಾಯ । ಪ್ರ ।
ಭರಾಮಹೇ । ಮತೀಃ ।
ಯಥಾ । ಶಂ । ಅಸತ್ । ದ್ವಿಽಪದೇ । ಚತುಃಽಪದೇ । ವಿಶ್ವಂ । ಪುಷ್ಟಂ ।
ಗ್ರಾಮೇ । ಅಸ್ಮಿನ್ । ಅನಾತುರಂ ॥ ೧ ॥

॥ ಸಾಯಣಭಾಷ್ಯಂ ॥

ರುದ್ರಾಯ । ರೋದಯತಿ ಸರ್ವಮಂತಕಾಲ ಇತಿ ರುದ್ರಃ । ಯದ್ವಾ ರುತ್ಸಂಸಾರಾಖ್ಯಂ ದುಃಖಂ । ತದ್ದ್ರಾವಯತ್ಯಪಗಮಯತಿ ವಿನಾಶಯತೀತಿ ರುದ್ರಃ । ಯದ್ವಾ । ರುತಃ ಶಬ್ದರೂಪಾ ಉಪನಿಷದಃ। ತಾಭಿರ್ದ್ರೂಯತೇ ಗಮ್ಯತೇ ಪ್ರತಿಪಾದ್ಯತ ಇತಿ ರುದ್ರಃ। ಯದ್ವಾ। ರುತ್ ಶಬ್ದಾತ್ಮಿಕಾ ವಾಣೀ ತತ್ಪ್ರತಿಪಾದ್ಯಾತ್ಮವಿದ್ಯಾ ವಾ। ತಾಮುಪಾಸಕೇಭ್ಯೋ ರಾತಿ ದದಾತೀತಿ ರುದ್ರಃ। ಯದ್ವಾ। ರುಣದ್ಧ್ಯಾವೃಣೋತೀತಿ ರುದಂಧಕಾರಾದಿ । ತದ್ದೃಣಾತಿ ವಿದಾರಯತೀತಿ ರುದ್ರಃ । ಯದ್ವಾ। ಕದಾಚಿದ್ದೇವಸುರಸಂಗ್ರಾಮೇಽಗ್ನ್ಯಾತ್ಮಕೋ ರುದ್ರೋ ದೇವೈರ್ನಿಕ್ಷಿಪ್ತಂ ಧನಮುಪಹೃತ್ಯ ನಿರಗಾತ್ । ಅಸುರಾಞ್ಜಿತ್ವಾ ದೇವಾ ಏನಮನ್ವಿಷ್ಯ ದೃಷ್ಟ್ವಾ ಧನಮಪಾಹರನ್। ತದಾನೀಮರುದತ್ । ತಸ್ಮಾದ್ರುದ್ರ ಇತ್ಯಾಖ್ಯಾಯತೇ। ತಥಾ ಚ ತೈತ್ತಿರೀಯಕಂ । ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ । ತೈ. ಸಂ. ೧-೫-೧-೧ । ಇತಿ । ತಸ್ಮೈ ರುದ್ರಾಯ ಮತೀರ್ಮನನೀಯಾ ಇಮಾ ಸ್ತುತೀಃ ಪ್ರ ಭರಾಮಹೇ । ಪ್ರಕರ್ಷೇಣ ನಿಷ್ಪಾದಯಾಮಃ । ಕೀದೃಶಾಯ । ತವಸೇ ಪ್ರವೃದ್ಧಾಯ ಕಪರ್ದಿನೇ ಜಟಿಲಾಯ ಕ್ಷಯದ್ವೀರಾಯ ಕ್ಷಯಂತೋ ವಿನಶ್ಯಂತೋ ವೀರಾ ಯಸ್ಮಿನ್ ತಾದೃಶಾಯ । ಯದ್ವಾ । ಕ್ಷಯತಿರೈಶ್ವರ್ಯಕರ್ಮಾ । ಕ್ಷಯಂತಃ ಪ್ರಾಪ್ತೈಶ್ವರ್ಯಾ ವೀರಾ ಮರುದ್ಗಣಾಃ ಪುತ್ರಾ ಯಸ್ಯ ತಸ್ಮೈ । ಯಥಾ ಯೇನ ಪ್ರಕಾರೇಣ ಶಂ ಶಮನೀಯಾನಾಂ ರೋಗಾಣಾಮುಪಶಮನಂ ದ್ವಿಪದೇಽಸ್ಮದೀಯಾಯ ಮನುಷ್ಯಾಯ ಚತುಷ್ಪದೇ ಗವಾಶ್ವಪ್ರಭೃತಯೇ ಚಾಸತ್। ಭವೇತ್ ತೇನ ಪ್ರಕಾರೇಣ ಸ್ತುತೀಃ ಕುರ್ಮ ಇತ್ಯರ್ಥಃ । ಅತೋಽಸ್ಮಿನ್ನಸ್ಮದೀಯೇ ಗ್ರಾಮೇ ವರ್ತಮಾನಂ ವಿಶ್ವಂ ಸರ್ವಂ ಪ್ರಾಣಿಜಾತಮನಾತುರಂ । ಆತುರಾ ರುಗ್ಣಾಃ । ತೈ ರಹಿತಂ ಸತ್ ಪುಷ್ಟಂ ಪ್ರವೃದ್ಧಂ ಭವತು ॥ ರುದ್ರಾಯ । ರೋದೇರ್ಣಿಲುಕ್ಚ । ಉ. ೨-೨೨ । ಇತಿ ರಕ್ ತವಸೇ । ತವತಿರ್ವೃದ್ಧ್ಯರ್ಥಃ । ಸೌತ್ರೋ ಧಾತುಃ । ಔಣಾದಿಕೋಽಸಿಪ್ರತ್ಯಯಃ । ಕ್ಷಯದ್ವೀರಾಯ । ಕ್ಷಿ ಕ್ಷಯೇ । ಲಟಃ ಶತೃ । ಛಂದಸ್ಯುಭಯಥೇತಿ ಶತುರಾರ್ಧಧಾತುಕತ್ವೇನಾದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವಾಭಾವಾತ್ತಸ್ಯೈವ ಸ್ವರಃ ಶಿಷ್ಯತೇ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಸತ್ ಅಸ ಭುವಿ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ದ್ವಿಪದೇ । ದ್ವೌ ಪಾದಾವಸ್ಯ । ಸಂಖ್ಯಾಸುಪೂರ್ವಸ್ಯೇತಿ ಪಾದಶಬ್ದಸ್ಯಾಂತ್ಯಲೋಪಃ ಸಮಾಸಾಂತಃ । ಚತುರ್ಥ್ಯೇಕವಚನೇ ಭಸಂಜ್ಞಾಯಾಂ ಪಾದಃ ಪದಿತಿ ಪದ್ಭಾವಃ। ಏಕದೇಶವಿಕೃತಸ್ಯಾನನ್ಯತ್ವಾತ್। ಪರಿ. ೩೭। ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು ಬಹುವ್ರೀಹಾವಿತ್ಯುತ್ತರಪದಾದ್ಯುದಾತ್ತತ್ವಂ । ಚತುಷ್ಪದೇ । ಸ್ವರವರ್ಜಂ ಪೂರ್ವವತ್। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪೂರ್ವಪದಂ ಚ ತ್ರೇಃ ಸಂಖ್ಯಾಯಾಃ । ಫಿ. ೨-೫ । ಇತ್ಯಾದ್ಯುದಾತ್ತಂ ॥

॥ ಪ್ರತಿಪದಾರ್ಥ ॥

**ತವಸೇ**—ಪ್ರವೃದ್ಧನಾದ (ಶಕ್ತಿವಂತನಾದ) ವನೂ । **ಕಪರ್ದಿನೇ**—(ಶಿರಸ್ಸಿನ)ಲ್ಲಿ ಜಟೆಯನ್ನು ಧರಿಸಿರುವವನೂ । **ಕ್ಷಯದ್ವೀರಾಯ**—(ಯುದ್ಧದಲ್ಲಿ) ಶತ್ರುವೀರರನ್ನು ನಾಶಮಾಡುವವನೂ ಅಥವಾ ಐಶ್ವರ್ಯಯುಕ್ತರೂ ವೀರರೂ ಆದ ಮರುದ್ದೇವತೆಗಳನ್ನೇ ಪುತ್ರರನ್ನಾಗಿ ಪಡೆದಿರುವವನೂ ಆದ । **ರುದ್ರಾಯ**—(ಪ್ರಲಯಕಾಲದಲ್ಲಿ)

ಸಮಸ್ತರನ್ನೂ ದುಃಖದಿಂದ) ಅಳುವಂತೆ ಮಾಡುವ ಅಥವಾ ಸಂಸಾರದುಃಖವನ್ನು ನಾಶಮಾಡುವ, ಅಥವಾ ಶಬ್ದಗಳ ರೂಪದಿಂದಿರುವ ಉಪನಿಷದಾದಿಗಳಿಂದ ಮಾತ್ರ ತಿಳಿಯಲ್ಪಡುವ ಎಂದರೆ ಉಪನಿಷತ್ಪ್ರತಿಪಾದ್ಯನಾದ, ಅಥವಾ ವಾಗಾತ್ಮಕವಾದ ಆತ್ಮವಿದ್ಯೆಯಿಂದ ತಿಳಿಯಲ್ಪಡುವ, ಅಥವಾ ತನ್ನನ್ನು ಉಪಾಸನೆಮಾಡುವ ಭಕ್ತರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುವ, ಅಥವಾ ಅಂಧಕಾರವನ್ನು ಪರಿಹರಿಸುವವನಾದ, ಅಥವಾ (ಒಂದಾನೊಂದು ಕಾಲದಲ್ಲಿ ದೇವಾಸುರರಿಗೆ ನಡೆದ ಯುದ್ಧದಲ್ಲಿ ಅಗ್ನ್ಯಾತ್ಮಕನಾದ ಈ ರುದ್ರನು ದೇವತೆಗಳು ಸಂಗ್ರಹಿಸಿ ಇಟ್ಟಿದ್ದ ಧನವನ್ನು ಅಪಹರಿಸಿ ತೆಗೆದುಕೊಂಡು ಹೋದನು. ದೇವತೆಗಳು ಅಸುರರನ್ನು ಜಯಿಸಿದ ಬಳಿಕ ಈ ರುದ್ರನನ್ನು ಹುಡುಕಿ ಅವನು ಅಪಹರಿಸಿದ್ದ ಧನವನ್ನು ಅವನಿಂದ ಕಿತ್ತುಕೊಂಡರು. ಆಗ ರುದ್ರನು ದುಃಖದಿಂದ ರೋದನಮಾಡಿದನು. ಈ ಕಾರಣದಿಂದ ರುದ್ರನೆಂದರೆ) ರೋದನಮಾಡಿದವನೂ ಆದ ರುದ್ರನೆಂಬ ದೇವತೆಗೆ । **ಇಮಾಃ ಮತೀಃ**— ನಮ್ಮ ಮನಃಪೂರ್ವಕವಾದ ಈ ಸ್ತೋತ್ರಗಳನ್ನು । **ಪ್ರ ಭರಾಮಹೇ**—(ಭಕ್ತಿಯಿಂದ) ಅರ್ಪಿಸುತ್ತೇವೆ । **ಯಥಾ**—(ಯಾವ ಪ್ರಕಾರದಿಂದ) ಈ ರೀತಿ ಸ್ತೋತ್ರವನ್ನು ಅರ್ಪಿಸುವುದರಿಂದ । **ದ್ವಿಪದೇ**—(ಎರಡು ಕಾಲುಗಳುಳ್ಳ) ಮನುಷ್ಯರಾದ ನಮಗೂ । **ಚತುಷ್ಪದೇ**—ನಾಲ್ಕು ಕಾಲುಗಳುಳ್ಳ ಗೋವುಗಳು, ಅಶ್ವಗಳೇ ಮೊದಲಾದ ಪ್ರಾಣಿಗಳಿಗೂ । **ಶಂ**—ರೋಗಾದ್ಯುಪದ್ರವರಹಿತವಾದ ಸುಖವು । **ಅಸತ್**—ಉಂಟಾಗುವುದೋ (ಮತ್ತೂ) । **ಅಸ್ಮಿನ್ ಗ್ರಾಮೇ**—(ನಾವು ವಾಸಮಾಡುತ್ತಿರುವ) ಈ ಗ್ರಾಮದಲ್ಲಿರುವ । **ವಿಶ್ವಂ**—(ಮನುಷ್ಯ-ರಾದಿಯಾದ) ಸಮಸ್ತ ಪ್ರಾಣಿವರ್ಗವು । **ಅನಾತುರಂ** – ರೋಗರಹಿತವಾಗಿಯೂ । **ಪುಷ್ಟಂ**—ಪುಷ್ಟಿಯುಕ್ತವಾಗಿಯೂ ಆಗುವುದೋ (ಅಂತಹ ರುದ್ರನಿಗೆ ನಾವು ಈ ಸ್ತೋತ್ರಗಳನ್ನು ಅರ್ಪಿಸೋಣ)

॥ ಭಾವಾರ್ಥ ॥

ಮಹಾಶಕ್ತಿಯುತನೂ, ಶಿರಸ್ಸಿನಲ್ಲಿ ಜಟೆಯನ್ನು ಧರಿಸಿರುವವನೂ, ಯುದ್ಧದಲ್ಲಿ ಶತ್ರುವೀರರನ್ನು ನಾಶ ಮಾಡುವವನೂ ಅಥವಾ ಐಶ್ವರ್ಯಯುಕ್ತರಾದ ಮರುದ್ದೇವತೆಗಳನ್ನು ಪುತ್ರರನ್ನಾಗಿ ಪಡೆದಿರುವವನೂ ಆದ ರುದ್ರನೆಂಬ ದೇವತೆಗೆ ನಾವು ಈ ಸ್ತೋತ್ರಗಳನ್ನು ಭಕ್ತಿಯಿಂದ ಸಮರ್ಪಿಸುತ್ತೇವೆ. ಈ ರೀತಿ ಸ್ತೋತ್ರಗಳನ್ನು ಅರ್ಪಿಸುವುದರಿಂದ ಮನುಷ್ಯರಿಗೂ, ಗೋವು ಮೊದಲಾದ ಪಶುಪ್ರಾಣಿಗಳಿಗೂ ರೋಗಾದ್ಯುಪದ್ರವಗಳಿಲ್ಲದಂತೆ ಸುಖವುಂಟಾಗುವುದು ಮತ್ತು ಈ ನಮ್ಮ ಗ್ರಾಮದಲ್ಲಿ ಮನುಷ್ಯರಾದಿಯಾದ ಸಮಸ್ತ ಪ್ರಾಣಿಗಳಿಗೂ ರೋಗರಹಿತವಾಗಿಯೂ ಪುಷ್ಟಿಯುಕ್ತವಾಗಿಯೂ ಆಗುವುದಕ್ಕಾಗಿ ನಾವು ಈ ಸ್ತೋತ್ರಗಳನ್ನು ಭಕ್ತಿಯಿಂದ ರುದ್ರನಿಗೆ ಸಮರ್ಪಿಸುವೆವು.

## English Translation.

We offer these praises to the mighty Rudra, with the braided hair, the destroyer of heroes, in order that health may be enjoyed by bipeds, and quadrupeds, and that all beings in this village may be (well) nourished and exempt from disease.

॥ ವಿಶೇಷವಿಷಯಗಳು ॥

**ರುದ್ರಾಯ**—ಸಾಯಣರು ರುದ್ರಶಬ್ದಕ್ಕೆ ಆರು ವಿಧವಾಗಿ ಅರ್ಥವನ್ನು ವಿವರಿಸಿರುವರು. ರುದ್ರಶಬ್ದವು ರುದ್ ಧಾತುವಿನಿಂದ ಣಿಜಂತದಲ್ಲಿ ನಿಷ್ಪನ್ನವಾಗಿರುವುದು. ಯಾಸ್ಕರು **ರುದ್ರೋ ರೌತೀತಿ ಸತಃ ರೋರೂಯಮಾಣೋ ದ್ರವತೀತಿ ವಾ ರೋದಯತೇರ್ವಾ ।** ರುದ್ರನೆಂದರೆ **ರೌತಿ–ಸ್ತನಯಿತ್ನು ಶಬ್ದಂ ಕರೋತಿ ಇತಿ ರುದ್ರಃ** ಮೇಘದ ಗುಡುಗಿನಹಾಗೆ ಧ್ವನಿಮಾಡುವವನು **ರೋರೂಯಮಾಣೋ ದ್ರವತಿ** ಶಬ್ದವನ್ನು ಮಾಡುತ್ತಾ ಮೇಘದ ಮಧ್ಯದಲ್ಲಿ ಓಡುವವನು. **ರೋದಯತೇರ್ವಾ** ಶತ್ರುಗಳು ಅಳುವಹಾಗೆ ಕಾರ್ಯಗಳನ್ನು ಮಾಡಿ ಅವರು ಅಳುವಂತೆ ಮಾಡುವವನು. ಎಂದು ಅರ್ಥವನ್ನು ವಿವರಿಸಿರುವರು. ಮತ್ತು **ಯದರುದತ್ ತದ್ರುದ್ರಸ್ಯ ರುದ್ರತ್ವಂ** ಇವನು ತನ್ನ ತಂದೆಯಾದ ಪ್ರಜಾಪತಿಗೆ ಬಾಣಗಳಿಂದ ಪೆಟ್ಟುಗಳು ಬಿದ್ದಾಗ ಅವನನ್ನು ನೋಡಿ ವ್ಯಸನಪಟ್ಟು ಅತ್ತನು ಎಂದು **ಕಠೋಪನಿಷತ್ತಿನಲ್ಲಿ** ಪ್ರಸಿದ್ಧವಾದ ಇತಿಹಾಸವನ್ನು ಅನುಸರಿಸಿಯೂ ಅಥವಾ **ಮೈತ್ರಾಯಣೀಯಶಾಖಾಭೇದ**ಗತವಾದ ಅಭಿಪ್ರಾಯವನ್ನು ಅನುಸರಿಸಿಯೂ **ಯದರೋದೀತ್ ತದ್ರುದ್ರಸ್ಯ ರುದ್ರತ್ವಮ್** ಇವನು (ಅತ್ತಕಾರಣ) ರೋದನಮಾಡಿದ ಕಾರಣ ರುದ್ರನಾಗಿರುವನು ಎಂದು (ನಿ. ೧೦. ೭) ರುದ್ರಶಬ್ದಾರ್ಥನಿರ್ವಚನವನ್ನು ಮಾಡಿರುವರು. ಸಾಯಣರು ರುದ್ರ ಶಬ್ದಕ್ಕೆ ಅರ್ಥವನ್ನು ಹೇಳಿರುವುದು ಇದಕ್ಕಿಂತಲೂ ಬೇರೆ ವಿಧವಾಗಿರುವುದು ಪ್ರಳಯಕಾಲದಲ್ಲಿ ಎಲ್ಲರೂ ಅಳುವಂತೆ ಮಾಡುವುದರಿಂದಲೂ ಅಥವಾ ಸಂಸಾರವೆಂಬ ದುಃಖವನ್ನು ನಾಶಮಾಡುವುದರಿಂದಲೂ, ಅಥವಾ ಶಬ್ದರೂಪವಾದ ಉಪನಿಷತ್ತುಗಳಿಂದ ಪ್ರತಿಪಾದ್ಯನಾಗಿರುವುದರಿಂದಲೂ ಅಥವಾ ಆತ್ಮವಿದ್ಯೆಯನ್ನು ಆತ್ಮವಿದ್ಯೋಪಾಸಕರಿಗೆ ಉಪದೇಶಮಾಡುವುದರಿಂದಲೂ, ಅಥವಾ ಪ್ರಕಾಶವನ್ನು ಆವರಿಸುವ ಕಗ್ಗತ್ತಲೆಯಂತೆ ಜ್ಞಾನವನ್ನು ಆವರಿಸುವ ಅಜ್ಞಾನವನ್ನು ನಾಶಮಾಡುವುದರಿಂದಲೂ, ರುದ್ರನಾಗಿರುವನು ಎಂದು ರುತ್ ಶಬ್ದದ ಅರ್ಥದಿಂದ ಉಂಟಾಗಿರುವ ಅರ್ಥಭೇದಪ್ರದರ್ಶನಪೂರ್ವಕವಾಗಿ ರುದ್ರಶಬ್ದದ ಅರ್ಥವನ್ನೂ ವಿವರಿಸಿರುವರು.

ಮತ್ತು ಐತಿಹಾಸಿಕ ಮತದಲ್ಲಿ ನಿರ್ದಿಷ್ಟವಾಗಿರುವ ಇತಿಹಾಸಕ್ಕನುಗುಣವಾಗಿ **ರುದಿರ್ ಅಶ್ರುವಿಮೋಚನೇ** ಎಂಬ ಧಾತುವಿನಿಂದ ಉಂಟಾದ ರುದ್ರಶಬ್ದದ ಅರ್ಥವನ್ನು **ಸೋ ರೋದಿದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ** (ತೈ. ಸಂ. ೧–೫–೧–೧) ಎಂಬ ಶ್ರುತಿವಚನೋಪನ್ಯಾಸಪೂರ್ವಕವಾಗಿ ವಿವರಿಸಿರುವರು. ಇದರಿಂದ ರುದ್ರನ ಮಹಿಮೆಯೂ, ರುದ್ರನಿಗೆ ಪ್ರಾಣಿಗಳ ವಿಷಯದಲ್ಲಿ ಇರುವ ಕಾರುಣ್ಯವೂ ವ್ಯಕ್ತವಾಗುತ್ತದೆ.

**ಮತೀಃ—ಮನನೀಯಾಃ । ಅರ್ಚತಿ, ಗಾಯತಿ** ಮೊದಲಾದ ನಲವತ್ತುನಾಲ್ಕು **ಅರ್ಚತಿ** ನಾಮಗಳಲ್ಲಿ **ಮನ್ಯತೆ** ಎಂಬ ಪದವು (ನಿ. ೩–೧೪) ಉಕ್ತವಾಗಿರುವುದರಿಂದ ಪೂಜಾರ್ಹವಾದ ಅಥವಾ ಸ್ತುತ್ಯವಾದ ಎಂದು ಅರ್ಥವು.

**ತವಸೇ—ಪ್ರವೃದ್ಧಾಯ—ಓಜಃ, ಪಾಜಃ** ಎಂಬ ಇಪ್ಪತ್ತೆಂಟು ಬಲನಾಮಗಳಲ್ಲಿ **ತವಸ್** ಎಂಬ ಪದವು ಪಠಿತವಾಗಿರುವುದರಿಂದ ಬಲವುಳ್ಳವನು ಎಂದು ಅರ್ಥ (ನಿ. ೩–೯).

**ಕ್ಷಯದ್ವೀರಾಯ—ಕ್ಷಯಂತೋ ವಿನಶ್ಯಂತೋ ವೀರಾ ಯಸ್ಮಿನ್ ಕಾಲೇ ... ತಾದೃಶಾಯ । ಯದ್ವಾ**

**ಕ್ಷಯಂತಃ ಪ್ರಾಪ್ತೈಶ್ವರ್ಯಾಃ ವೀರಾಃ ಮರುದ್ಗಣಾಃ ಯಸ್ಯ,** ವೀರರನ್ನು ನಾಶಪಡಿಸುವ ಅಥವಾ ಐಶ್ವರ್ಯ ವನ್ನು ಹೊಂದಿರುವ ಮರುದ್ಗಣವನ್ನು ಪುತ್ರರನ್ನಾಗಿ ಹೊಂದಿರುವವನು ಎಂದು ರುದ್ರನ ವಿಶೇಷಣವನ್ನಾಗಿ ಸಾಯಣರು ಈ ಪದದ ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳು ಸಾಯಣರು ವಿವರಿಸಿರುವಂತೆಯೇ ಈ ಪದಕ್ಕೆ ಅರ್ಥವನ್ನು ವಿವರಿಸುವಾಗ—

> **ಕ್ಷಯದ್ವೀರಾಯೇತಿ—ಕ್ಷಿ ನಿವಾಸಗತ್ಯೋಃ ಇತ್ಯಸ್ಯ ಕ್ಷಯತೇರ್ವಾ ಗತಿಕರ್ಮಣೋ ರೂಪಂ ಶುದ್ಧೋಽಪಿ ಚಾತ್ರ ಸಾಮರ್ಥ್ಯಾತ್ ಅಭಿಪೂರ್ವಾರ್ಥೇ ದ್ರಷ್ಟವ್ಯಂ। ವೀರಾಣಾಮಪಿ ಶತ್ರೂಣಾಮಭಿ ಗಂತಾ ಕ್ಷಯದ್ವೀರಃ ಆತ್ಮೀಯಾನಾಂ ವೀರಾಣಾಂ ಅಭಿಪ್ರೇತೇಷು ನಿವಾಸಯಿತಾ ಕ್ಷಯದ್ವೀರಃ ॥**

**ಕ್ಷಯದ್ವೀರ** ಶಬ್ದಗತವಾದ **ಕ್ಷಯತ್** ಎಂಬ ಶಬ್ದವು **ನಿವಾಸ, ಗತಿ** ಎಂಬ ಅರ್ಥವುಳ್ಳ **ಕ್ಷಿ** ಧಾತುವಿನಿಂದ ಉಂಟಾಗಿ ಅಭಿ ಎಂಬ ಉಪಸರ್ಗದ ಜೊತೆಯಲ್ಲಿರುವ ಅರ್ಥವನ್ನು (ಇದು ಕೇವಲವಾಗಿದ್ದರೂ) ಬೋಧಿಸುವುದರಿಂದ **ಕ್ಷಯದ್ವೀರಃ**—ವೀರರಾದ ಶತ್ರುಗಳಿಗೆ ಎದುರಾಗಿ ಹೋರಾಡುವವನು ಅಥವಾ ವೀರರಾದ ತನ್ನ ಆಶ್ರಿತರನ್ನು ಸರಿಯಾದ ಸ್ಥಾನಮಾನಗಳಲ್ಲಿ ಇರಿಸುವವನು ಎಂದು ಅರ್ಥವನ್ನು ವಿವರಿಸಿರುವರು.

**ಶಂ**—**ಶಿಂಬಾತಾ, ಶತರಾ** ಮೊದಲಾದ ಇಪ್ಪತ್ತು **ಸುಖ** ನಾಮಗಳಲ್ಲಿ (ನಿ ೩-೧೩) **ಶಂ** ಎಂಬ ಶಬ್ದವು ಉಕ್ತವಾಗಿರುವುದರಿಂದ ಸುಖವೆಂದು ಅರ್ಥವು. ಯಾಸ್ಕರು **ಶಂಯೋಃ** ಎಂಬ ಪದದ ಅರ್ಥವನ್ನು ನಿರ್ವಚನ ಮಾಡುವಾಗ **ಶಂ ಶಮನಂ ಚ ರೋಗಾಣಾಂ** ರೋಗಗಳ ಉಪಶಾಂತಿಯು, ಸುಖವಾಗಿ ಇರುವುದು ಎಂದು ಅರ್ಥವನ್ನು ವಿವರಿಸಿ ಈ ಪದಕ್ಕೆ ಸುಖವೆಂದು ಅರ್ಥವನ್ನು ಬೋಧಿಸುವ—

> **ಅನ್ನಿವದನುಮತೇ ತ್ವಂ ಮನ್ಯಾಸೈ ಶಂ ಚ ನಸ್ಕೃಧಿ।**
> **ಕ್ರತ್ವೇ ದಕ್ಷಾಯ ನೋ ಹಿ ನು ಪ್ರ ಣ ಆಯೂಂಷಿ ತಾರಿಷಃ ॥**
>
> (ವಾ. ಸಂ. ೩೪-೮).

ಎಂಬ ಮಂತ್ರವನ್ನು ಉದಾಹರಿಸಿರುವರು.

**ದ್ವಿಪದೇ—ದ್ವೌ ಪಾದಾವಸ್ಯ** ಎರಡು ಪಾದಗಳುಳ್ಳವರು ಎಂದು ಅರ್ಥ.

**ಯಥಾ ಶಂ ಅಸತ್—ಅಸತ್** ಎಂಬ ಶಬ್ದವು **ಅಸ ಭುವಿ** ಎಂಬ ಧಾತುವಿನಿಂದ ಉಂಟಾಗಿರುವುದು. ಇದಕ್ಕೆ **ಭವೇತ್**—ಆಗುವುದು ಎಂದು ಸಾಯಣರೂ **ಭವತಿ**—ಆಗುತ್ತದೆ ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುವರು. ದ್ವಿಪಾದಗಳುಳ್ಳ ಮನುಷ್ಯರೂ ಮತ್ತು ಚತುಷ್ಪಾದಗಳುಳ್ಳ ಪಶುಗಳೂ, ಇವರುಗಳಿಂದ ಕೂಡಿರುವ ನಮ್ಮ ವಸತಿಯಲ್ಲಿ ಎಲ್ಲರೂ ರೋಗವಿಲ್ಲದವರಾಗಿ ಸುಖದಿಂದ ಇರುವಂತೆ ರುದ್ರನು ಅನುಗ್ರಹವನ್ನು ಮಾಡುವ ಹಾಗೆ ನಾವು ರುದ್ರನನ್ನು ಸ್ತುತಿಸುತ್ತೇವೆ ಎಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ರುದ್ರಾಯ**--ರುದಿರ್ ಅಶ್ರುವಿಮೋಚನೇ ಧಾತು. ಇದಕ್ಕೆ **ರೋದೇರ್ಣಿಲುಕ್** ಚ (ಉ. ಸೂ. ೨-೧೭೯) ಎಂಬುದರಿಂದ ರಕ್‌ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ತವಸೇ**—ತವ ಧಾತುವು ವೃದ್ಧ್ಯರ್ಥದಲ್ಲಿ ಸೂತ್ರನಿರ್ದಿಷ್ಟವಾದ ಧಾತು ಇದಕ್ಕೆ ಔಣಾದಿಕವಾದ ಅಸಿ ಪ್ರತ್ಯಯ. ಪ್ರತ್ಯಯಸ್ವರದಿಂದ ಅಕಾರ ಉದಾತ್ತವಾಗುತ್ತದೆ. ಚತುರ್ಥೀರೂಪ.

**ಕ್ಷಯದ್ವೀರಾಯ**—ಕ್ಷಿ ಕ್ಷಯೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಅಯಾದೇಶ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಶತೃವಿಗೆ ಆರ್ಧಧಾತುಕ ಸಂಜ್ಞೆ ಬರುವುದರಿಂದ ಅದುಪದೇಶನಿಬಂಧನವಾದ ಲಸಾರ್ವಧಾತುಕಾನುದಾತ್ತತ್ವವು ಬಾರದಿರುವುದ ರಿಂದ ಅದರ ಉದಾತ್ತಸ್ವರ ಬರುತ್ತದೆ. ಕ್ಷಯತಃ ವೀರಾಃ ಯಸ್ಮಿನ್ ಕ್ಷಯದ್ವೀರಃ ತಸ್ಮೈ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನರೂಪ.

**ಭರಾಮಹೇ**—ಭೃಞ್ ಭರಣೇ. ಧಾತು. ಲಟ್ ಉತ್ತಮಪುರುಷ ಬಹುವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಯಥಾ**—**ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಸತ್**—ಅಸ ಭುವಿ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ-ಲೋಪಃ ಪ**—(ಪಾ. ಸೂ. ೩-೪-೯೭) ಎಂಬುದರಿಂದ ಅಡಾಗಮ. ಯಥಾ ಎಂದು ಹಿಂದೆ ಇರುವುದರಿಂದ ನಿಘಾತಸ್ವರಕ್ಕೆ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಷೇಧ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ದ್ವಿಪದೇ**—ದ್ವೌ ಪಾದಾವಸ್ಯ ದ್ವಿಪಾತ್. **ಸಂಖ್ಯಾಸುಪೂರ್ವಸ್ಯ** (ಪಾ. ಸೂ ೫-೪-೧೪೦) ಎಂಬುದ ರಿಂದ ಪಾದಶಬ್ದದ ಅಂತ್ಯಲೋಪವು ಸಮಾಸಾಂತವಾಗಿ ಬರುತ್ತದೆ. ಚತುರ್ಥೀ ಏಕವಚನ ಪರವಾದಾಗ **ಪಾದಃ ಪತ್** (ಪಾ. ಸೂ. ೬-೪-೧೩೦) ಎಂಬುದರಿಂದ ಪಾದಶಬ್ದಕ್ಕೆ ಭಸಂಜ್ಞಾ ಇರುವುದರಿಂದ ಪದಾದೇಶ. **ಏಕದೇಶವಿಕೃತಮನನ್ಯವತ್** (ಪರಿಭಾ. ೩೭) ಏಕದೇಶದಲ್ಲಿ ವಿಕಾರವನ್ನು ಹೊಂದಿರುವುದು ಬೇರೆಯಾಗುವುದಿಲ್ಲ ಎಂಬ ವಚನವನ್ನು ಅನುಸರಿಸಿ ಪಾತ್ ಶಬ್ದಕ್ಕೆ ಹೇಳಿರುವ **ದ್ವಿತ್ರಿಭ್ಯಾಂ ಪಾದ್ದನ್ ಮೂರ್ಧಸು ಬಹುವ್ರೀಹೌ** (ಪಾ. ಸೂ. ೬-೨-೧೯೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರವು ಇಲ್ಲಿಯೂ ಬರುತ್ತದೆ.

**ಚತುಷ್ಪದೇ**—ಚತ್ವಾರಃ ಪಾದಾಃ ಅಸ್ಯ. ಚತುಷ್ಪಾತ್. ಹಿಂದಿನಂತೆ ಸಂಖ್ಯಾಪೂರ್ವಪದವಾಗಿರುವುದರಿಂದ ಸಮಾಸ ಅಂತ್ಯಲೋಪ. ಚತುರ್ಥಿ ಏಕವಚನದಲ್ಲಿ ಪದಾದೇಶ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್**

(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ ಶಬ್ದವು ರೇಫಾಂತವಾದುದರಿಂದ **ನ್ರಃ ಸಂಖ್ಯಾಯಾಃ** (ಫಿ. ಸೂ. ೨೮) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಪುಷ್ಟಮ್**—ಪುಷ ಪುಷ್ಟೌ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅನಾತುರಮ್**—ನ ವಿದ್ಯತೇ ಆತುರಃ ಯಸ್ಯ. ಅನಾತುರಃ **ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ

**ಅಸ್ಮಿನ್—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಮೃಳಾ ನೋ ರುದ್ರೋತ ನೋ ಮಯಸ್ಕೃಧಿ ಕ್ಷಯದ್ವೀರಾಯ
ನಮಸಾ ವಿಧೇಮ ತೇ ।
ಯಚ್ಛಂ ಚ ಯೋಶ್ಚ ಮನುರಾಯೇಜೇ ಪಿತಾ ತದಶ್ಯಾಮ ತವ
ರುದ್ರ ಪ್ರಣೀತಿಷು ॥ ೨ ॥

॥ ಪದಪಾಠಃ ॥

**ಮೃಳ । ನಃ । ರುದ್ರ । ಉತ । ನಃ । ಮಯಃ । ಕೃಧಿ । ಕ್ಷಯತ್ಽವೀರಾಯ ।**
**ನಮಸಾ । ವಿಧೇಮ । ತೇ ॥**
**ಯತ್ । ಶಂ । ಚ । ಯೋಃ । ಚ । ಮನುಃ । ಆಽಯೇಜೇ । ಪಿತಾ । ತತ್ ।**
**ಅಶ್ಯಾಮ । ತವ । ರುದ್ರ । ಪ್ರಽನೀತಿಷು ॥ ೨ ॥**

॥ ಸಾಯಣಭಾಷ್ಯಂ ॥

ರುದ್ರದೇವತ್ಯೇ ಪಶೌ ವಪಾಪುರೋಡಾಶಯೋರ್ಮೃಳಾ ನೋ ರುದ್ರೇತ್ಯಾದಿಕೇ ದ್ವೇ ಅನುವಾಕ್ಯೇ । ತಥಾ ಚ ಸೂತ್ರಿತಂ । ಮೃಳಾ ನೋ ರುದ್ರೋತ ನೋ ಮಯಸ್ಕೃಧೀತಿ ದ್ವೇ ಆ ತೇ ಪಿತರ್ಮರುತಾಂ ಸುಮ್ನಮೇತು । ಆ. ೩-೮ । ಇತಿ ॥

ಹೇ ರುದ್ರ ನೋಽಸ್ಮಭ್ಯಮಸ್ಮದರ್ಥಂ ಮೃಳ । ತ್ವಂ ಸುಖಯಿತಾ ಭವ । ಉತಾಪಿ ಚ ತದನಂತರಂ ನೋಽಸ್ಮಾಕಂ ಮಯಃ ಸುಖಂ ಕೃಧಿ । ಕುರು । ವಯಂ ಚ ಕ್ಷಯದ್ವೀರಾಯ ಕ್ಷಪಿತ-ಸರ್ವವೀರಂ ಪ್ರಾಪ್ತೈಶ್ವರ್ಯೈರ್ಮರುದ್ಭಿರ್ಯುಕ್ತಂ ವಾ ತೇ ತ್ವಾಂ ನಮಸಾ ಹವಿರ್ಲಕ್ಷಣೇನಾನ್ನೇನ ನಮಸ್ಕಾರೇಣ ವಾ ವಿಧೇಮ । ಪರಿಚರೇಮ । ವಿಧತಿಃ ಪರಿಚರಣಕರ್ಮಾ । ಅಪಿ ಚ । ಪಿತೋತ್ಪಾದಕೋ ಮನುಃ ಸ್ವಕೀಯಾಭ್ಯಃ ಪ್ರಜಾಭ್ಯಃ ಶಂ ರೋಗಾಣಾಂ ಶಮನಂ ಯೋಶ್ಚ ಭಯಾನಾಂ ಯಾವನಂ ಚ ಯದೇತದ್ದ್ವಯಮಾಯೇಜೆ ದೇವೇಭ್ಯಃ ಸಕಾಶಾತ್ಪ್ರಾಪ್ಯ ದತ್ತವಾನ್ ಹೇ ರುದ್ರ ತವ ಪ್ರಣೀತಿಷು ಪ್ರಕೃಷ್ಟನಯನೇಷು ಸತ್ಸು ತದ್ವಯಮಶ್ಯಾಮ । ವ್ಯಾಪ್ನುಯಾಮ ॥ ಮೃಳ । ಮೃಡ ಸುಖನೇ । ತೌದಾದಿಕಃ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಕೃಧಿ । ಕರೋತೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿಃ । ಅತಃ ಕೃಕಮೀತಿ ಮಯಸೋ ವಿಸರ್ಜನೀಯಸ್ಯ ಸತ್ವಂ । ಕ್ಷಯದ್ವೀರಾಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ವಿಧೇಮ । ವಿಧ ವಿಧಾನೇ । ತೌದಾದಿಕಃ । ಆಯೇಜೇ । ಯಜ ದೇವ-ಪೂಜಾಸಂಗತಿಕರಣದಾನೇಷು । ಲಿಟಿ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾತ್ಸಂಪ್ರಸಾರಣಾಭಾವ ಏತ್ವಾಭ್ಯಾಸಲೋಪೌ । ಅಶ್ಯಾಮ । ಅಶೂ ವ್ಯಾಪ್ತೌ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ಹೇ ರುದ್ರ**—ಎಲೈ ರುದ್ರನೇ । **ನಃ**—ನಮಗೆ । **ಮೃಳ**—ಸುಖವನ್ನುಂಟುಮಾಡು । **ಉತ**—ಮತ್ತೂ । **ನಃ**—ನಮಗೆ । **ಮಯಃ ಕೃಧಿ**—ಸುಖವನ್ನುಂಟುಮಾಡು । (**ವಯಂ ಚ**—ನಾವೂ ಕೂಡ) । **ಕ್ಷಯದ್ವೀರಾಯ**—ನಾಶಮಾಡಲ್ಪಟ್ಟ ವೀರರುಳ್ಳ । **ತೇ**—ನಿನಗೆ (ಅಥವಾ ನಿನ್ನನ್ನು) । **ನಮಸಾ**—ಹವಿರಾದಿಗಳಿಂದ ಅಥವಾ ನಮಸ್ಕಾರಗಳಿಂದ (ಸ್ತೋತ್ರಾದಿಗಳಿಂದ) । **ವಿಧೇಮ**—ಸೇವೆಮಾಡೋಣ (ಮತ್ತು) । ಹೇ **ರುದ್ರ**—ಎಲೈ ರುದ್ರನೇ । **ಪಿತಾ**—(ನಮ್ಮ) ಉತ್ಪಾದಕನಾದ । **ಮನುಃ**—ಮನುವು (ತನ್ನವರಾದ ಮನುಷ್ಯರಿಗೆ) । **ಶಂ**—ರೋಗಾದ್ಯುಪಶಮನವು । **ಯೋಶ್ಚ**—ಭಯರಾಹಿತ್ಯವು ಎಂಬ । **ಯತ್**—ಯಾವ (ಎರಡನ್ನೂ) । **ಆ ಯೇಜೇ**—ದೇವತೆಗಳಿಂದ ಪಡೆದು ಕೊಟ್ಟನೋ । **ತತ್**—ಅವುಗಳನ್ನು । **ತವ**—ನಿನ್ನಲ್ಲಿ । **ಪ್ರಣೀತಿಷು**—(ನಾವು) ನೆಟ್ಟ ದೃಷ್ಟಿಯುಳ್ಳವರಾಗಲು । **ಅಶ್ಯಾಮ**—(ನಿನ್ನಿಂದ) ಪಡೆಯೋಣ.

॥ ಭಾವಾರ್ಥ ॥

ಎಲೈ ರುದ್ರನೇ, ನಮ್ಮಲ್ಲಿ ಪ್ರಸನ್ನನಾಗು; ನಮಗೆ ಸುಖವನ್ನುಂಟುಮಾಡು; ನಾವೂ ಕೂಡ ಹವಿರಾದಿಗಳಿಂದ ಮತ್ತು ನಮಸ್ಕಾರಗಳಿಂದ ನಿನ್ನನ್ನು ಸೇವಿಸುತ್ತೇವೆ; ನಮಗೆಲ್ಲರಿಗೂ ಮೂಲಪುರುಷನಾದ ಮನುವು ಯಾವ ರೋಗಾದ್ಯುಪಶಮನ ಮತ್ತು ಭಯರಾಹಿತ್ಯಗಳನ್ನು, ದೇವತೆಗಳಿಂದ ಪಡೆದು ನಮಗೆ ಕೊಟ್ಟಿದ್ದನೋ, ಅವೆರಡನ್ನೂ ನಿನ್ನನ್ನೇ ನಂಬಿರುವ ನಮಗೆ ಅನುಗ್ರಹಿಸು.

English Translation

Be gracious to us, Rudra; grant us happiness, for we worship the destroyer of heroes with oblations; and by your directions, Rudra, may we obtain that freedom from disease and exemption from dangers which our progenitor, Manu, bestowed upon us, (having obtained them from the gods.)

॥ ವಿಶೇಷವಿಷಯಗಳು ॥

ರುದ್ರದೇವತಾಸಂಬಂಧವಾದ ಪಶುಪುರೋಡಾಶಹೋಮಗಳಲ್ಲಿ **ಮೃಳಾ ನೋ ರುದ್ರ** ಎಂದು ಮೊದಲಾದ ಎರಡು ಋಕ್ಕುಗಳನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಮೃಳಾನೋ ರುದ್ರೋತ ನೋ ಮಯಸ್ಕೃಧೀತಿ ದ್ವೇ ಆ ತೇ ಪಿತರ್ಮರುತಾಂ ಸುಮ್ನಮೇತು** ಎಂಬ ಸೂತ್ರವು ನಿರ್ದೇಶಿಸುವುದು (ಆ. ೩–೮).

**ಮಯಃ—ಸುಖಂ ।** ಸುಖವು ಎಂದು ಅರ್ಥ. **ಮಯಃ** ಎಂಬ ಶಬ್ದವು ಇಪ್ಪತ್ತು ಸುಖನಾಮಗಳಲ್ಲಿ (ನಿ. ೩–೧೩) ಉಕ್ತವಾಗಿರುವುದು.

**ಕ್ಷಯದ್ವೀರಾಯ—ಕ್ಷಪಿತಸರ್ವವೀರಂ ಪ್ರಾಪ್ತೈಶ್ವರ್ಯೈಃ ಮರುದ್ಭಿರ್ಯುಕ್ತಂ ವಾ ।** ಈ ಪದದ ಅರ್ಥವು ಹಿಂದಿನ ಋಕ್ಕಿನಲ್ಲಿಯೇ ವಿವೃತವಾಗಿರುವುದು. ನಿರುಕ್ತಕಾರರು ವೀರರನ್ನು ನಾಶಮಾಡುವ ಬಲವುಳ್ಳ ಎಂದು ಅರ್ಥವನ್ನು ಬೋಧಿಸುವ–

**ಇಮಾ ರುದ್ರಾಯ ಸ್ಥಿರಧನ್ವನೇ ಗಿರಃ ಕ್ಷಿಪ್ರೇಷವೇ ದೇವಾಯ ಸ್ವಧಾವ್ನೇ ।**
**ಅಷಾಳ್ಹಾಯ ಸಹಮಾನಾಯ ವೇಧಸೇ ತಿಗ್ಮಾಯುಧಾಯ ಭರತಾ ಶೃಣೋತು ನಃ ॥**

(ನಿ. ೧೦–೭) ಮತ್ತು (ಋ. ಸಂ. ೭–೪೬–೧).

ಈ ಋಕ್ಕನ್ನು ಉದಹರಿಸಿ—

**ದೃಢಧನ್ವನೇ**—ದೃಢವಾದ ಧನುಸ್ಸುಳ್ಳವನಾದ । **ಕ್ಷಿಪ್ರೇಷವೇ**—ಶೀಘ್ರವಾಗಿ ಬಾಣಗಳನ್ನು ಬಿಡುವವನಾದ । **ದೇವಾಯ**—ದಾನಾದಿ ಗುಣಗಳಿಂದ ಕೂಡಿದವನಾದ । **ಸ್ವಧಾವ್ನೇ—**ಅನ್ನವುಳ್ಳವನಾದ । **ಅಷಾಢಾಯ**—

ಇತರರಿಂದ ತಿರಸ್ಕಾರವನ್ನು ಹೊಂದದಿರುವ। **ಸಹಮಾನಾಯ**—ಶತ್ರುಗಳನ್ನು ಯಾವಾಗಲೂ ತಿರಸ್ಕರಿಸುವವನಾದ। **ತಿಗ್ಮಾಯುಧಾಯ**—ತೀಕ್ಷ್ಣವಾದ ಆಯುಧವುಳ್ಳವನಾದ। **ರುದ್ರಾಯ**—ರುದ್ರನಿಗಾಗಿ। **ಇಮಾ ಗಿರಃ**—ಈ ಸ್ತೋತ್ರಗಳನ್ನು ಹೇಳುತ್ತೇನೆ ಎಂದು ಅರ್ಥವನ್ನು ವಿವರಿಸಿರುವರು. ಮರುತ್ತುಗಳು ರುದ್ರಪುತ್ರರೆಂಬ ವಿಷಯದಲ್ಲಿ—

> **ಪ್ರ ಯೇ ಶುಂಭಂತೇ ಜನಯೋ ನ ಸಪ್ತಯೋ ಯಾಮನ್ರುದ್ರಸ್ಯ ಸೂನವಃ ಸುದಂಸಸಃ।**
> **ರೋದಸೀ ಹಿ ಮರುತಶ್ಚಕ್ರಿರೇ ವೃಧೇ ಮದಂತಿ ವೀರಾ ವಿದಥೇಷು ಘೃಷ್ವಯಃ॥**
> (ಋ. ಸಂ. ೧-೮೫-೧).

ಎಂಬ ಈ ಋಕ್ಕಿನಲ್ಲಿ ಹೇಳಿರುವಂತೆ ಮರುತ್ತುಗಳು ರುದ್ರಪುತ್ರರೆಂದೂ ಈ ಮರುತ್ತುಗಳ ವೈಶಿಷ್ಟ್ಯವೂ ಅತಿಶಯವಾಗಿರುವುದೆಂದೂ ವರ್ಣಿಸಿದೆ

**ಮೃಳ**—**ತ್ವಂ ಸುಖಯಿತಾ ಭವ**। ನೀನು ಸುಖವನ್ನು ಉಂಟುಮಾಡು. **ಮೃಳ ಸುಖನೇ** ಎಂಬ ಧಾತುವಿನಿಂದ ಸುಖವನ್ನು ಉಂಟುಮಾಡು ಎಂಬ ಅರ್ಥದಲ್ಲಿ ಇರುವ **ಮೃಳ** ಶಬ್ದದಿಂದ ರುದ್ರನನ್ನು ಸಂಬೋಧಿಸಿ **ಮಯಸ್ಕೃಧಿ**—**ಸುಖಂ ಕುರು** ಸುಖವನ್ನು ಕೊಡು ಎಂದು ಕೇಳುವುದು ಇಲ್ಲಿ ವರ್ಣಿತವಾಗಿದೆ. ಇದರಿಂದ ದುಷ್ಟನಿಗ್ರಹವೂ, ಆಶ್ರಿತರಕ್ಷಣೆಯೂ ರುದ್ರನಿಂದ ಆಗುವುದೆಂದು ರುದ್ರನ ಮಹತ್ತ್ವವು ಅತಿಶಯವಾಗಿರುವುದೆಂದು ವ್ಯಕ್ತವಾಗುವುದು.

**ಮನುರಾ ಯಜೇ ಪಿತಾ**—**ಪಿತಾ ಮನುಃ**—ತಂದೆಯಾದ ಮನುವು, **ಶಂ ಚ ರೋಗಾಣಾಂ ಶಮನಂ,** ರೋಗಗಳ ಉಪಶಾಂತಿರೂಪವಾದ ಸುಖವನ್ನೂ, **ಯೋಶ್ಚ ಭಯಾನಾಂ ಯಾವನಂ ಚ,** ಭಯವು ಉಂಟಾಗದಂತೆ ಇರುವಿಕೆಯನ್ನೂ ದೇವತೆಗಳಿಂದ ಹೊಂದಿ ನಿನ್ನನ್ನು ಯಾಗಗಳಿಂದ ಪೂಜಿಸಿರುವನು ಎಂದ ಸಾಯಣರು ವಿವರಿಸಿರುವರು. **ಸ್ಕಂದಸ್ವಾಮಿಗಳು** ಇದೇ ರೀತಿಯಾದ ಅರ್ಥವು ಬರುವಂತೆ ಅನ್ವಯವನ್ನು ಹೇಳಿ **ಶಂ** ಎಂಬ ಪದಕ್ಕೆ ಹಿಂದಿನಿಂದಲೂ ಉಂಟಾಗಿ ಬಂದಿರುವ ರೋಗಗಳ ಉಪಶಾಂತಿಯೆಂದೂ, **ಯೋಶ್ಚ** ಎಂಬುವುದಕ್ಕೆ ಮುಂದೆ ಉಂಟಾಗಬಹುದಾದ ಅನಿಷ್ಟಗಳ ದೆಸೆಯಿಂದ ಬೇರೆಯಾಗಿರುವಿಕೆಯನ್ನೂ ಎಂದು ಅರ್ಥವನ್ನು ವಿವರಿಸಿ, ಮನುವು ತನ್ನ ಪ್ರಜೆಗಳಿಗಾಗಿ ಇವೆರಡನ್ನು ರುದ್ರನನ್ನು ಯಾಗದಿಂದ ಪೂಜಿಸಿ ಹೊಂದಿರುವನೆಂದು ವಿವರಿಸಿರುವರು.

**ಮನುಃ**—ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರಕುವುದಿಲ್ಲ. ಮನುವು ಮಾನವ ಕುಲಕ್ಕೆ ಮೂಲಪುರುಷನೆಂದೂ ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದೂ ತಿಳಿಯಬಹುದು. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿಕೊಡುವಾಗ ಇವನ ಕಿರಿಯಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದರಿಂದ ಅವನಿಗೆ ಯಾವ ದಯಾಭಾಗವೂ ದೊರಕಲಿಲ್ಲವೆಂದೂ ಅವನು ವಿದ್ಯಾಭ್ಯಾಸ ಮುಗಿಸಿಕೊಂಡು ಬಂದು ತಂದೆಯನ್ನು ತನ್ನ ದಾಯಭಾಗಕ್ಕಾಗಿ ಪ್ರಶ್ನೆಮಾಡಲು ಇವನನ್ನು—ಅಂಗಿರಾಋಷಿಗಳು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ಅವರು ನಿನಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದು

ಹೇಳಿಕಳುಹಿಸಿದನು. ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ ವಿವರಿಸಿರುವುದು ಮುಖ್ಯವಾಗಿ ಈ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮನುವಿನ ವಿಷಯವು ಋಗ್ವೇದದಲ್ಲಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (೧-೫-೧-೩; ೭-೫-೧೫-೩ ; ೨-೫-೯-೧ ; ೨-೬-೭-೧ ; ೩-೩-೨-೧ ; ೫-೪-೧೦-೫; ೬-೬-೬-೧; ಕಾಠಕಸಂಹಿತಾ (೮-೧೫) ಶತಪಥಬ್ರಾಹ್ಮಣ (೧-೧-೪-೧೪) ಜೈಮಿನೀಯ ಉಪನಿಷದ್ಬ್ರಾಹ್ಮಣ (೩-೧೫-೨) ಮೊದಲಾದ ಸ್ಥಳಗಳಲ್ಲಿ ಉಕ್ತವಾಗಿರುವುದು.

ಮನುವಿಗೆ ವಿವಸ್ವಾನ್ (ಋ. ಸಂ. ೮-೫೨-೧) ಎಂದೂ ವಿವಸ್ವಂತನ (ಒಬ್ಬ ದೇವತೆ) ಮಗನಾದುದರಿಂದ ವೈವಸ್ವತನೆಂದೂ (ಅಥ. ೮-೧೦-೨೪; ಶತ ಬ್ರಾ. ೧೩-೪-೩-೩) ಸವರ್ಣಾ ಎಂಬ ಎಂಬುವಳ ವಂಶಸ್ಥನಾದುದರಿಂದ ಸಾವರ್ಣಿ ಎಂದೂ, ಸಂವರಣನ ವಂಶಸ್ಥನಾದುದರಿಂದ ಸಾಂವರಣಿ (ಋ. ಸಂ ೮-೫೧-೧) ಎಂದೂ ಅನೇಕ ಹೆಸರುಗಳಿವೆ.

॥ ವ್ಯಾಕರಣಪ್ರಕ್ರಿಯಾ ॥

**ಮೃಳ**—ಮೃಡ ಸುಖನೇ ಧಾತು ತುದಾದಿ. ಲೋಟ್ ಮಧ್ಯಮಪುರುಷದಲ್ಲಿ ಸಿಪ್ಪಿಗೆ ಹಿ ಆದೇಶ. ಶ ವಿಕರಣ. **ಅತೋ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲೋಪ. ಶ ವಿಕರಣಕ್ಕೆ ಙಿದ್ವದ್ಭಾವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. **ದ್ವ್ಯಚೋಽತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಧಾತುವು ದ್ವ್ಯಚ್ಕವಾಗಿರುವುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಕೃಧಿ**—ಡುಕೃಞ್ ಕರಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಶ್ರುಶೃಣುಪೃಕೃವೃಭ್ಯಶ್ಛಂದಸಿ** (ಪಾ. ಸೂ. ೬-೪-೧೦೨) ಎಂಬುದರಿಂದ ಇಕ್ಕಿಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಮಯಃ ಕೃಧಿ ಎಂದಿರುವಾಗ **ಅತಃ ಕೃಕಮಿ**—(ಪಾ. ಸೂ. ೮-೩-೪೬) ಎಂಬುದರಿಂದ ಮಯಸಿನ ವಿಸರ್ಗಕ್ಕೆ ಸತ್ವ ಬರುತ್ತದೆ.

**ಕ್ಷಯದ್ವೀರಾಯ**—ಇದರ ಪ್ರಕ್ರಿಯೆಯು ಹಿಂದಿನ ಮಂತ್ರದಲ್ಲಿ ವಿವೃತವಾಗಿದೆ. **ಕ್ರಿಯಾಗ್ರಹಣಂ ಕರ್ತವ್ಯಂ** (ಪಾ. ಸೂ. ೧-೪-೩೨-೧) ಎಂಬುದರಿಂದ ಕರ್ಮಕ್ಕೆ ಸಂಪ್ರದಾನಸಂಜ್ಞೆ ಬರುವುದರಿಂದ ಚತುರ್ಥೀ ಬರುತ್ತದೆ.

**ವಿಧೇಮ**—ವಿಧ ವಿಧಾನೇ ಧಾತು. ತುದಾದಿ. ವಿಧಿಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಸೂತ್ರದಿಂದ ಶ ವಿಕರಣ. ಲಿಙಿಗೆ ಯಾಸುಟಾಗಮ ಬಂದಾಗ **ಅತೋ ಯೇಯಃ** (ಪಾ. ಸೂ. ೭-೨-೮೦) ಎಂಬುದರಿಂದ ಅದಕ್ಕೆ ಇಯಾದೇಶ. ಗುಣ. ಯಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆಯೇಜೇ**—ಯಜ ದೇವಪೂಜಾಸಂಗತಿಕರಣ ದಾನೇಷು. ಧಾತು. **ಲಿಟ್** ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ ಬಂದಾಗ ಅದಕ್ಕೆ **ಲಿಟಸ್ತಝಯೋರೇಶಿರೇಚ್** (ಪಾ. ಸೂ. ೩-೪-೮೧) ಎಂಬುದರಿಂದ ಇರೇಚ್ ಆದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ಪರಿಭಾಷೆಯಿಂದ ಇಲ್ಲಿ ಸಂಪ್ರಸಾರಣ ಬರುವುದಿಲ್ಲ. ದ್ವಿತ್ವ. ಯಯಜ+ಏ ಎಂದಿರುವಾಗ **ಅತಏಕಹಲ್ಮಧ್ಯೇ**—(ಪಾ. ಸೂ. ೬-೪-೧೨೦) ಎಂಬುದರಿಂದ ಅಭ್ಯಾಸ ಲೋಪವೂ ಧಾತುವಿನ ಅಕಾರಕ್ಕೆ ಏತ್ವವೂ ಬರುತ್ತದೆ. ಚಕಾರಯೋಗವಿರುವುದರಿಂದ **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯ ಚಿತ್ತಾದುದರಿಂದ ಅಂತೊದಾತ್ತ ಪದವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಆ) ಅನುದಾತ್ತ ಸ್ವರ ಬರುತ್ತದೆ.

**ಅಶ್ಯಾಮ**—ಅಶೂ ವ್ಯಾಪ್ತೌ ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ವಿಧಿಲಿಙ್ ಉತ್ತಮಪುರುಷದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ **ಯಾಸುಟ್ಪರಸ್ಮೈ**—(ಪಾ. ಸೂ. ೩-೪-೧೦೩) ಎಂಬುದರಿಂದ ಲಿಙಿಗೆ ಯಾಸುಟಾಗಮ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಣೀತಿಷು**—ಣೀಞ್ ಪ್ರಾಪಣೇ ಧಾತು. **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಸಪ್ತಮೀ ಬಹುವಚನಾಂತರೂಪ. ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಅಶ್ಯಾಮ ತೇ ಸುಮತಿಂ ದೇವಯಜ್ಯಯಾ ಕ್ಷಯದ್ವೀರಸ್ಯ ತವ ರುದ್ರ ಮೀಢ್ವಃ ।
ಸುಮ್ನಾಯನ್ನಿದ್ವಿಶೋ ಅಸ್ಮಾಕಮಾ ಚರಾರಿಷ್ಟವೀರಾ ಜುಹವಾಮ ತೇ ಹವಿಃ ॥ ೩ ॥

॥ ಪದಪಾಠಃ ॥

ಅಶ್ಯಾಮ । ತೇ । ಸುऽಮತಿಂ । ದೇವऽಯಜ್ಯಯಾ । ಕ್ಷಯತ್ऽವೀರಸ್ಯ । ತವ ।
ರುದ್ರ । ಮೀಢ್ವಃ ॥

ಸುಮ್ನऽಯನ್ । ಇತ್ । ವಿಶಃ । ಅಸ್ಮಾಕಂ । ಆ । ಚರ । ಅರಿಷ್ಟऽವೀರಾಃ ।
ಜುಹವಾಮ । ತೇ । ಹವಿಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಮೀಢ್ವಃ ಸೇಕ್ತಃ ಕಾಮಾಭಿವರ್ಷಕ ನಿತ್ಯತರುಣ ವಾ ರುದ್ರ ಕ್ಷಯದ್ವೀರಸ್ಯ ಕ್ಷಪಿತಪ್ರತಿಪಕ್ಷಸ್ಯ ಮರುದ್ಭಿರ್ಯುಕ್ತಸ್ಯ ವಾ ತವ ಸುಮತಿಂ ಶೋಭನಾಂ ಕಲ್ಯಾಣೀಮನುಗ್ರಹಾತ್ಮಿಕಾಂ ಬುದ್ಧಿಂ ತೇ ತ್ವತ್ಸಂಬಂಧಿನೋ ವಯಂ ದೇವಯಜ್ಯಯಾ ದೇವಯಾಗೇನ ತ್ವದ್ದೇವತ್ಯೇನ ಯಜ್ಞೇನಾಶ್ಯಾಮ । ಪ್ರಾಪ್ನವಾಮ । ತ್ವಂ ಚಾಸ್ಮಾಕಂ ವಿಶಃ ಪ್ರಜಾ ಅಭಿಲಕ್ಷ್ಯಾಚರ । ಆಗಚ್ಛ । ಕಿಂ ಕುರ್ವನ್ । ಸುಮ್ನಾಯನ್ನಿತ್ । ಸುಮ್ನಮಿತಿ ಸುಖನಾಮ । ತಾಸಾಂ ಪ್ರಜಾನಾಂ ಸುಖಮಿಚ್ಛನ್ನೇವ । ಸುಖಪ್ರದ ಏವ ಭವೇತ್ಯರ್ಥಃ । ತತೋ ವಯಮರಿಷ್ಟವೀರಾಃ । ವೀರ್ಯೋಪಜ್ಞಾಯಂತ ಇತಿ ವೀರಾಃ ಪ್ರಜಾಃ । ಅರಿಷ್ಟಾ ಅಹಿಂಸಿತಾ ವೀರಾ ಯೇಷಾಂ ತಥಾಭೂತಾಃ ಸಂತಸ್ತೇ ತುಭ್ಯಂ ಹವಿಶ್ಚರುಪುರೋಡಾಶಾದಿಕಂ ಜುಹವಾಮ । ಚೋದಿತ ಆಧಾರೇ ಪ್ರಕ್ಷಿಪಾಮ ॥ ಸುಮತಿಂ । ಮತಿರ್ಮನನಂ । ಶೋಭನಂ ಮನನಂ ಯಸ್ಯಾಂ ಬುದ್ಧೌ ಸಾ ಸುಮತಿಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ದೇವಯಜ್ಯಯಾ । ಛಂದಸಿ ನಿಷ್ಟರ್ಕ್ಯೇತ್ಯಾದೌ ಯಜೇರ್ಯಪ್ರತ್ಯಯೋ ನಿಪಾತ್ಯತೇ ಸ್ತ್ರೀಲಿಂಗತಾ ಚ । ಮೀಢ್ವಃ । ಮಿಹ ಸೇಚನೇ । ದಾಶ್ವಾನ್ ಸಾಹ್ವಾನ್ ಮೀಢ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತಿತಃ । ಸಂಬುದ್ಧೌ ಮತುವಸೋ ರುರಿತಿ ರುತ್ವಂ । ಸುಮ್ನಾಯನ್ । ಸುಮ್ನಂ ಪರೇಷಾಮಿಚ್ಛತಿ । ಛಂದಸಿ ಪರೇಚ್ಛಾಯಾಮಪೀತಿ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋರ್ನಿಷೇಧಃ । ದೇವಸುಮ್ನಯೋರ್ಯಜುಷಿ ಕಾಠಕೇ । ಪಾ. ೭-೪-೩೮ । ಇತಿ ವಿಧೀಯಮಾನಮಾತ್ವಂ ವ್ಯತ್ಯಯೇನಾತ್ರಾಪಿ ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

**ಮೀಢ್ವಃ**—ಇಷ್ಟಾರ್ಥಪ್ರದನಾದ ಅಥವಾ ನಿತ್ಯತರುಣನಾದ । **ರುದ್ರ**— ಎಲೈ ರುದ್ರನೇ । **ಕ್ಷಯದ್ವೀರಸ್ಯ**—ಪ್ರತಿಪಕ್ಷನಾಶಕನಾದ ಅಥವಾ ಮರುದ್ದೇವತೆಗಳಿಂದ ಯುಕ್ತನಾದ । **ತವ**—ನಿನ್ನ । **ಸುಮತಿಂ**—ಅನುಗ್ರಹಾತ್ಮಕವಾದ ಬುದ್ಧಿಯನ್ನು । **ತೇ**—ನಿನ್ನವರಾದ (ನಾವು) । **ದೇವಯಜ್ಯಯಾ**—ದೇವತೋದ್ದೇಶಕವಾದ ಯಾಗಗಳಿಂದ । **ಅಶ್ಯಾಮ**—ಪಡೆಯೋಣ । (**ತ್ವಂ ಚ**—ನೀನೂ) । **ಅಸ್ಮಾಕಂ**—ನಮ್ಮ । **ವಿಶಃ**—ಪ್ರಜೆಗಳನ್ನು

ಉದ್ದೇಶಿಸಿ । **ಸುಮ್ನಾಯನ್ ಇತ್**—ಸುಖವನ್ನೇ ಕೊಡುವವನಾಗಿ । **ಆ ಚರ**—ಬಾ (ಅನಂತರ ನಾವು) । **ಅರಿಷ್ಟವೀರಾಃ**—ದುಃಖರಹಿತರಾದ ಪ್ರಜೆಗಳುಳ್ಳವರಾಗಿ । **ತೇ**—ನಿನಗೆ । **ಹವಿಃ**—ಚರ್ವಾದಿಗಳನ್ನು । **ಜುಹವಾಮ**---ಹೋಮಮಾಡುತ್ತೇವೆ.

॥ ಭಾವಾರ್ಥ ॥

ಇಷ್ಟಾರ್ಥಪ್ರದನಾದ ಎಲೈ ರುದ್ರನೇ, ಪ್ರತಿಪಕ್ಷಧ್ವಂಸಕನಾದ ನಿನ್ನ ಅನುಗ್ರಹವು ಯಾಗಕರ್ತೃಗಳಾದ ನಮ್ಮ ಮೇಲೆ ಇರಲಿ; ನಮ್ಮ ಮಕ್ಕಳಲ್ಲಿ ಸುಖವನ್ನೇ ಉಂಟುಮಾಡುವವನಾಗಿ ಬಾ; ದುಃಖರಹಿತರಾದ ಪ್ರಜೆಗಳಿಂದ ಯುಕ್ತರಾದ ನಾವೂ ನಿನಗೆ ಚರುಪುರೋಡಾಶಾದಿಗಳನ್ನು ಹೋಮಮಾಡುತ್ತೇವೆ.

English Translation.

Rudra, showerer (of benefits), may we obtain, through our worship of the gods, the favour of you, the destroyer of heroes: come to our posterity, purposing to promote their happiness, while we, having, 'our sons in safety,' offer you oblations.

॥ ವಿಶೇಷವಿಷಯಗಳು ॥

**ಮೀಢ್ವಃ—ಕಾಮಾಭಿವರ್ಷಕ ನಿತ್ಯತರುಣೋ ವಾ** । ತನ್ನನ್ನು ಆಶ್ರಯಿಸಿದವರಿಗೆ ಉಂಟಾಗುವ ಅಭಿಲಾಷೆಗಳನ್ನು ನೆರವೇರಿಸುವವನು ಅಥವಾ ಯಾವಾಗಲೂ ಭೋಗವನ್ನು ಅನುಭವಿಸಬಹುದಾದ ಯೌವ್ವನದಿಂದ ಕೂಡಿದವನು ರುದ್ರನು ಎಂದು ಸಾಯಣರು ಹೇಳುವರು. ಸ್ಕಂದಸ್ವಾಮಿಗಳು **ಮಿಹ ಸೇಚನೇ** ಸೇಚನಮಾಡುವುದು (ಸುರಿಸುವುದು) ಎಂಬ ಅರ್ಥವುಳ್ಳ **ಮಿಹ** ಧಾತುವಿನಿಂದ **ಮೀಢ್ವ** ಶಬ್ದವು ಉಂಟಾಗಿ **ವೃಷ್ಟಿಲಕ್ಷಣೇನ ಉದಕೇನ ಸೇಕ್ತಃ** ಮಳೆಯರೂಪವಾದ ನೀರುಗಳಿಂದ ಸಿಂಪಡಿಸುವವನು ಎಂದೂ ಅಥವಾ **ಧನನಾಮ್ನೋ ಮೀಢಶಬ್ದಸ್ಯ ಮತ್ವಂತಸ್ಯ ಇದಂ ಛಾಂದಸಂ ರೂಪಂ ಧನವನ್ನಿತ್ಯರ್ಥಃ** । **ಮೀಳ್ಹಂ** ಎಂಬ ಶಬ್ದವು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದು. ಆದರೂ ಧನವೆಂದು ಅರ್ಥವನ್ನು ಬೋಧಿಸುವ **ಮೀಢ** ಶಬ್ದಕ್ಕೆ ಮತುಪ್ ಪ್ರತ್ಯಯವು ಬಂದಿರುವುದರಿಂದ ಧನವುಳ್ಳವನು ರುದ್ರನು ಎಂದು ಅರ್ಥವನ್ನು ವಿವರಿಸಿರುತ್ತಾರೆ.

**ಸುಮತಿಂ—ಮತಿರ್ಮನನಂ । ಶೋಭನಂ ಮನನಂ ಯಸ್ಯಾಂ ಬುದ್ಧೌ ಸಾ ಸುಮತಿಃ । ಶೋಭನಾಂ ಕಲ್ಯಾಣೀಮನುಗ್ರಹಾತ್ಮಿಕಾಂ ಬುದ್ಧಿಂ ।** ಮನನ ಎಂದರೆ ನಿಶ್ಚಯಜ್ಞಾನವು. ಒಳ್ಳೆಯದು ಆಗಬೇಕೆಂದು ದೃಢವಾದ ಸಂಕಲ್ಪವುಳ್ಳ ಬುದ್ಧಿಯು ಎಂದು ಅರ್ಥ. ನಮಗೆಲ್ಲರಿಗೂ ಒಳ್ಳೆಯದು ಆಗಬೇಕೆಂದೂ ನಮ್ಮ ನಮಸ್ಕಾರಗಳನ್ನು ನಮ್ಮ ಹವಿರ್ಭಾಗಗಳನ್ನೂ ಸ್ವೀಕರಿಸಬೇಕೆಂದು ರುದ್ರನನ್ನು ಪ್ರಾರ್ಥಿಸಿದೆ. ಸುಮತಿ ಶಬ್ದವು—

**ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿಶ್ರೀಃ ।**

(ಋ. ಸಂ. ೧-೯೮-೧)

(ನಿ ೭-೭೭) ಎಂಬ ಋಕ್ಕಿನಲ್ಲಿಯೂ, ಇನ್ನೂ ಇತರ ಋಕ್ಕುಗಳಲ್ಲಿಯೂ ಕಲ್ಯಾಣೀ ಮತಿಃ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ—

**ಧಾತಾ ದಧಾತು ದಾಶುಷೇ ಪ್ರಾಚೀಂ ಜೀವಾತುಮಕ್ಷಿತಾಂ ।**
**ವಯಂ ದೇವಸ್ಯ ಸುಮತಿಂ ಸತ್ಯಧರ್ಮಣಃ ॥**

(ಅಥ. ಸಂ. ೭-೧೭-೨)

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।**
**ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ॥**

(ಋ. ಸಂ. ೧೦-೧೪-೬)

**ಸುಮ್ನಾಯ—ಸುಮ್ನಂ** ಶಬ್ದವು ಇಪ್ಪತ್ತು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಸುಖವೆಂದು ಅರ್ಥವನ್ನು ಬೋಧಿಸುವುದು. ರುದ್ರನು ತನಗೆ ಹವಿರ್ಭಾಗಗಳನ್ನು ಅರ್ಪಿಸಿ ನಮಸ್ಕಾರಗಳಿಂದ ಪೂಜಿಸುವವರಿಗೂ ಅವರ ಮಕ್ಕಳುಗಳಿಗೂ ಸುಖವು ಉಂಟಾಗುವಂತೆ ಅನುಗ್ರಹಿಸುವವನು ಎಂದರ್ಥವು.

**ಅರಿಷ್ಟವೀರಾಃ—ಅರಿಷ್ಟಾ ಅಹಿಂಸಿತಾ ವೀರಾ ಯೇಷಾಂ ತಥಾಭೂತಾಃ । ವೀರ್ಯಾತ್ ಜಾಯಂತ ಇತಿ ವೀರಾಃ ಪ್ರಜಾಃ ।** ವೀರಶಬ್ದಕ್ಕೆ ಆಯಾಯ ವ್ಯುತ್ಪತ್ತಿಗಳಿಗೆ ಅನುಸಾರವಾಗಿ ಬೇರೆ ಬೇರೆಯ ಅರ್ಥಗಳಿದ್ದಾಗ್ಯೂ ಇಲ್ಲಿ ವೀರ್ಯದಿಂದ ಉತ್ಪನ್ನರಾಗುವ ಕಾರಣ(ಪುತ್ರರು) ಪ್ರಜೆಗಳು ಎಂದು ಅರ್ಥ. ನಿರುಕ್ತಕಾರರೂ ಹೀಗೆಯೇ ಅರ್ಥವುಳ್ಳ—

**ಶಿಕ್ಷಾ ಸ್ತೋತೃಭ್ಯೋ ಮಾತಿ ಧಗ್ಭಗೋ ನೋ ಬೃಹದ್ವದೇಮ ವಿದಥೇ ಸುವೀರಾಃ ।**

(ಋ. ಸಂ. ೨-೧೧-೨೧)

ಋಕ್ಕನ್ನು ಉದಹರಿಸಿರುವರು. ಇಲ್ಲಿ ನಮ್ಮ ಪುತ್ರರೇ ಮೊದಲಾದ ಪ್ರಜೆಗಳಿಗೆ ಹಿಂಸೆಯು ಆಗಬಾರದೆಂದು ರುದ್ರನನ್ನು ಪ್ರಾರ್ಥಿಸಿದೆ. ಸ್ಕಂದಸ್ವಾಮಿಗಳು **ಅರಿಷ್ಟವೀರಾಃ--- ಅಹಿಂಸಿತಪುತ್ರಪೌತ್ರಾಃ** ಹಿಂಸೆಗೆ ಒಳಗಾಗದಿರುವ ಮಕ್ಕಳು ಮೊಮ್ಮಕ್ಕಳು ಉಳ್ಳವರಾಗಿ ನಾವು ಇರೋಣ ಎಂದು ಅರ್ಥವನ್ನು ಹೇಳಿರುವರು.

**ಇದ್ವಿಶಃ—ಪ್ರಜಾಃ ।** ನಿಪಾತಗಳಲ್ಲಿ ಕೆಲವು ಅರ್ಥವನ್ನು ಬೋಧಿಸುವುವು. ಇನ್ನು ಕೆಲವು ಅರ್ಥವಿಲ್ಲದವುಗಳಾಗಿ ವಾಕ್ಯದ ಪೂರ್ತಿಗಾಗಿಯೇ ಇರುವುವು. ಇಲ್ಲಿ ಇತ್ ಎಂಬ ಶಬ್ದವು ಪಾದಪೂರ್ತಿಗಾಗಿ ಇರುವುದು. ಸಾಯಣರು ವಿಶಃ ಎಂಬ ಶಬ್ದಕ್ಕೆ ಪ್ರಜೆಗಳು ಎಂದು ಅರ್ಥವನ್ನು ವಿವರಿಸಿ ಅಸ್ಮಾಕಂ—ನಮ್ಮ ಪ್ರಜೆಗಳನ್ನು ಅಭಿಲಕ್ಷ್ಯ ನೋಡಿ ಎಂದರೆ ರುದ್ರನು ನಮ್ಮ ಮಕ್ಕಳನ್ನು ನೋಡಿ ಅನುಗ್ರಹಮಾಡಲಿ ಎಂದು ಪ್ರಾರ್ಥಿಸಿರುವ ಅರ್ಥವನ್ನು ವಿವರಿಸಿರುವರು. ಸ್ಕಂದಸ್ವಾಮಿಗಳೂ ಹೀಗೆಯೇ ಅರ್ಥವನ್ನು ಹೇಳಿದ್ದರೂ **ವಿಶಃ—ಮನುಷ್ಯಾನಸ್ಮಾಕಂ ಸಂಬಂಧಿನಃ ಪುತ್ರಪೌತ್ರಾದೀನ್ ಋತ್ವಿಜೋ ವಾ ಪ್ರತಿ ಆಚರ ।** ಮನುಷ್ಯರಾದ ನಮ್ಮನ್ನು, ನಮಗೆ ಸಂಬಂಧಿಸಿದ ಮಕ್ಕಳು ಮೊಮ್ಮಕ್ಕಳುಗಳನ್ನು ಅಥವಾ ಋತ್ವಿಗ್ಜನರನ್ನೂ ನೋಡಿ ಅನುಗ್ರಹವನ್ನು ಮಾಡಲಿ ಎಂದು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಶ್ಯಾಮ**—ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರಕ್ರಿಯೆಯು ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸುಮತಿಂ**—ಮನ ಜ್ಞಾನೇ. ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಶೋಭನಾ ಮನನಂ ಯಸ್ಯಾಂ ಬುದ್ಧೌ ಸಾ ಸುಮತಿಃ. **ನಞ್ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ದೇವಯಜ್ಯಯಾ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಛಂದಸಿ ನಿಷ್ಟರ್ಕ್ಯ**—(ಪಾ. ಸೂ. ೩-೧-೧೨೩) ಎಂಬುದರಿಂದ ಈ ಧಾತುವಿಗೆ ಯ ಪ್ರತ್ಯಯವೂ ಸ್ತ್ರೀಲಿಂಗತ್ವವೂ ನಿಪಾತಿತವಾಗಿದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಮೀಢ್ವಃ**—ಮಿಹ ಸೇಚನೇ. ಧಾತು. **ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಮೀಢ್ವಸ್ ಶಬ್ದ. ಸಂಬುದ್ಧಿಯಲ್ಲಿ **ಮತುವಸೋರುಃ-ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. **ಖರವಸಾನಯೋರ್ವಿಸರ್ಜನೀಯಃ** (ಪಾ. ಸೂ. ೮-೩-೧೫) ಎಂಬುದರಿಂದ ವಿಸರ್ಗ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸುಮ್ನಾಯನ್**—ಸುಮ್ನಂ ಪರೇಷಾಂ ಇಚ್ಛತಿ ಸುಮ್ನಾಯತಿ. **ಛಂದಸಿ ಪರೇಚ್ಛಾಯಾಮಪಿ** (ಪಾ. ಸೂ. ೩-೧-೮-೧) ಎಂಬುದರಿಂದ ಪರೇಚ್ಛಾದಲ್ಲಿಯೂ ಕ್ಯಚ್. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಈತ್ವದೀರ್ಘಗಳು ಬರುವುದಿಲ್ಲ. **ದೇವಸುಮ್ನಯೋರ್ಯಜುಷಿ ಕಾಠಕೇ** (ಪಾ. ಸೂ. ೭-೪-೩೮) ಎಂಬುದರಿಂದ ವಿಧಿಸಲ್ಪಡುವ ಆತ್ವವು ವ್ಯತ್ಯಯದಿಂದ ಇಲ್ಲಿಯೂ ಬರುತ್ತದೆ. ಕ್ಯಜಂತವು **ಸನಾದ್ಯಂತಾಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ.

**ಚರ**—ಚರ ಗತಿಭಕ್ಷಣಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ

**ಅರಿಷ್ಟವೀರಾಃ**—ಅರಿಷ್ಟಾಃ ವೀರಾಃ ಯೇಷಾಂ ತೇ ಅರಿಷ್ಟವೀರಾಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಜುಹಮಾ**—ಹು ದಾನಾದನಯೋಃ ಧಾತು. **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ. ಲಟ್ ಉತ್ತಮಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ತ್ವೇಷಂ ವಯಂ ರುದ್ರಂ ಯಜ್ಞಸಾಧಂ ವಂಕುಂ ಕವಿಮವಸೇ ನಿ ಹ್ವಯಾಮಹೇ ।
ಆರೇ ಅಸ್ಮದ್ದೈವ್ಯಂ ಹೇಳೋ ಅಸ್ಯತು ಸುಮತಿಮಿದ್ವಯಮಸ್ಯಾ ವೃಣೀಮಹೇ ॥ ೪ ॥

॥ ಪದಪಾಠಃ ॥

ತ್ವೇಷಂ । ವಯಂ । ರುದ್ರಂ । ಯಜ್ಞಽಸಾಧಂ । ವಂಕುಂ । ಕವಿಂ । ಅವಸೇ । ನಿ । ಹ್ವಯಾಮಹೇ ।
ಆರೇ । ಅಸ್ಮತ್ । ದೈವ್ಯಂ । ಹೇಳಃ । ಅಸ್ಯತು । ಸುಽಮತಿಂ । ಇತ್ । ವಯಂ । ಅಸ್ಯ । ಆ । ವೃಣೀಮಹೇ ॥ ೪ ॥

॥ ಸಾಯಣಭಾಷ್ಯಂ ॥

ಅವಸೇ ರಕ್ಷಣಾಯ ರುದ್ರಂ ಮಹಾದೇವಂ ನಿ ಹ್ವಯಾಮಹೇ । ನಿತರಾಮಾಹ್ವಯಾಮಃ । ಕೀದೃಶಂ । ತ್ವೇಷಂ ದೀಪ್ತಂ ಯಜ್ಞಸಾಧಂ ಯಜ್ಞಸ್ಯ ಸಾಧಯಿತಾರಂ । ಏಷ ಹಿ ಯಜ್ಞಂ ಸ್ವಿಷ್ಟಂ ಕರೋತಿ । ತಥಾ ಚ ತೈತ್ತಿರೀಯಕೇ ದೇವಾ ವೈ ಯಜ್ಞಾದ್ರುದ್ರಮಂತರಾಯನ್ನಿತ್ಯುಪಕ್ರಮ್ಯಾಮ್ನಾತಂ । ಸ್ವಿಷ್ಟಂ ವೈ ನ ಇದಂ ಭವಿಷ್ಯತಿ ಯದಿಮಂ ರಾಧಯಿಷ್ಯಾಮ ಇತಿ ತತ್ಸ್ವಿಷ್ಟಕೃತಃ ಸ್ವಿಷ್ಟಕೃತ್ತ್ವಂ । ತೈ. ಸಂ. ೨-೬ ೮-೩ । ಇತಿ । ವಂಕುಂ । ಕುಟಿಲಗಂತಾರಂ ಕವಿಂ ಕ್ರಾಂತದರ್ಶಿನಂ । ಸ ಚ ರುದ್ರೋ ದೈವ್ಯಂ ದೇವಸ್ಯ ದ್ಯೋತಮಾನಸ್ಯ ಸಂಬಂಧಿನಂ ಹೇಳಃ ಕ್ರೋಧಮಸ್ಮದಾರೇಽಸ್ಮತ್ತೋ ದೂರದೇಶೇಽಸ್ಯತು । ಪ್ರೇರಯತು । ಅಸ್ಯ ಮಹಾದೇವಸ್ಯ ಸುಮತಿಮಿತ್ ಶೋಭನಾಮನುಗ್ರಹರೂಪಾಂ ಬುದ್ಧಿಮೇವ ವಯಮಾ ವೃಣೀಮಹೇ । ಅಭಿಮುಖ್ಯೇನ ಸಂಭಜಾಮಹೇ ॥ ಯಜ್ಞಸಾಧಂ । ಯಜ್ಞಂ ಸಾಧಯತೀತಿ ಯಜ್ಞಸಾತ್ । ಷಿಧು ಸಂರಾದ್ಧೌ । ಸಿಧ್ಯತೇರಪಾರಲೌಕಿಕ ಇತ್ಯಾತ್ವಂ । ಯದ್ವಾ । ರಾಧ ಸಾಧ ಸಂಸಿದ್ಧೌ । ಅಸ್ಮಾಣ್ಣ್ಯಂತಾತ್ ಕ್ವಿಪ್ । ವಂಕುಂ । ವಕಿ ಕೌಟಿಲ್ಯೇ । ಔಣಾದಿಕ ಉಪ್ರತ್ಯಯಃ । ನಿ ಹ್ವಯಾಮಹೇ ।

ನಿಸಮುಪನಿಭ್ಯೋ ಹ್ವ ಇತ್ಯಾತ್ಮನೇಪದಂ । ಹ್ವೈನ್ಯಂ । ದೇವಾದ್ಯಞಾಞೌ । ಪಾ. ೪-೧-೮೫-೩ । ಇತಿ ಪ್ರಾಗ್ದೀವ್ಯತೀಯೋ ಯಞ್ । ಅಸ್ಮತು । ಅಸು ಕ್ಷೇಪಣೇ । ದೈವಾದಿಕಃ । ವೃಣೀಮಹೇ । ವೃಙ್ ಸಂಭಕ್ತೌ । ಕ್ರ್ಯಾದಿಕಃ ॥

॥ ಪ್ರತಿಪದಾರ್ಥ ॥

**ತ್ವೇಷಂ**—ದೇದೀಪ್ಯಮಾನನಾದ । **ಯಜ್ಞಸಾಧಂ**—ಯಜ್ಞಸಾಧಕನಾದ । **ವಂಕುಂ**—ವಕ್ರಗಮನನಾದ । **ಕವಿಂ**—ಹಿಂದೆ ಕಳೆದುದನ್ನು ತಿಳಿದಿರುವ । **ರುದ್ರಂ**—ರುದ್ರನನ್ನು । **ಅವಸೇ**—(ನಮ್ಮ) ರಕ್ಷಣೆಗಾಗಿ । **ನಿ ಹ್ವಯಾಮಹೇ**—ಆಹ್ವಾನಿಸೋಣ (ಆ ರುದ್ರನು) । **ದೈವ್ಯಂ**—ದೇವತಾಸಂಬಂಧವಾದ । **ಹೇಳಃ**—ಕ್ರೋಧವನ್ನು । **ಅಸ್ಮತ್**—ನಮ್ಮಿಂದ । **ಆರೇ**—ಬಹಳ ದೂರದಲ್ಲಿ । **ಅಸ್ಯತು**—(ಇರುವಂತೆ) ಪ್ರೇರಿಸಲಿ । **ಅಸ್ಯ**—ಈ ರುದ್ರನ । **ಸುಮತಿಮಿತ್**—ಅನುಗ್ರಹರೂಪವಾದ ಬುದ್ಧಿಯನ್ನೇ । **ವಯಂ**—ನಾವು । **ಆ ವೃಣೀಮಹೇ**—ಭಜಿಸೋಣ. (ಅಪೇಕ್ಷಿಸೋಣ)

॥ ಭಾವಾರ್ಥ ॥

ಉಜ್ವಲಕಾಂತಿಯುಳ್ಳವನೂ, ಯಜ್ಞಸಾಧಕನೂ, ವಕ್ರಗತಿಯುಳ್ಳವನೂ ಭೂತಭವಿಷ್ಯದ್ಜ್ಞಾನಿಯೂ ಆದ ರುದ್ರನನ್ನು ರಕ್ಷಣೆಗಾಗಿ ಪ್ರಾರ್ಥಿಸೋಣ. (ಪ್ರಾರ್ಥಿತನಾದ) ರುದ್ರನು ದೇವತೆಗಳ ಕ್ರೋಧವನ್ನೂ ನಮ್ಮಿಂದ ದೂರ ಇಡಲಿ. ನಾವು ಆತನ ಅನುಗ್ರಹವನ್ನೇ ಭಜಿಸೋಣ. (ಬಯಸೋಣ)

English Translation.

We invoke for our preservation the illustrious Rudra, the accomplisher of sacrifices, the tortuous, the wise ; may he remove far from us his celestial wrath for we earnestly solicit his favour.

॥ ವಿಶೇಷವಿಷಯಗಳು ॥

**ಯಜ್ಞಸಾಧವತ್—ಯಜ್ಞಂ ಸಾಧಯತೀತಿ ಯಜ್ಞಸಾತ್** । ಯಜ್ಞವು ನಡೆಯುವಂತೆ ವಿಘ್ನಗಳನ್ನು ಒದಗಿಸುವ ಯಜ್ಞಕಂಟಕರನ್ನು ನಿಗ್ರಹಮಾಡಿ ಯಜ್ಞವನ್ನು ನೆರವೇರಿಸುವವನು ಎಂದು ಅರ್ಥ. ಸಾಯಣರು ರುದ್ರನು ಯಜ್ಞವನ್ನು ನಿರ್ವಿಘ್ನವಾಗಿ ನಡೆಯುವಂತೆ ಮಾಡುವನು ಎಂದು ಅರ್ಥವನ್ನು ವಿವರಿಸಿ **ಏಷ ಹಿ ಯಜ್ಞಂ ಸ್ವಿಷ್ಟಂ ಕರೋತಿ** ಈ ರುದ್ರನು ಯಜ್ಞವು ಸರಿಯಾದ ರೀತಿಯಿಂದ ನಡೆಯುವಂತೆ ಮಾಡುವನು. ತೈತ್ತಿರೀಯ ಸಂಹಿತೆಯಲ್ಲಿ ರುದ್ರನ ವೈಶಿಷ್ಟ್ಯವು ಉಕ್ತವಾಗಿರುವುದು ಎಂದು ವಿವರಿಸಿ—

**ದೇವಾ ವೈ ಯಜ್ಞಾದ್ರುದ್ರಮನ್ತರಾಯನ್ ಇತ್ಯಾದ್ಯುಪಕ್ರಮ್ಯ ಸ್ವಿಷ್ಟಂ ವೈ ನ ಇದಂ ಭವಿಷ್ಯತಿ ಯದಿಮಂ ರಾಧಯಿಷ್ಯಾಮ ಇತಿ ತತ್ಸ್ವಿಷ್ಟಕೃತಃ ಸ್ವಿಷ್ಟಕೃತ್ತ್ವಂ ॥**

(ತೈ. ಸಂ. ೨-೬-೮-೩)

ರುದ್ರನನ್ನು ನಾವುಗಳು ಸೇವಿಸುವುದರಿಂದ ನಮ್ಮ ಯಜ್ಞಗಳು ಸುಹುತಗಳಾಗಿರುವುವು ಎಂದು (ತೈತ್ತಿರೀಯ) ವಚನವನ್ನು ವಿವರಿಸಿರುವರು.

**ವಂಕುಂ—ಕುಟಿಲಗಂತಾರಂ** ಅಸುರನನ್ನು ಮೋಹಗೊಳಿಸುವುದಕ್ಕಾಗಿಯೂ ಅಥವಾ ನಿಗ್ರಹ ಮಾಡುವುದಕ್ಕಾಗಿಯೂ ವಕ್ರವಾದ ಮಾರ್ಗದಲ್ಲಿ ಸಂಚರಿಸುವವನು ಎಂದು ಅರ್ಥ. ಸ್ಕಂದಸ್ವಾಮಿಗಳು—**ವಂಕುಶಬ್ದೋತ್ರ ವಕಿ ಕೌಟಿಲ್ಯೇ ಇತ್ಯಸ್ಯ ವಕ್ರಗಾಮಿ** ವಂಕು ಶಬ್ದವು ವಕಿ ಕೌಟಿಲ್ಯೇ ಎಂಬ ಧಾತುವಿನಿಂದ ನಿಷ್ಪನ್ನವಾದ ಕಾರಣ ವಕ್ರವಾದ ಗಮನವುಳ್ಳವನು ಎಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿ,

**ಯತ್ತ್ವಾದತ್ವೋರ ವಿತಶಂ ವಂಕೂ ವಾರಸ್ಯ ಪರ್ಣಿನಾ**

(ಋ. ಸಂ. ೮-೧-೧೧)

ಎಂಬ ಉದಾಹರಣೆಯನ್ನು ಕೊಟ್ಟಿರುವರು—

**ಕವಿಂ—ಕ್ರಾಂತದರ್ಶಿನಮ್** (ಸಾ. ಭಾ.) ಸರಿಯಾದ ಮಾರ್ಗವನ್ನು ತೋರಿಸುವವನು ಎಂದು ಅರ್ಥ. ಕವಿ ಶಬ್ದವು ಇಪ್ಪತ್ತುನಾಲ್ಕು ಮೇಧಾವಿನಾಮಗಳಲ್ಲಿ (ನಿ ೩-೧೫) ಉಕ್ತವಾಗಿರುವುದರಿಂದ **ಮೇಧಾವಿಯು** ಎಂದು ಸ್ಕಂದಸ್ವಾಮಿಗಳು ಅರ್ಥಮಾಡಿರುವರು.

**ಹೇಳಃ—ಕ್ರೋಧಂ** । ಕೋಪವನ್ನು ಎಂದು ಅರ್ಥ. ಹೇಳ್ ಶಬ್ದವು ಹರಃ ಹೃಣಿಃ ಮೊದಲಾದ ಹನ್ನೊಂದು ಕ್ರೋಧನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಕ್ರೋಧವೆಂದು ಹೇಳ್‌ಶಬ್ದಕ್ಕೆ ಅರ್ಥವನ್ನು ಸ್ಕಂದಸ್ವಾಮಿಗಳು ವಿವರಿಸಿ **ದೈವ್ಯಂ ಹೇಳಃ ಕ್ರೋಧನಾಮೈತತ್ ದೇವಾನಾಂ ಸ್ವಭೂತಂ ಕ್ರೋಧಂ ಅಸ್ಯತು ಕ್ಷಿಪತು ಯಥಾ ಅಸ್ಮಭ್ಯಂ ದೇವಾಃ ನ ಕ್ರುಧ್ಯೇಯುಃ ತಥಾ ಕರೋತು** ಹೇಳಃ । ಎಂಬ ಪದವು ಕ್ರೋಧ ಎಂದು ಅರ್ಥವುಳ್ಳದ್ದಾಗಿ ಇರುವುದು. ದೇವತೆಗಳು ನಮ್ಮ ಮೇಲೆ ಕೋಪಮಾಡದಂತೆ ನಮಗೆ ಅನುಗ್ರಹವನ್ನು ರುದ್ರನು ಮಾಡಲಿ ಎಂದು ಅರ್ಥವನ್ನು ಹೇಳಿರುವರು.

**ಸುಮತಿಮಿತ್**—ಎಂಬ ಶಬ್ದಕ್ಕೆ ಇತ್ ಶಬ್ದವು **ಏವ** ಎಂಬ ಅರ್ಥದಲ್ಲಿ ಇರುವುದು ಎಂದು ಹೇಳಿ ಸುಮತಿಮೇವ—ಶೋಭನಮೇವ (ಒಳ್ಳೆಯದೇ) ಮಂಗಳವೇ ರುದ್ರನ ಅನುಗ್ರಹರೂಪವಾದ ಬುದ್ಧಿಯು. ಇದು ನಮ್ಮ ವಿಷಯದಲ್ಲಿ ಉಂಟಾಗುವಂತೆ ನಾವು ರುದ್ರನನ್ನು ಬೇಡುತ್ತೇವೆ ಎಂದು ವ್ಯಾಖ್ಯಾನಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ತ್ವೇಷಂ—**ತ್ವಿಷೀ ದೀಪ್ತೌ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಜ್ಞಸಾಧಂ**—ಯಜ್ಞಂ ಸಾಧಯತಿ ಇತಿ ಯಜ್ಞಸಾತ್. ಷಿಧೂ ಸಂರಾದ್ಧೌ. ಧಾತು. ಪ್ರಯೋಜಕ ವ್ಯಾಪಾರತೋರುವಾಗ **ಹೇತುಮತಿಚ** (ಪಾ. ಸೂ ೩-೧-೨೬) ಎಂಬುದರಿಂದ ಣಿಚ್. **ಸಿದ್ಧ್ಯತೇರಪಾರಲೌಕಿಕೇ** (ಪಾ. ಸೂ. ೬-೧-೪೯) ಎಂಬುದರಿಂದ ಣಿಚ್ ನಿಮಿತ್ತವಾಗಿ ಆತ್ವ. ಅಥವಾ ರಾಧ ಸಾಧ. ಸಂಸಿದ್ಧೌ ಧಾತು.

ಇದಕ್ಕೆ ಣಿಜಂತದಮೇಲೆ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವಂಕುಂ**—ವಕಿ ಕೌಟಿಲ್ಯೇ. ಧಾತು. ಇದಕ್ಕೆ ಔಣಾದಿಕವಾದ ಉ ಪ್ರತ್ಯಯ. **ಇದಿತೋನುಮ್ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವಸೇ**—ಅವ ರಕ್ಷಣೇ. ಧಾತು. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

**ನಿ ಹ್ವಯಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. **ನಿಸಮುಪವಿಭ್ಯೋ ಹ್ವಃ** (ಪಾ. ಸೂ. ೧-೩-೩೦). ಎಂಬುದರಿಂದ ನಿತ್ಯಾತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮನೇಪ**—ಸೂತ್ರದಿಂದ ಟಿಗೆ ಏತ್ವ. ಶಪ್ ವಿಕರಣ. ತನ್ನಿಮಿತ್ತವಾಗಿ ಏಕಾರಕ್ಕೆ ಅಯಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ದೈವ್ಯಂ**—ದೇವಸ್ಯ ಇದಮ್ ದೈವ್ಯಮ್. **ದೇವಾದ್ಯಞಞೌ** (ಪಾ. ಸೂ. ೪-೧-೮೫-೩) ಎಂಬುದರಿಂದ ಪ್ರಾಗ್ದೀವ್ಯತೀಯಾರ್ಥದಲ್ಲಿ ಯಞ್ ಪ್ರತ್ಯಯ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರ ಲೋಪ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಹೇಳಃ**—ಹೇಡೃ ಅನಾದರೇ. ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿ ೀಯಾ ಏಕವಚನಾಂತರೂಪ.

**ಅಸ್ಯತು**—ಅಸು ಕ್ಷೇಪಣೇ. ಧಾತು. ದಿವಾದಿ. ಲೋಟ್ಪ್ರಥಮಪುರುಷ ಏಕವಚನದಲ್ಲಿ **ಏರುಃ** (ಪಾ. ಸೂ. ೩-೪-೮೬) ಎಂಬುದರಿಂದ ಉತ್ವ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೃಣೀಮಹೇ**—ವೃಙ್ ಸಂಭಕ್ತೌ. ಧಾತು. ಕ್ರ್ಯಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿಗೆ ಏತ್ವ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಸಾರ್ವಧಾತುಕ-ಮಪಿತ್** ಎಂಬುದರಿಂದ ಮಹಿಙ್ ಙಿತ್ತಾಗುವುದರಿಂದ ಇದನ್ನು ನಿಮಿತ್ತೀಕರಿಸಿ **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಆಕಾರಕ್ಕೆ ಈತ್ವ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ವಿಕರಣಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ದಿವೋ ವರಾಹಮರುಷಂ ಕಪರ್ದಿನಂ ತ್ವೇಷಂ ರೂಪಂ ನಮಸಾ
ನಿ ಹ್ವಯಾಮಹೇ ।
ಹಸ್ತೇ ಬಿಭ್ರದ್ಭೇಷಜಾ ವಾರ್ಯಾಣಿ ಶರ್ಮ ವರ್ಮ ಛರ್ದಿರ-
ಸ್ಮಭ್ಯಂ ಯಂಸತ್ ॥ ೫ ॥

॥ ಪದಪಾಠಃ ॥

ದಿವಃ । ವರಾಹಂ । ಅರುಷಂ । ಕಪರ್ದಿನಂ । ತ್ವೇಷಂ । ರೂಪಂ । ನಮಸಾ । ನಿ ।
ಹ್ವಯಾಮಹೇ ।
ಹಸ್ತೇ । ಬಿಭ್ರತ್ । ಭೇಷಜಾ । ವಾರ್ಯಾಣಿ । ಶರ್ಮ । ವರ್ಮ । ಛರ್ದಿಃ ।
ಅಸ್ಮಭ್ಯಂ । ಯಂಸತ್ ॥ ೫ ॥

॥ ಸಾಯಣಭಾಷ್ಯಂ ॥

ವರಾಹಂ ವರಾಹಾರಮುತ್ಕೃಷ್ಟಭೋಜನಂ । ಯದ್ವಾ । ವರಾಹವದ್ದೃಢಾಂಗಂ । ಅರುಷಮಾರೋಚಮಾನಂ ಕಪರ್ದಿನಂ ಜಟಾಭಿರ್ಯುಕ್ತಂ ತ್ವೇಷಂ ತೇಜಸಾ ದೀಪ್ಯಮಾನಂ ರೂಪಂ ನಿರೂಪಣೀಯಂ ವೇದಾಂತೈರಧಿಗಮ್ಯಂ ಏವಂಭೂತಂ ರುದ್ರಂ ನಮಸಾ ಹವಿರ್ಲಕ್ಷಣೇನಾನ್ನೇನ ನಮಸ್ಕಾರೇಣ ವಾ ದಿವೋ ದ್ಯುಲೋಕಸಕಾಶಾನ್ನಿ ಹ್ವಯಾಮಹೇ । ನಿತರಾಮಾಹ್ವಯಾಮಃ । ಸ ಆಹೂತೋ ರುದ್ರೋ ಹಸ್ತೇ ಸ್ವಕೀಯೇ ಬಾಹೌ ವಾರ್ಯಾಣಿ ಸರ್ವೈರ್ವರಣೀಯಾನಿ ಭೇಷಜಾ ಭೈಷಜ್ಯಾನಿ ರೋಗಶಮನಹೇತುಭೂತಾನಿ ಬಿಭ್ರತ್ ಧಾರಯನ್ ಅಸ್ಮಭ್ಯಂ ಸ್ತೋತೃಭ್ಯಃ ಶರ್ಮಾರೋಗ್ಯಲಕ್ಷಣಂ ಸುಖಂ ವರ್ಮಾಯುಧಾನಾಂ ನಿವಾರಕಂ ಕವಚಂ ಛರ್ದಿಃ । ಗೃಹನಾಮೈತತ್ । ಗೃಹಂ ಚ ಯಂಸತ್ । ಪ್ರಯಚ್ಛತು ॥ ಬಿಭ್ರತ್ । ಡುಭೃಞ್ ಧಾರಣಪೋಷಣಯೋಃ । ಜುಹೋತ್ಯಾದಿಕಃ । ಲಟಃ ಶತೃ ।

ಭೃಞಾಮಿದಿತ್ಯಭ್ಯಾಸಸ್ಯೇತ್ವಂ | ಭೇಷಜಾ | ಭಿಷಜ್ ಚಿಕಿತ್ಸಾಯಾಂ | ಕಂಡ್ವಾದಿಃ | ಪಚಾದ್ಯಚ್ | ಅತೋಲೋಪಯಲೋಪೌ | ಸುಮಂಗಲಭೇಷಜಾಚ್ಚ | ಪಾ. ೪-೧-೩೦ | ಇತಿ ನಿಪಾತನಾದ್ರೂಪಸಿದ್ಧಿಃ | ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ | ವಾರ್ಯಾಣಿ | ವೃಙ್ ಸಂಭಕ್ತೌ | ಋಹಲೋರ್ಣ್ಯತ್ | ಈಡವಂದೇತ್ಯಾದ್ಯುದಾತ್ತತ್ವಂ | ಛರ್ದಿಃ | ಉಛೃದಿರ್ ದೀಪ್ತಿದೇವನಯೋಃ | ಛೃದ್ಯತೇ ದೀಪ್ಯತೇ ಸುವರ್ಣಾದಿಭಿರ್ಧನೈಃ ಪ್ರಕಾಶ್ಯತೆ ಇತಿ ಛರ್ದಿರ್ಗೃಹಂ | ಅರ್ಚಿಶುಚಿಹುಸೃಪಿಛಾದಿಛರ್ದಿಭ್ಯ ಇಸಿಃ | ಯಂಸತ್ | ಯಮು ಉಪರಮೇ | ಲೇಟ್ಯಡಾಗಮಃ | ಸಿಬ್ಬಹುಲಂ ಲೇಟೀತಿ ಸಿಪ್ | ಇತಶ್ಚ ಲೋಪ ಇತೀಕಾರಲೋಪಃ ||

|| ಪ್ರತಿಪದಾರ್ಥ ||

**ವರಾಹಂ**—ಉತ್ಕೃಷ್ಟವಾದ ಆಹಾರವುಳ್ಳ ಅಥವಾ ದೃಢಾಂಗನಾದ | **ಅರುಷಂ**—ಕಾಂತಿಯುಕ್ತನಾದ | **ಕಪರ್ದಿನಂ**—ಜಟಾಧಾರಿಯಾದ | **ತ್ವೇಷಂ**—ತೇಜೋಯುಕ್ತನಾದ | **ರೂಪಂ**—ವೇದಾದಿಗಳಿಂದ ಅಧಿಗಮ್ಯನಾದ (ರುದ್ರನನ್ನು) | **ನಮಸಾ**—ನಮಸ್ಕಾರಾದಿಗಳಿಂದ ಅಥವಾ ಹವಿರ್ಲಕ್ಷಣರೂಪವಾದ ಅನ್ನವನ್ನರ್ಪಿಸುವುದಕ್ಕಾಗಿ | **ದಿವಃ**—ಸ್ವರ್ಗಲೋಕದಿಂದ | **ನಿ ಹ್ವಯಾಮಹೇ**—ಆಹ್ವಾನಿಸೋಣ. (ಆಹೂತನಾದ ರುದ್ರನು) | **ಹಸ್ತೇ**—ತನ್ನ ಕೈಯಲ್ಲಿ | **ವಾರ್ಯಾಣಿ**—ಎಲ್ಲರಿಗೂ ಬೇಕಾದ | **ಭೇಷಜಾ**—ಓಷಧಿಗಳನ್ನು | **ಬಿಭ್ರತ್**—ಧರಿಸಿದವನಾಗಿ | **ಅಸ್ಮಭ್ಯಂ**—(ಸ್ತೋತೃಗಳಾದ) ನಮಗೆ | **ಶರ್ಮ**—ಆರೋಗ್ಯರೂಪವಾದ ಸುಖವನ್ನೂ | **ವರ್ಮ**—ರಕ್ಷಕವಾದ ಕವಚಾದಿಗಳನ್ನೂ | **ಛರ್ದಿಃ**—ವಾಸಮಾಡುವುದಕ್ಕೆ ಮನೆಯನ್ನೂ | **ಯಂಸತ್**—ಅನುಗ್ರಹಿಸಲಿ.

|| ಭಾವಾರ್ಥ ||

ದೃಢಾಂಗನೂ, ಉತ್ಕೃಷ್ಟ ಆಹಾರಯುಕ್ತನೂ, (ಒಳ್ಳೆಯ) ಕಾಂತಿಯುಳ್ಳವನೂ, ಜಟಾಧಾರಿಯೂ, ಮಹಾತೇಜಸ್ವಿಯೂ, ವೇದೈಕಗಮ್ಯನೂ ಆದ ರುದ್ರನನ್ನು ನಮಸ್ಕಾರಪೂರ್ವಕವಾಗಿ ದೇವಲೋಕದಿಂದ ಆಹ್ವಾನಿಸೋಣ. (ನಮ್ಮಿಂದ ಆಹೂತನಾದ ರುದ್ರನು) ತನ್ನ ಕೈಯಲ್ಲಿ ಓಷಧಿಗಳನ್ನು ಧರಿಸಿ (ಬಂದು), ನಮಗೆ ಆರೋಗ್ಯ ರಕ್ಷಕಗಳಾದ ಕವಚಾದಿ ಆಯುಧಗಳನ್ನೂ, ವಾಸಗೃಹಗಳನ್ನೂ ಅನುಗ್ರಹಿಸಲಿ.

## English Translation.

We invoke from heaven, with reverence, him who has excellent food who is radiant, and has braided hair, who is brilliant, and is to be ascertained (by sacred study), holding in his hands excellent medicaments: may he grant us health, defensive armour, and a (secure) dwelling.

॥ ವಿಶೇಷವಿಷಯಗಳು ॥

**ವರಾಹಂ—ವರಾಹಾರಂ ಉತ್ಕೃಷ್ಟಭೋಜನಂ ।** ರುದ್ರನು ಉತ್ತಮವಾದ ಆಹಾರವನ್ನು ಭೋಜನ ಮಾಡುವವನು ಅಥವಾ ಅತಿಶಯವಾಗಿ ಭೋಜನಮಾಡುವವನು ಅಥವಾ **ವರಾಹವತ್ ದೃಢಾಂಗಂ** ವರಾಹ (ಕಾಡುಹಂದಿ) ದ ಶರೀರದ ಹಾಗೆ ದೃಢವಾದ ಶರೀರವುಳ್ಳವನು ಎಂದು ಸಾಯಣರು ಅರ್ಥವನ್ನು ವಿವರಿಸಿರುವರು. ಸ್ಕಂದಸ್ವಾಮಿಗಳು—**ವರಾಹನಾಮಾಸುರಃ ತತ್ಸದೃಶಃ** ವರಾಹನೆಂಬ ಅಸುರನಿಗೆ ಸಮಾನವಾದ ಶಕ್ತಿಯುಳ್ಳವನು ರುದ್ರನು. **ಅಥವಾ ವರಾಹ ಇತಿ ಮೇಘನಾಮ ತತ್ಸದೃಶಮ್ ಏಕದೇಶಸಾದೃಶ್ಯೇನ ಚೈಷ ಸಮಸ್ತಸಾದೃಶ್ಯ ವ್ಯಪದೇಶಃ ರುದ್ರಸ್ಯ ನೀಲತ್ವಾತ್ ಕಂಠೋ ಮೇಘಸದೃಶಃ । ಮೇಘಸದೃಶಕಂಠಮಿತ್ಯರ್ಥಃ ।** ವರಾಹ ಶಬ್ದವು ಮೂವತ್ತುರು ಮೇಘನಾಮಗಳ ಮಧ್ಯದಲ್ಲಿ (ನಿ. ೨-೨೧) **ಉಕ್ತವಾಗಿರುವುದರಿಂದ** ವರಾಹಶಬ್ದಕ್ಕೆ ಮೇಘವೆಂದು ಅರ್ಥ. ಉಪಮಾನೋಪಮೇಯಗಳಿಗೆ ಸಮಗ್ರವಾದ ರೀತಿಯಿಂದ ಸಾದೃಶ್ಯವನ್ನು ಹೇಳುವಂತೆ ಏಕದೇಶ (ಒಂದು ಅಂಶದಲ್ಲಿ) ದಲ್ಲಿ ಹೋಲಿಕೆಯನ್ನು ಹೇಳುವಕಾರಣ ರುದ್ರನ ಕಂಠಕ್ಕೆ ಮೇಘವನ್ನು ಹೋಲಿಸಿದೆ. ರುದ್ರನ ಕಂಠವು ಕಪ್ಪಾಗಿ ಮೇಘದ ಕಾಂತಿಯನ್ನು ಹೊಂದಿರುವ ಕಾರಣ ಗುಣವನ್ನು ನಿಮಿತ್ತಮಾಡಿಕೊಂಡು ವರಾಹ ಶಬ್ದಕ್ಕೆ ಮೇಘಕ್ಕೆ ಸದೃಶವಾದ ಕಂಠವನ್ನು ರುದ್ರನು ಹೊಂದಿ ಇರುವನು ಆದ್ದರಿಂದ ವರಾಹ ಶಬ್ದವ್ಯಪದಿಷ್ಟನಾಗಿರುವನು. **ಅಥವಾ ವರಾಹಃ ಸೂಕರ ಉಚ್ಯತೇ ತದಾಕಾರಂ ದೇವತಾ ಹಿ ತಂ ತಮಾಕಾರಂ ಮಹಾಭಾಗ್ಯ-ಯೋಗಾತ್ ಭಜತೇ । ಅತ ಉಪಪನ್ನೋ ಹಿ ರುದ್ರಸ್ಯ ವರಾಹಾಕಾರವ್ಯಪದೇಶಃ ।** ವರಾಹ ಶಬ್ದವು ಸೂಕರ (ಹಂದಿ) ಎಂಬ ಅರ್ಥವನ್ನು ಬೋಧಿಸುವುದು. ದೇವತೆಗಳು ತಮ್ಮ ಶಕ್ತಿ ಪ್ರಭಾವದಿಂದಲೂ ತಪಸ್ಸಿನ ಸಿದ್ಧಿಯಿಂದಲೂ ತಮಗೆ ಅಪೇಕ್ಷಿತವಾದ ಆಕಾರಗಳನ್ನೂ ಧರಿಸುವ ಕಾರಣ ರುದ್ರನೂ ಕೂಡ ವರಾಹದ ಆಕಾರವನ್ನು ಹೊಂದಿರುವನು ಎಂದು ಮೂರು ವಿಧವಾಗಿ ಅರ್ಥವನ್ನು ವಿವರಿಸಿರುವರು.

ನಿರುಕ್ತಕಾರರು—

**ವರಾಹೋ ಮೇಘೋ ಭವತಿ । ವರಾಹಾರಃ ವರಮಾಹಾರಮಾಹಾರ್ಷೀಃ ಇತಿ ಚ ಬ್ರಾಹ್ಮಣಂ ॥**

(ನಿ. ೫-೪)

ವರಾಹ ಶಬ್ದಕ್ಕೆ ಮೇಘವೆಂಬುದಾಗಿಯೂ, **ವರಂ ಆಹರತೀತಿ ವರಾಹಃ ವರಂ । ಮೂಲಂ ವಹತೀತಿ ವರಾಹಃ** ಭೂಮಿಯಲ್ಲಿರುವ ಬೇರುಗಳನ್ನು (ಗೆಡ್ಡೆಗಳನ್ನು) ಮೇಲಕ್ಕೆ ತೆಗೆಯುವುದರಿಂದ ವರಾಹವೆನಿಸಿರುವುದು. ಅಥವಾ ಉದಕವನ್ನು ತರುವುದರಿಂದ ವರಾಹವೆನಿಸುವುದು ಎಂದು ಎರಡು ವಿಧವಾಗಿಯೂ ಅರ್ಥವನ್ನು ವಿವರಿಸಿರುವರು.

**ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಞ್ಚಾರ್ವನ್ನಾ ।**
**ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ ವಿಧ್ಯದ್ವರಾಹಂ ತಿರೋ ಅದ್ರಿಮಸ್ತಾ ॥**

(ಋ. ಸಂ. ೧-೬೧-೭)

ಈ ಋಕ್ಕಿನಲ್ಲಿ ವರಾಹ ಶಬ್ದವು ಮೇಘವಾಚಕವಾಗಿ ಪ್ರಯುಕ್ತವಾಗಿರುತ್ತದೆ.

**ವಿಶ್ವೇತ್ತಾ ವಿಷ್ಣುರಾಭರದುರುಕ್ರಮಸ್ತ್ವೇಷಿತಃ ।**
**ಶತಂ ಮಹಿಷಾನ್ ಕ್ಷೀರಪಾಕಮೋದನಂ ವರಾಹಮಿಂದ್ರ ಏಮುಷಂ ॥**

(ಋ ಸಂ. ೮–೭೭–೧೦)

**ಅಯಮಪೀತರೋ ವರಾಹ ಏತಸ್ಮಾದೇವ ಬೃಹತಿ ಮೂಲಾನಿ ವರಂ ವರಂ ಮೂಲಂ ಬೃಹತೀತಿ ವಾ ॥** (ನಿ. ೫-೪).

ವರಾಹ ಶಬ್ದದ ಅರ್ಥದ ನಿರ್ವಚನಕ್ರಮವೂ ಇನ್ನೊಂದು ವಿಧವಾಗಿರುವುದು ಎಂದು ಹೇಳಿ ಈ ಋಕ್ಕನ್ನು ಉದಹರಿಸಿರುವ ನಿರುಕ್ತಕಾರರೂ ವರಾಹ ಶಬ್ದಕ್ಕೆ ಅಸುರನೆಂಬ ಅರ್ಥವೂ ಇರುವುದೆಂದು ಅರ್ಥಮಾಡಿ ವರಮಾಹಾರ ಮಾಹಾರ್ಷೀಃ ಎಂದು ಮೈತ್ರಾಯಣೀಯ ಬ್ರಾಹ್ಮಣವಾಕ್ಯವನ್ನು ಉದಾಹರಿಸಿರುವರು. ಮತ್ತು—

**ಅಂಗಿರಸೋಽಪಿ ವರಾಹಾ ಉಚ್ಯಂತೇ**—ಅಂಗಿರಾ ಋಷಿಗಳೂ ವರಾಹ ಶಬ್ದವಾಚ್ಯರಾಗಿರುವರು ಎಂದು ವರಾಹಶಬ್ದಾರ್ಥ ನಿರ್ವಚನಮಾಡಿ—

**ಸ ಈಂ ಸತ್ಯೇಭಿಃ ಸಖಿಭಿಃ ಶುಚದ್ಭಿರ್ಗೋಧಾಯಸಂ ವಿ ಧನಸೈರದರ್ದಃ ।**
**ಬ್ರಹ್ಮಣಸ್ಪತಿರ್ವೃಷಭಿರ್ವರಾಹೈರ್ಘರ್ಮಸ್ವೇದೇಭಿರ್ದ್ರವಿಣಂ ವ್ಯಾನಟ್ ॥**

(ಋ. ಸಂ. ೧೦–೬೭–೭)

ಈ ಋಕ್ಕಿನಲ್ಲಿ ಅಂಗಿರಸ್ಸುಗಳೂ ವರಾಹ ಶಬ್ದವಾಚ್ಯರಾಗಿರುವರು.

**ವಿ ತೇತ್ವೈನ್ನ ಯೋಜನಮಚೇತಿ ಸಸ್ವರ್ಹ ಯನ್ಮರುತೋ ಗೋತಮೋ ವಃ ।**
**ಪಶ್ಯನ್ ಹಿರಣ್ಯಚಕ್ರಾನಯೋದಂಷ್ಟ್ರಾನ್ ವಿಧಾವತೋ ವರಾಹೂನ್ ।**

(ಋ. ಸಂ. ೧–೮೮–೫)

**ಅಥಾಪ್ಯೇತೆ ಮಾಧ್ಯಮಿಕಾ ದೇವಗಣಾ ವರಾಹವ ಉಚ್ಯಂತೇ** ಮಧ್ಯಸ್ಥಾನದೇವತೆಗಳು (ಅಂತರಿಕ್ಷದಲ್ಲಿರುವ ದೇವತೆಗಳು) **ವರಾಹವಃ** ಎಂದು ವ್ಯಪದಿಷ್ಟರಾಗುವರು ಎಂದು ಹೇಳಿ ಈ ಋಕ್ಕನ್ನು ವಿವರಿಸಿರುವರು. ಹೀಗೆ ಹೇಳಿರುವ ನಿರುಕ್ತಕಾರರ ಅಭಿಪ್ರಾಯವನ್ನು ಅನುಸರಿಸಿ ಸ್ಕಂದಸ್ವಾಮಿಗಳು ಮೂರು ವಿಧವಾದ ಅರ್ಥವನ್ನೂ, ಸಾಯಣರು ಎರಡು ವಿಧವಾದ ಅರ್ಥವನ್ನೂ ವರಾಹ ಶಬ್ದಕ್ಕೆ ವಿವರಿಸಿರುತ್ತಾರೆ. ಆದರೆ ಈ ಋಕ್ಕಿನಲ್ಲಿ ವರಾಹ ಶಬ್ದವು ಉಕ್ತವಾಗಿರುವುದು, **ಮಾಧ್ಯಮಿಕಾಃ ದೇವಗಣಾಃ ವರಾಹವಃ** ಎಂಬುವದಕ್ಕೆ **ತೇ ಸಪ್ತ ಸಪ್ತ ಮರುತಾಂ ಗಣಾಃ** ಎಂದು **ಮರುದ್ಗಣ**ವೆಂದು ಅರ್ಥವನ್ನು ಹೇಳುವುದರಿಂದ ಬಹುವಚನವು ಉಪಪತ್ತಿಯಾಗಿರುವುದು ಎಂದು ವ್ಯಾಖ್ಯಾನಮಾಡಿರುವರು. **ಏಕದೇವತಾ ವಿಷಯೋಽಪಿ ಕದಾಚಿತ್ ವರಾಹಶಬ್ದಃ ಭವತ್ಯೇವ** ನಲವತ್ತೊಂಭತ್ತು ಮಂದಿ ಇರುವ ಮರುತ್ತುಗಳ ವಿಷಯದಲ್ಲಿ **ವರಾಹವಃ** ಎಂದು ಪ್ರಯುಕ್ತವಾಗಿರುವಂತೆ, **ಏಕದೇವತಾ** ವಿಷಯದಲ್ಲಿ ವರಾಹಶಬ್ದವು ಪ್ರಯುಕ್ತವಾಗಿರುವುದು ಎಂದು ಅರ್ಥವನ್ನು ವಿವರಿಸಿ **ದಿವೋ ವರಾಹಂ** ಎಂಬ ಈ ಋಕ್ಕನ್ನೇ ಉದಹರಿಸಿರುತ್ತಾರೆ.

**ಅರುಷಂ—ಆರೋಚಮಾನಂ** ಪ್ರಕಾಶಿಸುತ್ತಿರುವನು ಎಂದು ಸಾಯಣರೂ, ಸ್ಕಂದಸ್ವಾಮಿಗಳು—**ಅರುಷತಿರ್ಗತಿಕರ್ಮಾ ಗಂತಾರಂ ಶತ್ರೂನ್ ಯಜ್ಞಾನ್ ವಾ ಪ್ರತಿ ।** ಗಮನವೆಂದು ಅರ್ಥವುಳ್ಳದ್ದಾದ ಕಾರಣ ಅರುಷ ಪದವು ಶತ್ರುಗಳಿಗೆ ಎದುರಾಗಿ ಹೋಗುವವನು ಅಥವಾ ಯಜ್ಞಕ್ಕಾಗಿ ಹೋಗುವವನು ಎಂದು ಅರ್ಥವನ್ನು ವಿವರಿಸಿರುವರು.

**ರೂಪಂ—ನಿರೂಪಣೀಯಂ ವೇದಾಂತೈರಧಿಗಮ್ಯಂ** ರುದ್ರನ ಸ್ವರೂಪವು ವೇದವೇದಾಂತಗಳಿಂದ (ವಿಚಾರ) ವಿಮರ್ಶೆಮಾಡಲ್ಪಡ ವುದಾಗಿಯೂ ಮತ್ತು ಅದರಿಂದಲೇ ತಿಳಿಯತಕ್ಕದ್ದಾಗಿಯೂ ಇರುವ ಕಾರಣ ರುದ್ರನು ವೇದಾಂತಗಳಿಂದ ತಿಳಿಯಲ್ಪಡುವ ಆಕಾರವುಳ್ಳವನು ಎಂದು ಅರ್ಥವನ್ನು ಹೇಳಿರುತ್ತಾರೆ. ಸ್ಕಂದಸ್ವಾಮಿಗಳು **ಅಂತರ್ಣೀತ ಮತ್ವರ್ಥೋऽತ್ರ ರೂಪಶಬ್ದೋ ದ್ರಷ್ಟವ್ಯಃ । ಮಹಾಭಾಗ್ಯಯೋಗಾದನೇಕಪ್ರಕಾರೈಃ ರೂಪೈಃ ರೂಪವಂತಂ** ಇಲ್ಲಿ ರೂಪಶಬ್ದವು ಮತುಬರ್ಥದಿಂದ ಕೂಡಿದ್ದಾಗಿ ರೂಪವಂತನೆಂದು ಅರ್ಥವುಳ್ಳದ್ದಾದ ಕಾರಣ ರುದ್ರನು ತನ್ನ ನಿರತಿಶಯವಾದ ತಪಸ್ಸು, ಮತ್ತು ಪುಣ್ಯ ಇವುಗಳಿಂದ ಅನೇಕ ವಿಧವಾದ ಆಕಾರಗಳಿಂದ ಮೆರೆಯುತ್ತಿರುವನು ಎಂದು ಅರ್ಥವನ್ನು ಹೇಳುವರು.

**ನಮಸಾ**—ನಮಸ್ಕಾರಗಳಿಂದಲೂ ಅಥವಾ ಹವಿಸ್ಸಿನರೂಪವಾದ ಅನ್ನವನ್ನು ಅರ್ಪಿಸುವುದರಿಂದಲೂ ರುದ್ರನನ್ನು ಸ್ವರ್ಗದಿಂದ ಇಲ್ಲಿಗೆ ಬರುವಂತೆ ಆಹ್ವಾನಮಾಡುವೆವು ಎಂದು ಸಾಯಣರು ಅರ್ಥಮಾಡಿರುವಂತೆಯೇ ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿ **ನಮಃ**ಶಬ್ದಕ್ಕೆ ಸ್ತುತಿ ಎಂದು ವಿಶೇಷಾರ್ಥವನ್ನು ಹೇಳಿರುವರು.

**ವಾರ್ಯಾಣಿ ಭೇಷಜಾ ಹಸ್ತೇ ಬಿಭ್ರತ್**— ರುದ್ರನು ಎಲ್ಲರಿಗೂ ಸ್ಪೃಹಣೀಯವಾದ ರೋಗಗಳನ್ನು ನಾಶಪಡಿಸಲು ತಕ್ಕ ಶಕ್ತಿಯುಳ್ಳದ್ದಾಗಿರುವ ಔಷಧಿಗಳನ್ನು ಯಾವಾಗಲೂ ತನ್ನ ಹಸ್ತಗಳಲ್ಲಿ ಧರಿಸಿ ಎಲ್ಲರಿಗೂ ಸುಖವನ್ನು ಉಂಟುಮಾಡುತ್ತಿರುವನು. ಆದ್ದರಿಂದ ರುದ್ರನು ನಮ್ಮ ಯಜ್ಞಕ್ಕೆ ಬಂದು ನಮಗೆ ಸುಖವನ್ನು ಉಂಟುಮಾಡಲಿ ಎಂದು ಪ್ರಾರ್ಥಿಸಿದೆ. ರುದ್ರನು ಓಷಧಿಗಳಿಗೆ ಅಧಿಪತಿಯೆಂದು—

**ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾನಸ್ತೋಕೇಷು ತನಯೇಷು ರೀರಿಷಃ ।**
**ಓಷಧೀನಾಂ ಪತಯೇ ನಮಃ ॥** (ಋ. ಸಂ. ೭-೪೬-೩)

ಇತ್ಯಾದಿ ಮಂತ್ರಗಳಲ್ಲಿ ಹೇಳಿರುವುದು.

**ವರ್ಮ—ವರ್ಮಾತ್ರ ಕವಚಮುಚ್ಯತೇ ।** ಶತ್ರುಗಳಿಂದ ಉಂಟಾಗುವ ಹಿಂಸೆಯನ್ನು ನಾಶಮಾಡುವ ಸಾಮರ್ಥ್ಯವುಳ್ಳ ಕವಚವೆಂದು—**ಆಯುಧಾನಾಂ ನಿವಾರಕಂ** ಶತ್ರುಗಳು ಪ್ರಯೋಗಿಸಿದ ಆಯುಧಗಳಿಂದ ಅಪಾಯವು ಉಂಟಾಗದಂತೆ ರಕ್ಷಿಸುವ ಕವಚವನ್ನು ರುದ್ರನು ನಮಗೆ ಪ್ರೀತನಾಗಿ ಅನುಗ್ರಹಿಸಲಿ ಎಂದು ರುದ್ರನನ್ನು ಪ್ರಾರ್ಥಿಸಿದೆ.

**ಛರ್ದಿಃ**—**ಗಯಃ ಕೃದರಃ** ಮೊದಲಾದ ಇಪ್ಪತ್ತೆರಡು ಗೃಹನಾಮಗಳಲ್ಲಿ ಈ ಶಬ್ದವು (ನಿ. ೨-೧೧) ಉಕ್ತವಾಗಿರುವುದರಿಂದ ಗೃಹವೆಂದು ಅರ್ಥ. ನಾವು ಸುಖವಾಗಿ ವಾಸಮಾಡುವುದಕ್ಕೆ ತಕ್ಕಂತೆ ಗೃಹವನ್ನು ಅನುಗ್ರಹಿಸಲಿ ಎಂದು ರುದ್ರನನ್ನು ಪ್ರಾರ್ಥಿಸಿದೆ. ವರಾಹಂ ಅರುಷಂ ಕಪರ್ದಿನಂ ತ್ವೇಷಂ ರೂಪಂ ಎಂಬ ವಿಶೇಷಣಗಳಿಂದ ಪ್ರತಿಪಾದಿತವಾದ ಪ್ರಭಾವವುಳ್ಳ ರುದ್ರನನ್ನು ನಮಸ್ಕಾರ ಮತ್ತು ಹವಿಸ್ಸುಗಳ ಅರ್ಪಣಗಳಿಂದ ಪ್ರಾರ್ಥಿಸಿ, ರೋಗ ಶಾಂತಿಯನ್ನೂ ಸುಖವನ್ನೂ ಶತ್ರುಗಳಿಂದ ಯಾವ ವಿಧವಾದ (ತೊಂದರೆ) ಅಪಾಯವೂ ಆಗದಿರುವ ಕವಚವನ್ನೂ ವಾಸಮಾಡುವ ವಸತಿಯನ್ನು ಅನುಗ್ರಹಿಸಲು ಈ ಋಕ್ಕಿನಲ್ಲಿ ಪ್ರಾರ್ಥನೆಮಾಡಿರುವುದರಿಂದ ರುದ್ರನು ತನ್ನನ್ನು ಆಶ್ರಯಿಸಿದವರಿಗೆ ಇವುಗಳನ್ನು ಅನುಗ್ರಹಿಸುವನೆಂದು ತಿಳಿಯುವುದಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ದಿವಃ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕಪರ್ದಿನಂ**—ಕಪರ್ದಃ ಅಸ್ಯ ಅಸ್ತಿ ಇತಿ ಕಪರ್ದೀ. **ಅತಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಬಿಭ್ರತ್**—ಡುಭೃಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಅಭ್ಯಾಸಕ್ಕೆ ಇತ್ವ. **ಸಾರ್ವಧಾತುಕಮಪಿತ್** ಸೂತ್ರದಿಂದ ಶತೃವಿಗೆ ಙಿದ್ವದ್ಭಾವವಿರುವುದರಿಂದ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ಯಣಾದೇಶ. **ನಾಭ್ಯಸ್ತಾಚ್ಛತುಃ** ಎಂಬುದರಿಂದ ನುಮಾಗಮ ಪ್ರತಿಷೇಧ ಬರುತ್ತದೆ.

**ಭೇಷಜಾ**—ಭಿಷ. ಚಿಕಿತ್ಸಾಯಾಂ. ಧಾತು. ಕಣ್ಡ್ವಾದಿಯಲ್ಲಿ ಸೇರಿದೆ **ಕಂಡ್ವಾದಿಭ್ಯೋಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯತ್. ಪಚಾದಿಯು ಆಕೃತಿಗಣವಾದುದರಿಂದ ಆದರಿಂದ ಅಚ್ ಪ್ರತ್ಯಯ. **ಯಸ್ಯಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಲೋಪ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. ಇದು **ಸುಮಂಗಲಭೇಷಜಾಚ್ಚ** (ಪಾ. ಸೂ. ೪-೧-೩೦) ಎಂಬಲ್ಲಿರುವ ನಿಪಾತನದಿಂದ ಸಿದ್ಧವಾಗುತ್ತದೆ. ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ವಾರ್ಯಾಣಿ**—ವೃಙ್ ಸಂಭಕ್ತೌ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಅಚೋಞ್ಣಿತಿ** ಸೂತ್ರದಿಂದ ಋಕಾರಕ್ಕೆ ವೃದ್ಧಿ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ಅಟ್ಕುಪ್ವಾಙ್ನುಮ್**—ಎಂಬುದರಿಂದ ಣತ್ವ ಬರುತ್ತದೆ. ತಿತ್ಸ್ವರವು ಸ್ರಾಪ್ತವಾದರೆ **ಈಡವಂದ**—(ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಛರ್ದಿಃ**—ಉಛೃದಿರ್ ದೀಪ್ತಿದೇವನಯೋಃ ಧಾತು. ಛೃದ್ಯತೇ ದೀಪ್ಯತೇ ಸುವರ್ಣಾದಿಭಿರ್ಧನೈಃ ಪ್ರಕಾಶ್ಯತೇ ಇತಿ ಛರ್ದಿಃ ಗೃಹಂ (ಚಿನ್ನ ಮುಂತಾದ ದ್ರವ್ಯದಿಂದ ಪ್ರಕಾಶಿಸಲ್ಪಡುವುದು ಮನೆ). **ಅರ್ಚಿ ಶುಚಿ ಹು ಸೃಪಿ ಛಾದಿಛರ್ದಿಭ್ಯಃ ಇಸಿಃ** (ಉ. ಸೂ. ೨-೨೬೫) ಎಂಬುದರಿಂದ ಇಸಿ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧಗೆ ಗುಣ. ಪ್ರತ್ಯಯಸ್ವರ ಬರುತ್ತದೆ.

**ಯಂಸತ್**—ಯಮ ಉಪರಮೇ. ಧಾತು. ಲೇಟ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಸಿಪ್ ವಿಕರಣ. ಮಕಾರಕ್ಕೆ ಅನುಸ್ವಾರ ಅತಿಙಂತಪದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೫ ‖



‖ ಸಂಹಿತಾಪಾಠಃ ‖

ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ
ರುದ್ರಾಯ ವರ್ಧನಂ ।
ರಾಸ್ವಾ ಚ ನೋ ಅಮೃತ ಮರ್ತಭೋಜನಂ ತ್ಮನೇ ತೋಕಾಯ
ತನಯಾಯ ಮೃಳ ‖ ೬ ‖

‖ ಪದಪಾಠಃ ‖

**ಇದಂ । ಪಿತ್ರೇ । ಮರುತಾಂ । ಉಚ್ಯತೇ । ವಚಃ । ಸ್ವಾದೋಃ । ಸ್ವಾದೀಯಃ ।**
**ರುದ್ರಾಯ । ವರ್ಧನಂ ।**
**ರಾಸ್ವ । ಚ । ನಃ । ಅಮೃತ । ಮರ್ತಽಭೋಜನಂ । ತ್ಮನೇ । ತೋಕಾಯ ।**
**ತನಯಾಯ । ಮೃಳ ‖ ೬ ‖**

॥ ಸಾಯಣಭಾಷ್ಯಂ ॥

ಇದಂ ಸ್ತುತಿಲಕ್ಷಣಂ ವಚೋ ಮರುತಾಮೇಕೋನಪಂಚಾಶತ್ಸಂಖ್ಯಾಕಾನಾಂ ದೇವವಿಶೇಷಾಣಾಂ ಪಿತ್ರೇ ಜನಕಾಯ ರುದ್ರಾಯೇಶ್ವರಾಯೋಚ್ಯತೇ । ಉಚ್ಚಾರ್ಯತೇ । ಕೀದೃಶಂ । ಸ್ವಾದೋಃ ಸ್ವಾದೀಯೋ ರಸವತೋ ಮಧುಘೃತಾದೇರಪಿ ಸ್ವಾದುತರಂ । ಅತಿಶಯೇನ ಹರ್ಷಜನಕಮಿತ್ಯರ್ಥಃ । ವರ್ಧನಂ ಸ್ತುತ್ಯಸ್ಯ ಪ್ರವರ್ಧಕಂ । ಸ್ತೋತ್ರೇಣ ಹಿ ದೇವತಾ ಹೃಷ್ಟಾ ಸತೀ ಪ್ರವರ್ಧತೇ । ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾಞ್ಜಿಗಾಯ । ತದಾನೀಂ ದಿತಿರಸುರಮಾತೇಂದ್ರಹನನಸಮರ್ಥಂ ಪುತ್ರಂ ಕಾಮಯಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ । ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ । ಪುನರಪ್ಯೇಕೈಕಂ ಸಪ್ತಖಂಡಮಕರೋತ್ । ತೇ ಸರ್ವೇ ಗರ್ಭೈಕದೇಶಾ ಯೋನೇರ್ನಿರ್ಗತ್ಯಾರುದನ್ । ಏತಸ್ಮಿನ್ನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರಾವಿಮಾನ್ದದೃಶತುಃ । ಮಹೇಶಂ ಪ್ರತಿ ಪಾರ್ವತ್ಯೇವಮುವಾಚ । ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯಂತಾಮೇವಂ ತ್ವಯಾ ಕಾರ್ಯಂ ಮಯಿ ಚೇತ್ಪ್ರೀತಿರಸ್ತೀತಿ । ಸ ಚ ಮಹೇಶ್ವರಸ್ತಾನ್ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾನ್ಪುತ್ರಾನ್ಕೃತ್ವಾ ಗೌರ್ಯೈ ಪ್ರದದೌ ತವೇಮೇ ಪುತ್ರಾಃ ಸಂತ್ವಿತಿ । ಅತಃ ಸರ್ವೇಷು ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ । ರೌದ್ರೇಷು ಚ ಮರುತಾಂ ಪಿತಾ ರುದ್ರ ಇತಿ । ಅಪಿ ಚ ಹೇ ಅಮೃತ ಮರಣರಹಿತ ರುದ್ರ ಮರ್ತಭೋಜನಂ ಮರ್ತಾನಾಂ ಮನುಷ್ಯಾಣಾಂ ಭೋಗಪರ್ಯಾಪ್ತಮನ್ನಂ ನೋಽಸ್ಮಭ್ಯಂ ರಾಸ್ವ । ಪ್ರಯಚ್ಛ । ತಥಾ ತ್ಮನೇ ಆತ್ಮನೇ । ದ್ವಿತೀಯಾರ್ಥೇ ಚತುರ್ಥೀ । ಮಾಂ । ತೋಕಾಯ ತೋಕಂ ಪುತ್ರಂ ತನಯಾಯ ತನಯಂ ತತ್ಪುತ್ರಂ ಚ ಮೃಳ । ಸುಖಯ ॥ ಪಿತ್ರೇ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ರಾಸ್ವ । ರಾ ದಾನೇ । ವ್ಯತ್ಯಯೇನಾತ್ಮನೇಪದಂ । ತ್ಮನೇ । ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯತ್ರಾಚೋಽನ್ಯತ್ರಾಪಿ ಛಂದಸಿ ದೃಶ್ಯತೇ । ಪಾ. ೬-೪-೧೪೧-೧ । ಇತಿ ವಚನಾದಾತ್ಮನ ಆಕಾರಲೋಪಃ ॥

॥ ಪ್ರತಿಪದಾರ್ಥ ॥

**ಸ್ವಾದೋಃ**—ರಸವತ್ತಾದ ಮಧುಘೃತಾದಿಗಳಿಗಿಂತ । **ಸ್ವಾದೀಯಃ**—ರಸವತ್ತಾದ (ರುಚಿಕರವಾದ, ಹರ್ಷಕರವಾದ)। **ವರ್ಧನಂ**—ಪ್ರವರ್ಧಕವಾದ। **ಇದಂ ವಚಃ**—ಸ್ತುತಿರೂಪವಾದ ಈ ವಾಕ್ಯವು। **ಮರುತಾಂ**—ಮರುದ್ದೇವತೆಗಳಿಗೆ । **ಪಿತ್ರೇ**—ಜನಕನಾದ । **ರುದ್ರಾಯ**—ರುದ್ರನಿಗೋಸ್ಕರ । **ಉಚ್ಯತೇ**—ಉಚ್ಚರಿಸಲ್ಪಡುತ್ತದೆ । **ಅಮೃತ**—ಮರಣರಹಿತನಾದ ಎಲೈ ರುದ್ರನೇ । **ಮರ್ತಭೋಜನಂ**—ಮನುಷ್ಯರಿಂದ ಭೋಗ್ಯವಾದ ಅನ್ನವನ್ನು । **ನಃ**—ನಮಗೆ । **ರಾಸ್ವ**—ಕೊಡು । (**ತಥಾ**—ಹಾಗೆಯೇ) । **ತ್ಮನೇ**—ನನ್ನನ್ನೂ । **ತೋಕಾಯ**—(ನನ್ನ) ಮಗನನ್ನೂ । **ತನಯಾಯ**—(ಅವನ) ಮಗನನ್ನೂ (ನನ್ನ ಮೊಮ್ಮಗನನ್ನೂ) । **ಮೃಳ**—ಸುಖಿಗಳನ್ನಾಗಿ ಮಾಡು.

॥ ಭಾವಾರ್ಥ ॥

ಮರುತ್ಪಿತೃವಾದ ರುದ್ರನಿಗೋಸ್ಕರ ಮಧ್ವಾದಿಗಳಿಗಿಂತ ರುಚಿಕರವಾದ ಈ ಸ್ತುತಿವಾಕ್ಯಗಳನ್ನು ಉಚ್ಚರಿಸೋಣ. ಅಮರನಾದ ಎಲೈ ರುದ್ರನೇ, ನಮಗೆ ಮನುಷ್ಯಭೋಗ್ಯವಾದ ಅನ್ನವನ್ನು ಕೊಡು. (ಹಾಗೆಯೇ) ನನಗೂ, ನನ್ನ ಮಕ್ಕಳು ಮೊಮ್ಮಕ್ಕಳುಗಳಿಗೂ ಸುಖವನ್ನುಂಟುಮಾಡು.

English Translation.

This praise, the sweetest of the sweet, and cause of increase (to the reciter), is addressed to Rudra, the father of the Maruts: immortal Rudra grant us food sufficient for mortals, and bestow happiness on me, my son and my grandson.

॥ ವಿಶೇಷವಿಷಯಗಳು ॥

**ಮರುತಾಂ ಪಿತ್ರೇ**—ಮರುದ್ದೇವತೆಗಳು ನಲವತ್ತೊಂಭತ್ತು ಮಂದಿ ಇರುವರು ಮರುದ್ದೇವತೆಗಳ ಜನಕನಾದ ರುದ್ರನಿಗೆ ಎಂದು ಅರ್ಥವು ಇಂದ್ರನು ಅಸುರರನ್ನು ಜಯಿಸಿದಾಗ ಅಸುರಮಾತೆಯಾದ ದಿತಿಯು ಇಂದ್ರನನ್ನು ನಿಗ್ರಹಮಾಡಲು ಸಮರ್ಥನಾದ ಪುತ್ರನನ್ನು ಪಡೆಯುವ ಉದ್ದೇಶದಿಂದ ತಪಸ್ಸನ್ನು ಆಚರಿಸಿ ತನ್ನ ಪತಿಯು ಸೇವೆಯಿಂದ ಗರ್ಭವತಿಯಾದಳು. ಇಂದ್ರನು ಈ ವರ್ತಮಾನವನ್ನು ತಿಳಿದು ಮಾತೃಸೇವೆಯನ್ನು ಆಚರಿಸುವ ನೆಪದಿಂದ ದಿತಿಯ ಹತ್ತಿರದಲ್ಲಿ ಇರುತ್ತಾ ಸೂಕ್ಷ್ಮವಾದ ಆಕಾರವನ್ನು ಹೊಂದಿ ತನ್ನ ವಜ್ರಾಯುಧ ಸಹಿತನಾಗಿ ದಿತಿಯ ಉದರವನ್ನು ಪ್ರವೇಶಿಸಿ ಆಗರ್ಭವನ್ನು ಮೊದಲು ಏಳು ಭಾಗವಾಗಿಯೂ, ಅನಂತರ ಅವುಗಳಲ್ಲಿ ಪ್ರತಿಯೊಂದನ್ನು ಮತ್ತೆ ಏಳು ಏಳು ಚೂರುಗಳನ್ನಾಗಿ ಎಂದರೆ ಒಟ್ಟು ನಲವತ್ತೊಂಭತ್ತು ಚೂರುಗಳಾಗಿ ಸೀಳಿದನು. ಇದರಿಂದ ಆ ಗರ್ಭದ ಚೂರುಗಳು ಉದರದಿಂದ ಹೊರಗಡೆಗೆ ಜಾರಿ ಭೂಮಿಯಲ್ಲಿ ಬಿದ್ದಿರುವುದನ್ನು ಲೋಕಾನುಗ್ರಹಕ್ಕಾಗಿ ಸಂಚರಿಸುತ್ತಿರುವ ಪಾರ್ವತೀಪರಮೇಶ್ವರರು ನೋಡಿದರು. ಆಗ ಪಾರ್ವತಿಯು ಆ ಮಾಂಸಖಂಡಗಳ ವಿಷಯದಲ್ಲಿ ದಯೆಯನ್ನು ಹೊಂದಿ ತನ್ನ ಪತಿಯನ್ನು ಕುರಿತು ಇವುಗಳೆಲ್ಲ (ಜೀವ) ಪ್ರಾಣವನ್ನು ಹೊಂದಿ ಜೀವಿಸುವಹಾಗೆ ಮಾಡಬೇಕು. ಎಂದು ಬೇಡಿಕೊಂಡಕಾರಣ ಪರಮೇಶ್ವರನು ಆ ನಲವತ್ತೊಂಭತ್ತು ಮಾಂಸಖಂಡಗಳೂ ಒಂದೇಸಮನಾದ ರೂಪ, ಅಲಂಕಾರ, ವಯಸ್ಸು ಉಳ್ಳ ಪುತ್ರರನ್ನಾಗಿ ಮಾಡಿದನು. ಮತ್ತು ಇವರು ನಿನ್ನ ಮಕ್ಕಳು ಎಂದು ಪಾರ್ವತಿಗೆ ಹೇಳಿದನು. ಈ ಇತಿಹಾಸದಿಂದ ಮರುತ್ತುಗಳು ರುದ್ರ ಪುತ್ರರೆಂದೂ, ರುದ್ರನು ಮರುತ್ಪಿತನೆಂದೂ ಆಯಾಯ ಸೂಕ್ತಗಳಲ್ಲಿ ಹೇಳಲ್ಪಟ್ಟಿರುತ್ತದೆ.

**ಸ್ವಾದೋಃ ಸ್ವಾದೀಯಃ—ರಸವತೋ ಮಧುಘೃತಾದೇರಪಿ ಸ್ವಾದುತರಂ । ಅತಿಶಯೇನ ಹರ್ಷಜನಕಮಿತ್ಯರ್ಥಃ ।** ಈ ಪದವು **ಸ್ತುತಿಲಕ್ಷಣಂ ವಚಃ** ಸ್ತುತಿರೂಪವಾದ ವಾಕ್ಯ ಎಂಬ ಪದಕ್ಕೆ ವಿಶೇಷಣವಾಗಿದೆ. ಭೋಜನಮಾಡುವವರು; ಅಥವಾ ಭಕ್ಷ್ಯಭೋಜ್ಯಾದಿಗಳನ್ನು ಉಪಯೋಗಿಸುವವರು ಮಧುರವಾದ ಘೃತ, ಮಧು (ಜೇನು) ಇವುಗಳು ಹಿತವಾಗಿಯೂ ಪ್ರಿಯವಾಗಿಯೂ ಮನಸ್ಸಿಗೆ ಸಂತೋಷವನ್ನು

ಹೆಚ್ಚಿಸುವುದಾಗಿರುವಂತೆ ದೇವತೆಯ ಉದ್ದೇಶವಾಗಿ ಹೇಳಲ್ಪಡುವ ಅಥವಾ ದೇವತೆಯನ್ನು ಒಲಿಸಿಕೊಳ್ಳುವುದಕ್ಕಾಗಿ ಭಕ್ತಿಯಿಂದ ಹೇಳಲ್ಪಡುವ ವಚನವೂ ಆಯಾಯ ದೇವತೆಗೆ ತನ್ನ ಭಕ್ತನ ವಿಷಯದಲ್ಲಿ ಪ್ರೀತಿಯನ್ನು ಉಂಟುಮಾಡಿ ಮನಸ್ಸಿನಲ್ಲಿ ಸಂತೋಷವನ್ನು ಹೆಚ್ಚಿಸುವುದಾಗಿರುತ್ತದೆ. ಆದಕಾರಣದಿಂದಲೇ ಈ ಋಕ್ಕಿನಲ್ಲಿ **ವರ್ಧನಂ** ಎಂದು ಉಕ್ತವಾಗಿರುವುದು. **ವೃಧು ವೃದ್ಧೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ **ಸ್ತುತ್ಯಸ್ಯ ಪ್ರವರ್ಧಕಂ** ಸ್ತುತಿರೂಪವಾದ ವಚನವು ಸ್ತುತ್ಯವಾದ ದೇವತೆಯ ಅಥವಾ ಸ್ತುತಿಗೆ ವಿಷಯವಾದ ವಸ್ತುವಿನ (ಮಹಿಮೆ) ಗುಣಗಳನ್ನು ಪ್ರಕಟಮಾಡುವುದರ ಮೂಲಕ ಸ್ತುತ್ಯವಸ್ತುವಿನ ಮನಸ್ಸಿಗೆ ಸಂತೋಷವನ್ನು ಹೆಚ್ಚಿಸುವುದು. ಇದರಿಂದ ದೇವತೆಯು ಸ್ತೋತ್ರವನ್ನು ಕೇಳಿ ಸ್ತೋತ್ರಮಾಡುವವನಿಗೆ ಪ್ರಸನ್ನವಾಗುವುದು. **ಸ್ತೋತ್ರೇಣ ಹಿ ದೇವತಾ ಹೃಷ್ಟಾ ಸತೀ ಪ್ರವರ್ಧತೇ** ಎಂದು ಅರ್ಥವುಳ್ಳ ವ್ಯಾಖ್ಯಾನವನ್ನು ಸಾಯಣರು ವರ್ಧನ ಶಬ್ದಕ್ಕೆ ಹೇಳಿರುವರು. ಸ್ಕಂದಸ್ವಾಮಿಗಳೂ ಕೂಡ **ಸ್ತುತಿರ್ಹಿ ದೇವಾನಾಂ ವೃದ್ಧಿಕರೀ**—ಎಂದು ಹೇಳಿರುವರು. ಸ್ತುತಿಯು ದೇವತೆಗಳಿಗೆ ಬಲವನ್ನು ಹೆಚ್ಚುಮಾಡುವುದು ಎಂದು ಅರ್ಥವು.

**ಮರ್ತ ಭೋಜನಂ**—ಮರಣಧರ್ಮವುಳ್ಳವರಾದ ಮನುಷ್ಯರು ಮರ್ತರೆನಿಸಿರುವರು. ಇವರಿಗೆ ಭೋಗ್ಯವಸ್ತುವು (ಅನ್ನವು) ದೊರೆಯುವಂತೆ ಅನುಗ್ರಹಿಸಬೇಕೆಂದು ರುದ್ರನನ್ನು ಪ್ರಾರ್ಥಿಸಿದೆ. ಸ್ಕಂದಸ್ವಾಮಿಗಳು—**ಭೋಜನ** ಶಬ್ದವು ಇಪ್ಪತ್ತೆಂಟು **ಧನನಾಮಗಳಲ್ಲಿ** (ನಿ. ೩-೯) ಉಕ್ತವಾಗಿರುವುದರಿಂದ **ಮರ್ತಭೋಜನಂ** ಎಂಬ ಪದಕ್ಕೆ ಮನುಷ್ಯರಿಗೆ ಭೋಗಸಾಧನವಾದ ಧನವೆಂದು ಅರ್ಥವನ್ನು ವಿವರಿಸಿರುವರು.

**ತ್ಮನೇ—ಆತ್ಮನೇ, ದ್ವಿತೀಯಾರ್ಥೇ ಚತುರ್ಥೀ** । ಇಲ್ಲಿ ದ್ವಿತೀಯಾ ವಿಭಕ್ತಿಯ ಅರ್ಥದಲ್ಲಿ ಚತುರ್ಥೀ ವಿಭಕ್ತಿಯು ಪ್ರಯುಕ್ತವಾಗಿರುವುದರಿಂದ ತನ್ನನ್ನು ಎಂದು ಅರ್ಥವು. ಆತ್ಮ (ತಾನು) ಎಂಬ ಅರ್ಥದಲ್ಲಿ ಈ ಶಬ್ದವು ಇನ್ನೂ ಅನೇಕ ಋಕ್ಕುಗಳಲ್ಲಿ ಉಕ್ತವಾಗಿರುವುದು—

**ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿ ವೇದ ।**
**ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿ ವರ್ತೇತೇ ಅಹನೀ ಚಕ್ರಿಯೇವ ॥**

(ಋ. ಸಂ. ೧-೧೮೫-೧)

ಇಲ್ಲಿ **ತ್ಮನಾ—ಆತ್ಮನಾ** ಎಂದು ಅರ್ಥವಿವರಣೆಯು ಇರುವುದು.

**ತನ್ನಸ್ತುರೀಪಮದ್ಭುತಂ ಪುರು ವಾರಂ ಪುರು ತ್ಮನಾ ।**

(ಋ. ಸಂ. ೧-೧೪೨-೧೦)

ಈ ಋಕ್ಕಿನಲ್ಲಿ **ಪುರು ಹ್ಯಾತ್ಮನಾ ಬತ್ಮನಾ** ಎಂದು ವಿವರಣೆಯು ಇರುವುದು.

**ರಾಕಾಮಹಂ ಸುಹವಾಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ ಬೋಧತು ತ್ಮನಾ ।**

(ಋ. ಸಂ. ೨-೩೨-೪)

ಈ ಋಕ್ಕಿನಲ್ಲಿಯೂ ಕೂಡ ತ್ಮನಾ ಎಂಬ ಪದವು ಆತ್ಮನಾ ಎಂಬ ಅರ್ಥದಲ್ಲಿ ನಿರುಕ್ತವಾಗಿರುವುದು.

**ತನಯಾಯ—ತೋಕಾಯ। ತೋಕಂ ಪುತ್ರಂ, ತನಯಂ ತತ್ಪುತ್ರಂ** ತೋಕವೆಂದರೆ ಮಗನು. ತನಯನೆಂದರೆ ಮಗನ ಮಗನು ಎಂದು ಅರ್ಥವು. ತುಕ್, ತೋಕ, ತನಯ ಎಂಬ ಹದಿನೈದು ಅಪತ್ಯನಾಮಗಳಲ್ಲಿ (ನಿ. ೩-೨) ಉಕ್ತವಾಗಿರುವುದರಿಂದ ಮಗನೆಂದು ಅರ್ಥವು. ಆದರೆ—

**ಸಹಸ್ರಂ ತೇ ಸ್ವಪಿವಾತ ಭೇಷಜಾ ಮಾ ನಸ್ತೋಕೇಷು ತನಯೇಷು ರೀರಿಷಃ।**

(ಋ. ಸಂ. ೭-೪೬-೩)

**ಯೇನ ತೋಕಂ ಚ ತನಯಂ ಚ ಧಾಮಹೇ।**

(ಋ. ಸಂ. ೧-೯೨-೧೩)

ಈ ಋಕ್ಕುಗಳಲ್ಲಿ ತೋಕ, ತನಯ ಶಬ್ದಗಳಿಗೆ ಪುತ್ರರು, ಪೌತ್ರರು ಎಂದು ಅರ್ಥವನ್ನು ವಿವರಿಸಿದೆ. ಸ್ಕಂದಸ್ವಾಮಿಗಳು ಇದನ್ನು ಅನುಸರಿಸಿ ಹೀಗೆಯೇ ಅರ್ಥವನ್ನು ವಿವರಿಸಿ, ರುದ್ರನನ್ನು ಸೇವಿಸುವ ನಮ್ಮ ಪುತ್ರರು, ಪೌತ್ರರು ಎಂದು ಎಲ್ಲರಿಗೂ ರುದ್ರನು ಸುಖಕರನಾಗಿರಲಿ ಎಂದು ಪ್ರಾರ್ಥನೆಯು ಉಕ್ತವಾಗಿರುವುದೆಂದು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪಿತ್ರೇ**—ಪಿತೃ ಶಬ್ದವು ತೃಚ್ ಪ್ರತ್ಯಯವಾಗಿ ಉಣಾದಿಯಲ್ಲಿ ನಿಪಾತಿತವಾಗಿದೆ. ಚತುರ್ಥೀ ವಿಭಕ್ತಿ ಙೇ ಪರವಾದಾಗ, ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಉಚ್ಯತೇ**—ವಚ ಪರಿಭಾಷಣೇ. ಧಾತು, ಕರ್ಮಣಿಯಲ್ಲಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. **ಸಾರ್ವಧಾತುಕೇಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ವಚಿಸ್ವಪಿ**—(ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವರ್ಧನಂ**—ವೃಧು ವೃದ್ಧೌ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ರಾಸ್ವ**—ರಾ ದಾನೇ. ಧಾತು, **ವ್ಯತ್ಯಯೋಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇ ಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಥಾಸಃ ಸೇ** (ಪಾ. ಸೂ. ೩-೪-೮೦) ಎಂಬುದರಿಂದ ಸೇ ಆದೇಶ ಬಂದಾಗ **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಮೃತ**—ನ ವಿದ್ಯತೇ ಮೃತಂ ಮರಣಂ ಯಸ್ಯ ಅಮೃತಃ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮರ್ತಭೋಜನಂ**—ಮರ್ತಾನಾಂ ಭೋಜನಂ ಮರ್ತಭೋಜನಮ್. ಭುಜ ಪಾಲನಾಭ್ಯವಹಾರಯೋಃ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅನಾದೇಶ. **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ತ್ಮನೇ**—ಆತ್ಮನ್ ಶಬ್ದ. ಚತುರ್ಥೀ ಏಕವಚನಾಂತರೂಪ. **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬಲ್ಲಿ **ಆಙ್ಯೋಽನ್ಯತ್ರಾಪಿ ಛಂದಸಿ ದೃಶ್ಯತೇ** (ಕಾ. ೬-೪-೧೪೧-೧) ಎಂಬ ವಚನವಿರುವುದರಿಂದ ಆಕಾರ ಲೋಪ.

**ಮೃಳ**—ಮೃಡ ಸುಖನೇ. ಧಾತು. ಲೋಟ್ಮಧ್ಯಮಪುರುಷ ಏಕವಚನದರೂಪ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ
ಉಕ್ಷಂತಮುತ ಮಾ ನ ಉಕ್ಷಿತಂ ।
ಮಾ ನೋ ವಧೀಃ ಪಿತರಂ ಮೋತ ಮಾತರಂ ಮಾ ನಃ ಪ್ರಿಯಾ-
ಸ್ತನ್ವೋ ರುದ್ರ ರೀರಿಷಃ ॥ ೭ ॥

॥ ಪದಪಾಠಃ ॥

ಮಾ । ನಃ । ಮಹಾಂತಂ । ಉತ । ಮಾ । ನಃ । ಅರ್ಭಕಂ । ಮಾ । ನಃ ।
ಉಕ್ಷಂತಂ । ಉತ । ಮಾ । ನಃ । ಉಕ್ಷಿತಂ ।
ಮಾ । ನಃ । ವಧೀಃ । ಪಿತರಂ । ಮಾ । ಉತ । ಮಾತರಂ । ಮಾ । ನಃ ।
ಪ್ರಿಯಾಃ । ತನ್ವಃ । ರುದ್ರ । ರಿರಿಷಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ರುದ್ರ ನೋಽಸ್ಮಾಕಂ ಮಧ್ಯೇ ಮಹಾಂತಂ ವೃದ್ಧಂ ಮಾ ವಧೀಃ । ಮಾ ಹಿಂಸೀಃ । ಉತಾಪಿ ಚ ನೋಽಸ್ಮಾಕಮರ್ಭಕಂ ಬಾಲಂ ಮಾ ಹಿಂಸೀಃ । ತಥಾ ನೋಽಸ್ಮಾಕಂ ಮಧ್ಯ ಉಕ್ಷಂತಂ ಸೇಕ್ತಾರಂ ಮಧ್ಯವಯಸ್ಕಂ ಯುವಾನಂ ಮಾ ವಧೀಃ । ಉತಾಪಿ ಚ ನೋಽಸ್ಮಾಕಮುಕ್ಷಿತಂ ಗರ್ಭರೂಪೇಣ ಸ್ತ್ರೀಷು ನಿಷಿಕ್ತಮಪತ್ಯಂ ಮಾ ವಧೀಃ । ತಥಾ ನೋಽಸ್ಮಾಕಂ ಪಿತರಂ ಜನಕಂ ಮಾ ವಧೀಃ । ಉತಾಪಿ ಚ ಮಾತರಂ ಜನನೀಂ ಮಾ ವಧೀಃ । ತಥಾ ನೋಽಸ್ಮಾಕಂ ಪ್ರಿಯಾಃ ಸ್ನೇಹವಿಷಯಾಸ್ತನ್ವಃ ಶರೀರಾಣಿ ತನೂಷು ಭವಾಃ ಪ್ರಜಾ ವಾ ಹೇ ರುದ್ರ ಮಾ ರಿರಿಷಃ । ಮಾ ಹಿಂಸೀಃ ॥ ವಧೀಃ । ಹಂತೇರ್ಮಾಙಿ ಲುಙಿ ಚೇತಿ ವಧಾದೇಶಃ । ಸ ಚಾದಂತಃ । ಸಿಚಿ ಇಟ್ । ಅತೋ ಲೋಪಸ್ಯ ಸ್ಥಾನಿವದ್ಭಾವಾದ್ವೃದ್ಧ್ಯಭಾವಃ । ರಿರಿಷಃ । ರಿಷ ಹಿಂಸಾಯಾಂ । ಣ್ಯಂತಾಲ್ಲುಙಿ ಚಙಿ ಣಿಲೋಪೋಪಧಾಹ್ರಸ್ವತ್ವಾದೀನಿ । ಛಾಂದಸಃ ಪದಕಾಲೀನೋಽಭ್ಯಾಸಹ್ರಸ್ವಃ ॥

॥ ಪ್ರತಿಪದಾರ್ಥ ॥

**ಹೇ ರುದ್ರ**—ಎಲೈ ರುದ್ರನೇ । **ನಃ**—ನಮ್ಮಲ್ಲಿ । **ಮಹಾಂತಂ**—ವೃದ್ಧನನ್ನು (ದೊಡ್ಡವನನ್ನು) । **ಮಾ ವಧೀಃ**—ಹಿಂಸಿಸಬೇಡ (ವಧಿಸಬೇಡ) । **ಉತ**—ಮತ್ತೂ । **ನಃ ಅರ್ಭಕಂ**—ನಮ್ಮ ಬಾಲಕನನ್ನು । **ಮಾ (ವಧೀಃ)**—ಹಿಂಸಿಸಬೇಡ । **ನಃ ಉಕ್ಷಂತಂ**—ಪ್ರಜಾಕಾರಕರಾದ ಯುವಕರನ್ನು । **ಮಾ (ವಧೀಃ)**—ಹಿಂಸಿಸಬೇಡ । **ಉತ**—ಮತ್ತೂ । **ನಃ**—ನಮ್ಮ । **ಉಕ್ಷಿತಂ**—ಗರ್ಭದಲ್ಲಿರುವ ಶಿಶುಗಳನ್ನು । **ಮಾ (ವಧೀಃ)**—ಹಿಂಸಿಸಬೇಡ । **ನಃ ಪಿತರಂ**—ನಮ್ಮ ಜನಕನನ್ನು । **ಮಾ (ವಧೀಃ**—ಹಿಂಸಿಸಬೇಡ) । **ಉತ**—ಮತ್ತು । **ಮಾತರಂ ಮಾ (ವಧೀಃ)**—ತಾಯಿಯನ್ನು ಹಿಂಸಿಸಬೇಡ । **ನಃ ಪ್ರಿಯಾಃ**—ನಮಗೆ ಪ್ರಿಯರಾದ । **ತನ್ವಃ**—ಶರೀರಧಾರಿಗಳಾದ ಪ್ರಜೆಗಳನ್ನು । **ಮಾ ರಿರಿಷಃ**—ಹಿಂಸಿಸಬೇಡ.

‖ ಭಾವಾರ್ಥ ‖

ಎಲೈ ರುದ್ರನೇ, ನಮ್ಮಲ್ಲಿ ವೃದ್ಧರು, ಬಾಲಕರು, ಪ್ರಜೋತ್ಪಾದಕರಾದ ಯುವಕರು, ಗರ್ಭಸ್ಥ ಶಿಶುಗಳು, ಪಿತೃ, ಮಾತೃ ಮತ್ತು ಇಷ್ಟಮಿತ್ರರು, ಯಾರನ್ನೂ ವಧೆಮಾಡಬೇಡ.

English Translation.

Injure not, Rudra, those amongst us who are old or young, who are capable of begetting, or who are begotten, nor a father, nor a mother, nor afflict our precious persons.

‖ ವಿಶೇಷವಿಷಯಗಳು ‖

**ತನ್ವಃ—ಶರೀರಾಣಿ ತನುಷು ಭವಾಃ ಪ್ರಜಾ ವಾ ।** **ತನೂಃ** (ಶರೀರವನ್ನು) ಎಂದು ಏಕವಚನವನ್ನು ಹೇಳುವುದಾಗಿದ್ದರೂ ಇಲ್ಲಿ **ತನ್ವಃ** ಎಂದು ಬಹುವಚನವನ್ನು ಹೇಳುತ್ತದೆ. ಶರೀರಗಳು ಅಥವಾ ಶರೀರದಿಂದ ಉತ್ಪನ್ನರಾದ ಪ್ರಜೆಗಳು.

**ಅರ್ಭಕಂ—ಬಾಲವಮ್**—ಅರ್ಭಕ ಶಬ್ದವು **ಋಹತ್, ಹ್ರಸ್ವಃ,** ಮೊದಲಾದ ಹನ್ನೊಂದು ಹ್ರಸ್ವನಾಮಗಳಲ್ಲಿ (ನಿ. ೩-೧೩) ಪಠಿತವಾಗಿರುವುದರಿಂದ ಅಲ್ಪವೆಂದು ಅರ್ಥ. ಇಲ್ಲಿ ಅಲ್ಪವೆಂದರೆ ಇನ್ನೂ ವಯಸ್ಸಾಗಿಲ್ಲದ ಬಾಲಕನೆಂದರ್ಥವು.

**ರುದ್ರ**—ಈ ಶಬ್ದದ ಅರ್ಥವನ್ನು ನಿರ್ವಚನಮಾಡುವಾಗ **ರೋದಯತೀತಿ ರುದ್ರಃ** ಅಳುವಂತೆ ಮಾಡುವವನಾದುದರಿಂದ ರುದ್ರನಾಗಿರುವನು ಎಂದು ಹೇಳಿರುವುದು. ಮತ್ತೂ **ತಮಸಾ ಜಗದಂತಕಂ** ತಮೋಗುಣವನ್ನು ಪ್ರಾಧಾನ್ಯದಿಂದ ಅನುಸರಿಸಿ ರುದ್ರನು ಜಗತ್ತನ್ನು ಲಯಮಾಡುವವನು. ಆದ್ದರಿಂದ ರುದ್ರನನ್ನು ಯಜ್ಞಮಾಡುವವರೂ ನಮಸ್ಕಾರಾದಿಗಳಿಂದ ಪೂಜಿಸುವವರೂ ಕೂಡ ವಯಸ್ಕರಾದ ನಮ್ಮನ್ನೂ ನಮ್ಮ ಬಾಲಕರನ್ನೂ, ಯೌವನದಲ್ಲಿ ಇದ್ದುಕೊಂಡು ಸುಖವನ್ನು ಅನುಭವಿಸುವ ನಮ್ಮ ಸಂಬಂಧಿಗಳನ್ನೂ, ಮತ್ತೂ ನಮ್ಮ ವಂಶದಲ್ಲಿ ಗರ್ಭಸ್ಥರಾಗಿ ಇರುವ ಶಿಶುಗಳನ್ನೂ ನಮ್ಮ ತಾಯಿತಂದೆಗಳನ್ನೂ ನಮ್ಮ ಪ್ರೀತಿಪಾತ್ರವಾದ ಶರೀರವನ್ನು ಕೂಡ, ಹಿಂಸೆ ಮಾಡದೆ ರುದ್ರನು ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥನೆಯು ಈ ಋಕ್ಕಿನಲ್ಲಿ ಉಕ್ತವಾಗಿರುತ್ತದೆ

**ಉಕ್ಷಂತಂ, ಉಕ್ಷಿತಂ**—ಎಂಬ ಶಬ್ದಗಳು **ಉಕ್ಷ ಸೇಚನೇ** ಎಂಬ **ಸೇಚ**ನಾರ್ಥದಲ್ಲಿರುವ **ಉಕ್ಷ**ಧಾತುವಿನಿಂದ ನಿಷ್ಪನ್ನಗಳಾಗಿರುವುವು. **ಉಕ್ಷಂತಂ** ಎಂದು ವರ್ತಮಾನಕಾಲದಲ್ಲಿ ಇರುವ ರೂಪವಾಗಿರುವ ಕಾರಣ **ರೇತಸ್ಸೇಕ್ತಾರಂ** ರೇತಸ್ಸನ್ನು ಸೇಚನಮಾಡುವವನು, ಯೌವ್ವನದಿಂದ ಇರುವವನು ಎಂದು **ಉಕ್ಷಂತಂ** ಎಂಬ ಶಬ್ದಕ್ಕೂ **ಉಕ್ಷಿತಂ** ಶಬ್ದವೂ ಹೀಗೆಯೇ ಅರ್ಥನಿರ್ವಚನೆ ಮಾಡುವಾಗ ಮುಂದೆ ಹುಟ್ಟಬೇಕಾಗಿ ಈಗ ಗರ್ಭದಲ್ಲಿರುವ ಶಿಶುವು ಎಂದು ಅರ್ಥವನ್ನು ವಿವರಿಸಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಉಕ್ಷಂತೇಂ**—ಉಕ್ಷ ಸೇಚನೇ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತದಾಗಿರುವುದರಿಂದ ಧಾತುಸ್ವರ ಉಳಿಯುತ್ತದೆ. ಉಗಿತ್ತಾದುದರಿಂದ ದ್ವಿತೀಯಾ ಏಕವಚನದಲ್ಲಿ ನುಮಾಗಮ. ಉಕ್ಷಿತಮ್ ಎಂಬಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಧೀಃ**—ಹನ ಹಿಂಸಾಗತ್ಯೋಃ ಧಾತು. ಲುಙ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಇಕಾರಲೋಪ. **ಲುಙಿಚ** (ಪಾ. ಸೂ. ೨-೪-೪೩) ಎಂಬುದರಿಂದ ಧಾತುವಿಗೆ ವಧಾದೇಶ. ಇದು ಅದಂತ **ಚ್ಲಿಲುಙಿ** ಸೂತ್ರದಿಂದ ಚ್ಲಿ ವಿಕರಣ ಬಂದಾಗ **ಚ್ಲೇಃ ಸಿಚ್** (ಪಾ ಸೂ. ೩-೧-೪೪) ಎಂಬುದರಿಂದ ಅದಕ್ಕೆ ಸಿಚ್ ಆದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ವಧ ಎಂಬಲ್ಲಿರುವ ಅಂತ್ಯಾಕಾರಕ್ಕೆ ಲೋಪ. ಸಿಪ್ಪಿಗೆ **ಅಸ್ತಿಸಿಚೋಽಪೃಕ್ತೇ** (ಪಾ ಸೂ. ೭-೩-೯೬) ಎಂಬುದರಿಂದ ಈಡಾಗಮ. **ಇಟಈಟಿ** (ಪಾ. ಸೂ. ೮-೨-೨೮) ಎಂಬುದರಿಂದ ಇಟ್ಟಿನ ಪರದಲ್ಲಿರುವ ಸಿಚ್ಚಿಗೆ ಲೋಪ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. **ನ ಮಾಙ್ ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತನ್ವಃ**—ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತ-ಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪.) ಎಂಬುದರಿಂದ ಅದಕ್ಕೆ ಸ್ವರಿತಸ್ವರ ಬರುತ್ತದೆ.

**ರೀರಿಷಃ**—ರಿಷ ಹಿಂಸಾಯಾಂ ಧಾತು. ಣಿಜಂತದಮೇಲೆ ಲುಙ್. ಮಧ್ಯಮಪುರುಷದಲ್ಲಿ ಸಿಪ್ ಬಂದಾಗ **ಇತಶ್ಚ** ಎಂಬುದರಿಂದ ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** (ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. ಣಿಚ್ ನಿಮಿತ್ತವಾಗಿ ಧಾತುವಿನ **ಲಘೂಪಧೆಗೆ** ಗುಣ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ. **ಣೌ ಚಙ್ಯು-ಪಧಾಯಾಃ**—(ಪಾ. ಸೂ. ೭-೪-೧) ಎಂಬುದರಿಂದ ಉಪಧಾಹ್ರಸ್ವ. **ಸನ್ವಲ್ಲಘುನಿ**—(ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವಿರುವುದರಿಂದ **ದೀರ್ಘೋ ಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಛಾಂದಸವಾಗಿ ಪದಕಾಲದಲ್ಲಿ ಅಭ್ಯಾಸಕ್ಕೆ ಹ್ರಸ್ವ ಬರುತ್ತದೆ. **ನಮಾಙ್‌ಯೋಗೇ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಮಾ ನಸ್ತೋಕೇ ತನಯೇ ಮಾ ನ ಆಯೌ ಮಾ ನೋ ಗೋಷು

ಮಾ ನೋ ಅಶ್ವೇಷು ರೀರಿಷಃ ।

ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮಂತಃ ಸದ-

ಮಿತ್ತ್ವಾ ಹವಾಮಹೇ ॥ ೮ ॥

॥ ಪದಪಾಠಃ ॥

ಮಾ । ನಃ । ತೋಕೇ । ತನಯೇ । ಮಾ । ನಃ । ಆಯೌ । ಮಾ । ನಃ । ಗೋಷು ।

ಮಾ । ನಃ । ಅಶ್ವೇಷು । ರಿರಿಷಃ ।

ವೀರಾನ್ । ಮಾ । ನಃ । ರುದ್ರ । ಭಾಮಿತಃ । ವಧೀಃ । ಹವಿಷ್ಮಂತಃ । ಸದಂ ।

ಇತ್ । ತ್ವಾ । ಹವಾಮಹೇ ॥ ೮ ॥

॥ ಸಾಯಣಭಾಷ್ಯಂ ॥

ಹೇ ರುದ್ರ ನೋಽಸ್ಮಾಕಂ ತೋಕಾದಿವಿಷಯೇ ಮಾ ರಿರಿಷಃ । ಮಾ ಹಿಂಸೀಃ । ತೋಕಶಬ್ದಃ ಪುತ್ರವಾಚೀ । ತನಯಸ್ತತ್ಪುತ್ರಃ । ಆಯುರಿತ್ಯೇತೋದಾತ್ತೋ ಮನುಷ್ಯನಾಮ । ಪುತ್ರಪೌತ್ರವ್ಯತಿರಿಕ್ತೋ ಯೋಽಸ್ಮದೀಯೋ ಮನುಷ್ಯಸ್ತಸ್ಮಿನ್ ಗೋಷು ಪಶ್ವಾದಿಷ್ವಶ್ವೇಷು ಚ ಮಾ ರಿರಿಷಃ । ಹಿಂಸಾಂ ಮಾ ಕೃಥಾಃ । ತಥಾ ಹೇ ರುದ್ರ ವೀರಾನ್ ವಿಕ್ರಾಂತಾನ್ ಶೌರ್ಯೋಪೇತಾನಸ್ಮದೀಯಾನ್ ಭಾಮಿತಃ ಕ್ರುದ್ಧಃ ಸನ್ ಮಾ ವಧೀಃ । ಮಾ ಹಿಂಸೀಃ । ವಯಂ ಚ ಹವಿಷ್ಮಂತೋ ಹವಿರ್ಭಿರ್ಯುಕ್ತಾಃ ಸಂತಃ ಸದಮಿತ್ ಸರ್ವದೈವ ತ್ವಾಂ ಹವಾಮಹೇ । ಆಹ್ವಯಾಮಹೇ ॥ ಆಯೌ । ಇಣ್ ಗತೌ । ಛಂದಸೀಣ ಇತ್ಯುಣ್ಪ್ರತ್ಯಯಃ । ಭಾಮಿತಃ । ಭಾಮ ಕ್ರೋಧೇ ಕ್ರೋಧಿಕರಣೇ ಚೇತಿ ಕರ್ತರಿ ಕ್ತಃ । ಹವಾಮಹೇ । ಹ್ವೇಞೋ ಲಿಟಿ ಬಹುಲಂ ಛಂದಸೀತಿ ಸಂಪ್ರಸಾರಣಂ ॥

॥ ಪ್ರತಿಪದಾರ್ಥ ॥

**ಹೇರುದ್ರ**—ಎಲೈ ರುದ್ರನೇ । **ನಃ ತೋಕೇ**—ನಮ್ಮ ಪುತ್ರರ ವಿಷಯದಲ್ಲಿ (ಪುತ್ರರನ್ನು) । **ಮಾ ರೀರಿಷಃ**—ಹಿಂಸಿಸಬೇಡ । **ತನಯೇ ಮಾ**—ಮೊಮ್ಮಗನಲ್ಲಿ (ನ್ನು) ಹಿಂಸಿಸಬೇಡ । **ನಃ ಆಯೌ ಮಾ**—ನಮ್ಮವರಾದ ಜನರನ್ನು ಹಿಂಸಿಸಬೇಡ । **ನಃ ಗೋಷು**—ನಮ್ಮ ಗೋವುಗಳನ್ನು । **ನಃ ಅಶ್ವೇಷು ಮಾ**—ನಮ್ಮ ಅಶ್ವಗಳನ್ನು ಹಿಂಸಿಸಬೇಡ । **ನಃ ವೀರಾನ್**—ನಮ್ಮ ವೀರರನ್ನೂ । **ಭಾಮಿತಃ**—ಕ್ರುದ್ಧನಾಗಿ । **ಮಾ ವಧೀಃ**—ವಧಿಸಬೇಡ । (**ವಯಂ ಚ**—ನಾವೂಕೂಡ) । **ಹವಿಷ್ಮಂತಃ**—ಹವಿರಾದಿಯುಕ್ತರಾಗಿ । **ಸದಮಿತ್**—ಯಾವಾಗಲೂ । **ತ್ವಾ**—ನಿನ್ನನ್ನು । **ಹವಾಮಹೇ**—(ಆಹ್ವಾನಿಸಿ) ಪೂಜಿಸುತ್ತೇವೆ.

॥ ಭಾವಾರ್ಥ ॥

ಎಲೈ ರುದ್ರನೇ, ನಮ್ಮ ಪುತ್ರ, ಪೌತ್ರ, ಇತರ ಜನ, ಗೋವುಗಳು, ಅಶ್ವಗಳು, ವೀರರು, ಯಾರನ್ನೂ ಕ್ರುದ್ಧನಾಗಿ ವಧಿಸಬೇಡ. ನಾವೂ ಯಾವಾಗಲೂ ಹವಿರಾದಿಗಳಿಂದ ನಿನ್ನನ್ನು ಆಹ್ವಾನಿಸಿ ಪೂಜಿಸುತ್ತೇವೆ.

## English Translation

Harm us not, Rudra, in our sons or grandsons, or other male descendants, nor in our cattle, nor in our horses; inflamed with anger, kill not our valiant men, for we, presenting clarified butter, perpetually invoke you.

॥ ವಿಶೇಷವಿಷಯಗಳು ॥

**ಆಯೌ**—ಆಯುಃ ಎಂಬುವ ಶಬ್ದವು ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ (ನಿ. ೩-೯) ಪಠಿತವಾಗಿರುತ್ತದೆ. ಮತ್ತು ಆಯುಸ್ ಜೀವಿತಕಾಲವಾಚಕವಾಗಿಯೂ ಪ್ರಯುಕ್ತವಾಗಿದೆ ಆದರೆ ಸಾಯಣರು—**ಆಯುರಿತಿ ಅಂತೋದಾತ್ತಃ ಮನುಷ್ಯನಾಮ, ಪುತ್ರಪೌತ್ರವ್ಯತಿರಿಕ್ತೋ ಯೋ ಅಸ್ಮದೀಯಃ ಮನುಷ್ಯಸ್ತಸ್ಮಿನ್ ।** ಆಯುಶ್ಶಬ್ದವು ಅಂತೋದಾತ್ತವಾಗಿ ಇರುವುದರಿಂದ ಇಲ್ಲಿ ಮನುಷ್ಯವಾಚಕವಾಗಿರುವುದು. ಪುತ್ರರು ಪೌತ್ರರು ಇವರಿಗಿಂತ ಬೇರೆಯಾಗಿರುವ ನಮ್ಮ ಸಂಬಂಧಿಯಾದ ಮನುಷ್ಯನು ಎಂದು ಅರ್ಥವನ್ನು ವಿವರಿಸಿರುವರು. ಸ್ಕಂದಸ್ವಾಮಿಗಳು **ಆಯುಶ್ಶಬ್ದವು ಮನುಷ್ಯವಾಚಕ**ಗಳಲ್ಲಿ (ನಿ. ೩-೮) **ಆಯವಃ** ಎಂದು ಉಕ್ತವಾಗಿರುವುದರಿಂದ ಮನುಷ್ಯ ಎಂದು ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿ ಪರಿಚಾರಕಾನ್ ಎಂದು ಅರ್ಥವನ್ನು ಹೇಳುವರು. ಆಯುಶ್ಶಬ್ದವು ಬೇರೆ ಬೇರೆ ಸಂದರ್ಭಗಳಲ್ಲಿ ವಿಧವಿಧವಾದ ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದು—

**ಮಾ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತಃ ಪರಿ ಖ್ಯನ್ ।**

(ಋ. ಸಂ. ೧-೧೬೨-೧)

ಎಂಬ ಋಕ್ಕಿನಲ್ಲಿ ಆಯುಃ ಸತತಗಂತಾ ವಾಯುಃ—ಯಾವಾಗಲೂ ಚಲಿಸುವ ಸ್ವಭಾವವುಳ್ಳ ವಾಯುವು ಎಂಬರ್ಥದಲ್ಲಿ ಪ್ರಯುಕ್ತವಾಗಿರುವುದು—

**ಯಮೃತ್ವಿಜೋ ವೃಜನೇ ಮಾನುಷಾಸಃ ಪ್ರಯಸ್ವಂತ ಆಯವೋ ಜೀಜನಂತ ।**

(ಋ. ಸಂ. ೧-೬೦-೩)

**ಏತಾನಿ ವಾಮಶ್ವಿನಾ ವೀರ್ಯಾಣಿ ಪ್ರ ಪೂರ್ವ್ಯಾಣ್ಯಾಯವೋಽವೋಚನ್**

(ಋ. ಸಂ. ೧-೧೧೭-೨೫)

ಈ ಋಕ್ಕುಗಳಲ್ಲಿ ಆಯವೋ ಮನುಷ್ಯಾಃ-ಮನುಷ್ಯರು ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿರುವರು.

**ಸನ್ಯಮಾಯುಃ ಪ್ರ ಸೂ ತಿರ ಕೃಧೀ ಸಹಸ್ರಸಾಮೃಷಿಂ ।**

(ಋ. ಸಂ. ೧-೬೦-೧೧)

**ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ॥**

(ಋ. ಸಂ. ೧-೨೪-೧೧)

**ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ।**

(ಋ. ಸಂ. ೧-೩೪-೧೧)

ಇತ್ಯಾದಿ ಋಕ್ಕುಗಳಲ್ಲಿ ಆಯುರ್ಜೀವಿತಂ ಎಂದು ಆಯುಶ್ಶಬ್ದಕ್ಕೆ ಜೀವಿತವೆಂದು ಅರ್ಥಮಾಡಿರುವರು.

**ತೇ ನೋ ಮಿತ್ರೋ ವರುಣೋ ಅರ್ಯಮಾಯುರಿಂದ್ರ ಋಭುಕ್ಷಾ ಮರುತೋ ಜುಷಂತ ।**

(ಋ. ಸಂ. ೫-೪೧-೨)

ಎಂಬ ಋಕ್ಕಿನಲ್ಲಿ ಆಯುಃಶಬ್ದವು ಅನ್ನವೆಂಬ ಅರ್ಥವನ್ನು ಸೂಚಿಸುವುದು.

ಈ ಋಕ್ಕಿನಲ್ಲಿಯೂ ಹಿಂದಿನ ಋಕ್ಕಿನಲ್ಲಿ ಹೇಳಿರುವಂತೆಯೇ ರುದ್ರನನ್ನು ಕುರಿತು ಪ್ರಾರ್ಥನೆಯು ಉಕ್ತವಾಗಿರುತ್ತದೆ. ಇಲ್ಲಿ ಸಪ್ತಮ್ಯಂತಪದಗಳೆಲ್ಲಕ್ಕೂ ವಿಷಯಸಪ್ತಮೀ ಎಂದು ಅಂಗೀಕರಿಸಿ ರುದ್ರನಿಂದ ಆಯಾಯ ವಿಷಯಗಳಲ್ಲಿ ಹಿಂಸೆಯು ಉಂಟಾಗಬಾರದೆಂದು ಪ್ರಾರ್ಥನೆಯು ಈ ಮಂತ್ರದಲ್ಲಿ ಬೋಧಿತವಾಗಿರುವುದೆಂದು ಸಾಯಣರು ವ್ಯಾಖ್ಯಾನಮಾಡಿರುತ್ತಾರೆ. ಸ್ಕಂದಸ್ವಾಮಿಗಳು ಸಪ್ತಮೀವಿಭಕ್ತಿಯು ದ್ವಿತೀಯಾ ಅರ್ಥದಲ್ಲಿರುವುದು ಆದ್ದರಿಂದ **ತೋಕಂ ತನಯಂ ಮಾನಧೀಃ** ಪುತ್ರ ಪೌತ್ರಾದಿಗಳನ್ನು ಹಿಂಸೆಮಾಡಬೇಡ ಎಂದು ಅರ್ಥಮಾಡಿರುವರು.

**ಭಾಮಿತಃ—ಕ್ರುದ್ಧಃ ।** ಕ್ರೋಧವುಳ್ಳವನು. **ರೇಳತೆ ಹೇಳತೆ** ಎಂಬ ಹತ್ತು **ಕ್ರುಧ್ಯತಿ**ಕರ್ಮವಾಚಕಗಳಲ್ಲಿ **ಭಾಮತೇ** (ನಿ. ೩-೯) ಎಂಬ ಶಬ್ದವು ಉಕ್ತವಾಗಿರುವುದರಿಂದ (**ಭಾಮ ಕ್ರೋಧೇ**) ಕ್ರೋಧಾರ್ಥಕವಾದ

ಭಾಮಧಾತುವಿನ ದೆಸೆಯಿಂದ **ಭಾಮಿತಃ** ಎಂದು ರೂಪವಾಗಿರುತ್ತದೆ. ರುದ್ರನು ಕ್ರೋಧವುಳ್ಳವನಾಗಿ ನಮಗೂ ನಮ್ಮ ಪೋಷ್ಯವರ್ಗಕ್ಕೂ ಹಿಂಸೆಯನ್ನು ಉಂಟುಮಾಡದಿರಬೇಕೆಂದು ಪ್ರಾರ್ಥನೆಯು ಇಲ್ಲಿ ನಿರ್ದಿಷ್ಟವಾಗಿರುತ್ತದೆ

**ಸದಮಿತ್**—**ಸದಾ** ಯಾವಾಗಲೂ ಎಂದು ಅರ್ಥ. (ಸಾ. ಭಾ ) **ಸದಶಬ್ದಃ ಸದೇತ್ಯಸ್ಯ ಪರ್ಯಾಯಃ ಇಚ್ಛಬ್ದಃ ಏವಾರ್ಥೇ ಸದೈವ ।** ಸದ ಎಂಬ ಶಬ್ದವು ಸದಾಶಬ್ದದ ಪರ್ಯಾಯವಾಗಿರುವುದು. ಇತ್ ಎಂಬುದು ಏವ ಎಂಬ ಅರ್ಥವನ್ನು ಬೋಧಿಸುವುದರಿಂದ ಸದೈವ-ಯಾವಾಗಲೂಎಂದು ಅರ್ಥ. ಸದಮಿತ್ ಶಬ್ದವೂ ಈ ಅರ್ಥದಲ್ಲಿಯೇ ಬೇರೆಯ ಕಡೆಯಲ್ಲಿಯೇ ಪ್ರಯುಕ್ತವಾಗಿರುವುದು ಎಂದು—

**ದೇವಾ ನೋ ಯಥಾ ಸದಮಿದ್ವೃಧೇ ಅಸನ್ನಪ್ರಾಯುವೋ ರಕ್ಷಿತಾರೋ ದಿವೇ ದಿವೇ ।**

(ಋ. ಸಂ. ೧-೮೯-೧)

ಎಂಬ ಋಕ್ಕನ್ನು ಉದಾಹರಣೆಗಾಗಿ ಹೇಳಿರುವರು. ಇಲ್ಲಿ **ಸದಮಿತ್** ಎಂಬ ಪದವು **ಸದೈವ** ಎಂಬರ್ಥವನ್ನು ಬೋಧಿಸುವುದು.

॥ ವ್ಯಾಕರಣಪ್ರಕ್ರಿಯಾ ॥

**ಆಯೌ**—ಇಣ್ ಗತೌ ಧಾತು. **ಛಂದಸೀಣಃ** (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಇಕಾರಕ್ಕೆ ವೃದ್ಧಿ. ಅಚ್ ಪರವಾದುದರಿಂದ ಆಯಾದೇಶ. ಆಯು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮಿಾ ಏಕವಚನಾಂತರೂಪ.

**ಭಾಮಿತಃ**—ಭಾಮ ಕ್ರೋಧೇ. ಧಾತು. **ಕ್ರೋಧಿಕರಣೇ ಚ** (ಪಾ. ಸೂ. ೩-೪-೭೪) ಎಂಬುದರಿಂದ ಕರ್ತರಿಯಲ್ಲಿ ಕ್ತ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತಆತ್ಮನೇ**—ಸೂತ್ರದಿಂದ ಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಶಪ್‌ವಿಕರಣ. ಶಪ್‌ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಅವಾದೇಶ. **ಅತೋ ದೀರ್ಘೋ ಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥

॥ ಸಂಹಿತಾಪಾಠಃ ॥

ಉಪ ತೇ ಸ್ತೋಮಾನ್ಪಶುಪಾ ಇವಾಕರಂ ರಾಸ್ವಾ ಪಿತರ್ಮರುತಾಂ ಸುಮ್ನಮಸ್ಮೇ ।

ಭದ್ರಾ ಹಿ ತೇ ಸುಮತಿರ್ಮೃಳಯತ್ತಮಾಥಾ ವಯಮವ ಇತ್ತೇ ವೃಣೀಮಹೇ ॥ ೯ ॥

॥ ಪದಪಾಠಃ ॥

ಉಪ । ತೇ । ಸ್ತೋಮಾನ್ । ಪಶುಪಾಃಽಇವ । ಆ । ಅಕರಂ । ರಾಸ್ವ । ಪಿತಃ । ಮರುತಾಂ । ಸುಮ್ನಂ । ಅಸ್ಮೇ ಇತಿ ।

ಭದ್ರಾ । ಹಿ । ತೇ । ಸುಽಮತಿಃ । ಮೃಳಯತ್ಽತಮಾ । ಅಥ । ವಯಂ । ಅವಃ । ಇತ್ । ತೇ । ವೃಣೀಮಹೇ ॥ ೯ ॥

॥ ಸಂಹಿತಾಪಾಠಃ ॥

ದೇವಸುವಾಂ ಹವಿಃಷು ರುದ್ರಸ್ಯ ಪಶುಪತೇರ್ಯೋರ್ಗ ಉಪ ತೇ ಸ್ತೋಮಾನಿತ್ಯಾದಿಕೇ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ಉಪ ತೇ ಸ್ತೋಮಾನ್ ಪಶುಪಾ ಇವಾಕರಮಿತಿ ದ್ವೇ । ಆ. ೪-೧೧ । ಇತಿ ॥

ಹೇ ರುದ್ರ ಸ್ತೋಮಾನ್ ಸ್ತುತಿರೂಪಾನ್ಮಂತ್ರಾನ್ ತೇ ತುಭ್ಯಮುಪಾಕರಂ । ಉಪಾಕರೋಮಿ । ಸಮರ್ಪಯಾಮಿ । ತತ್ರ ದೃಷ್ಟಾಂತಃ । ಪಶುಪಾ ಇವ । ಯಥಾ ಪಶೂನಾಂ ಪಾಲಯಿತಾ ಗೋಪಃ ಪ್ರಾತಃಕಾಲೇ ಸ್ವಸ್ಮೈ ಸಮರ್ಪಿತಾನ್ಪಶೂನ್ ಸಾಯಂಕಾಲೇ ಸ್ವಾಮಿಭ್ಯಃ ಪ್ರತ್ಯರ್ಪಯತಿ ಏವಂ ತ್ವತ್ಸಕಾಶಾಲ್ಲಬ್ಧಾನ್ ಸ್ತುತಿರೂಪಾನ್ಮಂತ್ರಾನ್ ಸ್ತುತಿಸಾಧನತಯಾ ತುಭ್ಯಂ ಪ್ರತ್ಯರ್ಪಯಾಮಿತ್ಯರ್ಥಃ । ಹೇ ಮರುತಾಂ ಪಿತರ್ಮರುತ್ಸಂಜ್ಞಾನಾಂ ದೇವಾನಾಮುತ್ಪಾದಕ ರುದ್ರ ನೋಽಸ್ಮಭ್ಯಂ ಸುಮ್ನಂ

ಸುಖಂ ರಾಸ್ವ । ದೇಹಿ । ಅಪಿ ಚ ತೇ ತ್ವದೀಯಾ ಸುಮತಿಃ ಕಲ್ಯಾಣೀ ಬುದ್ಧಿರ್ಮೃಳಯತ್ತಮಾತಿಶಯೇನ ಸುಖಯಿತೃತಮಾ । ಅತ ಏವ ಭದ್ರಾ ಭಜನೀಯಾ ಹಿ । ಯಸ್ಮಾದೇವಂ ತಸ್ಮಾದಥಾನಂತರಂ ವಯಂ ತೇ ತ್ವದೀಯಮವೋ ರಕ್ಷಣಂ ವೃಣೀಮಹೇ । ಸಂಭಜಾಮಹೇ ॥ ಅಕರಂ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲುಙ್ । ಕೃಮೃದೃರುಹಿಭ್ಯ ಇತಿ ಚ್ಲೇರಙಾದೇಶಃ । ಋದೃಶೋಽಙಿ ಗುಣಃ । ಪಿತರ್ಮರುತಾಂ । ಪರಮಪಿ ಛಂದಸೀತಿ ಪರಸ್ಯಾಃ ಷಷ್ಠ್ಯಾಃ ಪೂರ್ವಾಮಂತ್ರಿತಾನುಪ್ರವೇಶೇ ಸತ್ಯಾಮಂತ್ರಿತಸ್ಯ ಚೇತಿ ಪದದ್ವಯಮಪ್ಯನುದಾತ್ತಂ । ಅಸ್ಮೇ । ಸುಪಾಂ ಸುಲುಗಿತಿ ಚತುರ್ಥೀಬಹುವಚನಸ್ಯ ಶೇಆದೇಶಃ । ಮೃಳಯತ್ತಮಾ । ಮೃಡ ಸುಖನೇ । ಅಸ್ಮಾಣ್ಣ್ಯಂತಾಲ್ಲಟಃ ಶತೃ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕಾಲ್ಲಸಾರ್ವಧಾತುಕಾನುದಾತ್ತತ್ವಾಭಾವೇ ಪ್ರತ್ಯಯಸ್ವರಃ ಶಿಷ್ಯತೇ ॥

॥ ಪ್ರತಿಪದಾರ್ಥ ॥

**ಹೇ ರುದ್ರ**—ಎಲೈ ರುದ್ರನೇ । **ಸ್ತೋಮಾನ್**—ಸ್ತುತಿರೂಪವಾದ ಮಂತ್ರಗಳನ್ನು । **ಪಶುಪಾ ಇವ**—ಗೋಪಾಲಕನಂತೆ (ಬೆಳಿಗ್ಗೆ ಅಟ್ಟಿಕೊಂಡುಹೋದ ಪಶುಗಳನ್ನು ಸಾಯಂಕಾಲ ಯಜಮಾನನಿಗೆ ಅರ್ಪಿಸುವಂತೆ, ನಿನ್ನಿಂದ ಪ್ರಾಪ್ತವಾದ ಮಂತ್ರಗಳನ್ನು) । **ತೇ**—ನಿನಗೇ । **ಉಪ ಅ ಅಕರಂ**—ಸಮರ್ಪಿಸುತ್ತೇನೆ । **ಹೇ ಮರುತಾಂ ಪಿತಃ**—ಎಲೈ ಮರುತ್ಪಿತೃವೇ । **ಅಸ್ಮೇ**—ನಮಗೆ । **ಸುಮ್ನಂ**—ಸುಖವನ್ನು । **ರಾಸ್ವ**—ಕೊಡು । **ತೇ**—ನಿನ್ನ । **ಸುಮತಿಃ**—ಮಂಗಳಕರವಾದ ಅಥವಾ ಅನುಗ್ರಹರೂಪವಾದ ಬುದ್ಧಿಯು । **ಮೃಳಯತ್ತಮಾ**—ಅತ್ಯಂತ ಸುಖಕಾರಿಯೂ । **ಭದ್ರಾ ಹಿ**—ಭಜಸೀಯವೂ ಆಗಿರುವುದಷ್ಟೆ । **ಅಥ**—(ಆದುದರಿಂದಲೇ) ಅನಂತರವೇ । **ವಯಂ**—ನಾವು । **ತೇ ಅವಃ**—ನಿನ್ನ ರಕ್ಷಣೆಯನ್ನು । **ವೃಣೀಮಹೇ**—ಪ್ರಾರ್ಥಿಸುತ್ತೇವೆ (ಬಯಸುತ್ತೇವೆ.)

॥ ಭಾವಾರ್ಥ ॥

ಎಲೈ ರುದ್ರನೇ, ಗೋಪಾಲಕನು ಬೆಳಗಿನ ಹೊತ್ತು ಅಟ್ಟಿಕೊಂಡುಹೋದ ಪಶುಗಳನ್ನು ಸಾಯಂಕಾಲ ಯಜಮಾನನಿಗೆ ತಂದು ಒಪ್ಪಿಸುವಂತೆ ನಿನ್ನಿಂದ ಪಡೆದ ಸ್ತುತಿರೂಪವಾದ ಮಂತ್ರಗಳನ್ನು ನಿನಗೇ ಸಮರ್ಪಿಸುತ್ತೇನೆ. ಎಲೈ ಮರುತ್ಪಿತೃವೇ, ನಮಗೆ ಸುಖವನ್ನುಂಟುಮಾಡು. ನಿನ್ನನುಗ್ರಹವು ಅತ್ಯಂತ ಸುಖಹೇತುವೂ ಮಂಗಳಕರವೂ ಆದುದರಿಂದ, ನಾವು ನಿನ್ನ ರಕ್ಷಣೆಯನ್ನು ಪ್ರಾರ್ಥಿಸುತ್ತೇವೆ.

## English Translation

I restore to you, the praises (derived from you), as a shepherd (returns his sheep to their owner); father of the Maruts, bestow happiness upon me; your auspicious benignity is the cause of successive delight, therefore we especially solicit your protection.

॥ ವಿಶೇಷವಿಷಯಗಳು ॥

**ಸುಮ್ನಂ—ಸುಖಂ ।** ಸುಮ್ನಶಬ್ದವು ಇಪ್ಪತ್ತು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಸುಮ್ನವೆಂದರೆ ಸುಖವೆಂದು ಅರ್ಥ.

**ಪಶುಪಾ ಇವ ಉಪ ಆ ಅಕರಂ—ಸ್ತುತಿರೂಪಾನ್ ಮನ್ತ್ರಾನ್ ಉಪಾಕರೋಮಿ ಸಮರ್ಪಯಾಮಿ ।** ಪಶುಗಳನ್ನು (ಹಸುಗಳನ್ನು) ರಕ್ಷಿಸುವವನು ಪ್ರಾತಃಕಾಲದಲ್ಲಿ ಆಯಾಯ ಪಶುಗಳನ್ನು ರಕ್ಷಿಸುವುದಕ್ಕಾಗಿ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಅರಣ್ಯಕ್ಕೆ ಹೋಗಿ ಮೇಯಿಸಿಕೊಂಡು ಬಂದನಂತರ ಸಾಯಂಕಾಲಕ್ಕೆ ಸರಿಯಾಗಿ ಅವರವರ ಗೋವುಗಳನ್ನು ಅವರವರ ವಶಕ್ಕೆ ಪುನಃ ತಲಪಿಸುವನು. ಇದರಂತೆಯೇ ರುದ್ರನ ಸ್ತುತಿರೂಪವಾದ ಮಂತ್ರಗಳೂ ಆಯಾಯ ದೇವತಾಸ್ತುತಿರೂಪವಾದ ಮಂತ್ರಗಳೂ ಕೂಡ ಆಯಾಯ ದೇವತಾನುಗ್ರಹದಿಂದ ಪ್ರಕಾಶಿತಗಳಾಗಿ ಆಯಾಯ ದೇವತೆಗಳ ಸ್ತುತಿಮಾಡುವುದರಲ್ಲಿ ವಿನಿಯೋಗವನ್ನು ಹೊಂದುತ್ತವೆ. ಇದರಂತೆಯೇ ರುದ್ರದೇವತಾಕವಾದ ಮಂತ್ರಗಳೂ ರುದ್ರನ ಸ್ತುತಿಯಲ್ಲಿ ಪರ್ಯವಸಿತವಾಗಿ ಯಾಗಮಾಡುವವರಿಂದಲೂ ಪೂಜಾದಿಗಳನ್ನು ಆಚರಿಸುವವರಿಂದಲೂ ಉಪಾದೇಯವಾಗಿರುತ್ತವೆಯಾದಕಾರಣ ರುದ್ರನ ಅನುಗ್ರಹದಿಂದ ನಮ್ಮ ಬುದ್ಧಿಗೆ ಗೋಚರವಾದ ಮಂತ್ರಗಳಿಂದ ರುದ್ರನನ್ನು ಸ್ತೋತ್ರಮಾಡುತ್ತೇವೆ ಎಂದು ಅರ್ಥ. ಇದರಿಂದ ರುದ್ರನು ಆಯಾಯ ಸ್ತೋತ್ರಗಳನ್ನು ಸಮರ್ಪಿಸುವ ಸ್ಥಾನವಾಗಿರುವನು. ಸ್ಕಂದಸ್ವಾಮಿಗಳೂ ಇದೇ ರೀತಿಯಾಗಿ ಅರ್ಥವನ್ನು ವಿವರಿಸಿ—**ಭವತಸ್ಸಮೀಪೇ ಕೃತವಾನಹಂ ಭವತ್ಸನ್ನಿಧೌ ಸರ್ವಾಣಿ ಉಚ್ಚರಿತವಾನ್** ನಿನ್ನ ಸನ್ನಿಧಿಯಿಂದ ಲಬ್ಧವಾದ ಸ್ತುತಿಗಳನ್ನು ನಿನ್ನ ಸನ್ನಿಧಿಯಲ್ಲಿಯೇ ಉಚ್ಚರಿಸಿ ಇರುವೆನು ಎಂದು ಅರ್ಥವನ್ನು ಹೇಳಿರುವರು

**ಮರುತಾಂ ಪಿತಃ—**ಎಂದು ಮರುತ್ಪಿತೃತ್ವವು ೧-೧೧೪-೬ನೇ ಋಕ್ಕಿನಲ್ಲಿ ವಿವೃತವಾಗಿರುತ್ತದೆ.

**ಸುಮತಿಃ ಮೃಳಯತ್ತಮಾ— ಅತಿಶಯೇನ ಸುಖಯಿತೃತಮಾ ।** ಇತರರಿಗೆ ಮಂಗಳಾಶಂಸನೆಯನ್ನು ಮಾಡುವ ರುದ್ರನ ಸಂಬಂಧಿಯಾದ ಬುದ್ಧಿಯು ಎಲ್ಲರಿಗೂ ಸುಖಜನಕವಾಗಿಯೂ ಪೂಜ್ಯವಾಗಿಯೂ ಇರುತ್ತದೆ. ಮೃಡ ಸುಖನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಮೃಳಯತ್ ಶಬ್ದವು ಸುಖವಾಚಿಯಾಗಿರುವುದು. ಈ ಶಬ್ದವು ಪೂಜಾರ್ಥಕವಾಗಿಯೂ ಇರುವುದೆಂದು ಹೇಳಿ ನಿರುಕ್ತಕಾರರು ಉದಾಹರಣೆಯನ್ನು ಕೊಟ್ಟಿರುವರು.

**ಕ್ಷೇತ್ರಸ್ಯ ಪತಿನಾ ವಯಂ ಹಿತೇನೇವ ಜಯಾಮಸಿ ।**
**ಗಾಮಶ್ವಂ ಪೋಷಯಿತ್ನ್ವಾ ಸ ನೋ ಮೃಳಾತೀ ದೃಶೇ ॥**

(ಋ. ಸಂ. ೪-೫೭-೧)

ಇಲ್ಲಿ **ಮೃಳತಿರ್ದಾನಕರ್ಮಾ ವಾ ಪೂಜಾಕರ್ಮಾ ವಾ ।** (ನಿ. ೧೦-೧೫) ಮೃಳಾತಿ ಎಂಬ ಶಬ್ದವು ದಾನಕರ್ಮ ಅಥವಾ ಪೂಜಾಕರ್ಮವೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

**ಕ್ಷೇತ್ರಸ್ಯ ಪತೇ ಮಧುಮನ್ತಮೂರ್ಮಿಂ ಧೇನುರಿವ ಪಯೋ ಅಸ್ಮಾಸು ಧುಕ್ಷ್ವ ।**
**ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು ॥**

(ಋ. ಸಂ. ೩-೮-೯-೨)

**ಮೃಳಯತಿರುಪದಯಾಕರ್ಮಾ ಪೂಜಾಕರ್ಮಾ ವಾ**

(ನಿ. ೧೦-೧೬)

ನಿರುಕ್ತದಲ್ಲಿ-ಮೃಳಧಾತುವು ಸುಖವಾಚಿಯಾಗಿರುವುದು ಅಥವಾ ಪೂಜಾರ್ಥಕವಾಗಿರುವುದು ಎಂದು ಹೇಳಿರುವರು. ರುದ್ರನ ಬುದ್ಧಿಯು ನಮ್ಮ ವಿಷಯದಲ್ಲಿ ಅನುಗ್ರಹವನ್ನುಂಟುಮಾಡುವುದಾಗಿರಲಿ. ಅಂತಹ ಬುದ್ಧಿಯು ನಮಗೆ ಪೂಜಾರ್ಹವಾಗಿಯೂ ಸುಖಕರವಾಗಿಯೂ ಪರಿಣಮಿಸಲಿ ಎಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪಶುಪಾಇವೆ**—ಪಶೂನ್ ಪಾತಿ ಇತಿ ಪಶುಪಾಃ. ಪಾ ರಕ್ಷಣೇ. ಧಾತು. **ಆತೋಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವಿಚ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಕರಂ**—ಡುಕೃಞ್ ಕರಣೇ. ಧಾತು. **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಉತ್ತಮಪುರುಷ ಬಹುವಚನದಲ್ಲಿ ಮಸ್ಸಿಗೆ **ತಸ್‌ಥಸ್**—ಸೂತ್ರದಿಂದ ಅಮಾದೇಶ. **ಚ್ಲಿಲುಙಿ** ಎಂಬುದರಿಂದ ಚ್ಲಿ ವಿಕರಣ ಬಂದಾಗ **ಕೃಮೃದೃರುಹಿಭ್ಯ**—(ಪಾ. ಸೂ. ೩-೧-೫೯) ಎಂಬುದರಿಂದ ಅಙಾದೇಶ. ಙಿತ್ತಾದರೂ **ಋದೃಶೋಙಿಗುಣಃ** (ಪಾ. ಸೂ. ೭-೪-೧೬) ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರಾಸ್ವ**—ರಾ ಆದಾನೇ ಧಾತು. ವ್ಯತ್ಯಯದಿಂದ ಆತ್ಮನೇ ಪದಿಯಾಗುತ್ತದೆ. ಥಾಸಿಗೆ ಸೇ ಆದೇಶ ಬಂದಾಗ **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ವತ್ವ. ತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪಿತಃ ಮರುತಾಮ್—ಪರಮಪಿ ಚ್ಛಂದಸಿ** ಎಂಬ ವಚನದಿಂದ ಪಿತಃ ಎಂಬ ಆಮಂತ್ರಿತದ ಅವಯವವು ಮುಂದಿರುವ ಮರುತಾಮ್ ಎಂಬುದೂ ಆಗುವುದರಿಂದ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಪದದ್ವಯಕ್ಕೂ ಅನುದಾತ್ತಸ್ವರ ಬರುತ್ತದೆ.

**ಅಸ್ಮೇ**—ಅಸ್ಮದ್ ಶಬ್ದ. ಚತುರ್ಥೀ ಬಹುವಚನ ಭ್ಯಸ್‌ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭ ೧-೩೯) ಎಂಬುದರಿಂದ ಅದಕ್ಕೆ ಶೇ ಆದೇಶ. **ಶೇಷೇಲೋಪಃ** ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪ. **ಸಾವೇಕಾಚಃ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಭದ್ರಾ**—ಭದಿ ಕಲ್ಯಾಣೇ ಸುಖೇ ಚ. ಧಾತು. ಇದಕ್ಕೆ ಔಣಾದಿಕ ರಕ್ ಪ್ರತ್ಯಯ. ಸ್ತ್ರೀತ್ವದಲ್ಲಿ ಟಾಪ್.

**ಮೃಳಯತ್ತಮಾ**—ಮೃಡ ಸುಖನೇ, ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣ್ಯಂತದಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚ್ಚಿಗೆ ಗುಣ. ಅಯಾದೇಶ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಶತೃ ಪ್ರತ್ಯಯಕ್ಕೆ ಆರ್ಧಧಾತುಕಸಂಜ್ಞೆ

ಬರುವುದರಿಂದ **ತಾಸ್ಯನುದಾತ್ತೇತ್**—(ಪಾ ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕಾನುದಾತ್ತತ್ವ ಸ್ವರ ಬಾರದಿರುವುದರಿಂದ ಪ್ರತ್ಯಯಸ್ವರದಿಂದ ಅದು ಉದಾತ್ತವಾಗುತ್ತದೆ. ಅತಿಶಯೇನ ಮೃಳಯಂತೀ. ಮೃಳಯತ್ತಮಾ. **ಅತಿಶಾಯನೇತಮಬಿಷ್ಠನೌ** ಎಂಬುದರಿಂದ ತಮಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಟಾಪ್.

**ಅಥ—ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವೃಣೀಮಹೇ—**ವೃಙ್ ಸಂಭಕ್ತೌ. ಧಾತು. ಕ್ರ್ಯಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿಗೆ ಏತ್ವ. ಶ್ನಾವಿಕರಣ. **ಈಹಲ್ಯಘೋಃ** (ಪಾ. ಸೂ ೬-೪-೧೧೩) ಎಂಬುದರಿಂದ ವಿಕರಣದ ಆಕಾರಕ್ಕೆ ಈತ್ವ. ನಿಜಂತನಿಘಾತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಆರೇ ತೇ ಗೋಘ್ನಮುತ ಪೂರುಷಘ್ನಂ ಕ್ಷಯದ್ವೀರ ಸುಮ್ನ-
ಮಸ್ಮೇ ತೇ ಅಸ್ತು ।
ಮೃಳಾ ಚ ನೋ ಅಧಿ ಚ ಬ್ರೂಹಿ ದೇವಾಧಾ ಚ ನಃ ಶರ್ಮ
ಯಚ್ಛ ದ್ವಿಬರ್ಹಾಃ ॥ ೧೦ ॥

॥ ಪದಪಾಠಃ ॥

ಆರೇ । ತೇ । ಗೋಽಘ್ನಂ । ಉತ । ಪುರುಷಽಘ್ನಂ । ಕ್ಷಯತ್ಽವೀರ ।
ಸುಮ್ನಂ । ಅಸ್ಮೇ ಇತಿ । ತೇ । ಅಸ್ತು ।
ಮೃಳ । ಚ । ನಃ । ಅಧಿ । ಚ । ಬ್ರೂಹಿ । ದೇವ । ಅಧ । ಚ । ನಃ । ಶರ್ಮ ।
ಯಚ್ಛ । ದ್ವಿಽಬರ್ಹಾಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಕ್ಷಯದ್ವೀರ ಕ್ಷಪಿತಸರ್ವಶತ್ರುಜನ ರುದ್ರ ತೇ ತ್ವದೀಯಂ ಗೋಘ್ನಂ ಯದ್ಗೋಹನನಂ ಯದ್ವಾ ಗೋಹನನಸಾಧನಮಾಯುಧಂ । ಉತಾಪಿ ಚ ಪುರುಷಘ್ನಂ ಪುರುಷಹನನಂ ತತ್ಸಾಧನ-ಮಾಯುಧಂ ವಾ ತದುಭಯಮಾರೇ ದೂರೇಽಸ್ಮತ್ತೋ ವಿಪ್ರಕೃಷ್ಟದೇಶೇ ಭವತು । ಅಸ್ಮೇ ಅಸ್ಮಾಸು ತೇ ತ್ವದೀಯಂ ಸುಮ್ನಂ ಸುಖಮಸ್ತು । ಭವತು । ಅಪಿ ಚ ನೋಽಸ್ಮಾಕಂ ಮೃಳ । ಸುಖಸಿದ್ಧ್ಯರ್ಥಂ ಪ್ರಸನ್ನೋ ಭವ । ಹೇ ದೇವ ದ್ಯೋತಮಾನ ರುದ್ರ ನೋಽಸ್ಮಾನಧಿ ಬ್ರೂಹಿ ಚ । ಅಧಿವಚನಂ ಪಕ್ಷಪಾತೇನ ವಚನಂ ಬ್ರಾಹ್ಮಣಾಯಾಧಿ ಬ್ರೂಯಾತ್ । ತೈ. ಸಂ. ೨-೫-೧೧-೯ । ಇತಿ ಯಥಾ । ಅಥಚಾಥಾನಂತರಂ ಚ ದ್ವಿಬರ್ಹಾ ದ್ವಯೋಃ ಸ್ಥಾನಯೋಃ ಪೃಥಿವ್ಯಾಮಂತರಿಕ್ಷೇ ಚ ಪರಿವೃಢಃ । ಯದ್ವಾ । ದ್ವಯೋರ್ದಕ್ಷಿಣೋತ್ತರಮಾರ್ಗಯೋರ್ಜ್ಞಾನಕರ್ಮಣೋರ್ವಾ ಪರಿವೃಢಃ ಸ್ವಾಮೀ । ಸ ತ್ವಂ ನೋಽಸ್ಮಭ್ಯಂ ಶರ್ಮ ಸುಖಂ ಯಚ್ಛ । ದೇಹಿ ॥ ಗೋಘ್ನಂ । ಹನ ಹಿಂಸಾಗತ್ಯೋಃ । ಅಸ್ಮಾದ್ಭೂತಾರ್ಥೇ ಕವಿಧಾನಮಿತಿ ಭಾವೇ ಕರಣೇ ವಾ ಕಪ್ರತ್ಯಯಃ । ಗಮಹನೇತ್ಯುಪಧಾಲೋಪಃ । ಹೋ ಹಂತೇರಿತಿ ಕುತ್ವಂ । ದ್ವಿಬರ್ಹಾಃ । ವೃಹ ವೃಹಿ ವೃದ್ಧೌ । ದ್ವಯೋಃ ಸ್ಥಾನಯೋರ್ವರ್ಹತೇ ಪ್ರವರ್ಧತ ಇತಿ ದ್ವಿಬರ್ಹಾಃ । ಅಸುನ್ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಹೇ ಕ್ಷಯದ್ವೀರ**—ಎಲೈ ಶತ್ರುನಾಶಕನಾದ ರುದ್ರನೇ । **ತೇ**—ನಿನ್ನ । **ಗೋಘ್ನಂ**—ಗೋಹನನ ಸಾಧನವಾದ ಆಯುಧವೂ । **ಉತ**—ಮತ್ತು । **ಪುರುಷಘ್ನಂ**—ಪುರುಷರನ್ನು ವಧಿಸುವ ಆಯುಧವೂ । **ಆರೇ**—(ನಮ್ಮಿಂದ) ಬಹಳ ದೂರದಲ್ಲಿ (ಇರಲಿ) । **ಅಸ್ಮೇ**—ನಮ್ಮಲ್ಲಿ । **ತೇ**—ನಿನ್ನ (ನಿನ್ನಿಂದ ಅನುಗ್ರಹಿಸಲ್ಪಡುವ) । **ಸುಮ್ನಂ**—ಸುಖವು । **ಅಸ್ತು**—ಇರಲಿ (ಮತ್ತು) । **ನಃ ಮೃಳ**—ನಮಗೆ ಸುಖಸಾಧನನಾಗು । **ದೇವ**—ಎಲೈ ಪ್ರಕಾಶಮಾನನಾದ ರುದ್ರನೇ । **ನಃ ಅಧಿ ಬ್ರೂಹಿ ಚ**—ನಮ್ಮ ಪಕ್ಷವನ್ನು ಹಿಡಿದು ಮಾತನಾಡು । **ಅಥ ಚ**—ಅನಂತರ । **ದ್ವಿಬರ್ಹಾಃ**—ಪೃಥಿವ್ಯಂತರಿಕ್ಷಸ್ವಾಮಿಯಾದ (ಅಥವಾ ಜ್ಞಾನ ಮತ್ತು ಕರ್ಮಮಾರ್ಗಗಳಿಗೆ ಸ್ವಾಮಿಯಾದ) ನೀನು । **ನಃ**—ನಮಗೆ । **ಶರ್ಮ**—ಸುಖವನ್ನು । **ಯಚ್ಛ**—ಕೊಡು.

॥ ಭಾವಾರ್ಥ ॥

ಶತ್ರುನಾಶಕನಾದ ಎಲೈ ರುದ್ರನೇ, ನಿನ್ನ ಗೋಹನನ ಮತ್ತು ಪುರುಷರನ್ನು ವಧಿಸು ಸಾಧನವಾದ ಆಯುಧಗಳು ನಮ್ಮಿಂದ ದೂರ ಇರಲಿ. ನಮಗೆ ಸುಖವುಂಟಾಗಲಿ; ನಮ್ಮ ಸುಖಸಾಧನನಾಗು; ಎಲೈ ದೇವ, ನಮ್ಮ ಪಕ್ಷ ಹಿಡಿದು ಮಾತನಾಡು; ಪೃಥಿವ್ಯಂತರಿಕ್ಷಗಳಿಗೆ ಅಥವಾ ಜ್ಞಾನಕರ್ಮಗಳೆರಡಕ್ಕೂ ಸ್ವಾಮಿಯಾದ ನೀನು ನಮಗೆ ಸುಖವನ್ನುಂಟುಮಾಡು.

## English Translation.

Destroyer of heroes. may your cow-killing or man-slaying (weapon) be far away, and let the felicity granted by you be ours; favour us; speak,

brilliant hero, in our behalf, and grant us, you who ar mighty over the two (realms of heaven and earth), prosperity.

॥ ವಿಶೇಷವಿಷಯಗಳು ॥

**ಕ್ಷಯದ್ವೀರ—ಕ್ಷಪಿತಸರ್ವಶತ್ರುಜನ** । ಶತ್ರುಜನರನ್ನೆಲ್ಲಾ ನಾಶಮಾಡುವವನು ರುದ್ರನು ಎಂಬ ಇದೇ ಮೊದಲಾದ ಕ್ಷಯದ್ವೀರ ಶಬ್ದದ ಅರ್ಥವಿವರಣೆಯು ೧-೧೧೪-೨-೩ ನೇ ಋಕ್ಕುಗಳಲ್ಲಿ ವಿವೃತವಾಗಿರುತ್ತದೆ.

ಈ ಋಕ್ಕಿನಲ್ಲಿ ರುದ್ರನ ಸಂಬಂಧಿಯಾದ ಗೋಹನನ, ಪುರುಷಹನನ ಇವುಗಳನ್ನು ಆಚರಿಸುವ ಆಯುಧವು ದೂರದಲ್ಲಿ ಇಡುವುದರಿಂದ ರುದ್ರನ ಪ್ರಸನ್ನತೆಯು ನಮ್ಮಲ್ಲಿ ಉಂಟಾಗಲಿ ಎಂದೂ, ರುದ್ರನು ಸುಖವನ್ನು ಅನುಗ್ರಹಿಸಲಿ ಎಂದೂ, ಪ್ರಾರ್ಥನೆಯು ಉಕ್ತವಾಗಿರುವುದು. ಮತ್ತು **ಬ್ರಾಹ್ಮಣಾಯಾಧಿಬ್ರೂಯಾತ್** (ತೈ. ಸಂ. ೨-೫-೧೧-೯) ಬ್ರಾಹ್ಮಣನಿಗಾಗಿ ವಿಶ್ವಾಸದಿಂದ ಕೂಡಿರುವ ಮಾತುಗಳನ್ನು ಹೇಳಬೇಕು ಎಂಬ ಶ್ರುತಿವಚನದ ಪ್ರಕಾರ ರುದ್ರನು ತನ್ನ ವಿಶ್ವಾಸವನ್ನು ತೋರಿಸುವ ವಚನವೂ ನಮ್ಮ ವಿಷಯದಲ್ಲಿ ಉಂಟಾಗಲಿ ಎಂದು ಪ್ರಾರ್ಥನೆಯು ನಿರ್ದಿಷ್ಟವಾಗಿರುವುದು.

**ದ್ವಿಬರ್ಹಾಃ**—ಪೃಥಿವೀ ಮತ್ತು ಅಂತರಿಕ್ಷವೆಂಬ ಎರಡು ಸ್ಥಾನಗಳಲ್ಲಿಯೂ ಶ್ರೇಷ್ಠನಾಗಿರುವವನು. ಅಥವಾ ದಕ್ಷಿಣಮಾರ್ಗ ಉತ್ತರಮಾರ್ಗಗಳೆಂದು ಪ್ರಸಿದ್ಧವಾದ ಜ್ಞಾನಮಾರ್ಗ ಮತ್ತು ಕರ್ಮಮಾರ್ಗ ಇವುಗಳನ್ನು ಇತರರಿಂದ ಬಾಧಕವು ಬರದಂತೆ ರಕ್ಷಿಸುತ್ತಾ ಆಯಾಯ ಅಧಿಕಾರಿಗಳಿಗೆ ಆಯಾಯ ಮಾರ್ಗಗಳಲ್ಲಿ ಪ್ರವೇಶಾದಿಗಳು ಲಭಿಸುವಂತೆ ಅನುಗ್ರಹಮಾಡುವ ಪ್ರಭುವಾದವನು ರುದ್ರನು ಎಂದು ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳು— **ದ್ವಿಬರ್ಹಾಃ—ಬೃಂಹಿರ್ವೃದ್ಧ್ಯರ್ಥಃ ಯಷ್ಟುಃ ಸ್ತೋತುಶ್ಚ ದ್ವಯೋಃ ವರ್ಧಯಿತಾ ಬೃಂಹ್** ಧಾತುವು ವೃದ್ಧಿ ಎಂದು ಅರ್ಥವನ್ನು ಬೋಧಿಸುವುದು. ಆದುದರಿಂದ ರುದ್ರನು ಯಜ್ಞಮಾಡುವವನಿಗೂ ಸ್ತೋತ್ರಮಾಡುವವನಿಗೂ ವೃದ್ಧಿಯನ್ನು ಉಂಟುಮಾಡುವವನು **ಅಥವಾ ಯಜ್ಞಸಂಗ್ರಾಮಯೋರ್ವೀರ್ಯೇಣ ಮಧ್ಯಮೋತ್ತಮಯೋರ್ವಾರೂಪೇಣ । ರುದ್ರೋ ಹಿ ಮಧ್ಯಮಸ್ಥಾನೀಯಃ ಸ ಆಪ್ರವೃದ್ಧೋ ದಿವ್ಯಾದಿತ್ಯಾ ಶಕ್ನೋತಿಪ್ರಭೂತಾ ರಸಾ ಪ್ರತಿಗ್ರಹೀತುಂ । ಅಂತರಿಕ್ಷೇ ಆಪ್ರವೃದ್ಧಃ ಶಕ್ನೋತಿ ಚ ವರ್ಧಯಿತುಂ ಅತ ಉಪಪನ್ನಮಸ್ಯ ದ್ವಿಬರ್ಹತ್ವಂ ।** ಯಜ್ಞ ಮತ್ತು ಯುದ್ಧ ಇವುಗಳಲ್ಲಿ ತನ್ನ ಶಕ್ತಿಯಿಂದ ವೃದ್ಧಿಯನ್ನು ತನ್ನ ಆಶ್ರಿತರಿಗೆ ಅನುಗ್ರಹಿಸುತ್ತಿರುವನು. ಇದರಿಂದ ದ್ವಿಬರ್ಹನಾಗಿರುವನು; ರುದ್ರನು ಮಧ್ಯಸ್ಥಾನ (ಅಂತರಿಕ್ಷ) ದೇವತೆಯಾಗಿರುವುದರಿಂದ ಆದಿತ್ಯರೂಪದಿಂದ ಅಂತರಿಕ್ಷದಲ್ಲಿ ಅತಿಶಯಿತವಾದ (ರೂಪದಿಂದ) ಶಕ್ತಿಯಿಂದ ರಸವನ್ನು ಸಂಗ್ರಹಿಸುವವನು ಮತ್ತು ಅಂತರಿಕ್ಷದಲ್ಲಿ ವೃದ್ಧಿಯನ್ನು ಹೊಂದುವ ಸಾಮರ್ಥ್ಯವನ್ನು ಹೊಂದಿರುವನು. ಆದ್ದರಿಂದ ರುದ್ರನು **ದ್ವಿಬರ್ಹಾಃ**—ಎರಡು ವಿಧದಿಂದ ವೃದ್ಧಿಯನ್ನು ಹೊಂದುವನೆಂದು ಅರ್ಥವನ್ನು ವಿವರಿಸಿರುವರು. **ದ್ವಯೋಃ ಸ್ಥಾನಯೋಃ ಬರ್ಹತೇ ಪ್ರವರ್ಧತೇ ಇತಿ ದ್ವಿಬರ್ಹಾಃ**—ಎಂದು ದ್ವಿಬರ್ಹಶಬ್ದದ ಅರ್ಥವಚನಪ್ರಕಾರವು ಎರಡು ಭಾಷ್ಯಗಳಲ್ಲಿಯೂ ಬೇರೆ ಬೇರೆ ವಿಧವಾಗಿ ವಿವೃತವಾಗಿರುತ್ತದೆ.

**ಗೋಘ್ನಂ**—ಗೋವುಗಳನ್ನು ಕೊಲ್ಲಲು ಸಾಧನಭೂತವಾದ ಆಯುಧವೆಂದು ಭಾಷ್ಯಕಾರರು ಅರ್ಥವನ್ನು ಹೇಳಿರುವರುವರು. ಇಲ್ಲಿ ಗೋಶಬ್ದಕ್ಕೆ ಪಶುವೆಂಬ ಸಾಮಾನ್ಯಾರ್ಥವನ್ನು ಹೇಳಬಹುದು. **ಪಶೂನಾಂ ಪತಯೇ** ಎಂದು ಶ್ರುತಿವಚನದ ಪ್ರಕಾರ ರುದ್ರನು ಪಶುಗಳಿಗೆ ಸ್ವಾಮಿಯಾಗಿ ಅವುಗಳನ್ನು ರಕ್ಷಿಸುವನು ಎಂದು ಹೇಳಿದೆ ಈ ಸೂಕ್ತದ ೮ ನೇ ಋಕ್ಕಿನಲ್ಲಿ **ಮಾನೋ ಗೋಷು ಮಾನೋ ಅಶ್ವೇಷು ರೀರಿಷಃ**—ನಮ್ಮ ಗೋವುಗಳನ್ನು ನಮ್ಮ ಅಶ್ವಗಳನ್ನು ಹಿಂಸಿಸಬೇಡ ಎಂಬ ಪ್ರಾರ್ಥನೆಯಿರುವುದು. ಆದುದರಿಂದ ನಮ್ಮ ಗೋವುಗಳನ್ನೇಮೊದಲಾದ ಪಶುಗಳ ವಿಷಯದಲ್ಲಿ ಹಾನಿಯನ್ನುಂಟು ಮಾಡದೆ ರಕ್ಷಿಸಬೇಕೆಂದು ಪ್ರಾರ್ಥನೆಯು ಇಲ್ಲಿ ಭಾಸವಾಗುವುದು.

॥ ವ್ಯಾಕರಣಪ್ರಕ್ರಿಯಾ ॥

**ಗೋಘ್ನಮ್**—ಹನ ಹಿಂಸಾಗತ್ಯೋಃ ಧಾತು ಇದಕ್ಕೆ **ಘಞರ್ಥೇ ಕವಿಧಾನಮ್** ಎಂಬ ವಚನದಿಂದ ಭಾವ ಅಥವಾ ಕರಣಾರ್ಥದಲ್ಲಿ ಕ ಪ್ರತ್ಯಯ. ಕಿತ್ತಾದುದರಿಂದ **ಗಮಹನಜನ**—(ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. **ಹೋಹಂತೇ**—(ಪಾ. ಸೂ. ೭-೩-೫೪) ಎಂಬುದರಿಂದ ನಕಾರ ಪರವಾದುದರಿಂದ ಹನ ಹಕಾರಕ್ಕೆ ಕುತ್ವ. ಪ್ರತ್ಯಯಸ್ವರ ಬರುತ್ತದೆ. ಸಮಾಸವಾದಾಗ ಕೃದುತ್ತರಪದವಾಗಿ ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಹೀಗೆಯೇ ಪೂರುಷಘ್ನಮ್ ಎಂಬಲ್ಲಿಯೂ ಪ್ರಕ್ರಿಯೆ ಸಮಾನ.

**ಕ್ಷಯದ್ವೀರ**—ಕ್ಷಯಂತೋ ವೀರಾಃ ಯಸ್ಮಿನ್ ಸಃ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಸ್ತು**—ಅಸ ಭುವಿ. ಧಾತು. ಲೋಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮೃಳ**—ಮೃಡ ಸುಖನೇ ಧಾತು. **ಲೋಟ್**ಮಧ್ಯಮಪುರುಷ ಏಕವಚನದರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣ (ಶ) ಸ್ವರ ಉಳಿಯುತ್ತದೆ. ದ್ವ್ಯಚ್ಕವಾದುದರಿಂದ **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫.) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಬ್ರೂಹಿ**—ಬ್ರೂಞ್ ವ್ಯಕ್ತಾಯಾಂ ವಾಚಿ. ಲೋಟ್ ಮಧ್ಯಮಪುರುಷ ಏಕವಚನರೂಪ. ತಿಙಂತ-ನಿಘಾತಸ್ವರ ಬರುತ್ತದೆ.

**ಯಚ್ಛ**—ದಾಣ್ ದಾನೇ. ಧಾತು. ಲೋಟ್ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಬಂದಾಗ ಶಪ್ಪನ್ನು ನಿಮಿತ್ತೀಕರಿಸಿ **ಪಾಘ್ರಾಧ್ಮಾಸ್ಥಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಯಚ್ಛಾದೇಶ. **ಅತೋ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ದ್ವಿಬರ್ಹಾಃ**—ಬೃಹ ಬೃಹಿ ವೃದ್ಧೌ ಧಾತು ದ್ವಯೋಃ ಸ್ಥಾನಯೋಃ ಬರ್ಹತೇ ಪ್ರವರ್ಧತೇ ಇತಿ ದ್ವಿಬರ್ಹಾಃ। **ಸರ್ವಧಾತುಭ್ಯಃ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. **ಪುಗಂತಲಘೂಪದಸ್ಯ ಚ**

(ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೧-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಏಕವಚನಾಂತ ರೂಪ. ‖ ೧೦ ‖



‖ ಸಂಹಿತಾಪಾಠಃ ‖

ಅವೋಚಾಮ ನಮೋ ಅಸ್ಮಾ ಅವಸ್ಯವಃ ಶೃಣೋತು ನೋ
ಹವಂ ರುದ್ರೋ ಮರುತ್ವಾನ್ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ‖ ೧೧ ‖

‖ ಪದಪಾಠಃ ‖

ಅವೋಚಾಮ । ನಮಃ । ಅಸ್ಮೈ । ಅವಸ್ಯವಃ । ಶೃಣೋತು । ನಃ । ಹವಂ ।
ರುದ್ರಃ । ಮರುತ್ವಾನ್ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ ।
ಉತ । ದ್ಯೌಃ ‖ ೧೧ ‖

|| ಸಾಯಣಭಾಷ್ಯಂ ||

ಅವಸ್ಯವೋಽವೋಽನ್ನಂ ರಕ್ಷಣಂ ವೇಚ್ಛಂತೋ ವಯಮವೋಚಾಮ | ಏತತ್ಸೂಕ್ತರೂಪಂ ಸ್ತೋತ್ರಮುವಾದಿಷ್ಮ | ಅಸ್ಮೈ ರುದ್ರಾಯ ನಮೋ ನಮಸ್ಕಾರೋಽಸ್ತು | ಮರುತ್ವಾನ್ಮರುದ್ಭಿಃ ಸ್ವಕೀಯೈಃ ಪುತ್ರೈರ್ಯುಕ್ತೋ ರುದ್ರಶ್ಚ ನೋಽಸ್ಮಾಕಂ ಹವಮಾಹ್ವಾನಂ ಶೃಣೋತು | ಸ್ವೀಕರೋತು | ಯದಸ್ಮಾಭಿರುಕ್ತಂ ನೋಽಸ್ಮದೀಯಂ ತತ್ಸರ್ವಂ ಮಿತ್ರಾದಯಃ ಷಡ್ದೇವತಾ ಮಮಹಂತಾಂ | ಪೂಜಯಂತು | ಉತಶಬ್ದೋಽಪ್ಯರ್ಥೇ || ಅವೋಚಾಮ | ಬ್ರೂಞ್ ವಕ್ತಾಯಾಂ ವಾಚಿ | ಲುಙ್ ಬ್ರುವೋ ವಚಿಃ | ಅಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ | ವಚ ಉಮಿತ್ಯುಮಾಗಮಃ | ಅವಸ್ಯವಃ | ಅವ ರಕ್ಷಣೇ | ಭಾವೇಽಸುನ್ | ಸುಪ ಆತ್ಮನಃ ಕ್ಯಚ್ | ಕ್ಯಾಚ್ಛಂದಸೀತ್ಯುಪ್ರತ್ಯಯಃ | ಹವಂ | ಭಾವೇಽನುಪಸರ್ಗಸ್ಯೇತ್ಯಪ್ ಸಂಪ್ರಸಾರಣಂ ಚ | ಮರುತ್ವಾನ್ | ಝಯ ಇತಿ ಮತುಪೋ ವತ್ವಂ | ತಸೌ ಮತ್ವರ್ಥ ಇತಿ ಭತ್ವೇನ ಪದತ್ವಾಭಾವಾಜ್ಜಶ್ತ್ವಾಭಾವಃ ||

|| ಪ್ರತಿಪದಾರ್ಥ ||

**ಅವಸ್ಯವಃ**—ರಕ್ಷಣಾಪೇಕ್ಷಿಗಳಾದ ನಾವು | **ಅವೋಚಾಮ**—ಈ ಸೂಕ್ತವನ್ನು ಪಠಿಸಿದೆವು | **ಅಸ್ಮೈ**—ಈ ರುದ್ರನಿಗೆ | **ನಮಃ**—ನಮಸ್ಕಾರವು | **ಮರುತ್ವಾನ್**—ಮರುತ್ತುಗಳಿಂದ ಯುಕ್ತನಾದ | **ರುದ್ರಃ**—ರುದ್ರನು | **ನಃ ಹವಂ**—ನಮ್ಮ ಆಹ್ವಾನವನ್ನು | **ಶೃಣೋತು**—ಕೇಳಿ ಅಂಗೀಕರಿಸಲಿ | **ನಃ ತತ್**—ನಮ್ಮಿಂದ ಉಕ್ತವಾದ ಈ ಸ್ತುತಿಯನ್ನು | **ಮಿತ್ರಃ**—ಮಿತ್ರನೂ | **ವರುಣಃ**—ವರುಣನೂ | **ಅದಿತಿಃ**—ದೇವಮಾತೆಯಾದ ಅದಿತಿಯೂ | **ಸಿಂಧುಃ**—ಸಾಗರಾಧಿದೇವತೆಯೂ | **ಪೃಥಿವೀ**—ಪೃಥಿವ್ಯಭಿಮಾನಿದೇವತೆಯೂ | **ಉತ**—ಮತ್ತು | **ದ್ಯೌಃ**—ಸ್ವರ್ಗಾಭಿಮಾನಿ ದೇವತೆಯೂ ಸಹ | **ಮಮಹಂತಾಂ**—ಮನ್ನಿಸಿ ಸಂರಕ್ಷಿಸಲಿ.

|| ಭಾವಾರ್ಥ ||

ರುದ್ರನ ರಕ್ಷಣಾಪೇಕ್ಷಿಗಳಾದ ನಾವು ಈ ಪ್ರಕಾರ ಸ್ತುತಿಸಿದೆವು. ರುದ್ರನಿಗೆ ನಮಸ್ಕಾರವಿರಲಿ. ಮರುದ್ಯುಕ್ತನಾದ ರುದ್ರನು ನಮ್ಮ ಈ ಸ್ತುತಿಯನ್ನು ಸ್ವೀಕರಿಸಲಿ. ಮತ್ತು ನಮ್ಮ ಈ ಸ್ತುತಿಯನ್ನು ಮಿತ್ರ, ವರುಣ, ಅದಿತಿ, ಸಾಗರಾಧಿದೇವತೆ, ಪೃಥಿವೀ, ಸ್ವರ್ಗಾಧಿದೇವತೆ, ಇವರುಗಳು ಮಾಹಾತ್ಮ್ಯಯುಕ್ತವನ್ನಾಗಿ ಮಾಡಲಿ.

## English Translation.

Desirous of protection, we have said, reverence be to him ; may Rudra, with the Maruts, hear our invocation ; and may Mitra, Varuna, Aditi-ocean, earth, and heaven be favourable to this our prayer.

॥ ವಿಶೇಷವಿಷಯಗಳು ॥

**ಅವಸ್ಯವಃ—ಅವಃ ಅನ್ನಂ ರಕ್ಷಣಂ ವಾ।** ಅವಃ ಎಂಬ ಶಬ್ದವು ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಅವಃ ಎಂದರೆ ಅನ್ನವೆಂದು ಅರ್ಥವು.

**ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ ॥**

(ಋ. ಸಂ. ೧೦-೧೪೯-೫)

**ಅವಸೇ ಅವನಾಯ—**ಈ ಋಕ್ಕಿನಲ್ಲಿ ಅವಸೇ-ಎಂಬುವ ಪದವು ರಕ್ಷಣೆಗಾಗಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಅನ್ನಕ್ಕಾಗಿಯೂ ಮತ್ತು ನಮ್ಮ ರಕ್ಷಣೆಗಾಗಿಯೂ ನಾವು ಈ ಸ್ತೋತ್ರವನ್ನು ಪಠಿಸಿರುವೆವು. ತನ್ನ ಪುತ್ರರಾದ ಮರುದ್ದೇವತೆಗಳೊಡನೆ ಕೂಡಿರುವ ರುದ್ರನು ನಮ್ಮ ಸ್ತೋತ್ರಗಳನ್ನು ಕೇಳಿ ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥನೆಯು ನಿರ್ದಿಷ್ಟವಾಗಿರುತ್ತದೆ.

**ಮಿತ್ರೋ ವರುಣೋ ಮಮಹಂತಾಂ**—ವರುಣನೂ ಮಿತ್ರನೂ, ಅದಿತಿಯೂ, ಸಿಂಧುವೂ, ಪೃಥಿವಿಯೂ, ಅಂತರಿಕ್ಷವೂ ಎಂಬ ಆರು ಜನ ದೇವತೆಗಳೂ ನಾವು ಸ್ತುತಿಮಾಡುವುದನ್ನು ಕೇಳಿ ನಮಗೆ ಅಭಿವೃದ್ಧಿಯನ್ನು ಉಂಟುಮಾಡಲಿ ಎಂದು ಪ್ರಾರ್ಥನೆಯು ಉಕ್ತವಾಗಿರುವುದು. ಅಥವಾ ಮಹ ಪೂಜಾಯಾಂ ಎಂಬ ಪೂಜಾರ್ಥಕವಾದ ಮಹ ಧಾತುವಿನಿಂದ ಮಮಹಂತಾಂ ಎಂಬ ರೂಪವು ಆಗಿರುವುದು. ಈ ಸ್ತೋತ್ರವು ದೇವತೆಗಳ ಮನಸ್ಸಿಗೆ ಆನಂದವನ್ನು ಉಂಟುಮಾಡುವುದರಲ್ಲಿ ಗೌರವಾಸ್ಪದವಾಗಿರಲಿ ಎಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅವೋಚಾಮ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲುಙ್. **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚಿ ಆದೇಶ. ಚ್ಲಿ ವಿಕರಣ ಬಂದಾಗ **ಅಸ್ಯತಿವಕ್ತಿಖ್ಯಾತಿಭ್ಯೋಙ್** (ಪಾ. ಸೂ. ೩-೧-೫೨) ಎಂಬುದರಿಂದ ಅದಕ್ಕೆ ಅಙಾದೇಶ. **ವಚಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಅಙನ್ನು ನಿಮಿತ್ತೀಕರಿಸಿ ಧಾತುವಿಗೆ ಉಮಾಗಮ. **ಮಿದಚೋಽಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚ್ಚಿನಪರವಾಗಿ ಬರುತ್ತದೆ. ಗುಣ. ಅಂಗಕ್ಕೆ ಅಡಾಗಮ. **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಮ ನಿಮಿತ್ತವಾಗಿ ಅದಂತಾಂಗಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಅವಸ್ಯವಃ**—ಅವ ರಕ್ಷಣೇ. ಧಾತು. ಭಾವಾರ್ಥದಲ್ಲಿ **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ಅವಃ ಆತ್ಮನಃ ಇಚ್ಛತಿ ಅವಸ್ಯತಿ **ಸುಪಆತ್ಮನಃಕ್ಯಚ್** (ಪಾ. ಸೂ ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ಸನಾದ್ಯಂತಾ ಧಾತವಃ** (ಪಾ ಸೂ. ೩-೧-೩೨) ಎಂಬುದರಿಂದ ಧಾತುಸಂಜ್ಞಾ ಬರುತ್ತದೆ. ಕ್ಯಜಂತದಮೇಲೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. **ಅತೋಲೋಪಃ**

(ಪಾ. ಸೂ. ೬-೪-೪೮) ಎಂಬುದರಿಂದ ಕ್ಯಚ್ಚಿನ ಆಕಾರಕ್ಕೆ ಲೋಪ. ಅವಸ್ಯು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಜಸ್ ಪರವಾದಾಗ **ಜಸಿಚ** (ಪಾ. ಸೂ. ೭-೩-೧೦೯) ಎಂಬುದರಿಂದ ಹ್ರಸ್ವಕ್ಕೆ ಗುಣ. ಅವಾದೇಶ.

**ಶೃಣೋತು**—ಶ್ರು ಶ್ರವಣೇ. ಧಾತು. ಲೋಟ್ ಪ್ರಥಮಪುರುಷ ಏಕವಚನದಲ್ಲಿ ಉತ್ವ. **ಶ್ರುವಃ ಶೃ ಚ** (ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ. ಶ್ನುವಿಕರಣ. ಪ್ರತ್ಯಯ ನಿಮಿತ್ತವಾಗಿ ಅದಕ್ಕೆ ಗುಣ. ಋಕಾರದ ಪರದಲ್ಲಿರುವುದರಿಂದ ಣತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಹವಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. **ಭಾವೇಽನುಪಸರ್ಗಸ್ಯ** (ಪಾ. ಸೂ. ೩-೩-೭೫) ಎಂಬುದರಿಂದ ಇದಕ್ಕೆ ಅಪ್ ಪ್ರತ್ಯಯ ; ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ ಬಂದಾಗ ಪ್ರತ್ಯಯನಿಮಿತ್ತವಾಗಿ ಅದಕ್ಕೆ ಗುಣ ಅವಾದೇಶ. ಅಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಮರುತ್ವಾನ್**—ಮರುತಃ ಅಸ್ಯ ಸಂತಿ ಇತಿ ಮರುತ್ವಾನ್. **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ಝಯಃ** (ಪಾ. ೮-೨-೧೦) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವಬರುತ್ತದೆ. **ತಸೌ ಮತ್ವರ್ಥೇ** (ಪಾ. ಸೂ. ೧-೪-೧೯) ಎಂಬುದರಿಂದ ಪದಸಂಜ್ಞೆಗೆ ಅಪವಾದವಾಗಿ ಭಸಂಜ್ಞಾ ಬರುವುದರಿಂದ **ಝಲಾಂ ಜಶೋಽಂತೇ** ಸೂತ್ರದಿಂದ ತಕಾರಕ್ಕೆ ಜಶ್ತ್ವ ಬರುವದಿಲ್ಲ. ಪ್ರಥಮಾ ಸು ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಸಂಯೋಗಾಂತಲೋಪವು ಅಸಿದ್ಧವಾಗುವುದರಿಂದ ನಲೋಪ ಬರುವುದಿಲ್ಲ. ॥ ೧೧ ॥

ನೂರಹದಿನಾಲ್ಕನೇ ಸೂಕ್ತವು ಸಮಾಪ್ತವು.



# ನೂರಹದಿನ್ನೈದನೆಯ ಸೂಕ್ತವು

**ಚಿತ್ರಮಿತಿ ಷಡೃಚಂ ದಶಮಂ ಸೂಕ್ತಂ ಕುತ್ಸಸ್ಯಾರ್ಷಂ ತ್ರೈಷ್ಟುಭಂ ಸೂರ್ಯದೇವತಾಕಂ । ತಥಾ ಚಾನುಕ್ರಾಂತಂ । ಚಿತ್ರಂ ಷಟ್ ಸೌರ್ಯಮಿತಿ ॥ ಆಶ್ವಿನಶಸ್ತ್ರೇ ಸೂರ್ಯೋದಯಾದೂರ್ಧ್ವಂ ಸೌರ್ಯಾಣಿ ಸೂಕ್ತಾನಿ ಶಂಸನೀಯಾನಿ । ತತ್ರೇದಂ ಸೂಕ್ತಂ ಶಂಸನೀಯಂ । ಸೂತ್ರಿತಂ ಚ । ಚಿತ್ರಂ ದೇವಾನಾಂ ನಮೋ ಮಿತ್ರಸ್ಯ । ಆ. ೬–೫ । ಇತಿ ॥ ಆದಿತಸ್ತಿಸ್ರ ಋಚಃ ಸೌರ್ಯಸ್ಯ ಪಶೋರ್ವಪಾಪುರೋಡಾಶಹವಿಷಾಂ ಕ್ರಮೇಣಾನುವಾಕ್ಯಾಃ । ತತೋ ದ್ವೇ ವಪಾಪುರೋಡಾಶಯೋರ್ಯಾಜ್ಯೇ । ತಥಾ ಚ ಸೂತ್ರಿತಂ । ಚಿತ್ರಂ ದೇವಾನಾಮುದಗಾದನೀಕಮಿತಿ ಪಂಚ ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ । ಆ. ೩–೮ । ಇತಿ ॥ ಅತಿಮೂರ್ತಿನಾಮ್ನ್ಯೇಕಾಹೇ ಶುನಾಸೀರ್ಯೇ ಪರ್ವಣಿ ಚ ಸೂರ್ಯಸ್ಯ ಹವಿಷಶ್ಚಿತ್ರಂ ದೇವಾನಾಮಿತ್ಯೇಷಾ ಯಾಜ್ಯಾ । ಸೂತ್ರಿತಂ ಚ ತರಣಿರ್ವಿಶ್ವದರ್ಶತಶ್ಚಿತ್ರಂ ದೇವಾನಾಮುದಗಾದನೀಕಮಿತಿ ಯಾಜ್ಯಾನುವಾಕ್ಯಾಃ । ಆ. ೯–೮ । ಇತಿ ॥**

ಅನುವಾದವು—**ಚಿತ್ರಂ ದೇವಾನಾಂ** ಎಂಬ ಈ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಕುತ್ಸನು ಋಷಿಯು, ಸೂರ್ಯನು ದೇವತೆಯು, ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ-**ಚಿತ್ರಂ ಷಟ್ ಸೌರ್ಯಂ** ಎಂದು ಹೇಳಿರುವುದು. ಆಶ್ವಿನಶಸ್ತ್ರ ಮಂತ್ರಪಠನ ಮಾಡುವಾಗ ಸೂರ್ಯೋದಯಾನಂತರ ಸೂರ್ಯಸಂಬಂಧವಾದ ಸೂಕ್ತಗಳನ್ನು ಪಠಿಸುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಚಿತ್ರಂ ದೇವಾನಾಂ ನಮೋ ಮಿತ್ರಸ್ಯ** ಎಂಬ ಸೂಕ್ತದಿಂದ ವಿವೃತವಾಗಿರುವುದು. (ಆ. ೬–೫) ಈ ಸೂತ್ರದ ಮೊದಲನೆಯ ಮೂರು ಋಕ್ಕುಗಳನ್ನು ಸೂರ್ಯ ಸಂಬಂಧವಾದ ಪಶುಹೋಮದಲ್ಲಿ ವಪಾಪುರೋಡಾಶಗಳನ್ನು ಹೋಮಮಾಡುವಾಗ ಪುರೋನುವಾಕ್ಯಾಮಂತ್ರಗಳನ್ನಾಗಿಯೂ ಅಲ್ಲಿಂದ ಮುಂದಿನ ಎರಡು ಋಕ್ಕುಗಳನ್ನು ಯಾಜ್ಯಾಮಂತ್ರಗಳನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಚಿತ್ರಂ ದೇವಾನಾಮುದಗಾದನೀಕಮಿತಿ ಪಂಚ ಶಂ ನೋ ಭವ ಚಕ್ಷಸಾ ಶಂ ನೋ ಅಹ್ನಾ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. ಮತ್ತು ಅತಿಮೂರ್ತಿ ಎಂಬ ಏಕಾಹೇಷ್ಟಿಯಲ್ಲಿ ಶುನಾಸೀರವೆಂಬ ಹೋಮಮಾಡುವಾಗ ಸೂರ್ಯದೇವತೆಗೆ **ಚಿತ್ರಂ ದೇವಾನಾಂ** ಎಂಬ ಒಂದು ಋಕ್ಕನ್ನು ಯಾಜ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ-**ತರಣಿರ್ವಿಶ್ವದರ್ಶತಶ್ಚಿತ್ರಂ ದೇವಾನಾಮುದಗಾದನೀಕಮಿತಿ ಯಾಜ್ಯಾನುವಾಕ್ಯಾಃ** ಎಂಬ ಸೂತ್ರವು ನಿರ್ದೇಶಿಸುವುದು.

## ಸೂಕ್ತ—೧೧೫

॥ ಮಂಡಲ—೧ ॥ ಅನುವಾಕ—೧೬ ॥ ಸೂಕ್ತ—೧೧೫ ॥
॥ ಅಷ್ಟಕ—೧ ॥ ಅಧ್ಯಾಯ ೮ ॥ ವರ್ಗ—೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
॥ ಋಷಿಃ—ಕುತ್ಸ ಆಂಗಿರಸಃ ॥
॥ ದೇವತಾ—ಸೂರ್ಯಃ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣ-
ಸ್ಯಾಗ್ನೇಃ ।
ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತ-
ಸ್ತಸ್ಥುಷಶ್ಚ ॥ ೧ ॥

॥ ಪದಪಾಠಃ ॥

ಚಿತ್ರಂ । ದೇವಾನಾಂ । ಉತ್ । ಅಗಾತ್ । ಅನೀಕಂ । ಚಕ್ಷುಃ । ಮಿತ್ರಸ್ಯ ।
ವರುಣಸ್ಯ । ಅಗ್ನೇಃ ।
ಆ । ಅಪ್ರಾಃ । ದ್ಯಾವಾಪೃಥಿವೀ ಇತಿ । ಅಂತರಿಕ್ಷಂ । ಸೂರ್ಯಃ । ಆತ್ಮಾ ।
ಜಗತಃ । ತಸ್ಥುಷಃ । ಚ ॥ ೧ ॥

॥ ಸಾಯಣಭಾಷ್ಯಂ ॥

ದೇವಾನಾಂ । ದೀವ್ಯಂತೀತಿ ದೇವಾ ರಶ್ಮಯಃ । ತೇಷಾಂ ದೇವಜನಾನಾಮೇವ ವಾನೀಕಂ ತೇಜಃಸಮೂಹರೂಪಂ ಚಿತ್ರಮಾಶ್ಚರ್ಯಕರಂ ಸೂರ್ಯಸ್ಯ ಮಂಡಲಮುದಗಾತ್ । ಉದಯಾಚಲಂ ಪ್ರಾಪ್ತಮಾಸೀತ್ । ಕೀದೃಶಂ । ಮಿತ್ರಸ್ಯ ವರುಣಸ್ಯಾಗ್ನೇಶ್ಚ । ಉಪಲಕ್ಷಣಮೇತತ್ । ತದುಪಲಕ್ಷಿತಾನಾಂ ಜಗತಾಂ ಚಕ್ಷುಃ ಪ್ರಕಾಶಕಂ । ಚಕ್ಷುರಿಂದ್ರಿಯಸ್ಥಾನೀಯಂ ವಾ । ಉದಯಂ ಪ್ರಾಪ್ಯ ಚ ದ್ಯಾವಾಪೃಥಿವೀ ದಿವಂ ಪೃಥಿವೀಮಂತರಿಕ್ಷಂ ಚಾಪ್ರಾಃ । ಸ್ವಕೀಯೇನ ತೇಜಸಾ ಆ ಸಮಂತಾದಪೂರಯತ್ । ಈದೃಗ್ಭೂತಮಂಡಲಾಂತರ್ವರ್ತೀ ಸೂರ್ಯೋಽಂತರ್ಯಾಮಿತಯಾ ಸರ್ವಸ್ಯ ಪ್ರೇರಕಃ ಪರಮಾತ್ಮಾ ಜಗತೋ ಜಂಗಮಸ್ಯ ತಸ್ಥುಷಃ ಸ್ಥಾವರಸ್ಯ ಚಾತ್ಮಾ ಸ್ವರೂಪಭೂತಃ । ಸ ಹಿ ಸರ್ವಸ್ಯ ಸ್ಥಾವರಜಂಗಮಾತ್ಮಕಸ್ಯ ಕಾರ್ಯವರ್ಗಸ್ಯ ಕಾರಣಂ । ಕಾರಣಾಚ್ಚ ಕಾರ್ಯಂ ನಾತಿರಿಚ್ಯತೇ । ತಥಾ ಚ ಪಾರಮರ್ಷಂ ಸೂತ್ರಂ । ತದನನ್ಯತ್ವಮಾರಂಭಣಶಬ್ದಾದಿಭ್ಯ ಇತಿ । ವೇದಾಂ. ೨-೧-೧೪ । ಇತಿ ॥ ಯದ್ವಾ । ಸ್ಥಾವರಜಂಗಮಾತ್ಮಕಸ್ಯ ಸರ್ವಸ್ಯ ಪ್ರಾಣಿಜಾತಸ್ಯ ಜೀವಾತ್ಮಾ । ಉದಿತೇ ಹಿ ಸೂರ್ಯೇ ಮೃತಪ್ರಾಯಂ ಸರ್ವಂ ಜಗತ್ಪುನಶ್ಚೇತನಯುಕ್ತಂ ಸದುಪಲಭ್ಯತೇ । ತಥಾ ಚ ಶ್ರೂಯತೇ । ಯೋಽಸೌ ತಪನ್ನುದೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತೀತಿ । ತೈ. ಆ. ೧-೧೪-೧ । ಇತಿ ॥ ಆಪ್ರಾಃ । ಪ್ರಾ ಪೂರಣೇ । ಲಙಿ ಪುರುಷವ್ಯತ್ಯಯಃ । ಅದಾದಿತ್ವಾಚ್ಛಪೋ ಲುಕ್ । ಜಗತಃ । ಗಮೇರ್ದ್ವೇ ಚ । ಪಾ. ೩-೩-೧೭೮-೩ । ಇತಿ ಕ್ವಿಬ್ದ್ವಿರ್ವಚನಂ ಚ । ಗಮಃ ಕ್ವಾವಿತ್ಯನುನಾಸಿಕಲೋಪಃ । ತಸ್ಥುಷಃ । ತಿಷ್ಠತೇರ್ಲಿಟಃ ಕ್ವಸುಃ । ದ್ವಿರ್ವಚನೇ ಶರ್ಪೂರ್ವಾಃ ಖಯಃ । ಷಷ್ಠ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಶಾಸಿವಸೀತಿ ಷತ್ವಂ ॥

॥ ಪ್ರತಿಪದಾರ್ಥ ॥

**ದೇವಾನಾಂ**—ಪ್ರಕಾಶಮಾನವಾದ ರಶ್ಮಿಗಳ । **ಅನೀಕಂ**—ಸಮೂಹರೂಪವಾದ । **ಚಿತ್ರಂ**—ಆಶ್ಚರ್ಯಕರವಾದ । **ಮಿತ್ರಸ್ಯ ವರುಣಸ್ಯ ಅಗ್ನೇಃ**—ಮಿತ್ರ, ವರುಣ, ಅಗ್ನಿ (ಇವುಗಳಿಂದ ಸಹಿತವಾದ ಪ್ರಪಂಚಕ್ಕೆ) । **ಚಕ್ಷುಃ**—ಚಕ್ಷೂರೂಪವಾದ (ಸೂರ್ಯಮಂಡಲವು) । **ಉದಗಾತ್**—ಉದಿಸಿತು (ಉದಿಸಿದ ನಂತರ) । **ದ್ಯಾವಾಪೃಥಿವೀ**—ಸ್ವರ್ಗ, ಭೂಮಿಗಳನ್ನೂ । **ಅಂತರಿಕ್ಷಂ ಚ**—ಅಂತರಿಕ್ಷವನ್ನೂ । **ಆ ಅಪ್ರಾಃ**—ಎಲ್ಲೆಡೆಯಲ್ಲಿಯೂ ವ್ಯಾಪಿಸಿತು । **ಸೂರ್ಯಃ**—ಮಂಡಲಾಂತರ್ವರ್ತಿಯಾದ ಸೂರ್ಯನು । **ಜಗತಃ**—ಚಲಿಸುವ (ಮತ್ತು) । **ತಸ್ಥುಷಃ ಚ**—ಸ್ಥಾವರವಾದ (ಚಲಿಸದಿರುವ) ಪ್ರಪಂಚದ । **ಆತ್ಮಾ**—ಸ್ವರೂಪಭೂತನು (ಪ್ರೇರಕನಾಗಿರುವನು)

॥ ಭಾವಾರ್ಥ ॥

ಅತ್ಯಾಶ್ಚರ್ಯಕರವಾದುದೂ ಮಿತ್ರ. ವರುಣ, ಅಗ್ನಿಯೇ ಆದಿಯಾದ ಸಮಸ್ತ ಪ್ರಪಂಚಕ್ಕೂ, ಕಣ್ಣಿನಂತಿರುವುದೂ ಪ್ರಕಾಶಮಾನವಾದ ಕಿರಣಗಳ ಸಮೂಹವೆಂಬ ಸೂರ್ಯಮಂಡಲವು ಉದಿಸಿ, ಸ್ವರ್ಗಭೂಮ್ಯಾಕಾಶಗಳನ್ನು

ವ್ಯಾಪಿಸಿದೆ. ಆ ಮಂಡಲಾಂತರ್ವರ್ತಿಯಾದ ಸೂರ್ಯನು ಚರಾಚರಾತ್ಮಕವಾದ ಈ ಜಗತ್ತಿಗೇ (ಅಂತರ್ಯಾಮಿಯಾಗಿ ಪ್ರೇರಕನಾದುದರಿಂದ) ಸ್ವರೂಪಭೂತನು.

## English Translation.

The wonderful host of rays has risen ; the eye of Mitra, Varuna, and Agni ; the sun, the soul of all that moves or is immoveable, has filled (with his glory) the heaven, the earth and the firmament.

॥ ವಿಶೇಷವಿಷಯಗಳು ॥

**ದೇವಾನಾಂ** — ಅನೇಕಾರ್ಥಗಳುಳ್ಳ ದಿವ್ ಧಾತುವಿಗೆ ಕಾಂತಿ ಎಂಬ ಅರ್ಥವನ್ನು ನಿಮಿತ್ತ ಮಾಡಿಕೊಂಡು ದೀವ್ಯಂತಿ—ಪ್ರಕಾಶವನ್ನು ಉಂಟುಮಾಡುವುದು ಎಂದು ದೇವಶಬ್ದಕ್ಕೆ ಇಲ್ಲಿ ರಶ್ಮಿ—ಕಿರಣ ಎಂದು ಅರ್ಥವು. ಅವಯವಾರ್ಥವನ್ನು ಆಶ್ರಯಿಸಿ ಧರ್ಮಮಾತ್ರವನ್ನು ಅರ್ಥವನ್ನಾಗಿ ಅಂಗೀಕರಿಸುವಾಗ ರಶ್ಮಿ ಎಂತಲೂ ಅವಯವವನ್ನು ಹೊಂದಿರುವ ಅವಯವಿಯನ್ನು ವಿವಕ್ಷಾಮಾಡಿದಾಗ ಪ್ರಕಾಶಮಾನರಾದ ದೇವತೆಗಳು ಎಂದೂ ಅರ್ಥವನ್ನು ಬೋಧಿಸುವುದು.

**ಅನೀಕಂ—ಸಮೂಹಃ** । ಅನೀಕ ಶಬ್ದವು—

**ಮಾತಾ ದೇವಾನಾಮದಿತೇರನೀಕಂ ಯಜ್ಞಸ್ಯ ಕೇತುರ್ಬೃಹತೀ ವಿ ಭಾಹಿ ।**

(ಋ. ಸಂ ೧-೧೧೩-೧೯)

ಎಂಬ ಋಕ್ಕಿನಲ್ಲಿ **ಅನೀಕಂ—ಪ್ರತಿಸ್ಪರ್ಧಿ, ಅನೀಕಂ ಮುಖಂ** ಎಂಬುದಾಗಿ ಅನೇಕಾರ್ಥವುಳ್ಳದ್ದಾಗಿರುವುದು. ಕಾವ್ಯಶೈಲಿಯನ್ನು ಅನುಸರಿಸಿರುವ ಸೂರ್ಯನ ಮತ್ತು ಉದಯಕಾಲದ ವರ್ಣನಾಪರವಾದ ಈ ಋಕ್ಕಿನಲ್ಲಿ ಸೂರ್ಯನ ಕಿರಣಗಳು ಉದಯವನ್ನು ಹೊಂದಿರುವುವು ಎಂದು ಹೇಳುವುದಕ್ಕೆ ಬದಲಾಗಿ ಅತಿಶಯವಾಗಿ ಬೆಳಗುವ ಕಿರಣಗಳ ಸಮೂಹವು ಉದಯವನ್ನು ಹೊಂದಿರುವುದು. ಮತ್ತು ಈ ಸಮೂಹವು ಅನಿರ್ವಚನೀಯವಾಗಿರುತ್ತದೆ ಎಂದು ವರ್ಣಿಸಿರುವುದು

**ಚಿತ್ರಂ—ವಿಚಿತ್ರಂ ಆಶ್ಚರ್ಯಕರಂ** ಎಂದು ಸಾಯಣರು ಚಿತ್ರಪದಕ್ಕೆ ಅರ್ಥವನ್ನು ಹೇಳಿರುವರು. ಇದರಿಂದ ಸೂರ್ಯೋದಯ ವರ್ಣನೆಯಾದರೆ ಸ್ವಭಾವೋಕ್ತಿಯೂ, ಸೂರ್ಯನ ವರ್ಣನೆಯು ಆದಲ್ಲಿ ಸೂರ್ಯನು ರಶ್ಮಿಗಳ ಸಮೂಹವಾಗಿರುವನು ಎಂದು ಅರ್ಥವಾಗುವ ಕಾರಣ ರೂಪಕಾಲಂಕಾರವೂ ಆಗುತ್ತದೆ ಎಂದು ತಿಳಿಯಬೇಕು.

**ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ—ಮಿತ್ರ, ವರುಣ, ಅಗ್ನಿ** ಎಂಬ ಈ ಮೂರು ಹೆಸರುಗಳನ್ನು ನಿರ್ದೇಶ ಮಾಡಿ ಇರುತ್ತದೆ. ಈ ಪದಾರ್ಥಸಾಮಾನ್ಯವನ್ನು ನೋಡಿ ತಿಳಿಯತಕ್ಕ ಜ್ಞಾನವನ್ನು ಉಂಟುಮಾಡುವ ಚಕ್ಷುರಿಂದ್ರಿಯವೇ ಸೂರ್ಯನಾಗಿರುವನೆಂದು ಉಪಲಕ್ಷಣದ ರೀತಿಯಿಂದ ಇಲ್ಲಿ ಹೇಳುತ್ತದೆ. ಇದರಿಂದ ಸೂರ್ಯನು ರಶ್ಮಿಗಳ

ಸಮೂಹವೆಂದು ಪ್ರಥಮವಾಕ್ಯದಿಂದ ನಿರ್ದಿಷ್ಟನಾಗಿ ಈ ವಾಕ್ಯದಿಂದ ಮಿತ್ರಾಗ್ನಿ ವರುಣರ ಅಥವಾ ಜಗತ್ತಿನ ಕಣ್ಣು ಎಂದು ಪ್ರತೀತವಾಗಿರುವನು ಎಂದು ಅರ್ಥವು.

**ಆ ಅಪ್ರಾಃ**—ಪೂರಣಾರ್ಥಕವಾದ ಪ್ರಾ ಧಾತುವಿನ ರೂಪವಾದ ಪ್ರಾ ಶಬ್ದದ ಸಂಗಡ ಆ ಎಂಬ ಉಪಸರ್ಗವು ಸೇರಿ ಇಲ್ಲಿ ಪ್ರಯುಕ್ತವಾಗಿರುವುದು. ಇದರಿಂದ ದೇವತೆಗಳು ಮತ್ತು ಪುಣ್ಯವಂತರೂ ಆದ ತಪಸ್ವಿಗಳ ಸಮೂಹವಾಗಿರುವ ಈ ಲೋಕಕ್ಕೆ ಚಕ್ಷುಸ್ಸ್ಥಾನೀಯನೂ ಚರಸ್ಥಿರಾತ್ಮಕವಾದ ಪ್ರಪಂಚದ ಆತ್ಮನೂ ಆಗಿರುವ ಸೂರ್ಯನು ತನ್ನ ತೇಜಸ್ಸುಗಳಿಂದ ಭೂಮಿ, ಅಂತರಿಕ್ಷ ಮತ್ತು ಸ್ವರ್ಗ ಇವೆಲ್ಲವನ್ನೂ (ತುಂಬಿ ಇರುವನು) ವ್ಯಾಪಿಸಿರುವನು. ಎಂದರೆ ಸೂರ್ಯನು ಉದಯಿಸಿ ಸಮಸ್ತ ಲೋಕವನ್ನು ತನ್ನ ಕಾಂತಿಯಿಂದ ಬೆಳಗುತ್ತಿರುವನು ಎಂದಭಿಪ್ರಾಯವು.

**ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ**—ಕಾಂತಿಸಮೂಹವಾಗಿರುವ (ಸೂರ್ಯನು) ಮಂಡಲದಮಧ್ಯದಲ್ಲಿ ಇರುವವನಾದರೂ ಎಲ್ಲವನ್ನೂ ವ್ಯಾಪಿಸಿ ಇರುವ ಕಾರಣ ಎಲ್ಲಕ್ಕೂ ಅಂತರ್ಯಾಮಿಯಾಗಿ ಆಯಾಯ ಕಾರ್ಯಗಳನ್ನು ಆಯಾಯ ಕಾಲಕ್ಕನುಗುಣವಾಗಿ ಮಾಡುವಂತೆ ಪ್ರೇರಿಸುವವನಾಗಿರುವನು. ಆದ್ದರಿಂದಲೇ ಚರವಾದ (ಸಂಚರಿಸುವ) ಮತ್ತು ಸ್ಥಿರವಾದ (ಸಂಚರಿಸದಿರುವ) ರೂಪವುಳ್ಳ ಕಾರ್ಯವರ್ಗದ ಉತ್ಪತ್ತಿಗೆ ಕಾರಣನಾಗಿ ಇರುವನು. ಕಾರಣರೂಪವನ್ನು ಹೊಂದಿ ಇರುವ ಆತ್ಮಸ್ವರೂಪವು ಕಾಲದೇಶಾದಿಗಳನ್ನು ಅನುಸರಿಸಿ ಕಾರ್ಯವಾಗಿರುವುದು. ಈ ಅಭಿಪ್ರಾಯವನ್ನು ವೇದಾಂತಸೂತ್ರಗಳನ್ನು ರಚಿಸಿರುವ ವ್ಯಾಸಮಹರ್ಷಿಗಳು **ತದನನ್ಯತ್ವಮಾರಂಭಣಶಬ್ದಾದಿಭ್ಯಃ** ಎಂಬ ಈ ಸೂತ್ರದಿಂದ ಹೇಳಿರುವರು. ಕಾರಣವಾಗಿರುವುದು ಕಾರ್ಯಕ್ಕಿಂತಲೂ ಬೇರೆಯಾಗಿರದೆ ಕಾರ್ಯಕಾರಣಗಳಿಗೆ ಅಭೇದವು ಇರುವುದು ಎಂದು ಸೂತ್ರದ ಅರ್ಥ. ಈ ಸೂತ್ರದ ಅರ್ಥವನ್ನು ಅನುಸರಿಸಿ ಸೂರ್ಯನು ಪರಮಾತ್ಮನಾಗಿರುವನು ಎಂದು ಒಂದು ಅರ್ಥ. ಅಥವಾ ಸೂರ್ಯನು ಉದಯವನ್ನು ಹೊಂದಿದ ಕೂಡಲೆ ಮೃತನಂತೆ ನಿಶ್ಚೇಷ್ಟವಾಗಿ ಯಾವ ಕಾರ್ಯವನ್ನೂ ಮಾಡಲು ಜ್ಞಾನವೂ ಶಕ್ತಿಯೂ ಇಲ್ಲದ್ದಾಗಿರುವ ಚರಸ್ಥಿರರೂಪವಾದ ಜಗತ್ತು ಜ್ಞಾನ ಶಕ್ತಿಗಳಿಂದ ಕೂಡಿ ಪ್ರಕಾಶಿಸುವ ಕಾರಣ ಜೀವನಂತೆ ಇರುವನು. **ಯೋಽಸೌ ತಪನ್ನುದೇತಿ ಸ ಸರ್ವೇಷಾಂ ಭೂತಾನಾಂ ಪ್ರಾಣನಾದಾಯೋದೇತಿ** (ತೈ. ಆ. ೧-೧೪-೧) ಎಂದು ಶ್ರುತಿಯೂ ಈ ಅಭಿಪ್ರಾಯವನ್ನು ವ್ಯಕ್ತವಾಗಿ ವಿವರಿಸಿರುವುದು. ಸೂರ್ಯನು ಲೋಕವೆಲ್ಲಕ್ಕೂ ಜ್ಞಾನವನ್ನು ಕೊಟ್ಟು ತನ್ನ ಉದಯಾಸ್ತಗಳಿಂದ ಚೇತನಾಚೇತನವುಳ್ಳದ್ದನ್ನಾಗಿ ಮಾಡುವುದರಿಂದ ಆತ್ಮನೂ ಜೀವಾತ್ಮನೂ ಆಗಿರುವನೆಂದು ಸೂರ್ಯನ ಮಹತ್ವವನ್ನು ಈ ಋಕ್ಕಿನಿಂದ ವ್ಯಕ್ತಪಡಿಸಿರುತ್ತದೆ.

ಇದಲ್ಲದೆ ಈಗಿನ ವಿಜ್ಞಾನಶಾಸ್ತ್ರಪ್ರಕಾರವಾಗಿಯೂ (sceintific view) ಸೂರ್ಯನೇ ಈ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳ ಚಲನವಲನಗಳಿಗೂ ಕಾರಣನು. ಸೂರ್ಯನಿಂದಲೇ ನಾವು ಎಲ್ಲಾ ವಿಧವಾದ ಶಕ್ತಿಯನ್ನೂ (energy) ಪಡೆಯುತ್ತೇವೆ. ಪ್ರಾಣಿವರ್ಗದಲ್ಲಿ ನಡೆಯುತ್ತಿರುವ ಚಲನವಲನಾದಿಗಳಿಗೂ ಅಂತರಿಕ್ಷದಲ್ಲಿ ನಡೆಯುವ ವಾಯುವಿನ ಚಲನ, ಮೇಘಗಳ ಉತ್ಪತ್ತಿ, ವೃಷ್ಟಿವರ್ಷಣ ಮೊದಲಾದ ಕಾರ್ಯಗಳಿಗೂ, ಭೂಮಿಯಲ್ಲಿ ಎಡಬಿಡದೆ ನಡೆಯುತ್ತಿರುವ ಸಸ್ಯೋತ್ಪತ್ತಿ, ನದಿಗಳ ಪ್ರವಾಹರೂಪವಾದ ಚಲನ. ಮೊದಲಾದ ಎಲ್ಲಾ ವಿಧವಾದ ಕಾರ್ಯಗಳಿಗೂ ಸೂರ್ಯನು ಅಥವಾ ಸೂರ್ಯನ ಕಿರಣಗಳೇ ಕಾರಣವು. ಸೂರ್ಯನ ಪ್ರಕಾಶವಿಲ್ಲದಿದ್ದರೆ

ಈ ಪ್ರಪಂಚದಲ್ಲಿ ಗಾಢವಾದ ಅಂಧಕಾರವು ಆವರಿಸುವುದಲ್ಲದೆ ಒಂದು ಹುಲ್ಲುಕಡ್ಡಿಯ ಚಲನವು ಸಹ ನಡೆಯಲಾರದು. ಆದುದರಿಂದ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಎಂಬ ವಾಕ್ಯಕ್ಕೆ The sun is the source of all energies so far as this world (earth) is concerned ಎಂಬ ಅಭಿಪ್ರಾಯವನ್ನು ಹೇಳುವುದು ಯುಕ್ತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ದೇವಾನಾಂ**—ದೀವ್ಯಂತಿ ಇತಿ ದೇವಾ: ದಿವು ಕಾಂತ್ಯಾದಿಷು. ಧಾತು. **ನಂದಿಗ್ರಹಿಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅಂತೋದಾತ್ತಸ್ವರ **ಬರುತ್ತದೆ.** ಷಷ್ಠೀ ಬಹುವಚನಾಂತರೂಪ.

**ಅಗಾತ್**—ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಏಕವಚನಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಇಣೋ ಗಾ ಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ **ಗಾತಿಸ್ಥಾ**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚ್ಚಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ಆಪ್ರಾಃ**—ಆಙ್ ಉಪಸರ್ಗ. ಪ್ರಾ ಪೂರಣೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ವ್ಯತ್ಯಯದಿಂದ ಸಿಪ್ ಬರುತ್ತದೆ. **ಇತಶ್ಚ** ಎಂಬುದರಿಂದ ಇಕಾರ ಲೋಪ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ಪಿಗೆ ಲುಕ್. ಅಂಗಕ್ಕೆ ಆಡಾಗಮ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ತಿಙಂತನಿಘಾತಸ್ವರ ಬರುತ್ತದೆ.

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯೌ. **ದಿವೋ ದ್ಯಾವಾ** (ಪಾ. ಸೂ ೬-೩-೨೯) ಎಂಬುದರಿಂದ ದಿವ್ ಶಬ್ದಕ್ಕೆ ದ್ಯಾವಾದೇಶ. **ಉಭೇ ವನಸ್ಪತ್ಯಾದಿಷು** (ಪಾ. ಸೂ. ೬-೨-೧೪೦) ಎಂಬುದರಿಂದ ಉಭಯಪದಪ್ರಕೃತಿಸ್ವರ ಬರುತ್ತದೆ ದ್ವಿತೀಯಾ ದ್ವಿವಚನಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಲುಕ್.

**ಸೂರ್ಯಃ**—ಸರತಿ ಆಕಾಶೇ ಇತಿ ಸೂರ್ಯಃ. ಸೃ ಗತೌ ಧಾತು. **ರಾಜಸೂಯಸೂರ್ಯ**-(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ.

**ಜಗತಃ**—ಗಮ್ಲೃ ಗತೌ ಧಾತು. **ಗಮೇರ್ದ್ವೇ ಚ** (ಪಾ. ಸೂ. ೩-೨-೧೭೮-೩) ಎಂಬುದರಿಂದ ಕ್ವಿಪ್. ಧಾತುವಿಗೆ ದ್ವಿರ್ವಚನ. **ಗಮಃ ಕ್ವೌ** (ಪಾ. ಸೂ. ೬-೪-೪೦) ಎಂಬುದರಿಂದ ಧಾತುವಿನ ಅನುನಾಸಿಕಕ್ಕೆ ಲೋಪ. ಅಭ್ಯಾಸಕ್ಕೆ **ಕುಹೋಶ್ಚುಃ** ಎಂಬುದರಿಂದ ಚುತ್ವ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ ಸೂ. ೬-೧-೭೧) ಎಂಬುದರಿಂದ ತುಕಾಗಮ. ಜಗತ್ ಎಂದು ರೂಪವಾಗುತ್ತದೆ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ತಸ್ಥುಷಃ**—ಷ್ಠಾ ಗತಿ ನಿವೃತ್ತೌ. ಧಾತು. **ಕ್ವಸುಶ್ಚ** (ಪಾ. ಸೂ. ೩-೨-೧೭೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಶರ್ಪೂರ್ವಾಃ ಖಯಃ** (ಪಾ. ಸೂ. ೭-೪-೬೧) ಎಂಬುದರಿಂದ

ಅಭ್ಯಾಸದಲ್ಲಿ ತಕಾರಶೇಷ. **ಹ್ರಸ್ವಃ** ಸೂತ್ರದಿಂದ ಅದಕ್ಕೆ ಹ್ರಸ್ವ. ತಸ್ಥಿವಸ್ ಶಬ್ದ. ಇದಕ್ಕೆ ಷಷ್ಠೀ ಏಕವಚನ ಪರವಾದಾಗ **ವಸೋಃ ಸಂಪ್ರಸಾರಣಂ** (ಪಾ. ಸೂ. ೬-೪-೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಸೂರ್ಯೋ ದೇವೀಮುಷಸಂ ರೋಚಮಾನಾಂ ಮರ್ಯೋ ನ
ಯೋಷಾಮಭ್ಯೇತಿ ಪಶ್ಚಾತ್ ।
ಯತ್ರಾ ನರೋ ದೇವಯಂತೋ ಯುಗಾನಿ ವಿತನ್ವತೇ ಪ್ರತಿ
ಭದ್ರಾಯ ಭದ್ರಂ ॥ ೨ ॥

॥ ಪದಪಾಠಃ ॥

**ಸೂರ್ಯಃ । ದೇವೀಂ । ಉಷಸಂ । ರೋಚಮಾನಾಂ । ಮರ್ಯಃ । ನ । ಯೋಷಾಂ ।
ಅಭಿ । ಏತಿ । ಪಶ್ಚಾತ್ ।
ಯತ್ರ । ನರಃ । ದೇವಽಯಂತಃ । ಯುಗಾನಿ । ವಿಽತನ್ವತೇ । ಪ್ರತಿ ।
ಭದ್ರಾಯ । ಭದ್ರಂ ॥ ೨ ॥**

॥ ಸಾಯಣಭಾಷ್ಯಂ ॥

**ಸೂರ್ಯೋ ದೇವೀಂ ದಾನಾದಿಗುಣಯುಕ್ತಾಂ ರೋಚಮಾನಾಂ ದೀಪ್ಯಮಾನಾಮುಷಸಂ ಪಶ್ಚಾದಭ್ಯೇತಿ । ಉಷಸಃ ಪ್ರಾದುರ್ಭಾವಾನಂತರಂ ತಾಮಭಿಲಕ್ಷ್ಯ ಗಚ್ಛತಿ । ತತ್ರ ದೃಷ್ಟಾಂತಃ । ಮರ್ಯೋ ನ ಯೋಷಾಂ । ಯಥಾ ಕಶ್ಚಿನ್ಮನುಷ್ಯಃ ಶೋಭನಾವಯವಾಂ ಗಚ್ಛಂತೀಂ ಯುವತಿಂ ಸ್ತ್ರಿಯಂ ಸತತಮನುಗಚ್ಛತಿ ತದ್ವತ್ । ಯತ್ರ ಯಸ್ಯಾಮುಷಸಿ ಜಾತಾಯಾಂ ದೇವಯಂತೋ ದೇವಂ ದ್ಯೋತಮಾನಂ ಸೂರ್ಯಂ ಯಷ್ಟುಮಿಚ್ಛಂತೋ ನರೋ ಯಜ್ಞಸ್ಯ ನೇತಾರೋ ಯಜಮಾನಾ ಯುಗಾನಿ । ಯುಗಶಬ್ದಃ ಕಾಲವಾಚೀ । ತೇನ ಚ ತತ್ರ ಕರ್ತವ್ಯಾನಿ ಕರ್ಮಾಣಿ ಲಕ್ಷ್ಯಂತೇ ಯಥಾ ದರ್ಶಪೂರ್ಣಮಾಸಾವಿತಿ । ಅಗ್ನಿಹೋತ್ರಾದೀನಿ ಕರ್ಮಾಣಿ ವಿತನ್ವತೇ । ವಿಸ್ತಾರಯಂತಿ । ಯದ್ವಾ । ದೇವಯಂತೋ ದೇವಯಾಗಾರ್ಥಂ ಧನಮಾತ್ಮನ ಇಚ್ಛಂತೋ ಯಜಮಾನಪುರುಷಾ ಯುಗಾನಿ ಹಲಾವಯವಭೂತಾನಿ ಕರ್ಷಣಾಯ ವಿತನ್ವತೇ ಪ್ರಸಾರಯಂತಿ । ತಾಮುಷಸಮನುಗಚ್ಛತೀತ್ಯರ್ಥಃ । ಏವಂವಿಧಂ ಭದ್ರಂ ಕಲ್ಯಾಣಂ ಸೂರ್ಯಂ ಪ್ರತಿ ಭದ್ರಾಯ ಕಲ್ಯಾಣರೂಪಾಯ ಕರ್ಮಫಲಾಯ ಸ್ತುಮ ಇತಿ ಶೇಷಃ । ಯದ್ವಾ । ದೇವಯಂತೋ ದೇವಕಾಮಾ ಯಜಮಾನಾ ಯುಗಾನಿ ಯುಗ್ಮಾನಿ ಭೂತ್ವಾ ಪತ್ನೀಭಿಃ ಸಹಿತಾಃ ಸಂತೋ ಭದ್ರಂ ಕಲ್ಯಾಣಮಗ್ನಿಹೋತ್ರಾದಿಕಂ ಕರ್ಮ ಭದ್ರಾಯ ತತ್ಫಲಾರ್ಥಂ ಪ್ರತಿ ಪ್ರತ್ಯೇಕಂ ಯಸ್ಯಾಮುಷಸಿ ಪ್ರವೃತ್ತಾಯಾಂ ವಿತನ್ವತೇ । ವಿಸ್ತಾರಯಂತಿ ॥ ಮರ್ಯಃ । ಮೃಙ್ ಪ್ರಾಣತ್ಯಾಗೇ । ಛಂದಸಿ ನಿಷ್ಟರ್ಕ್ಯೇತ್ಯಾದೌ ಯತ್ಪ್ರತ್ಯಯಾಂತೋ ನಿಪಾತ್ಯತೇ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಯುಗಾನಿ । ಯುಜೇಃ ಕರಣೇ ಘಞ್ । ಯುಗಶಬ್ದಃ ಕಾಲವಿಶೇಷೇ ರಥಾದ್ಯುಪಕರಣೇ ಚ । ಕಾ. ೬-೧-೧೬೦ । ಇತ್ಯುಞ್ಛಾದಿಷು ಪಾಠಾದ್ಗುಣಾಭಾವೋಽಂತೋದಾತ್ತತ್ವಂ ಚ । ವಿತನ್ವತೇ । ತನು ವಿಸ್ತಾರೇ । ತನಾದಿಕೃಞ್ಭ್ಯ ಉಃ । ಸಹೇತಿ ಯೋಗವಿಭಾಗಾತ್ತಿಙೋಪಸರ್ಗಸ್ಯ ಸಮಾಸೇ ಸತಿ ಸಮಾಸಸ್ಯೇತ್ಯಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಯತ್ರ**—ಯಾವ ಉಷಸ್ಸು ಉದಿಸಿದರೆ । **ದೇವಯನ್ತಃ**—ಸೂರ್ಯನನ್ನು ಪೂಜಿಸಲು ಇಚ್ಛಿಸುವ ಅಥವಾ ದೇವಯಾಗಗಳಿಗಾಗಿ ಧನವನ್ನಪೇಕ್ಷಿಸುವ ಅಥವಾ ದೇವತೆಗಳನ್ನು ಪೂಜಿಸಲು ಅಪೇಕ್ಷೆಯುಳ್ಳ । **ನರಃ**—ಯಜ್ಞಗಳ ಯಜಮಾನರು । **ಯುಗಾನಿ**—ಕಾಲವನ್ನನುಸರಿಸಿ ಮಾಡಬೇಕಾದ ದರ್ಶಪೂರ್ಣಮಾಸಾದಿಯಾಗಗಳನ್ನು । **ವಿತನ್ವತೇ**—ವಿಸ್ತರಿಸುತ್ತಾರೋ ಅಂತಹ ಉಷಃಕಾಲದಲ್ಲಿ । **ಮರ್ಯಃ**—ಯಾವನಾದರೊಬ್ಬ ಪುರುಷನು । **ಯೋಷಾಂ ನ**—ಸುಂದರಿಯಾದ ಯುವತಿಯನ್ನು ಅನುಸರಿಸಿ ಅಥವಾ ಹಿಂಬಾಲಿಸಿ ಹೋಗುವಂತೆ । **ಸೂರ್ಯಃ**—ಸೂರ್ಯನು । **ರೋಚಮಾನಾಂ**—ಕಾಂತಿಯುಕ್ತಳಾದ । **ಉಷಸಂ ದೇವೀಂ**—ಉಷೋದೇವತೆಯನ್ನು । **ಪಶ್ಚಾತ್ ಅಭ್ಯೇತಿ**—ಅನುಸರಿಸುತ್ತಾನೆ (ಉಷಸ್ಸಿನ ಉದಯವಾದನಂತರ ಸೂರ್ಯನು ಉದಯಿಸುತ್ತಾನೆ) । **ಭದ್ರಂ ಪ್ರತಿ**—(ಈ ರೀತಿ ಇರುವ) ಮಂಗಳಕರನಾದ ಸೂರ್ಯನನ್ನು ಕುರಿತು । **ಭದ್ರಾಯ**—ಕಲ್ಯಾಣಕ್ಕಾಗಿ (ಸ್ತುತಿಸೋಣ).

॥ ಭಾವಾರ್ಥ ॥

ಉಷಸ್ಸಿನ ಉದಯವಾದೊಡನೆಯೇ ಯಾಗಕರ್ತೃಗಳು ಸೂರ್ಯಾದಿಗಳನ್ನು ಯಾಗಗಳಿಂದ ಪೂಜಿಸಲಿಚ್ಛೆಯುಳ್ಳವರಾಗಿ, ಕಾಲಕ್ರಮದಲ್ಲಿ ಮಾಡಬೇಕಾದ ದರ್ಶಪೂರ್ಣಮಾಸಾದಿಗಳನ್ನು ಆಚರಿಸುತ್ತಾರೆ. ಸುಂದರಳಾದ ಸ್ತ್ರೀಯನ್ನು ಪುರುಷನು ಹಿಂಬಾಲಿಸುವಂತೆ ಸೂರ್ಯನು ಕಾಂತಿಯುಕ್ತಳಾದ ಉಷಸ್ಸನ್ನು ಹಿಂಬಾಲಿಸುತ್ತಾನೆ. ಇಂತಹ ಮಂಗಳಕರನಾದ ಸೂರ್ಯನನ್ನು (ನಮ್ಮ) ಕಲ್ಯಾಣಕ್ಕೋಸ್ಕರ ಭಜಿಸೋಣ.

English Translation.

The sun follows the divine and brilliant Ushas, as a man (follows a young and elegant) woman; at which season, pious men perform (the ceremonies established for) ages, worshipping the auspicious (sun), for the sake of good (reward)

॥ ವಿಶೇಷವಿಷಯಗಳು ॥

**ಮರ್ಯೋ ನ ಯೋಷಾಂ**— ಮನುಷ್ಯಾಃ ನರಃ ಮೊದಲಾದ ಇಪ್ಪತ್ತೈದು ಮನುಷ್ಯನಾಮಗಳ ಮಧ್ಯದಲ್ಲಿ ಮರ್ಯಾಃ ಎಂಬ ಶಬ್ದವು ಪಠಿತವಾಗಿರುವುದರಿಂದ **ಮರ್ಯ** ಶಬ್ದವು ಮನುಷ್ಯ ಎಂದು ಅರ್ಥವನ್ನು ಬೋಧಿಸುವುದು. (ನಿ. ೩-೭) ಮತ್ತು (ನಿ. ೪-೨) **ಮರ್ಯೊ ಇತಿ ಮನುಷ್ಯನಾಮ** ಎಂದು ನಿರ್ವಚನವು ಇರುತ್ತದೆ. ಮನುಷ್ಯನು ಸುಂದರಿಯಾದ ಸ್ತ್ರೀಯನ್ನು ನೋಡಿ ಅವಳನ್ನು ಹಿಂಬಾಲಿಸಿ ಹೋಗುವಂತೆ ಸೂರ್ಯನು ಉಷಸ್ಸನ್ನು ಅನುಸರಿಸಿ ನಡೆಯುತ್ತಿರುವನು. ಉಷಃಕಾಲವು ಪ್ರಾಪ್ತವಾಗಿ ಉದಯವಾದನಂತರ ಸೂರ್ಯನ ಉದಯವು ಆಗುವ ಕಾರಣ ಸೂರ್ಯನಿಗೆ ಕಾಮುಕನಾದ ಪುರುಷನ ರೀತಿಯನ್ನು ಇಲ್ಲಿ ವರ್ಣಿಸಿದೆ. **ದೇವೀಂ ರೋಚಮಾನಾಂ** ಎಂಬ ವಿಶೇಷಣಗಳು ಉಷಸ್ಸಿನಲ್ಲಿರುವ ಉತ್ಕೃಷ್ಟವಾದ ಸ್ವಾಭಾವಿಕ ಗುಣಗಳನ್ನು ಪ್ರಕಟಗೊಳಿಸುತ್ತವೆ.

**ದೇವಯಂತಃ**—ದೇವಶಬ್ದವು ಈ ಪ್ರಕರಣಕ್ಕನುಸಾರವಾಗಿ ಇಲ್ಲಿ ಸೂರ್ಯವಾಚಕವಾಗಿರುತ್ತದೆ. ದೇವನಾದ ಸೂರ್ಯನನ್ನು ಕುರಿತು ಯಾಗಮಾಡಲು ಅಪೇಕ್ಷೆಪಡುವವರು ಎಂದು ಅರ್ಥ. ಅಥವಾ ಇತರ ದೇವತೆಗಳನ್ನು ಪೂಜಿಸಲು ಅಪೇಕ್ಷಿಸುವ ಎಂಬರ್ಥವನ್ನೂ ಹೇಳಬಹುದು. ಅಥವಾ ದೇವತೆಗಳನ್ನು ಪೂಜಿಸುವುದಕ್ಕಾಗಿ ಧನಾದಿಗಳನ್ನು ಅಪೇಕ್ಷಿಸುವವರು ಎಂಬ ಅರ್ಥವನ್ನೂ ಹೇಳಬಹುದೆಂದು ಭಾಷ್ಯಕಾರರು ವಿವರಿಸಿರುವರು.

**ನರಃ—ಯಜ್ಞಸ್ಯ ನೇತಾರೋ ಯಜಮಾನಾಃ।** ಯಜ್ಞವನ್ನು ಆಚರಿಸುವ ಯಜಮಾನರು. ಇಪ್ಪತ್ತೈದು ಮನುಷ್ಯನಾಮಗಳಲ್ಲಿ (ನಿ. ೩-೮) ನರಃ ಎಂಬ ಶಬ್ದವು ಉಕ್ತವಾಗಿರುವುದರಿಂದ ಮನುಷ್ಯರು ಎಂದು ಅರ್ಥ.

**ಯುಗಾನಿ ವಿತನ್ವತೇ**—ಯುಗಶಬ್ದವು ಕಾಲವನ್ನು ಬೋಧಿಸುವುದು. ಇದರಿಂದ ಆಯಾಯ ಕಾಲಗಳಿಗೆ ಅನುಗುಣವಾಗಿರುವ ಕರ್ತವ್ಯಗಳಾದ ದರ್ಶಪೂರ್ಣಮಾಸಾದಿಕರ್ಮಗಳನ್ನೂ, ಅಗ್ನಿಹೋತ್ರಾದಿಕರ್ಮಗಳನ್ನೂ ಯಜ್ಞ ಮಾಡುವ ಯಜಮಾನರುಗಳು ಆಚರಿಸುತ್ತಾರೆ ಎಂದು ಒಂದು ವಿಧವಾದ ಅರ್ಥವು. **ದೇವಯಂತಃ** ಎಂಬ ಪದಕ್ಕೆ

**ದೇವಯಾಗಾರ್ಥಂ ಧನಮಾತ್ಮನ ಇಚ್ಛಂತಃ** ದೇವತೆಗಳನ್ನು ಉದ್ದೇಶಮಾಡಿ ಯಜ್ಞಮಾಡುವುದಕ್ಕಾಗಿ ಧನವನ್ನು ಅಪೇಕ್ಷಿಸುವ ಯಾಗಶೀಲರು ಎಂದು ಅರ್ಥಮಾಡಿ **ಯುಗಾನಿ** ಎಂಬ ಪದಕ್ಕೆ **ಹಲಾವಯವಭೂತಾನಿ ಕರ್ಷಣಾಯ।** ವ್ಯವಸಾಯಕ್ಕೆ ಉಪಯುಕ್ತವಾದ ನೇಗಿಲು ಮುಂತಾದ ಉಪಕರಣಗಳನ್ನು ಸಿದ್ಧಪಡಿಸಿಕೊಂಡು ಉಷಃಕಾಲದಲ್ಲಿ ಅಗ್ನಿಹೋತ್ರಾದಿಕರ್ಮಗಳನ್ನು ಮಾಡಿ ಅನಂತರ ವ್ಯವಹಾರೋಪಯುಕ್ತವಾದ ಧನಲಾಭನಿಮಿತ್ತವಾದ ಕರ್ಮಗಳನ್ನು ಮಾಡುತ್ತಿರುವವರು ಎಂದು ಇನ್ನೊಂದು ವಿಧವಾದ ಅರ್ಥ. **ದೇವಯಂತಃ** ಎಂಬ ಪದಕ್ಕೆ **ದೇವಕಾಮಾಃ ಯಜಮಾನಾಃ** ದೇವತೆಗಳನ್ನೂ ಸೇವಿಸಿ ಅವರ ಅನುಗ್ರಹವನ್ನು ಅಪೇಕ್ಷಿಸುವ ಯಜಮಾನರು ಎಂದು ಅರ್ಥ. ಈ ಯಜಮಾನರು **ಯುಗಾನಿ—ಯುಗಶಬ್ದಃ ಕಾಲವಿಶೇಷೇ ರಥಾದ್ಯುಪಕರಣೇ ಚ।** ಯುಗ ಎಂಬ ಶಬ್ದವು ಕಾಲವಿಶೇಷ ಬೋಧಕವಾಗಿಯೂ, ಅಥವಾ ರಥಾದಿ ಉಪ (ಉಪಕರಣ) ಸಾಮಗ್ರೀ ಬೋಧಕವಾಗಿಯೂ ಇರುವುದರಿಂದ **ಯುಗಾನಿ ಭೂತ್ವಾ—ಪತ್ನೀಭಿಃ ಸಹಿತಾಸ್ಸಂತಃ** ತಮ್ಮ ಪತ್ನಿಯರೊಡನೆ ಕಲ್ಯಾಣಕರವಾದ ಅಗ್ನಿಹೋತ್ರಾದಿ ಕರ್ಮಗಳನ್ನು ಆಯಾಯ ಫಲವನ್ನೂ ಹೊಂದುವುದಕ್ಕಾಗಿ ಆಯಾಯ ಉಷಃಕಾಲವು ಉದಿತವಾದ ಕೂಡಲೆ ಆಚರಿಸುವರು ಎಂದು ಇನ್ನೊಂದು ವಿಧವಾದ ಅರ್ಥವನ್ನು ವಿವರಿಸಿರುವರು.

**ಭದ್ರಂ ಭದ್ರಾಯ ವಿತನ್ವತೇ**— ಭದ್ರಶಬ್ದಗಳು ಎರಡೂ ಕಲ್ಯಾಣವೆಂಬ ಅರ್ಥವನ್ನು ಬೋಧಿಸುವುವು. ಒಂದು ಭದ್ರಶಬ್ದವೂ ಸೂರ್ಯನಿಗೆ ವಿಶೇಷಣವಾಗಿರುವುದು. ಮಂಗಳವನ್ನು ಉಂಟುಮಾಡುವ ಸೂರ್ಯನನ್ನು ಕುರಿತು ಯಜ್ಞಮಾಡುವುದರಿಂದ ಸೂರ್ಯನನ್ನು ಸಂತೋಷಪಡಿಸಿ ಮಂಗಳಕರವಾದ ಫಲವನ್ನು ಹೊಂದುವುದಕ್ಕಾಗಿ ಉಷಃಕಾಲದಲ್ಲಿ ಸ್ತೋತ್ರಮಾಡುತ್ತಾರೆ ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ರೋಚಮಾನಾಂ**—ರುಚ ದೀಪ್ತೌ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಆನೇಮುಕ್** (ಪಾ.ಸೂ. ೭-೨-೮೨) ಎಂಬುದರಿಂದ ಅಂಗಕ್ಕೆ ಮುಕಾಗಮ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮರ್ಯಃ—**ಮೃಜ್ ಪ್ರಾಣತ್ಯಾಗೇ. ಧಾತು. **ಛಂದಸಿನಿಷ್ಟರ್ಕ್ಯದೇವ**—(ಪಾ ಸೂ. ೩-೧-೧೨೩) ಎಂಬುದರಿಂದ ಯತ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಏತಿ—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪಶ್ಚಾತ್—ಪಶ್ಚಾತ್** (ಪಾ. ಸೂ. ೫-೩-೩೨) ಎಂಬುದರಿಂದ ಅಪರ ಶಬ್ದಕ್ಕೆ ಪಶ್ಚಭಾವವೂ ಅಸ್ತಾತಿ ಪ್ರತ್ಯಯ ವಿಷಯದಲ್ಲಿ ಆತಿ ಪ್ರತ್ಯಯವೂ ನಿಪಾತಿತವಾಗಿದೆ.

**ಯತ್ರ-ನಿಪಾತಸ್ಯಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ನರಃ**—ನೃ ನಯೇ. ಧಾತು. **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ದೇವಯಂತಃ**—ದೇವಾನ್ ಆತ್ಮನಃ ಇಚ್ಛತಿ ದೇವಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಇತ್ವದೀರ್ಘ ನಿಷೇಧ ಬರುತ್ತದೆ. ಲಡರ್ಥದಲ್ಲಿ ಶತೃ ಪ್ರತ್ಯಯ. ದೇವಯತ್ ಶಬ್ದವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ಯುಗಾನಿ**—ಯುಜಿರ್ ಯೋಗೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಘಞ್ ಪ್ರತ್ಯಯ. **ಯುಗಶಬ್ದಃ ಕಾಲವಿಶೇಷೇ ರಥಾದ್ಯುಪಕರಣೇ ಚ** (ಕಾ. ೬-೧-೧೬೦) ಎಂದು ಉಂಛಾದಿಯಲ್ಲಿ ಪಾಠಮಾಡಿರುವುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧಗೆ ಗುಣ ಬರುವುದಿಲ್ಲ. ಆದರಿಂದಲೇ ಅಂತೋದಾತ್ತಸ್ವರವೂ ಬರುತ್ತದೆ. **ಚಜೋಃ ಕುಘಿಣ್ಯತೋಃ** (ಪಾ. ಸೂ. ೭-೩-೫೨) ಎಂಬುದರಿಂದ ಜಕಾರಕ್ಕೆ ಕುತ್ವದಿಂದ ಗಕಾರಾದೇಶ.

**ವಿತನ್ವತೇ**—ತನು ವಿಸ್ತಾರೇ. ಧಾತು. ಲಟ್‌ಪ್ರಥಮಪುರುಷ ಬಹುವಚನದಲ್ಲಿ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಟಿಗೆ ಏತ್ವ. **ತನಾದಿಕೃಞ್ಭ್ಯಉಃ** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. ಪ್ರತ್ಯಯವು **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ತಾದುದರಿಂದ ಅದಕ್ಕೆ ಗುಣ ಬರುವುದಿಲ್ಲ. ಯಣಾದೇಶ. ಯತ್ರ ಎಂದು ಹಿಂದೆ ಯದ್ಯೋಗವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ವಿ ಎಂಬುದರೊಡನೆ (ಉಪಸರ್ಗ) **ಸಹ ಸುಪಾ** (ಪಾ. ಸೂ. ೨-೧-೪) ಎಂಬಲ್ಲಿ ಯೋಗವಿಭಾಗಮಾಡಿಕೊಂಡು **ಸಹ** ಎಂಬ ಸೂತ್ರದಿಂದ ತಿಙಂತದೊಡನೆ ಸಮಾಸವಾದಾಗ **ಸಮಾಸಸ್ಯ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ॥ ೨ ॥



॥ ಸಂಹಿತಾಪಾಠಃ ॥

ಭದ್ರಾ ಅಶ್ವಾ ಹರಿತಃ ಸೂರ್ಯಸ್ಯ ಚಿತ್ರಾ ಏತಗ್ವಾ ಅನುಮಾ-
ದ್ಯಾಸಃ ।
ನಮಸ್ಯಂತೋ ದಿವ ಆ ಪೃಷ್ಠಮಸ್ಥುಃ ಪರಿ ದ್ಯಾವಾಪೃಥಿವೀ
ಯಂತಿ ಸದ್ಯಃ ॥ ೩ ॥

॥ ಪದಪಾಠಃ ॥

ಭದ್ರಾಃ । ಅಶ್ವಾಃ । ಹರಿತಃ । ಸೂರ್ಯಸ್ಯ । ಚಿತ್ರಾಃ । ಏತ॑ಽಗ್ವಾಃ । ಅನುಽ-
ಮಾದ್ಯಾಸಃ ।
ನಮಸ್ಯಂತಃ । ದಿವಃ । ಆ । ಪೃಷ್ಠಂ । ಅಸ್ಥುಃ । ಪರಿ । ದ್ಯಾವಾಪೃಥಿವೀ ಇತಿ ।
ಯಂತಿ । ಸದ್ಯಃ ॥ ೩ ॥

॥ ಸಾಯಣಭಾಷ್ಯಂ ॥

ಭದ್ರಾಃ ಕಲ್ಯಾಣಾಃ । ಅಶ್ವಾ ಏತಗ್ವಾ ಇತ್ಯೇತದುಭಯಮಶ್ವನಾಮ । ತತ್ರೈಕಂ ಕ್ರಿಯಾಪರಂ ಯೋಜನೀಯಂ । ಅಶ್ವಾಸ್ತುರಗಾ ವ್ಯಾಪನಶೀಲಾ ವಾ ಹರಿತೋ ಹರ್ತಾರಶ್ಚಿತ್ರಾ ವಿಚಿತ್ರಾವಯವಾ ಅನುಮಾದ್ಯಾಸೋಽನುಕ್ರಮೇಣ ಸರ್ವೈಃ ಸ್ತುತ್ಯಾ ಮಾದನೀಯಾಃ ಏವಂಭೂತಾಃ ಸೂರ್ಯಸ್ಯೈ-ತಗ್ವಾ ಅಶ್ವಾಃ । ಯದ್ವಾ । ಏತಂ ಗಂತವ್ಯಂ ಮಾರ್ಗಂ ಗಂತಾರೋಽಶ್ವಾಃ । ಏತಂ ಶಬಲವರ್ಣಂ ವಾ ಪ್ರಾಪ್ನುವಂತೋಽಶ್ವಾಃ । ನಮಸ್ಯಂತೋಽಸ್ಮಾಭಿರ್ನಮಸ್ಯಮಾನಾಃ ಸಂತೋ ದಿವೋಽಂತರಿ-ಕ್ಷಸ್ಯ ಪೃಷ್ಠಮುಪರಿಪ್ರದೇಶಂ ಪೂರ್ವಭಾಗಲಕ್ಷಣಮಾಸ್ಥುಃ । ಆತಿಷ್ಠಂತಿ । ಪ್ರಾಪ್ನುವಂತಿ । ಯದ್ವಾ । ಹರಿತೋ ರಸಹರಣಶೀಲಾ ರಶ್ಮಯೋ ಭದ್ರಾದಿಲಕ್ಷಣವಿಶಿಷ್ಟಾ ದಿವಃ ಪೃಷ್ಠಂ ನಭಃಸ್ಥಲಮಾತಿಷ್ಠಂತಿ । ಆಸ್ಥಾಯ ಚ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಸದ್ಯಸ್ತದಾನೀಮೇವೈಕೇನಾಹ್ನಾ ಪರಿ ಯಂತಿ । ಪರಿತೋ ಗಚ್ಛಂತಿ । ವ್ಯಾಪ್ನುವಂತೀತ್ಯರ್ಥಃ ॥ ಅಶ್ವಾಃ । ಅಶೂ ವ್ಯಾಪ್ತೌ । ಅಶಿಪ್ರುಷೀತ್ಯಾದಿನಾ ಕ್ವಿನ್ । ಏತಗ್ವಾಃ । ಇಣ್ ಗತೌ । ಅಸಿಹಸೀತ್ಯಾದಿನಾ ಕರ್ಮಣಿ ತನ್ಪ್ರತ್ಯಯಃ । ಗಮೇರೌಣಾದಿಕೋ ಭಾವೇ ಡ್ವಪ್ರತ್ಯಯಃ । ಏತಮೇತವ್ಯಂ ಪ್ರತಿ ಗ್ವೋ ಗಮನಂ ಯೇಷಾಂ ತೇ ತಥೋಕ್ತಾಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅನುಮಾದ್ಯಾಸಃ । ಮದಿ ಸ್ತುತೌ । ಅಸ್ಮಾಣ್ಣ್ಯಂತಾದಚೋ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ನಮಸ್ಯಂತಃ । ನಮೋವರಿವ ಇತಿ ಪೂಜಾರ್ಥೇ ಕ್ಯಚ್ । ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ । ಅಸ್ಥುಃ । ತಿಷ್ಠತೇಶ್ಛಂದಸೋ ವರ್ತಮಾನೇ ಲುಙ್ । ಗಾತಿ-ಸ್ಥೇತಿ ಸಿಚೋ ಲುಕ್ । ಆತ ಇತಿ ಝೇರ್ಜುಸ್ ॥

॥ ಪ್ರತಿಪದಾರ್ಥ ॥

ಭದ್ರಾಃ—ಮಂಗಳಕರಗಳಾದ । **ಹರಿತಃ**—ಹರಿದ್ವರ್ಣವುಳ್ಳ । **ಚಿತ್ರಾಃ**—ವಿಚಿತ್ರ ಅವಯವಗಳುಳ್ಳ । **ಅನುಮಾದ್ಯಾಸಃ**—ಕ್ರಮವಾಗಿ ಸ್ತುತ್ಯಗಳಾದ । **ಅಶ್ವಾಃ**—ವೇಗಶಾಲಿಗಳಾದ । **ಸೂರ್ಯಸ್ಯ**—ಸೂರ್ಯನ । **ಏತಗ್ವಾಃ**—ಅಶ್ವಗಳು । **ನಮಸ್ಯಂತಃ**—(ನಮ್ಮಿಂದ) ಪೂಜಿಸಲ್ಪಟ್ಟವುಗಳಾಗಿ । **ದಿವಃ ಪೃಷ್ಠಂ**—ಅಂತರಿಕ್ಷದ

ಮೇಲ್ಭಾಗವನ್ನು (ಮೇಲ್ಭಾಗದಲ್ಲಿ) । **ಆ ತಸ್ಥುಃ**—ವ್ಯಾಪಿಸುತ್ತವೆ (ಸಂಚರಿಸುತ್ತವೆ) । **ದ್ಯಾವಾಪೃಥಿವೀ**—ಭೂಮ್ಯಾಕಾಶಗಳನ್ನು । **ಸದ್ಯಃ**—ಆಗಲೇ (ಒಂದೇ ದಿನದಲ್ಲಿ) । **ಪರಿ ಯಂತಿ**—ಸುತ್ತುತ್ತವೆ.

॥ ಭಾವಾರ್ಥ ॥

ಸೂರ್ಯನ ಕುದುರೆಗಳು ಮಂಗಳಕರವಾದವು. ವಿಚಿತ್ರಾವಯವವುಳ್ಳವು; ವೇಗವಾಗಿ ಸಂಚರಿಸತಕ್ಕ ಶಕ್ತಿಯುಳ್ಳವು, ನಮ್ಮಿಂದ ಸ್ತುತ್ಯವಾದವು. ಸೂರ್ಯನ ಇಂತಹ ಹರಿದ್ವರ್ಣಯುಕ್ತವಾದ ಅಶ್ವಗಳು (ಕುದುರೆಗಳು) ನಮ್ಮಿಂದ ಪೂಜಿಸಲ್ಪಟ್ಟು ಆಕಾಶದ ಮೇಲುಭಾಗದಲ್ಲಿ (ಸಂಚರಿಸುತ್ತಾ) ಇರುತ್ತವೆ. ಈ ಅಶ್ವಗಳು ಭೂಮ್ಯಾಕಾಶಗಳನ್ನು ಒಂದೇ ದಿನದಲ್ಲಿ ಸುತ್ತಿಬರುವವು.

English Translation.

The auspicious, swift horses of the sun, well-limbed, road-traversing, who merit to be pleased with praise, reverenced by us, have ascended to the summit of the sky, and quickly circumambulate earth and heaven.

॥ ವಿಶೇಷವಿಷಯಗಳು ॥

**ಅಶ್ವಾಃ—ತುರಗಾಃ । ಅಶೂ ವ್ಯಾಪ್ತೌ । ವ್ಯಾಪನಾಶೀಲಾ ವಾ ।** ವೇಗವಾಗಿ ಸಂಚರಿಸುವವುಗಳು ಅಥವಾ ವ್ಯಾಪಿಸುವ ಸ್ವಭಾವವುಳ್ಳವುಗಳು ಎಂದು ಅರ್ಥ.

**ಏತಗ್ವಾಃ—ಏತಂ ಗಂತವ್ಯಂ ಮಾರ್ಗಂ ಗಂತಾರೋ ಅಶ್ವಾಃ । ಏತಾಂ ಶಬಲವರ್ಣಂ ವಾ ಪ್ರಾಪ್ತವಂತೋ ಅಶ್ವಾಃ ।** ಮುಂದೆ ಹೋಗಬೇಕಾಗಿರುವ ಮಾರ್ಗದಲ್ಲಿ ಹೋಗುವವುಗಳಾದ್ದರಿಂದ ಕುದುರೆಗಳು ಎಂದೂ ಅಥವಾ ಏತಶಬ್ದವು ಬೇರೆಬೇರೆಯಾದ (ಹಳದಿ, ಕೆಂಪು, ಬಿಳಪು) ವರ್ಣಗಳು ಎಂಬ ಅರ್ಥವನ್ನು ಬೋಧಿಸುವಕಾರಣ ಅನೇಕ ಬಣ್ಣಗಳಿಂದ ಕೂಡಿರುವ ಕುದುರೆಗಳು ಎಂದೂ ಅರ್ಥವು. ಸ್ಕಂದಸ್ವಾಮಿಗಳು—

**ಏತಗ್ವ ಇತ್ಯಶ್ವನಾಮಾನ್ಯತ್ರ ಇಹ ತು ಅಶ್ವೇನ ಪೌನರುಕ್ತ್ಯಪ್ರಸಂಗಾತ್ ಕ್ರಿಯಾಶಬ್ದಃ ।**
**ಅತೀತೇಷ್ವಹಸ್ಸು ಮಾರ್ಗಸ್ಯ ಗಂತಾರಃ ॥**

ಏತಗ್ವ ಶಬ್ದವು ಬೇರೆಯ ಕಡೆಯಲ್ಲಿ ಅಶ್ವವಾಚಿಯಾಗಿ ಇರುವುದು. ಇಲ್ಲಿಯೂ ಈ ಶಬ್ದಕ್ಕೆ (ಅಶ್ವ) ಕುದುರೆ ಎಂದು ಅರ್ಥವನ್ನು ಮಾಡುವುದಾದರೆ ದ್ವಿರುಕ್ತಿಯು ಆಗುವಕಾರಣ ಈ ಶಬ್ದವು ಕ್ರಿಯಾವಾಚಿಯಾಗಿರುತ್ತದೆ. (ಕಳೆದು ಹೋಗಿರುವ) ಹಿಂದಿನ ದಿನಗಳಲ್ಲಿ ಸಂಚಾರಮಾಡಿದ ಮಾರ್ಗದಲ್ಲಿಯೇ ಸಂಚರಿಸತಕ್ಕವುಗಳು ಎಂದು ಅರ್ಥವನ್ನು ಹೇಳಿರುವರು.

**ಅನುಮಾದ್ಯಾಸಃ—ಮದತಿರರ್ಚತಿಕರ್ಮಾ ಅನುಷ್ಟುತ್ಯಾಃ ।** ಮದ ಧಾತುವು ನಲವತ್ತುನಾಲ್ಕು ಅರ್ಚತಿ ಮೊದಲಾದ ಪದಗಳಲ್ಲಿ ಅರ್ಚತಿಕರ್ಮಾಣಃ (ನಿ. ೩-೧೯) ಎಂದು ಪಠಿತವಾಗಿರುವುದರಿಂದ ಸ್ತೋತ್ರ ಮಾಡಲು ತಕ್ಕವುಗಳೆಂದು ಅರ್ಥವು. (ಸ್ತುತ್ಯಗಳು)

**ದಿವಃ ಪೃಷ್ಠಂ ಆ ತಸ್ಥುಃ—ಅಂತರಿಕ್ಷಸ್ಯ ಪೂರ್ವಭಾಗಲಕ್ಷಣಂ ಉಪರಿ ಪ್ರದೇಶಂ ಪ್ರಾಪ್ನುವಂತಿ ಯದ್ವಾ ಹರಿತಃ ರಸಹರಣಶೀಲಾಃ ರಶ್ಮಯಃ ಭದ್ರಾ ಲಕ್ಷಣವಿಶಿಷ್ಟಾಃ ನಭಸ್ಸ್ಥಲಮಾಕ್ರಮಂತಿ ।** ನಮಸ್ಕಾರಾರ್ಹಗಳಾಗಿಯೂ, ವ್ಯಾಪಿಸುವವುಗಳಾಗಿಯೂ, ಸ್ತುತ್ಯರ್ಹಗಳಾಗಿಯೂ, ಅನೇಕ ವಿಧವಾದ ಬಣ್ಣಗಳು ಉಳ್ಳವುಗಳಾಗಿಯೂ, ಆಯಾಯು ಗಂತವ್ಯಮಾರ್ಗಗಳಲ್ಲಿ ನಿಯತವಾಗಿ ಸಂಚರಿಸುವವುಗಳಾಗಿಯೂ ಇರುವ ಸೂರ್ಯನ ಕುದುರೆಗಳು ಎಂದರ್ಥವು. ಅಥವಾ ಸೂರ್ಯನ ಕಿರಣಗಳು ನೀರನ್ನು ಹೀರುವವುಗಳಾಗಿ ಅಂತರಿಕ್ಷದ ಮೇಲುಭಾಗದಲ್ಲಿ ಭೂದ್ಯುಂತರಿಕ್ಷಗಳೆಲ್ಲವನ್ನೂ ಸೂರ್ಯನ ಉದಯವಾದ ಕೂಡಲೆ ವ್ಯಾಪಿಸುವುವು. ಈ ಋಕ್ಕಿನಲ್ಲಿ ಹೇಳಿರುವ ವಿಶೇಷಣಗಳು ಸೂರ್ಯನ ಕಿರಣಗಳು ಮತ್ತು ಕುದುರೆಗಳು ಎಂಬ ಎರಡಕ್ಕೂ ಸಮನಾಗಿ ಪ್ರಯುಕ್ತವಾಗಿರುವುದರಿಂದ ಹೀಗೆ ಇರುವ ಕುದುರೆಗಳಿಂದ ಕೂಡಿರುವ ರಥದಲ್ಲಿ ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಾ ಕಾಲನಿಯಾಮಕನಾಗಿ ಸಂಚರಿಸುತ್ತಿರುವನು ಎಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಾಃ**—ಅಶೂ ವ್ಯಾಪ್ತೌ. ಧಾತು. **ಅಶಿಪ್ರುಷಿಕೇ**—(ಉ. ಸೂ. ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಏತಗ್ವಾಃ**—ಇಣ್ ಗತೌ ಧಾತು. **ಅಸಿಹಸಿ**—ಎಂಬುದರಿಂದ ಇದಕ್ಕೆ ಕರ್ಮಣಿಯಲ್ಲಿ ತನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಏತ ಎಂದು ರೂಪವಾಗುತ್ತದೆ. ಗಮ್ಲೃ ಗತೌ ಧಾತು. ಇದಕ್ಕೆ ಭಾವಾರ್ಥದಲ್ಲಿ ಔಣಾದಿಕವಾದ ಡ್ವನ್ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಗ್ವ ಎಂದು ರೂಪನಾಗುತ್ತದೆ. ಏತಮ್ ಏತವ್ಯಮ್ ಪ್ರತಿ ಗ್ವೋ ಗಮನಂ ಯೇಷಾಂ ತೇ ಏತಗ್ವಾಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಅನುಮಾದ್ಯಾಸಃ**—ಮದಿ ಸ್ತುತೌ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅತ ಉಪಧಾಯಾಃ** (ಪಾ. ಸೂ. ೭-೧-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಮಾದಿ ಎಂಬ ಅಜಂತಕ್ಕೆ **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅನು ಎಂಬ ಗತಿಯೊಡನೆ ಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ.

**ನಮಸ್ಯಂತಃ**—ಪೂಜಾರ್ಥ ತೋರುವಾಗ **ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ಎಂಬುದರಿಂದ ಕ್ಯಚ್ ಪ್ರತ್ಯಯ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಕರ್ಮಣಿ

ಯಲ್ಲಿ ಕರ್ತೃ ಪ್ರತ್ಯಯ ಬರುತ್ತದೆ. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ **ಅತೋ ಗುಣೇ** ಎಂಬುದರಿಂದ ಪರರೂಪ. ಪ್ರಥಮಾ ಬಹುವಚನಾಂತರೂಪ. ಲಸಾರ್ವಧಾತುಕ ಅನುದಾತ್ತವಾದುದರಿಂದ ಕೃಚ್‌ಸ್ವರ ಉಳಿಯುತ್ತದೆ

**ದಿವಃ—ಊಡಿದಂ ಪದಾದಿ**—(ಪಾ. ಸೂ. ೬–೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಸ್ಥುಃ**—ವರ್ತಮಾನಾರ್ಥದಲ್ಲಿ ಷ್ಠಾ ಗತಿನಿವೃತ್ತೌ ಧಾತುವಿಗೆ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩–೪–೬) ಎಂಬುದರಿಂದ ಲುಙ್. ಪ್ರಥಮಪುರುಷ ಬಹುವಚನಲ್ಲಿ ಝು ಬಂದಾಗ **ಆತಃ** (ಪಾ. ಸೂ. ೩–೪–೧೧೦) ಎಂಬುದರಿಂದ ಅದಕ್ಕೆ ಜುಸಾದೇಶ. **ಗಾತಿಸ್ಥಾಘು**—(ಪಾ. ಸೂ. ೨–೪–೭೭) ಎಂಬುದರಿಂದ ಚ್ಲಿಗೆ ಸಿಚಾದೇಶ ಬಂದಾಗ ಅದಕ್ಕೆ ಲುಕ್. **ಉಸ್ಯಪದಾಂತಾತ್** (ಪಾ. ಸೂ. ೬–೧–೯೬) ಎಂಬುದರಿಂದ ಪರರೂಪ. ಅಂಗಕ್ಕೆ ಅಡಾಗಮ. ಅಸ್ಥುಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಂತಿ**—ಇಣ್ ಗತೌ ಧಾತು. ಅದಾದಿ. ಝಿಗೆ ಅಂತಾದೇಶ ಬಂದಾಗ **ಇಣೋ ಯಣ್** (ಪಾ. ಸೂ. ೬–೪–೮೧) ಎಂಬುದರಿಂದ ಇಕಾರಕ್ಕೆ ಯಣಾದೇಶ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯಾ ಕರ್ತೋರ್ವಿತತಂ ಸಂ ಜಭಾರ ।
ಯದೇದಯುಕ್ತ ಹರಿತಃ ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ॥ ೪ ॥

॥ ಪದಪಾಠಃ ॥

ತತ್ । ಸೂರ್ಯಸ್ಯ । ದೇವಽತ್ವಂ । ತತ್ । ಮಹಿಽತ್ವಂ । ಮಧ್ಯಾ । ಕರ್ತೋಃ ।
ವಿಽತತಂ । ಸಂ । ಜಭಾರ ।
ಯದಾ । ಇತ್ । ಅಯುಕ್ತ । ಹರಿತಃ । ಸಧಽಸ್ಥಾತ್ । ಆತ್ । ರಾತ್ರೀ ।
ವಾಸಃ । ತನುತೇ । ಸಿಮಸ್ಮೈ ॥ ೪ ॥

॥ ಸಾಯಣಭಾಷ್ಯಂ ॥

ಸೂರ್ಯಸ್ಯ ಸರ್ವಪ್ರೇರಕಸ್ಯಾದಿತ್ಯಸ್ಯ ತದ್ದೇವತ್ವಮೀಶ್ವರತ್ವಂ । ಸ್ವಾತಂತ್ರ್ಯಮಿತಿ ಯಾವತ್ । ಮಹಿತ್ವಂ ಮಹತ್ತ್ವಂ ಮಾಹಾತ್ಮ್ಯಂ ಚ ತದೇವ। ತಚ್ಛಬ್ದಶ್ರುತೇರ್ಯಚ್ಛಬ್ದಾಧ್ಯಾಹಾರಃ। ಯತ್ಕರ್ತೋಃ । ಕರ್ಮನಾಮೈತತ್ । ಪ್ರಾರಬ್ಧಾಪರಿಸಮಾಪ್ತಸ್ಯ ಕೃಷ್ಯಾದಿಲಕ್ಷಣಸ್ಯ ಕರ್ಮಣೋ ಮಧ್ಯಾ ಮಧ್ಯೇಽಪರಿಸಮಾಪ್ತ ಏವ ತಸ್ಮಿನ್ಕರ್ಮಣಿ ವಿತತಂ ವಿಸ್ತೀರ್ಣಂ ಸ್ವಕೀಯಂ ರಶ್ಮಿಜಾಲಮಸ್ತಂ ಗಚ್ಛನ್ ಸೂರ್ಯಃ ಸಂ ಜಭಾರ ಅಸ್ಮಾಲ್ಲೋಕಾತ್ಸ್ವಾತ್ಮನ್ಯುಪಸಂಹರತಿ । ಕರ್ಮಕರಶ್ಚ ಪ್ರವೃತ್ತಮಪರಿಸಮಾಪ್ತಮೇವ ವಿಸೃಜತ್ಯಸ್ತಂ ಯಂತಂ ಸೂರ್ಯಂ ದೃಷ್ಟ್ವಾ । ಈದೃಶಂ ಸ್ವಾತಂತ್ರ್ಯಂ ಮಹಿಮಾ ಚ ಸೂರ್ಯವ್ಯತಿರಿಕ್ತಸ್ಯ ಕಸ್ಯಾಸ್ತಿ । ನ ಕಸ್ಯಾಪಿ । ಸೂರ್ಯ ಏವೇದೃಶಂ ಸ್ವಾತಂತ್ರ್ಯಂ ಮಹಿಮಾನಂ ಚಾವಗಾಹತೇ । ಅಪಿ ಚ । ಇದಿತ್ಯವಧಾರಣೇ । ಯದೇದ್ಯಸ್ಮಿನ್ನೇವ ಕಾಲೇ ಹರಿತೋ ರಸಹರಣಶೀಲಾನ್ಸ್ವರಶ್ಮೀನ್ ಹರಿದ್ವರ್ಣಾನಶ್ವಾನ್ವಾ ಸಧಸ್ಥಾತ್ಸಹಸ್ಥಾನಾದಸ್ಮಾತ್ಪಾರ್ಥಿವಾಲ್ಲೋಕಾದಾದಾಯಾಯುಕ್ತ । ಅನ್ಯತ್ರ ಸಂಯುಕ್ತಾನ್ಕರೋತಿ । ಯದ್ವಾ । ಯುಜಿಃ ಕೇವಲೋಽಪಿ ವಿಪೂರ್ವೋ ದ್ರಷ್ಟವ್ಯಃ । ಯದ್ವೈನಾಸೌ ಸ್ವರಶ್ಮೀನಶ್ವಾನ್ವಾ ಸಧಸ್ಥಾತ್ । ಸಹ ತಿಷ್ಠಂತ್ಯಸ್ಮಿನ್ನಿತಿ ಸಧಸ್ಥೋ ರಥಃ । ತಸ್ಮಾದಯುಕ್ತ । ಅಮುಂಚತ್ । ಆತ್ ಅನಂತರಮೇವ ರಾತ್ರೀ ನಿಶಾ ವಾಸ ಆಚ್ಛಾದಯಿತೃ ತಮಃ ಸಿಮಸ್ಮೈ । ಸಿಮಶಬ್ದಃ ಸರ್ವಶಬ್ದಪರ್ಯಾಯಃ। ಸಪ್ತಮ್ಯರ್ಥೇ ಚತುರ್ಥೀ । ಸರ್ವಸ್ಮಿನ್ ಲೋಕೇ ತನುತೇ । ವಿಸ್ತಾರಯತಿ । ಯದ್ವಾ । ವಾಸೋ ವಾಸರಮಹಃ। ತತ್ಸರ್ವಸ್ಮಾದಸ್ಮಾಲ್ಲೋಕಾದಪನೀಯ ರಾತ್ರೀ ತಮಸ್ತನುತೇ । ಅತ್ರ ನಿರುಕ್ತಂ । ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯೇ ಯತ್ಕರ್ಮಣಾಂ ಕ್ರಿಯಮಾಣಾನಾಂ ವಿತತಂ ಸಂಹ್ರಿಯತೇ ಯದಾಸಾವಯುಕ್ತ ಹರಣಾನಾದಿತ್ಯರಶ್ಮೀನ್ಹರಿತೋಽಶ್ವಾನಿತಿ ವಾಥ ರಾತ್ರೀ ವಾಸಸ್ತನುತೇ ಸಿಮಸ್ಮೈ ವಾಸರಮಹರವಯುವತೀ ಸರ್ವಸ್ಮಾತ್ । ನಿ. ೪-೧೧ । ಇತಿ॥ ಮಹಿತ್ವಂ। ಮಹ ಪೂಜಾಯಾಂ ಔಣಾದಿಕ ಇನ್ಪ್ರತ್ಯಯಃ । ತಸ್ಯ ಭಾವಸ್ತ್ವತಲೌ । ಪಾ. ೫-೧-೧೧೯ । ಮಧ್ಯಾ । ಮಧ್ಯಶಬ್ದಾತ್ಸಪ್ತಮ್ಯೇಕವಚನಸ್ಯ ಸುಪಾಂ ಸುಲುಗಿತಿ ಡಾದೇಶಃ। ಕರ್ತೋಃ। ಕರೋತೇರೌಣಾದಿಕಸ್ತುನ್ಪ್ರತ್ಯಯಃ। ವಿತತಂ। ವಿಪೂರ್ವಾತ್ತ-

ನೋತೇಃ ಕರ್ಮಣಿ ನಿಷ್ಠಾ । ಉದಿತ್ತ್ವೇನ ಕ್ತ್ವಾಪ್ರತ್ಯಯೆ ಇಟೋ ವಿಕಲ್ಪನಾದ್ಯಸ್ಯ ವಿಭಾಷೇತೀಟ್ಪ್ರತಿಷೇಧಃ। ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಜಭಾರ । ಹೃಗ್ರಹೋರ್ಭ ಇತಿ ಭತ್ವಂ। ಅಯುಕ್ತ । ಯುಜೇರ್ಲುಙಿ ಝಲೋ ಝಲೀತಿ ಸಿಚೋ ಲೋಪಃ। ಸಧಸ್ಥಾತ್। ಘಞರ್ಥೇ ಕವಿಧಾನಮಿತ್ಯಧಿಕರಣೇ ಕಪ್ರತ್ಯಯಃ। ಸಧ ಮಾದಸ್ಥಯೋಶ್ಛಂದಸೀತಿ ಸಧಾದೇಶಃ। ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ರಾತ್ರೀ । ರಾತ್ರೇಶ್ಚಾಜಸಾವಿತಿ ಙೀಪ್ ॥

॥ ಪ್ರತಿಪದಾರ್ಥ ॥

**ಯತ್**— ಯಾವುದರಿಂದ । **ಕರ್ತೋಃ**—ಕೃಷ್ಯಾದಿಕರ್ಮಗಳ । **ಮಧ್ಯಾ**—ಮಧ್ಯದಲ್ಲಿ । **ವಿತತಂ**—ವಿಸ್ತೃತವಾದ (ತನ್ನ ಕಿರಣಗಳನ್ನು) । **ಸಂಜಭಾರ**—(ತನ್ನಲ್ಲಿ) ಉಪಸಂಹರಿಸಿಕೊಳ್ಳುವನೋ । **ತತ್**—ಅದೇ । **ಸೂರ್ಯಸ್ಯ**—ಸೂರ್ಯನ । **ದೇವತ್ವಂ**—ಸ್ವಾಮಿತ್ವವು (ಸ್ವಾತಂತ್ರ್ಯವು) । **ತತ್**—ಅದೇ । **ಮಹಿತ್ವಂ**—ಮಾಹಾತ್ಮ್ಯವು । **ಯದಾ**—ಯಾವಾಗ । **ಹರಿತಃ**—(ಹರಿದ್ವರ್ಣದ ತನ್ನ ಅಶ್ವಗಳನ್ನು ಅಥವಾ) ಕಿರಣಗಳನ್ನು । **ಸಧಸ್ಥಾತ್**—(ತನಗೂ ಅವುಗಳಿಗೂ) ಸಹಸ್ಥಾನವಾಗಿದ್ದ (ಈ ಭೂಮಿಯಿಂದ ಸೆಳೆದುಕೊಂಡು) । **ಅಯುಕ್ತ**—(ಅನ್ಯತ್ರ) ಸಂಯೋಜನೆ ಮಾಡಿದನೋ । **ಆತ್ ಇತ್**—ಆಗಲೇ । **ರಾತ್ರೀ**—ರಾತ್ರಿಯು । **ವಾಸಃ**—ಆಚ್ಛಾದನೆಮಾಡುವ ತಮಸ್ಸನ್ನು । **ಸಿಮಸ್ಮೈ**—ಎಲ್ಲಾ ಕಡೆಗಳಲ್ಲಿಯೂ । **ತನುತೇ**—ಹರಡುತ್ತದೆ.

॥ ಭಾವಾರ್ಥ ॥

ಸೂರ್ಯನು ತನ್ನ ಕಿರಣಗಳನ್ನು (ತನ್ನಲ್ಲಿ) ಉಪಸಂಹರಿಸಿಕೊಂಡನೆಂದರೆ, ಅಸಂಪೂರ್ಣವಾದ ಕೃಷ್ಯಾದಿ ಕರ್ಮಗಳೆಲ್ಲವೂ (ಹಾಗೆಯೇ ಉಳಿಯುತ್ತವೆ.) ಅದೇ ಸೂರ್ಯನ ಸ್ವಾಮಿತ್ವ, ಅದೇ (ಅವನ) ಮಾಹಾತ್ಮ್ಯ ಮತ್ತು (ಅವನು) ಈ ಭೂಲೋಕದಿಂದ ಕಿರಣಗಳನ್ನು ಸೆಳೆದುಕೊಂಡ ಮೇಲೆ ರಾತ್ರಿಯು ಅಂಧಕಾರವನ್ನು ಬೀರುವುದು.

## English Translation

Such is the divinity, such is the majesty of the sun, that when he has set, he has withdrawn (into himself) the diffused (light which had been shed) upon the unfinished task ; when he has unyoked his coursers from his car, then night extends the veiling darkness over all.

॥ ವಿಶೇಷವಿಷಯಗಳು ॥

**ಮಧ್ಯಾ ಕರ್ತೋಃ—ಮಧ್ಯೇ ಅಪರಿಸಮಾಪ್ತ ಏವ ತಸ್ಮಿನ್ ಕರ್ಮಣಿ । ಕರ್ತೋಃ—ಕರ್ಮನಾಮೈತತ್ ಪ್ರಾರಬ್ಧಾಪರಿಸಮಾಪ್ತಸ್ಯ ಕೃಷ್ಯಾದಿಲಕ್ಷಣಸ್ಯ ಕರ್ಮಣಃ ।** ಕರ್ತೋಃ ಎಂಬ ಪದವು ಅಪ್ನಃ, ಅಪಃ ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩–೨) ಉಕ್ತವಾಗಿರುವುದರಿಂದ ಕರ್ಮವೆಂದು ಅರ್ಥ. ಸೂರ್ಯನು ತನ್ನ ಕಿರಣಗಳನ್ನು ಉಪಸಂಹಾರ ಮಾಡುವಾಗ (ಪ್ರಜೆಗಳು) ಜನಗಳು ಮಾಡುತ್ತಿರುವ ಆಯಾಯ ಕರ್ಮಗಳ

ಅರ್ಧದಲ್ಲಿರುವುದನ್ನು ಅಂದರೆ ಪೂರ್ತಿಯಾಗದಿರುವುದನ್ನು ಗಮನಿಸದೆ ಅಸ್ತಂಗತನಾಗುವನು. ಇದನ್ನು ಅನುಸರಿಸಿ ವ್ಯವಸಾಯ ಮಾಡುವವನೇ ಮೊದಲಾಗಿ ಆಯಾಯ ಕರ್ಮಗಳನ್ನು ಆಚರಿಸುವವರು ತಮ್ಮ ತಮ್ಮ ಕರ್ಮಗಳನ್ನು ಅರ್ಧದಲ್ಲಿಯೇ ನಿಲ್ಲಿಸುವರು. ಸೂರ್ಯನು ಅಸ್ತನಾದ ಕೂಡಲೆ ಕೆಲಸಗಳನ್ನು ಅಷ್ಟಕ್ಕೇ ನಿಲ್ಲಿಸುವುದು ಲೋಕದಲ್ಲಿ ರೂಢಿಯಾಗಿರುವುದು, ಇದನ್ನು ಇಲ್ಲಿ ಪ್ರಕಾರಾಂತರದಿಂದ ವರ್ಣಿಸಿರುತ್ತದೆ. ಸೂರ್ಯನು ಉದಯವಾದ ಕಾಲ ಮೊದಲುಗೊಂಡು ಸರ್ವತೋಮುಖವಾಗಿ ಭೂವ್ಯೋಂತರಿಕ್ಷಗಳು ತುಂಬುವಂತೆ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ತನ್ನ ಕಿರಣಗಳನ್ನು ಏಕಕಾಲದಲ್ಲಿ ಅಂದರೆ ಅಸ್ತಕಾಲದ ಕ್ಷಣಮಾತ್ರದಲ್ಲಿ ಹಿಡಿದು ವ್ಯಾಪಿಸಿದ ಹಾಗೆ ನಿಲ್ಲಿಸುವುದು, ಎಲ್ಲರನ್ನೂ ಪ್ರೇರಿಸುವ ಸರ್ವಸ್ವತಂತ್ರನಾದ ಈಶ್ವರಭಾವದಿಂದ ಇರುವ ಅವನಿಗೆ ಸಮನಾದ ಮಹಿಮೆಯಾಗಿ ಅವನ ಸ್ವತಂತ್ರತೆಯನ್ನು ವ್ಯಕ್ತಗೊಳಿಸುವುದು. ಇದರಂತೆಯೇ ಆಯಾಯ ಕಾರ್ಯಗಳನ್ನು ಆಚರಿಸುವ ಮನುಷ್ಯರು ತಮ್ಮ ತಮ್ಮ ಕೆಲಸಗಳನ್ನು ಸೂರ್ಯನು ಅಸ್ತನಾದ ಕಾರಣ ನಿಲ್ಲಿಸುವರು. ತನ್ನ ಉದಯಾಸ್ತಗಳಿಂದಲೇ ಎಲ್ಲವನ್ನೂ ಒಂದು ಶಿಸ್ತಿನಿಂದ ಕ್ರಮಬದ್ಧವಾಗಿರುವ ರೀತಿಯಲ್ಲಿ ಇರಿಸಿರುವ ಸೂರ್ಯನ ಮಹಿಮೆಯು ಅತ್ಯದ್ಭುತವಾಗಿರುವುದು. ಈ ವಿಧವಾದ ಮಾಹಾತ್ಮ್ಯವು ಇತರ ದೇವತೆಗಳು ಯಾರಲ್ಲಿಯೂ ಇರುವುದಿಲ್ಲ. ಇವನ್ನು **ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ** ಎಂಬ ವಾಕ್ಯವು ವಿಶದಪಡಿಸುವುದು.

**ಹರಿತಃ ಸಧಸ್ಥಾದಯುಕ್ತ**—ಸೂರ್ಯನು ಉದಕಗಳನ್ನು ಹೀರುವ ಸ್ವಭಾವವುಳ್ಳ ತನ್ನ ಕಿರಣಗಳನ್ನು ಅಥವಾ ತನ್ನ ರಥದ ಕುದುರೆಗಳನ್ನು ಈ ಭೂಲೋಕದಿಂದ ತಪ್ಪಿಸಿ ಬೇರೆಯ ಕಡೆಯಲ್ಲಿ ವ್ಯಾಪಿಸುವಂತೆ ಮಾಡಿದ ಕಾರಣ ಸೂರ್ಯನ ರಥವು ಬೇರೆಯ ಕಡೆಯಲ್ಲಿ ಸಂಚರಿಸುವುದು. ಆಗ ರಾತ್ರಿಯು ಎಲ್ಲವನ್ನೂ ಆವರಿಸುವ ಕತ್ತಲೆಯನ್ನು ಹರಡುವುದು. ಪ್ರಕಾಶವನ್ನು ಉಂಟುಮಾಡುವ ಹಗಲನ್ನು ಓಡಿಸುವುದು ಎಂದು ಅರ್ಥವು. ಯಾಸ್ಕರು—

> **ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ ಮಧ್ಯೇ ಯತ್ಕರ್ಮಣಾಂ ಕ್ರಿಯಮಾಣಾಂ ವಿತತಂ ಸಂಹ್ರಿಯತೇ । ಯದಾಸಾವಯುಕ್ತ ಹರಣಾನಾದಿತ್ಯರಶ್ಮೀನ್ ಹರಿತೋಽಶ್ವಾನಿತಿ ವಾ । ಅಥ ರಾತ್ರೀ ವಾಸಸ್ತನುತೇ ಸಿಮಸ್ಮೈ ವೇಸರ ಮಹರವಯುವತೀ ಸರ್ವಸ್ಮಾದ್ ಅಪಿ ವೋಪಿ ಮಾರ್ಥೇ ಸ್ಯಾದ್ರಾತ್ರೀವ ವಾಸಸ್ತನುತ ಇತಿ ॥** (ನಿ ೪-೧೧).

ಸೂರ್ಯನು ಉದಕಗಳನ್ನು ಹೀರುವ ತನ್ನ ಕಿರಣಗಳನ್ನು ಅಥವಾ ಕುದುರೆಗಳನ್ನು ಭೂಮಿಯಲ್ಲಿ ವ್ಯಾಪಿಸದ ಹಾಗೆ ತಡೆದು ಆ ಕ್ಷಣದಲ್ಲಿ ನಿಲ್ಲಿಸುವುದೂ, ಇದನ್ನು ಅನುಸರಿಸಿ ಲೋಕದಲ್ಲಿ ಜನರು ತಮ್ಮ ತಮ್ಮ ಕಾರ್ಯಗಳನ್ನು ಪೂರ್ತಿ ಮಾಡದೆ ಅರ್ಧದಲ್ಲಿ ನಿಲ್ಲಿಸುವಂತೆ ತಾನು ಅಸ್ತನಾಗುವುದು ಎಂಬ ಸ್ವಾತಂತ್ರ್ಯವೂ ಮಹಿಮೆಯೂ ಸೂರ್ಯನೊಬ್ಬನಲ್ಲಿ ಮಾತ್ರವೇ ಇರುವುದು. ಇತರ ಯಾವ ದೇವತೆಯಲ್ಲಿಯೂ ಇದು ಇರುವುದಿಲ್ಲ. ರಾತ್ರಿಯು ಎಲ್ಲಾ ಪ್ರದೇಶಗಳಲ್ಲಿಯೂ ಬೆಳಕನ್ನು ಬೀರುವ ಹಗಲನ್ನು ಓಡಿಸುತ್ತಾ ಎಲ್ಲವನ್ನೂ ಕಾಣಿಸದಂತೆ ಮಾಡುವ ಕತ್ತಲೆಯನ್ನು ಹರಡುವುದು. ಎಂದು ಅರ್ಥವುಳ್ಳ ವ್ಯಾಖ್ಯಾನವನ್ನು ಮಾಡಿರುವರು.

**ಸದಸ್ಥಾತ್—ಸಹ ತಿಷ್ಠಂತ್ಯಸ್ಮಿನ್ ಇತಿ ಸದಸ್ಥಾತ್ ರಥಃ ।** ಇದರ ಸಂಗಡಲೇ ಕುದುರೆಗಳು ಇರುವ ರಥವು ಸಧಸ್ಥಾತ್ ಎಂಬ ಶಬ್ದಕ್ಕೆ ಅರ್ಥವಾಗಿರುವುದು.

**ಸಿಮಸ್ಮೈ—ಸಿಮಶಬ್ದಃ ಸರ್ವಪರ್ಯಾಯಃ ಸಪ್ತಮ್ಯರ್ಥೇ ಚತುರ್ಥೀ ।** ಸಿಮಶಬ್ದವು ಸರ್ವಶಬ್ದದ ಪರ್ಯಾಯವಾಗಿರುವುದು. ಇದರಮೇಲೆ ಸಪ್ತಮೀ ವಿಭಕ್ತಿಯ ಅರ್ಥದಲ್ಲಿ ಚತುರ್ಥೀವಿಭಕ್ತಿಯು ಬಂದಿರುವುದರಿಂದ ಎಲ್ಲದರಲ್ಲಿ ಎಂದು ಅರ್ಥ.

**ವಾಸಃ—ಆಚ್ಛಾದಯಿತೃತಮಃ । ವಾಸೋ ವಾಸರಂ ಅಹಃ** (ಸಾ. ಬಾ.) ಎಲ್ಲವನ್ನೂ ಆವರಿಸುವ ಕತ್ತಲೆ, ವಾಸರಶಬ್ದಪರ್ಯಾಯವಾದ ಹಗಲು ಎಂದು ಎರಡು ಅರ್ಥವನ್ನೂ ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳು—

**ಆತ್ ತದೈವ ಚ ರಾತ್ರೀವಾಸಃ ವಾಸಶ್ಶಬ್ದೋತ್ರ ಕ್ರಿಯಾಶಬ್ದಃ ವಸ ಆಚ್ಛಾದನ ಇತ್ಯಸ್ಯ । ವಸ್ತ್ರವಚನೋ ವಾ । ಸಾಮರ್ಥ್ಯಾಚ್ಚ ಕೃಷ್ಣಂ ವಾಸ ಆಹ ನಾನ್ಯನ್ । ತತ್ಸಾರೂಪ್ಯಾಚ್ಚ ತಮಸಿ ಪ್ರಯುಜ್ಯತೇ । ಕೃತ್ಸ್ನಸ್ಯ ಜಗತಃ ಆಚ್ಛಾದಯಿತೃ ಕೃಷ್ಣವಾಸಸ್ಸರೂಪಂ ವಾ ತಮಃ ।**

ಆತ್ ಎಂಬುವುದಕ್ಕೆ ಆಕ್ಷಣದಲ್ಲಿಯೇ ಎಂದು ಅರ್ಥ. ವಾಸಸ್ ಎಂಬ ಶಬ್ದಕ್ಕೆ ವಸ ಆಚ್ಛಾದನೇ, ಆವರಣ (ಮುಚ್ಚುವಿಕೆ) ಎಂಬ ಅರ್ಥವುಳ್ಳ ಧಾತುವಿನಿಂದ ಉಂಟಾದ ರೂಪವೆಂದು ವ್ಯುತ್ಪತ್ತಿಯು ಇರುವುದರಿಂದ ವಸ್ತ್ರವೆಂದು ಅರ್ಥ. ಎಲ್ಲವನ್ನು ಮುಚ್ಚುವುದಾದರೂ ಕಪ್ಪು ಬಣ್ಣದ ಬಟ್ಟೆಯು ಮಾತ್ರವೇ ಇಲ್ಲಿ ವಿವಕ್ಷಿತವಾಗಿರುವುದು. ಇತರ ವರ್ಣದ ವಸ್ತ್ರವು ಕಪ್ಪುಬಟ್ಟೆಯಂತೆ ಆವಾರಕವಾಗುವುದಿಲ್ಲ. ಆವಾರಕವೆಂಬ ಕ್ರಿಯೆ ಅಥವಾ ಧರ್ಮದ ನಿಮಿತ್ತದಿಂದ ತಮಃ ಎಂದರೆ ಕತ್ತಲೆಯು ಕೃಷ್ಣವಾಸಃ ಎಂಬ ಪದದಿಂದ ಉಪಸ್ಥಿತಿಯಾಗಿರುವಕಾರಣ ಜಗತ್ತೆಲ್ಲವನ್ನೂ ಕಾಣಿಸದಂತೆ ಮಾಡುವ ಕಪ್ಪು ಬಟ್ಟೆಗೆ ಸಮಾನವಾದ ಕತ್ತಲೆಯು ಎಂದರ್ಥವನ್ನು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಮಹಿತ್ವಮ್—**ಮಹ ಪೂಜಾಯಾಂ ಧಾತು. ಇದಕ್ಕೆ ಔಣಾದಿಕವಾದ ಇನ್ ಪ್ರತ್ಯಯ. ಮಹಿ ಎಂದು ರೂಪವಾಗುತ್ತದೆ. ಮಹೇಃಭಾವಃ ಮಹಿತ್ವಮ್ **ತಸ್ಯಭಾವಸ್ತ್ವತಲೌ** (ಪಾ. ಸೂ. ೫-೧-೧೧೯) ಎಂಬುದರಿಂದ ಭಾವಾರ್ಥದಲ್ಲಿ ತ್ವಪ್ರತ್ಯಯ. ದೇವತ್ವಮ್ ಎಂಬಲ್ಲಿಯೂ ಇದೇ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತವೆ.

**ಮಧ್ಯಾ—**ಮಧ್ಯ ಶಬ್ದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಡಾದೇಶ. ಡಿತ್ತಾದುದರಿಂದ ಟಿಲೋಪ, ಮಧ್ಯಾ ಎಂದು ರೂಪವಾಗುತ್ತದೆ.

**ಕರ್ತೋಃ—**ಡುಕೃಞ್ ಕರಣೇ. ಧಾತು. ಇದಕ್ಕೆ ಔಣಾದಿಕವಾದ ತುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಷಷ್ಠೀ ಏಕವಚನಾಂತರೂಪ.

**ವಿತತಮ್**—ವಿ ಉಪಸರ್ಗ. ತನು ವಿಸ್ತಾರೇ. ಧಾತು. ಇದಕ್ಕೆ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತಪ್ರತ್ಯಯ. **ಉದಿತೋ ವಾ** (ಪಾ. ಸೂ. ೭-೨-೫೬) ಎಂಬುದರಿಂದ ಕ್ತ್ವಾ ಪ್ರತ್ಯಯ ಪರವಾದಾಗ ಇಟ್ ವಿಕಲ್ಪ ವಿಧಾನಮಾಡಿರುವುದರಿಂದ **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಇಡಾಗಮ ನಿಷೇಧ ಬರುತ್ತದೆ. **ಅನುದಾತ್ತೋಪದೇಶವನ**—(ಪಾ. ಸೂ. ೬-೪-೩೭) ಎಂಬುದ ರಿಂದ ಧಾತುವಿನ ಅನುನಾಸಿಕ ನಕಾರಕ್ಕೆ ಲೋಪ. **ಗತಿರನಂತರಃ** (ಪಾ. ಸೂ. ೬-೨-೪೯.) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ಜಭಾರ**—ಹೃಞ್ ಹರಣೇ. ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ಪಿಗೆ **ಪರಸ್ಮೈಪದಾನಾಂ**—ಸೂತ್ರದಿಂದ ಣಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ. ಹಲಾದಿಶೇಷ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಚುತ್ವ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ತಿಙಂತ ನಿಘಾತಸ್ವರ ಬರುತ್ತದೆ.

**ಅಯುಕ್ತ**—ಯುಜಿರ್ ಯೋಗೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚ್ಲೇಃ ಸಿಚ್** ಸೂತ್ರದಿಂದ ಸಿಚಾದೇಶ ಬಂದಾಗ **ಝಲೋ ಝಲಿ** (ಪಾ. ಸೂ. ೮-೨-೨೬) ಎಂಬುದರಿಂದ ಅದಕ್ಕೆ ಲೋಪ. **ಚೋಃ ಕುಃ** (ಪಾ. ಸೂ. ೮-೨-೩೦.) ಎಂಬುದರಿಂದ ಧಾತುವಿನ ಜಕಾರಕ್ಕೆ ಕುತ್ವ. **ಖರಿ ಚ** (ಪಾ. ಸೂ. ೮-೪-೫೫) ಎಂಬುದರಿಂದ ಚರ್ತ್ವದಿಂದ ಕತ್ವ. ಅಂಗಕ್ಕೆ ಅಡಾಗಮ. ಯದಾ ಎಂದು ಹಿಂದೆ ಸಂಬಂಧವಿರುವುದ ರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಸಧಸ್ಥಾತ್**—ಷ್ಠಾ ಗತಿನಿವೃತ್ತೌ. ಧಾತು. **ಘಞರ್ಥೇ ಕವಿಧಾನಮ್** ಎಂಬ ವಚನದಿಂದ ಅಧಿಕರಣಾರ್ಥದಲ್ಲಿ ಕ ಪ್ರತ್ಯಯ. **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಸಹ ಎಂಬುದಕ್ಕೆ **ಸಧಮಾದಸ್ಥಯೋಶ್ಛಂದಸಿ** (ಪಾ. ಸೂ. ೬-೩-೯೬) ಎಂಬುದರಿಂದ ಷ್ಠಾ ಧಾತು ಪರವಾದುದರಿಂದ ಸಧ ಎಂಬ ಆದೇಶ. ದಾಸೀಭಾರಾದಿಯಲ್ಲಿ ಸೇರಿರುವುದರಿಂದ ಕೃದುತ್ತರಪದ ಪ್ರಕೃತಿ ಸ್ವರವು ಬಾಧಿತವಾಗಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ರಾತ್ರೀ**—**ರಾತ್ರೇಶ್ಚಾಜಸೌ** (ಪಾ. ಸೂ. ೪-೧-೩೧) ಎಂಬುದರಿಂದ ಛಂದಸ್ಸಿನಲ್ಲಿ ಙೀಪ್ ಬರುತ್ತದೆ.

**ತನುತೇ**—ತನು ವಿಸ್ತಾರೇ. ಧಾತು. ಲಟ್ ಪ್ರಥಮಪುರುಷ ಏಕವಚನರೂಪ ತಿಙಂತ ನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ತನ್ಮಿತ್ರಸ್ಯ ವರುಣಸ್ಯಾಭಿಚಕ್ಷೇ ಸೂರ್ಯೋ ರೂಪಂ ಕೃಣುತೇ
ದ್ಯೋರುಪಸ್ಥೇ ।
ಅನಂತಮನ್ಯದ್ರುಶದಸ್ಯ ಪಾಜಃ ಕೃಷ್ಣಮನ್ಯದ್ಧರಿತಃ ಸಂ ಭ-
ರಂತಿ ॥ ೫ ॥

॥ ಪದಪಾಠಃ ॥

ತತ್ । ಮಿತ್ರಸ್ಯ । ವರುಣಸ್ಯ । ಅಭಿಽಚಕ್ಷೇ । ಸೂರ್ಯಃ । ರೂಪಂ । ಕೃಣುತೇ ।
ದ್ಯೋಃ । ಉಪಽಸ್ಥೇ ।
ಅನಂತಂ । ಅನ್ಯತ್ । ರುಶತ್ । ಅಸ್ಯ । ಪಾಜಃ । ಕೃಷ್ಣಂ । ಅನ್ಯತ್ । ಹರಿತಃ ।
ಸಂ । ಭರಂತಿ ॥ ೫ ॥

॥ ಸಾಯಣಭಾಷ್ಯಂ ॥

ತತ್ತದಾನೀಮುದಯಸಮಯೇ ಮಿತ್ರಸ್ಯ ವರುಣಸ್ಯೈತದುಭಯೋಪಲಕ್ಷಿತಸ್ಯ ಸರ್ವಸ್ಯ ಜಗತೋಽಭಿಚಕ್ಷೆ ಅಭಿಮುಖ್ಯೇನ ಪ್ರಕಾಶನಾಯ ದ್ಯೋರ್ನಭಸ ಉಪಸ್ಥ ಉಪಸ್ಥಾನೇ ಮಧ್ಯೇ ಸೂರ್ಯಃ ಸರ್ವಸ್ಯ ಪ್ರೇರಕಃ ಸವಿತಾ ರೂಪಂ ಸರ್ವಸ್ಯ ನಿರೂಪಕಂ ಪ್ರಕಾಶಕಂ ತೇಜಃ ಕೃಣುತೇ । ಕರೋತಿ । ಅಪಿ ಚಾಸ್ಯ ಸೂರ್ಯಸ್ಯ ಹರಿತೋ ರಸಹರಣಶೀಲಾ ರಶ್ಮಯೋ ಹರಿದ್ವರ್ಣಾ ಅಶ್ವಾ ವಾನಂತಮವಸಾನರಹಿತಂ ಕೃತ್ಸ್ನಸ್ಯ ಜಗತೋ ವ್ಯಾಪಕಂ ರುಶದ್ದೀಪ್ಯಮಾನಂ ಶ್ವೇತವರ್ಣಂ ಪಾಜಃ । ಬಲನಾಮೈತತ್ । ಬಲಯುಕ್ತಮತಿಬಲಸ್ಯಾಪಿ ನೈಶಸ್ಯ ತಮಸೋ ನಿವಾರಣೇ ಸಮರ್ಥಮನ್ಯತ್ತಮಸೋ ವಿಲಕ್ಷಣಂ ತೇಜಃ ಸಂ ಭರಂತಿ । ಅಹನಿ ಸ್ವಕೀಯಾಗಮನೇನ ನಿಷ್ಪಾದಯಂತಿ । ತಥಾ ಕೃಷ್ಣಂ ಕೃಷ್ಣವರ್ಣಮನ್ಯತ್ತಮಃ ಸ್ವಕೀಯಾಪಗಮನೇನ ರಾತ್ರೌ । ಅಸ್ಯ ರಶ್ಮಯೋಽಪ್ಯೇವಂ ಕುರ್ವಂತಿ ಕಿಮು ವಕ್ತವ್ಯಂ ತಸ್ಯ ಮಾಹಾತ್ಮ್ಯಮಿತಿ ಸೂರ್ಯಸ್ಯ ಸ್ತುತಿಃ ॥ ಅಭಿಚಕ್ಷೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ ಕೃದುತ್ತರ-

ಪದಪ್ರಕೃತಿಸ್ವರತ್ವಂ । ದ್ಯೋಃ । ಜಸಿಜಸೋಃಶ್ಚ । ಪಾ. ೬-೧-೧೧೦ । ಇತಿ ಪೂರ್ವರೂಪತಾ । ಉಪಸ್ಥೇ । ಘಾಞರ್ಥೇ ಕವಿಧಾನಮಿತಿ ಕಪ್ರತ್ಯಯಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಪಾಜಃ । ಪಾತಿ ರಕ್ಷತೀತಿ ಪಾಜೋ ಬಲಂ । ಪಾತೇರ್ಬಲೇ ಜುಟ್ಚ । ಉ. ೪-೨೦೨ । ಇತ್ಯಸುನ್ ಜುಡಾಗಮಶ್ಚ । ಛಾಂದಸೋ ಮತ್ವರ್ಥೀಯಸ್ಯ ವಿನೋ ಲೋಪಃ ॥

॥ ಪ್ರತಿಪದಾರ್ಥ ॥

**ತತ್**—ಆಗ (ಉದಯಕಾಲದಲ್ಲಿ) । **ಮಿತ್ರಸ್ಯ ವರುಣಸ್ಯ**—ಮಿತ್ರ, ವರುಣ ಇವರೇ ಆದಿಯಾದ ಜಗತ್ತನ್ನೂ । **ಅಭಿಚಕ್ಷೇ**—ಪ್ರಕಾಶಗೊಳಿಸಲು । **ದ್ಯೋಃ ಉಪಸ್ಥೇ**—ಆಕಾಶದ ಮಧ್ಯಭಾಗದಲ್ಲಿ । **ಸೂರ್ಯಃ**—(ಸರ್ವಪ್ರೇರಕನಾದ) ಸೂರ್ಯನು । **ರೂಪಂ**—ಪ್ರಕಾಶಕವಾದ ತೇಜಸ್ಸನ್ನು । **ಕೃಣುತೇ**—ಉಂಟುಮಾಡುತ್ತಾನೆ । (**ಅಪಿ ಚ**—ಮತ್ತೂ) । **ಅಸ್ಯ**—ಈ ಸೂರ್ಯನ । **ಹರಿತಃ**—ರಸಹರಣಶೀಲವಾದ ಕಿರಣಗಳು (ಅಥವಾ ಸೂರ್ಯನ ಅಶ್ವಗಳು) । **ಅನಂತಂ**—ಅನಂತವಾದ (ಈ ಜಗತ್ತನ್ನೂ) । **ರುಶತ್**—ಪ್ರಕಾಶಗೊಳಿಸುವ । **ಪಾಜಃ**—ಬಲಯುಕ್ತವಾದ । **ಅನ್ಯತ್**—ತಮಸ್ಸಿಗೆ ವ್ಯತಿರಿಕ್ತವಾದ ತೇಜಸ್ಸನ್ನು । **ಸಂ ಭರಂತಿ**—(ಹಗಲಿನಲ್ಲಿ) ತುಂಬುತ್ತವೆ (ಹಾಗೆಯೇ) । **ಕೃಷ್ಣಂ**—ಕೃಷ್ಣವರ್ಣವಾದ (ಕಪ್ಪುಬಣ್ಣವುಳ್ಳ) । **ಅನ್ಯತ್**—ತಮಸ್ಸನ್ನು (ಕತ್ತಲೆಯನ್ನು) । **ಸಂ ಭರಂತಿ**—ತಾವು ಹೊರಟುಹೋದ ಮೇಲೆ ರಾತ್ರಿಯಲ್ಲಿ ಕಿರಣಗಳು ಉಂಟುಮಾಡುತ್ತವೆ)

॥ ಭಾವಾರ್ಥ ॥

ಉದಯ ಕಾಲದಲ್ಲಿ ಸೂರ್ಯನು ಮಿತ್ರ, ವರುಣ ಇವರುಗಳಿಂದ ಯುಕ್ತವಾದ ಈ ಜಗತ್ತನ್ನು ಪ್ರಕಾಶಗೊಳಿಸುವ ತೇಜಸ್ಸನ್ನು ಆಕಾಶದ ಮಧ್ಯದಲ್ಲಿ ಉಂಟುಮಾಡುತ್ತಾನೆ ಇವನ ಕಿರಣಗಳೇ ಹಗಲಿನಲ್ಲಿ ಜಗತ್ಪ್ರಕಾಶಕವಾದ (ತಮಸ್ಸನ್ನು ಪರಿಹರಿಸುವ) ಶಕ್ತಿಯುಳ್ಳ ಬೆಳಕನ್ನುಂಟುಮಾಡುತ್ತವೆ. ಮತ್ತು ರಾತ್ರಿಯಲ್ಲಿ ತಾವು ಹೊರಟುಹೋಗುವುದರಿಂದ ಅಂಧಕಾರವನ್ನೂ ಉಂಟುಮಾಡುತ್ತವೆ.

English Translation.

The sun, is the sight of Mitra and Varuna, displays his form (of brightness) in the middle of the heavens, and his rays extend, on one hand, his infinite and brilliant power, or, on the other (by their departure), bring on the blackness of night.

॥ ವಿಶೇಷವಿಷಯಗಳು ॥

**ಸೂರ್ಯಃ—ಸರ್ವಸ್ಯ ಪ್ರೇರಕಃ ಸವಿತಾ** । ತನ್ನ ಉದಯದಿಂದ ಜಗತ್ತೆಲ್ಲವನ್ನೂ ಜ್ಞಾನಕ್ರಿಯೆಗಳಿಂದ ಸಾಮರ್ಥ್ಯವುಳ್ಳದ್ದನ್ನಾಗಿಮಾಡಿ ಆಯಾಯ ಕರ್ಮಗಳಲ್ಲಿ ಪ್ರೇರಿಸುವವನಾದ ಸವಿತೃಶಬ್ದವಾಚ್ಯನಾದ ದೇವನು. ಅಥವಾ ಸರತೀತಿ ಸೂರ್ಯಃ । ಅಂತರಿಕ್ಷದಲ್ಲಿ ಸಂಚರಿಸುವವನಾದ್ದರಿಂದ ಸೂರ್ಯನೆಂದು ಹೇಳಲ್ಪಡುವನು.

**ರೂಪಂ ಕೃಣುತೇ—ಸರ್ವಸ್ಯ ನಿರೂಪಕಂ ಪ್ರಕಾಶಕಂ ತೇಜಃ ಕರೋತಿ |** ಎಲ್ಲವನ್ನು ಪ್ರಕಾಶಗೊಳಿಸುವ ತನ್ನ ತೇಜಸ್ಸನ್ನು ಉದಯಕಾಲದಲ್ಲಿಯೇ ಮಿತ್ರನೂ ಮತ್ತು ವರುಣನೂ ಎಂಬ ದೇವತೆಗಳಿಂದ ಕೂಡಿದ ಜಗತ್ತಿನ ಪ್ರಕಾಶಕ್ಕಾಗಿ ಅಂತರಿಕ್ಷದ ಮಧ್ಯದಲ್ಲಿ ಹರಡುವನು.

ಮಿತ್ರಃ— **ಪ್ರಮೀತೇಸ್ತ್ರಾಯತೇ** ಮರಣವಾಗದಂತೆ ರಕ್ಷಿಸುವವನು ಅಥವಾ **ಸಮ್ಮಿನ್ವಾನೋ ದ್ರವತೀತಿ ವಾ—ಸಮನ್ತತೋ ಮಿನ್ವಾನಃ ಉದಕೇನ ದ್ರವತಿ ಅನ್ತರಿಕ್ಷಲೋಕೇ** ಅಂತರಿಕ್ಷಲೋಕದಲ್ಲಿ ಉದಕದಿಂದ ಸಿಂಪಡಿಸುವವನು—ಅಥವಾ **ಮೇದಯತೇರ್ವಾ ಸ್ನೇಹಾರ್ಥಸ್ಯ ಸರ್ವಂ ಹ್ಯಸಾವುದಕೇನ ಸ್ನೇಹಯತಿ** ಸರ್ವವನ್ನೂ ಉದಕದಿಂದ ಸ್ನೇಹವುಳ್ಳದ್ದನ್ನಾಗಿ ಮಾಡುವವನು ಎಂದು ಮಿತ್ರಶಬ್ದದ ರೂಪನಿಷ್ಪತ್ತಿಯನ್ನು ನಿರುಕ್ತಕಾರರು ವಿವರಿಸಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ |**
**ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ||**

(ಋ. ಸಂ. ೩-೫೯-೧)

ಎಂಬ ಈ ಋಕ್ಕನ್ನು ಉದಹರಿಸಿ **ಮಿತ್ರನು** ಪ್ರಪಂಚವೆಲ್ಲವನ್ನೂ ಧರಿಸಿರುವನು. ಜನರನ್ನು ಕೃಷ್ಯಾದಿಕರ್ಮಗಳಲ್ಲಿ ಪ್ರವರ್ತಿಸುವಂತೆ ಮಾಡುವನು. ಮತ್ತು ವೃಷ್ಟ್ಯಾದಿಗಳನ್ನು ಉಂಟುಮಾಡುವುದರಿಂದ ಮನುಷ್ಯರಿಗೆ ಉಪಕಾರವನ್ನು ಮಾಡುವನು ಎಂದು ಮಿತ್ರನ ಮಾಹಾತ್ಮ್ಯವನ್ನು ಪ್ರಶಂಸೆಮಾಡಿರುವರು. (ನಿ. ೧೦-೨೨) ಮತ್ತು,

**ವರುಣಃ—ಮೇಘಜಾಲೇನ ವಿಯತ್ ವೃಣೋತಿ** ಮೇಘಗಳ ಸಮೂಹದಿಂದ ಅಂತರಿಕ್ಷವನ್ನು ಆವರಿಸುವವನು ಎಂದು ವರುಣಶಬ್ದದ ವ್ಯುತ್ಪತ್ತಿಯನ್ನು ವಿವರಿಸಿ

**ನೀಚೀನಬಾರಂ ವರುಣಃ ಕಬಂಧಂ ಪ್ರ ಸಸರ್ಜ ರೋದಸೀ ಅಂತರಿಕ್ಷಂ |**
**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ||**

(ಋ. ಸಂ. ೫-೮೫-೩)

ಎಂಬ ಋಕ್ಕನ್ನು ಉದಹರಿಸಿ **ಮೇಘಮಧೋಬಿಲಂ ಕೃತ್ವಾ ದ್ಯಾವಾಪೃಥಿವ್ಯೌ ಚಾಂತರಿಕ್ಷಂ ಚ ಮಹತ್ತ್ವೇನ ಯವಮಿವ ವೃಷ್ಟಿರ್ವ್ಯುನತ್ತಿ ಭೂಮಿಂ** ಮೇಘವನ್ನು ಅಧೋಮುಖವುಳ್ಳದ್ದನ್ನಾಗಿಮಾಡಿ ಭೂವ್ಯಂತರಿಕ್ಷಗಳ ಮಹತ್ತ್ವಕ್ಕಾಗಿ ವೃಷ್ಟಿಯನ್ನು ಉಂಟುಮಾಡುವವನು ಎಂದು ವರುಣನ ಮಹತ್ತ್ವವನ್ನು ವಿವರಿಸಿರುತ್ತಾರೆ. (ನಿ. ೧೦-೪)

**ಪಾಜಃ—ಬಲಯುಕ್ತಂ| ಓಜಃ ಶವಃ** ಎಂಬ ಇಪ್ಪತ್ತೆಂಟು ಬಲನಾಮಗಳಲ್ಲಿ ಪಾಜಃಶಬ್ದವು (ನಿ. ೩-೯) ಉಕ್ತವಾಗಿರುವುದರಿಂದ ಪಾಜಃ ಎಂದರೆ ಬಲವೆಂದು ಅರ್ಥವು.

**ರುಶತ್— ರುಶದಿತಿ ವರ್ಣನಾಮ | ರೋಚತೇರ್ಜ್ವಲತಿಕರ್ಮಣಃ** ಎಂದು ಕಾಂತಿ ಎಂಬ ಅರ್ಥವುಳ್ಳ ರುಚ್‌ಧಾತುವಿನಿಂದ ನಿಷ್ಪನ್ನವಾದ ರುಶತ್ ಎಂಬ ಪದಕ್ಕೆ **ದೀಪ್ಯಮಾನಂ ಶ್ವೇತವರ್ಣಂ—**ಪ್ರಕಾಶಿಸುವ ಅಥವಾ ಬಿಳಿಯ ವರ್ಣವುಳ್ಳ ಎಂದು ಅರ್ಥ.

**ಹರಿತಃ**—ಮೂವತ್ತೇಳು ನದೀನಾಮಗಳಲ್ಲಿಯೂ **ಹರಿತ** ಶಬ್ದವು (ನಿ. ೨–೨೪) ಉಕ್ತವಾಗಿರುತ್ತದೆ. ಆದಿಷ್ಟೋಪಯೋಜನಗಳ ಮಧ್ಯದಲ್ಲಿ **ಹರಿತ ಆದಿತ್ಯಸ್ಯ** (ನಿ. ೨–೨೮) ಎಂದು ಉಕ್ತವಾಗಿರುವುದರಿಂದ ಸಾಯಣರು ಈ ಶಬ್ದಕ್ಕೆ **ರಸಹರಣಶೀಲಾಃ ರಶ್ಮಯಃ ಹರಿದ್ವರ್ಣಾಃ ಅಶ್ವಾ ವಾ** ಉದಕವನ್ನು ಶೋಷಿಸುವ ಸ್ವಭಾವವುಳ್ಳ ಕಿರಣಗಳು ಅಥವಾ ಹಸರು ಬಣ್ಣವುಳ್ಳ ಸೂರ್ಯನ ಕುದುರೆಗಳು ಎಂದು ಅರ್ಥವನ್ನು ಮಾಡಿರುವರು.

**ಅನಂತಂ ಪಾಜಃ ಸಂಭರಂತಿ**–ಬಲವೆಂಬ ಅರ್ಥವುಳ್ಳ ಪಾಜಃ ಎಂಬ ಶಬ್ದಕ್ಕೆ ರುಶತ್ ಶಬ್ದವು ವಿಶೇಷಣ ವಾಗಿರುವುದರಿಂದ ಸೂರ್ಯನ ಕಿರಣಗಳು ಜಗತ್ತೆಲ್ಲವನ್ನೂ ವ್ಯಾಪಿಸುವ ಶುಭ್ರವಾದ ಕಾಂತಿಯಿಂದ ತುಂಬಿ ಅತಿಶಯ ವಾದ ಪ್ರಕಾಶವನ್ನು ಉಂಟುಮಾಡುವುದು ಮತ್ತು ರಾತ್ರಿಯಿಂದುಂಟಾದ ಕತ್ತಲೆಯನ್ನು ಕಿರಣಗಳು ತಮ್ಮ ಆಗಮನ ದಿಂದ ನಾಶಪಡಿಸಿ ಬೆಳಕನ್ನು ಎಲ್ಲಾ ಕಡೆಗೂ ಬೀರುತ್ತವೆ.

**ಕೃಷ್ಣಮನ್ಯತ್—ಕೃಷ್ಣವರ್ಣಂ ಅನ್ಯತ್ ತಮಃ ಸ್ವಕೀಯೋಪಗಮನೇನ ರಾತ್ರ್ಯಾ |** ಹಗಲಿನಲ್ಲಿ ಸೂರ್ಯನ ಕಿರಣಗಳು ರಾತ್ರಿಯ ಕಗ್ಗತ್ತಲೆಯು ಪೂರ್ಣವಾಗಿ ನಾಶವಾಗುವಂತೆ ತಮ್ಮ ಕಾಂತಿಯನ್ನು ಉಂಟು ಮಾಡುತ್ತಾ ಪ್ರಕಾಶಿಸುವುವು. ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುತ್ತಾ ತೇಜಸ್ಸಿನ ರೂಪದಿಂದ ಹಗಲಿನಲ್ಲಿ ಪ್ರಕಾಶಿಸುತ್ತಿರುವನು ರಾತ್ರಿಯ ಕಾಲದಲ್ಲಿ ತಾನು ಅಸ್ತನಾಗಿರುವ ಕಾರಣ ಹಗಲಿನ ಪ್ರಕಾಶಮಯವಾದ ರೂಪಕ್ಕಿಂತ ಬೇರೆಯಾಗಿರುವ ಕಪ್ಪುಬಣ್ಣದ ರೂಪಾಂತರವು ಪ್ರಾಪ್ತವಾಗುವಂತೆ ತನ್ನ ಕಿರಣಗಳನ್ನು ಉಪಸಂಹಾರಮಾಡಿ ಕೊಳ್ಳುವನು. (ಹಿಂದಕ್ಕೆ ಎಳೆದುಕೊಳ್ಳುವನು.) ಇವನ ಕಿರಣಗಳು ಈ ರೀತಿಯಾದ ಅಹೋರಾತ್ರಗಳ ವ್ಯವಸ್ಥೆಯು ಉಂಟಾಗುವಂತೆ ಮಾಡುವ ಕಾರಣ ಇಂತಹ ಕಿರಣಗಳನ್ನು ಹೊಂದಿರುವ ಸೂರ್ಯನ ಮಹಿಮೆಯು ನಿರತಿಶಯವಾಗಿ ರುತ್ತದೆ. ನಿರುಕ್ತಕಾರರು ಸೂರ್ಯನ ರಶ್ಮಿಗಳು ರಸಹರಣಶೀಲವಾದವುಗಳೆಂಬ ವಿಷಯದಲ್ಲಿ—

**ಕೃಷ್ಣಂ ನಿಯಾನಂ ಹರಯಸ್ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ |**

(ಋ. ಸಂ. ೧-೧೬೪-೪೭)

ಎಂಬ ಋಕ್ಕನ್ನು ಉದಹರಿಸಿ **ಸ ಏಷ ಭಗವಾನಾದಿತ್ಯಃ ಯದಾ ಜಗದನುಗ್ರಹಾಯ ಗರ್ಭಮುದಕಮಾತ್ಮ-ನ್ಯಾಧಿತ್ಸುರುತ್ತರಾಯಣಂ ಪ್ರತಿಪದ್ಯತೇ ತದೈತೇ ತಸ್ಯ ರಶ್ಮಯಃ ಹರಯಃ ರಸಹರಣಾಃ** ಪೂಜ್ಯನಾದ ಆದಿತ್ಯನು ಜಗತ್ತಿನ ಅನುಗ್ರಹಕ್ಕಾಗಿ ತನ್ನಲ್ಲಿ ಉದಕವನ್ನು ಸಂಗ್ರಹಮಾಡುವ ಇಚ್ಛೆಯಿಂದ ಉತ್ತರಾಯಣವನ್ನು ಹೊಂದಿದಾಗ ಅವನ ಕಿರಣಗಳು ಉದಕಗಳನ್ನು ಹೀರುತ್ತವೆ. ಎಂಬ ಅರ್ಥವನ್ನು ವಿವರಿಸಿರುವರು. (ನಿ. ೭–೨೪)

॥ ವ್ಯಾಕರಣಪ್ರಕ್ರಿಯಾ ॥

**ಅಭಿಚಕ್ಷೇ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. **ಸಂಪದಾದಿಭ್ಯಃ ಕ್ವಿಪ್** (ವಾ. ೨೨೩೩) ಎಂಬುದ ರಿಂದ ಭಾವಾರ್ಥದಲ್ಲಿ ಕ್ವಿಪ್. ಅಭಿಚಕ್ಷ್ ಶಬ್ದವಾಗುತ್ತದೆ. ಗತಿಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬–೨–೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಕೃಣುತೇ**—ಕೃವಿ ಹಿಂಸಾಕರಣಯೋಶ್ಚ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. **ಧಿನ್ವಿಕೃಣ್ವ್ಯೋರ ಚ** (ಪಾ. ಸೂ. ೩-೧-೮೦) ಎಂಬುದರಿಂದ ಉವಿಕರಣ. ಅಕಾರ ಅಂತಾದೇಶ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಲೋಪ. ಇದಕ್ಕೆ ಸ್ಥಾನಿವದ್ಭಾವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಉಪಸ್ಥೇ**—ಷ್ಠಾ ಗತಿನಿವೃತ್ತೌ. ಧಾತು. **ಘಞರ್ಥೇ ಕವಿಧಾನಮ್** ಎಂಬುದರಿಂದ ಅಧಿಕರಣಾರ್ಥದಲ್ಲಿ ಕಪ್ರತ್ಯಯ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. **ಗತಿರನಂತರಃ** (ಪಾ. ಸೂ. ೬-೨-೪೯) ಸೂತ್ರದಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಮರುದ್ವೃಧಾದಿಯಲ್ಲಿ ಸೇರಿರುವುದರಿಂದ ಪೂರ್ವಪದಕ್ಕೆ ಅಂತೋದಾತ್ತಸ್ವರ ಬರುತ್ತದೆ.

**ದ್ಯೋಃ**—ದ್ಯೋ ಶಬ್ದ. ಷಷ್ಠೀ ಏಕವಚನ ಪರವಾದಾಗ **ಙಸಿಙಸೋಶ್ಚ** (ಪಾ. ಸೂ. ೬-೧-೧೧೦) ಎಂಬುದರಿಂದ ಪೂರ್ವರೂಪ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ.

**ರುಶತ್**—ರುಶ ದೀಪ್ತೌ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ಪಾಜಃ**—ಪಾತಿ ರಕ್ಷತಿ ಇತಿ ಪಾಜಃ ಬಲಮ್. ಪಾ ರಕ್ಷಣೇ. ಧಾತು. **ಪಾತೇರ್ಬಲೇ ಜುಟ್ ಚ** (ಉ. ಸೂ. ೪-೬೪೨) ಎಂಬುದರಿಂದ ಅಸುನ್ ಪ್ರತ್ಯಯ. ಧಾತುವಿಗೆ ಜುಟಾಗಮ. ಪಾಜಸ್ ಶಬ್ದವಾಗುತ್ತದೆ. **ಪಾಜಃ ಅಸ್ಯ ಅಸ್ತಿ** ಎಂಬ ಅರ್ಥದಲ್ಲಿ **ಅಸ್ಮಾಯಾಮೇ**—(ಪಾ. ಸೂ. ೫-೨-೧೨೧) ಎಂಬುದರಿಂದ ವಿನ್ ಪ್ರತ್ಯಯ ಬಂದಾಗ ಛಾಂದಸವಾಗಿ ಅದಕ್ಕೆ ಲೋಪ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭರಂತಿ**—ಭೃಞ್ ಭರಣೇ ಧಾತು. ಭ್ವಾದಿ. ಲಟ್ ಪ್ರಥಮಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಅದ್ಯಾ ದೇವಾ ಉದಿತಾ ಸೂರ್ಯಸ್ಯ ನಿರಂಹಸಃ ಪಿಪೃತಾ ನಿರ-
ವದ್ಯಾತ್ ।
ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ
ಪೃಥಿವೀ ಉತ ದ್ಯೌಃ ॥ ೬ ॥

॥ ಪದಪಾಠಃ ॥

ಅದ್ಯ । ದೇವಾಃ । ಉತ್ಽಇತಾ । ಸೂರ್ಯಸ್ಯ । ನಿಃ । ಅಂಹಸಃ । ಪಿಪೃತ ।
ನಿಃ । ಅವದ್ಯಾತ್ ।
ತತ್ । ನಃ । ಮಿತ್ರಃ । ವರುಣಃ । ಮಮಹಂತಾಂ । ಅದಿತಿಃ । ಸಿಂಧುಃ । ಪೃಥಿವೀ ।
ಉತ । ದ್ಯೌಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ದೇವಾ ದ್ಯೋತಮಾನಾಃ ಸೂರ್ಯರಶ್ಮಯಃ ಅದ್ಯಾಸ್ಮಿನ್ಕಾಲೇ ಸೂರ್ಯಸ್ಯಾದಿತ್ಯಸ್ಯೋದಿತಾ ಉದಿತಾವುದಯೇ ಸತೀತಸ್ತತಃ ಪ್ರಸರಂತೋ ಯೂಯಮಸ್ಮಾನಂಹಸಃ ಪಾಪಾನ್ನಿಷ್ಪಿಪೃತ । ನಿಷ್ಕೃಷ್ಯ ಪಾಲಯತ । ಯದಿದಮಸ್ಮಾಭಿರುಕ್ತಂ ನೋಽಸ್ಮದೀಯಂ ತನ್ಮಿತ್ರಾದಯಃ ಷಡ್ದೇವತಾ ಮಮಹಂತಾಂ । ಪೂಜಯಂತು । ಅನುಮನ್ಯಂತಾಂ । ರಕ್ಷಂತ್ವಿತಿ ಯಾವತ್ । ಮಿತ್ರಃ ಪ್ರಮೀತೇಸ್ತ್ರಾಯಕೋಽಹರಭಿಮಾನೀ ದೇವಃ । ವರಣೋಽನಿಷ್ಟಾನಾಂ ನಿವಾರಯಿತಾ ರಾತ್ರ್ಯಭಿಮಾನೀ । ಅದಿತಿರಖಂಡನೀಯಾದೀನಾ ವಾ ದೇವಮಾತಾ । ಸಿಂಧುಃ ಸ್ಯಂದನಶೀಲೋದಕಾಭಿಮಾನಿನೀ ದೇವತಾ । ಪೃಥಿವೀ ಭೂಲೋಕಸ್ಯಾಧಿಷ್ಠಾತ್ರೀ ದ್ಯೌರ್ದ್ಯುಲೋಕಸ್ಯ । ಉತಶಬ್ದಃ ಸಮುಚ್ಚಯೇ ॥ ಅದ್ಯ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘತ್ವಂ । ಉದಿತಾ । ಉತ್ಪೂರ್ವಾದೇತೇರ್ಭಾವೇ ಕ್ತಿನ್ । ಸುಪಾಂ ಸುಲುಗಿತಿ ಡಾದೇಶಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಪಿಪೃತ । ಪೄ ಪಾಲನಪೂರಣಯೋಃ । ಪೃ ಇತ್ಯೇಕೇ ।

ಲೋಟಿ ಜುಹೋತ್ಯಾದಿತ್ವಾಚ್ಛಪಃ ಶ್ಲುಃ । ದ್ವಿರ್ವಚನೇಽರದತ್ವೇಹಲಾದಿಶೇಷಾಃ । ಅರ್ತಿಪಿಪರ್ತ್ಯೋರ್ಚೇ-ತ್ಯಭ್ಯಾಸಸ್ಯೇತ್ವಂ । ಸಾರ್ವಧಾತುಕಮಪಿದಿತಿ ತಶಬ್ದಸ್ಯ ಙಿತ್ತ್ವೇ ಸತಿ ಋಚಿ ತುನುಘೇತ್ಯಾದಿನಾ ಸಂಹಿತಾಯಾಂ ದೀರ್ಘಃ ॥

॥ ಪ್ರತಿಪದಾರ್ಥ ॥

**ಹೇ ದೇವಾಃ**—ಪ್ರಕಾಶಿಸುತ್ತಿರುವ ಎಲೈ ರಶ್ಮಿಗಳೇ । **ಅದ್ಯ**—ಈಗ । **ಸೂರ್ಯಸ್ಯ**—ಸೂರ್ಯನ । **ಉದಿತಾ**—ಉದಯವಾಗಲು (ನೀವು ನಮ್ಮನ್ನು) । **ಅಂಹಸಃ**—ಪಾಪಗಳಿಂದ । **ನಿಃ ಪಿಪೃತ**—ವಿವೇಚನೆ ಮಾಡಿ ಕಾಪಾಡಿರಿ । **ನಃ**—ನಮ್ಮ । **ತತ್**—ಈ ಸ್ತೋತ್ರವನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅದಿತಿಃ**—ಅದಿತಿಯೂ । **ಸಿಂಧುಃ**—ಸಾಗರಾಧಿದೇವತೆಯೂ । **ಪೃಥಿವೀ**—ಭೂಮಿಯೂ । **ಉತ**—ಮತ್ತು । **ದ್ಯೌಃ**—ಸ್ವರ್ಗಾಭಿಮಾನಿ ದೇವತೆಯೂ । **ಮಮಹಂತಾಂ**—ಗೌರವಿಸಿ ಕಾಪಾಡಲಿ.

॥ ಭಾವಾರ್ಥ ॥

ದೇದೀಪ್ಯಮಾನವಾದ ಎಲೈ ಸೂರ್ಯರಶ್ಮಿಗಳೇ, ಸೂರ್ಯನ ಉದಯವಾದ ಕೂಡಲೇ (ನೀವು ನಮ್ಮನ್ನು) ಪಾಪಗಳಿಂದ ಸೆಳೆದು ಕಾಪಾಡುತ್ತೀರಿ. ನಮ್ಮ ಈ ಸ್ತುತಿಯನ್ನು ಮಿತ್ರ, ವರುಣ, ಅದಿತಿ. ಪೃಥಿವೀ, ಸಿಂಧು, ಮತ್ತು ಅಂತರಿಕ್ಷ ದೇವತೆಗಳು ಮಾಹಾತ್ಮ್ಯಯುಕ್ತವನ್ನಾಗಿ ಮಾಡಲಿ.

## English Translation.

This day, gods, with the rising of the sun, deliver us from heinous sins; and may Mitra, Varuna, Aditi,—ocean, earth, and heaven, be favourable to this our prayer.

॥ ವಿಶೇಷವಿಷಯಗಳು ॥

**ದೇವಾಃ—ದ್ಯೋತಮಾನಾಃ ಸೂರ್ಯರಶ್ಮಯಃ ।** ದಿವ್ ಧಾತುವಿನಿಂದ ನಿಷ್ಪನ್ನವಾದ ದೇವಶಬ್ದಕ್ಕೆ ಕಾಂತಿಯುಳ್ಳ ಅಥವಾ ಪ್ರಕಾಶಮಾನವಾದ ಎಂದು ಅರ್ಥವು. ಪ್ರಕಾಶಮಾನವಾದ ಸೂರ್ಯನ ಕಿರಣಗಳು ಸೂರ್ಯೋದಯಾನಂತರ ತಮ್ಮ ಪ್ರಕಾಶವೆಲ್ಲವನ್ನೂ ಅತಿಶಯವಾಗಿರುವಂತೆ ವ್ಯಾಪಿಸುತ್ತಾ ಇರುತ್ತವೆ. ಈ ಪ್ರಕಾರ ವಾಗಿ ತಮ್ಮ ಕಾಂತಿಗಳನ್ನು ಪ್ರಸರಿಸುತ್ತಿರುವ ಸೂರ್ಯನ ರಶ್ಮಿಗಳು ನಮ್ಮ ಪಾತಕಗಳೆಲ್ಲವನ್ನೂ ನಾಶಮಾಡಲಿ ಎಂದು ಆಶಂಸನೆಯನ್ನು ಇಲ್ಲಿ ವರ್ಣಿಸಿದೆ—

**ಮಿತ್ರ**—ಪ್ರಮಿತೇಸ್ತ್ರಾಯಕಃ ಮರಣದಿಂದ ರಕ್ಷಿಸುವ ಅಹರಭಿಮಾನಿಯಾದ ಮಿತ್ರನೂ, ಅನಿಷ್ಟಗಳನ್ನು ನಿವಾರಣೆಮಾಡುವ ರಾತ್ರ್ಯಭಿಮಾನಿಯಾದ ವರುಣನೂ, ದೇವಮಾತೆಯಾದ ಅದಿತಿಯೂ, ಉದಕಾಭಿಮಾನಿಯಾದ

ಸಮುದ್ರನೂ, ಭೂಮಿಯೂ, ಮತ್ತು ಅಂತರಿಕ್ಷವೂ ಕೂಡ ಸೂರ್ಯನನ್ನು ಈ ಪ್ರಕಾರವಾಗಿ ಸ್ತುತಿಸುತ್ತಿರುವ ನಮ್ಮಗಳ ಪಾಪಗಳನ್ನು ನಾಶಮಾಡಿ ನಮ್ಮನ್ನು ರಕ್ಷಿಸಲಿ ಎಂದು ಆಶಂಸನೆಯು ಇಲ್ಲಿ ಉಕ್ತವಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅದ್ಯ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ದೇವಾಃ—ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಉದಿತಾ**—ಉತ್ ಉಪಸರ್ಗ. ಇಣ್ ಗತೌ ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಡಿತ್ವದಿಂದ ಟಿಗೆ (ಇಕಾರ) ಲೋಪ. **ತಾದೌ ಚನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬಾಧಿತವಾಗಿ ಗತಿಗೆ (ಉತ್) ಪ್ರಕೃತಿಸ್ವರ ಬರುತ್ತದೆ.

**ಪಿಪೃತ**—ಪೃ ಪಾಲನಪೂರಣಯೋಃ ಧಾತು. ಪೃ ಎಂದು ಕೆಲವರು ಹ್ರಸ್ವಾಂತವಾಗಿ ಪಾಠಮಾಡುತ್ತಾರೆ. ಜುಹೋತ್ಯಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ **ಲೋಟೋಲಜ್ವತ್** (ಪಾ. ಸೂ. ೩-೪-೮೫) ಎಂಬುದರಿಂದ ಲಜ್ವದ್ಭಾವ ಹೇಳಿರುವುದರಿಂದ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತ ಆದೇಶ. **ಜುಹೋತ್ಯಾದಿಭ್ಯಃ ಶ್ಲುಃ** (ಪಾ. ಸೂ. ೨-೪-೭೫) ಎಂಬುದರಿಂದ ಶ್ಲು ವಿಕರಣ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಉರತ್** ಸೂತ್ರದಿಂದ ಅಭ್ಯಾಸ ಋಕಾರಕ್ಕೆ ಅತ್ವ. ರಪರವಾಗಿ ಬಂದಾಗ ಹಲಾದಿ ಶೇಷ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅದಕ್ಕೆ ಇತ್ವ. ಪ್ರತ್ಯಯಕ್ಕೆ **ಸಾರ್ವಧಾತುಕ ಮಪಿತ್** ಸೂತ್ರದಿಂದ ಙಿದ್ವದ್ಭಾವವಿರುವುದರಿಂದ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ಆದುದರಿಂದಲೇ **ಋಚಿತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ನಿಘಾತ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವದ್ಯಾತ್**—ವದ ವ್ಯಕ್ತಾಯಾಂ ವಾಚಿ. ಧಾತು. **ಅವದ್ಯಪಣ್ಯವರ್ಯಾ ಗರ್ಹ್ಯ ಪಣಿತವ್ಯ-ನಿರೋಧೇಷು** (ಪಾ. ಸೂ. ೩-೧-೧೦೧) ಎಂಬುದರಿಂದ ಯದಂತವಾಗಿ ಗರ್ಹಾರ್ಥದಲ್ಲಿ ನಿಪಾತಿತವಾಗಿದೆ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ. ॥ ೬ ॥

ನೂರಹದಿನೈದನೆಯ ಸೂಕ್ತ ಸಮಾಪ್ತವು.



# ನೂರಹದಿನಾರನೆಯ ಸೂಕ್ತವು

**ಸಪ್ತದಶೇಽನುವಾಕೇ ಪಂಚ ಸೂಕ್ತಾನಿ । ತತ್ರ ನಾಸತ್ಯಾಭ್ಯಾಮಿತಿ ಪಂಚವಿಂಶತ್ಯೃಚಂ ಪ್ರಥಮಂ ಸೂಕ್ತಂ । ಉಶಿಕ್ಸಂಜ್ಞಾಯಾಮಂಗರಾಜಸ್ಯ ಮಹಿಷ್ಯಾ ದಾಸ್ಯಾಂ ದೀರ್ಘತಮಸೋತ್ಪಾದಿತಃ ಕಕ್ಷೀವಾನಸ್ಯ ಸೂಕ್ತಸ್ಯ ಋಷಿಃ । ತ್ರಿಷ್ಟುಪ್ ಛಂದಃ । ಅಶ್ವಿನೌ ದೇವತಾ । ತಥಾ ಚಾನುಕ್ರಾಂತಂ । ನಾಸತ್ಯಾಭ್ಯಾಂ ಪಂಚಾಧಿಕಾ ಕಕ್ಷೀವಾನ್ದೈರ್ಘತಮಸ ಉಶಿಕ್ಪುತ್ರ ಆಶ್ವಿನಂ ವಾ ಇತಿ । ತುಹ್ಯಾದಿಪರಿಭಾಷಯೇದಮಾದೀನಿ ಪಂಚ ಸೂಕ್ತಾನ್ಯಶ್ವಿದೇವತ್ಯಾನಿ ॥ ಪ್ರಾತರನುವಾಕಸ್ಯಾಶ್ವಿನೇ ಕ್ರತೌ ತ್ರೈಷ್ಟುಭೇ ಛಂದಸೀದಮಾದೀನಿ ತ್ರೀಣಿ ಸೂಕ್ತಾನಿ । ಅಥಾಶ್ವಿನ ಇತಿ ಖಂಡೇ ಸೂತ್ರಿತಂ । ಗ್ರಾವಾಣೇವ ನಾಸತ್ಯಾಭ್ಯಾಮಿತಿ ತ್ರೀಣಿ । ಆ. ೪-೧೫ । ಇತಿ ॥ ಆಶ್ವಿನಶಸ್ತ್ರೇ ಚೈತಾನಿ ಶಸ್ಯಾನಿ ಪ್ರಾತರನುವಾಕನ್ಯಾಯೇನ । ಆ. ೬-೫ । ಇತ್ಯತಿದಿಷ್ಟತ್ವಾತ್ ॥**

ಅನುವಾದವು—**ನಾಸತ್ಯಾಭ್ಯಾಂ** ಎಂಬ ಸೂಕ್ತದಿಂದ ಹದಿನೇಳನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ (೧೧೬-೧೨೦) ಐದು ಸೂಕ್ತಗಳಿರುವವು. ಅವುಗಳಲ್ಲಿ **ನಾಸತ್ಯಾಭ್ಯಾಂ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು ಅಂಗರಾಜನ ಪತ್ನಿಯ ದಾಸಿಯಾದ ಉಶಿಕ್ ಎಂಬುವಳಲ್ಲಿ ದೀರ್ಘತಮಾಃ ಎಂಬ ಋಷಿಯಿಂದ ಉತ್ಪನ್ನನಾದ ಕಕ್ಷೀವಾನ್ ಎಂಬುವನು ಈ ಸೂಕ್ತಕ್ಕೆ ಋಷಿಯು ಅಶ್ವಿನೀ ದೇವತೆಗಳೇ ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ನಾಸತ್ಯಾಭ್ಯಾಂ ಪಂಚಾಧಿಕಾ ಕಕ್ಷೀವಾನ್ದೈರ್ಘತಮಸ ಉಶಿಕ್ಪುತ್ರ ಆಶ್ವಿನಂ ವಾ** ಎಂದು ಹೇಳಿರುವುದು. ಸೂತ್ರದಲ್ಲಿ ತು ಹಿ ಎಂದು ಮೊದಲಾದ ಶಬ್ದಗಳ ಪ್ರಯೋಗವಿರುವುದರಿಂದ ಈ ಸೂಕ್ತದಿಂದ ಮುಂದಿನ ಒಟ್ಟು ಐದು ಸೂಕ್ತಗಳು ಅಶ್ವಿನೀದೇವತಾಕವೆಂದು ತಿಳಿಯಬೇಕು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಗಾಗಿ ಈ ಮೂರು ಸೂಕ್ತಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಥಾಶ್ವಿನ** ಎಂಬ ಖಂಡದಲ್ಲಿ **ಗ್ರಾವಾಣೇವ ನಾಸತ್ಯಾಭ್ಯಾಮಿತಿ ತ್ರೀಣಿ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೪-೧೫) ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಈ ಸೂಕ್ತಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿಯೇ ನಿರ್ದಿಷ್ಟವಾಗಿರುವುದು (ಆ. ೬-೫).

## ಸೂಕ್ತ—೧೧೬

॥ ಮಂಡಲ—೧ ॥ ಅನುವಾಕ—೧೮ ॥ ಸೂಕ್ತ—೧೧೬ ॥

॥ ಅಷ್ಟಕ—೧ ॥ ಅಧ್ಯಾಯ ೮ ॥ ವರ್ಗ—೮, ೯, ೧೦, ೧೧, ೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥

॥ ಋಷಿಃ — ಕಕ್ಷೀವಾನ್ ದೈರ್ಘತಮಸ ಔಶಿಜಃ ॥

॥ ದೇವತಾ—ಅಶ್ವಿನೌ ॥

॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ನಾಸತ್ಯಾಭ್ಯಾಂ ಬರ್ಹಿರಿವ ಪ್ರ ವೃಂಜೇ ಸ್ತೋಮಾಁ ಇಯ-
ರ್ಮ್ಯಭ್ರಿಯೇವ ವಾತಃ ।
ಯಾವರ್ಭಗಾಯ ವಿಮದಾಯ ಜಾಯಾಂ ಸೇನಾಜುವಾ ನ್ಯೂ-
ಹತೂ ರಥೇನ ॥ ೧ ॥

॥ ಪದಪಾಠಃ ॥

ನಾಸತ್ಯಾಭ್ಯಾಂ । ಬರ್ಹಿಃಽಇವ । ಪ್ರ । ವೃಂಜೇ । ಸ್ತೋಮಾನ್ । ಇಯರ್ಮಿ ।
ಅಭ್ರಿಯಾಽಇವ । ವಾತಃ ।
ಯೌ । ಅರ್ಭಗಾಯ । ವಿಽಮದಾಯ । ಜಾಯಾಂ । ಸೇನಾಽಜುವಾ । ನಿಽ-
ಊಹತುಃ । ರಥೇನ ॥ ೧ ॥

|| ಸಾಯಣಭಾಷ್ಯಂ ||

ಬರ್ಹಿರಿವ ಯಥಾ ಕಶ್ಚಿದ್ಯಜಮಾನೋ ಯಾಗಾರ್ಥಂ ಬರ್ಹಿಃ ಪ್ರ ವೃಂಜೇ ಪ್ರಕರ್ಷೇಣಾ-ನ್ಯೂನಾನತಿರಿಕ್ತಂ ಯಾಗಾಯ ಪರ್ಯಾಪ್ತಂ ದರ್ಭಂ ವೃಂಕ್ತೇ ಛಿನತ್ತಿ । ಸಂಪಾದಯತೀತಿ ಯಾವತ್ । ಏವಮಹಂ ನಾಸತ್ಯಾಭ್ಯಾಮಶ್ವಿಭ್ಯಾಂ ಸ್ತೋಮಾನ್ ಸ್ತುತೀರಿಯರ್ಮಿ । ಸಂಪಾದಯಾಮಿ । ಏತದೇವ ವಿಶದೀಕ್ರಿಯತೇ । ಅಭ್ರಿಯೇವ ಯಥಾಭ್ರಿಯಾಣ್ಯಭ್ರೇಷು ಮೇಘೇಷ್ವವಸ್ಥಿತಾನ್ಯುದಕಾನಿ ವಾತೋ ವಾಯುರ್ವರ್ಷಣಾರ್ಥಂ ಬಹುಶಃ ಪ್ರೇರಯತಿ ಏವಮಹಮಶ್ವಿಭ್ಯಾಂ ಸ್ತೋತ್ರಾಣೀಯರ್ಮಿ । ಬಹುಶಃ ಪ್ರೇರಯಾಮಿ । ಕೀದೃಶಾವಶ್ವಿನೌ । ಅರ್ಭಗಾಯ ಬಾಲಾಯ ಸ್ವಯಂವರಲಬ್ಧಭಾರ್ಯಾಯ ವಿಮದಾಯೈತತ್ಸಂಜ್ಞಾಯ ರಾಜರ್ಷಯೇ ಮಧ್ಯೇಮಾರ್ಗಂ ಸ್ವಯಂವರಾರ್ಥಮಾಗತೈಸ್ತಾಮಲಭ-ಮಾನೈರನ್ಯೈರ್ನೃಪೈಃ ಸಹ ಯೋದ್ಧುಮಶಕ್ನುವತೇಽಪಿ ತಸ್ಮೈ ಸೇನಾಜುವಾ ಶತ್ರುಸೇನಾಯಾಃ ಪ್ರೇರಕೇಣ ಶತ್ರುಭಿರ್ದುಷ್ಪ್ರಾಪೇಣ ರಥೇನ ಯಾವಶ್ವಿನೌ ಜಾಯಾಂ ಭಾರ್ಯಾಂ ಪರೈರನುಕ್ರಾಂತಾಂ ನ್ಯೂಹತುಃ ಶತ್ರೂನ್ನಿಹತ್ಯ ತದೀಯಂ ಗೃಹಂ ಪ್ರಾಪಯಾಮಾಸತುಃ । ತಾಭ್ಯಾಮಿತ್ಯರ್ಥಃ ॥ ನಾಸತ್ಯಾಭ್ಯಾಂ । ಸತ್ಸು ಭವೌ ಸತ್ಯೌ । ನ ಸತ್ಯಾವಸತ್ಯೌ । ನ ಅಸತ್ಯೌ ನಾಸತ್ಯೌ । ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ವೃಂಜೇ । ವೃಜೀ ವರ್ಜನೇ । ಅದಾದಿಕಃ । ಇದಿತ್ವಾನ್ನುಮ್ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಇಯರ್ಮಿ । ಋ ಗತೌ । ಜುಹೋತ್ಯಾದಿಕಃ । ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ । ಅಭ್ಯಾಸಸ್ಯಾಸವರ್ಣ ಇತೀಯಙ್ । ಅಭ್ರಿಯೇವ । ಸಮುದ್ರಾ-ಭ್ರಾದ್ಘ ಇತಿ ಭವಾರ್ಥೇ ಘಃ । ಘಸ್ಯೇಯಾದೇಶಃ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಅರ್ಭಗಾಯ । ಅರ್ತಿಗೃಭ್ಯಾಂ ಭನ್ । ಉ. ೩-೧೫೨ । ಇತ್ಯರ್ತೇರ್ಭನ್ । ಅರ್ಭ ಏವಾರ್ಭಕಃ । ಸಂಜ್ಞಾಯಾಂ ಕನ್ । ಪಾ. ೫-೩-೭೫ । ಛಾಂದಸೋ ಗಕಾರಃ । ಅಪರ ಆಹ । ಅರ್ಭಮಲ್ಪಂ ಗಾಯತಿ ಶಬ್ದಯತೀತ್ಯರ್ಭಗಃ । ಕೈ ಗೈ ಶಬ್ದೇ । ಗಾಪೋಷ್ಟಕ್ । ಪಾ. ೩-೨-೮ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ತದೇತತ್ಪದಕೃತಃ ಶಾಕಲ್ಯಸ್ಯಾಭಿಮತಂ । ಸೇನಾಜುವಾ । ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ । ಅಸ್ಮಾದಂತರ್ಭಾವಿತಣ್ಯರ್ಥಾತ್ ಕ್ವಿಬ್ವಚಿಪ್ರಚ್ಛೀತ್ಯಾದಿನಾ ಕ್ವಿಬ್ದೀರ್ಘೌ । ತಸ್ಯಾದಿತ್ವಾದುವಙ್ । ಪಾ. ೬-೪-೭೭-೧ । ನ್ಯೂಹತುಃ । ವಹ ಪ್ರಾಪಣೇ । ಲಿಟ್ಯತುಸಿ ಯಜಾದಿತ್ವಾ-ತ್ಸಂಪ್ರಸಾರಣಂ ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥

|| ಪ್ರತಿಪದಾರ್ಥ ||

**ಅರ್ಭಗಾಯ**—ಯುವಕನಾದ । **ವಿಮದಾಯ**—ವಿಮದನೆಂಬವನಿಗೆ । **ಸೇನಾಜುವಾ**—(ಶತ್ರುಗಳ) ಸೈನ್ಯವನ್ನೋಡಿಸುವ । **ರಥೇನ**—ರಥದಿಂದ । **ಯೌ**—ಯಾವ ಅಶ್ವಿನೀದೇವತೆಗಳು । **ಜಾಯಾಂ**—ಪತ್ನಿಯನ್ನು । **ನ್ಯೂಹತುಃ**—(ಶತ್ರುಗಳನ್ನು ವಧಿಸಿ ಅವನ ಮನೆಗೆ) ಸೇರಿಸಿದರೋ (ಅಂತಹ) । **ನಾಸತ್ಯಾಭ್ಯಾಂ**—(ಅಶ್ವಿನೀದೇವತೆಗಳಿಗೆ) ನಾಸತ್ಯರಿಬ್ಬರಿಗೆ । **ಬರ್ಹಿಃ**—(ಯಜಮಾನನು ಯಾಗಕ್ಕಾಗಿ) ಸಮಿತ್ತುಗಳನ್ನು ।

**ಪ್ರ ವೃಂಜೇ ಇವ**—ಕತ್ತರಿಸಿ ಸಿದ್ಧಪಡಿಸುವಂತೆ (ಮತ್ತು)। **ವಾಯುಃ**—ವಾಯುವು। **ಅಭ್ರಿಯಾ ಇವ**—ಮೇಘದಲ್ಲಿರುವ ಉದಕವನ್ನು (ಮಳೆಸುರಿಸುವುದಕ್ಕೋಸ್ಕರ ಸೇರಿಸುವಂತೆ)। **ಸ್ತೋಮಾನ್**—ಈ ಸ್ತುತಿವಾಕ್ಯಗಳನ್ನು। **ಇಯರ್ಮಿ**—ಸಂಪಾದಿಸುತ್ತೇನೆ.

॥ ಭಾವಾರ್ಥ ॥

ಶತ್ರುಗಳನ್ನೋಡಿಸಿ, ಯುವಕನಾದ ವಿಮದನಿಗೆ, ಅವನ ಪತ್ನಿಯನ್ನು ತಮ್ಮ ರಥದಲ್ಲಿ ಕೂಡಿಸಿಕೊಂಡು ತಂದು ಒಪ್ಪಿಸಿದ ನಾಸತ್ಯರಿಗೋಸ್ಕರ (ಅಶ್ವಿನೀದೇವತೆಗಳಿಗೋಸ್ಕರ) ಯಾಗಕ್ಕಾಗಿ (ಯಜಮಾನನು) ಸಮಿತ್ತುಗಳ ಕತ್ತರಿಸಿ ಸಿದ್ಧಪಡಿಸುವಂತೆಯೂ, (ಮಳೆಸುರಿಸುವುದಕ್ಕೋಸ್ಕರ) ವಾಯುವು ಮೇಘಗಳನ್ನು ಒಂದೆಡೆ ಸೇರಿಸುವಂತೆಯೂ ಈ ಸ್ತುತಿವಾಕ್ಯಗಳನ್ನು ಸಂಪಾದಿಸುತ್ತೇನೆ. (ರಚಿಸಿ ಪಠಿಸುತ್ತೇನೆ)

## English Translation

In like manner as a worshipper strews the sacred grass for the Nasatyas, so do I urge on their laudations, as the wind drives on the clouds: they, who gave a bride to the youthful Vimada, and bore her away in their car, outstripping the rival host.

॥ ವಿಶೇಷವಿಷಯಗಳು ॥

ಈ ಸೂಕ್ತದ ಋಷಿಯಾದ ಕಕ್ಷೀವಾನ್ ಎಂಬ ಋಷಿಯು ದೀರ್ಘತಮಸ್ ಎಂಬ ಋಷಿಗೆ ಉಶಿಕ್ ಎಂಬುವಳಲ್ಲಿ ಹುಟ್ಟಿದ ಪುತ್ರನು. ಈ ಉಶಿಕ್ ಎಂಬ ಸ್ತ್ರೀಯು ಕಳಿಂಗರಾಜನ ರಾಣಿಯ ಪರಿಚಾರಿಕೆಯಾಗಿದ್ದಳೆಂದೂ ಕಳಿಂಗರಾಜನು ತನಗೆ ಪುತ್ರನಾಗಬೇಕೆಂಬ ಅಪೇಕ್ಷೆಯಿಂದ ತನ್ನ ಪತ್ನಿಯನ್ನು ದೀರ್ಘತಮಸ್ ಎಂಬ ಋಷಿಯ ಸಂಗಕ್ಕೋಸ್ಕರ ಕಳುಹಿಸಿದನೆಂದೂ ಆಗ ರಾಜನ ಪತ್ನಿಯು ಅದಕ್ಕೆ ಇಷ್ಟಪಡದೆ ಗೂಢವಾಗಿ ತನಗೆ ಬದಲಾಗಿ ತನ್ನ ದಾಸಿಯಾದ ಉಶಿಕ್ ಎಂಬುವಳನ್ನು ಋಷಿಯ ಬಳಿಗೆ ಕಳುಹಿಸಲು ಅವಳಿಗೆ ದೀರ್ಘತಮಋಷಿಯಿಂದ ಈ ಕಕ್ಷೀವಾನ್ ಎಂಬ ಪುತ್ರನು ಜನಿಸಿದನೆಂದೂ ಪುರಾಣಾದಿಗಳಲ್ಲಿ ಹೇಳಿದೆ. ಈ ಕಕ್ಷೀವಾನ್ ಋಷಿಯು ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದರೂ ಬ್ರಾಹ್ಮಣಸಂಪರ್ಕದಿಂದ ಬ್ರಾಹ್ಮಣನೆಂದೇ ಪ್ರಸಿದ್ಧನಾಗಿರುವನು. ಈ ಋಷಿಯು ಯಜ್ಞಾನುಷ್ಠಾನ ಕರ್ಮಗಳನ್ನು ಮಾಡುವವರಲ್ಲಿ ಅತ್ಯಂತ ಪ್ರಸಿದ್ಧನೆಂದು—

> **ಏವಂ ವೈ ಪರ ಆಟ್ಣಾರಃ ಕಕ್ಷೀವಾँ ಔಶಿಜೋ ವೀತಹವ್ಯಃ ಶ್ರಾಯಸಸ್ತ್ರಸದಸ್ಯುಃ ಪೌರುಕುತ್ಸಃ ಪ್ರಜಾಕಾಮಾ ಅಚಿನ್ವತ ॥**

(ತೈ. ಸಂ. ೫-೬-೫-೩)

ಎಂದು ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವುದು. ಆದುದರಿಂದ ಈ ಋಷಿಯು ಮಂತ್ರರಚನೆಯಲ್ಲಿಯೂ ಯಜ್ಞಾನುಷ್ಠಾನಕರ್ಮಗಳನ್ನು ಮಾಡುವುದರಲ್ಲಿಯೂ ಅತ್ಯಂತ ಪ್ರಸಿದ್ಧನು. ಈ ಋಷಿಯು ಋಗ್ವೇದದ

ಪ್ರಥಮಮಂಡಲದ ೧೧೬-೧೨೫ ನೆಯ ಸೂಕ್ತಗಳಿಗೂ (ಒಟ್ಟು ೧೪೬ ಋಕ್ಕುಗಳು) ೧೨೬ ನೆಯ ಸೂಕ್ತದಲ್ಲಿ ೧-೫ ಋಕ್ಕುಗಳಿಗೂ (೫ ಋಕ್ಕು) ಒಂಭತ್ತನೆಯ ಮಂಡಲದಲ್ಲಿ ೭೪ ನೆಯ ಸೂಕ್ತಕ್ಕೂ (೯ ಋಕ್ಕುಗಳು) ಒಟ್ಟು ೧೬೦ ಋಕ್ಕುಗಳಿಗೆ ಋಷಿಯಾಗಿರುವನು. ಈ ಋಷಿಯು ಹೆಸರು ಋ. ಸಂ. ೧-೧೨೬-೨; ೧-೧೨೬-೩; ೬-೨೬-೧ ; ೭-೯-೧೦ ; ೧೧-೨೫-೧೦ ; ೧-೧೧೭-೬ ; ೧-೫೧-೧೩ ; ೧-೧೧೬-೭ ; ೯-೭೪-೮ ; ೧-೧೨೬-೪ ; ೧-೧೮-೧ ; ೧-೧೧೨-೧೧ ; ೧೦-೬೧-೧೬ ; ೧೦-೧೪೩-೧ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

**ವಿಮದಾಯ**—ವಿಮದನೆಂಬುವನು ಒಬ್ಬ ರಾಜರ್ಷಿಯು. ಈ ಋಷಿಯು ಋಗ್ವೇದದ ಹತ್ತನೆಯ ಮಂಡಲದ ೨೦-೨೬ ಸೂಕ್ತಗಳಲ್ಲಿರುವ ಒಟ್ಟು ೬೬ ಋಕ್ಕುಗಳಿಗೆ ಋಷಿಯು. ಈ ಸೂಕ್ತಗಳಲ್ಲಿ ಎಂದರೆ ಋ. ಸಂ. ೧೦-೨೦-೧೦ ; ೧೦-೨೭-೭ ಎಂಬ ಋಕ್ಕುಗಳಲ್ಲಿ ವಿಮದಋಷಿಯು ಮತ್ತು ಅವನ ವಂಶದ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು. ಅಥರ್ವಣವೇದ ೪-೨೯-೪; ಐತರೇಯ ಬ್ರಾಹ್ಮಣ ೫-೫-೧ ಈ ಸ್ಥಳಗಳಲ್ಲಿಯೂ ವಿಮದಋಷಿಯ ಹೆಸರು ಪಠಿತವಾಗಿರುವುದು. ಶತ್ರುರಾಜರಿಂದ ಅಪಹರಿಸಲ್ಪಟ್ಟ ಈ ವಿಮದನ ಪತ್ನಿಯನ್ನು ಅಶ್ವಿನೀದೇವತೆಗಳು ಶತ್ರುಗಳನ್ನು ಯುದ್ಧದಲ್ಲಿ ಜಯಿಸಿ ಹಿಂದಕ್ಕೆ ತಂದುಕೊಟ್ಟರೆಂದು ಅಲ್ಲಲ್ಲಿ ಹೇಳಿರುವುದು. ಋಗ್ವೇದದಲ್ಲಿ ಈ ವಿಮದನ ಹೆಸರು ಋ. ಸಂ. ೧-೫೧-೩ ; ೧-೧೧೨-೧೯ ; ೧-೧೧೬-೧ ; ೧-೧೧೭-೨೦ ; ೮-೯-೧೫ ; ೧೦-೩೯-೭ ; ೧೦-೬೫-೧೨ ; ೧೦-೨೦-೧೦ ; ೧೦-೨೩-೭ ; ೧೦-೨೩-೬ ; ೧೦-೨೪-೪ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು.

**ನಾಸತ್ಯಾಭ್ಯಾಂ— ಅಶ್ವಿಭ್ಯಾಂ** ಅಶ್ವಿನೀ ದೇವತೆಗಳಿಗಾಗಿ ಎಂದು ಸಾಯಣರು, ಅರ್ಥವಿವರಣೆಮಾಡಿರುವರು.

**ಅಶ್ವಿನೋರೇಕೋ ನಾಸತ್ಯನಾಮಾ ದಸ್ರನಾಮಾ ಅಪರಃ ಸಾಹಚರ್ಯಾತ್ತ್ವನ್ಯತರನಾಮ್ನಾಪಿ ಉಭಯೋರಭಿಧಾನಂ ।**

**ನ ವಾ ಅಸತ್ಯೌ ಸತ್ಯಾವೇವ ನಾಸತ್ಯೌ ನಾಸತ್ಯಯೋರರ್ಥಾಯ ॥**

ಅಶ್ವಿನೀದೇವತೆಗಳು ಇಬ್ಬರಲ್ಲಿ ಒಬ್ಬನಿಗೆ ನಾಸತ್ಯನೆಂದೂ ಇನ್ನೊಬ್ಬನಿಗೆ ದಸ್ರನೆಂದೂ ಹೆಸರು ಇರುವುದು. ಇವರು ಯಾವಾಗಲೂ ಇಬ್ಬರೂ ಒಬ್ಬರನ್ನು ಒಬ್ಬರು ಎಡಬಿಡದೆ ಜೊತೆಯಾಗಿಯೇ ಸಂಚರಿಸುವರು. ಮತ್ತು ವಾಸಮಾಡುತ್ತಿರುವರು. ಆದ್ದರಿಂದ ಇಬ್ಬರಲ್ಲಿ ಒಬ್ಬರ ಹೆಸರನ್ನು ಹೇಳಿದ ಕೂಡಲೇ ಇಬ್ಬರು ಎಂದು ಅಶ್ವಿನೀದೇವತೆಗಳ ಸಂಖ್ಯೆಯು ಸುಲಭವಾಗಿ ತಿಳಿಯುವುದು. ಅಸತ್ಯ ಎಂದರೆ ಸತ್ಯವಲ್ಲದ್ದು ಎಂದು ಅರ್ಥ. ಅಸತ್ಯವಲ್ಲದ್ದು ಸತ್ಯವೆಂದು ಎರಡು ನಿಷೇಧಗಳಿಂದ ಸೂಚಿತವಾಗಿರುವುದು ಎಂದು ಅರ್ಥವಾಗುತ್ತದೆ. ಈ ಅಶ್ವಿನೀದೇವತೆಗಳಿಗಾಗಿ ಸ್ತುತಿಯು ಇಲ್ಲಿ ಹೇಳಲ್ಪಟ್ಟಿರುವುದು ಎಂದು ಸ್ಕಂದಸ್ವಾಮಿಗಳು ವಿವರಿಸಿರುವರು.

ಸಾಯಣಭಾಷ್ಯದಲ್ಲಿ **ಸತ್ಸು ಭವೌ ಸತ್ಯೌ । ನ ಸತ್ಯೌ ಅಸತ್ಯೌ । ನ ಅಸತ್ಯೌ ನಾಸತ್ಯೌ** ಸತ್ಪುರುಷರ ಮಧ್ಯದಲ್ಲಿ ಇರುವವರು ಸತ್ಯರು ಎನಿಸುವರು. ಇವರಿಗೆ ವ್ಯತಿರಿಕ್ತರಾದವರು ಅಸತ್ಯರು. ಈ ಅಸತ್ಯರಾಗಿರುವವರಿಗೆ ವಿರುದ್ಧವಾದವರು ನಾಸತ್ಯರಾಗಿರುವರು ಎಂದು ನಾಸತ್ಯ ಶಬ್ದದ ಅರ್ಥವನ್ನು ವಿವರಿಸಿರುವರು. ಯಾಸ್ಕರು—

**ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ. ನಾಸಿಕಾಪ್ರಭವೌ ಬಭೂವತುರಿತಿ ವಾ ॥** (ನಿ. ೬-೧೩)

ಔರ್ಣವಾಭನೆಂಬವನು—ಯಾವಾಗಲೂ ಅಸತ್ಯವನ್ನು ಹೇಳುವವರಲ್ಲವಾದ ಅಶ್ವಿನೀದೇವತೆಗಳಿಗೆ ನಾಸತ್ಯರೆಂದು ಪ್ರಸಿದ್ಧಿಯು ಎಂದು ಹೇಳುವನು. ಆಗ್ರಾಯಣನೆಂಬವನು—ಯಜ್ಞಗಳು ನಡೆಯುವಂತೆಯೂ, ಉದಕವು ದೊರೆಯುವಂತೆಯೂ ಮಾಡುವ ಕಾರಣ ಇವರಿಗೆ ನಾಸತ್ಯರೆಂದು ಪ್ರಸಿದ್ಧಿಯು ಎಂದು ಹೇಳುವನು. ಇನ್ನು ಕೆಲವರು ಸೂರ್ಯನು ಕುದುರೆಯ ಆಕಾರದಿಂದ ಇದ್ದ ಸಂಜ್ಞಾದೇವಿಯೊಡನೆ ವಿಹರಿಸುವಾಗ (ಮೂಗಿನಿಂದಲೇ) ನಾಸಿಕೆಯಿಂದ ಉತ್ಪನ್ನರಾದ ಕಾರಣ ಇವರು ನಾಸತ್ಯರೆಂದು ಹೇಳುವರು

**ಬರ್ಹಿಃ ಇವ ಪ್ರ ವೃಂಜೇ—ಯೋಗಾರ್ಥಂ ಬರ್ಹಿಃ ಪರ್ಯಾಪ್ತಂ ದರ್ಭಂ ವೃಂಕ್ತೇ ಛಿನತ್ತಿ ಸಂಪಾದಯತಿ ಏವಮಹಂ ಅಶ್ವಿಭ್ಯಾಂ ಸ್ತುತೀಃ ಸಂಪಾದಯಾಮಿ ।** ಹದಿನಾರು ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ನೂರೊಂದು ಉದಕನಾಮಗಳಲ್ಲಿಯೂ ಬರ್ಹಿಶ್ಶಬ್ದವು (ನಿ. ೨-೨೪) ಪಠಿತವಾಗಿರುವುದು. ಯಜ್ಞಕ್ಕಾಗಿ ದರ್ಭೆಯನ್ನು ಕತ್ತರಿಸಿ ಸಿದ್ಧಪಡಿಸುವಂತೆ ನನ್ನ ವಾಕ್ಯಗಳನ್ನು ಅಶ್ವಿನೀದೇವತೆಗಳ ಸ್ತುತಿಗಾಗಿ ಉಪಯೋಗಿಸುವೆನು ಎಂದು ಅರ್ಥ. ಆದರೆ ಯಾಸ್ಕರು—

**ಬರ್ಹಿಃ—ಪರಿಬರ್ಹಣಾತ್ ಪರಿಚ್ಛೇದನಾತ್** ದರ್ಭೆಯು ಕತ್ತರಿಸಲ್ಪಟ್ಟು ಯಜ್ಞದಲ್ಲಿ ಉಪಯೋಗಿಸಲ್ಪಡುವುದಕ್ಕೆ ಬರ್ಹಿಸ್ಸೆಂದು ಹೆಸರು ಪ್ರಸಿದ್ಧವಾಗಿರುವುದು ಎಂದು ವಿವರಿಸಿ—

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ।**
**ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥**

(ಋ. ಸಂ. ೧೦-೧೧೦-೪)

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸನಾಯಾಸ್ಯಾಃ ಪ್ರವೃಜ್ಯತೇ ಅಗ್ರೇ ಅಹ್ನಾಂ ಬರ್ಹಿಃ ಪೂರ್ವಾಹ್ಣೇ ತದ್ವಿಪ್ರಥತೇ ವಿತರಂ ವಿಕೀರ್ಣತರಮಿತಿ ವಾ ವಿಸ್ತೀರ್ಣತರಮಿತಿ ವಾ ವರೀಯೋ ವರತರಮುರುತರಂ ವಾ ದೇವೇಭ್ಯಶ್ಚಾದಿತಯೇ ಚ ಸ್ಯೋನಂ । ಸ್ಯೋನಮಿತಿ ಸುಖನಾಮ ಸ್ಯತೇರವಸ್ಯಂತ್ಯೇತತ್ ಸೇವಿತವ್ಯಂ ಭವತೀತಿ ವಾ ॥** (ನಿ. ೮-೯)

**ಪ್ರಾಚೀನಂ ಬರ್ಹಿಃ** ಎಂಬ ಋಕ್ಕನ್ನು ಉದಹರಿಸಿ ದೇವತೆಗಳು ಮತ್ತು ಅದಿತಿಯು ಯಜ್ಞಕಾಲದಲ್ಲಿ ಯಜ್ಞವೇದಿಯ ಸಮೀಪದಲ್ಲಿ ಬಂದು ಕುಳಿತುಕೊಳ್ಳಲು ಆಸನವನ್ನು ಸಿದ್ಧಪಡಿಸುವುದಕ್ಕಾಗಿ ದರ್ಭೆಗಳನ್ನು ಒಂದೇ ಸಮನಾಗಿ ಕತ್ತರಿಸಿ ಒಂದರ ಮೇಲೊಂದು ಪದರದಂತೆ (ಮೆತ್ತಗಿರುವಂತೆ) ಮೂರು ಪದರಗಳನ್ನು ಹಾಸಿ ಸಿದ್ಧಪಡಿಸುವರು. ಈ ರೀತಿ ಹರಡಿರುವ ದರ್ಭೆಯ ಚೂರುಗಳು ಬರ್ಹಿಸ್ಸೆಂದು ಪ್ರಸಿದ್ಧಿಯನ್ನು ಹೊಂದಿರುತ್ತವೆಯೆಂದು ವ್ಯಾಖ್ಯಾನಮಾಡಿ ಇರುವರು. ಇಲ್ಲಿ **ಬರ್ಹಿರಿವ ಪ್ರವೃಂಜೇ** ಎಂದು ಮಂತ್ರದ್ರಷ್ಟೃವಾದ ಋಷಿಯು ಮಂತ್ರವನ್ನು ಪಠಿಸುವುದರಿಂದ ಇವ ಎಂದು ಉಪಮೆಯು ತೋರುವುದು. ಇದರಿಂದ ಯಜ್ಞವನ್ನು ಮಾಡುವ ಯಜಮಾನನು ಯಜ್ಞಕ್ಕಾಗಿ (ನ್ಯೂನಾಧಿಕಭಾವವಿಲ್ಲದಂತೆ) ಹೆಚ್ಚುಕಡಿಮೆ ಇಲ್ಲದ ಹಾಗೆ ದರ್ಭೆಗಳನ್ನು ಕತ್ತರಿಸಿ ಉಪಯೋಗವನ್ನು ಮಾಡುವ ಹಾಗೆ ಅಶ್ವಿನೀದೇವತೆಗಳ ಮಹಿಮೆಯನ್ನು ವ್ಯಕ್ತಗೊಳಿಸುವ ಈ ಸ್ತೋತ್ರವನ್ನು ತಕ್ಕಮಟ್ಟಿಗೆ ಅಂದರೆ ನ್ಯೂನಾಧಿಕಭಾವವಿಲ್ಲದಂತೆ ಹೇಳುವೆನು ಎಂದು ಅರ್ಥ.

**ಅಭ್ರಿಯೇವ ವಾತಃ—ಮೇಘೇಷು ಅವಸ್ಥಿತಾನಿ ಉದಕಾನಿ ವಾಯುರಿವ**—ಮೇಘಗಳಲ್ಲಿ ಇರುವ ನೀರುಗಳನ್ನೇ ವಾಯುವು ಮಳೆಯು ಹುಯ್ಯುವಂತೆ ಪ್ರೇರಿಸುವ ಹಾಗೆ ಅಶ್ವಿನೀದೇವತೆಗಳಿಗಾಗಿ ಸ್ತೋತ್ರಗಳನ್ನು ಬಹಳ ಮಟ್ಟಿಗೆ ಹೇಳುವೆನು ಮತ್ತೂ ಯಜ್ಞದಲ್ಲಿ ಯಜಮಾನರು ಪಠಿಸುವಂತೆ ಪ್ರೇರಿಸುವೆನು.

**ಅರ್ಭಗಾಯ—ವಿಮದಾಯ ಬಾಲಾಯ ಸ್ವಯಂವರಲಬ್ಧಭಾರ್ಯಾಯ ವಿಮದಸಂಜ್ಞಾಯ ರಾಜರ್ಷಯೇ**—ವಿಮದನೆಂಬ ರಾಜರ್ಷಿಯು ಸ್ವಯಂವರಕ್ಕಾಗಿ ಹೋಗಿರುವಾಗ ಸ್ವಯಂವರದಲ್ಲಿ ರಾಜಪುತ್ರಿಯು ವಿಮದನೆಂಬ ರಾಜನನ್ನು ವರಿಸಿದಳು. ಅವನು ಅವಳನ್ನು ವಿವಾಹಮಾಡಿಕೊಂಡು ಬರುವಾಗ ಮಧ್ಯಮಾರ್ಗದಲ್ಲಿ ಸ್ವಯಂವರಕ್ಕಾಗಿ ಬಂದು ತಮಗೆ ಈ ರಾಜಪುತ್ರಿಯು ಲಾಭವಾಗದಿರುವ ಕಾರಣ ಈ ವಿಮದನ ಸಂಗಡ ಇತರ ರಾಜರು ಯುದ್ಧಮಾಡಲು ಎದುರಾದರು. ಆಗ ವಿಮದನು ಅಶ್ವಿನೀದೇವತೆಗಳನ್ನು,

**ಅಗ್ನಿಮೀಳೇ ಭುಜಾಂಯವಿಷ್ಠಮ್ ॥** (ಋ. ೧೦-೨೦-೨)

ಎಂಬ ಮಂತ್ರಗಳಿಂದ ಸ್ತುತಿಮಾಡಿದನು. ಇದರಿಂದ ಪ್ರಸನ್ನರಾದ ಅಶ್ವಿನೀದೇವತೆಗಳು ಶತ್ರುಗಳನ್ನು ಜಯಿಸಲು ಅಶಕ್ತನಾದ ಇವನಿಗಾಗಿ ತಾವೇ ಶತ್ರುಗಳ ಸಂಗಡ ಯುದ್ಧಮಾಡಿ ಇವನನ್ನು ಇವನ ಪತ್ನಿಯೊಡನೆ ಕರೆದುಕೊಂಡು ಬಂದರು ಎಂದು ಇತಿಹಾಸವು ಗಮ್ಯವಾಗುತ್ತದೆ.

**ಯಾಭಿಃ ಪತ್ನೀರ್ವಿಮದಾಯ ನ್ಯೂಹಥುರಾ ಘ ವಾ ಯಾಭಿರರುಣೀರಶಿಕ್ಷತಮ್ ।**
**ಯಾಭಿಃ ಸುದಾಸ ಊಹಥುಸ್ಸುದೇವ್ಯಂ೧ ತಾಭಿರೂ ಷು ಊತಿಭಿರಶ್ವಿನಾ ಗತಮ್ ॥**

(ಋ. ಸಂ. ೧-೧೧೨-೧೯)

ಎಂಬ ಋಕ್ಕಿನಲ್ಲಿ ಈ ಇತಿಹಾಸವು ಸೂಚಿತವಾಗಿರುತ್ತದೆ.

**ಅರ್ಭಗಃ—ಅರ್ಭಮಲ್ಪಂ ಗಾಯತಿ ಶಬ್ದಯತೀತ್ಯರ್ಭಗಃ ಅರ್ಭಕ** ಶಬ್ದವು ಹನ್ನೊಂದು ಹ್ರಸ್ವ ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿ ಇರುವುದರಿಂದ ಹ್ರಸ್ವ ಎಂದು ಅರ್ಥ. ಸ್ವಲ್ಪಮಟ್ಟಿಗೆ ಧ್ವನಿಯನ್ನು ಮಾಡುವ ಕಾರಣ (ಅರ್ಭಕನು) ಅರ್ಭಗ ಎಂದು ಬಾಲಕನಿಗೆ ಹೆಸರು.

**ಸೇನಾಜುವಾ—ಶತ್ರುಸೇನಾಯಾಃ ಪ್ರೇರಕೇಣ—ಶತ್ರುಭಿಃ ದುಷ್ಪ್ರಾಪೇಣ ।** ಶತ್ರುಸೇನೆಯನ್ನು ಪ್ರೇರಿಸುವ ಅಂದರೆ ಶತ್ರುಗಳಿಂದ ಹೊಂದಲು ಅಶಕ್ಯವಾದ ರಥದಿಂದ ಎಂದು ಸಾಯಣರೂ, **ಸೇನಾಜುವಾ ಸೇನಯಾ ಸಹ ಗಂತ್ರಾ ಸ್ವಸೇನಾಪರಿವೃತೇನ** ಸೇನೆಯ ಸಂಗಡ ಸಂಚರಿಸುವ ಅಂದರೆ ತಮ್ಮ ಸೇನೆಯಿಂದ ಸುತ್ತುವರಿಯಲ್ಪಟ್ಟ ರಥದಿಂದ ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ನಾಸತ್ಯಾಭ್ಯಾಂ—**ಸತ್ಸು ಭವೌ ಸತ್ಯೌ. ನ ಸತ್ಯೌ ಅಸತ್ಯೌ. ನ ಅಸತ್ಯೌ ನಾಸತ್ಯೌ. **ನಭ್ರಾಣ್ ನಪಾತ್**—(ಪಾ. ಸೂ. ೬-೩-೭೫) ಎಂಬುದರಿಂದ ನಞಿಗೆ ಪ್ರಕೃತಿಭಾವ ಬರುತ್ತದೆ. (ನಞಿನ ನಕಾರಕ್ಕೆ

**ನಲೋಪೋ೭ನಞಃ** ಎಂಬುದರಿಂದ ನಕಾರಕ್ಕೆ ಲೋಪಬರುವುದಿಲ್ಲ.) **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವೃಙ್ಕ್ತೇ**—ವೃಜೀ ವರ್ಜನೇ. ಧಾತು. ಅದಾದಿ. **ಇದಿತೋನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. ಅದಕ್ಕೆ ಅನುಸ್ವಾರಪರಸವರ್ಣ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತಆತ್ಮನೇಪದಾನಾಂ**—ಎಂಬುದರಿಂದ ಟಿಗೆ ಏತ್ವ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಛಂದಸ್ಸಿನಲ್ಲಿ ಪ್ರತ್ಯಯದ ತಕಾರಕ್ಕೆ ಲೋಪ. ವೃಙ್ಕ್ತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಇಯರ್ಮಿ**—ಋ ಗತೌ ಧಾತು. ಜುಹೋತ್ಯಾದಿ. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** ಸೂತ್ರದಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ರಪರವಾಗಿ ಬಂದಾಗ ಹಲಾದಿಶೇಷ. ಧಾತು ಋಕಾರಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ರಪರವಾಗಿ ಬರುತ್ತದೆ. **ಅಭ್ಯಾಸಸ್ಯಾಸವರ್ಣೇ** (ಪಾ. ಸೂ. ೬-೪-೭೮) ಎಂಬುದರಿಂದ ಅಭ್ಯಾಸ ಇವರ್ಣಕ್ಕೆ ಇಯಙಾದೇಶ. ಇಯರ್ಮಿ ಎಂದು ರೂಪವಾಗುತ್ತದೆ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಭ್ರಿಯೇವ**—ಅಭ್ರಾತ್ ಭವಾನಿ ಅಭ್ರಿಯಾನಿ. **ಸಮುದ್ರಾಭ್ರಾದ್ಘಃ** (ಪಾ.ಸೂ. ೪-೪-೧೧೮) ಎಂಬುದರಿಂದ ಅದಕ್ಕೆ ಇಯಾದೇಶ. ನಪುಂಸಕ ಬಹುವಚನದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಅರ್ಭಗಾಯ**—ಋ ಗತೌ ಧಾತು. **ಅರ್ತಿಗೃಭ್ಯಾಂ ಭನ್** (ಉ. ಸೂ. ೩-೪೩೨) ಎಂಬುದರಿಂದ ಇದಕ್ಕೆ ಭನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅರ್ಭ ಎಂದು ರೂಪವಾಗುತ್ತದೆ. (ಶಿಶು ಎಂದರ್ಥ) ಅರ್ಭ ಏವ ಅರ್ಭಕಃ. **ಸಂಜ್ಞಾಯಾಂ ಕನ್** (ಪಾ. ಸೂ. ೫-೩-೭೫) ಎಂಬುದರಿಂದ ಕನ್ ಪ್ರತ್ಯಯ. ಅದಕ್ಕೆ ಛಾಂದಸವಾಗಿ ಗಕಾರಾದೇಶ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇನ್ನು ಕೆಲವರು ಬೇರೆ ರೀತಿಯಿಂದ ಈ ಶಬ್ದವನ್ನು ನಿರ್ವಚನಮಾಡುತ್ತಾರೆ. ಅರ್ಭಮಲ್ಪಂ ಗಾಯತಿ ಶಬ್ದಯತಿ ಅರ್ಭಗಃ. ಕೈ ಗೈ ಶಬ್ದೇ. ಧಾತು. **ಗಾಪೋಷ್ಟಕ್** (ಪಾ. ಸೂ. ೩-೨-೮) ಎಂಬುದರಿಂದ ಇದಕ್ಕೆ ಟಕ್ ಪ್ರತ್ಯಯ. ಕಿತ್ತಾದುದರಿಂದ **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಈ ಮತವು ಪದವನ್ನು ಮಾಡಿರುವ ಶಾಕಲ್ಯರಿಗೆ ಅಭಿಮತವಾದುದು.

**ಸೇನಾಜುವಾ**—ಜು ಧಾತುವು ಸೌತ್ರವಾಗಿ (ಸೂತ್ರನಿರ್ದಿಷ್ಟವಾಗಿ) ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಕ್ವಿಬ್ ವಚಿಪ್ರಚ್ಛ್ಯಾ**-(ಪಾ. ಸೂ. ೩-೨-೧೭೮-೧) ವರಿಂದ ಇದಕ್ಕೆ ಪ್ರತ್ಯಯವೂ ದೀರ್ಘವೂ ಬರುತ್ತವೆ. **ತನ್ವಾದೀನಾಮುಪಸಂಖ್ಯಾನಂ** (ಪಾ. ಸೂ.

೬-೪-೭೭-೧) ಎಂಬುದರಿಂದ ಇದು ತನ್ವಾದಿಯಲ್ಲಿ ಪಠಿತವಾದುದದರಿಂದ ಉವಙಾದೇಶ ಬರುತ್ತದೆ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ನ್ಯೂಹತುಃ**—ನಿ ಉಪಸರ್ಗ. ವಹ ಪ್ರಾಪಣೇ. ಧಾತು. ಲಿಟ್ ಪ್ರಥಮಪುರುಷ ದ್ವಿವಚನದಲ್ಲಿ **ಪರಸ್ಮೈಪದಾನಾಂ**—ಸೂತ್ರದಿಂದ ಅತುಸಾದೇಶ. **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ವಾತಿದೇಶವಿರುವುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಲಿಣ್ನಿಮಿತ್ತವಾದ ಧಾತುವಿಗೆ ದ್ವಿತ್ವ. ಹಲಾದಿಶೇಷ. ಸವರ್ಣದೀರ್ಘ. ಯೌ ಎಂದು ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಸೂತ್ರದಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ಪ್ರತ್ಯಯಸ್ವರದಿಂದ ಅಕಾರ ಉದಾತ್ತವಾಗುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ವೀಳುಪತ್ಮಭಿರಾಶುಹೇಮಭಿರ್ವಾ ದೇವಾನಾಂ ವಾ ಜೂತಿಭಿಃ
ಶಾಶದಾನಾ ।
ತದ್ರಾಸಭೋ ನಾಸತ್ಯಾ ಸಹಸ್ರಮಾಜಾ ಯಮಸ್ಯ ಪ್ರಧನೇ
ಜಿಗಾಯ ॥ ೨ ॥

॥ ಪದಪಾಠಃ ॥

**ವೀಳುಪತ್ಮಽಭಿಃ । ಆಶುಹೇಮಽಭಿಃ । ವಾ । ದೇವಾನಾಂ । ವಾ । ಜೂತಿಽಭಿಃ ।**
**ಶಾಶದಾನಾ ।**
**ತತ್ । ರಾಸಭಃ । ನಾಸತ್ಯಾ । ಸಹಸ್ರಂ । ಆಜಾ । ಯಮಸ್ಯ । ಪ್ರಽಧನೇ ।**
**ಜಿಗಾಯ ॥ ೨ ॥**

॥ ಸಾಯಣಭಾಷ್ಯಂ ॥

ವೀಳುಪತ್ಮಭಿಃ । ವೀಡ್ವಿತಿ ಬಲನಾಮ । ಬಲವದುತ್ಪತನೈಃ ಆಶುಹೇಮಭಿಃ ಶೀಘ್ರಗಮನೈಃ । ವಾಶಬ್ದಃ ಸಮುಚ್ಚಯೇ । ಹೇ ನಾಸತ್ಯಾವಶ್ವಿನೌ ಏವಂಭೂತೈರಶ್ವೈಶ್ಚ ದೇವಾನಾಮಿಂದ್ರಾದೀನಾಂ ಜೂತಿಭಿಃ ಪ್ರೇರಣೈಶ್ಚ ಶಾಶದಾನಾ ಶಾಶದ್ಯಮಾನಯೋರತ್ಯರ್ಥಂ ಪ್ರೇರ್ಯಮಾಣಯೋರ್ಯುವಯೋ- ರ್ವಾಹನಭೂತೋ ಯೋ ರಾಸಭಃ ಪ್ರಜಾಪತಿನಾ ದತ್ತಃ ಸ ಯಮಸ್ಯ ವೈವಸ್ವತಸ್ಯ ಪ್ರೀತಿಕರೇ ಪ್ರಧನೇ ಪ್ರಕೀರ್ಣಧನೋಪೇತೇ ಆಜಾ ಆಜೌ ಸಂಗ್ರಾಮೇ ತಚ್ಛತ್ರೂಣಾಂ ಸಹಸ್ರಂ ಜಿಗಾಯ । ಜಿತವಾನ್ । ವೈವಸ್ವತೋ ಹಿ ಬಹೂನಾಂ ಮರಣಹೇತುನಾ ಸಂಗ್ರಾಮೇಣ ತುಷ್ಟೋ ಭವತಿ । ಯದ್ವಾ । ಜೇತವ್ಯತ್ವೇನ ಪ್ರಜಾಪತಿನಾ ನಿಹಿತಮ್ಯುಕ್ಸಹಸ್ರಂ ಶೀಘ್ರಗಮನಯುಕ್ತೋ ರಾಸಭೋ ಜಿಗಾಯ । ಜಯೇನಾಲಭತ । ಅನ್ಯೇಭ್ಯೋ ದೇವೇಭ್ಯಃ ಪೂರ್ವಮೇವಾಜಿಂ ಪ್ರಾಪ್ಯ ಯುವಾಂ ಜಯಂ ಪ್ರಾಪಯಾಮಾಸ । ತಥಾ ಚಾಸ್ಮಿನ್ನರ್ಥೇ ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ । ಐ. ಬ್ರಾ. ೪-೭ । ಇತ್ಯಾ- ದಿಕಂ ಬ್ರಾಹ್ಮಣಮನುಸಂಧೇಯಂ ॥ ವೀಳುಪತ್ಮಭಿಃ । ವೀಳು ಬಲವತ್ಪತಂತೀತಿ ವೀಳುಪತ್ಮಾನಃ । ಆಶು ಹೇಮಭಿಃ । ಆಶು ಶೀಘ್ರಂ ಹಿನ್ವಂತಿ ಗಚ್ಛಂತೀತ್ಯಾಶುಹೇಮಾನಃ । ಹಿ । ಹಿ ಗತೌ ವೃದ್ಧೌ ಚ । ಅನ್ಯೇ- ಭ್ಯೋಽಪಿ ದೃಶ್ಯಂತ ಇತಿ ಮನಿನ್ । ಕೃದುತ್ತರಪದ ಪ್ರಕೃತಿಸ್ವರತ್ವಂ । ಜೂತಿಭಿಃ । ಊತಿಯೂತಿಜೂತೀ- ತ್ಯಾದಿನಾ ಕ್ತಿನ ಉದಾತ್ತತ್ವಂ । ಶಾಶದಾನಾ । ಶದ್ಲ್ ಶಾತನೇ । ಅತ್ರ ಗತ್ಯರ್ಥೋ ಧಾತೂನಾಮನೇಕಾರ್ಥ- ತ್ವಾತ್ । ಅಸ್ಮಾದ್ಯಙಂತಾಲ್ಲಟಃ ಶಾನಚ್ । ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾತ್ ಶ್ಯನಭಾವಃ । ಅತೋಲೋಪಯಲೋಪೌ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ಷಷ್ಠ್ಯಾಃ ಪೂರ್ವಸವರ್ಣದೀರ್ಘಃ । ಆಜಾ । ತೇನೈವ ಸೂತ್ರೇಣ ಡಾದೇಶಃ । ಜಿಗಾಯ । ಜಿ ಜಯೇ । ಸನ್- ಲಿಟೋರ್ಜೇರಿತ್ಯಭ್ಯಾಸಾದುತ್ತರಸ್ಯ ಕುತ್ವಂ ಗಕಾರಃ ॥

॥ ಪ್ರತಿಪದಾರ್ಥ ॥

**ವೀಳುಪತ್ಮಭಿಃ**—ಬಲಿಷ್ಠವಾದ । **ವಾ**—ಮತ್ತು । **ಆಶುಹೇಮಭಿಃ**—ಶೀಘ್ರಗಾಮಿಗಳಾದ (ಅಶ್ವಗಳಿಂದ ಯುಕ್ತರಾದ) । **ನಾಸತ್ಯಾ**—ನಾಸತ್ಯರೇ । **ದೇವಾನಾಂ**—ಇಂದ್ರಾದಿಗಳ । **ಜೂತಿಭಿಃ**—ಪ್ರೋತ್ಸಾಹಗಳಿಂದ । **ಶಾಶದಾನಾ**—ಹೆಚ್ಚಾಗಿ ಪ್ರೇರಿತವಾದ । **ರಾಸಭಃ**—(ನಿಮ್ಮ ವಾಹನವಾದ) ಕತ್ತೆಯು । **ಯಮಸ್ಯ**—ಯಮನಿಗೆ (ಪ್ರೀತಿಕರವಾದ) । **ಪ್ರಧನೇ**—ವಿಶೇಷ ಧನಯುಕ್ತವಾದ । **ಆಜಾ**—ಯುದ್ಧದಲ್ಲಿ । **ತತ್**—ಆ (ಶತ್ರುಗಳ) । **ಸಹಸ್ರಂ**—ಸಾವಿರವನ್ನು । **ಜಿಗಾಯ**—ಜಯಿಸಿತು.

॥ ಭಾವಾರ್ಥ ॥

ಬಲಿಷ್ಠವಾದ ಮತ್ತು ಶೀಘ್ರಗಾಮಿಗಳಾದ ಅಶ್ವಗಳಿಂದ ಯುಕ್ತರಾದ, ಎಲೈ ಅಶ್ವಿನಿದೇವತೆಗಳೇ, ದೇವತೆಗಳಿಂದ ಪ್ರೋತ್ಸಾಹಿಸಲ್ಪಡುತ್ತಿರುವ ನಿಮ್ಮಿಂದ ಪ್ರೇರಿತವಾದ (ನಿಮ್ಮ ವಾಹನವಾದ) ಕತ್ತೆಯು, ಯಮನಿಗೆ (ಪ್ರೀತಿಕರವಾದ)ಯುದ್ಧದಲ್ಲಿ ಅನೇಕ ಶತ್ರುಗಳನ್ನು ಜಯಿಸಿತು.

## English Translation.

Nasatyas, borne by strong and rapid (steeds) and (urged) by the encouragements of the gods, the ass of you, thus instigated, overcame a thousand (enemies) in conflict, in the war grateful to Yama.

॥ ವಿಶೇಷವಿಷಯಗಳು ॥

**ವೀಳುಪತ್ಮಭಿಃ—ವೀಳು ಬಲವತ್ ಪತಂತೀತಿ ವೀಳುಪತ್ಮಾನಃ** । ವೀಳು ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ. ೩–೯) ಉಕ್ತವಾಗಿರುವುದರಿಂದ ಬಲವೆಂದು ಅರ್ಥ. ಬಲವುಳ್ಳವುಗಳಾಗಿ ಹಾರುವುವುಗಳಾಗಿರುವ ಎಂದು ಅರ್ಥ. **ವೀಳ್ವಿತಿ ಬಲನಾಮ ಬಲವದುತ್ಪತನ್ನೈಃ** ವೀಳು ಎಂದರೆ ಬಲಕ್ಕೆ ಹೆಸರು. ಎಂದು ಸಾಯಣರು ಅರ್ಥಮಾಡಿರುವರು.

- **ಆಶುಹೇಮಭಿಃ—ಶೀಘ್ರಗಮನೈಃ । ಆಶು ಶೀಘ್ರಂ ಹಿನ್ವಂತಿ ಗಚ್ಛಂತೀತಿ ಆಶುಹೇಮಾನಃ** ವೇಗವಾಗಿ ಸಂಚರಿಸುವವುಗಳು ಎಂದು ಅರ್ಥ.

**ಶಾಶದಾನಾ—ಶಾಶದ್ಯಮಾನಯೋಃ ಅತ್ಯಂತಂ ಪ್ರೇರ್ಯಮಾಣಯೋಃ ಯುವಯೋಃ ವಾಹನಭೂತಃ** । ಅತಿಶಯವಾಗಿ ಪ್ರೇರಿಸಲ್ಪಡುವ ಅಶ್ವಿನೀದೇವತೆಗಳಾದ ನಿಮ್ಮ ವಾಹನವು ಎಂದು ಅರ್ಥ. **ಶಾತನ**ವೆಂದರೆ ಕತ್ತರಿಸುವುದು ಎಂದು ಅರ್ಥವುಳ್ಳ **ಶದ್ಲೃ** ಧಾತುವಿನಿಂದ. ಯಜಾರ್ಥದಲ್ಲಿ (ಯಜಾರ್ಥವು ಅನೇಕಾವರ್ತಿ ಅಥವಾ ಅತಿಶಯ ಎಂಬ ಅರ್ಥದಲ್ಲಿ) ನಿಷ್ಪನ್ನವಾದ **ಶಾಶದಾನ** ಎಂಬ ಶಬ್ದಕ್ಕೆ ಇಲ್ಲಿ ಸಾಯಣರು **ಧಾತೂನಾಂ ಅನೇಕಾರ್ಥತ್ವಂ** ಧಾತುಗಳಿಗೆ ಅನೇಕ ವಿಧವಾದ ಅರ್ಥಗಳು ಬಹಳವಿರುವುವು. ಎಂಬ ನ್ಯಾಯವನ್ನು ಅನುಸರಿಸಿ ಅರ್ಥವನ್ನು ಹೇಳಿರುವರು. ನಿರುಕ್ತದಲ್ಲಿ (ನಿ. ೬–೧೬) **ಶಾಶದಾನಃ** ಎಂಬ ಶಬ್ದಕ್ಕೆ **ಶಾಶಾದ್ಯಮಾನಃ** ಎಂಬ ಅರ್ಥದ ವಿವರಣೆ ಇರುವುದು. ಮತ್ತು

**ಅಭಿ ಸಿಧ್ಮೋ ಅಜಿಗಾದಸ್ಯ ಶತ್ರೂನ್ ವಿತಿಗ್ಮೇನ ವೃಷಭೇಣಾ ಪುರೋಽಭೇತ್ ।**
**ಸಂವಜ್ರೇಣಾಸೃಜದ್ವೃತ್ರಮಿಂದ್ರಃ ಪ್ರ ಸ್ವಾಂ ಮತಿಮತಿರಚ್ಛಾಶದಾನಃ ॥**

(ಋ. ಸಂ. ೧–೩೩–೧೩)

ಎಂಬ ಈ ಋಕ್ಕನ್ನು ಉದಾಹರಣೆಗಾಗಿ ಕೊಟ್ಟು, ಈ ಶಬ್ದಕ್ಕೆ ಛೇದನರೂಪವಾದ ಅರ್ಥದಲ್ಲಿ ಪ್ರಯೋಗವಿರುವುದೆಂದು ಹೇಳಿರುವುದು.

**ರಾಸಭಃ ಪ್ರಧನೇ ಆಜೌ ತತ್ ಸಹಸ್ರಂ ಜಿಗಾಯ** ಚತುರ್ಮುಖಬ್ರಹ್ಮನು ಅಶ್ವಿನೀದೇವತೆಗಳಿಗಾಗಿ ಕೊಟ್ಟಿರುವ ಅವನ ವಾಹನವಾದ ಕತ್ತೆಯು ಇಂದ್ರನೇ ಮೊದಲಾದ ದೇವತೆಗಳು ಪ್ರೇರಿಸಿರುವುದರಿಂದಲೂ, ಮೇಲಕ್ಕೆ

ಹಾರುತ್ತಿರುವ ಮತ್ತು ವೇಗವಾಗಿ ಸಂಚರಿಸುವ ಕುದುರೆಗಳಿಂದಲೂ ಪ್ರೇರಿಸಲ್ಪಟ್ಟದ್ದಾಗಿ (ಹೆಚ್ಚಾದ ದ್ರವ್ಯವನ್ನು ಉಂಟುಮಾಡಿಕೊಡುವ,) ಯಮನಿಗೆ ಸಂತೋಷವನ್ನು ಉಂಟುಮಾಡುವ, ಯುದ್ಧದಲ್ಲಿ ಬ್ರಹ್ಮನು ಪಣವಾಗಿ ಇರಿಸಿದ್ದ ಸಾವಿರ ಋಕ್ಕುಗಳನ್ನು ಗೆದ್ದು ಅಶ್ವಿನೀದೇವತೆಗಳಿಗೆ ಜಯವನ್ನು ಸಂಪಾದಿಸಿ ಕೊಟ್ಟಿತು ಎಂದು ಅರ್ಥವನ್ನು ಸಾಯಣರು ವಿವರಿಸಿರುವರು. **ಆಜಿ** ಶಬ್ದವೂ ರಣಃ **ವಿವಾಕ್** ಎಂಬ ನಲವತ್ತುನಾಲ್ಕು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿರುತ್ತದೆ ಆಜಿ ಶಬ್ದ ಮತ್ತು **ಪ್ರಧನ** ಶಬ್ದಗಳ ಅರ್ಥವಿವರಣೆಯು (ನಿ ೯-೨೩) ಯಾಸ್ಕರಿಂದ ನಿರುಕ್ತದಲ್ಲಿ ವಿವೃತವಾಗಿರುವುದು. ಉದಾಹರಣೆ—

**ನ್ಯಕ್ರಂದಯನ್ನುಪಯಂತ ಏನಮಮೇಹಯನ್ ವೃಷಭಂ ಮಧ್ಯ ಆಜೇಃ ।**
**ತೇನ ಸೂಭರ್ವಂ ಶತವತ್ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ ॥**

(ಋ. ಸಂ. ೧೦-೧೦೨-೫)

ನ್ಯಕ್ರಂದಯನ್ನುಪಯಂತ ಏನಮಿತಿ ವ್ಯಾಖ್ಯಾತಂ । **ಅಮೇಹಯನ್ ವೃಷಭಂ ಮಧ್ಯ ಆಜೇ**- ರಾಜಯನಸ್ಯಾಜವನಸ್ಯೇತಿ ವಾ. ತೇನ ತಂ **ಸೂಭರ್ವಂ** ರಾಜಾನಂ । ಭರ್ವತಿರತ್ತಿಕರ್ಮಾ ॥ ತದ್ವಾ **ಸೂಭರ್ವಂ ಸಹಸ್ರಂ ಗವಾಂ ಮುದ್ಗಲಃ ಪ್ರಧನೇ ಜಿಗಾಯ** । **ಪ್ರಧನ** ಇತಿ ಸಂಗ್ರಾಮನಾಮ ಪ್ರಕೀರ್ಣಾನ್ಯಸ್ಮಿನ್ ಧನಾನಿ ಭವಂತಿ ॥

ಈ ಉದಾಹರಣೆಯಲ್ಲಿ **ಪ್ರಧನ ಆಜಿ** ಶಬ್ದಗಳು (ಸಂಗ್ರಾಮ) ಯುದ್ಧ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತವೆ.

**ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾಃ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾಃ ಸವಿತುಃ ॥ ವಿಶ್ವರೂಪಾ ಬೃಹಸ್ಪತೇಃ । ನಿಯುತೋ ವಾಯೋರಿತಿ ದಶಾದಿಷ್ಟೋಪಯೋಜನಾನಿ ॥**

(ನಿ. ೨-೨೮)

ಎಂದು ಆಯಾಯ ದೇವತೆಗಳ ವಾಹನಗಳನ್ನು ವಿವರಿಸುವ ವಾಕ್ಯದಲ್ಲಿ ಅಶ್ವಿನೀದೇವತೆಗಳ **ರಾಸಭೌ** ಎರಡು ಕತ್ತೆಗಳು ಎಂದು ಹೇಳಿರುವುದು. ಸಾಯಣರು **ಸಹಸ್ರಂ ಜಿಗಾಯ** ಸಾವಿರ ಋಕ್ಕನ್ನು ಗೆದ್ದಿತು ಎಂಬ ಅರ್ಥವನ್ನೂ ವಿವರಿಸುವಾಗ **ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್** ಎಂಬ (ಐ. ಬ್ರಾ. ೪-೭) ವಾಕ್ಯವನ್ನು ಉದಹರಿಸಿರುತ್ತಾರೆ. ಸ್ಕಂದಸ್ವಾಮಿಗಳು **ಅತ್ರ ಪ್ರಜಾಪತಿರ್ವೈ ಸೋಮಾಯ ರಾಜ್ಞೇ** (ಐ. ಬ್ರಾ. ೪-೭-೧) **ಇತ್ಯಾದ್ಯೈತರೇಯಬ್ರಾಹ್ಮಣಾಧೀತಮಿಹಾಪ್ಯಾಕೃಷ್ಟವ್ಯಂ** ಇಲ್ಲಿ ಪ್ರಜಾಪತಿಯು ರಾಜನಾದ ಸೋಮನಿಗೆ ತನ್ನ ಮಗಳನ್ನು ಕೊಟ್ಟನು ಎಂಬ ಇತಿಹಾಸವನ್ನು ಹೇಳುವ ಐತರೇಯ ಬ್ರಾಹ್ಮಣದ ವಾಕ್ಯವನ್ನು ವಿವರಿಸಬೇಕು ಎಂದು ವ್ಯಾಖ್ಯಾನಮಾಡಿರುವರು. ಮತ್ತು ಅದೆಲ್ಲವನ್ನು ಉದಾಹರಣೆಗಾಗಿ ಕೊಟ್ಟಿರುವರು—

**ಪ್ರಜಾಪತಿಃ ಸವಿತುಃ ದುಹಿತರಂ ಸೂರ್ಯಾಂ ಸೋಮಾಯ ರಾಜ್ಞೇ ಪ್ರಾಯಚ್ಛತ್ । ಯೇ ತ್ವನ್ಯೇ ದೇವಾಃ ತಾಂ ವರಯಿತುಮಾಗಚ್ಛನ್ । ತೇಭ್ಯೋ ವಿವಾಹಾದನಂತರವ್ಮೃಕ್ಸಹಸ್ರಮುದದಾತ್ ।**

**ಯದೇತದಾಶ್ವಿನಂ ನಾಮ ತಸ್ಮಿನ್ ದೇವಾ ವಿವಾದಮಕುರ್ವನ್ । ಮಮೇದಮಸ್ತು ಮಮೇದಮಸ್ತ್ವಿತಿ । ತೇಽಬ್ರುವನ್ । ಆಜಿಂ ಧಾವಾಮ । ಯೋ ನೋ ಜೇಷ್ಯತಿ ತಸ್ಯೇದಂ ಭವಿಷ್ಯತೀತಿ । ತೇಽಗ್ನೇರ್ಗೃಹಪತೇರುಪರ್ಯಾದಿತ್ಯಂ ಕಾಷ್ಠಾಂ ಕೃತ್ವಾಽಭಿಧಾವನ್ । ಕಾಷ್ಠಾ ಆಜ್ಯಂತ ಉಚ್ಯತೇ। ಅಶ್ವತರೀರಥೇನಾಗ್ನಿರಾಜಿಮಧಾವತ್ । ಗೋಭಿರರುಣೈರುಷಾಃ। ಹರಿರಥೇನೇಂದ್ರಃ ಗರ್ದಭರಥೇನಾಶ್ವಿನೌ । ತತ್ರಾಶ್ವಿನಾವಜಯತಾಮ್ । ಇತಿ ॥**

ಬ್ರಹ್ಮನು ಸವಿತೃದೇವನ **ಸೂರ್ಯಾ** ಎಂಬ ಹೆಸರುಳ್ಳ ಮಗಳನ್ನು ರಾಜನಾದ ಸೋಮನಿಗೆ ವಿವಾಹಮಾಡಿಕೊಟ್ಟನು. ಆಗ ಇತರ ದೇವತೆಗಳು ಅವಳನ್ನು ವರಿಸುವುದಕ್ಕಾಗಿ ಬಂದರು. ಅವನು ವಿವಾಹವಾದನಂತರ ಅವರಿಗೆ ಒಂದು ಸಾವಿರ ಋಕ್ಕುಗಳನ್ನು ಕೊಟ್ಟನು. ಈ ಋಕ್ಕುಗಳಿಗೆ **ಆಶ್ವಿನ** ಎಂದು ಹೆಸರು ಪ್ರಸಿದ್ಧವಾಗಿರುವುದು. ಈ ಋಕ್ಕುಗಳನ್ನು ಅಲ್ಲಿಗೆ ಬಂದಿದ್ದ ದೇವತೆಗಳು ನನಗೆ ಬೇಕು, ತನಗೆ ಬೇಕು ಎಂದು ವಿವಾದವನ್ನು ಮಾಡಿದರು. ಅನಂತರದ ಅವರು ಈ ಋಕ್ಕುಗಳು, (ಸ್ಪರ್ಧೆಯಲ್ಲಿ) ಯುದ್ಧದಲ್ಲಿ ಗೆದ್ದವರಿಗೆ ಸಿಕ್ಕಲಿ ಎಂದು ತಮ್ಮಲ್ಲಿಯೇ ನಿರ್ಣಯವನ್ನು ಮಾಡಿಕೊಂಡರು. ಅನಂತರದ ಅವರು ಗೃಹಪತಿಯಾದ ಅಗ್ನಿಯ ಮೇಲುಗಡೆಯಲ್ಲಿ ಆದಿತ್ಯನವರೆಗೆ ಹೋಗುವುದೇ ಯುದ್ಧದ ಕೊನೆಯೆಂದು ನಿಷ್ಕರ್ಷೆಯನ್ನು ಮಾಡಿಕೊಂಡು ಯುದ್ಧಮಾಡಲು ಉಪಕ್ರಮವನ್ನು ಮಾಡಿದರು. ಆಗ ಅಗ್ನಿಯು ಹೇಸರಗತ್ತೆಯನ್ನು ಕಟ್ಟಿರುವ ರಥದಿಂದ ಯುದ್ಧಕ್ಕೆ ಬಂದನು. ಉಷಸ್ಸು ಕೆಂಪು ಬಣ್ಣದ ಗೋವುಗಳನ್ನು ಕಟ್ಟಿದ ರಥದಿಂದ ಯುದ್ಧಕ್ಕೆ ಬಂದಳು. ಇಂದ್ರನು ಹರೀ ಎಂಬ ಹೆಸರಿನ ಕುದುರೆಗಳನ್ನು ಕಟ್ಟಿದ ರಥದಿಂದ ಯುದ್ಧಕ್ಕೆ ಬಂದನು. ಕತ್ತೆಗಳನ್ನು ಕಟ್ಟಿದ ರಥದಿಂದ ಅಶ್ವಿನೀದೇವತೆಗಳು ಯುದ್ಧಕ್ಕೆ ಬಂದರು. ಆಗ ನಡೆದ ಯುದ್ಧದಲ್ಲಿ ಅಶ್ವಿನೀದೇವತೆಗಳು ಜಯವನ್ನು ಹೊಂದಿದರು. ಒಂದು ಸಾವಿರ ಋಕ್ಕುಗಳು ಅವರಿಗೆ ದೊರೆತವು. ಇದರಿಂದ ಈ ಋಕ್ಕುಗಳಿಗೆ ಆಶ್ವಿನ ಎಂದು ಪ್ರಸಿದ್ಧಿಯು ಆಗಿರುತ್ತದೆ. ಎಂದು ಇತಿಹಾಸವನ್ನು ವಿವರಿಸಿರುವರು. ಮತ್ತು **ಆಜಾ—ಅಶ್ವಾದೇರ್ಧಾವನಭೂಮಿರಾಜಿರುಚ್ಯತೆ** ಕುದುರೆಯೇ ಮೊದಲಾದವುಗಳು ಓಡುವ ಪ್ರದೇಶವು **ಆಜಿ** ಎಂದು ಪ್ರಸಿದ್ಧವಾಗಿರುತ್ತದೆ ಎಂದು **ಆಜಿ** ಶಬ್ದದ ಅರ್ಥವನ್ನು ವಿವರಿಸಿ, **ಯಮಸ್ಯ** ಎಂಬ ಪದಕ್ಕೆ **ತಮಸಾಂ ಯಮನಾದ್ಯಮಃ ಆದಿತ್ಯ ಇಹೋಚ್ಯತೇ** ಕತ್ತಲೆಯನ್ನು ನಾಶಮಾಡುವವನಾದ್ದರಿಂದ ಇಲ್ಲಿ ಯಮ ಎಂಬ ಶಬ್ದಕ್ಕೆ ಆದಿತ್ಯನೆಂಬ ಅರ್ಥವನ್ನು ಹೇಳಬೇಕು.

**ತಸ್ಯ ಸಂಬಂಧಿನ್ಯಾಂ । ಕಃ ಪುನರಾದಿತ್ಯಸ್ಯಾಜಿಸಂಬಂಧಃ ಉಚ್ಯತೇ । ಆದಿತ್ಯಸ್ತಸ್ಯಾ ಅಂತಃ ಆಸೀತ್ । ತಥಾಹಿ ಬ್ರಾಹ್ಮಣಂ । ತೇಽಗ್ನೇರ್ಗೃಹಪತೇರುಪರ್ಯಾದಿತ್ಯಂ ಕಾಷ್ಠಾಮಕುರ್ವತ**

(ಐ. ಬ್ರಾ. ೪-೭-೪)

ಆಜಿ ಶಬ್ದದ ಅರ್ಥವಾದ ಯುದ್ಧಕ್ಕೂ ಆದಿತ್ಯನಿಗೂ ಉಂಟಾಗಿರುವ ಸಂಬಂಧವು ಯಾವುದು ಎಂದು ಹೇಳುವ ಐತರೇಯ ಬ್ರಾಹ್ಮಣದ ವಾಕ್ಯವನ್ನು ಉದಾಹರಣೆಕೊಟ್ಟು ಇರುವರು, **ಪ್ರಧನೇ**—ಎಂಬ ಶಬ್ದಕ್ಕೆ **ಸಂಗ್ರಾಮ** ಯುದ್ಧದಲ್ಲಿ ಎಂದು ಅರ್ಥವನ್ನು ಹೇಳಿ, **ಅಗ್ನ್ಯಾದಿಭಿಃ ಸಹ ಸಂಸ್ಪರ್ಧಾಯಾಂ** ಅಗ್ನಿಯೇ ಮೊದಲಾದ ದೇವತೆಗಳು ತಮ್ಮಲ್ಲಿ **ಸ್ಪರ್ಧೆ** ಮಾಡಿರುವ ಯುದ್ಧದಲ್ಲಿ ಎಂದು ಅರ್ಥಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ವೀಳುಪತ್ಮಭಿಃ**—ವೀಳು ಬಲವತ್ ಪತಂತೀತಿ ವೀಳುಪತ್ಮಾನಃ. ಪತ್ಲೃ ಗತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಆಶುಹೇಮಭಿಃ**—ಆಶು ಶೀಘ್ರಂ ಹಿನ್ವಂತಿ ಗಚ್ಛಂತೀತಿ ಆಶುಹೇಮಾನಃ. ಹಿ ಗತೌ ವೃದ್ಧೌ ಚ. ಧಾತು ಹಿಂದಿನಂತೆ ಮನಿನ್ ಪ್ರತ್ಯಯ ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಸಮಾಸವಾದಾಗ ಹಿಂದಿನಂತೆ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಜೂತಿಭಿಃ**—**ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ** (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ನಿಗೆ ಉದಾತ್ತಸ್ವರವು ನಿಪಾತಿತವಾಗಿದೆ. ಜು ಎಂಬುದು ಸೌತ್ರಧಾತುವೆಂದು ಹಿಂದೆ ಹೇಳಿದೆ.

**ಶಾಶದಾನಾ**—ಶದ್ಲೃ ಶಾತನೇ. ಧಾತು. ಧಾತೂನಾಮನೇಕಾರ್ಥತ್ವಮ್ ಎಂದು ಧಾತುಗಳಿಗೆ ಅನೇಕಾರ್ಥಸ್ವೀಕರಿಸಿರುವುದರಿಂದ ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ ಅತಿಶಯಾರ್ಥದಲ್ಲಿ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಪ್ರತ್ಯಯ. **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. ಆದಿಹಲ್ ಶೇಷಬಂದಾಗ ಅಭ್ಯಾಸಕ್ಕೆ **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಎಂಬುದರಿಂದ ದೀರ್ಘ. **ಸನಾದ್ಯಂತಾಧಾತವಃ** ಸೂತ್ರದಿಂದ ಶಾಶದ್ಯ ಎಂಬ ಯಙಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಇದಕ್ಕೆ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕಸಂಜ್ಞೆ ಬರುವುದರಿಂದ ಶಪ್ ಬರುವುದಿಲ್ಲ. **ಯಸ್ಯಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಙಿನ ಯಕಾರಕ್ಕೂ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಆದರ ಅಕಾರಕ್ಕೂ ಲೋಪ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದಕ್ಕೆ ಷಷ್ಠೀ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣ ದೀರ್ಘ ಬರುತ್ತದೆ.

**ನಾಸತ್ಯಾ**—ನ ಅಸತ್ಯೌ ನಾ ಸತ್ಯೌ. **ನಭ್ರಾಣ್ನಪಾತ್**-ಸೂತ್ರದಿಂದ ನಿಪಾತಿತವಾಗಿದೆ. ಸಂಬೋಧನಾ ದ್ವಿವಚನಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಪೂರ್ವಸವರ್ಣದೀರ್ಘ ಬರುತ್ತದೆ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಆಜಾ**—ಆಜಿ ಶಬ್ದ ಯುದ್ಧಾರ್ಥಕವಾದುದು. ಇದಕ್ಕೂ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಅದಕ್ಕೆ ಡಾದೇಶ ಬರುತ್ತದೆ. ಡಿತ್ತಾದುದರಿಂದ ಟಿಗೆ (ಇ) ಲೋಪ. ಉದಾತ್ತನಿವೃತ್ತಿ ಸ್ವರದಿಂದ ವಿಭಕ್ತಿಯೂ ಉದಾತ್ತವಾಗುತ್ತದೆ.

**ಯಮಸ್ಯ**—ಯಮ ಉಪರಮೇ. ಧಾತು. ಯಮಯತೀತಿ ಯಮಃ. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ಜಿಗಾಯ**—ಜಿ ಜಯೇ. ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ಪಿಗೆ **ಪರಸ್ಮೈಪದಾನಾಂ**—ಸೂತ್ರದಿಂದ ಣಲಾದೇಶ. **ಅಚೋಞ್ಣಿತಿ** ಸೂತ್ರದಿಂದ ಧಾತುವಿನ ಇಕಾರಕ್ಕೆ ವೃದ್ಧಿ ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಸನ್‌ಲಿಟೋರ್ಜೇಃ** (ಪಾ. ಸೂ. ೭-೩-೫೭) ಎಂಬುದರಿಂದ ಅಭ್ಯಾಸದ ಪರಕ್ಕೆ ಕುತ್ವ. ಆಯಾದೇಶ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ತುಗ್ರೋ͡ ಹ ಭುಜ್ಯುಮಶ್ವಿನೋದಮೇಘೇ ರಯಿಂ ನ ಕಶ್ಚಿನ್ಮ-
ಮೃವಾಁ ಅವಾಹಾಃ ।
ತಮೂಹಥುರ್ನೌಭಿರಾತ್ಮನ್ವತೀಭಿರಂತರಿಕ್ಷಪ್ರುದ್ಭಿರಪೋದ-
ಕಾಭಿಃ ॥ ೩ ॥

॥ ಪದಪಾಠಃ ॥

ತುಗ್ರಃ । ಹ । ಭುಜ್ಯುಂ । ಅಶ್ವಿನಾ । ಉದಽಮೇಘೇ । ರಯಿಂ । ನ । ಕಃ ।
ಚಿತ್ । ಮಮೃಽವಾನ್ । ಅವ । ಅಹಾಃ ।
ತಂ । ಊಹಥುಃ । ನೌಭಿಃ । ಆತ್ಮನ್ಽವತೀಭಿಃ । ಅಂತರಿಕ್ಷಪ್ರುತ್ಽಭಿಃ ।
ಅಪಽಉದಕಾಭಿಃ ॥ ೩ ॥

॥ ಸಾಯಣಭಾಷ್ಯಂ ॥

ಅತ್ರೇಯಮಾಖ್ಯಾಯಿಕಾ । ತುಗ್ರೋ ನಾಮಾಶ್ವಿನೋಃ ಪ್ರಿಯಃ ಕಶ್ಚಿದ್ರಾಜರ್ಷಿಃ । ಸ ಚ ದ್ವೀಪಾಂತರವರ್ತಿಭಿಃ ಶತ್ರುಭಿರತ್ಯಂತಮುಪದ್ರುತಃ ಸನ್ ತೇಷಾಂ ಜಯಾಯ ಸ್ವಪುತ್ರಂ ಭುಜ್ಯುಂ ಸೇನಯಾ ಸಹ ನಾವಾ ಪ್ರಾಹೈಷೀತ್ । ಸಾ ಚ ನೌರ್ಮಧ್ಯೇ ಸಮುದ್ರಮತಿದೂರಂ ಗತಾ ವಾಯುವಶೇನ ಭಿನ್ನಾಸೀತ್ । ತದಾನೀಂ ಸ ಭುಜ್ಯುಃ ಶೀಘ್ರಮಶ್ವಿನೌ ತುಷ್ಟಾವ । ತೌ ಚ ಸ್ತುತೌ ಸೇನಯಾ ಸಹಿತ-ಮಾತ್ಮೀಯಾಸು ನೌಷ್ವಾರೋಪ್ಯ ಪಿತುಸ್ತುಗ್ರಸ್ಯ ಸಮೀಪಂ ತ್ರಿಭಿರಹೋರಾತ್ರೈಃ ಪ್ರಾಪಯಾಮಾಸತುರಿತಿ । ಅಯಮರ್ಥ ಇದಮಾದಿಕೇನ ತೃಚೇನ ಪ್ರತಿಪಾದ್ಯತೇ । ಹಶಬ್ದಃ ಪ್ರಸಿದ್ಧೌ । ತುಗ್ರಃ ಖಲು ಪೂರ್ವಂ ಶತ್ರುಭಿಃ ಪೀಡಿತಃ ಸನ್ ತಜ್ಜಯಾರ್ಥಮುದಮೇಘೇ । ಉದಕೈರ್ಮಿಹ್ಯತೇ ಸಿಚ್ಯತ ಇತ್ಯುದಕಮೇಘಃ ಸಮುದ್ರಃ । ತಸ್ಮಿನ್ಭುಜ್ಯುಮೇತತ್ಸಂಜ್ಞಂ ಪ್ರಿಯಂ ಪುತ್ರಮವಾಹಾಃ । ನಾವಾ ಗಂತುಂ ಪರ್ಯತ್ಯಾಕ್ಷೀತ್ । ತತ್ರ ದೃಷ್ಟಾಂತಃ । ಮಮೃವಾನ್ ಮ್ರಿಯಮಾಣಃ ಸನ್ಧನಲೋಭೀ ಕಶ್ಚಿನ್ಮನುಷ್ಯೋ ರಯಿಂ ನ । ಯಥಾ ಧನಂ ಪರಿತ್ಯಜತಿ ತದ್ವತ್ । ಹೇ ಅಶ್ವಿನೌ ತಂ ಚ ಭುಜ್ಯುಂ ಮಧ್ಯೇಸಮುದ್ರಂ ನಿಮಗ್ನಂ ನೌಭಿಃ ಪಿತೃಸಮೀಪಮೂಹಥುಃ । ಯುವಾಂ ಪ್ರಾಪಿತವಂತೌ । ಕೀದೃಶೀಭಿಃ । ಆತ್ಮನ್ವತೀಭಿರಾ-ತ್ಮೀಯಾಭಿಃ । ಯುವಯೋಃ ಸ್ವಭೂತಾಭಿರಿತ್ಯರ್ಥಃ । ಯದ್ವಾ । ಧೃತಿರಾತ್ಮಾ । ಧಾರಣವತೀಭಿರಿತ್ಯರ್ಥಃ । ಅಂತರಿಕ್ಷಪ್ರುದ್ಭಿರ ತಿಸ್ವಚ್ಛತ್ವಾದಂತರಿಕ್ಷೇ ಜಲಸ್ಯೋಪರಿಷ್ಟಾ ದೇವ ಗಂತ್ರೀಭಿಃ ಅಪೋದಕಾಭಿಃ । ಸುಶ್ಲಿಷ್ಟ-ತ್ವಾದಪಗತೋದಕಾಭಿಃ । ಅಪ್ರವಿಷ್ಟೋದಕಾಭಿರಿತ್ಯರ್ಥಃ ॥ ಉದಮೇಘೇ । ಮಿಹ ಸೇಚನೇ । ಕರ್ಮಣಿ ಘಞ್ । ನ್ಯಂಕ್ವಾದೀನಾಂ ಚ । ಪಾ. ೭-೩-೫೩ । ಇತಿ ಕುತ್ವಂ । ಉದಕಸ್ಯೋದಃ ಸಂಜ್ಞಾಯಾಂ । ಪಾ. ೬-೩-೫೭ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಮಮೃವಾನ್ । ಮೃಙ್ ಪ್ರಾಣತ್ಯಾಗೇ । ಲಿಟಃ ಕ್ವಸುಃ । ಕ್ರಾದಿನಿಯಮಾತ್ಪ್ರಾಪ್ತಸ್ಯೇಟೋ ವಸ್ವೇಕಾಜಾದ್ಘಸಾಮಿತಿ ನಿಯಮಾದಭಾವಃ । ಅಹಾಃ । ಓಹಾಕ್ ತ್ಯಾಗೇ । ಲುಙಿ । ತಿಪಿ ಚ್ಲೇಃ ಸಿಚ್ । ಆಗಮಾನುಶಾಸನಸ್ಯಾನಿತ್ಯತ್ವಾತ್ಸಗಿಟೌ ನ ಕ್ರಿಯೇತೇ । ಬಹುಲಂ ಛಂದಸೀತೀಡಭಾವಃ । ಹಲ್ಙ್ಯಾಬ್ಭ್ಯ ಇತಿ ತಿಲೋಪಃ । ರುತ್ವವಿಸರ್ಗೌ । ಯದ್ವಾ । ಮಂತ್ರೇ ಘಸೇತಿ ಚ್ಲೇರ್ಲುಕ್ । ಚ್ಲೇರ್ಲುಕ್ತ್ವಾದಿಣ್ ನ ಕ್ರಿಯತೇ । ನೌಭಿಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಆತ್ಮನ್ವತೀಭಿಃ । ಆತ್ಮನೋ ಮತುಪ್ । ಮಾದುಪಧಾಯಾ ಇತಿ ವತ್ವಂ । ಅನೋ ನುಡಿತಿ ನುಟ್ । ನಲೋಪಃ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಅಂತರಿಕ್ಷಪ್ರುದ್ಭಿಃ । ಪ್ರುಙ್ ಗತೌ । ಕ್ವಿಪ್ಚೇತಿ ಕ್ವಿಪ್ ॥

॥ ಪ್ರತಿಪದಾರ್ಥ ॥

**ತುಗ್ರಃ**—ತುಗ್ರನೆಂಬ (ರಾಜರ್ಷಿಯು) ವನು (ಶತ್ರುಜಯಾರ್ಥವಾಗಿ) । **ಉದಮೇಘೇ**—ಸಮುದ್ರದಲ್ಲಿ । **ಭುಜ್ಯುಂ**—ಭುಜ್ಯುವೆಂಬ ತನ್ನ ಪುತ್ರನನ್ನು । **ಮಮೃವಾನ್**—ಮರಣೋನ್ಮುಖನಾದ । **ಕಶ್ಚಿತ್**—(ಲೋಭಿಯಾದ) ಒಬ್ಬ ಪುರುಷನು । **ರಯಿಂ ನ**—ಧನವನ್ನು (ಅತಿಕ್ಲೇಶದಿಂದ) ಬಿಟ್ಟುಹೋಗುವಂತೆ । **ಅವಾಹಾಃ ಹ**—ಕಳುಹಿಸಿದ

ನಷ್ಟೆ । (**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ತಂ**—(ಸಮುದ್ರ ಮಧ್ಯದಲ್ಲಿ ಮುಳುಗುತ್ತಿದ್ದ) ಆ ಭುಜ್ಯುವನ್ನು । **ಆತ್ಮನ್ವತೀಭಿಃ**—ಸ್ವಕೀಯವಾದ । **ಅಂತರಿಕ್ಷಪ್ರುದ್ಭಿಃ**—ಅಂತರಿಕ್ಷದಲ್ಲಿ (ನೀರಿನ ಮೇಲುಭಾಗದಲ್ಲಿಯೇ) ಚಲಿಸುವ । **ಅಪೋದಕಾಭಿಃ**—(ಗಟ್ಟಿಯಾಗಿರುವುದರಿಂದ) ನೀರು ಪ್ರವೇಶಿಸದೇ ಇರುವ । **ನೌಭಿಃ**—ನಾವೆಗಳಿಂದ । **ಊಹಥುಃ**—(ತಂದೆಯ ಹತ್ತಿರಕ್ಕೆ) ಕರೆದುಕೊಂಡು ಹೋದಿರಷ್ಟೆ.

॥ ಭಾವಾರ್ಥ ॥

ತುಗ್ರನೆಂಬುವನು (ತನ್ನನ್ನು ಪೀಡಿಸುತ್ತಿದ್ದ ಶತ್ರುಗಳನ್ನು ಜಯಿಸುವುದಕ್ಕೋಸ್ಕರ) ಮಗನಾದ ಭುಜ್ಯುವನ್ನು ಸಮುದ್ರದ ಮೇಲೆ, ಮರಣೋನ್ಮುಖನಾದ (ಲೋಭಿಯಾದ) ಪುರುಷನು ಧನವನ್ನು (ಬಹಳ ಕ್ಲೇಶದಿಂದ ಕೊಡುವಂತೆ) ಕಳುಹಿಸಿದಾಗ, (ಸಮುದ್ರ ಮಧ್ಯದಲ್ಲಿ ಮುಳುಗುತ್ತಿದ್ದ) ಅವನನ್ನು, ಸರ್ವದಾ ತೇಲುತ್ತಿರುವ, ನೀರು (ಒಳಗೆ) ಪ್ರವೇಶಿಸದೇ ಇರುವ, ನಿಮ್ಮ (ಸ್ವಂತ) ಹಡಗುಗಳಲ್ಲಿ (ಅವನ ತಂದೆಯ ಹತ್ತಿರ) ಕರೆದುಕೊಂಡು ಹೋಗಿಬಿಟ್ಟಿರಷ್ಟೆ.

English Translation.

Tugra, verily, Aswins, sent (his son) Bhujyu to sea, as a dying man parts with his riches; but you brought him back in vessels of your own, floating over the ocean, and keeping out the waters.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ತುಗ್ರನೆಂದು ಪ್ರಸಿದ್ಧನಾದ ಅಶ್ವಿನೀದೇವತೆಗಳಿಗೆ ಪ್ರಿಯನಾದ ರಾಜರ್ಷಿಯು ತನ್ನ ಶತ್ರುಗಳು ದ್ವೀಪಾಂತರದಲ್ಲಿ ಇರುವುದರಿಂದ ಅವರು ಕೊಡುವ ತೊಂದರೆಯನ್ನು ಅನುಭವಿಸಲಾರದೆ ಅವರಿಂದ ಪೀಡಿಸಲ್ಪಟ್ಟವನಾಗಿ ಅವರನ್ನು ನಿಗ್ರಹಮಾಡುವುದಕ್ಕಾಗಿ ತನ್ನ ಮಗನಾದ ಭುಜ್ಯುವನ್ನು ಸೇನೆಯೊಡನೆ ದ್ವೀಪಾಂತರಕ್ಕೆ ಕಳುಹಿಸಿದನು. ಭುಜ್ಯುವು ಸೇನಾಸಹಿತನಾಗಿ ದ್ವೀಪಾಂತರಕ್ಕೆ ಸಮುದ್ರದ ಮೇಲೆ (ಹಡಗಿನಲ್ಲಿ) ನಾವೆಯಿಂದ ಪ್ರಯಾಣಮಾಡುವಾಗ ಅವನ ನಾವೆಯು ಮಧ್ಯದಲ್ಲಿ ಭಿನ್ನವಾಯಿತು. ಆಗ ತುಗ್ರನ ಮಗನಾದ ಭುಜ್ಯುವು ಅಶ್ವಿನೀದೇವತೆಗಳನ್ನು ಬೇಗ ಸ್ತೋತ್ರಮಾಡಿದನು. ಇವನ ಸ್ತುತಿಯನ್ನು ಕೇಳಿ ಪ್ರಸನ್ನರಾದ ಅಶ್ವಿನೀದೇವತೆಗಳು ಸೇನಾಸಹಿತನಾಗಿರುವ ಭುಜ್ಯುವನ್ನು ತಮ್ಮ ನಾವೆಗಳ ಮೇಲೆ ಕೂಡಿಸಿಕೊಂಡು ಮೂರು ದಿವಸಗಳು ಅಹೋರಾತ್ರಿಗಳೂ ಪೂರ್ತಿಯಾಗಿ (ಅವಿಚ್ಛಿನ್ನವಾಗಿ) ಕೊಂಚವೂ ವಿಶ್ರಾಂತಿ ಇಲ್ಲದಂತೆ ಪ್ರಯಾಣಮಾಡಿ ಇವನ ತಂದೆಯಾದ ತುಗ್ರರಾಜನ ಹತ್ತಿರಕ್ಕೆ ಕರೆದುಕೊಂಡು ಬಂದು ಸೇರಿಸಿದರು ಎಂಬ ಇತಿಹಾಸವು ಇಲ್ಲಿ ಹೇಳಲ್ಪಟ್ಟಿರುತ್ತದೆ.

**ತುಗ್ರಃ** —ತುಗ್ರನೆಂಬುವನು ಒಬ್ಬ ರಾಜನು. ಇವನು ಭುಜ್ಯುವೆಂಬುವನ ತಂದೆಯೆಂದು ಋಗ್ವೇದದ ಋ. ಸಂ. ೧-೧೧೬-೩; ೧-೧೧೭-೪; ೬-೬೨-೬ ಎಂಬ ಋಕ್ಕುಗಳಲ್ಲಿಯೂ, ತುಗ್ರಪುತ್ರನೆಂದು ಭುಜ್ಯುವನ್ನು ಕರೆಯುವಾಗ ತುಗ್ರ್ಯನೆಂಬ ಹೆಸರು ಋ. ಸಂ. ೮-೩-೨೩; ೮-೭೪-೧೪; ಎಂಬ ಋಕ್ಕುಗಳಲ್ಲಿಯೂ ತೌಗ್ರ್ಯನೆಂಬ

ಹೆಸರು ೧-೧೧೭-೧೫; ೧-೧೧೮-೬; ೧-೧೮೨-೫; ೧-೧೮೨-೬; ೭-೫-೨೨; ೧೦-೩೯-೪ ಎಂಬ ಋಕ್ಕು ಗಳಲ್ಲಿಯೂ ಇರುವುದು. ಋ. ಸಂ. ೬-೨೦-೮; ೬-೨೬-೪; ೧೦-೪೯-೪ ಎಂಬ ಋಕ್ಕುಗಳಲ್ಲಿ ಹೇಳಿರುವ ತುಗ್ರನು ಬೇರೆ ವ್ಯಕ್ತಿಯಾಗಿರಬೇಕು. ಏಕೆಂದರೆ ಇವನು ಇಂದ್ರನ ಶತ್ರುವೆಂದು ಅಲ್ಲಿ ಹೇಳಿರುತ್ತೆ.

**ಭುಜ್ಯುಂ**—ಭುಜ್ಯುವೆಂಬುವನು ತುಗ್ರ ಎಂಬುವನ ಪುತ್ರನೆಂದೂ ಇವನು ಸಮುದ್ರಮಧ್ಯದಲ್ಲಿ (ಹಡಗಿನ ನಾಶದಿಂದ) ಮುಳುಗಿಹೋಗುತ್ತಿರುವಾಗ ಅಶ್ವಿನೀದೇವತೆಗಳು ಇವನನ್ನು ರಕ್ಷಿಸಿ ಕರೆತಂದರೆಂದೂ ಋಗ್ವೇದದಲ್ಲಿ ಅನೇಕ ಕಡೆಗಳಲ್ಲಿ ಹೇಳಿದೆ—

**ಯಾಭಿರಂತಕಂ ಜಸಮಾನಮಾರಣೇ ಭುಜ್ಯುಂ ಯಾಭಿರವ್ಯಥಿಭಿರ್ಜಿಜಿನ್ವಥುಃ ।**

(ಋ. ಸಂ. ೧-೧೧೨-೬)

ಎಂಬ ಋಕ್ಕಿನಲ್ಲಿ—**ಭುಜ್ಯುಂ ಸರ್ವಸ್ಯ ಪಾಲಕಮೇತತ್ಸಂಜ್ಞಂ ಸಮುದ್ರಮಧ್ಯೇ ನಿಮಗ್ನಂ ತುಗ್ರಸ್ಯ ಪುತ್ರಂ ರಾಜರ್ಷಿಂ** ಎಂದರೆ ಸರ್ವರನ್ನೂ ಕಾಪಾಡತಕ್ಕ ತುಗ್ರನೆಂಬ ರಾಜನ ಮಗನಾದ ಭುಜ್ಯುವೆಂಬ ರಾಜರ್ಷಿಯು ಸಮುದ್ರಮಧ್ಯದಲ್ಲಿ ಮುಳುಗಿಹೋಗುತ್ತಿರುವಾಗ ಅಶ್ವಿನೀದೇವತೆಗಳು ರಕ್ಷಿಸಿದರೆಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು.

**ಯಾಭಿಃ ಶಂತಾತೀ ಭವಥೋ ದದಾಶುಷೇ ಭುಜ್ಯುಂ ಯಾಭಿರವಥೋ ಯಾಭಿರಧ್ರಿಗುಂ ।**

(ಋ. ಸಂ. ೧-೧೧೨-೨೦)

ಈ ಋಕ್ಕಿನಲ್ಲಿಯೂ ಸಹ—**ಭುಜ್ಯುಂ ತುಗ್ರಸ್ಯ ಪುತ್ರಮವಥಃ** ತುಗ್ರನ ಪುತ್ರನಾದ ಭುಜ್ಯುವನ್ನು ಕಾಪಾಡಿದಿರಿ ಎಂದು ಹೇಳಿರುವುದು.

**ಯುವಂ ತುಗ್ರಾಯ ಪೂರ್ವ್ಯೇಭಿರೇವೈಃ ಪುನರ್ಮನ್ಯಾವಭವತಂ ಯುವಾನಾ ।**
**ಯುವಂ ಭುಜ್ಯುಮರ್ಣಸೋ ನಿಃಸಮುದ್ರಾದ್ವಿಭಿರೂಹಥುರೃಜ್ರೇಭಿರಶ್ವೈಃ ॥**

(ಋ. ಸಂ. ೧-೧೧೭-೧೪)

ಇಲ್ಲಿಯೂ—**ಯುವಾಂ ಸಮುದ್ರಮಧ್ಯೇ ಸೇನಯಾ ಸಹ ನಿಮಗ್ನಂ ಭುಜ್ಯುಂ ತುಗ್ರಸ್ಯ ಪುತ್ರಮರ್ಣ ಸೋಽರ್ಣಸ್ವತಃ ಪ್ರೌಢೋದಕಯುಕ್ತಾತ್ಸಮುದ್ರಾದಂಬುರಾಶೇಃ ಸಕಾಶಾತ್ ಋಜ್ರೇಭಿಃ ಶೀಘ್ರಗತಿಯುಕ್ತೈರಶ್ವೈಶ್ಚ ನಿರೂಹಥುಃ ನಿರ್ಗಮಯ್ಯ ಪಿತೃಸಮೀಪಂ ಪ್ರಾಪಿತವಂತೌ ॥** ಅಶ್ವಿನೀದೇವತೆಗಳಾದ ನೀವು ಸಮುದ್ರಮಧ್ಯದಲ್ಲಿ ತನ್ನ ಸೇನೆಯೊಡನೆ ಮುಳುಗಿಹೋಗುತ್ತಿರುವ ತುಗ್ರನ ಪುತ್ರನಾದ ಭುಜ್ಯುವೆಂಬ ರಾಜಪುತ್ರನನ್ನು ಅಗಾಧವಾದ ಸಮುದ್ರದಿಂದ ಮುಳುಗದಂತೆ ಕಾಪಾಡಿ ವೇಗಗಮನವುಳ್ಳ ಅಶ್ವಗಳಿಂದ (ಅಶ್ವಗಳನ್ನು ಕಟ್ಟಿದ ರಥದಿಂದ) ಕರೆದುಕೊಂಡು ಬಂದು ಅವನ ತಂದೆಯ ಸಮೀಪಕ್ಕೆ ಬಿಟ್ಟಿರಿ ಎಂದು ಹೇಳಿರುವುದು.

**ಯುವಂ ಭುಜ್ಯುಂ ಭುರಮಾಣಂ ವಿಭಿರ್ಗತಂ ಸ್ವಯುಕ್ತಿಭಿರ್ನಿವಹಂತಾ ಪಿತೃಭ್ಯ ಆ ||**

(ಋ. ಸಂ. ೧-೧೧೯-೪)

**ತಾ ಭುಜ್ಯುಂ ವಿಭಿರದ್ಭ್ಯಃ ಸಮುದ್ರಾತ್ತುಗ್ರಸ್ಯ ಸೂನುಮೂಹಥೂ ರಜೋಭಿಃ |**

(ಋ. ಸಂ. ೬-೬೨-೬)

**ಉ ತ್ಯಂ ಭುಜ್ಯುಮಶ್ವಿನಾ ಸಖಾಯೋ ಮಧ್ಯೇ ಜಹುರ್ದುರೇವಾಸಃ ಸಮುದ್ರೇ |**

(ಋ. ಸಂ. ೭-೬೮-೭)

**ಯುವಂ ಭುಜ್ಯುಮವವಿದ್ಧಂ ಸಮುದ್ರ ಉದೂಹಥುರರ್ಣಸೋ ಅಸ್ರಿಧಾನೈಃ |**

(ಋ. ಸಂ. ೭-೬೯-೭)

**ಯುವಂ ಹ ಭುಜ್ಯುಂ ಯುವಮಶ್ವಿನಾ ವಶಂ ಯುವಂ ಶಿಂಜಾರಮುಶನಾಮುಪಾರಥುಃ |**

(ಋ. ಸಂ. ೧೦-೪೦-೭)

**ಭುಜ್ಯುಮಂಹಸಃ ಪಿಪೃಥೋ ನಿರಶ್ವಿನಾ ಶ್ಯಾವಂ ಪುತ್ರಂ ವಧ್ರಿಮತ್ಯಾ ಅಜಿನ್ವತಂ |**

(ಋ. ಸಂ. ೧೦-೬೫-೧೨)

**ಯುವಂ ಭುಜ್ಯುಂ ಸಮುದ್ರ ಆ ರಜಸಃ ಪಾರ ಈಂಖಿತಂ |**

(ಋ. ಸಂ. ೧೦-೧೪೩-೫)

ಈ ಋಕ್ಕುಗಳಲ್ಲಿಯೂ ಅಶ್ವಿನೀದೇವತೆಗಳು ತುಗ್ರಪುತ್ರನಾದ ಭುಜ್ಯುವನ್ನು ಸಮುದ್ರದಲ್ಲಿ ಮುಳುಗದಂತೆ ಕಾಪಾಡಿದರೆಂಬ ಅರ್ಥವೇ ವಿವರಿಸಲ್ಪಟ್ಟಿರುವುದು.

ಸ್ಕಂದಸ್ವಾಮಿಗಳು ಈ ಇತಿಹಾಸವನ್ನು ಇಲ್ಲಿ ಹೇಳಿರುವುದು ಎಂದು ವಿವರಿಸಿ—

**ಉತತ್ಯಂ ಭುಜ್ಯುಮಶ್ವಿನಾ ||** (ಋ. ವೇ. ೭-೬೮-೭)

ಎಂಬ ಋಕ್ಕಿನಲ್ಲಿಯೂ,

**ಯಾಭಿರಂತಕಂ ಜಸಮಾನಮಾರಣೇ ಭುಜ್ಯುಂ ಯಾಭಿರವ್ಯಥಿಭಿರ್ಜಿಜಿನ್ವಥುಃ |**
**ಯಾಭಿಃ ಕರ್ಕಂಧುಂ ವಯ್ಯಂ ಚ ಜಿನ್ವಥಸ್ತಾಭಿರೂ ಷು ಊತಿಭಿರಶ್ವಿನಾಗತಂ ||**

(ಋ. ಸಂ. ೧-೧೧೨-೬)

**ಯಾಭಿಶ್ಶಂತಾತೀ ಭವಥೋ ದದಾಶುಷೇ ಭುಜ್ಯುಂ ಯಾಭಿರವಥೋ ಯಾಭಿರಧ್ರಿಗುಂ |**
**ಓಮ್ಯಾವತೀಂ ಸುಭರಾಮೃತಸ್ತುಭಂ ತಾಭಿರೂಷು ಊತಿಭಿರಶ್ವಿನಾ ಗತಂ ||**

(ಋ. ಸಂ. ೧-೧೧೨-೨೦)

ಎಂಬ ಈ ಋಕ್ಕುಗಳನ್ನು ಉದಹರಿಸಿರುವರು.

**ತುಗ್ರಃ—ತುಗ್ರ ಇತಿ ಸೋಽಯಮಿತ್ಯಭಿಸಂಬಂಧಾತ್ ಪಿತೃಶಬ್ದೇನೇದಂ ಪುತ್ರಸ್ಯಾಭಿಧಾನಂ ।** ಈ ಮಂತ್ರದಲ್ಲಿ ತುಗ್ರ ಎಂಬ ಪದವು ತುಗ್ರಪುತ್ರನಾದ ಭುಜ್ಯುವೆಂಬುದಕ್ಕೆ ಪರ್ಯಾಯ ಪರವಾಗಿ ಪ್ರಯುಕ್ತವಾಗಿರುವುದು. ಪ್ರತ್ಯಭಿಜ್ಞೆಯಲ್ಲಿ ಸೋಽಯಂ ಎಂದು ವ್ಯವಹಾರವು ಇರುವಂತೆ, ಪಿತಾಪುತ್ರರ ಅಭೇದಾಶ್ರಯದಿಂದ ಪಿತೃವಾಚಕವಾದ ತುಗ್ರಶಬ್ದದಿಂದಲೇ ಪುತ್ರನಾದ ಭುಜ್ಯುವನ್ನೂ ಇಲ್ಲಿ ತುಗ್ರಪದದಿಂದಲೇ ಪರಾಮರ್ಶಮಾಡಿರುತ್ತದೆ ಎಂದು ಸ್ಕಂದಸ್ವಾಮಿಗಳ ವ್ಯಾಖ್ಯಾನವು ಇರುತ್ತದೆ. ತುಗ್ರಪುತ್ರನೆಂದು ಅರ್ಥ. ಇದು ಭುಜ್ಯು ಎಂಬ ಪದಕ್ಕೆ ವಿಶೇಷಣ ವಾಗಿರುವಕಾರಣ ಭುಜ್ಯುವು ತುಗ್ರಪುತ್ರನಾಗಿರುವನು.

**ಉದಮೇಘೇ—ಉದಕೈರ್ಮಿಹ್ಯತೇ ಸಿಚ್ಯತೇ ಇತಿ ಉದಮೇಘಃ ಸಮುದ್ರಃ** ಉದಕಗಳಿಂದ ಸಿಂಪಡಿಸಲ್ಪಟ್ಟಿರುವುದರಿಂದ ಉದಮೇಘ ಶಬ್ದಕ್ಕೆ ಸಮುದ್ರವು ಎಂದು ಅರ್ಥವು.

**ರಯಿಂ ನ—** ರಯಿಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨-೧೪) ಮತ್ತು ಇಪ್ಪತ್ತೆಂಟು ಧನನಾಮಗಳಲ್ಲಿ ಪಠಿತವಾಗಿರುವುದು. ಮತ್ತು—

**ಸ ಚ ಪುರಾ ಚ ಸದನಂ ರಯೀಣಾಂ ಜಾತಸ್ಯ ಚ ಜಾಯಮಾನಸ್ಯ ಚ ಕ್ಷಾಂ ।**
**ಸತಶ್ಚ ಗೋಪಾಂ ಭವತಶ್ಚ ಭೂರೇರ್ದೇವಾ ಅಗ್ನಿಂ ಧಾರಯನ್ ದ್ರವಿಣೋದಾಂ ॥**
(ಋ. ಸಂ. ೧-೯೬-೭)

ಈ ಋಕ್ಕನ್ನು ನಿರುಕ್ತಕಾರರು ಉದಾಹರಣೆಕೊಟ್ಟು, **ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** (ನಿ. ೪-೧೭) ರಾ ದಾನೇ ಎಂಬ ದಾನಾರ್ಥಕವಾದ ರಾ ಧಾತುವಿನಿಂದ ನಿಷ್ಪನ್ನವಾದ ರಯಿಶಬ್ದವು ಧನವೆಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥವನ್ನು ವಿವರಿಸಿರುವರು.

**ಮಮೃವಾನ್—** ಮರಣೋನ್ಮುಖನಾದವನು ಧನದ ವಿಷಯದಲ್ಲಿ ತನಗೆ ಅತ್ಯಂತ ಆಸೆಯು ಇದ್ದರೂ ಧನವನ್ನು ಬಿಟ್ಟು ಸಾಯುವಂತೆ ತುಗ್ರರಾಜನು ತನ್ನ ಮಗನಾದ ಭುಜ್ಯುವನ್ನು ಬಹು ಕಷ್ಟದಿಂದ ಸಮುದ್ರ ಪ್ರಯಾಣಕ್ಕೆ ಕಳುಹಿಸಿದನು ಎಂದಭಿಪ್ರಾಯವು.

**ಆತ್ಮನ್ವತೀಭಿಃ—ಆತ್ಮೀಯಾಭಿಃ ಯದ್ವಾ ಧೃತಿರಾತ್ಮಾ ಧಾರಣಾವತೀಭಿರಿತ್ಯರ್ಥಃ ।** ಅಶ್ವಿನೀ ದೇವತೆಗಳು ತಮ್ಮದಾಗಿರುವ ನಾವೆಗಳಿಂದ ಭುಜ್ಯುವನ್ನು ವಿಪತ್ತಿನಿಂದ ರಕ್ಷಿಸಿದರು ಎಂದೂ, ಅಥವಾ ಆತ್ಮಶಬ್ದಕ್ಕೆ ಧೃತಿ ಅಥವಾ ಧೈರ್ಯವೆಂದು ಅರ್ಥವಾದಕಾರಣ ವಿಪತ್ತಿಗೆ ಸಿಕ್ಕಿದ ಭುಜ್ಯುವು ಎದೆಗೆಡದಂತೆ ಅವನ ಮನಸ್ಸಿಗೆ ಧೈರ್ಯವನ್ನುಂಟುಮಾಡಿ ನಾವೆಗಳಲ್ಲಿ ಕೂರಿಸಿಕೊಂಡು ರಕ್ಷಿಸಿದರು ಎಂದು ಅರ್ಥ.

**ಅಂತರಿಕ್ಷಪ್ರುದ್ಭಿಃ—** ಅಶ್ವಿನೀದೇವತೆಗಳ ನಾವೆಗಳು ಬಹಳ ನಿರ್ಮಲವಾಗಿ ಇರುವವುಗಳಾದುದರಿಂದಲೂ ಬಹಳ ಹಗುರವಾಗಿರುವುದರಿಂದಲೂ ನೀರಿನ ಮೇಲುಗಡೆಯಲ್ಲಿಯೇ ಸಂಚರಿಸುವವುಗಳಾಗಿದ್ದುವು.

**ಅಪೋದಕಾಭಿಃ-ಸುಶ್ಲಿಷ್ಟತ್ವಾತ್ ಅಪಗತೋದಕಾಭಿಃ ಅಪ್ರವಿಷ್ಟೋದಕಾಭಿರಿತ್ಯರ್ಥಃ**॥ ಕೊಂಚವೂ ರಂಧ್ರವು ಬಿಡದಂತೆ ಚೆನ್ನಾಗಿ ನಾವೆಯನ್ನು ನಿರ್ಮಿಸಿರುವುದರಿಂದ ನೀರು ಸ್ವಲ್ಪವೂ ನಾವೆಯೊಳಗೆ ಬರುತ್ತಿರಲಿಲ್ಲವೆಂದು ಅರ್ಥ. ಈ ಮೂರು ವಿಶೇಷಣಗಳಿಂದಲೂ ಅಶ್ವಿನೀದೇವತೆಗಳ ನಾವೆಯ (ಉತ್ತಮತ್ವವು) ಇರತಕ್ಕ ಸ್ಥಿತಿಯು ವ್ಯಕ್ತವಾಗುವುದು. ಮತ್ತು ಈ ಋಕ್ಕಿನ ಮುಂದಿನ ಮಂತ್ರವೂ ಅಶ್ವಿನೀದೇವತೆಗಳ ನಾವೆಯ ವರ್ಣನಾಪರವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಉದಮೇಘೇ**—ಉದಕೈರ್ಮಿಹ್ಯತೇ ಇತಿ ಉದಮೇಘಃ. ಮಿಹ ಸೇಚನೇ. ಧಾತು. ಕರ್ಮಣಿಯಲ್ಲಿ ಘಞ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ನ್ಯಙ್ಕ್ವಾದಿಯಲ್ಲಿ ಸೇರಿರುವುದರಿಂದ **ನ್ಯಙ್ಕ್ವಾದೀನಾಂ ಚ** (ಪಾ. ಸೂ. ೭-೩-೫೩) ಎಂಬುದರಿಂದ ಕುತ್ವ ಬರುತ್ತದೆ. ಆಂತರತಮ್ಯದಿಂದ ಹಕಾರಕ್ಕೆ ಘಕಾರಾದೇಶ. **ಉದಕಸ್ಯೋದಃ ಸಂಜ್ಞಾಯಾಂ** (ಪಾ. ಸೂ. ೬-೩-೫೭) ಎಂಬುದರಿಂದ ಸಂಜ್ಞಾತೋರುವಾಗ ಉದಕಶಬ್ದಕ್ಕೆ ಉದಾದೇಶ. **ಥಾಥಘಞ್ಕ್ತಾ**—(ಪಾ. ಸೂ. ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ಮಮೃವಾನ್**—ಮೃಙ್ ಪ್ರಾಣತ್ಯಾಗೇ. ಧಾತು. ಇದಕ್ಕೆ ಲಿಟ್ ವಿವಕ್ಷಾಮಾಡಿದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸು ಆದೇಶ. **ಕೃಸೃಭೃ**—(ಪಾ. ಸೂ. ೭-೨-೧೩) ಸೂತ್ರದಿಂದ ನಿಯಮಮಾಡಿದುದರಿಂದ ಇಡಾಗಮ ಪ್ರಾಪ್ತವಾದರೂ **ವಸ್ವೇಕಾಜಾದ್ಘಸಾಂ** (ಪಾ. ಸೂ. ೭-೨-೬೭) ಎಂಬುದರಿಂದ ಪುನಃ ನಿಷೇಧ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಉರತ್** (ಪಾ. ಸೂ. ೭-೪-೬೬) ಎಂಬುದರಿಂದ ಅಭ್ಯಾಸಕ್ಕೆ ಅತ್ವ ಬಂದಾಗ ಆದಿಹಲ್‌ಶೇಷ. ಪ್ರತ್ಯಯ ಕಿತ್ತಾದುದರಿಂದ ಧಾತುವಿನ ಋಕಾರಕ್ಕೆ ಗುಣ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯಚಾ**—ಸೂತ್ರದಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ. ಸಂಯೋಗಾಂತ ಲೋಪದಿಂದ ಸಕಾರಲೋಪ. ಇದು ಅಸಿದ್ಧವಾದುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ.

**ಅಹಾಃ**—ಓಹಾಕ್ ತ್ಯಾಗೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಸೂತ್ರದಿಂದ ಇಕಾರಲೋಪ. **ಚ್ಲೇಃಸಿಚ್** ಸೂತ್ರದಿಂದ ಚ್ಲಿಗೆ ಸಿಚಾದೇಶ. **ಆಗಮಾನುಶಾಸನಮನಿತ್ಯಂ** ಎಂಬ ಪರಿಭಾಷೆಯಿಂದ **ಯಮರಮ**—(ಪಾ. ಸೂ. ೭-೨-೭೩) ಎಂಬುದರಿಂದ ಸಕ್ ಈಟಾಗಮಗಳು ಬರುವುದಿಲ್ಲ. **ಬಹುಲಂ ಛಂದಸಿ** ಎಂಬುದರಿಂದ ಸಿಚ್ಚಿಗೆ ಇಡಾಗಮ ಬರುವುದಿಲ್ಲ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಅಪೃಕ್ತ ಪ್ರತ್ಯಯಕ್ಕೆ ಲೋಪ. ಸಿಚ್ಚಿನ ಸಕಾರಕ್ಕೆ ರುತ್ವ ವಿಸರ್ಗ. ಅಂಗಕ್ಕೆ ಅಡಾಗಮ. ಅಹಾಃ ಎಂದು ರೂಪವಾಗುತ್ತದೆ. ಅಥವಾ **ಮಂತ್ರೇಘಸಹ್ವರ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ಅದು ಲುಕ್ಕಾದುದರಿಂದ ಇಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಊಹಥುಃ**—ವಹ ಪ್ರಾಪಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ ಅಥುಸಾದೇಶ. **ಅಸಂಯೋಗಾಲ್ಲಿಟ್‌ಕಿತ್** ಎಂಬುದರಿಂದ ಅದಕ್ಕೆ ಕಿತ್ವಾತಿದೇಶವಿರುವುದರಿಂದ **ವಚಿಸ್ವಪಿಯಜಾದೀನಾಂ ಕಿತಿ**

(ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಧಾತುವಿಗೆ ದ್ವಿತ್ವಾದಿ. ತಿಙಂತನಿಘಾತಸ್ವರ ಬರುತ್ತದೆ.

**ನೌಭಿಃ**—ನೌ ಶಬ್ದ. ತೃತೀಯಾ ಬಹುವಚನಾಂತರೂಪ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಆತ್ಮನ್ವತೀಭಿಃ**—ಆತ್ಮನ್ ಶಬ್ದದ ಮೇಲೆ **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ಮಾದುಪಧಾಯಾಶ್ಚ**–(ಪಾ. ಸೂ. ೮-೨-೯) ಎಂಬುದರಿಂದ ಅದುಪಧೆಯು ಪರವಾದುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ. **ಅನೋನುಟ್** (ಪಾ. ಸೂ. ೮-೨-೧೬) ಎಂಬುದರಿಂದ ಮತುಪಿಗೆ ನುಟಾಗಮ. ಟಿತ್ತಾದುದರಿಂದ ಆದ್ಯವಯವವಾಗುತ್ತದೆ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ನುಟಿನ ಪರವಾದುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ತೃತೀಯಾ ಬಹುವಚನಾಂತರೂಪ.

**ಅಂತರಿಕ್ಷಪ್ರುದ್ಭಿಃ**—ಪ್ರುಙ್ ಗತೌ. ಧಾತು **ಕ್ವಿಪ್‌ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. **ಗತಿಕಾರಕೋಪಪದಾತ್‌ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ತಿಸ್ರಃ ಕ್ಷಪಸ್ತ್ರಿರಹಾತಿವ್ರಜದ್ಭಿರ್ನಾಸತ್ಯಾ ಭುಜ್ಯುಮೂಹಥುಃ ಪತಂಗೈಃ ।
ಸಮುದ್ರಸ್ಯ ಧನ್ವನ್ನಾರ್ದ್ರಸ್ಯ ಪಾರೇ ತ್ರಿಭೀ ರಥೈಃ ಶತಪದ್ಭಿಃ ಷಳಶ್ವೈಃ ॥ ೪ ॥

॥ ಪದಪಾಠಃ ॥

ತಿಸ್ರಃ । ಕ್ಷಪಃ । ತ್ರಿಃ । ಅಹಾ । ಅತಿವ್ರಜತ್ಽಭಿಃ । ನಾಸತ್ಯಾ । ಭುಜ್ಯುಂ । ಊಹಥುಃ । ಪತಂಗೈಃ ।

ಸಮುದ್ರಸ್ಯ । ಧನ್ವನ್ । ಆರ್ದ್ರಸ್ಯ । ಪಾರೇ । ತ್ರಿಽಭಿಃ । ರಥೈಃ । ಶತಪತ್ಽಭಿಃ । ಷಟ್ಽಅಶ್ವೈಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾ ಸೇನಯಾ ಸಹೋದಕೇ ನಿಮಗ್ನಂ ಭುಜ್ಯುಂ ತಿಸ್ರಃ ಕ್ಷಪಸ್ತ್ರಿಸಂಖ್ಯಾಕಾ ರಾತ್ರೀಸ್ತ್ರಿರಹಾ ತ್ರಿವಾರಮಾವೃತ್ತಾನ್ಯಹಾನಿ ಚಾತಿವ್ರಜದ್ಭಿರತಿಕ್ರಮ್ಯ ಗಚ್ಛದ್ಭಿರೇತಾವಂತಂ ಕಾಲಮತಿ-ವ್ಯಾಪ್ಯ ವರ್ತಮಾನೈಃ ಪತಂಗೈಃ ಪತದ್ಭಿಸ್ತ್ರಿಭಿಸ್ತ್ರಿಸಂಖ್ಯಾಕೈ ರಥೈರೂಹಥುಃ । ಯುವಾಮೂಢವಂತಾ । ಕ್ವೇತಿ ಚೇತ್ ಉಚ್ಯತೇ । ಸಮುದ್ರಸ್ಯಾಂಬುರಾಶೇರ್ಮಧ್ಯೇ ಧನ್ವನ್ ಧನ್ವನಿ ಜಲವರ್ಜಿತೇ ಪ್ರದೇಶೇ । ಆರ್ದ್ರಸ್ಯೋದಕೇನಾರ್ದ್ರೀಭೂತಸ್ಯ ಸಮುದ್ರಸ್ಯ ಪಾರೇ ತೀರದೇಶೇ ಚ । ಕಥಂಭೂತೈ ರಥೈಃ । ಶತಪದ್ಭಿಃ । ಶತಸಂಖ್ಯಾಕೈಶ್ಚಕ್ರಲಕ್ಷಣೈಃ ಪಾದೈರುಪೇತೈಃ । ಷಳಶ್ವೈಃ । ಷಡ್ಭಿರಶ್ವೈರ್ಯುಕ್ತೈಃ ॥ ತಿಸ್ರಃ । ತ್ರಿಚತುರೋಃ ಸ್ತ್ರಿಯಾಮಿತಿ ತ್ರಿಶಬ್ದಸ್ಯ ತಿಸ್ರಾದೇಶಃ । ಸ ಚಾಂತೋದಾತ್ತಃ । ಅಚಿ ರ ಋತ ಇತಿ ರೇಫಾದೇಶ ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ಕ್ಷಪಃ । ವಿಭಕ್ತ್ಯಂತಸ್ಯ ಛಾಂದಸಂ ಹ್ರಸ್ವತ್ವಂ । ಯದ್ವಾ । ಶಸ್ಯಾತ ಇತಿ ಯೋಗವಿಭಾಗಾದಧಾತೋರಪ್ಯಾಕಾರಲೋಪಃ । ಅಹಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಪತಂಗೈಃ । ಪತ್ಲೃ ಗತೌ । ಪತೇರಂಗಚ್ । ಉ. ೧-೧೧೮ । ಧನ್ವನ್ । ಧವಿರ್ಗತ್ಯರ್ಥಃ । ಇದಿತ್ವಾನ್ನುಮ್ । ಕನಿನ್ಯುವೃಷೀತ್ಯಾದಿನಾ ಕನಿನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಶತಪದ್ಭಿಃ । ಶತಂ ಪಾದಾ ಯೇಷಾಂ । ಸಂಖ್ಯಾಸುಪೂರ್ವಸ್ಯೇತಿ ಪಾದಶಬ್ದಸ್ಯಾಂತ್ಯ-ಲೋಪಃ ಸಮಾಸಾಂತಃ । ಅಯಸ್ಮಯಾದಿತ್ವೇನ ಭತ್ವಾತ್ಪಾದಃ ಪದಿತಿ ಪದ್ಭಾವಃ । ಯದ್ವಾ । ಪಾದಸಮಾನಾರ್ಥಃ ಪಚ್ಛಬ್ದಃ ಪ್ರಕೃತ್ಯಂತರಂ ದ್ರಷ್ಟವ್ಯಂ ॥

॥ ಪ್ರತಿಪದಾರ್ಥ ॥

ಹೇ ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಭುಜ್ಯುಂ—(ಸೇನೆಯೊಡನೆ ನೀರಿನಲ್ಲಿ ಮುಳುಗಿದ್ದ) ಭುಜ್ಯುವನ್ನು । ತಿಸ್ರಃ ಕ್ಷಪಃ—ಮೂರು ರಾತ್ರಿ (ಮತ್ತು) । ತ್ರಿರಹಾ—ಮೂರು ಹಗಲುಗಳನ್ನು । ಅತಿ ವ್ರಜದ್ಭಿಃ—ಮೀರಿ ಹೋಗುತ್ತಿರುವ । ಪತಂಗೈಃ—ವೇಗವಾದ ಗಮನವುಳ್ಳ । ಶತಪದ್ಭಿಃ—ನೂರು

(ಚಕ್ರರೂಪವಾದ) ಕಾಲುಗಳುಳ್ಳ । **ಷಳಶ್ವೈಃ**—ಆರು ಕುದುರೆಗಳನ್ನೂ ಕಟ್ಟಿದ್ದ । **ತ್ರಿಭಿಃ ರಥೈಃ**—ಮೂರು ರಥಗಳಿಂದ । **ಸಮುದ್ರಸ್ಯ**—ಸಮುದ್ರದ । **ಧನ್ವನ್**—ಜಲರಹಿತವಾದ ಪ್ರದೇಶದಲ್ಲಿಯೂ । **ಆರ್ದ್ರಸ್ಯ**—ಜಲಾರ್ದ್ರವಾದ । **ಸಮುದ್ರಸ್ಯ**—ಸಮುದ್ರದ । **ಪಾರೇ**—ತೀರಪ್ರದೇಶದಲ್ಲಿಯೂ । **ಊಹಥುಃ**—ಕರೆದು ಕೊಂಡು ಹೋದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮೂರು ಹಗಲು ಮೂರು ರಾತ್ರಿಗಳ ಕಾಲ ಏಕಪ್ರಕಾರವಾಗಿ ವೇಗವಾಗಿ ಹೋಗುತ್ತಿರುವ ನೂರು ಚಕ್ರಗಳುಳ್ಳ ಮತ್ತು ಆರು ಕುದುರೆಗಳುಳ್ಳ. ಮೂರು ರಥಗಳಲ್ಲಿ, (ಸೇನಾಸಮೇತನಾಗಿ ಮುಳುಗಿದ್ದ) ಭುಜ್ಯುವನ್ನು, ಸಮುದ್ರಸಮೀಪದಲ್ಲಿ ಜಲರಹಿತವಾದ ಪ್ರದೇಶಗಳಲ್ಲಿಯೂ, ಸಮುದ್ರದತೀರಪ್ರದೇಶ ಗಳಲ್ಲಿಯೂ ಕರೆದುಕೊಂಡುಹೋದಿರಿ.

## English Translation

Three nights and three days, Nasatyas, have you conveyed Bhujyu in three rapid, revolving cars, having a hundred wheels, and drawn by six horses, along the dry shore of the sea.

॥ ವಿಶೇಷವಿಷಯಗಳು ॥

**ತಿಸ್ರಃ ಕ್ಷಪಃ**—**ತ್ರಿಸಂಖ್ಯಾಕಾ ರಾತ್ರೀಃ । ಶ್ಯಾವೀ, ಶರ್ವರೀ** ಎಂಬ ಇಪ್ಪತ್ತುಮೂರು ರಾತ್ರಿನಾಮಗಳಲ್ಲಿ ಕ್ಷಪಶಬ್ದವು (ನಿ. ೨-೧೮) ಉಕ್ತವಾಗಿರುವುದರಿಂದ ಕ್ಷಪಃ ಎಂದರೆ ರಾತ್ರಿ ಎಂದು ಅರ್ಥ.

**ಪತಙ್ಗೈಃ**—**ಪತದ್ಭಿಃ । ಅತ್ಯಃ ಹಯಃ** ಎಂಬಿವೇ ಮೊದಲಾದ ಇಪ್ಪತ್ತಾರು ಅಶ್ವನಾಮಗಳಲ್ಲಿ (ನಿ. ೨-೨೭) ಪತಂಗಶಬ್ದವು ಪಠಿತವಾಗಿರುವುದರಿಂದ ಪತಂಗಶಬ್ದಕ್ಕೆ ಅಶ್ವವೆಂದು ಅರ್ಥವಾದರೂ ಸಾಯಣರು **ಪತದ್ಭಿಃ**—ಸಂಚಾರಮಾಡುವ ಎಂದು ಅರ್ಥವನ್ನು ಹೇಳಿರುತ್ತಾರೆ.

**ಧನ್ವನ್**—**ಜಲವರ್ಜಿತೇ ಪ್ರದೇಶೇ. ಅಂಬರಂ ವಿಯತ್** ಮೊದಲಾದ ಹದಿನಾರು ಅಂತರಿಕ್ಷನಾಮಗಳಲ್ಲಿ ಧನ್ವಶಬ್ದವು (ನಿ ೨-೧೦) ಉಕ್ತವಾಗಿರುವುದರಿಂದ ಧನ್ವನ್ ಎಂದರೆ ಅಂತರಿಕ್ಷವೆಂದು ಅರ್ಥ. ಸಾಯಣಭಾಷ್ಯ ದಲ್ಲಿಯೂ, ಸ್ಕಂದಸ್ವಾಮಿಭಾಷ್ಯದಲ್ಲಿಯೂ **ನಿರುದಕಪ್ರದೇಶ**—ಎಂದು ಅರ್ಥಮಾಡಿರುತ್ತದೆ. ಯಾಸ್ಕರು-- **ಧನ್ವಾನ್ತರಿಕ್ಷಂ ಧನ್ವಂತ್ಯಸ್ಮಾದಾಪಃ ।** ಉದಕಗಳು ಇದರಿಂದ ಹೊರಗೆ ಹೊರಡುತ್ತವೆ. ಆದಕಾರಣ ಅಂತರಿಕ್ಷವು ಧನ್ವ ಎಂಬ ಹೆಸರಿನಿಂದ ಉಕ್ತವಾಗಿರುವುದು ಎಂದು ಅರ್ಥವನ್ನು ವಿವರಿಸಿ,

**ಯಃ ಪರಸ್ಯಾಃ ಪರಾವತಸ್ತಿರೋ ಧನ್ವಾತಿ ರೋಚತೇ । ಸ ನಃ ಪರ್ಷದತಿ ದ್ವಿಷಃ ॥**

(ಋ. ಸಂ. ೧೦-೧೮೭-೨)

ಎಂದು ಈ ಋಕ್ಕನ್ನು ಉದಹರಿಸಿರುವರು.

**ಸಮುದ್ರಸ್ಯ— ಅಂಬುರಾಶೇಃ ।** ಉದಕಗಳ ರಾಶಿಯು ಎಂದು ನಿರುಕ್ತಕಾರರು ಅರ್ಥಮಾಡಿ—

**ತತ್ರ ಸಮುದ್ರ ಇತ್ಯೇತತ್ ಪಾರ್ಥಿವೇನ ಸಮುದ್ರೇಣ ಸಂದಿಹ್ಯತೇ । ಸಮುದ್ರಃ ಕಸ್ಮಾತ್ ಸಮುತ್ ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ ಸಂಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ।** (ನಿ. ೨-೧೦)

ಎಂದು ಸಮುದ್ರಶಬ್ದಾರ್ಥವನ್ನು ವಿಮರ್ಶೆಮಾಡಿರುವರು. ಹದಿನಾರು ಅಂತರಿಕ್ಷಪರ್ಯಾಯ ಪದಗಳಲ್ಲಿ ಪೃಥಿವೀ ಎಂಬ ಪದವೂ ಸಮುದ್ರ ಎಂಬ ಪದವೂ ಉಕ್ತವಾಗಿರುವುದು. ಅದರಲ್ಲಿ ಸಮುದ್ರಶಬ್ದಕ್ಕೆ ಜಲರಾಶಿಯೆಂಬ ಅರ್ಥವು ರೂಢಿ ಇರುವುದರಿಂದ ಸಮುದ್ರವೆಂದರೆ ಅಂತರಿಕ್ಷವೇ, ಭೂಮಿಯೇ ಅಥವಾ ಸಮುದ್ರವೇ ಎಂದು ಸಂದೇಹಕ್ಕೆ ಆಸ್ಪದವಾಗಿರುವುದು. ಉದಕಗಳು ಇಲ್ಲಿ ಬಂದು ಸೇರುವವು, ಅಥವಾ, ಪ್ರಾಣಿಗಳು ಈ ನೀರಿನಲ್ಲಿ ಸಂತೋಷ ದಿಂದಿರುವವು, ಅಥವಾ ಅತಿಶಯವಾಗಿ ದ್ರವಿಸುತ್ತಿರುವುದು ಎಂಬ ನಾಲ್ಕು ವಿಧವಾದ ವಿವರಣೆಯಿಂದ ಸಮುದ್ರ ಎಂಬ ಶಬ್ದದ ಅರ್ಥವನ್ನು ನಿಶ್ಚಯಮಾಡಿ, ಇರುವರು ಸಮುದ್ರ ಶಬ್ದವು ಮೇಘವೆಂಬ ಅರ್ಥದಲ್ಲಿಯೂ ಇತರ ಕಡೆಯಲ್ಲಿ ಪ್ರಯುಕ್ತವಾಗಿರುತ್ತದೆ.

**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ।**

(ಋ. ಸಂ. ೧೦-೧೪೯-೧)

**ತಸ್ಯಾಃ ಸಮುದ್ರಾ ಅಧಿ ವಿ ಕ್ಷರಂತಿ ತೇನ ಜೀವಂತಿ ಪ್ರದಿಶಶ್ಚತಸ್ರಃ ।**

(ಋ. ಸಂ. ೧-೧೬೪-೪೨)

ಸಮುದಿತಾ ಸಮುದ್ರಃ ಮೇಘಃ, ಸಮುದ್ರಾ ಅಧಿವಿಕ್ಷರಂತಿ ವರ್ಷಂತಿ ಮೇಘಾಃ । ಮೇಘವು ಉದಯವಾಯಿತು ಎಂದರೆ ಅಂತರಿಕ್ಷದಲ್ಲಿ ಒಟ್ಟಾಗಿ ಸೇರಿತು. ಮೇಘಗಳು ಮಳೆಯನ್ನು ಸುರಿಸಿದವು ಎಂದು ಸಮುದ್ರ ಪದವು ಅಂತರಿಕ್ಷ ಮತ್ತು ಮೇಘ ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದು. ಇದರಂತೆ,

**ಮಹಸ್ಸಮುದ್ರಂ ವರುಣಸ್ತಿರೋ ದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಂ ।**

(ಋ. ಸಂ. ೯-೭೩-೩)

ಎಂಬಲ್ಲಿ ಸಮುದ್ರಶಬ್ದವು ಆದಿತ್ಯವಾಚಕವಾಗಿರುವುದು.

ಸಮುದ್ರ ಶಬ್ದಕ್ಕೆ ರೂಢಿ ಮತ್ತು ಅವಯವಾರ್ಥಗಳಿಂದ ಆದಿತ್ಯ, ಮೇಘ, ಜಲರಾಶಿ ಎಂಬ ಅರ್ಥಗಳು ಉಪಸ್ಥಿತವಾದರೆ ಒಂದೊಂದು ಕಡೆಯಲ್ಲಿ ಆಯಾಯ ಪ್ರಕರಣಕ್ಕನುಸಾರವಾಗಿ ಅರ್ಥವನ್ನು ಹೇಳಬೇಕಾಗುತ್ತದೆ. ಇಲ್ಲಿ ಯೋಗಾದ್ರೂಢಿರ್ಬಲೀಯಸೀ ಎಂಬ ನ್ಯಾಯದಿಂದ ಸಮುದ್ರ ಎಂದರೆ ಜಲರಾಶಿ ಎಂದು ಅರ್ಥ.

ಅಶ್ವಿನೀದೇವತೆಗಳು ತಮ್ಮ ಸೇನೆಯೊಡನೆ ಸಮುದ್ರದ ಮಧ್ಯದಲ್ಲಿ ನೀರಿನಲ್ಲಿ ಮುಳುಗುತ್ತಿರುವ ಭುಜ್ಯುವೆಂಬ ರಾಜಪುತ್ರನನ್ನು ಮೂರು ದಿನಗಳು (ಪೂರ್ಣವಾಗಿ) ಹಗಲು ರಾತ್ರಿಗಳೂ ಕೂಡ ಅವಿಚ್ಛಿನ್ನವಾಗಿ ಸಂಚಾರಮಾಡುವ ವೇಗಶಾಲಿಯಾದ ತಮ್ಮ ನಾವೆಗಳಿಂದ ನೀರಿನ ಸಂಬಂಧವಿಲ್ಲದಿರುವ ಮರುಭೂಮಿಯಹಾಗೆ ಇರುವ ಸಮುದ್ರದ

ದಡವನ್ನು ಸೇರುವಂತೆ ಸಹಾಯಮಾಡಿದರು. ಇವರ ರಥಕ್ಕೆ ಬಹಳ ಚಕ್ರಗಳಿದ್ದವೆಂದೂ ಆರು ಕುದುರೆಗಳನ್ನು ಕಟ್ಟಿದ್ದರೆಂದೂ ಇಲ್ಲಿ ಹೇಳಿದೆ. ಭುಜ್ಯುವಿನೊಡನೆ ಈ ಅಶ್ವಿನೀದೇವತೆಗಳು ಬರುವಾಗ ಇವರು ಮೂರು ಜನರ ಮೂರು ರಥಗಳು ದಡಕ್ಕೆ ಸುರಕ್ಷಿತವಾಗಿ ಬಂದವು ಎಂದು ಇಲ್ಲಿ ವರ್ಣಿಸಿರುತ್ತದೆ.

**ಶತಪದ್ಭಿಃ**-ಎಂಬ ಪದಕ್ಕೆ **ಶತಸಂಖ್ಯಾಕೈಃ ಚಕ್ರಲಕ್ಷಣೈಃ ಪಾದೈರುಪೇತೈಃ** । ನೂರು ಸಂಖ್ಯೆಗಳುಳ್ಳ (ಚಕ್ರಗಳೆಂಬ ಪಾದಗಳಿಂದ) ಚಕ್ರಗಳು ಅಶ್ವಿನೀದೇವತೆಗಳ ರಥಕ್ಕೆ ಇತ್ತು ಎಂದು ಸಾಯಣರು ವಿವರಿಸಿರುವರು. **ಶತಶಬ್ದಾತ್ರ ಬಹುನಾಮ ಸಾಮರ್ಥ್ಯಾಚ್ಚಾತ್ರ ಬಹುತ್ವೇ ವರ್ತತೇ । ಪಾದಶಬ್ದೋಽಪಿ ಚಕ್ರಪಾದವಚನಃ ತ್ರಿಚಕ್ರಪಾದೈರಿತ್ಯರ್ಥಃ।** ಶತ ಎಂಬ ಶಬ್ದವು ಇಲ್ಲಿ ಶಬ್ದಸಾಮರ್ಥ್ಯದಿಂದ ಬಹಳ ಎಂದು ಅರ್ಥವನ್ನು ಬೋಧಿಸುವುದು. ಪಾದ ಎಂಬ ಶಬ್ದವು ಚಕ್ರ ಎಂಬ ಅರ್ಥವನ್ನು ವಿವರಿಸುವುದು. ಆದ್ದರಿಂದ ಮೂರು ಚಕ್ರಗಳುಳ್ಳ ರಥವು ಎಂದು ಸ್ಕಂದಸ್ವಾಮಿಗಳು ಶತಪದ್ಭಿಃ ಎಂಬ ಪದಕ್ಕೆ ಅರ್ಥವನ್ನು ಹೇಳಿ—ಈ ಅರ್ಥವನ್ನು ವ್ಯಕ್ತಮಾಡುವ ಋಕ್ಕನ್ನು ಉದಾಹರಿಸಿರುವರು

**ಕ್ವ೧ ತ್ರೀ ಚಕ್ರಾ ತ್ರಿವೃತೋ ರಥಸ್ಯ ಕ್ವ೧ ತ್ರಯೋ ವಂಧುರೋ ಯೇ ಸನೀಳಾಃ ।**
**ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ ನಾಸತ್ಯೋಪಯಾಥಃ ॥**

(ಋ. ಸಂ. ೧-೩೪-೯)

ಇಲ್ಲಿ ಅಶ್ವಿನೀದೇವತೆಗಳ ರಥಕ್ಕೆ ಮೂರು ಚಕ್ರಗಳಿರುವವು ಎಂದು ವರ್ಣಿಸಿದೆ.

**ಭುಜ್ಯುಂ**—ಈ ಶಬ್ದದ ವಿವರಣೆಯು ಈ ಸೂಕ್ತದ ಮೂರನೆಯ ಋಕ್ಕಿನ ವಿಶೇಷ ವಿಷಯಗಳಲ್ಲಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ತಿಸ್ರಃ**—ತ್ರಿಶಬ್ದ. ಇದಕ್ಕೆ ಸ್ತ್ರೀತ್ವದಲ್ಲಿ ಜಸ್ ಪರವಾದಾಗ **ತ್ರಿಚತುರೋಃ ಸ್ತ್ರಿಯಾಂ ತಿಸೃ ಚತಸೃ** (ಪಾ. ಸೂ. ೭-೨-೯೯) ಎಂಬುದರಿಂದ ತಿಸ್ರಾದೇಶ. ಅದು ಅಂತೋದಾತ್ತವಾಗಿ ಬರುತ್ತದೆ. ಜಸಿ ಚ (ಪಾ. ಸೂ. ೭-೩-೧೦೯) ಎಂಬುದರಿಂದ ಗುಣವು ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ **ಅಚಿರ ಋತಃ** (ಪಾ. ಸೂ. ೭-೨-೧೦೦) ಎಂಬುದರಿಂದ ರೇಫಾದೇಶ ಬರುತ್ತದೆ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ **ಉದಾತ್ತಯಣೋಹಲ್‌-ಪೂರ್ವಾತ್** (ಪಾ. ಸೂ ೬-೧-೧೭೪) ಎಂಬುದರಿಂದ ಪರದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಕ್ಷಪಃ**—ಕ್ಷಪಾ ಎಂಬುದು ರಾತ್ರಿವಾಚಕ ಶಬ್ದ. ಆಕಾರಾಂತ ಸ್ತ್ರೀಲಿಂಗ. ಬಹುವಚನದಲ್ಲಿ ಕ್ಷಪಾಃ ಎಂದು ರೂಪವಾದಾಗ ವಿಭಕ್ತ್ಯಂತಕ್ಕೆ ಛಾಂದಸವಾಗಿ ಹ್ರಸ್ವ ಬರುತ್ತದೆ. ಅಥವಾ ಇದಕ್ಕೆ ಶಸ್ ಪರವಾದಾಗ **ಆತೋಧಾತೋಃ** (ಪಾ ಸೂ. ೬-೪-೧೪೦) ಎಂಬಲ್ಲಿ ಆತಃ ಎಂದು ಯೋಗವಿಭಾಗಮಾಡಿಕೊಂಡಿರುವುದರಿಂದ ಅಧಾತುವಾದರೂ ಇದರ ಆಕಾರಕ್ಕೆ ಲೋಪ ಬರುತ್ತದೆ. ಆಗ ಪ್ರಕ್ರಿಯೆಯಿಂದಲೇ ರೂಪಸಿದ್ಧವಾಗುತ್ತದೆ.

**ತ್ರಿಃ**—ತ್ರಿರಾವೃತ್ತಾನಿ ಎಂದು ಅರ್ಥವಿವಕ್ಷಾಮಾಡಿದಾದ **ದ್ವಿತ್ರಿಚತುರ್ಭ್ಯಃ ಸುಚ್** (ಪಾ. ಸೂ. ೫-೪-೧೮) ಎಂಬುದರಿಂದ ಸುಚ್ ಪ್ರತ್ಯಯ. ಅಲ್ಲಿ ಉಳಿಯುವ ಸಕಾರಕ್ಕೆ ರುತ್ವ ವಿಸರ್ಗ.

**ಅಹಾ**—ಅಹಾನಿ ಎಂದು ರೂಪವಾದಾಗ **ಶೇಶ್ಛಂದಸಿಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಅತಿವ್ರಜದ್ಭಿಃ**—ಅತಿಕ್ರಮ್ಯ ವ್ರಜಂತಃ ತೈಃ ವ್ರಜ ಗತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಅದುಪದೇಶದಲ್ಲಿರುವುದರಿಂದ ಇದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ನಾಸತ್ಯಾ**—ಸಂಬೋಧನೆಯಲ್ಲಿ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಪೂರ್ವ ಸವರ್ಣದೀರ್ಘ. ಪಾದಾದಿಯಲ್ಲಿರುವುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪತಙ್ಗೈಃ**—ಪತ್‌ಲೃ ಗತೌ. ಧಾತು. **ಪತೇರಙ್ಗಚ್** (ಉ. ಸೂ. ೧-೧೧೬) ಎಂಬುದರಿಂದ ಇದಕ್ಕೆ ಅಂಗಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಧನ್ವನ್**—ಧವಿ ಗತೌ ಧಾತು. **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. **ಕನಿನ್‌ಯುವೃಷಿ**—(ಉ. ಸೂ. ೧-೧೫೮) ಎಂಬುದರಿಂದ ಕನಿನ್ ಪ್ರತ್ಯಯ. ಧನ್ವನ್ ಶಬ್ದವಾಗುತ್ತದೆ. ಇದಕ್ಕೆ ಸಪ್ತಮೀ ವಿಭಕ್ತಿಪರವಾದಾಗ **ಸುಪಾಂ ಸುಲುಕ್**—ಪಾ. (ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಶತಪದ್ಭಿಃ**—ಶತಂ ಪಾದಾ ಯೇಷಾಮ್ ಶತಪಾದಃ। **ಸಂಖ್ಯಾ ಸುಪೂರ್ವಸ್ಯ** (ಪಾ. ಸೂ. ೫-೪-೧೪೦) ಎಂಬುದರಿಂದ ಪಾದಶಬ್ದಕ್ಕೆ ಅಂತ್ಯಲೋಪವು ಸಮಾಸಾಂತವಾಗಿ ಬರುತ್ತದೆ. ಇದಕ್ಕೆ ಭಿಸ್ ಪರವಾದಾಗ **ಅಯಸ್ಮಯಾದೀನಿ ಛಂದಸಿ** (ಪಾ. ಸೂ. ೧-೪-೨೦) ಎಂಬುದರಿಂದ ಭಸಂಜ್ಞಾ ಬರುವುದರಿಂದ **ಪಾದಃ ಪತ್** (ಪಾ. ಸೂ. ೬-೪-೧೩೦) ಎಂಬುದರಿಂದ ಪಾದ್ ಎಂಬುದಕ್ಕೆ ಪದ್ ಎಂಬ ಆದೇಶ. ಅಥವಾ ಪಾದ ಎಂಬ ಅರ್ಥವನ್ನೇ ಕೊಡತಕ್ಕ ಪದ್ ಎಂಬ ಬೇರೊಂದು ಶಬ್ದವೇ ಇದೆಯೆಂದು ಊಹಿಸಬೇಕು.

**ಷಡಶ್ವೈಃ**—ಷಟ್ ಅಶ್ವಾಃ ಯೇಷಾಂ ತೇ ಷಡಶ್ವಾಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೪ ॥



|| ಸಂಹಿತಾಪಾಠಃ ||

ಅನಾರಂಭಣೇ ತದವೀರಯೇಥಾಮನಾಸ್ಥಾನೇ ಅಗ್ರಭಣೇ ಸಮುದ್ರೇ ।
ಯದಶ್ವಿನಾ ಊಹಥುರ್ಭುಜ್ಯುಮಸ್ತಂ ಶತಾರಿತ್ರಾಂ ನಾವಮಾತಸ್ಥಿವಾಂಸಂ ॥ ೫ ॥

|| ಪದಪಾಠಃ ||

ಅನಾರಂಭಣೇ । ತತ್ । ಅವೀರಯೇಥಾಂ । ಅನಾಸ್ಥಾನೇ । ಅಗ್ರಭಣೇ । ಸಮುದ್ರೇ ।
ಯತ್ । ಅಶ್ವಿನೌ । ಊಹಥುಃ । ಭುಜ್ಯುಂ । ಅಸ್ತಂ । ಶತಽಅರಿತ್ರಾಂ । ನಾವಂ । ಆತಸ್ಥಿಽವಾಂಸಂ ॥ ೫ ॥

|| ಸಾಯಣಭಾಷ್ಯಂ ||

ಹೇ ಅಶ್ವಿನೌ ಅನಾರಂಭಣ ಆಲಂಬನರಹಿತೇ ಸಮುದ್ರೇ ತತ್ಕರ್ಮಾವೀರಯೇಥಾಂ । ವಿಕ್ರಾಂತಂ ಕೃತವಂತೌ ಯುವಾಂ । ಅನಾರಂಭಣತ್ವಮೇವ ಸ್ಪಷ್ಟೀಕರೋತಿ। ಅನಾಸ್ಥಾನೇ। ಆಸ್ಥೀಯತೇಽಸ್ಮಿನ್ನಿತ್ಯಾಸ್ಥಾನೋ ಭೂಪ್ರದೇಶಃ । ತದ್ರಹಿತೇ ಸ್ಥಾತುಮಶಕ್ಯೇ ಜಲ ಇತ್ಯರ್ಥಃ । ಅಗ್ರಭಣೇಽಗ್ರಹಣೇ । ಹಸ್ತೇನ ಗ್ರಾಹ್ಯಂ ಶಾಖಾದಿಕಮಪಿ ಯತ್ರ ನಾಸ್ತಿ ತಸ್ಮಿನ್ನಿತ್ಯರ್ಥಃ । ಕಿಂ ಪುನಸ್ತತ್ಕರ್ಮ । ಭುಜ್ಯುಂ ಸಮುದ್ರೇ ಮಗ್ನಂ ಶತಾರಿತ್ರಾಂ ಬಹ್ವರಿತ್ರಾಂ । ಯೈಃ ಕಾಷ್ಠೈಃ ಪಾರ್ಶ್ವತೋ ಬದ್ಧೈರ್ಜಲಾಲೋಡನೇ ಸತಿ ನೌಃ ಶೀಘ್ರಂ ಗಚ್ಛತಿ ತಾನ್ಯರಿತ್ರಾಣಿ । ಈದೃಶೀಂ ನಾವಮಾತಸ್ಥಿವಾಂಸಮಾಸ್ಥಿತವಂತಮಾರೂಢವಂತಂ ಕೃತ್ವಾಸ್ತಂ । ಗೃಹನಾಮೈತತ್ । ಪಿತುಸ್ತುಗ್ರಸ್ಯ ಗೃಹಂ ಪ್ರತಿ ಯದೂಹಥುಃ । ತತ್ಪ್ರಾಪಣಮನ್ಯೈರ್ದುಃಶಕಂ ಯುವಾಂ ಸಮುದ್ರಮಧ್ಯೇ ಕೃತವಂತಾವಿತ್ಯರ್ಥಃ ॥ ಅನಾರಂಭಣೇ । ಆರಭ್ಯತ ಇತ್ಯಾರಂಭಣಂ । ಕೃತ್ಯಲ್ಯುಟೋ ಬಹುಲಮಿತಿ ಕರ್ಮಣಿ ಲ್ಯುಟ್ । ನಞ್ಸುಭ್ಯಾಮಿತ್ಯುತ್ತರಪದಾಂತೋ-

**ದಾತ್ತತ್ವಂ । ಅವೀರಯೇಥಾಂ । ಶೂರ ವೀರ ವಿಕ್ರಾಂತೌ । ಚುರಾದಿರಾತ್ಮನೇಪದೀ । ಅನಾಸ್ಥಾನಾಗ್ರಭಣಯೋಃ ಪೂರ್ವವಲ್ಲ್ಯುಟ್‌ಸ್ವರೌ । ಅಯಂ ತು ವಿಶೇಷಃ । ಹೃಗ್ರಹೋರ್ಭ ಇತಿ ಭತ್ವಂ । ಅಸ್ತಂ । ಅಸ್ಯತೇಽಸ್ಮಿನ್ ಸರ್ವಮಿತ್ಯಸ್ತಂ ಗೃಹಂ । ಅಸಿಹಸೀತ್ಯಾದಿನಾ ತನ್ಪ್ರತ್ಯಯಃ । ಶತಾರಿತ್ರಾಂ । ಋಃ ಗತೌ । ಅರ್ತಿಲೂಧೂಸೂ । ಪಾ. ೩-೨-೧೮೪ । ಇತಿ ಕರಣ ಇತ್ರಪ್ರತ್ಯಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಶತಾರಿತ್ರಾಂ**—ನೂರಾರು ಹುಟ್ಟುಗಳಿಂದ ಕೂಡಿರುವ । **ನಾವಂ**—ಹಡಗಿನಲ್ಲಿ । **ಆ ತಸ್ಥಿವಾಂಸಂ**—ಹತ್ತಿಕುಳಿತುಕೊಂಡಿರುವ । **ಭುಜ್ಯುಂ**—ಭುಜ್ಯುವನ್ನು । **ಅಸ್ತಂ**—(ತಂದೆಯ) ಮನೆಗೆ । **ಊಹಥುಃ ಯತ್**—ಕರೆದೊಯ್ದಿರೆಂಬುದು ಯಾವುದೋ । **ತತ್**—ಅಂಥಾ ಮಹಾ ಕಾರ್ಯವನ್ನು । **ಅನಾರಂಭಣೇ**—ಆಧಾರರಹಿತವಾದ । **ಅನಾಸ್ಥಾನೇ**—ಆಶ್ರಯರಹಿತವಾದ । **ಅಗ್ರಭಣೇ**—ಹಿಡಿದುಕೊಳ್ಳಲೂ ಏನೂ ಇಲ್ಲದಿರುವ । **ಸಮುದ್ರೇ**—ಸಮುದ್ರದಲ್ಲಿ । **ಅವೀರಯೇಥಾಂ**—ಸಾಧಿಸಿದಿರಿ.

॥ ಭಾವಾರ್ಥ ॥

ನೀವು ನೂರಾರು ಹುಟ್ಟುಗಳುಳ್ಳ ಹಡಗಿನಲ್ಲಿ ಭುಜ್ಯುವನ್ನು ತಂದೆಯಮನೆಗೆ ಕರೆದೊಯ್ಯುವುವೆಂಬ ಮಹಾ ಕಾರ್ಯವನ್ನು ಸಾಧಿಸಿದಿರಿ ಈ ಕಾರ್ಯವನ್ನು ನೀವು ಬುಡವಿಲ್ಲದ, ನಿಲ್ಲಲು ನೆಲೆಯಿಲ್ಲದ, ಹಿಡಿದುಕೊಳ್ಳಲು ವಸ್ತುಗಳಾವುದೂ ಇಲ್ಲದ ಸಮುದ್ರದಲ್ಲಿ ಮಾಡಿದಿರಿ

English Translation.

This exploit you achieved, As'wins, in the ocean where there is nothing to give support, nothing to rest upon, nothing to cling to, that you brought Bhujyu, sailing in a hundred-oared ship, to his father's house.

॥ ವಿಶೇಷವಿಷಯಗಳು ॥

**ಅನಾಸ್ಥಾನೇ—ಆಸ್ಥಿಯತೇ ಅಸ್ಮಿನ್ನಿತಿ ಆಸ್ಥಾನೋ ಭೂಪ್ರದೇಶಃ । ತದ್ರಹಿತೇ ಸ್ಥಾತುಮಶಕ್ಯೇ ಜಲೇ ।** ಭೂಮಿಯು ಪ್ರಾಣಿಗಳಿಗೆ ಸುಖವಾಗಿ ನಿಲ್ಲುವುದಕ್ಕೆ ಅನುಕೂಲವಾಗಿರುವಕಾರಣ ಆಸ್ಥಾನ ಎಂದು ಹೆಸರನ್ನು ಹೊಂದಿರುವುದು. ಇದಕ್ಕೆ ವಿರುದ್ಧವಾಗಿರುವಕಾರಣ ಜಲರಾಶಿಯಾದ ಸಮುದ್ರವು **ಅನಾಸ್ಥಾನ**ವೆನಿಸಿರುತ್ತದೆ. ನೀರಿನಮೇಲೆ ನಿಲ್ಲುವುದಕ್ಕೆ ಆಗದಿರುವ ಎಂದು ಅಭಿಪ್ರಾಯ. ಇದರಂತೆಯೇ ಸಮುದ್ರವು ಯಾವ ಆಲಂಬನವನ್ನೂ ತನ್ನಲ್ಲಿ ಬಂದವರಿಗೆ ಉಂಟುಮಾಡದಿರುವುದು. ಸಮುದ್ರದಲ್ಲಿ ಲತಾದಿರೂಪವಾದ ರಕ್ಷಣೆಯ ಸಾಧನವು (ಮುಳುಗದಂತೆ ರಕ್ಷಣೆಮಾಡುವ) ಅಂದರೆ ನೀರಿನಲ್ಲಿ ಮುಳುಗಿಹೋಗದಂತೆ ಹಿಡಿದುಕೊಳ್ಳಲು ಯೋಗ್ಯವಾದ ಬಳ್ಳಿಮರ, ಮುಂತಾದುವುಗಳು ಗ್ರಹಣ ಅಥವಾ ಗ್ರಾಹ್ಯವಾಗುವಕಾರಣ ಅವುಗಳಿಲ್ಲದ್ದಾಗಿ **ಅಗ್ರಹಣ**ವೆನಿಸಿರುವುದು. ಹೀಗೆ ಅನಾಲಂಬನವಾಗಿ ಅಗ್ರಹಣವಾಗಿ ಇರುವ ಸಮುದ್ರದಲ್ಲಿ ಮುಳುಗುತ್ತಿರುವ ಭುಜ್ಯುವನ್ನು ರಕ್ಷಣೆಮಾಡುವಾಗ ಅಶ್ವಿನೀದೇವತೆಗಳು ಮಾಡಿದ ಕಾರ್ಯವು ಬಹಳ ಶೂರರಾದವರು ಆಚರಿಸುವ ಪರಾಕ್ರಮದ ಕಾರ್ಯವಾಗಿರುತ್ತದೆ.

**ಶತಾರಿತ್ರಾಂ—ಬಹ್ವರಿತ್ರಾಂ ಯೈಃ ಕಾಷ್ಠೈಃ ಪಾರ್ಶ್ವತೋ ಬದ್ಧೈರ್ಜಲಾಲೋಡನೇ ಸತಿ ನೌಃ ಶೀಘ್ರಂ ಗಚ್ಛತಿ ತಾನಿ ಅರಿತ್ರಾಣಿ ।** ನಾವೆಯ ಪಕ್ಕಗಳಲ್ಲಿ ನಾವೆಯನ್ನು ನೀರಿನಲ್ಲಿ ಮುಂದಕ್ಕೆ ನಡೆಸಲು ಅನುಕೂಲವಾಗಿರುವ ಹಾಗೆ ಕಟ್ಟಿರುವ ಮರವು ಅರಿತ್ರವೆನಿಸಿರುವುದು. ಇದನ್ನು ಹುಟ್ಟು ಎಂದು ಹೇಳುವರು. ಅಶ್ವಿನೀದೇವತೆಗಳ ನಾವೆಯು ಬಹಳ ವೇಗವಾಗಿ ನೀರಿನಲ್ಲಿ ಸಂಚರಿಸುವುದಕ್ಕೆ ತಕ್ಕಂತೆ ನಡೆಸುವ ಸಾಧನಗಳಾದ ನೂರಾರು ಹುಟ್ಟುಗಳಿಂದ ಕೂಡಿತ್ತು ಎಂದು ಅರ್ಥ.

**ಅಸ್ತಂ—ಗೃಹನಾಮೈತತ್ । ಗಯಃ ಕೃದರಃ** ಎಂಬ ಇಪ್ಪತ್ತೆರಡು ಗೃಹನಾಮಗಳಲ್ಲಿ ಅಸ್ತವೆಂಬ ಶಬ್ದವು (ನಿ ೩-೧೩) ಪಠಿತವಾಗಿರುವುದರಿಂದ ಅಸ್ತವೆಂದರೆ ಮನೆ ಎಂದು ಅರ್ಥವು. ಅಶ್ವಿನೀದೇವತೆಗಳು ಭುಜ್ಯುವನ್ನು ಅವನ ತಂದೆಯಾದ ತುಗ್ರರಾಜನ ಮನೆಗೆ ಕರೆದುಕೊಂಡು ಬಂದು ಸೇರಿಸಿದರು ಎಂದಭಿಪ್ರಾಯವು. ಸಮುದ್ರಮಧ್ಯದಲ್ಲಿ ಮುಳುಗುತ್ತಿದ್ದವನನ್ನು ರಕ್ಷಿಸುವ ಕಾರ್ಯವನ್ನು ನೆರವೇರಿಸುವುದು ಇತರರು ಯಾರಿಂದಲೂ ಆಗದಿರುವ ಕಾರಣ, ಅಶ್ವಿನೀದೇವತೆಗಳು ಮಾಡಿರುವ ಕಾರ್ಯವು ಸ್ತುತ್ಯವಾಗಿರುವುದೆಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ಅನಾರಂಭಣೇ**—ಆರಭ್ಯತೇ ಇತಿ ಆರಂಭಣಮ್. ರಭ ರಾಭಸ್ಯೇ. ಧಾತು. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬುದರಿಂದ ಕರ್ಮಣಿಯಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ **ರಭೇರಶಬ್ಲಿಟೋಃ** (ಪಾ. ಸೂ. ೭-೧-೬೩) ಎಂಬುದರಿಂದ ನುಮಾಗಮ. ನ ವಿದ್ಯತೇ ಆರಂಭಣಂ ಯಸ್ಯ ಅನಾರಂಭಣಃ ತಸ್ಮಿನ್ ಅನಾರಂಭಣೇ. **ನಞ್ಸುಭ್ಯಾಮ್** ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅವೀರಯೇಥಾಮ್**—ಶೂರ ವೀರ ವಿಕ್ರಾಂತೌ ಧಾತು. ಚುರಾದಿ. ನಿತ್ಯಾತ್ಮನೇಪದೀ **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. ಶಪ್ ವಿಕರಣ. **ಆತೋಙಿತಃ** (ಪಾ. ಸೂ. ೭-೨-೮೧) ಎಂಬುದರಿಂದ ಪ್ರತ್ಯಯದ ಆಕಾರಕ್ಕೆ ಇಯಾದೇಶ. ಶಪ್ ನಿಮಿತ್ತವಾಗಿ ಣಿಚ್ಚಿಗೆ ಗುಣ. ಅಯಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿ ಬಂದುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅನಾಸ್ಥಾನೇ**—ಷ್ಠಾ ಗತಿನಿವೃತ್ತೌ. ಧಾತು. ಹಿಂದಿನಂತೆ ಕರ್ಮಣಿಯಲ್ಲಿ ಲ್ಯುಟ್ ಪ್ರತ್ಯಯ. ಬಹುವ್ರೀಹಿ ಸಮಾಸದಲ್ಲಿ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಗ್ರಭಣೇ**—ಗ್ರಹ ಉಪಾದಾನೇ. ಧಾತು. ಪ್ರಕ್ರಿಯೆಯೂ ಸ್ವರವೂ ಹಿಂದಿನಂತೆ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುವಿನ ಹಕಾರಕ್ಕೆ ಭತ್ವ ಬರುತ್ತದೆ.

**ಅಸ್ತಮ್**—ಅಸ್ಯತೇ ಅಸ್ಮಿನ್ ಸರ್ವಮಿತ್ಯಸ್ತಂ ಗೃಹಮ್. **ಅಸಿಹಸಿ**—ಎಂಬ ಉಣಾದಿಸೂತ್ರದಿಂದ ತನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶತಾರಿತ್ರಾಮ್**—ಋ ಗತೌ ಧಾತು. **ಅರ್ತಿಲೂಧೂಸೂ**—(ಪಾ. ಸೂ. ೩-೨-೧೮೪) ಎಂಬುದರಿಂದ ಕರಣಾರ್ಥದಲ್ಲಿ ಇತ್ರ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಶತಾನಿ ಅರಿತ್ರಾಣಿ ಯಸ್ಯಾಃ ಸಾ. ಶತಾರಿತ್ರಾ ತಾಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವ ಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಆತಸ್ಥಿವಾಂಸಂ**—ಷ್ಠಾ ಗತಿನಿವೃತ್ತೌ. ಧಾತು. ಇದಕ್ಕೆ ಲಿಟ್ ವಿಕಲ್ಪಮಾಡಿದಾಗ ಅದಕ್ಕೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸುರಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬಂದಾಗ **ಶರ್ಪೂರ್ವಾಃಖಯಃ** (ಪಾ. ಸೂ. ೭-೪-೬೧) ಎಂಬುದರಿಂದ ತಕಾರಕ್ಕೆ ಶೇಷ. **ವಸ್ವೇಕಾಜಾ**—(ಪಾ. ಸೂ. ೭-೨-೬೭) ಎಂಬುದರಿಂದ ವಸುವಿಗೆ ಇಡಾಗಮ. **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ತಸ್ಥಿವಸ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ **ಅತ್ವಸಂತಸ್ಯ**—ಎಂಬುದರಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ. ಪ್ರತ್ಯಯಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಯಮಶ್ವಿನಾ ದದಥುಃ ಶ್ವೇತಮಶ್ವಮಘಾಶ್ವಾಯ ಶಶ್ವದಿ-
ತ್ಸ್ವಸ್ತಿ ।
ತದ್ವಾಂ ದಾತ್ರಂ ಮಹಿ ಕೀರ್ತೇನ್ಯಂ ಭೂತ್ಪೈದ್ವೋ ವಾಜೀ ಸದ-
ಮಿದ್ಧವ್ಯೋ ಅರ್ಯಃ ॥ ೬ ॥

॥ ಪದಪಾಠಃ ॥

ಯಂ । ಅಶ್ವಿನಾ । ದದಥುಃ । ಶ್ವೇತಂ । ಅಶ್ವಂ । ಅಘಽಅಶ್ವಾಯ । ಶಶ್ವತ್ । ಇತ್ । ಸ್ವಸ್ತಿ ।

ತತ್ । ವಾಂ । ದಾತ್ರಂ । ಮಹಿ । ಕೀರ್ತೇನ್ಯಂ । ಭೂತ್ । ಪೈದ್ವಃ । ವಾಜೀ । ಸದಂ । ಇತ್ । ಹವ್ಯಃ । ಅರ್ಯಃ ॥ ೬ ॥

॥ ಸಾಯಣಭಾಷ್ಯಂ ॥

ಅತ್ರೇದಮಾಖ್ಯಾಯತೇ । ಪೇದುರ್ನಾಮ ಕಶ್ಚಿತ್ ಸ ಚಾಶ್ವಿನೌ ತುಷ್ಟಾವ । ತಸ್ಮೈ ಪ್ರೀತೌ ಕಂಚಿಚ್ಛ್ವೇತವರ್ಣಮಶ್ವಂ ದತ್ತವಂತೌ । ಸ ಚಾಶ್ವಸ್ತಸ್ಯ ಪ್ರೌಢಂ ಜಯಂ ಚಕಾರೇತಿ । ಏತದತ್ರ ಪ್ರತಿಪಾದ್ಯತೇ । ಹೇ ಅಶ್ವಿನೌ ಯುವಾಮಘಾಶ್ವಾಯಾಹಂತವ್ಯಾಶ್ವಾಯ ಪೇದುನಾಮ್ನೇ ರಾಜರ್ಷಯೇ ಯಂ ಶ್ವೇತವರ್ಣಮಶ್ವಂ ದದಥುಃ ದತ್ತವಂತೌ ಸೋಽಶ್ವಸ್ತಸ್ಮೈ ಸ್ವಸ್ತಿ ಜಯಲಕ್ಷಣಂ ಮಂಗಲಂ ಶಶ್ವದಿತ್ ನಿತ್ಯಮೇವ ಚಕಾರ । ವಾಂ ಯುವಯೋಸ್ತದ್ದಾತ್ರಂ ದಾನಂ ಮಹಿ ಮಹದತಿಗಂಭೀರಂ । ಅತ ಏವ ಕೀರ್ತೇನ್ಯಂ ಸರ್ವೈಃ ಕೀರ್ತನೀಯಂ ಪ್ರಶಸ್ಯಂ ಭೂತ್ । ಅಭೂತ್ । ತಸ್ಮಾತ್ಪೈದ್ವಃ ಪೇದೋಃ ಸಂಬಂಧೀ ಪತನಶೀಲಃ ಶೀಘ್ರಗಾಮೀ ವಾರ್ಯಃ ಶತ್ರೂಣಾಂ ಪ್ರೇರಯಿತಾ ಯುದ್ಧೇಷು ಪ್ರೇರಯಿತವ್ಯೋ ವಾ ವಾಜೀ ವೇಜನವಾನಶ್ವಃ ಸದಮಿತ್ ಸದೈವ ಹವ್ಯೋಽಸ್ಮಾಭಿರಪ್ಯಾಹ್ವಾತವ್ಯಃ ॥ ದಾತ್ರಂ । ದದಾತೇರ್ಭಾವ ಔಣಾದಿಕಸ್ತ್ರಪ್ರತ್ಯಯಃ । ಮಹಿ । ಮಹ ಪೂಜಾಯಾಂ । ಇನ್ ಸರ್ವಧಾತುಭ್ಯ ಇತೀನ್ । ಕೀರ್ತೇನ್ಯಂ । ಕೄತ ಸಂಶಬ್ದನೇ । ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಕೇನ್ಯಪ್ರತ್ಯಯಃ । ಋತ ಇದ್ಧಾತೋರಿತೀತ್ವಂ । ಭೂತ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಪೈದ್ವಃ । ಪೇದೋಃ ಸಂಬಂಧೀ । ತಸ್ಯೇದಮಿತ್ಯಣ್ । ಛಾಂದಸೋ ವರ್ಣಲೋಪಃ । ಹವ್ಯಃ । ಹ್ವಯತೇರಚೋ ಯದಿತಿ ಯತ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ಗುಣೋ ಧಾತೋಸ್ತನ್ನಿಮಿತ್ತಸ್ಯೈವೇತ್ಯವಾದೇಶಃ । ಅರ್ಯಃ । ಋ ಗತೌ ಅಘ್ನ್ಯಾದಯಶ್ಚ । ಉ. ೪-೧೧೧ । ಇತ್ಯೌಣಾದಿಕೋ ಯತ್ । ವ್ಯತ್ಯಯೇನಾಂತೋದಾತ್ತತ್ವಂ ॥

|| ಪ್ರತಿಪದಾರ್ಥ ||

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಅಘಾಶ್ವಾಯ**—ಅವಧ್ಯವಾದ ಅಶ್ವಗಳುಳ್ಳ ಪೇದುವೆಂಬ ರಾಜರ್ಷಿಗೆ | **ಯಂ**—ಯಾವ | **ಶ್ವೇತಂ ಅಶ್ವಂ**—ಶ್ವೇತವರ್ಣದ ಅಶ್ವವನ್ನು | **ದದಥುಃ**—ದಾನಮಾಡಿದಿರೋ (ಕೊಟ್ಟಿರೋ) | **ಸಃ ಅಶ್ವಃ**—(ಆ ಅಶ್ವವು ಅವನಿಗೆ) | **ಸ್ವಸ್ತಿ**—(ಜಯರೂಪವಾದ) ಶುಭವನ್ನು | **ಶಶ್ವತ್ ಇತ್**—ಸರ್ವದಾ (ಉಂಟುಮಾಡಿತು) | **ವಾಂ**—ನಿಮ್ಮಿಬ್ಬರ | **ತತ್ ದಾತ್ರಂ**—ಆ ದಾನವು | **ಮಹಿ**—ಘನವಾದುದು (ಆದುದರಿಂದಲೇ) | **ಕೀರ್ತೇನ್ಯಂ**—ಸರ್ವರಿಂದಲೂ ಸ್ತುತ್ಯವಾದುದಾಗಿ | **ಭೂತ್**—ಆಯಿತು (ಆದ್ದರಿಂದ) | **ಪೈದ್ವಃ**—ಪೇದುಸಂಬಂಧವಾದ (ಪೇದುವೆಂಬುವನ) | **ಅರ್ಯಃ**—ಶತ್ರುನಾಶಕವಾದ | **ವಾಜೀ**—ಆ ಅಶ್ವವು | **ಸದ್ ಮಿತ್**—ಸರ್ವದಾ | **ಹವ್ಯಃ**—(ನಮ್ಮಿಂದ) ಆಹ್ವಾನಿಸಲ್ಪಡಬೇಕು.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಅವಧ್ಯವಾದ ಅಶ್ವಗಳುಳ್ಳ ಪೇದುವೆಂಬ ರಾಜರ್ಷಿಗೆ ನೀವು ಕೊಟ್ಟ ಬಿಳೀ ಕುದುರೆಯು ಸರ್ವದಾ ಮಂಗಳವನ್ನೇ ಉಂಟುಮಾಡಿತು. ನಿಮ್ಮ ಆ ದಾನವು ಮಹತ್ತಾದುದು ಮತ್ತು ಸ್ತುತ್ಯವಾದುದು. ಆ ಪೇದುವಿನ ಅಶ್ವವು ಶತ್ರುನಾಶಕವು. ನಾವುಗಳೆಲ್ಲರೂ ಅದನ್ನು ಆಹ್ವಾನಿಸಬೇಕು.

English Translation.

As'wins, the white horse you gave to Pedu, whose horses were indestructible, was ever to him success; that, your precious gift, is always to be celebrated: the horse of Pedu, the scatterer (of enemies) is always to be invoked.

|| ವಿಶೇಷವಿಷಯಗಳು ||

**ಅಘಾಶ್ವಾಯ - ಅಹಂತವ್ಯಾಶ್ವಾಯ ಪೇದುನಾಮ್ನೇ ರಾಜರ್ಷಯೇ** | ಯುದ್ಧಗಳಲ್ಲಿ ಯಾರೂ ಕೊಲ್ಲುವುದಕ್ಕಾಗದಿರುವ ಕುದುರೆಯುಳ್ಳವನಾದ **ಪೇದು** ಎಂಬ ಹೆಸರುಳ್ಳ ರಾಜರ್ಷಿಗೆ ಎಂದು ಅರ್ಥವನ್ನು ಮಾಡಿ, **ಪೈದ್ವಃ** ಎಂಬ ಪದಕ್ಕೆ-**ಪೇದೋಃ ಸಂಬಂಧೀ ಪತನಶೀಲಃ ಶೀಘ್ರಗಾಮೀ ವಾ**-ಪೇದುರಾಜನ ಸಂಬಂಧಿಯಾದ ವೇಗವಾಗಿ ಸಂಚರಿಸುವ ಸ್ವಭಾವವುಳ್ಳ ಎಂದು ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳು—

**ಅಘಾಶ್ವೋ ನಾಮ ರಾಜಾ ಯುಯುತ್ಸುರಾತ್ಮನೋ ಅಶ್ವಂ ಅಶ್ವಿನೌ ಯಯಾಚೇ ಸತತಂ ಚಾವಿನಾಶಂ | ತಸ್ಮೈ ಅಶ್ವಿನೌ ಬಲವಂತಂ ಅತ್ಯಂತವೇಗಿನಂ ಜಯಕರಂ ಸರ್ವತ್ರಾಪ್ರತಿಹತಗಮನಂ ಅಶ್ವಂ ಸತತಂ ಚಾವಿನಾಶಂ ದದತುರಿತಿ | ತದೇತದಿಹೋಚ್ಯತೇ ||**

ಅಘಾಶ್ವನೆಂಬ ರಾಜನು ಯುದ್ಧಮಾಡಲು ಇಚ್ಛೆಯುಳ್ಳವನಾಗಿ ತನಗೆ ಬಹಳ ಶಕ್ತಿಯುಳ್ಳದ್ದಾಗಿಯೂ ವೇಗಶಾಲಿಯಾಗಿಯೂ ಎಲ್ಲಾ ಕಡೆಯಲ್ಲಿಯೂ ತಡೆಯೇ ಇಲ್ಲದಂತೆ ಸಂಚರಿಸುವುದೂ ಜಯವನ್ನು ಸಂಪಾದಿಸಿ ಕೊಡುವುದೂ

ಯಾವಾಗಲೂ ನಾಶವನ್ನು ಹೊಂದದೆ ಇರುವುದೂ ಆದ ಒಂದು ಕುದುರೆಯನ್ನು ಕೊಡಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಅವರು ಇವನ ಪ್ರಾರ್ಥನೆಗೆ ಅನುಸಾರವಾಗಿ ಇವನ ಇಷ್ಟದಂತೆಯೇ ಇರುವ ಒಂದು ಬಿಳಿಯ ಕುದುರೆಯನ್ನು ಕೊಟ್ಟರು ಎಂದು ಉಪಾಖ್ಯಾನವನ್ನು ಹೇಳಿ ಅಘಾಶ್ವ ಪದಕ್ಕೆ ರಾಜನ ಹೆಸರು ಎಂದೂ **ಪೈದ್ವಃ** ಎಂಬ ಪದವು ಅಶ್ವನಾಮಗಳಲ್ಲಿ (ನಿ. ೨-೨೭) ಪಠಿತವಾಗಿರುವುದರಿಂದ **ಪೈದ್ವಃ ಅಶ್ವನಾಮೈತತ್**—ಪೈದ್ವಃ ಎಂದರೆ ಕುದುರೆಯು ಎಂದು ವ್ಯಾಖ್ಯಾನವನ್ನು ಮಾಡಿರುವರು. ಸಾಯಣರು—**ಪೇದುರ್ನಾಮ ಕಶ್ಚಿತ್ ಸ ಚಾಶ್ವಿನೌ ತುಷ್ಟಾವ ತಸ್ಮೈ ಪ್ರೀತೌ ಕಂಚಿತ್ ಶ್ವೇತವರ್ಣಮಶ್ವಂ ದತ್ತವಂತೌ** ಪೇದು ಎಂಬ ಹೆಸರಿನ ಒಬ್ಬನು ಅಶ್ವಿನೀದೇವತೆಗಳನ್ನು ಕುರಿತು ಸ್ತುತಿಮಾಡಿದನು. ಅವರು ಅವನ ಸ್ತೋತ್ರಕ್ಕೆ ಮೆಚ್ಚಿ ಅವನಿಗೆ ಒಂದು ಬಿಳಿಯ ಕುದುರೆಯನ್ನು ಕೊಟ್ಟರು ಎಂದು ಅರ್ಥಮಾಡಿರುವುದರಿಂದ ಇವರಿಬ್ಬರಿಗೂ ಪೇದು ಮತ್ತು ಅಘಾಶ್ವ ಎಂಬ ಪದಗಳ ಅರ್ಥ ವಿವರಣೆಯಲ್ಲಿ ವ್ಯತ್ಯಾಸವು ಕಂಡುಬರುವುದು

**ಅರ್ಯಃ—ಶತ್ರೂಣಾಂ ಪ್ರೇರಯಿತಾ ಯುದ್ಧೇಷು ಪ್ರೇರಯಿತವ್ಯೋ ವಾ ।** ಶತ್ರುಗಳನ್ನು ಯುದ್ಧಗಳಲ್ಲಿ ಪ್ರೋತ್ಸಾಹಗೊಳಿಸುವುದು ಅಥವಾ ಯುದ್ಧಮಾಡುವ ಹಾಗೆ ಉತ್ಸಾಹವನ್ನು ಉಂಟುಮಾಡುವುದು ಎಂದು ಸಾಯಣರು ಅರ್ಥವನ್ನು ವಿವರಿಸಿರುವರು ಸ್ಕಂದಸ್ವಾಮಿಗಳು **ಅರ್ಯ** ಶಬ್ದವು ಈಶ್ವರನಾಮಗಳಲ್ಲಿ ಉಕ್ತವಾಗಿ (ನಿ. ೩-೧೧).

**ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ ವಯುನಾನಿ ವಿದ್ವಾನ್ ।**

(ಋ ಸಂ. ೭-೧೦೦-೫)

ಎಂಬಲ್ಲಿ **ಅರ್ಯಃ ಅಹಮಸ್ಮೀಶ್ವರಃ** ಎಂದು ಈಶ್ವರವಾಚಕವಾಗಿ ಉಕ್ತವಾಗಿರುವುದರಿಂದ ಈಶ್ವರ ಎಂದು ಅರ್ಥವನ್ನು ಹೇಳಿ—ಅಶ್ವಿನೀದೇವತೆಗಳು ಅನುಗ್ರಹಿಸಿರುವ ಈ ಕುದುರೆಯು **ಗಮನೇ ಸರ್ವತ್ರಾಪ್ರತಿಹತಗತಿಃ ಈಶ್ವರಶ್ಚ** ನಡಿಗೆಯ ವಿಷಯದಲ್ಲಿ ಎಲ್ಲಾ ಕಡೆಯಲ್ಲಿಯೂ ಯಾವ ತಡೆಯೂ ಇಲ್ಲದಿರುವುದರಿಂದ ಈಶ್ವರ ಎಂದರೆ ವೇಗವಾಗಿ ತಡೆಯು ಇಲ್ಲದಂತೆ ಸಂಚರಿಸುವ ಕುದುರೆಗಳಿಗೆ ಪ್ರಭುವಾಗಿ ಇರುವುದು ಎಂದು ಅರ್ಥವನ್ನು ವಿವರಿಸಿರುವರು.

**ಸದಮಿತ್—ಸದಂ+ಇತ್, ಸದೈವ.** ಯಾವಾಗಲೂ ಎಂದು ಅರ್ಥ. **ಸದಂ** ಎಂಬುದೂ ನಿಪಾತ. **ಇತ್** ಎಂಬುದೂ ನಿಪಾತ ನಿಪಾತವೆಂದರೆ ಅವ್ಯಯದ ಹಾಗೆ ಒಂದೇ ವಿಧವಾದ ರೂಪವು ಇದ್ದರೂ ಅನೇಕ ವಿಧವಾದ ಅರ್ಥಗಳಲ್ಲಿ ಪ್ರಯುಕ್ತವಾಗುವ ಶಬ್ದ. ನಿರುಕ್ತಕಾರರು—**ಅಥ ಯೇ ಪ್ರವೃತ್ತೇಽರ್ಥೇ ಅಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ** (ನಿ. ೧-೯) **ಕಂ, ಈಂ, ಇತ್, ಉ** ಎಂಬ ಶಬ್ದಗಳು ದೊಡ್ಡ ಗದ್ಯಗ್ರಂಥಗಳಲ್ಲಿ ವಾಕ್ಯಪೂರ್ತಿಯಾಗುವುದಕ್ಕಾಗಿ ಉಪಯುಕ್ತಗಳಾಗಿರುತ್ತವೆ. ಸಣ್ಣ ಸಣ್ಣ ಪದ್ಯಗ್ರಂಥಗಳಲ್ಲಿ ಇವು ಪದಪೂರಣವಾಗಿ ಇರುತ್ತವೆ.

ಇವುಗಳು ವಾಕ್ಯಪೂರಣ ಅಥವಾ ಪದಪೂರಣ ಮಾಡುವುದಕ್ಕಾಗಿ ಪ್ರಯುಕ್ತವಾದರೂ ಆಯಾಯ ಗ್ರಂಥದಲ್ಲಿ ಪ್ರತಿಪಾದ್ಯವಾದ ಅರ್ಥವನ್ನು ಇವು ಬೋಧಿಸದಿರುವ ಕಾರಣ ಅನರ್ಥಗಳಾಗಿ ಇರುವುವು. ಎಂದರೆ ಇವುಗಳಿಗೆ ಯಾವ ನಿರ್ದಿಷ್ಟಾರ್ಥವೂ ಇರುವುದಿಲ್ಲ ಎಂದು ಹೇಳಿರುವರು ಮತ್ತು **ಕಂ** ಎಂಬ ನಿಪಾತದ ಉದಾಹರಣೆಗಾಗಿ—

**ಮುಂಚಾಮಿ ತ್ವಾ ಹವಿಷಾ ಜೀವನಾಯ ಕಮಜ್ಞಾತಯಕ್ಷ್ಮಾದುತ ರಾಜಯಕ್ಷ್ಮಾತ್ ।**

(ಋ. ಸಂ. ೧೦-೧೬೧-೧)

ಎಂಬ ಋಕ್ಕನ್ನೂ **ಈಂ** ಎಂಬ ನಿಪಾತದ ಉದಾಹರಣೆಗಾಗಿ—

**ಏಮೇನಂ ಸೃಜತಾ ಸುತೇ ಮಂದಿಮಿಂದ್ರಾಯ ಮಂದಿನೇ ।**

(ಋ. ಸಂ ೧-೯-೨)

ಎಂಬ ಋಕ್ಕನ್ನೂ, **ಇತ್** ಎಂಬ ನಿಪಾತದ ಉದಾಹರಣೆಗಾಗಿ,

**ತಮಿದ್ವರ್ಧಂತು ನೋ ಗಿರೋ ವತ್ಸಂ ಸಂಶಶ್ವತೀರಿವ ।**

(ಋ. ಸಂ. ೯-೬೧-೧೪)

ಎಂಬ ಋಕ್ಕನ್ನೂ, **ಉ** ಎಂಬ ನಿಪಾತದ ಉದಾಹರಣೆಗಾಗಿ—

**ಅಯಮು ತೇ ಸಮತಸಿ ಕಪೋತ ಇವ ಗರ್ಭಧಿಂ ।**

(ಋ. ಸಂ. ೧-೩೦-೪)

ಎಂಬ ಋಕ್ಕನ್ನೂ ಕೊಟ್ಟಿರುವರು.

**ವಾಜೀ—ವೇಗವಾನ್ । ವಾಜಿ** ಎಂಬ ಶಬ್ದವು ಇಪ್ಪತ್ತಾರು ಅಶ್ವವಾಚಕಗಳಲ್ಲಿ (ನಿ. ೨-೨೭) ಉಕ್ತವಾಗಿರುವುದರಿಂದ ಅಶ್ವವೆಂದು ಅರ್ಥ. ವೇಗವಾಗಿ ಸಂಚರಿಸುವ ಕಾರಣ ವಾಜೀ ಎಂದು ಪ್ರಸಿದ್ಧವಾಗಿರುವುದು. ಅಶ್ವಿನೀ ದೇವತೆಗಳು ತಮ್ಮನ್ನು ಕುರಿತು ತಪಸ್ಸನ್ನು ಮಾಡಿದ ಅಥವಾ ಸ್ತೋತ್ರಮಾಡಿದ ರಾಜನ ಇಷ್ಟವನ್ನು ನೆರವೇರಿಸುವುದಕ್ಕಾಗಿ ಅವನಿಗೆ ಅನುಗ್ರಹಿಸಿರುವ ಅಶ್ವದಾನವು ಗೌರವಾಸ್ಪದವಾಗಿಯೂ ಪ್ರಶಸ್ಯವಾಗಿಯೂ ಇರುತ್ತದೆ ಎಂಬ ಅಂಶವನ್ನು **ದಾತ್ರಂ ಮಹಃ ಕೀರ್ತೇನ್ಯಂ** ಎಂಬ ಪದಗಳಿಂದ ವಿವರಿಸಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಿನಾ—ಸುಪಾಂ ಸುಲುಕ್**—(ಪಾ.ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ.

**ದದಥುಃ**—ಡುದಾಞ್ ದಾನೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ ಅಥುಸ್ ಪ್ರತ್ಯಯ. ಧಾತುವಿಗೆ ದ್ವಿತ್ವಾದಿ. ಯಮ್ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಉಳಿಯುತ್ತದೆ.

**ಅಶ್ವಂ**—ಅಶೂ ವ್ಯಾಪ್ತೌ. ಧಾತು. **ಅಶಿಪ್ರುಷಿ**—(ಉ. ಸೂ. ೧-೧೫೪) ಎಂಬುದರಿಂದ ಕ್ವನ್‌ಪ್ರತ್ಯಯ. **ನಿತ್ತ್ವಾದುದರಿಂದ** ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಷ್ಟಾಶ್ವಾಯ**--ಅಷ್ಟಃ ಅಶ್ವಾಃ ಯಸ್ಯ ಅಷ್ಟಾಶ್ವಃ, ತಸ್ಮೈ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ದಾತ್ರಂ**—ಡುದಾಞ್ ದಾನೇ. ಧಾತು. ಇದಕ್ಕೆ ಔಣಾದಿಕವಾದ ತ್ರ ಪ್ರತ್ಯಯ.

**ಮಹಿ**—ಮಹ ಪೂಜಾಯಾಂ ಧಾತು. **ಸರ್ವಧಾತುಭ್ಯ ಇನ್** (ಉ.ಸೂ. ೪-೫೫೭) ಎಂಬುದರಿಂದ ಇನ್ ಪ್ರತ್ಯಯ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕೀರ್ತೇನ್ಯಂ**—ಕೄತ ಸಂಶಬ್ದನೇ. ಧಾತು. ಇದಕ್ಕೆ **ಕೃತ್ಯಾರ್ಥೇ ತವೈಕೇನ್ ಕೇನ್ಯತ್ವನಃ** (ಪಾ. ಸೂ. ೩-೪-೧೪) ಎಂಬುದರಿಂದ ಕೇನ್ಯ ಪ್ರತ್ಯಯ. **ಋೂತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಋಕಾರಕ್ಕೆ ಇತ್ವ. **ಹಲಿಚ** (ಪಾ. ಸೂ. ೮-೨-೭೭) ಎಂಬುದರಿಂದ ರೇಫಾಂತ ಉಪಧೆಗೆ ದೀರ್ಘ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಏಕಾರ ಉದಾತ್ತವಾಗುತ್ತದೆ.

**ಭೂತ್**--ಭೂ ಸತ್ತಾಯಾಂ **ಧಾತು.** ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇಕಾರಲೋಪ. **ಗಾತಿಸ್ಥಾಘು**-(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲೋಪ. **ಬಹುಲಂಛಂದಸ್ಯಮಾಙ್ಯೋಗೇऽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಪೈದ್ವಃ**—ಪೇದೋಃ ಸಂಬಂಧೀ ಪೈದ್ವಃ **ತಸ್ಯೇದಂ**—(ಪಾ. ಸೂ ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. ಛಾಂದಸವಾಗಿ ವರ್ಣವ್ಯತ್ಯಯ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹವ್ಯಃ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಉಕಾರಕ್ಕೆ ಗುಣ. ಪ್ರತ್ಯಯನಿಮಿತ್ತವಾಗಿ ಓಕಾರಬಂದುದರಿಂದ **ಧಾತೋಸ್ತನ್ನಿಮಿತ್ತಸ್ಯೈವ** (ಪಾ. ಸೂ. ೬-೧-೮೦) ಎಂಬುದರಿಂದ ಅದಕ್ಕೆ ಅವಾದೇಶ. **ಯತೋऽನಾವಃ** (ಪಾ ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರ್ಯಃ**—ಋ ಗತೌ ಧಾತು. **ಅಘ್ನ್ಯಾದಯಶ್ಚ** (ಉ ಸೂ. ೪-೫೫೧) ಎಂಬುದರಿಂದ ಔಣಾದಿಕವಾದ ಯತ್ ಪ್ರತ್ಯಯ. ತನ್ನಿಮಿತ್ತವಾಗಿ ಎಂದಿನಂತೆ ಧಾತುವಿನ ಋಕಾರಕ್ಕೆ **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. **ವ್ಯತ್ಯಯೋಬಹುಲಂ** ಎಂಬುದರಿಂದ ಇದಕ್ಕೆ ಅಂತೋದಾತ್ತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।
ಕಾರೋತರಾಚ್ಛಫಾದಶ್ವಸ್ಯ ವೃಷ್ಣಃ ಶತಂ ಕುಂಭಾಁ ಅಸಿಂಚತಂ ಸುರಾಯಾಃ ॥ ೭ ॥

॥ ಪದಪಾಠಃ ॥

ಯುವಂ । ನರಾ । ಸ್ತುವತೇ । ಪಜ್ರಿಯಾಯ । ಕಕ್ಷೀವತೇ । ಅರದತಂ । ಪುರಂऽಧಿಂ ।
ಕಾರೋತರಾತ್ । ಶಫಾತ್ । ಅಶ್ವಸ್ಯ । ವೃಷ್ಣಃ । ಶತಂ । ಕುಂಭಾನ್ । ಅಸಿಂಚತಂ । ಸುರಾಯಾಃ ॥ ೭ ॥

॥ ಸಾಯಣಭಾಷ್ಯಂ ॥

ಅತ್ರೇಯಮಾಖ್ಯಾಯಿಕಾ । ಕಕ್ಷೀವಾನೃಷಿಃ ಪುರಾ ತಮುಸಾತಿರೋಹಿತಜ್ಞಾನಃ ಸನ್ ಜ್ಞಾನಾರ್ಥಮಶ್ವಿನೌ ತುಷ್ಟಾವ । ತಸ್ಮಾ ಅಶ್ವಿನೌ ಪ್ರಭೂತಾಂ ಧಿಯಂ ದತ್ತವಂತಾವಿತಿ ತದಾಹ । ಹೇ ನರಾ ನೇತಾರಾವಶ್ವಿನೌ ಯುವಂ ಯುವಾಂ ಪಜ್ರಿಯಾಯ । ಪಜ್ರಾ ಇತ್ಯಂಗಿರಸಾಮಾಖ್ಯಾ ಪಜ್ರಾ ವಾ ಅಂಗಿರಸ ಇತ್ಯಾಮ್ನಾತತ್ವಾತ್ । ತೇಷಾಂ ಕುಲೇ ಜಾತಾಯ ಕಕ್ಷೀವತೇ । ಕಕ್ಷ್ಯಾ ರಜ್ಜುರಶ್ವಸ್ಯ । ತದ್ವತೇ ತತ್ಸಂಜ್ಞಾಯ ಸ್ತುವತೇ ಯುವಯೋಃ ಸ್ತುತಿಂ ಕುರ್ವತೇ ಮಹ್ಯಂ ಪುರಂಧಿಂ ಪ್ರಭೂತಾಂ ಧಿಯಂ ಬುದ್ಧಿಮರದತಂ । ವ್ಯಲಿಖತಂ । ಯಥಾ ಸರ್ವಾರ್ಥಗೋಚರಾ ಭವತಿ ತಥಾ ಕೃತವಂತಾವಿತ್ಯರ್ಥಃ । ಅಪಿ ಚ ಕಾರೋತರಾತ್ । ಕಾರೋತರೋ ನಾಮ ವೈದಲಶ್ಚರ್ಮವೇಷ್ಟಿತೋ ಭಾಜನವಿಶೇಷೋ ಯಸ್ಮಿನ್ಸುರಾಯಾಃ ಸ್ರಾವಣಂ ಕ್ರಿಯತೇ । ಲುಪ್ತೋಪಮಮೇತತ್ । ಕಾರೋತರಾದ್ಯಥಾ ಸುರಾಯಾಃ ಸಂಪಾದಕಾಸ್ತಾಂ ಸ್ರಾವಯಂತಿ ಏವಮೇವ ಯುವಾಂ ವೃಷ್ಣಃ ಸೇಚನಸಮರ್ಥಸ್ಯ ಯುಷ್ಮದೀಯಸ್ಯಾ-

ಶ್ವಸ್ಯ ಶಫಾತ್ ಖುರಾತ್ ಸುರಾಯಾಃ ಶತಂ ಕುಂಭಾನ್ ಅಸಂಖ್ಯಾತಾನ್ಸುರಾಘಟಾನಸಿಂಚತಂ । ಅಪೂರಯತಂ । ಯದ್ವಾ । ಸಿಂಚತಿಃ ಪೂರಣಾರ್ಥಃ । ಕಾರೋತರಸ್ಥಾನೀಯಾದ್ಯುಷ್ಮದೀಯಾಶ್ವಖುರಾತ್ ಯಾ ಸುರಾ ಪ್ರವಹತಿ ತಯಾಸಂಖ್ಯಾತಾನ್ ಘಟಾನಸಿಂಚತಂ । ಅಪೂರಯತಂ । ಯೇ ಜನಾಃ ಸೌತ್ರಾಮಣ್ಯಾದಿಕರ್ಮಣಿ ಯುಷ್ಮದ್ಯಾಗಾಯ ಸುರಾಂ ಯಾಚಂತೇ ತೇಷಾಮಿತ್ಯರ್ಥಃ ॥ ಸ್ತುವತೇ । ಸ್ತೌತೇರ್ಲಟಃ ಶತೃ । ಅದಾದಿತ್ವಾಚ್ಛಪೋ ಲುಕ್ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಪಜ್ರಿಯಾಯ ಪಜ್ರಶಬ್ದಾಚ್ಛೈಷಿಕೋ ಘಚ್ । ಕಕ್ಷೀವತೇ । ಆಸಂದೀವದಷ್ಠೀವಚ್ಚಕ್ರಿವತ್ಕಕ್ಷೀವದಿತಿ ನಿಪಾತನಾತ್ ಕಕ್ಷ್ಯಾಶಬ್ದಸ್ಯ ಸಂಪ್ರಸಾರಣಂ ವತ್ವಂ ಚ । ಅರದತಂ । ರದ ವಿಲೇಖನೇ । ಪುರಂಧಿಂ । ಪುರಂಧಿರ್ಬಹುಧೀರಿತಿ ಯಾಸ್ಕಃ । ನಿ ೬-೧೩ । ಪೃಷೋದರಾದಿತ್ವಾತ್ಪುರಂಧಿಭಾವಃ । ಯದ್ವಾ । ಪುರಂ ಪೂರಯಿತವ್ಯಂ ಸರ್ವವಿಷಯಜಾತಮಸ್ಯಾಂ ಧೀಯತೇಽವಸ್ಥಾಪ್ಯತ ಇತಿ ಪುರಂಧಿರ್ಬುದ್ಧಿಃ । ಕರ್ಮಣ್ಯಧಿಕರಣೇ ಚೇತಿ ದಧಾತೇಃ ಕಿಪ್ರತ್ಯಯಃ । ತತ್ಪುರುಷೇ ಕೃತಿ ಬಹುಲಮಿತಿ ಬಹುಲವಚನಾದಲುಕ್ । ಇದಂ ತು ವ್ಯುತ್ಪತ್ತಿಮಾತ್ರಂ ವಸ್ತುತಃ ಪೃಷೋದರಾದಿರೇವ । ಅಸಿಂಚತಂ । ಷಿಚಿರ್ ಕ್ಷರಣೇ । ತೌದಾದಿಕಃ । ಶೇ ಮುಚಾದೀನಾಮಿತಿ ನುಮ್ ॥

॥ ಪ್ರತಿಪದಾರ್ಥ ॥

**ನರಾ** –ನೇತೃಗಳಾದ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರು । **ಪಜ್ರಿಯಾಯ**—ಅಂಗಿರಸ ಕುಲೋತ್ಪನ್ನನಾದ । **ಸ್ತುವತೇ**– ನಿಮ್ಮನ್ನು ಸ್ತುತಿಸುತ್ತಿರುವ । **ಕಕ್ಷೀವತೇ**—ಕಕ್ಷೀವಂತನೆಂಬ (ನನಗೆ) । **ಪುರಂಧಿಂ**—ಹೆಚ್ಚಾದ ಬುದ್ಧಿಯನ್ನು । **ಅರದತಂ**—ಕೊಟ್ಟಿದ್ದೀರಿ । **ಕಾರೋತರಾತ್**—ಕಾರೋತರವೆಂಬಪಾತ್ರೆಯಲ್ಲಿ ಸುರೆಯನ್ನು ಸುರಿಸುವಂತೆ । **ವೃಷ್ಣಃ**—ಸೇಚನಸಾಮರ್ಥ್ಯವುಳ್ಳ । **ಅಶ್ವಸ್ಯ**—ನಿಮ್ಮ ಅಶ್ವದ । **ಶಫಾತ್**—ಗೊರಸಿನಿಂದ । **ಸುರಾಯಾಃ**—ಮದ್ಯದ । **ಶತಂ ಕುಂಭಾನ್**—ನೂರಾರು (ಅನೇಕ) ಗಡಿಗೆಗಳನ್ನು (ಸೌತ್ರಾಮಣ್ಯಾದಿಗಳಲ್ಲಿ ಸುರಾಯಾಚನೆ ಮಾಡುವವರಿಗೆ) । **ಅಸಿಂಚತಂ**—ತುಂಬಿಸಿದಿರಿ.

॥ ಭಾವಾರ್ಥ ॥

ಜನಗಳನ್ನು ಸರಿಯಾದ ಮಾರ್ಗದಲ್ಲಿ ನಡೆಸುವ ಎಲೈ ಅಶ್ವಿನೀದೇವತೆಗಳೇ, ನೀವು ಅಂಗಿರಸಕುಲೋತ್ಪನ್ನನಾದ, ನಿಮ್ಮನ್ನು ಸ್ತುತಿಸುವ (ತಿರೋಹಿತ ಜ್ಞಾನನಾದ) ಕಕ್ಷೀವಂತನಿಗೆ (ನನಗೆ) ಬುದ್ಧಿವಿಕಾಸವನ್ನುಂಟುಮಾಡಿದಿರಿ. ಸೇಚನಸಾಮರ್ಥ್ಯವುಳ್ಳ ನಿಮ್ಮ ಅಶ್ವದ ಗೊರಸಿನಿಂದ, ಮದ್ಯದ ನೂರು ಮಡಕೆಗಳಲ್ಲಿ, ಕಾರೋತರವೆಂಬ ಪಾತ್ರೆಯಲ್ಲಿ ಸುರೆಯನ್ನು ಸುರಿಯುವಂತೆ, ಸುರೆಯನ್ನು (ಸೌತ್ರಾಮಣ್ಯಾದಿಗಳಲ್ಲಿ ಸುರಾಯಾಚನೆ ಮಾಡುವವರಿಗೆ) ಸುರಿಸಿದಿರಿ.

## English Translation.

You gave leaders (of sacrifice), to Kakshivat, of the race of Pajra various knowledge; you filled from the hoof of your vigorous steed, as if from a cask, a hundred jars of wine.

॥ ವಿಶೇಷವಿಷಯಗಳು ॥

**ನರಾ—ನೇತಾರೌ ಅಶ್ವಿನೌ** ಸರಿಯಾದ ಮಾರ್ಗದಲ್ಲಿರುವಂತೆ ಬುದ್ಧಿಯನ್ನು ಪ್ರೇರಿಸುವ ಅಶ್ವಿನೀದೇವತೆಗಳು ಎಂದು ಸಾಯಣರೂ, **ನರಾ—ಮನುಷ್ಯಾಕಾರೌ** ಮನುಷ್ಯರ ಆಕಾರದಿಂದ ಇರುವವರು ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುವರು.

**ಪಜ್ರಿಯಾಯ ಕಕ್ಷೀವತೇ— ಪಜ್ರಾ ಇತ್ಯಂಗಿರಸಾಂ ಆಖ್ಯಾ । ಪಜ್ರಾ ವಾ ಅಂಗಿರಸ ಇತ್ಯಾಮ್ನಾತತ್ವಾತ್ । ತೇಷಾಂ ಕುಲೇ ಜಾತಾಯ ।** ಪಜ್ರಾ ಎಂದು ಅಂಗಿರಾಋಷಿಗಳ ವಂಶದವರಿಗೆ ಹೆಸರು ಎಂದು ಶ್ರುತಿಯಲ್ಲಿ ಉಕ್ತವಾಗಿರುವುದು. ಅವರ ವಂಶದಲ್ಲಿ ಉತ್ಪನ್ನನಾದವನು ಎಂದು ಸಾಯಣರು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು—ನಿರುಕ್ತದಲ್ಲಿ ಪಾಜಃ ಎಂಬ ಪದವು (ನಿ. ೩-೯) ಬಲನಾಮಗಳಲ್ಲಿ ಪಠಿತವಾಗಿದ್ದರೂ **ಪಾಜ ಇತ್ಯನ್ನನಾಮ ತೇನ ಹವಿರ್ಲಕ್ಷಣೇನ ತದ್ವಾನ್ ಪಜ್ರಃ ।** ಪಾಜ ಎಂಬುವ ಪದವು ಅನ್ನನಾಮವಾಗಿರುವುದು. ಆದರಿಂದ ಹವಿಸ್ಸಿನ ರೂಪವಾದ ಅನ್ನವುಳ್ಳವನು ಪಜ್ರನೆನಿಸುವನು ಎಂದೂ, **ಹವಿರ್ಲಕ್ಷಣೇನಾನ್ನೇನ ಅನ್ನವತೇ ಸ್ತುವತೇ ಯಜತೇ** ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಹವಿಸ್ಸಿನ ರೂಪವಾದ ಅನ್ನವನ್ನು ಸಿದ್ಧಪಡಿಸಿಕೊಂಡು, ಸ್ತುತಿ ಮಾಡುವವನು ಅಥವಾ ಯಾಗಮಾಡುವವನು ಎಂದೂ ಒಂದು ವಿಧವಾಗಿ ಅರ್ಥಮಾಡಿರುವರು ಮತ್ತು—

**ಅಥವಾ ಪ್ರಜಾ ಅಂಗಿರಸ ಉಚ್ಯಂತೇ । ತೇಷಾಮಪತ್ಯಭೂತಃ ಪಜ್ರಿಯಃ । ಪೌರಾಣಿಕಾ ಹಿ ಕಕ್ಷೀವಂತಮಾಂಗಿರಸಂ ಸ್ಮರಂತಿ ।**

**ಏವಂ ಹ್ಯಾಹುಃ—**

**ಉಶಿಜೋ ವೃಷದುಕ್ಥಶ್ಚ ಋಷಿರ್ದೀರ್ಘತಮಾಸ್ತಥಾ ।**
**ಕಕ್ಷೀವಾಂಶ್ಚ ತ್ರಯಂಸ್ತ್ರಿಂಶತ್ ಸ್ಮೃತಾ ಹ್ಯಂಗಿರಸಾಂ ವರಾಃ ॥**

**ಇತಿ । ಏವಮಂಗಿರಸಾಂ ಅಪತ್ಯಂ ತ್ರಯಂಸ್ತ್ರಿಂಶತ್ತಮಃ ಕಕ್ಷೀವಾನ್ । ತಸ್ಮೈ ಕಕ್ಷೀವತೇ । ಮಹ್ಯಮೇವೇತ್ಯರ್ಥಃ ।**

ಅಂಗಿರಾಋಷಿಗಳ ವಂಶದವರು ಪಜ್ರಾ ಎಂದು ಪ್ರಸಿದ್ಧರಾಗಿರುವರು ಅವರ ವಂಶದಲ್ಲಿ ಉತ್ಪನ್ನರಾದವರು ಪಜ್ರಿಯರೆನಿಸುವರು. ಈ ಸೂಕ್ತಕ್ಕೆ ಮಂತ್ರದ್ರಷ್ಟ್ಯವಾಗಿರುವ ಕಕ್ಷೀವಂತನೆಂಬುವ ಋಷಿಯು ಈ ಅಂಗಿರಾಋಷಿಗಳ ವಂಶದಲ್ಲಿ ಉತ್ಪನ್ನನಾದವನು ಎಂದು ಪುರಾಣಿಕರು ಹೇಳುವರು. ಉಶಿಜ, ವೃಷದುಕ್ಥ, ದೀರ್ಘತಮ, ಕಕ್ಷೀವಾನ್, ಎಂದು ಹೆಸರುಳ್ಳ ಋಷಿಗಳೇ ಮೊದಲಾಗಿ ಮೂವತ್ತುಮೂರು ಜನರು ಅಂಗಿರಾಋಷಿಗಳ ವಂಶದಲ್ಲಿ ಶ್ರೇಷ್ಠರಾಗಿರುವರು. ಈ ಕಕ್ಷೀವಂತನೆಂಬುವನು ಇವರಲ್ಲಿ ಮೂವತ್ತನೆಯನಾಗಿರುವನು ಎಂದೂ ಈ ಕಕ್ಷೀವಂತನಿಗೆ ಬಹಳಮಟ್ಟಿನ ಅಜ್ಞಾನವು ಇದ್ದಿತು. ಇವನು ತನ್ನ ಅಜ್ಞಾನವು ಹೋಗಿ ಉತ್ತಮವಾದ ಜ್ಞಾನವನ್ನು ಹೊಂದುವುದಕ್ಕಾಗಿ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಅವರು ಇವನ ಸ್ತುತಿಗೆ ಮೆಚ್ಚಿ ಅತಿಶಯವಾದ ಜ್ಞಾನವನ್ನು ಅನುಗ್ರಹಿಸಿದರು ಎಂಬ ಇತಿಹಾಸವನ್ನು ವಿವರಿಸಿರುವರು. ಈ ಇತಿಹಾಸವನ್ನು ಸಾಯಣರೂ ಹೇಳಿರುತ್ತಾರೆ.

**ಕಕ್ಷೀವತೇ—ಕಕ್ಷ್ಯಾನಾಮ ರಜ್ಜುರಶ್ವಸ್ಯ । ತದ್ವತೇ ತತ್ಸಂಜ್ಞಾಯ ।** ಕುದುರೆಯನ್ನು ಕಟ್ಟುವ ಹಗ್ಗಕ್ಕೆ ಕಕ್ಷ್ಯಾ ಎಂದು ಹೆಸರು ಅದನ್ನು ಹೊಂದಿರುವವನು, ಕಕ್ಷೀವಾನ್ ಎಂದು ಕಕ್ಷೀವಾನ್ ಎಂಬ ಶಬ್ದದ ಅವಯವಾರ್ಥವು.

**ಕಾರೋತರಾತ್ ಶಫಾತ್ ವೃಷ್ಣಃ—ಕಾರೋತರೋ ನಾಮ ವೈದಲಚರ್ಮವೇಷ್ಟಿತಃ ಭಾಜನ-ವಿಶೇಷಃ ಯಸ್ಮಿನ್ ಸುರಾಯಾಃ ಸ್ರಾವಣಂ ಕ್ರಿಯತೇ ।** ಚೆನ್ನಾಗಿ ಹದಮಾಡಿದ ಚರ್ಮದಿಂದ ನಿರ್ಮಿಸಿದ ಪಾತ್ರೆಯು ಕಾರೋತರವೆನಿಸಿರುತ್ತದೆ. ಇದರಲ್ಲಿ ಮದ್ಯವನ್ನು ಹಾಕಿಡುವುದರಿಂದ ಅದು ಸೋರಿಹೋಗದಂತೆ ಇರುತ್ತದೆ. ವೃಷ್ಣಃ ಎಂಬ ಪದಕ್ಕೆ ಸೇಚನಾರ್ಥವನ್ನೂ ಪೂರಣಾರ್ಥವನ್ನೂ ಅಂಗೀಕರಿಸಿ ಅಶ್ವಿನೀದೇವತೆಗಳು ತಮ್ಮ ಅಶ್ವದ ಗೊರಸಿನಿಂದಲೇ ಅಸಂಖ್ಯಾತವಾದ ಮದ್ಯದ ಕುಂಭಗಳು ಸ್ರವಿಸುವಂತೆ ಅಥವಾ ತುಂಬುವಂತೆ ಮಾಡಿದರು ಎಂದು ಅರ್ಥವನ್ನು ಹೇಳಿರುವರು. ಸೌತ್ರಾಮಣಿ ಮೊದಲಾದ ಯಾಗಗಳಲ್ಲಿ ಮದ್ಯದ ಆವಶ್ಯಕತೆಯು ಅತಿಶಯವಾಗಿ ಇರುವುದರಿಂದ ಅವರಿಗಾಗಿ ಅಶ್ವಿನೀದೇವತೆಗಳು ಮದ್ಯವು ಸುಲಭವಾಗಿ ದೊರೆಯುವಂತೆ ಮಾಡಿದರು ಎಂದು ವಿವರಣೆ ಮಾಡಿರುತ್ತಾರೆ.

ಸ್ಕಂದಸ್ವಾಮಿಗಳು ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳಿರುವರು—

> **ಅತ್ರೇತಿಹಾಸಮಾಚಕ್ಷತೇ-ಅಶ್ವಿನೌ ಯದೃಚ್ಛಯಾ ಪರ್ಯಟಂತೌ ಪಿಬನ್ಮತ್ತಂ ಬಾಲಸಮೂಹಂ ದದರ್ಶ । ಸ ತೌ ಸುರಾಂ ಯಯಾಚೇ । ತಸ್ಮೈ ಅಶ್ವಿನೌ ದೇವತಾ ಮಹಾಭಾಗ್ಯಾತ್ ಅಶ್ವಶಫಾದುದ್ರಿಚ್ಯ ಘಟಶತಂ ಸುರಾಯಾ ದದತುರಿತಿ । ತದಿಹೋಚ್ಯತೇ ಕಾರೋತರಾದಿ-ತ್ಯಾದಿನಾ । ಕಾರೋತರ ಇತಿ ಕೂಪನಾಮ । ತತ್ಸಾದೃಶ್ಯಾಚ್ಚ ಇಹ ಅಶ್ವಶಫೇ ಪ್ರಯುಜ್ಯತೇ ಅಶ್ವಸ್ಯ ಶಫಾದುದ್ರಿಚ್ಯ ಮತ್ತಬಾಲಕೇಭ್ಯಃ ಸುರಾಯಾಃ ಘಟಶತಂ ದತ್ತವಂತೌ ಇತ್ಯರ್ಥಃ ॥**

ಅಶ್ವಿನೀದೇವತೆಗಳು ತಮ್ಮ ಸ್ವೇಚ್ಛೆಯಿಂದ ಸಂಚರಿಸುತ್ತಿರುವಾಗ ಮದ್ಯಪಾನಮಾಡಿ ಮದಿಸಿರುವ ಹುಡುಗರ ಒಂದು ಗುಂಪನ್ನು ನೋಡಿದರು. ಹುಡುಗರು ಇವರನ್ನು ಮದ್ಯವನ್ನು ನಮಗೆ ಕೊಡಿರಿ ಎಂದು ಕೇಳಿಕೊಂಡರು. ಆಗ ಅಶ್ವಿನೀದೇವತೆಗಳು ತಮ್ಮ ದೇವತಾತ್ವರೂಪವಾದ ಪ್ರಭಾವಕ್ಕೆ ಅನುಗುಣವಾಗಿ ತಮ್ಮ ಕುದುರೆಯಗೊರಸು ಭಾವಿಯ ಆಕಾರದಂತೆ ದುಂಡಾಗಿ ಇರುವ ಕಾರಣ ಭಾವಿಯಿಂದ ನೀರು ಒದಗಿಬರುವಹಾಗೆ ತಮ್ಮ ಕುದುರೆಯ ಗೊರಸಿನಿಂದಲೇ ಮದ್ಯವು ಸ್ರವಿಸಿ ಅನೇಕ ಮದ್ಯಕುಂಭಗಳನ್ನು ತುಂಬುವಂತೆ ಮಾಡಿ ಮದ್ಯವನ್ನು ಆ ಬಾಲಕರಿಗಾಗಿ ಕೊಟ್ಟರು ಎಂದು ಇತಿಹಾಸವನ್ನು ಹೇಳಿರುವರು ಮತ್ತು ಈ ಅಂಶವೇ—

> **ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ ಪರಿ ಜ್ಮನ್ ।**
>
> **ಶಫಾದಶ್ವಸ್ಯ ವಾಜಿನೋ ಜನಾಯ ಶತಂ ಕುಂಭಾಁ ಅಸಿಂಚತಂ ಮಧೂನಾಂ ॥**

(ಋ. ಸಂ. ೧-೧೧೭-೬)

ಎಂಬ ಋಕ್ಕಿನಲ್ಲಿಯೂ ಹೇಳಲ್ಪಟ್ಟಿರುವುದು ಎಂದು ಈ ಋಕ್ಕನ್ನು ಉದಹರಿಸಿರುವರು.

**ಪುರಂಧಿಂ—ಪ್ರಭೂತಾಂ ಧಿಯಂ । ಬುದ್ಧಿಂ** ಅತಿಶಯವಾದ ಬುದ್ಧಿಯನ್ನು ಎಂದು ಅರ್ಥ. ಬುದ್ಧಿಯ ಅತಿಶಯವು ಎಂದರೆ ಎಲ್ಲಾ ವಿಷಯಗಳನ್ನೂ ಚೆನ್ನಾಗಿ ತಿಳಿಯುವುದು ಎಂದು. ಈ ವಿಷಯದಲ್ಲಿ ಸ್ಕಂದಸ್ವಾಮಿಗಳು—**ಅರದತಂ ಪುರಂಧಿಂ** ಎಂಬಲ್ಲಿ—

**ಪುರಂಧಿಂ ಬಹ್ವರ್ಥವಿಷಯಾಂ ಪ್ರಜ್ಞಾಂ ಅಥವಾ ರದತಿಃ ವಿಲೇಖನಾರ್ಥ ಏವ । ಕಕ್ಷೀವತೋ ಬಹ್ವರ್ಥವಿಷಯಾಂ ಪ್ರಜ್ಞಾಂ ವಿಲಿಖಿತವಂತೌ ಜಡಾಂ ಸತೀಂ ತೀಕ್ಷ್ಣೀಕೃತವಂತಾ । ಅತೀತಾನಾಗತವರ್ತಮಾನಸಮರ್ಥಾಂ ಸರ್ವಾರ್ಥಗ್ರಹಣಸಮರ್ಥಾಂ ಚ ಕಕ್ಷೀವತಃ ಪ್ರಜ್ಞಾಂ ಕೃತವಂತೌ ಸ್ಥ ಇತ್ಯರ್ಥಃ । ತದೇತತ್ಕ್ಕಕ್ಷೇನಾಪ್ಯುಕ್ತಂ ।—**

**ಯಾಭಿಃ ಪರಿಜ್ಮಾ ತನಯಸ್ಯ ಮಜ್ಮನಾ ದ್ವಿಮಾತಾ ತೂರ್ಷು ತರಣಿರ್ವಿಭೂಷತಿ ।**
**ಯಾಭಿಸ್ತ್ರಿಮನ್ತುರಭವದ್ವಿಚಕ್ಷಣಸ್ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧–೧೧೨–೪)

ರದಧಾತುವಿಗೆ ವಿಲೇಖನ ಎಂಬ ಅರ್ಥವು ಬೇರೆಯ ಕಡೆಯಲ್ಲಿ ಇರುವುದಾದರೂ ಇಲ್ಲಿ ದಾನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವ ಕಾರಣ ಬಹಳ ವಿಷಯಗಳಲ್ಲಿಯೂ ಪ್ರವರ್ತಿಸುವ ಬುದ್ಧಿಯನ್ನು ಕೊಟ್ಟಿರುವರು ಎಂದೂ, ಅಥವಾ ರದ ಧಾತುವಿಗೆ ವಿಲೇಖನ ಎಂಬ ಅರ್ಥವೇ ಆಗಿದ್ದಾಗ್ಯೂ ಬಹ್ವರ್ಥವಿಷಯವಾದ ಪ್ರಜ್ಞೆಯನ್ನು ಅಶ್ವಿನೀ ದೇವತೆಗಳು ಬರೆದರು ಎಂಬ ಅರ್ಥವೇ ಆಗಿ ಅದರಿಂದ ಜಡವಾದ ಬುದ್ಧಿಯನ್ನು ತೀಕ್ಷ್ಣವಾಗಿರುವಂತೆ ಮಾಡಿದರು ಎಂದೂ ತಾತ್ಪರ್ಯವನ್ನು ಉಲ್ಲೇಖಮಾಡಿರುವರು ಭೂತಭವಿಷ್ಯದ್ವರ್ತಮಾನಕಾಲಗಳೆಂಬ ಮೂರು ಕಾಲಗಳಲ್ಲಿಯೂ ಪ್ರವರ್ತಿಸುವ ಮಟ್ಟಿನ ಬುದ್ಧಿವೇಗವನ್ನು ಉಂಟುಮಾಡಿದರೆಂದಭಿಪ್ರಾಯವು. ಇದೇ ಅಭಿಪ್ರಾಯವನ್ನು—

**ಯಾಭಿಸ್ತ್ರಿಮಂತುರಭವದ್ವಿಚಕ್ಷಣಸ್ತಾಭಿರೂ ಷು ಊತಿಭಿರಶ್ವಿನಾ ಗತಂ ।**

(ಋ. ಸಂ ೧-೧೧೨-೪)

ಎಂಬ ಋಕ್ಕಿನಿಂದ ಕುತ್ಸರೂ ವಿವರಿಸಿರುತ್ತಾರೆ. ಎಂದು ಹೇಳಿ ಆ ಋಕ್ಕನ್ನು ಉದಹರಿಸಿರುವರು ಈ ವಿಷಯದಲ್ಲಿ ಯಾಸ್ಕರು ಹೀಗೆ ಹೇಳಿರುವರು—**ಪುರಂಧಿರ್ಬಹುಧೀಃ (ನಿ. ೬–೧೩) ಯದ್ವಾ ಪುರಂ ಪೂರಯಿತವ್ಯಂ ಸರ್ವ ವಿಷಯಜಾತಂ ಅಸ್ಯಾಂ ಧೀಯತೇ ಅವಸ್ಥಾಪ್ಯತೇ ಇತಿ ಪುರಂಧಿರ್ಬುದ್ಧಿಃ ।** ಯಾಸ್ಕರು—**ಪುರಂಧಿಃ** ಎಂಬ ಶಬ್ದವು ಬಹಳ ಬುದ್ಧಿಯುಳ್ಳವನು ಎಂಬ ಅರ್ಥವನ್ನು ಬೋಧಿಸುವುದು ಎಂದು—ಅರ್ಥವನ್ನು ವಿವರಿಸಿ

**ತಾ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ।**

(ಋ. ಸಂ ೭–೩೯–೪)

ಎಂಬ ಋಕ್ಕನ್ನು ಉದಹರಿಸಿ (ನಿ. ೬–೧೩) **ಪುರಂಧಿಃ ಬಹುಧೀಃ**—ಪುರಂಧಿ ಎಂದರೆ ಬಹಳವಾದ ಬುದ್ಧಿಯು ಎಂದು ಅರ್ಥವನ್ನು ಹೇಳಿರುವರು. ಇದರಿಂದ ಸಾಯಣರು ಎಲ್ಲಾ ವಿಧವಾದ ವಿಷಯಗಳಲ್ಲಿಯೂ ಪ್ರವರ್ತಿಸುವಂತೆ ಸ್ಥಿರವಾಗಿರುವ ಬುದ್ಧಿಯು ಎಂದೂ, ಅಥವಾ, ಎಲ್ಲಾ ವಿಷಯಗಳನ್ನೂ ಒಳಗೊಂಡಿರುವುದು ಎಂದೂ ಅರ್ಥವನ್ನು ಹೇಳಿರುವರು. ಇದಲ್ಲದೆ ಪುರಂಧಿಶಬ್ದಕ್ಕೆ ಯಾಸ್ಕರು ಮತ್ತೊಂದುಕಡೆಯಲ್ಲಿ—

**ಪುರಂಧಿರ್ಬಹುಧೀಸ್ತತ್ಕಃ । ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ । ಇಂದ್ರ ಇತ್ಯಪರಂ ಸ ಬಹುಕರ್ಮತಮಃ, ಪುರಾಂ ಚ ದಾರಯಿತೃತಮಃ । ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ॥**

(ನಿ ೬-೧೩)

ಎಂದು ಪುರಂಧಿಶಬ್ದಕ್ಕೆ ನಿರ್ವಚನವನ್ನು ಹೇಳಿರುವರು. ಇಲ್ಲಿ ಪುರಂಧಿಯೆಂದರೆ ಮಹಾಬುದ್ಧಿಯುಳ್ಳವನು ಎಂದು ಅರ್ಥವು. ಆದರೆ ಎಲ್ಲಾ ದೇವತೆಗಳಿಗೂ ಬಹು ಬುದ್ಧಿಯಿರುವುದರಿಂದ ಪುರಂಧಿಶಬ್ದವಾಚ್ಯನಾದ ದೇವತೆಯು ಯಾರು? ಎಂದರೆ, ಪುರಂಧಿಯೆಂದರೆ ಭಗನೆಂದು ಕೆಲವರು ಹೇಳುವರು. ಏಕೆಂದರೆ—

**ತಾ ಅಧ್ವರ ಉಶತೋ ಯಕ್ಷ್ಯಗ್ನೇ ಶ್ರುಷ್ಟೀ ಭಗಂ ನಾಸತ್ಯಾ ಪುರಂಧಿಂ ।**

(ಋ ಸಂ. ೭-೩೯-೪)

ಎಂಬ ಋಕ್ಕಿನಲ್ಲಿ ಇರುವ ಅನ್ವಾದೇಶದಂತೆ ಪುರಂಧಿಶಬ್ದವು ಭಗನಿಗೆ ವಿಶೇಷಣವಾಗಿರುವುದರಿಂದ ಪುರಂಧಿಯೆಂದರೆ ಭಗನೆಂಬ ದೇವತೆಯು ಎಂದು ಕೆಲವರು ಹೇಳುವರು.

ಪುರಂಧಿಶಬ್ದಕ್ಕೆ ಇಂದ್ರನೆಂಬ ಅರ್ಥವಿರುವುದೆಂದು ಕೆಲವರು ಹೇಳುವರು ಏಕೆಂದರೆ–ಧೀಃ ಇತಿ ಕರ್ಮನಾಮಸು ಪಠಿತ್ವಾತ್, ಅನ್ಯೇಭ್ಯೋ ದೇವೇಭ್ಯಃ ಬಹುಕರ್ಮತಮಃ । ಸ ಹಿ ಇಂದ್ರಃ । ಧೀಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧) ಪುರಂಧಿಯೆಂದರೆ ಅನೇಕ ಸಾಹಸಕರ್ಮಗಳನ್ನು ಮಾಡಿದವನು ಎಂದರ್ಥವು. ಇಂತಹ ಸಾಹಸಕರ್ಮಗಳನ್ನು ಮಾಡಿದವನು ಇಂದ್ರನಾದ್ದರಿಂದ ಪುರಂಧಿಶಬ್ದವು ಇಂದ್ರನನ್ನು ಸೂಚಿಸುವುದು ಅಥವಾ **ಪುರಾಂ ಚ ದಾರಯಿತೃತಮಃ** ಎಂದರೆ ಶಂಬರಾಸುರನೇ ಮೊದಲಾದ ಅಸುರರ ಪಟ್ಟಣಗಳನ್ನು ಧ್ವಂಸ ಮಾಡಿದವನು ಇಂದ್ರನಾದ್ದರಿಂದ ಪುರಂಧಿಶಬ್ದಕ್ಕೆ ಇಂದ್ರನೆಂದೇ ಅರ್ಥಮಾಡಬೇಕೆಂದು ಕೆಲವರ ವಾದವು. ಮತ್ತೆ ಕೆಲವರು ಪುರಂಧಿಯೆಂದರೆ ವರುಣನೆಂದು ಹೇಳುವರು. ಏಕೆಂದರೆ ಧೀಶಬ್ದವು ಪ್ರಜ್ಞಾವಾಚಕವಾಗಿರುವುದು. (ನಿ ೩-೧೩) **ಪ್ರಜ್ಞಯಾ ಏನಂ ಸ್ತೌತಿ ತಸ್ಮಾತ್ ವರುಣಃ** ವರುಣನನ್ನು ಪ್ರಜ್ಞೆಯಿಂದ ಅಥವಾ ಬುದ್ಧಿಶಕ್ತಿಯಿಂದ ಜನರು ಸ್ತೋತ್ರಮಾಡುವರಾದ್ದರಿಂದ ಅಥವಾ ವರುಣನ ಪ್ರಜ್ಞೆ ಅಥವಾ ಬುದ್ಧಿಯನ್ನು ಜನರು ಪ್ರಶಂಸೆಮಾಡುವ ರಾದ್ದರಿಂದ ಪುರಂಧಿಯೆಂದರೆ ವರುಣನೇ ಎಂದು ಹೇಳಿ ಈ ವಿಷಯವನ್ನು ಸಮರ್ಥಿಸುವುದಕ್ಕಾಗಿ—

**ಇಮಾಮೂ ಷ್ವಾಸುರಸ್ಯ ಶ್ರುತಸ್ಯ ಮಹೀಂ ಮಾಯಾಂ ವರುಣಸ್ಯ ಪ್ರ ವೋಚಂ ।**
**ಮಾನೇನೇವ ತಸ್ಥಿವಾ ಅಂತರಿಕ್ಷೇ ವಿ ಯೋ ಮಮೇ ಪೃಥಿವೀಂ ಸೂರ್ಯೇಣ ॥**

(ಋ. ಸಂ. ೫-೮೫-೫)

**ಇಮಾಮೂ ನು ಕವಿತಮಸ್ಯ ಮಾಯಾಂ ಮಹೀಂ ದೇವಸ್ಯ ನಕಿರಾ ದಧರ್ಷ ।**
**ಏಕಂ ಯದುದ್ನಾ ನ ಪೃಣಂತ್ಯೇನೀರಾಸಿಂಚಂತೀರವನಯಃ ಸಮುದ್ರಂ ॥**

(ಋ. ಸಂ. ೫-೮೫-೬)

ಎಂಬ ಋಕ್ಕುಗಳನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಯುವಂ**—ಯುಷ್ಮಚ್ಛಬ್ದದ ಮಪರ್ಯಂತಕ್ಕೆ ಯುವಾದೇಶ. ವಿಭಕ್ತಿಗೆ ಅಮಾದೇಶ. **ಭಾಷಾಯಾಂ** ಎಂದು ಲೋಕದಲ್ಲಿ ಮಾತ್ರ ಆತ್ವವಿಧಾನಮಾಡಿರುವುದರಿಂದ ವೇದದಲ್ಲಿ ಆತ್ವ ಬರುವುದಿಲ್ಲ. **ಶೇಷೇಲೋಪಃ** ಎಂಬುದರಿಂದ ದಕಾರಕ್ಕೆ ಲೋಪ.

**ನರಾ**—ನೄ ನಯೇ. ಧಾತು. **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಸಂಬೋಧನೆಯಲ್ಲಿ **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಏಕಾದೇಶವಾಗಿ ಬರುತ್ತದೆ.

**ಸ್ತುವತೇ**—ಷ್ಟುಞ್ ಸ್ತುತೌ ಧಾತು. ಅದಾದಿ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ಪಿಗೆ ಲುಕ್. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣಬರುವುದಿಲ್ಲ. **ಅಚಿಶ್ನುಧಾತು-ಭ್ರುವಾಂ**—(ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ. ಚತುರ್ಥೀಏಕವಚನಾಂತರೂಪ. ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಪಜ್ರಿಯಾಯ**—ಪಜ್ರಾಯಾಂ ಜಾತಃ ಎಂದು ಅರ್ಥವಿಕ್ಷಾಮಾಡಿದಾಗ **ತತ್ರ ಜಾತಃ** (ಪಾ. ಸೂ. ೪-೩-೨೫) ಎಂಬುದರಿಂದ ಶೈಷಿಕವಾದ ಘಚ್ ಪ್ರತ್ಯಯ. **ಆಯನೇಯೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿಚ** (ಪಾ. ಸೂ. ೬-೪-೧೪೮) ಎಂಬುದರಿಂದ ಆಕಾರಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಕಕ್ಷೀವತೇ—ಆಸಂದೀವದಷ್ಠೀವಚ್ಚಕ್ರೀವತ್ ಕಕ್ಷೀವತ್**—(ಪಾ. ಸೂ. ೮-೨-೧೨) ಎಂಬುದರಿಂದ ಕಕ್ಷೀವತ್ ಎಂದು ನಿಪಾತಮಾಡಿರುವುದರಿಂದ **ಕಕ್ಷ್ಯಾ** ಶಬ್ದಕ್ಕೆ ಸಂಪ್ರಸಾರಣವೂ ವತ್ವವೂ ಬರುತ್ತವೆ.

**ಅರದತಂ**—ರದ ವಿಲೇಖನೇ. ಧಾತು. ಲಙ್ ಮಧ್ಯಮಪುರುಷದ್ವಿವಚನದಲ್ಲಿ **ತಸ್ ಥಸ್ ಥ**— ಎಂಬುದರಿಂದ ತಮಾದೇಶ. ಶಪ್ ವಿಕರಣ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪುರಂಧಿಂ**—ಪುರಂಧಿರ್ಬಹುಧೀಃ (ನಿರು ೬-೧೩) ಎಂಬುದಾಗಿ ಯಾಸ್ಕರು ಹೇಳುತ್ತಾರೆ. (ಹೆಚ್ಚು ಬುದ್ಧಿಯುಳ್ಳವ) ಪೃಷೋದರಾದಿಯಲ್ಲಿ ಸೇರಿರುವುದರಿಂದ ಪುರಂಧಿ ಭಾವ ಬರುತ್ತದೆ. ಅಥವಾ ಪುರಂ ಪೂರಯಿತವ್ಯಂ ಸರ್ವವಿಷಯಜಾತಮಸ್ಯಾಂ ಧೀಯತೇ ಅವಸ್ಥಾಪ್ಯತೇ, ಇತಿ ಪುರಂಧಿಃ ಬುದ್ಧಿಃ. ಡುಧಾಞ್ ಧಾರಣಪೋಷಣಯೋಃ ಧಾತು. **ಕರ್ಮಣ್ಯಧಿಕರಣೇ ಚ** (ಪಾ. ಸೂ. ೩-೩-೯೩) ಎಂಬುದರಿಂದ ಅಧಿಕರಣಾರ್ಥದಲ್ಲಿ ಇದಕ್ಕೆ ಕಿಪ್ರತ್ಯಯ. **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ **ತತ್ಪುರುಷೇ**

**ಕೃತಿಬಹುಲಂ** (ಪಾ. ಸೂ. ೬-೧-೧೪) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಇಲ್ಲಿಯೂ ಅದರಿಂದ ಅಲುಕ್. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಇದು ಕೇವಲ ವ್ಯುತ್ಪತ್ತಿಪ್ರದರ್ಶನಮಾತ್ರ. ಪೃಷೋದರಾದಿಯಲ್ಲಿ ಸೇರಿರುವುದೇ ನ್ಯಾಯವಾದುದು.

**ವೃಷ್ಣಃ**—ವೃಷು ಸೇಚನೇ ಧಾತು. **ಕನಿನ್‌ಯುವೃಷಿ**—(ಉ. ಸೂ. ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯ. ಷಷ್ಠೀ ಏಕವಚನ ಪರವಾದಾಗ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಅನ್ನಿನ ಅಕಾರಕ್ಕೆ ಲೋಪ. ಆದ್ಯುದಾತ್ತಸ್ವರ ಬರುತ್ತದೆ.

**ಅಸಿಂಚತಮ್**—ಷಿಚಿರ್ ಕ್ಷರಣೇ ಧಾತು. ತುದಾದಿ. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥಮಿಪಾಂ**—ಎಂಬುದರಿಂದ ತಮಾದೇಶ. **ತುದಾದಿಭ್ಯಃ ಶಃ** ಎಂಬುದರಿಂದ ಶಾದೇಶ. **ಶೇಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜ-
ಮಸ್ಮಾ ಅಧತ್ತಂ ।
ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ-
ಸ್ವಸ್ತಿ ॥ ೮ ॥

॥ ಪದಪಾಠಃ ॥

ಹಿಮೇನ । ಅಗ್ನಿಂ । ಘ್ರಂಸಂ । ಅವಾರಯೇಥಾಂ । ಪಿತುಽಮತೀಂ । ಊರ್ಜಂ । ಅಸ್ಮೈ । ಅಧತ್ತಂ ।
ಋಬೀಸೇ । ಅತ್ರಿಂ । ಅಶ್ವಿನಾ । ಅವಽನೀತಂ । ಉತ್ । ನಿನ್ಯಥುಃ । ಸರ್ವಽಗಣಂ । ಸ್ವಸ್ತಿ ॥ ೮ ॥

॥ ಸಾಯಣಭಾಷ್ಯಂ ॥

ಅತ್ರೇದಮಾಖ್ಯಾನಂ । ಅತ್ರಿಮೃಷಿಮಸುರಾಃ ಶತದ್ವಾರೇ ಪೀಡಾಯಂತ್ರಗೃಹೇ ಪ್ರವೇಶ್ಯ ತುಷಾಗ್ನಿನಾಬಾಧಿಷತ । ತದಾನೀಂ ತೇನ ಋಷಿಣಾ ಸ್ತುತಾವಶ್ವಿನಾವಗ್ನಿಮುದಕೇನೋಪಶಮಯ್ಯ ತಸ್ಮಾತ್ಪೀಡಾಗೃಹಾದವಿಕಲೇಂದ್ರಿಯವರ್ಗಂ ಸಂತಂ ನಿರಗಮಯತಾಮಿತಿ । ತದೇತತ್ಪ್ರತಿಪಾದ್ಯತೇ । ಹೇ ಅಶ್ವಿನೌ ಹಿಮೇನ ಹಿಮವಚ್ಛೀತೇನೋದಕೇನ ಘ್ರಂಸಂ ದೀಪ್ಯಮಾನಮತ್ರೇರ್ಬಾಧನಾರ್ಥಮಸುರೈಃ ಪ್ರಕ್ಷಿಪ್ತಂ ತುಷಾಗ್ನಿಮವಾರಯೇಥಾಂ । ಯುವಾಂ ನಿವಾರಿತವಂತೌ । ಶೀತೀಕೃತವಂತಾವಿತ್ಯರ್ಥಃ । ಅಪಿ ಚಾಸ್ಮಾ ಅಸುರಪೀಡಯಾ ಕಾರ್ಶ್ಯಂ ಪ್ರಾಪ್ತಾಯಾತ್ರಯೇ ಪಿತುಮತೀಂ । ಪಿತುರಿತ್ಯನ್ನನಾಮ । ಅನ್ನಯುಕ್ತಮೂರ್ಜಂ ಬಲಪ್ರದಂ ರಸಾತ್ಮಕಂ ಕ್ಷೀರಾದಿಕಮಧತ್ತಂ । ಪುಷ್ಟ್ಯರ್ಥಂ ಪ್ರಾಯಚ್ಛತಂ । ಋಬೀಸೇಽಪಗತಪ್ರಕಾಶೇ ಪೀಡಾಯಂತ್ರಗೃಹೇಽವನೀತಮವಾಙ್ಮುಖತಯಾಸುರೈಃ ಪ್ರಾಪಿತಮತ್ರಿಂ ಸರ್ವಗಣಂ । ಗಣಃ ಸಮೂಹಃ । ಸರ್ವೇಷಾಮಿಂದ್ರಿಯಾಣಾಂ ಪುತ್ರಾದೀನಾಂ ವಾ ಗಣೇನೋಪೇತಂ ಸ್ವಸ್ತಿ ಅವಿನಾಶೋ ಯಥಾ ಭವತಿ ತಥೋನ್ನಿನ್ಯಥುಃ । ತಸ್ಮಾದ್ಗೃಹಾದುದ್ಗಮಯ್ಯ ಯುವಾಂ ಸ್ವಗೃಹಂ ಪ್ರಾಪಿತವಂತೌ । ಯದ್ವಾ । ಹಿಮೇನ ಶೀತೇನ ವೃಷ್ಟ್ಯುದಕೇನಾಗ್ನಿವತ್ತೀಕ್ಷ್ಣಂ ಘ್ರಂಸಂ । ಅಹರ್ನಾಮೈತತ್ । ಸಾಮರ್ಥ್ಯಾನ್ನಿದಾಘಕಾಲೀನಮಹರವಾರಯೇಥಾಂ । ತಸ್ಯಾಹ್ನಸ್ತೈಕ್ಷ್ಣ್ಯಂ ನಿವಾರಿತವಂತೌ । ಅಪಿ ಚಾಸ್ಮಾ ಅಗ್ನಯೇ ಪಿತುಮತೀಂ ಚರುಪುರೋಡಾಶಾದಿಲಕ್ಷಣಾನ್ನೋಪೇತಮೂರ್ಜಂ ಬಲಕರಂ ರಸಾತ್ಮಕಮುಪಸ್ತರಣಾಭಿಘಾರಣಾತ್ಮಕಂ ಘೃತಮಧತ್ತಂ । ವೃಷ್ಟ್ಯುತ್ಪಾದನೇನಾಗ್ನೇರ್ಯಾಗಾರ್ಥಂ ಹವೀಂಷಿ ನಿಷ್ಪಾದಿತವಂತಾವಿತ್ಯರ್ಥಃ । ಋಬೀಸೇಽಪಗತತೇಜಸ್ಕೇ ಪೃಥಿವೀದ್ರವ್ಯೇಽವನೀತಮೋಷಧೀನಾಮುತ್ಪಾದನಾಯಾವಸ್ತಾನ್ನೀತಂ । ಪಾರ್ಥಿವಾಗ್ನಿನಾ ಪರಿಪಕ್ವಾ ಉದಕೇನ ಕ್ಲಿನ್ನಾ ಹ್ಯೋಷಧಿವನಸ್ಪತಯೋ ವಿರೋಹಂತಿ । ಅತ್ರಿಂ ಹವಿಷಾಮತ್ತಾರಮೋಷಧಿವನಸ್ಪತ್ಯಾದೀನಾಂ ವಾ ಏವಂವಿಧಮಗ್ನಿಂ ಸರ್ವಗಣಂ ವ್ರೀಹ್ಯಾದ್ಯೋಷಧಿಗಣೋಪೇತಂ ಹೇ ಅಶ್ವಿನೌ ಯುವಾಂ ಸ್ವಸ್ತಿ ಅವಿನಾಶೋ ಯಥಾ ಭವತಿ ತಥೋನ್ನಿನ್ಯಥುಃ । ವ್ರೀಹ್ಯಾದ್ಯೋಷಧಿವನಸ್ಪತಿರೂಪೇಣ ಭೂಮೇರುಪರಿಷ್ಟಾನ್ನೀತವಂತೌ । ಕಾರಣಾತ್ಮನಾ ಪಾರ್ಥಿವಾಗ್ನೌ ವರ್ತಮಾನಂ ಸರ್ವಮೋಷಧಿವನಸ್ಪತ್ಯಾದಿಕಮಶ್ವಿನೌ ಪ್ರವರ್ಷಣೇನ ವ್ಯಕ್ತೀಕೃತವಂತಾವಿತ್ಯರ್ಥಃ । ಅಯಂ ಪಕ್ಷೋ ಯಾಸ್ಕೇನ ಹಿಮೇನೋದಕೇನೇತ್ಯಾದಿನೋಕ್ತಃ । ನಿ. ೬-೩೬ ॥ ಪಿತುಮತೀಂ। ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಋಬೀಸೇ । ಅತ್ರ ಯಾಸ್ಕಃ । ಋಬೀಸಮಪಗತಭಾಸಮಪಚಿತಭಾಸಮಪಹೃತಭಾಸಂ ಗತಭಾಸಂ ವೇತಿ । ನಿ. ೬-೩೫ । ಪೃಷೋದರಾದಿತ್ವಾದಭಿಮತರೂಪಸ್ವರಸಿದ್ಧಿಃ । ಅತ್ರಿಂ । ಅದ ಭಕ್ಷಣೇ । ಅದೇಸ್ತ್ರಿನಿ ಚೇತಿ ಚಶಬ್ದಾತ್ತ್ರಿಃ । ಅವನೀತಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸ್ವಸ್ತಿ । ಅಸ ಭುವಿ । ಭಾವೇ ಕ್ತಿನ್ । ಛಂದಸ್ಯುಭಯಥೇತಿ ಸಾರ್ವಧಾತುಕತ್ವಾದಸ್ತೇರ್ಭೂಭಾವಾಭಾವಃ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಘ್ರಂಸಂ**—ಜ್ವಲಿಸುತ್ತಿರುವ । **ಅಗ್ನಿಂ—**(ಅತ್ರಿಯನ್ನು ಹಿಂಸಿಸುವುದಕ್ಕಾಗಿ ಅಸುರರಿಂದ ಪ್ರೇರಿತವಾದ) ಅಗ್ನಿಯನ್ನು । **ಹಿಮೇನ**—ಹಿಮದಂತೆ ತಣ್ಣಗಿರುವ ನೀರಿನಿಂದ । **ಅವಾರಯೇಥಾಂ—**ಪರಿಹರಿಸಿದಿರಿ । **(ಅಪಿ ಚ**—ಮತ್ತು) । **ಅಸ್ಮೈ**—(ಅಸುರಪೀಡೆಯಿಂದ ಕೃಶನಾದ ಅತ್ರಿಗೆ) ಇವನಿಗೆ । **ಪಿತುಮತೀಂ**—ಅನ್ನಯುಕ್ತವಾದ । **ಊರ್ಜಂ**—ಬಲಪ್ರದವಾದ (ಕ್ಷೀರಾದಿಗಳನ್ನು) । **ಅಧತ್ತಂ**—(ಪುಷ್ಟಿಹೊಂದಲು) ಕೊಟ್ಟಿರಿ । **ಋಬೀಸೇ**—ಕತ್ತಲಾಗಿರುವ ಪೀಡಾಗೃಹದಲ್ಲಿ (ಅಸುರರಿಂದ) । **ಅವನೀತಂ**--ತಲೆಕೆಳಗಾಗಿ ಹಾಕಲ್ಪಟ್ಟಿದ್ದ । **ಅತ್ರಿಂ**—ಅತ್ರಿಯನ್ನು । **ಸರ್ವಗಣಂ**—ಸಕಲೇಂದ್ರಿಯಯುಕ್ತನನ್ನಾಗಿ । **ಸ್ವಸ್ತಿ**—(ಸ್ವಲ್ಪವೂ) ಬಾಧೆಯಿಲ್ಲದೆ । **ಉನ್ನಿನ್ಯಥುಃ—**ಮೇಲಕ್ಕೆ ಎತ್ತಿ (ಮನೆಯನ್ನು) ಸೇರಿಸಿದಿರಿ.

॥ ಭಾವಾರ್ಥ ॥

(ಅತ್ರಿಯ ಹಿಂಸೆಗಾಗಿ ಅಸುರರಿಂದ ಪ್ರೇರಿತವಾದ) ಜ್ವಲಿಸುತ್ತಿದ್ದ ಅಗ್ನಿಯನ್ನ ಹಿಮದಂತೆ ಶೀತಳವಾದ ಉದಕದಿಂದ ಆರಿಸಿ, (ಅಸುರರಪೀಡೆಯಿಂದ ಕೃಶನಾದ ಅತ್ರಿಗೆ) ಬಲಪ್ರದವಾದ (ಕ್ಷೀರಾದಿಗಳನ್ನು) ಕೊಟ್ಟು, ಅಂಧಕಾರಾವೃತವಾದ (ಪೀಡಾಗೃಹದಲ್ಲಿ) ತಲೆಕೆಳಗಾಗಿ ಎಸೆಯಲ್ಪಟ್ಟಿದ್ದ ಅವನನ್ನು (ಎತ್ತಿ) ಅವಿಕಲವಾದ ಸರ್ವಾಂಗಯುಕ್ತನನ್ನಾಗಿ (ಮನೆಗೆ) ಸೇರಿಸಿದಿರಿ.

## English Translation

You quenched with cold (water) the blazing flames (that encompassed Atri) and supplied him with food-supported strength; you extricated him, As'wins, from the dark (cavern) into which he had been thrown headlong, and restored him to every kind of welfare.

॥ ವಿಶೇಷವಿಷಯಗಳು ॥

**ಹಿಮೇನ—ಹಿಮವತ್ ಶೀತೇನ ಉದಕೇನ**--ಹಿಮದಂತೆ ತಣ್ಣಗಿರುವ ಉದಕದಿಂದ, **ಹಿಮೇನ–ವೃಷ್ಟ್ಯುದಕೇನ** ಮಳೆಯನೀರಿನಿಂದ **ಘ್ರಂಸಂ-ದೀಪ್ಯಮಾನಂ** ಅಗ್ನಿಯಿಂದ ಉರಿಯುತ್ತಿರುವ ಘ್ರಂಸಂ-ಅಗ್ನಿವತ್ ತೀಕ್ಷ್ಣಮುಗ್ರಂ ನಿದಾಘಕಾಲೀನಂ ಅಹಃ-ಘ್ರಂಸ ಶಬ್ದವು ಹನ್ನೆರಡು ಅಹರ್ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿರುವುದರಿಂದ ಇಲ್ಲಿ ಬೇಸಿಗೆಯಕಾಲದ ಹಗಲು ಎಂದು ಅರ್ಥವನ್ನು ಸಾಯಣರು ಹೇಳಿರುವರು. ಅಸುರರು ಅತ್ರಿಯೆಂಬ-ಋಷಿಯನ್ನು ಹಿಡಿದುಕೊಂಡು ಹೋಗಿ ತೊಂದರೆಯನ್ನುಂಟುಮಾಡುವುದಕ್ಕಾಗಿ ಬಹಳ ದ್ವಾರಗಳುಳ್ಳ ಅಪಾಯಕರವಾದ ಒಂದು ಮನೆಯಲ್ಲಿ ಕೆಳಮುಖನಾಗಿ **ಮಲಗಿ**ಸಿ ಅವನನ್ನು ತುಷಾಗ್ನಿಯಲ್ಲಿ (ಹೊಟ್ಟುಬೆರೆಸಿರುವ ಬೆಂಕಿಯಲ್ಲಿ) ಹಾಕಿದರು. ಇದರಿಂದ ಅತ್ರಿಋಷಿಯು (ಅವನ ಶರೀರವು ಬೆಂದು) ಬೆಂಕಿಯ ತಾಪವನ್ನು ಸಹಿಸಲಾರದೆ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದಾಗ ಅವರು ಹಿಮದಂತೆ ತಣ್ಣಗಿರುವ ನೀರನ್ನು ಸುರಿಸಿ ಅತ್ರಿಋಷಿಯನ್ನು ರಕ್ಷಿಸಿದರು ಎಂದು

ಇತಿಹಾಸವು' ಈ ಋಕ್ಕಿನಲ್ಲಿರುವ ಈ ಶಬ್ದಗಳಿಂದ ಹೇಳಲ್ಪಟ್ಟಿದೆ. ಮತ್ತು ಸಾಮಾನ್ಯವಾಗಿ ಬೇಸಿಗೆಯಕಾಲದಲ್ಲಿ ಸೂರ್ಯನ ತಾಪದಿಂದ ಹಗಲು ಎಲ್ಲರಿಗೂ ಬೆಂಕಿಯ ಉರಿಯಂತೆ-(ತಾಪವನ್ನು) ಸಂಕಟವನ್ನು ಉಂಟುಮಾಡುತ್ತಿರುವಾಗ ಮಳೆಯ ನೀರು ಲೋಕಕ್ಕೆ ಬರುವಂತೆ ಮಾಡಿ ಈ ಅಶ್ವಿನೀದೇವತೆಗಳು ಎಲ್ಲರೂ ಸುಖವಾಗಿರುವಂತೆ ಮಾಡುವವರು ಎಂದು ಎರಡು ವಿಧವಾದ ಅರ್ಥವೂ ಇಲ್ಲಿ ಪ್ರತೀಯಮಾನವಾಗಿರುತ್ತದೆ. ಸಾಯಣರ ವ್ಯಾಖ್ಯಾನದಲ್ಲಿ ಅತ್ರಿಋಷಿಯ ಮತ್ತು ಅಗ್ನಿಯಪರವಾದ ಎರಡುವಿಧ ಅರ್ಥಗಳೂ ವಿವೃತವಾಗಿರುವುವು.

**ಹಿಮೇನ—ಹಿಮಂ ಪುನರ್ಹಂತೇರ್ವಾ ಹಿನೋತೇರ್ವಾ**—ಹನಧಾತುವಿನಿಂದ **ಅಜರಮಜರಣ-ಧರ್ಮಾಣಮನರ್ವಮಪ್ರತ್ಯೃತಮನ್ಯಸ್ಮಿನ್ ಯತ್ರೇಮಾನಿ ಸರ್ವಾಣಿ ಭೂತಾನ್ಯಭಿಸಂತಿಷ್ಠಂತೇ** ||(ನಿ.-೪-೨೭) ಹಿಮಶಬ್ದವು ಹನ-ಕೊಲ್ಲುವುದು ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದು. ಹಿಮಕಾಲವು ಓಷಧಿ ವನಸ್ಪತಿಗಳನ್ನು ನಾಶಮಾಡುವುದರಿಂದ ಎಂದರೆ ಆ ಕಾಲದಲ್ಲಿ ವೃಕ್ಷಾದಿಗಳ ಎಲೆಗಳು ಉದರಿಹೋಗಿ ಮೃತಪ್ರಾಯವಾಗುವುದರಿಂದ ಹಿಮಶಬ್ದವು ಕೊಲ್ಲುವುದು ನಾಶಮಾಡುವುದು ಎಂಬರ್ಥವನ್ನು ಸೂಚಿಸುವುದು. ಮತ್ತು ಈ ಶಬ್ದವು ಹಿನೋತೇರ್ವಾ ಎಂದರೆ ಯಾಸ್ಕರ ವಿವರಣೆಯಪ್ರಕಾರ ಅಭಿವೃದ್ಧಿಪಡಿಸು ಎಂಬರ್ಥವುಳ್ಳ ಹಿನೋತಿ ಧಾತುವಿನಿಂದ ನಿಷ್ಪನ್ನವಾಗಿರುವುದೆಂದೂ ಹೇಳಬಹುದು. ಏಕೆಂದರೆ ಈ ಹಿಮಕಾಲದಲ್ಲಿ ಯವಾದಿಧಾನ್ಯಗಳು ಬೆಳೆದು ವೃದ್ಧಿಗೊಳ್ಳುವುದರಿಂದ ಹಿಮಶಬ್ದಕ್ಕೆ ತರ್ಪಣಾರ್ಥವನ್ನು ಹೇಳಬಹುದೆಂದು ಯಾಸ್ಕರ ವಿವರಣೆ ಇರುವುದು. ಇಲ್ಲಿ ತಣ್ಣಗಿರುವ ನೀರು ಎಂಬರ್ಥವನ್ನು ಹೇಳಬಹುದು. ಇದರಂತೆಯೇ ಘ್ರಂಸ ಶಬ್ದವೂ ಅಹರ್ನಾಮಗಳಲ್ಲಿ ಪಠಿತವಾಗಿರುವುದು. (ನಿ. ೨-೩೦)

**ಯೋ ಅಸ್ಮೈ ಘ್ರಂಸ ಉತ ವಾ ಯ ಊಧನಿ ಸೋಮಂ ಸುನೋತಿ ಭವತಿ ದ್ಯುಮಾಁ ಅಹ** ||

(ಋ ಸಂ. ೫-೩೪-೩)

ಎಂಬ ಋಕ್ಕಿನಲ್ಲಿ ನಿರುಕ್ತಕಾರರಿಂದ ಉದಹರಿಸಲ್ಪಟ್ಟು **ಘ್ರಂಸ ಇತ್ಯಹರ್ನಾಮ । ಗ್ರಸ್ಯಂತೇ ಅಸ್ಮಿನ್ ರಸಾಃ**-(ನಿ. ೬-೧೯) ಘ್ರಂಸವೆಂಬ ಪದವು ಅಹಸ್ಸಿನ (ಹಗಲಿನ) ಹೆಸರು. ಉದಕಗಳು ಇದರಿಂದ ಶೋಷಿಸಲ್ಪಡುತ್ತವೆ ಯಾದಕಾರಣ ಹಗಲಿಗೆ ಘ್ರಂಸವೆಂದು ಹೆಸರು ಎಂದು ಅರ್ಥವು ವಿವೃತವಾಗಿರುವುದು ಮತ್ತು-

**ಯದ್ದೇವಯಂತಮವಥಃ ಶಚೀಭಿಃ ಪರಿ ಘ್ರಂಸಮೋಮನಾ ವಾಂ ವಯೋ ಗಾತ್** ||

(ಋ. ಸಂ. ೬-೬೯-೪)

ಈ ಋಕ್ಕಿನಲ್ಲಿಯೂ (ನಿ. ೬-೪) ಘ್ರಂಸ ಶಬ್ದವು ಅಹರ್ವಾಚಕವಾಗಿ ಪ್ರಯುಕ್ತವಾಗಿದೆ. ಮತ್ತೂ ನಿರುಕ್ತಕಾರರು ಋಬೀಸ ಪದದ ಅರ್ಥವನ್ನು ವಿವರಿಸುವಾಗ ಈ ಋಕ್ಕನ್ನೇ ಉದಹರಿಸಿ (ನಿ. ೬-೩೬) **ಹಿಮೇನೋದಕೇನ ಗ್ರೀಷ್ಮಾಂತೇ ಅಗ್ನಿಂ ಘ್ರಂಸಮಹರವಾರಯೇಥಾಂ** || ಬೇಸಗೆಯ ಕೊನೆಯಲ್ಲಿ ತಾಪವನ್ನುಂಟುಮಾಡಿ ನೀರನ್ನು ಹೀರುತ್ತಿರುವ ಹಗಲಿನ ತೊಂದರೆಯನ್ನು ತಣ್ಣಗಿರುವ ಮಳೆಯನೀರಿನಿಂದ ತಪ್ಪಿಸಿರುವಿರಿ ಎಂದು ಅರ್ಥ ಮಾಡಿರುವರು.

ಸ್ಕಂದಸ್ವಾಮಿಗಳು—

**ಹಿಮಮಿತ್ಯುದಕನಾಮ । ವೃಷ್ಟಿಲಕ್ಷಣೇನೋದಕೇನ । ಯತ್ರಾಸುರೈಃ ಪ್ರಕ್ಷಿಪ್ತಃ ತಮಗ್ನಿಂ ಘ್ರಂಸಂ । ಘೃ ಕ್ಷರಣದೀಪ್ತ್ಯೋರಿತ್ಯಸ್ಯಾಯಂ ಕ್ರಿಯಾಶಬ್ದಃ ನ ತ್ವಹರ್ನಾಮ ।**

ಹಿಮಶಬ್ದಕ್ಕೆ ಉದಕವೆಂದು ಅರ್ಥವು. ಮಳೆಯ ನೀರು ಎಂದು ಅರ್ಥ. ಅತ್ರಿಋಷಿಯು ಅಸುರರಿಂದ ಅಗ್ನಿಯಲ್ಲಿ ಹಾಕಲ್ಪಟ್ಟಾಗ ಅಗ್ನಿಯು ಅವನಿಗೆ ತಾಪವನ್ನು ಉಂಟುಮಾಡಿತು. ಘ್ರಂಸಶಬ್ದವು ಕ್ಷರಣ (ಕರಗುವುದು) ದೀಪ್ತಿ (ಕಾಂತಿಯಾಗಿರುವುದು) ಎಂಬ ಅರ್ಥವುಳ್ಳ ಘೃಧಾತುವಿನಿಂದ ನಿಷ್ಪನ್ನವಾದಕಾರಣ ಕ್ರಿಯಾವಾಚಕವಾಗಿರುವುದು. ಇದು ಅಹರ್ನಾಮವಾಗಿರುವುದಿಲ್ಲ ಎಂದು ಅರ್ಥವನ್ನು ವಿವರಿಸಿರುವರು.

ಪಿತುಃಶಬ್ದವು—(ನಿ. ೩-೯) ಅನ್ನನಾಮಗಳಲ್ಲಿ ಪಠಿತವಾಗಿರುತ್ತದೆ. **ಪಿತುರಿತ್ಯನ್ನನಾಮ ಪಾತೇರ್ವಾ, ಪಿಬತೇರ್ವಾ ಪ್ಯಾಯತೇರ್ವಾ** (ನಿ. ೯-೨೫) ಪಿತುಶಬ್ದವು ಅನ್ನವಾಚಕವಾಗಿರುವುದು. ಈ ಶಬ್ದವು ರಕ್ಷಣಾರ್ಥಕವಾದ ಪಾ ಧಾತುವಿನಿಂದ ಅಥವಾ ಪಾನಾರ್ಥಕವಾದ ಪಾ ಧಾತುವಿನಿಂದ, ವೃದ್ಧ್ಯರ್ಥಕವಾದ ಪ್ಯಾಯೀ ಧಾತುವಿನಿಂದ ಆಗಲಿ ನಿಷ್ಪನ್ನವಾಗಿರುವುದು ಎಂದು ಯಾಸ್ಕರು ವಿವರಿಸಿರುವುದರಿಂದ ಅಗ್ನಿಯಿಂದ ಸಂತಪ್ತನಾಗಿರುವ ಅತ್ರಿಗೆ ವೃದ್ಧಿಯಾಗುವಂತೆ ಅನ್ನವನ್ನೂ ಬಲಕರವಾದ ಕ್ಷೀರಾದಿಗಳನ್ನೂ ಅಶ್ವಿನೀದೇವತೆಗಳು ಅನುಗ್ರಹಿಸಿದರು ಎಂಬ ವಾಕ್ಯದಿಂದ ಅಗ್ನಿಗೆ ಹವಿರ್ಲಕ್ಷಣರೂಪವಾದ ಚರುಪುರೋಡಾಶಾದಿರೂಪವಾದ ಅನ್ನವನ್ನೂ, ದ್ರವದ್ರವ್ಯರೂಪವಾದ ಮತ್ತು ಬಲಕರವಾದ ಆಜ್ಯಕ್ಷೀರಾದಿಗಳನ್ನೂ ಅಗ್ನಿಯನ್ನು ಉದ್ದೇಶಿಸಿ ಯಜ್ಞಮಾಡುವುದಕ್ಕಾಗಿ ವೃದ್ಧಿಯಾಗುವಂತೆ ಅಶ್ವಿನೀದೇವತೆಗಳು ವೃಷ್ಟಿಯನ್ನು ಉಂಟುಮಾಡಿದರೆಂದು—ಪಿತುಮತೀಂ ಊರ್ಜಮಸ್ಮಾ ಅಧತ್ತಂ ಎಂಬ ವಾಕ್ಯದಿಂದ ವಿಸ್ತೃತವಾಗಿರುವುದು.

**ಋಬೀಸೇ— ಅಪಗತತೇಜಸ್ಕೇ ಅಪಗತಪ್ರಕಾಶೇ, ಪೀಡಾಯನ್ತ್ರಗೃಹೇ**—ತೇಜಸ್ಸಿನ ಸಂಬಂಧವಿಲ್ಲದ ಪ್ರಕಾಶವಿಲ್ಲದಿರುವ (ಕತ್ತಲೆಯುಳ್ಳ) ಅಪಾಯಕರವಾದ ಯಂತ್ರಗಳಿಂದ ಕೂಡಿದ ಮನೆಯಲ್ಲಿ ಎಂದು ಸಾಯಣರು ವಿವರಿಸಿರುವರು. ನಿರುಕ್ತಕಾರರು—**ಋಬೀಸಮ್ಬೃಬೀಸಂ—ಋಬೀಸಮಪಗತಭಾಸಂ, ಅಪಹೃತಭಾಸಮನ್ತರ್ಹಿತಭಾಸಂ ಗತಭಾಸಂ ವಾ । ಋಬೀಸ** ಶಬ್ದವು—ಕಾಂತಿಯಿಲ್ಲದಿರುವುದು (ಕಪ್ಪಾದ ಕಾಂತಿಯುಳ್ಳದ್ದು) ಅಥವಾ ಕತ್ತಲೆಯಿಂದ ಕೂಡಿರುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಇದು ಪೃಥಿವೀವಾಚಕವಾಗಿರುತ್ತದೆ ಎಂದು ಹೇಳಿರುವರು. ಮತ್ತು **ಹಿಮೇನಾಗ್ನಿಂ** ಎಂಬ ಈ ಋಕ್ಕನ್ನೇ ಉದಹರಿಸಿ,

**ಹಿಮೇನೋದಕೇನ ಗ್ರೀಷ್ಮಾಂತೇ ಅಗ್ನಿಂ ಘ್ರಂಸಮಹರವಾರಯೇಥಾಮನ್ನವತೀಂ ಚಾಸ್ಮಾ ಊರ್ಜಮಧತ್ತಮಗ್ನಯೇ ಯೋऽಯಮೃಬೀಸೇ ಪೃಥಿವ್ಯಾಮಗ್ನಿರಂತರೌಷಧಿವನಸ್ಪತಿಷ್ವಪ್ಸು ತಮುನ್ನಿನ್ಯಥುಃ ಸರ್ವಗಣಂ ಸರ್ವನಾಮಾನಂ ಗಣೋ ಗಣನಾದ್ಗುಣಶ್ಚ । ಯದ್ವೃಷ್ಟ ಓಷಧಯ ಉದ್ಯಂತಿ ಪ್ರಾಣಿನಶ್ಚ ಪೃಥಿವ್ಯಾಂ ತದಶ್ವಿನೋ ರೂಪಂ ತೇನೈತೌ ಸ್ತೌತಿ** (ನಿ.೬-೩೬)

ಈ ಅಶ್ವಿನೀದೇವತೆಗಳು ಗ್ರೀಷ್ಮಋತುವಿನ ಕೊನೆಯಲ್ಲಿ ಅಗ್ನಿಯಿಂದ ಉಂಟಾದ ತಾಪವು ಹಗಲಿಗೆ ಬಾಧಕವಾಗಬಾರದೆಂದು ವೃಷ್ಟಿಯನ್ನು ಉಂಟುಮಾಡಿ ಅದರಿಂದ ಅಗ್ನಿಗೆ ಪ್ರೀತಿಕರವಾದ ಹವಿಸ್ಸುಗಳು ದೊರಕುವ ಯಜ್ಞಗಳಿಗೆ ಅನುಕೂಲವನ್ನು ಉಂಟುಮಾಡಿರುವರು. ತೇಜಸ್ಸಿಲ್ಲದೆ ಕತ್ತಲೆಯುಳ್ಳದ್ದಾದ ಭೂಮಿಯ ಒಳಗೆ ಸೆಕೆಯಿಂದ

(ಶಾಖದಿಂದ) ಪಕ್ವವಾಗುವ ಓಷಧಿಗಳು, ವನಸ್ಪತಿಗಳು ಇವುಗಳಲ್ಲಿಯೂ ಭೂಮಿಯ ಒಳಭಾಗದಲ್ಲಿಯೂ ನೀರುಗಳಲ್ಲಿಯೂ ಇರುವ, (ಎಲ್ಲಾ ಶಬ್ದಗಳಿಂದಲೂ ವಾಚ್ಯನಾದ) ಅಗ್ನಿಯನ್ನು ಪ್ರಕಟವಾಗುವ ಹಾಗೆ ಮಾಡಿರುವರು. ಪೃಥಿವಿಯಲ್ಲಿ ಬೀಜವನ್ನು ಬಿತ್ತಿದ್ದರಿಂದ ಓಷಧಿಗಳೂ ಪ್ರಾಣಿಗಳೂ ಉತ್ಪನ್ನವಾಗುವಂತೆ ಮಾಡಿರುವರು. ಇಂತಹ ಮಹಿಮೆಯುಳ್ಳ ಅಶ್ವಿನೀದೇವತೆಗಳನ್ನು ಆಯಾಯ ರೂಪಗಳಿಂದ ಇರುವವರೆಂದು ಇಲ್ಲಿ ಸ್ತುತಿಮಾಡಿರುತ್ತದೆ ಎಂದು ವ್ಯಾಖ್ಯಾನಮಾಡಿ ಅರ್ಥವನ್ನು ವಿವರಿಸಿರುವರು.

**ಸರ್ವಗಣಂ**–ಅತ್ರಿಋಷಿಯ ಪರವಾದ ಅರ್ಥದಲ್ಲಿ ಸರ್ವಗಣಶಬ್ದವು ಎಲ್ಲಾ ಇಂದ್ರಿಯಗಳಿಂದಲೂ, ಪುತ್ರರೂ ಪೌತ್ರರು ಇವರುಗಳಿಂದಲೂ ಕೂಡಿರುವವನೆಂದು ಅರ್ಥಬೋಧಕವಾಗಿರುವುದು. ಅಗ್ನಿಯ ಪರವಾದ ಅರ್ಥದಲ್ಲಿ ಭೂಮಿಯಲ್ಲಿ ಮೊಳಕೆಯಾಗಲು ಬಿತ್ತಿದ ಬೀಜಗಳು ಭೂಮಿಯೊಳಗೆ ಇರುವ ಪಾರ್ಥಿವಾಗ್ನಿಯಿಂದ ಪಕ್ವವಾಗಿ ಓಷಧಿ ವನಸ್ಪತಿರೂಪಗಳಿಂದ ಬೆಳೆಯುವ ಕಾರಣ ಅಗ್ನಿಯು ಇವುಗಳನ್ನು ಹವಿಸ್ಸಿನ ರೂಪದಿಂದ ಭಕ್ಷಿಸುವನಾದ್ದರಿಂದ ವ್ರೀಹ್ಯಾದಿ ಓಷಧಿ ಗಣಗಳಿಂದ ಕೂಡಿದವನಾಗಿರುವನು ಎಂದು ಅರ್ಥವು.

ಸ್ವಸ್ತಿ— ಸ್ವಸ್ತಿ ಎಂಬ ಪದವು **ಅವಿನಾಶೋ ಯಥಾ ಭವತಿ ತಥಾ ।** ನಾಶವಾಗದೆ ಇರುವ ಹಾಗೆ, ಯಾವ ಅಪಾಯವೂ ಇಲ್ಲದೆ ಒಂದೇ ಸಮನಾಗಿ ಉತ್ತಮವಾದ ರೀತಿಯಿಂದ ಇರುವ ಹಾಗೆ ಎಂದು ಕ್ರಿಯಾವಿಶೇಷಣವೆಂದು ಸಾಯಣರು ಅರ್ಥವನ್ನು ಹೇಳಿರುವರು. **ಸ್ವಸ್ತಿ** ಎಂಬ ಪದವು (ನಿ. ೩–೨೧) **ಸ್ವಸ್ತೀತ್ಯವಿನಾಶಿನಾಮ ಅಸ್ತಿರಭಿಪೂಜಿತಃ ಸು ಅಸ್ತೀತಿ ।** ಅವಿನಾಶಿ (ನಾಶವನ್ನು ಹೊಂದದೆ ಇರುವ) ಎಂದು ಅರ್ಥವುಳ್ಳದಾಗಿರುವುದು. ಸು+ಅಸ್ತಿ ಎಂದು ಎರಡು ಪದಗಳು ಸೇರಿರುವ ಈ ಶಬ್ದದಲ್ಲಿ ಅಸ್ತಿ ಎಂಬುವುದು ಪೂಜಾರ್ಥವಾಗಿ ಇರುವುದು. ಎಂದು ನಿರುಕ್ತಕಾರರಿಂದ ವಿವೃತವಾಗಿರುವುದು. ಈ ಶಬ್ದವು ಇದೇ ಅರ್ಥದಲ್ಲಿ ಅನೇಕ ಕಡೆಗಳಲ್ಲಿ ಪ್ರಯುಕ್ತವಾಗಿರುತ್ತದೆ—

**ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸ ಚಸ್ವಾನಃ ಸ್ವಸ್ತಯೇ ॥**

(ಋ. ಸಂ ೧–೧–೯)

ಇಲ್ಲಿ ಸ್ವಸ್ತಯೇ ಎಂದರೆ ನಮ್ಮ ಕ್ಷೇಮಕ್ಕಾಗಿ ಎಂದು ಅರ್ಥ. ಮತ್ತು **ಪಥ್ಯಾ ಸ್ವಸ್ತಿಃ ಪಂಥಾ ಅಂತರಿಕ್ಷಂ ತನ್ನಿವಾಸಾತ್ ।** (ನಿ. ೧೧–೪೫) ಎಂದು ಸ್ವಸ್ತಿ ಪದವನ್ನು ಹೇಳಿ—

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**
**ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥**

(ಋ. ಸಂ. ೧೦–೬೩–೧೬)

ಎಂಬ ಈ ಋಕ್ಕನ್ನು ಉದಹರಿಸಿ—

**ಸ್ವಸ್ತಿರೇವ ಹಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತೀ ಧನವತ್ಯಭ್ಯೇತಿ ಯಾ ವಸೂನಿ ವನನೀಯಾನಿ ಸಾ ನೋಽಮಾ ಗೃಹೇ ಸಾ ನಿರಮಣೇ ಸಾ ನಿರ್ಗಮನೇ ಪಾತು ಸ್ವಾವೇಶಾಭವತು ದೇವೀಗೋಪ್ತ್ರೀ ದೇವಾನ್ ಗೋಪಾಯತ್ವಿತಿ ದೇವಾ ಏನಾಂಗೋಪಾಯಂತ್ವಿತಿ ವಾ ॥** (ನಿ. ೧೧–೪೫)

ಎಂದು ಸ್ವಸ್ತಿಯ ಮಹಿಮೆಯನ್ನು ವ್ಯಾಖ್ಯಾನಮಾಡಿ ವಿವರಿಸಿರುವರು. ಸ್ವಸ್ತಿ ಎಂಬುವುದು ಅಂತರಿಕ್ಷದಲ್ಲಿ ಇರುವುದು. ಎಲ್ಲಾ ದೇವತೆಗಳಿಗಿಂತಲೂ ಪ್ರಶಸ್ಯವಾಗಿರುವುದು. ಧನವ ಯಾಗಿರುವುದು. ಉದಕಗಳನ್ನು ವರ್ಷಿಸುವುದು. ಅರಣ್ಯದಲ್ಲಿ ವಾಸಮಾಡುವವನಿಗೂ, ಗೃಹದಲ್ಲಿ ವಾಸಮಾಡುವವನಿಗೂ ಕೂಡ ಅರಣ್ಯದಲ್ಲಿಯೂ ಗೃಹದ ಒಳಗೂ ಹೊರಗೂ ಕೂಡ ರಕ್ಷಣೆಯನ್ನು ಉಂಟುಮಾಡಲಿ. ಪ್ರಕಾಶಿಸುತ್ತಿರುವ ಈ ದೇವಿಯು ದೇವತೆಗಳನ್ನೂ, ದೇವತೆಗಳು ಈ ದೇವಿಯನ್ನೂ ಹವಿಸ್ಸುಗಳ ಅರ್ಪಣೆಯಿಂದ ರಕ್ಷಿಸಲಿ. ಅಥವಾ ಹವಿಸ್ಸುಗಳನ್ನು ಅರ್ಪಿಸುವ ನಮ್ಮನ್ನು ಈ ದೇವಿಯು ರಕ್ಷಿಸಲಿ. ದ್ಯುಸ್ಥಾನದಲ್ಲಿ ಇರುವ ರಶ್ಮಿಗಳು ಈ ದೇವಿಯನ್ನು ರಕ್ಷಿಸಲಿ ಎಂದು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು—

**ಸ್ವಸ್ತಿ ಅಂತರ್ಣೀತ ಮತ್ವರ್ಥೋಽತ್ರ ಸ್ವಸ್ತಿಶಬ್ದಃ ಸ್ವಸ್ತಿಮತಂ ಅವಿನಷ್ಟಂ ಜೀವಂತಮಿತ್ಯರ್ಥಃ ।**
ಸ್ವಸ್ತಿ ಎಂಬ ಶಬ್ದವು ಪ್ರೇರಣಾರ್ಥದಲ್ಲಿ ಇಲ್ಲಿ ಉಪಯುಕ್ತವಾಗಿರುವುದರಿಂದ ಅತ್ರಿಋಷಿಯನ್ನು ಜೀವಂತನನ್ನಾಗಿರುವ ಹಾಗೆ ಅಶ್ವಿನೀದೇವತೆಗಳು ರಕ್ಷಿಸಿದರು ಎಂದು ಅರ್ಥವನ್ನು ವಿವರಿಸಿ ಕುತ್ಸನೂ ಹೀಗೆ ಹೇಳಿರುವನು ಎಂದು,

**ಯಾಭಿಃ ಶುಚಂತಿಂ ಧನಸಾಂ ಸುಷಂಸದಂ ತಪ್ತಂ ಘರ್ಮಮೋಮ್ಯಾವಂತಮತ್ರಯೇ ।**
**ಯಾಭಿಃ ಪೃಶ್ನಿಗುಂ ಪುರುಕುತ್ಸಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೭)

ಈ ಋಕ್ಕನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಗ್ನಿಮ್**—ಅಗಿ ಗತೌ. ಧಾತು. **ಅಂಗೇರ್ನಲೋಪಶ್ಚ** (ಉ. ಸೂ. ೪-೪೯೦) ಎಂಬುದರಿಂದ ನಿ ಪ್ರತ್ಯಯ. ಇದಿತ್ತಾದುದರಿಂದ ನುಮಾಗಮ ಬಂದಾಗ ಅದಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅವಾರಯೇಥಾಮ್**—ವೃಞ್ ವರಣೇ. ಧಾತು. ಪ್ರಯೋಜಕವ್ಯಾಪಾರತೋರುವದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ವೃದ್ಧಿ. ಣಿಜಂತದ ಮೇಲೆ ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. ಶಪ್ ವಿಕರಣ ತನ್ನಿಮಿತ್ತವಾಗಿ ಣಿಚ್ಚಿಗೆ ಗುಣ. ಅಯಾದೇಶ **ಆತೋಙಿತಃ** (ಪಾ ಸೂ. ೭-೨-೮೧) ಎಂಬುದರಿಂದ ಆಕಾರಕ್ಕೆ ಇಯಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಿತುಮತೀಮ್**—ಪಿತುಃ ಅಸ್ಯಾ ಅಸ್ತಿ ಇತಿ (ಪಿತು ಅಂದರೆ ಅನ್ನ) ಪಿತುಮತೀ. **ತದಸ್ಯಾಸ್ತಿ**— ಸೂತ್ರದಿಂದ ಮತುಪ್. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಅಧತ್ತಮ್**— ಡುಧಾಞ್ ಧಾರಣಪೋಷಣಯೋಃ ಧಾತು. ಲಙ್ ಮಧ್ಯಮಪುರುಷ ದ್ವಿವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಋಬೀಸೇ**— ಈ ಶಬ್ದದ ವಿಷಯದಲ್ಲಿ ಯಾಸ್ಕರು ನಿರ್ವಚನ ಮಾಡಿರುತ್ತಾರೆ. ಋಬೀಸಮಪಗತಭಾಸ-ಮಪಚಿತಭಾಸಮಪಹೃತಭಾಸಂ ಗತಭಾಸಂ ವಾ" (ನಿರು. ೬–೩೫) (ಕಾಂತಿಶೂನ್ಯವಾದುದು ಎಂದು ತಾತ್ಪರ್ಯ) **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತರೂಪವೂ ಸ್ವರವೂ ಸಿದ್ಧವಾಗುತ್ತದೆ.

**ಅತ್ರಿಮ್**— ಅದ ಭಕ್ಷಣೇ. ಧಾತು. **ಅದೇಸ್ತ್ರಿನಿಚ** (ಉ. ಸೂ. ೪–೫೮) ಎಂಬಲ್ಲಿ ಚಕಾರಗ್ರಹಣದಿಂದ ತ್ರಿ ಪ್ರತ್ಯಯ.

**ಅವನೀತಮ್**—ಣೀಞ್ ಪ್ರಾಪಣೇ. ಧಾತು. **ನಿಷ್ಠಾ** (ಪಾ. ಸೂ. ೩–೨–೧೦೨) ಎಂಬುದರಿಂದ ಕ್ತಪ್ರತ್ಯಯ. **ಗತಿರನಂತರಃ** (ಪಾ. ೬–೨–೪೯) ಎಂಬುದರಿಂದ ಗತಿಗೆ (ಅವ) ಪ್ರಕೃತಿಸ್ವರ ಬರುತ್ತದೆ.

**ನಿನ್ಯಥುಃ**—ಣೀಞ್ ಪ್ರಾಪಣೇ ಧಾತು. ಲಿಟ್ ಮಧ್ಯಮಪುರುಷ ದ್ವಿವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸರ್ವಗಣಂ**—ಸರ್ವೇ ಗಣಾಃ ಯಸ್ಯ ಸಃ ತಮ್ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬–೨–೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸ್ವಸ್ತಿ**—ಅಸ ಭುವಿ. ಧಾತು. ಅದಾದಿ. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್‌ಪ್ರತ್ಯಯ. **ಛಂದಸ್ಯುಭಯಥಾ** (ಪಾ. ಸೂ. ೩–೪–೧೧೭) ಎಂಬುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಬರುವುದರಿಂದ **ಅಸ್ತೇರ್ಭೂಃ** (ಪಾ. ಸೂ. ೨–೪–೫೨) ಎಂಬುದರಿಂದ ಭೂಭಾವ ಬರುವುದಿಲ್ಲ. **ನಞ್‌ಸುಭ್ಯಾಂ** (ಪಾ. ಸೂ. ೬–೨–೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಪರಾವತಂ ನಾಸತ್ಯಾನುದೇಥಾಮುಚ್ಚಾಬುಧ್ನಂ ಚಕ್ರಥುರ್ಜಿ-
ಹ್ಮಬಾರಂ ।

ಕ್ಷರನ್ನಾಪೋ ನ ಪಾಯನಾಯ ರಾಯೇ ಸಹಸ್ರಾಯ ತೃಷ್ಯತೇ-
ಗೋತಮಸ್ಯ ॥ ೯ ॥

॥ ಪದಪಾಠಃ ॥

ಪರಾ । ಅವತಂ । ನಾಸತ್ಯಾ । ಅನುದೇಥಾಂ । ಉಚ್ಚಾಽಬುಧ್ನಂ । ಚಕ್ರಥುಃ । ಜಿಹ್ಮಽಬಾರಂ ।

ಕ್ಷರನ್ । ಆಪಃ । ನ । ಪಾಯನಾಯ । ರಾಯೇ । ಸಹಸ್ರಾಯ । ತೃಷ್ಯತೇ । ಗೋತಮಸ್ಯ ॥ ೯ ॥

॥ ಸಾಯಣಭಾಷ್ಯಂ ॥

ಅತ್ರೇದಮಾಖ್ಯಾನಂ । ಕದಾಚಿನ್ಮರುಭೂಮೌ ವರ್ತಮಾನಸ್ಯ ಸ್ತೋತುರ್ಗೋತಮಸ್ಯ ಋಷೇಃ ಸಮೀಪಂ ದೇಶಾಂತರೇ ವರ್ತಮಾನಂ ಕೂಪಮುತ್ಖಾಯಾಶ್ವಿನೌ ಪ್ರಾಪಯೇತಾಂ । ಪ್ರಾಪಯ್ಯ ಚ ತಂ ಕೂಪಂ ಸ್ನಾನಪಾನಾದಿಸೌಕರ್ಯಾಯೋಪರಿಮೂಲಮಧೋಬಿಲಮವಾಸ್ಥಾಪಯತಾಮಿತಿ। ತದೇತದಾಹ। ಹೇ ನಾಸತ್ಯಾ ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ನಾಸಿಕಾಪ್ರಭವೌ ವಾ । ಏತತ್ಸಂಜ್ಞಾವಶ್ವಿನೌ ಯುವಾಮವತಂ । ಕೂಪನಾಮೈತತ್ । ಅವಸ್ತಾತ್ತತಂ ಕೂಪಂ ಪರಾನುದೇಥಾಂ । ಗೋತಮಸ್ಯ ಋಷೇಃ ಸಮೀಪೇ ಪ್ರೈರಿಷಾಥಾಂ । ತದನಂತರಂ ತಂ ಕೂಪಮುಚ್ಚಾಬುಧ್ನಂ । ಉಚ್ಚೈರುಪರಿಷ್ಟಾದ್ಬುಧ್ನೋ ಮೂಲಂ ಯಸ್ಯ ಸ ತಥೋಕ್ತಃ । ಜಿಹ್ಮಬಾರಂ । ಜಿಹ್ಮಮಧಸ್ತಾದ್ವರ್ತಮಾನತಯಾ ವಕ್ರಂ ಬಾರಂ ದ್ವಾರಂ ಯಸ್ಯ ಸ ತಥೋಕ್ತಃ । ಏವಂಗುಣವಿಶಿಷ್ಟಂ ಚಕ್ರಥುಃ । ಯುವಾಮಕೃಷಾಥಾಂ । ತಸ್ಮಾತ್ಕೂಪಾತ್ತೃಷ್ಯತೇ ಪಿಪಾಸತೋ ಗೋತಮಸ್ಯ ಪಾಯನಾಯ ಪಾನಾರ್ಥಮಾಪೋ ನ ಆಪಶ್ಚ । ಅಯಂ ನಶಬ್ದಶ್ಚಾರ್ಥೇ । ಕ್ಷರನ್ । ಪ್ರವಾಹರೂಪೇಣ ನಿರಗಮನ್ । ಕೀದೃಶಸ್ಯ । ರಾಯೇ । ಹವೀಂಷಿ ದತ್ತವತಃ । ಸಹಸ್ರಾಯ ಸಹನಶೀಲಾಯ । ಯದ್ವಾ । ಸಹಸ್ರಸಂಖ್ಯಾಕಾಯ ರಾಯೇ ಧನಾಯ । ಏತತ್ಸಂಖ್ಯಧನಲಾಭಾರ್ಥಂ ಚಾಕ್ಷರನ್ ॥ ಅನುದೇಥಾಂ । ಣುದ ಪ್ರೇರಣೇ । ತೌದಾದಿಕಃ । ಜಿಹ್ಮಬಾರಂ । ದ್ವಾರಶಬ್ದಸ್ಯ ಪೃಷೋದರಾದಿತ್ವಾದ್ಬಾರಾದೇಶಃ । ಕ್ಷರನ್ । ಕ್ಷರ ಸಂಚಲನೇ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ । ಪಾಯನಾಯ । ಹೇತುಮತಿ ಣಿಚ್ । ಶಾಛಾಸಾಹ್ವೇತಿ ಯುಕ್ । ಭಾವೇ ಲ್ಯುಟ್ । ರಾಯೇ । ರಾ ದಾನೇ । ರಾತಿ ದದಾತೀತಿ ರಾಃ । ರಾತೇರ್ಡೈಃ । ಉ. ೨-೬೭ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ತೃಷ್ಯತೇ । ಞಿತೃಷಾ ಪಿಪಾಸಾಯಾಂ । ಶ್ಯನ್ । ಲಟಃ ಶತೃ । ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ । ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ । ಪಾ. ೨-೩-೬೨-೧ । ಇತಿ ಚತುರ್ಥೀ ॥

॥ ಪ್ರತಿಪದಾರ್ಥ ॥

**ಹೇ ನಾಸತ್ಯಾ**—ಸತ್ಯಸ್ವಭಾವರಾದ ಎಲೈ ಅಶ್ವಿನೀದೇವತೆಗಳೇ (ನಾಸಿಕದಿಂದ ಜನಿಸಿದವರೇ) । **ಅವತಂ**—ಕೂಪವನ್ನು (ಭಾವಿಯನ್ನು) । **ಪರಾ**—(ಗೋತಮನ) ಸಮೀಪಕ್ಕೆ । **ಅನುದೇಥಾಂ**—ಪ್ರೇರಿಸಿದಿರಿ (ತಂದಿರಿ ಅನಂತರ ಆ ಬಾವಿಯನ್ನು) । **ಉಚ್ಚಾಬುಧ್ನಂ**—ಊರ್ಧ್ವಮೂಲವನ್ನಾಗಿಯೂ (ಬುಡವನ್ನು ಮೇಲಿರುವಂತೆಯೂ) । **ಜಿಹ್ಮಬಾರಂ**—(ಕೆಳಮುಖ) ವಕ್ರವಾದಬಾಯಿಯುಳ್ಳದ್ದನ್ನಾಗಿಯೂ । **ಚಕ್ರಥುಃ**—ಮಾಡಿದಿರಿ । **ರಾಯೇ**—ಹವಿರ್ದಾನಮಾಡಿದ । **ಸಹಸ್ರಾಯ**—ಸಹನಶೀಲನಾದ । **ತೃಷ್ಯತೇ**—ನೀರಡಿಸಿದ್ದ । **ಗೋತಮಸ್ಯ**—ಗೋತಮನಿಗೆ । **ಪಾಯನಾಯ**—ಪಾನಮಾಡುವುದಕ್ಕೋಸ್ಕರ । **ಆಪೋ ನ**—ಉದಕವನ್ನೂ । **ಕ್ಷರನ್**—ಪ್ರವಹಿಸುವಂತೆ ಮಾಡಿದಿರಿ.

॥ ಭಾವಾರ್ಥ ॥

ಎಲೈ ನಾಸತ್ಯರೇ, ಬಾವಿಯನ್ನು ಗೋತಮನ ಸಮೀಪದಲ್ಲಿರುವಂತೆ ಮಾಡಿ, ಆ ಬಾವಿಯನ್ನು ಮೇಲು ಬುಡವನ್ನಾಗಿಯೂ, ಕೆಳಮುಖವನ್ನಾಗಿಯೂ ಮಾಡಿ, ಹವಿರ್ದಾನಮಾಡಿದ, ಸಹನಶೀಲನಾದ, ನೀರಡಿಸಿದ್ದ ಗೋತಮನಿಗೆ ಕುಡಿಯಲು ಅನುಕೂಲವಾಗುವಂತೆ ನೀರು ಪ್ರವಹಿಸುವಂತೆ ಮಾಡಿದಿರಿ

## English Translation.

Nasatyas, you raised up the well, and made the base, which had been turned upwards, the curved mouth so that the water issued for the beverage of the thirsty Gotama, the offerer.

॥ ವಿಶೇಷವಿಷಯಗಳು ॥

**ನಾಸತ್ಯಾ—ಸತ್ಯಸ್ವಭಾವೌ,** ಯಾವಾಗಲೂ ಸತ್ಯವನ್ನು ನುಡಿಯುವವರಾದ, ಸತ್ಯವಾದ ಮಾರ್ಗವನ್ನು ಪ್ರಪಂಚಕ್ಕೆ ಹರಡುವವರಾದ ಅಥವಾ ಆದಿತ್ಯನು ಅಶ್ವರೂಪದಿಂದ ಇದ್ದಾಗ ಅವನ ನಾಸಿಕೆಯಿಂದ ಉತ್ಪನ್ನರಾದ ಅಶ್ವಿನೀದೇವತೆಗಳು ಎಂದು ಅರ್ಥ—ನಿರುಕ್ತಕಾರರು ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ । ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ । ನಾಸಿಕಾಪ್ರಭವೌ ಬಭೂವತುರಿತಿವಾ (ನಿ ೬–೧೩) ಎಂದು ಸಾಯಣರು ಹೇಳಿರುವ ಅರ್ಥವುಳ್ಳ ರೀತಿಯಿಂದಲೇ ನಾಸತ್ಯ ಶಬ್ದವನ್ನು ನಿರ್ವಚನೆಮಾಡಿ ಅರ್ಥವನ್ನು ವಿವರಿಸಿರುವರು.

**ಅವತಂ**—ಹದಿನಾಲ್ಕು ಕೂಪನಾಮಗಳಲ್ಲಿ ಅವತಶಬ್ದವು (ನಿ. ೩–೧೯) ಉಕ್ತವಾಗಿರುವುದರಿಂದ ಬಾವಿ ಎಂದು ಅರ್ಥ.

**ಉಚ್ಚಾಬುಧ್ನಂ—ಉಚ್ಚೈರುಪರಿಷ್ಟಾತ್ ಬುಧ್ನೋ ಮೂಲಂ ಯಸ್ಯ ಸಃ** ಮೇಲುಗಡೆಯಲ್ಲಿ ಇರುವ ಮೂಲಭಾಗವು (ಬುಡವು) ಉಳ್ಳದ್ದು ಎಂದು ಅರ್ಥ. (ತಲೆ ಕೆಳಗಾಗಿರುವ ಹಾಗೆ ಬಾವಿಯ ಬುಡವು ಮೇಲಕ್ಕೆ ಇರುವಂತೆ ಎಂದು ಅರ್ಥ.)

**ಜಿಹ್ಮಬಾರಂ— ಜಿಹ್ಮಮಧಸ್ತಾದ್ವರ್ತಮಾನತಯಾ ವಕ್ರಂ ಬಾರಂ ದ್ವಾರಂ ಯಸ್ಯ ಸಃ** ಜಿಹ್ಮಶಬ್ದವು ಇಲ್ಲಿ ವಕ್ರ ಅಥವಾ ಕುಟಿಲ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿಲ್ಲ ಆದರೆ ಕೆಳಮುಖನಾಗಿರುವ ಮುಖವುಳ್ಳದ್ದು ಎಂದು ಅರ್ಥ (ಬಾವಿಯ ಮುಖವು ಕೆಳಗಡೆಗೆ ಇತ್ತು ಎಂದು ಅರ್ಥ.) ಗೌತಮನೆಂಬ ಒಬ್ಬ ಋಷಿಯು ಬಹಳ ಬಾಯಾರಿಕೆಯಿಂದ ಸಂಕಟಪಡುತ್ತಾ ಮರುಭೂಮಿಯಲ್ಲಿ (ಮರಳುಕಾಡಿನಲ್ಲಿ) ಕುಡಿಯಲು ನೀರನ್ನು ಹುಡುಕಿ ಅದು ಸಿಕ್ಕದಿರುವಕಾರಣ ಅಶ್ವಿನೀದೇವತೆಗಳನ್ನು ನೀರಿಗಾಗಿ ಪ್ರಾರ್ಥನೆಮಾಡಿದನು. ಅವರು ಅವನಿಗೆ ನೀರು ತುಂಬಿರುವ ಬಾವಿಯನ್ನು ತಂದು ಅದರ ಬುಡವು ಮೇಲಕ್ಕೆ ಇದ್ದು ಬಾವಿಯ ನೀರಿರುವ ಮೇಲುಭಾಗವು ಕೆಳಮುಖವಾಗಿ ಈ ಋಷಿಯು ಪಾತ್ರೆಯಿಂದ ನೀರನ್ನು ಕುಡಿಯುವ ಹಾಗೆ ಮಾಡಿದರು. ಇದರಿಂದ ಅವನ ಬಾಯಾರಿಕೆಯು ಅಡಗಿತು ಎಂದು ಇತಿಹಾಸವಿರುವುದು. ಇದು ಇಲ್ಲಿ ವಿವರಿಸಲ್ಪಟ್ಟಿದೆ. ಋ. ಸಂ. ೧-೮೫-೧೧ ರಲ್ಲಿ ಮರುದ್ದೇವತೆಗಳು ಬಾಯಾರಿದ ಗೌತಮನ ಸಮೀಪಕ್ಕೆ ಬಾವಿಯನ್ನು ತಂದು ಕೊಟ್ಟು ಅವನ ಬಾಯಾರಿಕೆಯನ್ನು ಶಮನಗೊಳಿಸಿದರೆಂದು ಹೇಳಿದೆ.

**ಆಪೋ ನ— ಆಪಶ್ಚ । ಅಯಂ ನಕಾರಶ್ಚಾರ್ಥೇ** ಇಲ್ಲಿ ಚಕಾರವು ಸಮುಚ್ಚಯಾರ್ಥದಲ್ಲಿ ಇರುತ್ತದೆ. ಅಶ್ವಿನೀದೇವತೆಗಳು ಗೌತಮನಿಗೆ ಯಜ್ಞಾದಿಗಳನ್ನು ಆಚರಿಸುವುದಕ್ಕೆ ಸಹಸ್ರಸಂಖ್ಯಾಕವಾದ ಧನವು ದೊರೆಯುವಂತೆಯೂ ಕುಡಿಯುವುದಕ್ಕೆ ನೀರನ್ನು ಸುಲಭವಾಗಿ ಸಿಕ್ಕುವಂತೆಯೂ ಮಾಡಿರುವರು ಎಂದು ಸಾಯಣರು ವ್ಯಾಖ್ಯಾನ ಮಾಡಿರುವರು. ಸ್ಕಂದಸ್ವಾಮಿಗಳು–**ನ ರಾಯೇ ಸಹಸ್ರಾಯ** ಎಂಬ ಪ್ರಯೋಗದಲ್ಲಿ **ನ ಶಬ್ದೋತ್ರ ಪುರಸ್ತಾದು ಪಚಾರೋಽಪಿ ಸಾಮರ್ಥ್ಯಾದುಪಮಾರ್ಥೀಯೋ ದ್ರಷ್ಟವ್ಯಃ । ಧನಾನೀವ ಸಹಸ್ರಸಂಖ್ಯಾಕಾನಿ** ನ ಶಬ್ದವು ಉಪಚಾರವೆಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದ್ದರೂ ಶಬ್ದಶಕ್ತಿಯನ್ನು ಅನುಸರಿಸಿ ಇಲ್ಲಿ ಉಪಮಾರ್ಥದಲ್ಲಿಯೇ ಪ್ರಯುಕ್ತವಾಗಿರುತ್ತದೆ. ಧನಾನೀವ ಸಹಸ್ರಸಂಖ್ಯಾಕಾನಿ ಸಾವಿರಗಟ್ಟಲೆಯಾಗಿ ಧನವನ್ನು ಈ ಗೌತಮನಿಗೆ ಯಜ್ಞಗಳನ್ನು ಆಚರಿಸಲು ಅನುಗ್ರಹಿಸಿದ ಹಾಗೆ ಇವನ ಬಾಯಾರಿಕೆಯು ಅಡಗುವುದಕ್ಕಾಗಿ ಒಂದು ಬಾವಿಯನ್ನು ತಂದು (ಅದನ್ನು ಮೇಲುಮುಖವಾದ ಬುಡವುಳ್ಳದ್ದಾಗಿ ಮಾಡಿ) ಪಾತ್ರೆಯಿಂದ ನೀರುಕುಡಿಯುವಂತೆ ಬಾವಿಯಿಂದಲೇ ನೀರನ್ನು ಕುಡಿಯುವಂತೆ ಮಾಡಿರುವರೆಂದು ಅರ್ಥಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ನಾಸತ್ಯಾ— ನಭ್ರಾಣ್ನಪಾತ್**— ಸೂತ್ರದಿಂದ ನಿಪಾತಿತವಾದ ಈ ಶಬ್ದಕ್ಕೆ ಸಂಬೋಧನಾದ್ವಿವಚನದಲ್ಲಿ ಪೂರ್ವಸವರ್ಣದೀರ್ಘ ಬರುತ್ತದೆ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅನುದೇಥಾಂ**— ಣುದ ಪ್ರೇರಣೇ. ಧಾತು. **ಣೋ ನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶ ವಿಕರಣ. **ಆತೋಙಿತಃ** ಎಂಬುದರಿಂದ ಪ್ರತ್ಯಯ ಆಕಾರಕ್ಕೆ ಇಯಾದೇಶ. ಯಲೋಪ ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಚಕ್ರಥುಃ**— ಡುಕೃಞ್ ಕರಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಜಿಹ್ಮಬಾರಮ್**—ದ್ವಾರ ಶಬ್ದವು ಪೃಷೋದರಾದಿಯಲ್ಲಿ ಸೇರಿರುವುದರಿಂದ ಅದಕ್ಕೆ ಬಾರ ಎಂಬ ಆದೇಶ ಬರುತ್ತದೆ. ಜಿಹ್ಮಂ ಬಾರಂ ಯಸ್ಯ ಸಃ ಜಿಹ್ಮಬಾರಃ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಕ್ಷರನ್**—ಕ್ಷರ ಸಂಚಲನೇ. ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ **ಝೋಽಂತಃ** ಎಂಬುದರಿಂದ ಅಂತಾದೇಶ. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬–೪–೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಸಂಯೋಗಾಂತ ಲೋಪದಿಂದ ತಕಾರಕ್ಕೆ ಲೋಪ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪಾಯನಾಯ**—ಪಾ ಪಾನೇ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ **ಹೇತುಮತಿಚ** (ಪಾ. ಸೂ. ೩–೧–೨೬) ಎಂಬುದರಿಂದ ಣಿಚ್. **ಶಾಚ್ಛಾಸಾಹ್ವಾ** (ಪಾ. ಸೂ. ೭–೩–೩೭) ಎಂಬುದರಿಂದ ಧಾತುವಿಗೆ ಯುಕಾಗಮ. ಪಾಯಿ ಎಂಬ ಣಿಜಂತದಮೇಲೆ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭–೧–೧) ಎಂಬುದರಿಂದ ಆದಕ್ಕೆ ಅನಾದೇಶ. **ಣೇರನಿಟಿ** (ಪಾ. ಸೂ. ೬–೪–೫೧) ಎಂಬುದರಿಂದ ಣಿಚ್ಚಿಗೆ ಲೋಪ. ಉದಾತ್ತನಿವೃತ್ತಿಸ್ವರದಿಂದ ಅಕಾರ ಉದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

**ರಾಯೇ**—ರಾ ದಾನೇ. ಧಾತು. ರಾತಿ ದದಾತಿ ಇತಿ ರಾಃ **ರಾತೇರ್ಡೈಃ** (ಉ. ಸೂ. ೨–೨೨೪) ಎಂಬುದರಿಂದ ಡೈ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಟಿಗೆ (ಆ) ಲೋಪ. ರೈಶಬ್ದವಾಗುತ್ತದೆ. ಚತುರ್ಥೀಏಕವಚನ ಪರವಾದಾಗ **ಏಚೋಽಯವಾಯಾವಃ** ಸೂತ್ರದಿಂದ ಆಯಾದೇಶ **ಊಡಿದಂಪದಾದಿ**—(ಪಾ. ಸೂ. ೬–೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತೃಷ್ಯತೇ**—ಞಿತೃಷಾ ಪಿಪಾಸಾಯಾಮ್. ಧಾತು. ದಿವಾದಿ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩–೧–೬೯) ಎಂಬುದರಿಂದ ಶ್ಯನ್ ವಿಕರಣ. ತೃಷ್ಯತ್ ಶಬ್ದವಾಗುತ್ತದೆ. ಚತುರ್ಥೀಏಕವಚನಾಂತರೂಪ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ ಸೂ. ೬-೧–೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಷಷ್ಠ್ಯರ್ಥೇ ಚತುರ್ಥೀವಕ್ತವ್ಯಾ** (ಪಾ. ವಾ. ೨-೩–೬೨–೧) ಎಂಬ ವಚನದಿಂದ ಚತುರ್ಥೀ ಬಂದಿದೆ. ॥ ೯ ॥



॥ ಸಂಹಿತಾಪಾಠಃ ॥

ಜುಜುರುಷೋ ನಾಸತ್ಯೋತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್ ।
ಪ್ರಾತಿರತಿಂ ಜಹಿತಸ್ಯಾಯುರ್ದಸ್ರಾದಿತ್ಪತಿಮಕೃಣುತಂ ಕನೀನಾಂ ॥ ೧೦ ॥

॥ ಪದಪಾಠಃ ॥

ಜುಜುರುಷಃ । ನಾಸತ್ಯಾ । ಉತ । ವವ್ರಿಂ । ಪ್ರ । ಅಮುಂಚತಂ । ದ್ರಾಪಿಂಽಇವ । ಚ್ಯವಾನಾತ್ ।
ಪ್ರ । ಅತಿರತಂ । ಜಹಿತಸ್ಯ । ಆಯುಃ । ದಸ್ರಾ । ಆತ್ । ಇತ್ । ಪತಿಂ । ಅಕೃಣುತಂ । ಕನೀನಾಂ ॥ ೧೦ ॥

॥ ಸಾಯಣಭಾಷ್ಯಂ ॥

ಅತ್ರೇದಮಾಖ್ಯಾನಂ । ವಲೀಪಲಿತಾದಿಭಿರುಪೇತೋ ಜೀರ್ಣಾಂಗಃ ಪುತ್ರಾದಿಭಿಃ ಪರಿತ್ಯಕ್ತಶ್ಚ್ಯವನಾಖ್ಯ ಋಷಿರಶ್ವಿನೌ ತುಷ್ಟಾವ । ಸ್ತುತಾವಶ್ವಿನೌ ತಸ್ಮಾ ಋಷಯೇ ಜರಾಮಪಗಮಯ್ಯ ಪುನರ್ಯೌವನಮಕುರುತಾಮಿತಿ । ತದೇತದಾಹ । ಹೇ ನಾಸತ್ಯಾವಶ್ವಿನೌ ಜುಜುರುಷೋ ಜೀರ್ಣಾತ್ ಚ್ಯವಾನಾತ್ ಚವನಖ್ಯಾದೃಷೇಃ ಸಕಾಶಾದ್ವವ್ರಿಂ ಕೃತ್ಸ್ನಂ ಶರೀರಮಾವೃತ್ಯಾವಸ್ಥಿತಾಂ ಜರಾಂ ಪ್ರಾಮುಂಚತಂ । ಪ್ರಕರ್ಷೇಣಾಮೋಚಯತಂ । ತತ್ರ ದೃಷ್ಟಾಂತಃ । ದ್ರಾಪಿಮಿವ । ದ್ರಾಪಿರಿತಿ ಕವಚಸ್ಯಾಖ್ಯಾ । ಯಥಾ ಕಶ್ಚಿತ್ಕವಚಂ ಕೃತ್ಸ್ನಶರೀರವ್ಯಾಪಕಂ ಧೃತ್ವಾ ಪಶ್ಚಾಚ್ಛರೀರಾತ್ಪೃಥಕ್ಕರೋತಿ ತದ್ವತ್ । ಉತಾಪಿ ಚ ಹೇ ದಸ್ರಾ ಏತತ್ಸಂಜ್ಞೌ ದರ್ಶನೀಯೌ ವಾಶ್ವಿನೌ ಜಹಿತಸ್ಯ ಪುತ್ರಾದಿಭಿಃ ಪರಿತ್ಯಕ್ತಸ್ಯ ಋಷೇರಾಯುರ್ಜೀವನಂ ಪ್ರಾತಿರತಂ । ಪ್ರಾವರ್ಧಯತಂ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ಆದಿತ್ ಅನಂತರಮೇವ ಯುವಾನಂ

**ಸಂತಂ ಕನೀನಾಂ ಕನ್ಯಾನಾಂ ಪತಿಂ ಭರ್ತಾರಮಕೃಣುತಂ । ಅಕುರತಂ ॥ ಜುಜುರುಷಃ । ಜ್ಯಾಷ್ ವಯೋಹಾನೌ । ಲಿಟಃ ಕ್ವಸುಃ । ಬಹುಲಂ ಛಂದಸೀತ್ಯುತ್ವಂ । ದ್ವಿರ್ಭಾವಃ । ಷಂಚ್ಯಮೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ವವ್ರಿಂ । ವೃಞ್ ವರಣೇ । ಆದೃಗಮಹನ ಇತಿ ಕಿಪ್ರತ್ಯಯಃ । ಜಹಿತಸ್ಯ । ಓಹಾಕ್ ತ್ಯಾಗೇ । ಕರ್ಮಣಿ ನಿಷ್ಠಾ । ತಸ್ಯ ಛಂದಸ್ಯುಭಯಥೇತಿ ಸಾರ್ವಧಾತುಕತ್ವಾದ್ಯಕ್ । ತಸ್ಯ ಬಹುಲಂ ಛಂದಸೀತಿ ಶ್ಲುಃ । ಜಹಾತೇಶ್ಚ । ಪಾ. ೬-೪-೧೧೬ । ಇತೀತ್ವಂ । ಕನೀನಾಂ । ರಯೋರ್ಮತೌ ಬಹುಲಮಿತಿ ಬಹುಲವಚನಾತ್ಕನ್ಯಾಶಬ್ದ-ಸ್ಯಾತ್ರ ಸಂಪ್ರಸಾರಣಂ ॥**

॥ ಪ್ರತಿಪದಾರ್ಥ ॥

**ಹೇ ನಾಸತ್ಯಾ**—ಎಲೈ ನಾಸತ್ಯರೇ । **ಜುಜುರುಷಃ**—ವೃದ್ಧನಾದ । **ಚ್ಯವಾನಾತ್**—ಚ್ಯವನನೆಂಬ ಋಷಿಯಿಂದ । **ವವ್ರಿಂ**—ಶರೀರಾದ್ಯಂತವೂ ವ್ಯಾಪಿಸಿದ್ದ ಮುಪ್ಪನ್ನು । **ದ್ರಾಪಿಮಿವ**—ಕವಚವನ್ನು ತೆಗೆಯುವಂತೆ । **ಪ್ರಾಮುಂಚತಂ**—ಬಿಡಿಸಿದಿರಿ । **ಉತ**—ಮತ್ತು । **ಹೇ ದಸ್ರಾ**—(ದರ್ಶನೀಯರಾದ, ಸುಂದರರಾದ) ದಸ್ರರೇ । **ಜಹಿತಸ್ಯ**—(ಪುತ್ರಾದಿಗಳಿಂದ) ಪರಿತ್ಯಕ್ತನಾಗಿದ್ದ ಋಷಿಯ । **ಆಯುಃ**—ಆಯುಸ್ಸನ್ನು । **ಪ್ರಾತಿರತಂ**—ಹೆಚ್ಚಿಸಿದಿರಿ । **ಆತ್ ಇತ್**—ಅನಂತರವೇ (ಪುನಃ ಯೌವನ ಪ್ರಾಪ್ತಿಯಾದ ಮೇಲೆಯೇ) । **ಕನೀನಾಂ**—ಕನ್ನಿಕೆಯರ । **ಪತಿಂ**—ಪತಿಯನ್ನಾಗಿ । **ಅಕೃಣುತಂ**—ಮಾಡಿದಿರಿ.

॥ ಭಾವಾರ್ಥ ॥

ಎಲೈ ನಾಸತ್ಯರೇ, ದಸ್ರರೇ. ವೃದ್ಧನಾದ ಚ್ಯವನಋಷಿಯ ಶರೀರವನ್ನಾವರಿಸಿದ್ದ ವಾರ್ಧಕ್ಯವನ್ನು ಕವಚವನ್ನು ತೆಗೆಯುವಂತೆ ಪರಿಹರಿಸಿ, ಪುತ್ರಾದಿಗಳಿಂದ ಪರಿತ್ಯಕ್ತನಾದ ಅವನ ಆಯುಸ್ಸನ್ನು ಹೆಚ್ಚಿಸಿ, (ಪುನಃ ಯೌವನ ಪ್ರಾಪ್ತಿಯಾದ) ಮೇಲೆಯೇ ಕನ್ನಿಕೆಯರ ಪತಿಯನ್ನಾಗಿ ಮಾಡಿದಿರಿ.

## English Translation.

Nasatyas, you stripped off from the aged Chyavana his entire skin, as if it had been a coat of mail; you reversed, Dasras, life of the sage who was without kindred, and constituted him the husband of many maidens.

॥ ವಿಶೇಷವಿಷಯಗಳು ॥

**ದ್ರಾಪಿಮಿವ ವವ್ರಿಂ ಪ್ರಾಮುಂಚತಂ–ಪ್ರಾಪಿರಿತಿ ಕವಚಸ್ಯಾಖ್ಯಾ । ಯಥಾ ಕಶ್ಚಿತ್ ಕವಚಂ ಕೃತ್ಸ್ನಶರೀರವ್ಯಾಪಕಂ ಧೃತ್ವಾ ಪಶ್ಚಾತ್ ಶರೀರಾತ್ ಪೃಥಕ್ಕರೋತಿ ತದ್ವತ್ ।** ದ್ರಾಪಿ ಎಂದರೆ ಕವಚದ ಹೆಸರು. ತನ್ನ ಶರೀರವೆಲ್ಲವನ್ನೂ ಮುಚ್ಚಿಕೊಂಡಿರುವಂತೆ ಧರಿಸಿಕೊಂಡಿರುವ ಕವಚವನ್ನು ಶರೀರದಿಂದ ಬೇರೆಯಾಗಿ ತೆಗೆದು ಇರಿಸುವಂತೆ–ಮುಪ್ಪನ್ನು ಚ್ಯವನಋಷಿಯ ಶರೀರದಿಂದ ತೆಗೆದುಹಾಕಿದರು. ಚ್ಯವನನೆಂಬ ಋಷಿಯು ಮುದುಕ

ನಾಗಿದ್ದನು. ಅವನ ಶರೀರವು ನರೆತಕೂದಲು ಮತ್ತು ಸುಕ್ಕುಹಿಡಿದಿರುವ ಶರೀರ ಇವೇ ಮೊದಲಾದ ಮುಪ್ಪಿನ ಲಕ್ಷಣದಿಂದ ತುಂಬಿತ್ತು. ಇದರಿಂದ ಈ ಋಷಿಯ ಪುತ್ರರೇ ಮೊದಲಾದವರು ಇವನನ್ನು ತ್ಯಾಗಮಾಡಿದ್ದರು. ಆಗ ಚ್ಯವನಋಷಿಯು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿ ಅವರನ್ನು ಮೆಚ್ಚಿಸಿ ಅವರಿಂದ ತನ್ನ ಮುಪ್ಪನ್ನು ಕಳೆದುಕೊಂಡು ಯೌವನವನ್ನು ಹೊಂದಿದನು ಎಂದು ಇತಿಹಾಸವು ಇಲ್ಲಿ ಈ ಋಕ್ಕಿನಿಂದ ಹೇಳಲ್ಪಟ್ಟಿರುತ್ತದೆ. ಸ್ಕಂದಸ್ವಾಮಿಗಳು ಈ ಇತಿಹಾಸವನ್ನು ಬೇರೆಯ ವಿಧವಾಗಿ ಹೇಳಿರುವರು. ಈ ಇತಿಹಾಸವು ಶತಪಥಬ್ರಾಹ್ಮಣದಲ್ಲಿ ದೃಷ್ಟವಾಗಿರುವುದು.

**ಅತ್ರ ಶತಪಥೇ—(ಶ. ಬ್ರಾ. ೪-೧-೫) ಅಧೀತಮಿತಿಹಾಸಮಾಚಕ್ಷತೇ । ಶರ್ಯಾತೋ ನಾಮ ರಾಜಾ ಸಂಕ್ರೀಡದ್ಭಿಃ ಕೃತಾಪರಾಧಾಯ ಕುಪಿತಾಯ ಜೀರ್ಣಾಯ ಚ್ಯವನಾಯ ಪ್ರತ್ಯಾಪತ್ತ್ಯರ್ಥಂ ಸುಕನ್ಯಾಂ ನಾಮ ಕನ್ಯಕಾಂ ದುಹಿತರಂ ದದೌ। ತಾಂ ತತ್ರಾಸೀನಾಂ ದೃಷ್ಟ್ವಾಽಶ್ವಿನೌ ಪುನಃ ಪುನರೂಚತುಃ । ಕಿಂ ಕಿಂ ಜೀರ್ಣೀಕೃತರೂಪಂ ಕಾಮಯಸೇ । ಆವಾಂ ಸಂಭಜೇತಿ । ಸಾ ತೌ ಪ್ರತ್ಯುವಾಚ । ಯಸ್ಮೈ ಮಾಂ ಪಿತಾ ಅದಾತ್ ನಾಹಂ ತಂ ಜೀವಂತಂ ಹಾಸ್ಯಾಮೀತಿ । ತದೃಷಿರ್ಜ್ಞಾತ್ವಾ ಸುಕನ್ಯಾಮುವಾಚ । ಯದಿ ತ್ವಾಮೇತೌ ಪುನರೇವಂ ಬ್ರೂಯಾತಾಂ ತತಸ್ತ್ವಮೇನೌ ಪ್ರತಿಬ್ರೂಯಾಃ । ಅಸರ್ವೌ ವಸುಸಮೃದ್ಧೌ ಸಂತೌ ಪತಿಂ ಮೇ ನಿಂದಥ ಇತಿ । ತೌ ಯದಿ ತ್ವಾಂ ಪ್ರತಿ ಬ್ರೂಯಾತಾಂ ಕೇನಾಸರ್ವೌ ವಸುಸಮೃದ್ಧೌ ಚೇತಿ ತತ ಏನೌ ಪ್ರತಿಬ್ರೂಯಾಃ ಪತಿಂ ಮೇ ಪುನಃ ಯುವಾನಂ ಕುರುತಂ । ಅಥ ವಾಂ ವಕ್ಷ್ಯಾಮೀತಿ। ಸಾ ತೌ ತಥೋವಾಚ। ತಾವಶ್ವಿನೌ ಪ್ರತ್ಯೂಚತುಃ। ಏತಂ ಹ್ರದಮವತರತು ಅತೋ ಯತ್ ಕಾಮಯತೇ ತೇನ ವಯಸಾ ಯುಕ್ತ ಉತ್ತರಿಷ್ಯತೀತಿ । ಸ ಋಷಿಸ್ತಂ ಹ್ರದಮವತೀರ್ಯೋತ್ತತಾರ ಯುವಾಭೂತ್ವೇತಿ । ತದೇತದಿತಿಹಾಸೇನೋಚ್ಯತೇ ಜುಜುರುಷೋ ನಾಸತ್ಯೇತ್ಯಾದಿನಾ ।** (ಶ. ಬ್ರಾ ೪-೧-೫)

ಶರ್ಯಾತಿ ಎಂಬ ರಾಜನು ತನ್ನ ಪುತ್ರಿಯರು ಆಟವಾಡುತ್ತಿರುವುದರಿಂದ ಕೋಪಗೊಂಡು ಮುದಕನಾದ ಚ್ಯವನಋಷಿಗೆ ಸುಕನ್ಯಾ ಎಂಬ ತನ್ನ ಪುತ್ರಿಯನ್ನು ಕೊಟ್ಟು ವಿವಾಹಮಾಡಿದನು. ಆ ಸುಕನ್ಯೆಯು ಚ್ಯವನ ಋಷಿಯ ಆಶ್ರಮದಲ್ಲಿದ್ದಾಗ ಅಲ್ಲಿಗೆ ಅಶ್ವಿನೀದೇವತೆಗಳು ಬಂದು ನೀನು (ಈ ಮುದುಕನನ್ನು) ಈ ಮುದಿ ಗಂಡನನ್ನು ತ್ಯಜಿಸಿ ನಮ್ಮನ್ನು ವಿವಾಹಮಾಡಿಕೊ ಎಂದು ಅನೇಕಸಾರಿ ಹೇಳಲು ಆದಕ್ಕೆ ಅವಳು-ನನ್ನ ತಂದೆಯು ನನ್ನನ್ನು ಈ ಋಷಿಗೆ ದಾನಮಾಡಿದನು. ನನ್ನನ್ನು ಮದುವೆಯಾದವನು ಜೀವಂತನಾಗಿರುವವರಿಗೂ ಅವನನ್ನು ನಾನು ತ್ಯಾಗಮಾಡುವುದಿಲ್ಲವೆಂದು ಹೇಳಿದಳು. ಅದನ್ನು ಚ್ಯವನಋಷಿಯು ಕೇಳಿ ಇವರು ನಿನ್ನನ್ನು ಪುನಃ ಹೀಗೆ ಪ್ರಶ್ನೆಮಾಡಿದಾಗ ನೀವು ಸರ್ವಸಮ್ಪತ್ಸಮೃದ್ಧರಾಗಿದ್ದರೂ ನನ್ನ ಪತಿಯನ್ನು ನಿಂದಿಸಲು ಕಾರಣವೇನು ಎಂದು ಪ್ರಶ್ನೆಮಾಡು ಆದಕ್ಕೆ ಅವರು ಉತ್ತರವಾಗಿ ನಾವು ಧನಸಮೃದ್ಧರಾಗಿ ಹೇಗೆ ಇದ್ದೇವೆ ಎಂದು ನಿನ್ನನ್ನು ಕೇಳುವರು. ಆಗ ನನ್ನ ಪತಿಗೆ ಯೌವನವನ್ನು ಕೊಡಿರಿ ಅನಂತರ ನಾನು ನಿಮಗೆ ಉತ್ತರವನ್ನು ಹೇಳುವೆನು ಎಂದು ಅವರಿಗೆ ಹೇಳುವಂತೆ ಚ್ಯವನ ಋಷಿಯು ಹೇಳಿಕೊಟ್ಟನು. ಸುಕನ್ಯೆಯು ಅಶ್ವಿನೀದೇವತೆಗಳ ಸಂಗಡ ಚ್ಯವನಋಷಿಯು

ಹೇಳಿದ ಹಾಗೆ ಮಾತನಾಡಿದಳು ಅವಳ ಮಾತನ್ನು ಕೇಳಿ ನಿನ್ನ ಪತಿಯು ಈ ಮಡುವಿನಲ್ಲಿ ಇಳಿದು ಸ್ನಾನಮಾಡಿದರೆ ನಿನ್ನ ಇಷ್ಟವು ಸಿದ್ಧಿಸುವುದು. ನಿನ್ನ ಪತಿಯು ಯೌವನವುಳ್ಳವನಾಗುವನು ಎಂದು ಅಶ್ವಿನಿದೇವತೆಗಳು ಹೇಳಿದ ಮಾತನ್ನು ಕೇಳಿ ಅವರು ಹೇಳಿದ ಮಡುವಿನಲ್ಲಿ ಸ್ನಾನಮಾಡಿ ಯುವಕನಾಗಿ ಮೇಲಕ್ಕೆ ಬಂದನು. ಈ ಇತಿಹಾಸವು **ಜುಜುರುಷೋ ನಾಸತ್ಯೇತ್ಯಾದಿನಾ** ಎಂಬ ಋಕ್ಕಿನಿಂದ ಉಕ್ತವಾಗಿರುವುದು. ಮುದುಕನಾಗಿದ್ದ ಚ್ಯವನಋಷಿಯನ್ನು ಅಶ್ವಿನೀದೇವತೆಗಳು ಯೌವನವಂತನನ್ನಾಗಿ ಮಾಡಿದ ವಿಷಯವು ಋಗ್ವೇದದಲ್ಲಿ ಅನೇಕ ಕಡೆ ವಿವರಿಸಲ್ಪಟ್ಟಿರುವುದು—

**ಯುವಂ ಚ್ಯವಾನಂ ಜರಸೋಽಮುಮುಕ್ತಂ ನಿ ಪೇದವ ಊಹಥುರಾಶುಮಶ್ವಂ ।**

(ಋ. ಸಂ. ೭-೭೧-೫)

**ಪ್ರ ಚ್ಯವಾನಾಜ್ಜುಜುರುಷೋ ವವ್ರಿಮತ್ಕಂ ನ ಮುಂಚಥಃ ।**

(ಋ. ಸಂ. ೫-೭೪-೫)

**ನಿಷ್ಟ್ವಾಗ್ರ್ಯಂ ಪಾರಯಥಃ ಸಮುದ್ರಾತ್ಪುನಶ್ಚ್ಯವಾನಂ ಚಕ್ರಥುರ್ಯುವಾನಂ ।**

(ಋ ಸಂ. ೧-೧೧೮-೬)

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।**

(ಋ. ಸಂ. ೧೦-೩೯-೪)

ಈ ಋಕ್ಕುಗಳಲ್ಲಿಯೂ, ಋ. ಸಂ. ೫-೭೪-೫; ೭-೬೮-೬ ಮೊದಲಾದ ಅನೇಕ ಋಕ್ಕುಗಳಲ್ಲಿಯೂ ಈ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು.

**ವವ್ರಿಃ**—ವವ್ರಿಃ ಎಂಬ ಶಬ್ದವು ನಿರ್ಣಿಕ್ ವರ್ಪಃ ಎಂಬ ಹದಿನಾರು ರೂಪನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದು. **ವವ್ರಿರಿತಿ ರೂಪನಾಮ** (ನಿ. ೨-೮) **ವೃಣೋತೀತಿ ಸತಃ** ತನ್ನ ಸ್ವರೂಪವನ್ನು (ಮುಚ್ಚುವುದು) ಆಚ್ಛಾದನೆಮಾಡುವುದು ಎಂದು ಅರ್ಥ.

**ದಸ್ರಾ**—ಏತತ್ಸಂಜ್ಞೌ ದರ್ಶನೀಯೌ ವಾ ಅಶ್ವಿನೌ। ದಸ್ರಾ ಎಂಬ ಹೆಸರಿನಿಂದ ಪ್ರಸಿದ್ಧರಾದವರು. ಸುಂದರವಾದ ಆಕಾರವುಳ್ಳವರು, ಅಶ್ವಿನೀದೇವತೆಗಳು ಎಂದು ಅರ್ಥ—

**ಯುವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।**
**ಅಭಿ ದಸ್ಯುಂ ಬಕುರೇಣಾ ಧಮಂತೋರು ಜ್ಯೋತಿಶ್ಚಕ್ರಥುರಾರ್ಯಾಯ ॥**

(ಋ. ಸಂ. ೧-೧೧೭-೨೧)

ಈ ಋಕ್ಕಿನಲ್ಲಿ ದಸ್ರಾ ಎಂಬ ಪದವು ಅಶ್ವಿನೀದೇವತೆಗಳು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. **ದಸ್ರಾ ಶತ್ರೂಣಾಂ ದಾಸಯಿತಾರೌ ದಂಸಯಿತಾರೌ ವಾ ಕರ್ಮಣಾಂ ಕೃಷ್ಯಾದೀನಾಂ ಕಾರಯಿತಾರೌ ವಾ ವರ್ಷಾದ್ಯನುಗ್ರಹೇಣ ಏತಾವೇವಂವಿಧಂ ಕರ್ಮ ಕಾರಯನ್ತೌ ಕುರ್ವಾಣೌ ವಾ ॥** ಅಶ್ವಿನೀದೇವತೆ

ಗಳು ಶತ್ರುಗಳನ್ನು ನಾಶಮಾಡುವವರು ಅಥವಾ ನಾಶಪಡಿಸುವವರು, ವೃಷ್ಟಿಯನ್ನು ಅನುಗ್ರಹಿಸುವುದರಿಂದ ಕೃಷ್ಯಾದಿ ಕರ್ಮಗಳನ್ನು ಆಚರಿಸುವ ಹಾಗೆ ಮಾಡುವವರು ಎಂದು ಅರ್ಥ.

**ಆಯುಃ—ಜೀವನಂ |** (ಜೀವದಿಂದ) ಪ್ರಾಣದಿಂದ ಕೂಡಿಕೊಂಡು ಆರೋಗ್ಯವಾಗಿ ಇರುವ ಸ್ಥಿತಿಯನ್ನು ಅಶ್ವಿನೀದೇವತೆಗಳು ಚ್ಯವನಋಷಿಗೆ ಅನುಗ್ರಹಿಸಿದರೆಂದು ಅರ್ಥ. ಆಯುಃ ಎಂಬ ಪದವು ಇಪ್ಪತ್ತೆಂಟು ಅನ್ನನಾಮ ಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಅನ್ನವೆಂದೂ ಅರ್ಥ.

ಆತ್+ಇತ್—ಅನಂತರಂ ಏವ—ಆತ್ ಇತ್—ಎಂಬ ನಿಪಾತಗಳು ಇಲ್ಲಿ ಅನಂತರ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

**ಯದೇದಯುಕ್ತ ಹರಿತಸ್ಸಧಸ್ಥಾದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ ||**

(ಋ. ಸಂ. ೧-೧೧೫-೪)

ಎಂಬ ಋಕ್ಕಿನಲ್ಲಿ ಆತ್ ಎಂಬುವುದು ಅಥ ಎಂಬರ್ಥದಲ್ಲಿ ಪ್ರಯುಕ್ತವಾಗಿರುವುದು. ಚ್ಯವನಋಷಿಯು ಹ್ರದವನ್ನು ಪ್ರವೇಶಿಸುವಾಗ ವೃದ್ಧನಾಗಿ ಅದರಿಂದ ಮೇಲಕ್ಕೆ ಎದ್ದನಂತರ ಯುವಕನಾಗಿದ್ದನು ಎಂದು ಅರ್ಥ.

|| ವ್ಯಾಕರಣಪ್ರಕ್ರಿಯಾ ||

**ಜುಜುರುಷಃ—**ಜ್ಯೂಷ್ ವಯೋಹಾನೌ. ಧಾತು ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸುರಾದೇಶ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. ರಪರವಾಗಿ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಜುಜುರ್ವಸ್ ಶಬ್ದವಾಗುತ್ತದೆ. ಪಂಚಮೀ ಏಕವಚನಪರವಾದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಶಾಸಿವಸಿ-ಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ನಾಸತ್ಯಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ವವ್ರಿಮ್—**ವೃಞ್ ವರಣೇ. ಧಾತು. **ಆದೃಗಮಹನ—**(ಪಾ. ಸೂ. ೩-೨-೧೭೧) ಎಂಬುದರಿಂದ ಕಿ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಉರತ್** ಸೂತ್ರದಿಂದ ಅಭ್ಯಾಸಕ್ಕೆ ಅತ್ವವು ರಪರವಾಗಿ ಬಂದಾಗ ಆದಿಹಲ್‌ಶೇಷ. ಧಾತು ಋಕಾರಕ್ಕೆ ಯಣಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಮುಂಚತಮ್**—ಮುಚ್ಲೃ ಮೋಕ್ಷಣೇ. ಅಂತರ್ಭಾವಿತಣ್ಯರ್ಥಕವಾಗಿರುವಾಗ ಲಙ್ ಮಧ್ಯಮ ಪುರುಷ ದ್ವಿವಚದಲ್ಲಿ ತಮಾದೇಶ. ತುದಾದಿಯಾದುದರಿಂದ ಶ ವಿಕರಣ. **ಶೇಮುಚಾದೀನಾಮ್** (ಪಾ. ಸೂ. ೭-೧-೫೬) ಎಂಬುದರಿಂದ ನುಮಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚ್ಯವಾನಾತ್**—ಚ್ಯವನ ಶಬ್ದದ ಪಂಚಮ್ಯಂತರೂಪ. ಛಾಂದಸವಾಗಿ ದೀರ್ಘ ಬಂದಿದೆ.

**ಅತಿರತಮ್**—ತಿರಧಾತುವು ಸೌತ್ರವಾಗಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಹಿತಸ್ಯ**—ಓಹಾಕ್ ತ್ಯಾಗೇ. ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಇರುವುದರಿಂದ **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಅದು ವಿಕರಣವಾದುದರಿಂದ **ಬಹುಲಂ ಛಂದಸಿ** ಸೂತ್ರದಿಂದ ಅದಕ್ಕೆ ಶ್ಲು ಆದೇಶ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಅಭ್ಯಾಸಕ್ಕೆ ಚುತ್ವ ಬಂದಾಗ **ಹ್ರಸ್ವಃ** ಎಂಬುದರಿಂದ ಹ್ರಸ್ವ. **ಜಹಾತೇಶ್ಚ** (ಪಾ. ಸೂ. ೬-೪-೧೧೬) ಎಂಬುದರಿಂದ ಧಾತುವಿನ ಆಕಾರಕ್ಕೆ ಇತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ದಸ್ರಾ**—ಸಂಬೋಧನಾದ್ವಿವಚನ ಪರವಾದಾಗ **ಸುಪಾಂ ಸುಲುಕ್**—(೭-೧-೩೯) ಎಂಬುದರಿಂದ ಅದಕ್ಕೆ ಪೂರ್ವಸವರ್ಣದೀರ್ಘ.

**ಅಕೃಣುತಮ್**—ಕೃವಿ ಹಿಂಸಾಕರಣಯೋಶ್ಚ ಧಾತು. ಇದಿತ್ತಾದುದರಿಂದ ನುಮಾಗಮ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಉವಿಕರಣವೂ ಅಕಾರಾಂತಾದೇಶವೂ ಬರುತ್ತವೆ. ವಿಭಕ್ತಿಗೆ ತಮಾದೇಶ. ಋಕಾರದಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕನೀನಾಮ್**—ಕನ್ಯಾ ಶಬ್ದ. **ರಯೋರ್ಮತೌ ಬಹುಲಮ್** ಎಂಬಲ್ಲಿ ಬಹುಲವಚನ ಸಾಮರ್ಥ್ಯದಿಂದ ಕನ್ಯಾಶಬ್ದಕ್ಕೂ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಷಷ್ಠೀ ಬಹುವಚನಾಂತರೂಪ. ॥ ೧೦ ॥



॥ ಸಂಹಿತಾಪಾಠಃ ॥

ತದ್ವಾಂ ನರಾ ಶಂಸ್ಯಂ ರಾಧ್ಯಂ ಚಾಭಿಷ್ಟಿಮನ್ನಾಸತ್ಯಾ ವರೂಥಂ ।
ಯದ್ವಿದ್ವಾಂಸಾ ನಿಧಿಮಿವಾಪಗೂಳ್ಹಮುದ್ದರ್ಶತಾದೂಪಥುರ್ವಂದನಾಯ ॥ ೧೧ ॥

|| ಪದಪಾಠಃ ||

ತತ್ | ವಾಂ | ನರಾ | ಶಂಸ್ಯಂ | ರಾಧ್ಯಂ | ಚ | ಅಭಿಷ್ಟಿಽಮತ್ | ನಾಸತ್ಯಾ | ವರೂಥಂ |

ಯತ್ | ವಿದ್ವಾಂಸಾ | ನಿಧಿಂಽಇವ | ಅಪಽಗೂಳ್ಹಂ | ಉತ್ | ದರ್ಶತಾತ್ | ಊಪಥುಃ | ವಂದನಾಯ ||೧೧ ||

|| ಸಾಯಣಭಾಷ್ಯಂ ||

ಅತ್ರೇದಮಾಖ್ಯಾನಂ | ವಂದನೋ ನಾಮ ಕಶ್ಚಿದೃಷಿಃ | ಸ ಚಾಸುರೈಃ ಕೂಪೇ ನಿಖಾತೆ ಉತ್ತರೀತುಮಶಕ್ನುವನ್ನಶ್ವಿನಾವಸ್ತೌತ್ | ತಮಶ್ವಿನೌ ಕೂಪಾದುನ್ನಿನ್ಯತುರಿತಿ | ತದಾಹ | ನರಾರೋಗ್ಯಸ್ಯ ನೇತಾರೌ ಹೇ ನಾಸತ್ಯಾವಶ್ವಿನೌ ವಾಂ ಯುವಯೋಃ ಸಂಬಂಧ್ಯಭಿಷ್ಟಿಮದಭ್ಯೇಷಣಯುಕ್ತಮಾಭಿಮುಖ್ಯೇನ ಪ್ರಾಪ್ತವ್ಯಂ ತಥಾ ವರೂಥಂ ವರಣೀಯಂ ಕಾಮಯಿತವ್ಯಂ ತತ್ಕರ್ಮ ಶಂಸ್ಯಂ| ಅಸ್ಮಾಭಿಃ ಪ್ರಶಂಸನೀಯಂ | ರಾಧ್ಯಂ | ಆರಾಧನೀಯಂ ಚ | ಕಿಂ ಪುನಸ್ತತ್ಕರ್ಮ | ವಿದ್ವಾಂಸಾ ಜಾನಂತೌ ಯುವಾಂ ನಿಧಿಮಿವ ನಿಕ್ಷಿಪ್ತಂ ಧನಮಿವಾಪಗೂಳ್ಹಮರಣ್ಯೇ ನಿರ್ಜನೇ ದೇಶೇ ಕೂಪಮಧ್ಯೇಽಸುರೈರ್ನಿಗೂಢಂ ವಂದನಾಯ ವಂದನಮೃಷಿಂ ದರ್ಶತಾದಧ್ವಗೈಃ ಪಿಪಾಸುಭಿರ್ದ್ರಷ್ಟವ್ಯಾತ್ಕೂಪಾದುದೂಪಥುಃ | ಉದಹಾರ್ಷ್ಟಂ | ಏವಂ ಯದೇತತ್ಕೂಪಾದುದ್ಧರಣಂ ತದಿತ್ಯರ್ಥಃ || ಶಂಸ್ಯಂ | ಶನ್ಸು ಸ್ತುತೌ | ಅಸ್ಮಾಣ್ಣ್ಯಂತಾದಚೋ ಯದಿತಿ ಯತ್ | ಯತೋಽನಾವ ಇತ್ಯಾದ್ಯುದಾತ್ತತ್ವಂ | ಅಭಿಷ್ಟಿಮತ್ | ಅಭಿಪೂರ್ವಾದಿಷ ಗತಾವಿತ್ಯಸ್ಮಾದ್ಭಾವೇ ಕ್ತಿನ್ | ಮಂತ್ರೇ ವೃಷೇತಿ ಕ್ತಿನ ಉದಾತ್ತತ್ವಂ | ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ | ಶಕಂಧ್ವಾದಿತ್ವಾತ್ಪರರೂಪತ್ವಂ | ತಾದೌ ಚೇತಿ ತು ಗತಿಸ್ವರಸ್ಯ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದಪ್ರವೃತ್ತಿಃ | ತತೋ ಮತುಪ್ | ಅಂತೋದಾತ್ತಾದುತ್ತರಸ್ಯ ತಸ್ಯ ಹ್ರಸ್ವನುಡ್ಭ್ಯಾಮಿತ್ಯುದಾತ್ತತ್ವಂ | ವರೂಥಂ | ಜೄವೃಞ್ಭ್ಯಾಮೂಥನ್ | ಉ. ೨-೬ | ವಿದ್ವಾಂಸಾ | ಸುಪಾಂ ಸುಲುಗಿತಿ ವಿಭಕ್ತೇರಾಕಾರಃ | ಅಪಗೂಳ್ಹಂ | ಗುಹೂ ಸಂವರಣೇ | ಕರ್ಮಣಿ ನಿಷ್ಠಾ | ಯಸ್ಯ ವಿಭಾಷೇತೀಟ್ಪ್ರತಿಷೇಧಃ | ಢತ್ವಧತ್ವಷ್ಟುತ್ವಢಲೋಪದೀರ್ಘಾಃ | ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ | ದರ್ಶತಾತ್ | ಭೃಮೃದೃಶೀತ್ಯಾದಿನಾತಚ್ | ಊಪಥುಃ | ಡುವಪ್ ಬೀಜತಂತುಸಂತಾನೇ | ಲಿಟ್ಯಥುಸಿ ಯಜಾದಿತ್ವಾತ್ಸಂಪ್ರಸಾರಣಂ | ದ್ವಿರ್ವಚನಾದಿ | ವಂದನಾಯ | ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ||

‖ ಪ್ರತಿಪದಾರ್ಥ ‖

**ನರಾ**—ನಾಯಕರಾದ ಅಶ್ವಿನೀದೇವತೆಗಳೇ । **ವಿದ್ವಾಂಸಾ**—(ಸಂದರ್ಭವನ್ನು) ತಿಳಿದವರಾಗಿ । **ನಿಧಿಂ ಇವ**—ನಿಧಿಯನ್ನು (ಹೂತಿಡು) ವಂತೆ । **ಅಪಗೂಳ್ಹಂ**—(ಬಾವಿಯಲ್ಲಿ) ಮುಚ್ಚಿಡಲ್ಪಟ್ಟಿದ್ದ । **ವಂದನಾಯು**—ವಂದನನೆಂಬ ಋಷಿಯನ್ನು । **ದರ್ಶತಾತ್**—(ದಾರಿಹೋಕರಿಂದ) ಪರಿದೃಶ್ಯವಾದ ಬಾವಿಯಿಂದ । **ಉತ್ ಊಪಥುಃ**—ಮೇಲಕ್ಕೆ ಎತ್ತಿದಿರಿ । **(ಇತಿ) ಯತ್**—(ಎಂಬ) ಯಾವ ಸಾಹಸಕೃತ್ಯವುಂಟೋ । **ತತ್ ವಾಂ**—ನಿಮ್ಮಿಬ್ಬರ ಆ (ಕರ್ಮವು) । **ಅಭಿಷ್ಟಿಮತ್**—(ನಮ್ಮಿಂದ) ಪ್ರಾಪ್ಯವಾದುದು । **ವರೂಥಂ**—ಕಾಮ್ಯವಾದುದು । **ಶಂಸ್ಯಂ**—ಸ್ತುತ್ಯವಾದುದು । **ರಾಧ್ಯಂ ಚ**—ಆರಾಧನೀಯವೂ ಆದುದು.

‖ ಭಾವಾರ್ಥ ‖

ಎಲೈ ನಾಯಕರಾದ ಅಶ್ವಿನೀದೇವತೆಗಳೇ, ಅಸುರರಿಂದ ನಿರ್ಜನವಾದ ಪ್ರದೇಶದಲ್ಲಿ) ಬಾವಿಯಲ್ಲಿ ನಿಧಿಯಂತೆ ಮುಚ್ಚಿಡಲ್ಪಟ್ಟಿದ್ದ ವಂದನನನ್ನು (ಎಲ್ಲರಿಗೂ) ಕಾಣಿಸುವ ಬಾವಿಯಿಂದ ಆ ವಿಷಯವನ್ನು ತಿಳಿದ ನೀವು ಎತ್ತಿ ಕಾಪಾಡಿದಿರಿ ಎಂಬುದು ನಮಗೆ ತಿಳಿದಿರುವುದು. ಈ ವಿಷಯವು ನಮಗೆ ಸಂತೋಷವನ್ನುಂಟುಮಾಡುವುದರಿಂದ ಇದನ್ನು ನಾವು ಗೌರವದೃಷ್ಟಿಯಿಂದ ಪ್ರಶಂಸೆಮಾಡುವೆವು.

English Translation

Nasatyas, leaders, glorious was that exploit of yours, one to be celebrated, to be adored, to be desired by us, when, becoming aware (of the circumstance), you extricated Vandana, (hidden), like a concealed treasure, from the (well) that was visible (to travellers)

‖ ವಿಶೇಷವಿಷಯಗಳು ‖

**ನಿಧಿಮಿವಾಪಗೂಳ್ಹಂ—ನಿಧಿಮಿವ ನಿಕ್ಷಿಪ್ತಂ । ಧನಮಿವ ಅರಣ್ಯೇ ನಿರ್ಜನೇ ದೇಶೇ ಕೂಪಮಧ್ಯೇ ಅಸುರೈಃ ನಿಗೂಢಂ**—ವಂದನ ಎಂದು ಹೆಸರುಳ್ಳ ಒಬ್ಬ ಋಷಿಯನ್ನು ಅಸುರರು ಕಾಡಿನ ಮಧ್ಯದ ನಿರ್ಜನ ಪ್ರದೇಶದಲ್ಲಿ ಇರುವ ಬಾವಿಯಲ್ಲಿ ಹಾಕಿದ್ದರು. ಅಲ್ಲಿಂದ ಅವನು ಏಳಲಾರದೆ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಶಿಷ್ಟರರಕ್ಷಣೆಯನ್ನು ಮಾಡುವ ಅಶ್ವಿನೀದೇವತೆಗಳು ಈ ಋಷಿಯ ಸ್ಥಿತಿಯನ್ನು ತಿಳಿದವರಾಗಿ ಬಾವಿಯಲ್ಲಿ ಬಚ್ಚಿಟ್ಟಿದ್ದ ಧನವನ್ನು ಸಂತೋಷದಿಂದ ತೆಗೆಯುವಂತೆ ಈ ಋಷಿಯನ್ನು ಬಾವಿಯಿಂದ ಮೇಲಕ್ಕೆ ತೆಗೆದು ರಕ್ಷಿಸಿದರು ಎಂಬ ಇತಿಹಾಸವು ಇಲ್ಲಿ ಉಕ್ತವಾಗಿರುವುದು. ಈ ಅಶ್ವಿನೀದೇವತೆಗಳು ಮಾಡಿರುವ ಋಷಿಯ ರಕ್ಷಣೆಯು ಅಭ್ಯೇಷಣಯುಕ್ತಂ ಎದುರಿಗೆ ನೋಡುವವರಿಗೆಲ್ಲರಿಗೂ ಗೋಚರವಾಗತಕ್ಕದ್ದು, ಎಲ್ಲರೂ ಪ್ರಶಂಸೆಮಾಡತಕ್ಕದ್ದು, ಎಲ್ಲರಿಗೂ ಪೂಜ್ಯವಾಗಿರತಕ್ಕದ್ದು ಎಂದು, ತತ್ಕರ್ಮ—ಅಭಿಷ್ಟಿಮತ್, ವರೂಥಂ, ಶಂಸ್ಯಂ, ರಾಧ್ಯಂ ಎಂಬ ಪದಗಳಿಂದ ವ್ಯಕ್ತವಾಗಿರುವುದು.

**ಯಾಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನಮೈರಯತಂ ಸ್ವರ್ದೃಶೇ ।**
**ಯಾಭಿಃ ಕಣ್ವಂ ಪ್ರಸಿಷಾಸಂತಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಮ್ ।**

(ಋ. ಸಂ. ೧-೧೧೨-೫)

ಈ ಋಕ್ಕಿನಲ್ಲಿ ಬಾವಿಯಲ್ಲಿ ಬಿದ್ದಿದ್ದ ರೇಭನನ್ನು ವಂದನನನ್ನೂ ಕಣ್ವನನ್ನೂ ಸಹ ರಕ್ಷಿಸಿದರೆಂದು ಹೇಳಿದೆ. ಸ್ಕಂದಸ್ವಾಮಿಗಳು ಈ ಋಕ್ಕನ್ನು ಉದಹರಿಸಿ

**ರೇಭಮೃಷಿಂ ಸಂಧ್ಯಾಕಾಲೇ ಸ್ನಾತ್ವಾ ಹ್ರದಾದುತ್ತೀರ್ಣಂ ಅಗ್ನಿಹೋತ್ರಂ ಹೋತುಂ ಸ್ವಾಶ್ರಮಂ ಗಚ್ಛಂತಂ ಅಸುರಾ ದದೃಶುಃ । ತೇ ದೇವಾನಾಮಯಂ ಯಷ್ಟಾ ಸ್ತೋತಾ ಚೇತಿ ಜ್ಞಾತ್ವಾ ಸಂಕ್ರುದ್ಧಾಃ ತಂ ತಾಡಯಿತ್ವಾ ಬಧ್ವಾ ಚ ತಸ್ಮಿನ್ ಹ್ರದೇ ಪ್ರಕ್ಷಿಪ್ಯ ದಶರಾತ್ರಂ ಧಾರಯಾಂ ಚಕ್ರುಃ**

ರೇಭನೆಂಬ ಋಷಿಯು ಸಂಧ್ಯಾಕಾಲದಲ್ಲಿ ಸ್ನಾನಮಾಡಿ ನದಿಯಿಂದ ಹೊರಟು ಅಗ್ನಿಹೋತ್ರವನ್ನು ಮಾಡುವುದಕ್ಕಾಗಿ ತನ್ನ ಆಶ್ರಮಕ್ಕೆ ಬರುತ್ತಿರುವಾಗ ಅವನನ್ನು ಅಸುರರು ನೋಡಿ ಈ ಋಷಿಯು ದೇವತೆಗಳನ್ನು ಕುರಿತು ಯಜ್ಞಮಾಡಿ ಪೂಜಿಸುವನು ಎಂದು ತಿಳಿದು ಅವನ ಮೇಲೆ ಕೋಪದಿಂದ ಅವನನ್ನು ಹೊಡೆದು ಹಗ್ಗದಿಂದ ಕಟ್ಟಿ ಆ ನದಿಯಲ್ಲಿ ಹಾಕಿ ಹತ್ತು ರಾತ್ರಿಗಳವರೆಗೂ ಬಚ್ಚಿಟ್ಟಿದ್ದರು. ಅನಂತರ ಅವನ ಸ್ತುತಿಯಿಂದ ಮೆಚ್ಚಿದ ಅಶ್ವಿನೀದೇವತೆಗಳು ಆ ಋಷಿಯನ್ನು ರಕ್ಷಿಸಿದರೆಂದು ವರ್ಣಿಸಿದೆ. ಕೆಲವು ಋಕ್ಕುಗಳಲ್ಲಿ ರೇಭನನ್ನೂ ವಂದನನನ್ನೂ ಅಸುರರು ಭಾವಿಯಲ್ಲಿ ತಳ್ಳಿದ್ದರು. ಅವರು ಅಶ್ವಿನೀದೇವತೆಗಳನ್ನು ಸ್ತುತಿಸಲು ಅವರ ಸಂರಕ್ಷಣೆಯಾಯಿತೆಂದು ವರ್ಣನೆ ಇರುವುದು. ಕೆಲವುಕಡೆ ವಂದನನ ವಿಷಯವು ಮಾತ್ರ ಉಕ್ತವಾಗಿರುವುದು.

**ಶುಭೇ ರುಕ್ಮಂ ನ ದರ್ಶತಂ ನಿಖಾತಮುದೂಪಥುರಶ್ವಿನಾ ವಂದನಾಯ ।**

(ಋ. ಸಂ. ೧-೧೧೭-೫)

**ಯುವಂ ವಂದನಮೃಶ್ಯದಾದುದೂಪಥುರ್ಯುವಂ ಸದ್ಯೋ ವಿಶ್ಪಲಾಮೇತವೇ ಕೃಥಃ ।**

(ಋ. ಸಂ. ೧೦-೩೯-೮)

**ಯುವಂ ಹ ರೇಭಂ ವೃಷಣ್ ಗುಹಾ ಹಿತಮುದೈರಯತಂ ಮಮೃವಾಂಸಮಶ್ವಿನಾ ।**

(ಋ. ಸಂ. ೧೦-೩೯-೯)

ಇನ್ನು ಕೆಲವು ಋಕ್ಕುಗಳಲ್ಲಿ

**ಯುವಂ ಶಯೋರವಸಂ ಪಿಪ್ಯಥುರ್ಗವಿ ಪ್ರ ದೀರ್ಘೇಣ ವಂದನಸ್ತಾರ್ಯಾಯುಷಾ**

(ಋ. ಸಂ. ೧-೧೧೯-೬

**ಉದ್ವಂದನಮೈರತಂ ದಂಸನಾಭಿರುದ್ರೇಭಂ ದಸ್ರಾ ವೃಷಣಾ ಶಚೀಭಿಃ ।**

(ಋ. ಸಂ. ೧-೧೧೮-೬)

**ಯುವಂ ವಂದನಂ ನಿರ್ಋತಂ ಜರಣ್ಯಯಾ ರಥಂ ನ ದಸ್ರಾ ಕರಣಾ ಸಮಿನ್ವಥಃ ।**

(ಋ. ಸಂ. ೧-೧೧೯-೭)

ವಂದನನ ಜೀರ್ಣವಾದ ಶರೀರವನ್ನು ಯುವಕನ ಶರೀರದಂತೆ ಮಾಡಿ ಅವನು ಬಹಳಕಾಲ ಜೀವಿಸುವಂತೆ ಮಾಡಿದರೆಂಬ ಪ್ರಶಂಸೆ ಇದೆ.

॥ ವ್ಯಾಕರಣಪ್ರಕ್ರಿಯಾ ॥

**ಶಂಸ್ಯಮ್**—ಶಂಸು ಸ್ತುತೌ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣ್ಯಂತದ ಮೇಲೆ **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ. **ಯತೋ ನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದರಂತೆಯೇ ರಾಧ್ಯಮ್ ಎಂಬಲ್ಲಿಯೂ ಕಾರ್ಯಗಳು ಬರುತ್ತವೆ.

**ಅಭಿಷ್ಟಿಮತ್**—ಅಭಿ ಉಪಸರ್ಗ. ಇಷ ಗತೌ. ಧಾತು ಅಭಿ ಉಪಪದವಾಗಿರುವಾಗ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟಕಾರಾದೇಶ. **ಮಂತ್ರೇ ವೃಷ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ನಿಗೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. **ಶಕಂಧ್ವಾದಿಷು ಪರರೂಪಂ ವಾಚ್ಯಮ್** ಎಂಬುದರಿಂದ ಇದು ಶಕಂಧ್ವಾದಿಯಲ್ಲಿ ಸೇರಿರುವುದರಿಂದ ಪರರೂಪ ಬರುತ್ತದೆ. **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ**—ಎಂಬುದರಿಂದ ಇಲ್ಲಿ **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ಉದಾತ್ತಸ್ವರ ಬರುವುದಿಲ್ಲ. ಅಭಿಷ್ಟಿಃ ಅಸ್ಯ ಅಸ್ತಿ ಇತಿ. ಅಭಿಷ್ಟಿಮತ್. **ತದಸ್ಯಾಸ್ತ್ಯ**—ಎಂಬುದರಿಂದ ಮತುಪ್ ಪ್ರತ್ಯಯ. ಅಂತೋದಾತ್ತದ ಪರದಲ್ಲಿರುವ ಈ ಮತುಪಿಗೆ **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ವರೂಥಂ**—ವೃಞ್ ವರಣೇ. ಧಾತು. **ಜ್ಯಾವೃಞ್ಭ್ಯಾಮೂಥನ್** (ಉ.ಸೂ ೧-೧೬೩) ಎಂಬುದರಿಂದ ಇದಕ್ಕೆ ಊಥನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಋಕ್ಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿದ್ವಾಂಸಾ**—ವಿದ ಜ್ಞಾನೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ ಬಂದಾಗ **ವಿದೇಃ ಶತುರ್ವಸುಃ** (ಪಾ. ಸೂ. ೭-೧-೩೬) ಎಂಬುದರಿಂದ ವಸುರಾದೇಶ. ವಿದ್ವಸ್ ಶಬ್ದವಾಗುತ್ತದೆ. ದ್ವಿವಚನದಲ್ಲಿ ಔಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ಪ್ರತ್ಯಯಸ್ವರ ಬರುತ್ತದೆ.

**ಅಪಗೂಳ್ಹಂ**—ಗುಹೂ ಸಂವರಣೇ. ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಊದಿತ್ತಾದುದರಿಂದ ವಿಕಲ್ಪಿತ ಇಟ್ಕವಾದುದರಿಂದ **ಯಸ್ಯ ವಿಭಾಷಾ** (ಪಾ. ಸೂ. ೭-೨-೧೫) ಎಂಬುದರಿಂದ ಇಡಾಗಮ ಬರುವುದಿಲ್ಲ. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋಃ**—ಎಂಬುದ

ರಿಂದ ತಕಾರಕ್ಕೆ ಧಕಾರಾದೇಶ. ಅದಕ್ಕೆ ಷ್ಟುತ್ವ. **ಢೋಢೇಲೋಪಃ** ಎಂಬುದರಿಂದ ಪೂರ್ವ ಢಕಾರಕ್ಕೆ ಲೋಪ. **ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ** ಎಂಬುದರಿಂದ ಪೂರ್ವದ ಉಕಾರಕ್ಕೆ ದೀರ್ಘ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ.

**ದರ್ಶತಾತ್**—ದೃಶಿರ್ ಪ್ರೇಕ್ಷಣೇ. ಧಾತು. **ಭೃಮೃದೃಶಿ** (ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಊಪಥುಃ**—ಡುವಪ್ ಬೀಜತಂತುಸಂತಾನೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ ಅಥುಸ್ ಪ್ರತ್ಯಯ. **ಅಸಂಯೋಗಾಲ್ಲಿಟ್ ಕಿತ್** ಎಂಬುದರಿಂದ ಪ್ರತ್ಯಯಕ್ಕೆ ಕಿತ್ವ ಅತಿದೇಶವಿರುವುದರಿಂದ ಧಾತುವು ಯಜಾದಿಯಲ್ಲಿ ಸೇರಿರುವುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ ಬರುತ್ತದೆ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಬಂದಾಗ ಸವರ್ಣ ದೀರ್ಘ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ವಂದನಾಯ**—ವದಿ ಅಭಿವಾದನಸ್ತುತ್ಯೋಃ. ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಇದಿತೋ-ನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. **ಕ್ರಿಯಾಗ್ರಹಣಂ ಕರ್ತವ್ಯಂ** ಎಂಬ ವಚನದಿಂದ ಕರ್ಮಕ್ಕೆ ಸಂಪ್ರದಾನಸಂಜ್ಞೆ ಇರುವುದರಿಂದ ಚತುರ್ಥೀ ಬಂದಿದೆ. ॥ ೧೧ ॥



॥ ಸಂಹಿತಾಪಾಠಃ ॥

ತದ್ವಾಂ ನರಾ ಸನಯೇ ದಂಸ ಉಗ್ರಮಾವಿಷ್ಕೃಣೋಮಿ ತನ್ಯತುರ್ನ ವೃಷ್ಟಿಂ ।
ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ ॥ ೧೨ ॥

॥ ಪದಪಾಠಃ ॥

ತತ್ । ವಾಂ । ನರಾ । ಸನಯೇ । ದಂಸಃ । ಉಗ್ರಂ । ಆವಿಃ । ಕೃಣೋಮಿ ।
ತನ್ಯತುಃ । ನ । ವೃಷ್ಟಿಂ ।

ದಧ್ಯಙ್ । ಹ । ಯತ್ । ಮಧು । ಆಥರ್ವಣಃ । ವಾಂ । ಅಶ್ವಸ್ಯ । ಶೀರ್ಷ್ಣಾ ।
ಪ್ರ । ಯತ್ । ಈಂ । ಉವಾಚ ॥ ೧೨ ॥

॥ ಸಾಯಣಭಾಷ್ಯಂ ॥

ಅತ್ರೇಯಮಾಖ್ಯಾಯಿಕಾ । ಇಂದ್ರೋ ದಧೀಚೇ ಪ್ರವರ್ಗ್ಯವಿದ್ಯಾಂ ಮಧುವಿದ್ಯಾಂ ಚೋಪದಿಶ್ಯ ಯದೀಮಾಮನ್ಯಸ್ಮೈ ವಕ್ಷ್ಯಸಿ ಶಿರಸ್ತೇ ಛೇತ್ಸ್ಯಾಮೀತ್ಯುವಾಚ । ತತೋಽಶ್ವಿನಾವಶ್ವಸ್ಯ ಶಿರಶ್ಛಿತ್ತ್ವಾ ದಧೀಚಃ ಶಿರಃ ಪ್ರಚ್ಛಿದ್ಯಾನ್ಯತ್ರ ನಿಧಾಯ ತತ್ರಾಶ್ವ್ಯಂ ಶಿರಃ ಪ್ರತ್ಯಧತ್ತಾಂ । ತೇನ ಚ ದಧ್ಯಙ್ ಋಚಃ ಸಾಮಾನಿ ಯಜೂಂಷಿ ಚ ಪ್ರವರ್ಗ್ಯವಿಷಯಾಣಿ ಮಧುವಿದ್ಯಾಪ್ರತಿಪಾದಕಂ ಬ್ರಾಹ್ಮಣಂ ಚಾಶ್ವಿನಾವಧ್ಯಾಪಯಾಮಾಸ । ತದಿಂದ್ರೋ ಜ್ಞಾತ್ವಾ ವಜ್ರೇಣ ತಚ್ಛಿರೋಽಚ್ಛಿನತ್ । ಅಥಾಶ್ವಿನೌ ತಸ್ಯ ಸ್ವಕೀಯಂ ಮಾನುಷಂ ಶಿರಃ ಪ್ರತ್ಯಧತ್ತಾಮಿತಿ ಶಾಟ್ಯಾಯನವಾಜಸನೇಯಯೋಃ ಪ್ರಪಂಚೇನೋಕ್ತಂ । ತದೇತತ್ಪ್ರತಿಪಾದ್ಯತೇ । ಹೇ ನರಾ ನರಾವಶ್ವಿನೌ ವಾಂ ಯುವಯೋಃ ಸಂಬಂಧ್ಯುಗ್ರಮುದ್ಗೂರ್ಣಮನ್ಯೈರ್ದುಃಶಕಂ ದಂಸಃ । ಕರ್ಮನಾಮೈತತ್ । ಯುವಾಭ್ಯಾಂ ಪುರಾ ಕೃತಂ ತತ್ಕರ್ಮ ಸನಯೇ ಧನಲಾಭಾರ್ಥಮಾವಿಷ್ಕೃಣೋಮಿ । ಪ್ರಕಟೀಕರೋಮಿ । ತತ್ರ ದೃಷ್ಟಾಂತಃ । ತನ್ಯತುರ್ನ । ಯಥಾ ಮೇಘಸ್ಥಃ ಶಬ್ದೋ ವೃಷ್ಟಿಂ ಮೇಘಾಂತರ್ವರ್ತಮಾನಮುದಕಂ ಪ್ರವರ್ಷಣೇನ ಸರ್ವತ್ರ ಪ್ರಕಟಯತಿ ತದ್ವತ್ । ಕಿಂ ತತ್ಕರ್ಮ । ಅಥರ್ವಣಃ ಪುತ್ರೋ ದಧ್ಯಙ್ ಏತತ್ಸಂಜ್ಞ ಋಷಿರಶ್ವಸ್ಯ ಶೀರ್ಷ್ಣಾ ಯುಷ್ಮತ್ಸಾಮರ್ಥ್ಯೇನ ಪ್ರತಿಹಿತೇನ ಶಿರಸಾ ವಾಂ ಯುವಾಭ್ಯಾಮಿಮಾಂ ಮಧುವಿದ್ಯಾಂ ಯದ್ಧ ಯದಾ ಖಲು ಪ್ರೋವಾಚ ಪ್ರೋಕ್ತವಾನ್ । ತದಾನೀಮಶ್ವಸ್ಯ ಶಿರಸಃ ಸಂಧಾನಲಕ್ಷಣಂ ಪುನರ್ಮಾನುಷಸ್ಯ ಶಿರಸಃ ಪ್ರತಿಸಂಧಾನಲಕ್ಷಣಂ ಚ ಯದ್ಭವದೀಯಂ ಕರ್ಮ ತದಾವಿಷ್ಕೃಣೋಮೀತ್ಯರ್ಥಃ ॥ ಸನಯೇ । ಷಣು ದಾನೇ । ಖನಿಕಷಿಕಸ್ಯಂಜ್ಯಸಿವಸಿಧ್ವನಿಸ್ತನಿವನಿಸನಿಗ್ರಂಥಿಚರಿಭ್ಯಶ್ಚೇತೀಪ್ರತ್ಯಯಃ । ತನ್ಯತುಃ । ತನು ವಿಸ್ತಾರೇ । ಋತನ್ಯಂಜೀತ್ಯಾದಿನಾ ಯತುಚ್ । ಯದ್ವಾ । ಸ್ತನ ಶಬ್ದೇ । ಬಾಹುಲಕಾದ್ಯತುಚ್ । ಛಾಂದಸಃ ಸಲೋಪಃ । ವೃಷ್ಟಿಂ । ವೃಷ್ಯತೇ ಸಿಚ್ಯತೇಽನೇನೇತಿ ವೃಷ್ಟಿಃ । ಮಂತ್ರೇ

**ವೃಷೇತ್ಯಾದಿನಾ ಕ್ತಿನ ಉದಾತ್ತತ್ವಂ । ಆಥರ್ವಣಃ । ಅಪತ್ಯಾರ್ಥೇಽಣ್ಯನ್ । ಪಾ. ೬-೪-೧೬೭. । ಇತಿ ಪ್ರಕೃತಿಭಾವಾಟ್ಟಿಲೋಪಾಭಾವಃ । ಶೀರ್ಷ್ಣಾ । ಶೀರ್ಷನ್ ಛಂದಸಿ । ಪಾ. ೬-೧-೬೦ । ಇತಿ ಶಿರಃಶಬ್ದ- ಪರ್ಯಾಯಃ ಶೀರ್ಷನ್‌ಶಬ್ದೋಽಂತೋದಾತ್ತೋ ನಿಪಾತ್ಯತೇ । ಅಲ್ಲೋಪೇ ಸತ್ಯುದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ನರಾ**—ಅಶ್ವಿನೀದೇವತೆಗಳೇ । **ಆಥರ್ವಣಃ**—ಅಥರ್ವಪುತ್ರನಾದ । **ದಧ್ಯಙ್**—ದಧ್ಯಙ್ ಎಂಬ ಋಷಿಯು । **ಅಶ್ವಸ್ಯ**—ಕುದುರೆಯ । **ಶೀರ್ಷ್ಣಾ**—(ನಿಮ್ಮ ಸಾಮರ್ಥ್ಯದಿಂದ ಲಬ್ಧವಾದ) ಶಿರಸ್ಸಿನಿಂದ । **ವಾಂ**—ನಿಮ್ಮಿಬ್ಬರಿಗೆ । **ಈಂ**—ಮಧುವಿದ್ಯೆಯನ್ನು । **ಯತ್ ಹ**—ಯಾವಾಗ । **ಉವಾಚ**—ಹೇಳಿಕೊಟ್ಟ ನೆಂಬುದು । **ಯತ್**—ಯಾವುದುಂಟೋ । **ವಾಂ**—ನಿಮ್ಮಿಬ್ಬರ । **ತತ್**—ಆ । **ಉಗ್ರಂ**—(ಇತರರಿಗೆ) ಅಸಾಧ್ಯವಾದ । **ದಂಸಃ**—ಸಾಹಸಕರ್ಮವನ್ನು । **ತನ್ಯತುಃ**—ಗುಡುಗು । **ವೃಷ್ಟಿಂ ನ**—ಮಳೆಯನ್ನು (ಪ್ರಕಟ ಗೊಳಿಸು) ವಂತೆ । **ಸನಯೇ**—ಧನಲಾಭಾರ್ಥವಾಗಿ । **ಆವಿಃ ಕೃಣೋಮಿ**—ಪ್ರಕಟಪಡಿಸುತ್ತೇನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಥರ್ವಪುತ್ರನಾದ ದಧ್ಯಙ್ ಎಂಬ ಋಷಿಯು (ನಿಮ್ಮ ಸಾಮರ್ಥ್ಯದಿಂದ ಪಡೆದ) ಹಯ ಶೀರ್ಷವುಳ್ಳವನಾಗಿ ನಿಮಗೆ ಮಧುವಿದ್ಯೆಯನ್ನು ಉಪದೇಶಮಾಡಿದನಷ್ಟೆ. ನಿಮ್ಮ ದುಸ್ಸಾಧ್ಯವಾದ ಆ ಕರ್ಮ ವನ್ನು, ಗುಡುಗು ಮಳೆಯನ್ನು ವ್ಯಕ್ತಗೊಳಿಸುವಂತೆ, ಧನ ಪಡೆಯುವುದಕ್ಕೋಸ್ಕರ ಪ್ರಕಟಪಡಿಸುತ್ತೇನೆ.

## English Translation.

I proclaim, leaders (of sacrifice), for the sake of acquiring wealth, that inimitable deed which you performed, as the thunder (announces) rain, when, provided by you with the head of a horse, Dadhyanch, the son of Atharvan, taught you the mystic science.

॥ ವಿಶೇಷವಿಷಯಗಳು ॥

**ದಂಸಃ**—**ಅಪಃ, ಅಪ್ನಃ** ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ **ದಂಸಃ** ಎಂಬ ಶಬ್ದವು ಉಕ್ತವಾಗಿರು ವುದರಿಂದ ದಂಸವೆಂದರೆ ಕರ್ಮವೆಂದು ಹೆಸರು. ಮನ್ತ್ರದ್ರಷ್ಟೃವಾದ ಋಷಿಯು—ಇತರರು ಯಾರೂ ಮಾಡಲು ಅಶಕ್ಯವಾದ ಕರ್ಮವನ್ನು ಅಶ್ವಿನೀದೇವತೆಗಳು ಆಚರಿಸುವರೆಂದು ಈ ಮನ್ತ್ರದಿಂದ ಪ್ರಕಟಿಸುವನು. ಮೇಘದಿಂದ ಉಂಟಾಗುವ ಧ್ವನಿಯು (ವೃಷ್ಟಿಯನ್ನು) ವೃಷ್ಟ್ಯುದಕವನ್ನು ಸುರಿಸುವಂತೆ ಅಶ್ವಿನೀದೇವತೆಗಳ ಪ್ರಭಾವವನ್ನು ಪ್ರಕಟಿಸುವ ಈ ಸ್ತೋತ್ರದ ಪಠನಪಾಠನಗಳಿಂದ ಯಥೇಚ್ಛವಾದ ಧನಲಾಭವು ಆಗುವುದು ಎಂದು ವರ್ಣಿಸಿರುವದನ್ನು ಇದರಿಂದ ಈ ಮಂತ್ರದ ಪೂರ್ವಾರ್ಧದಲ್ಲಿ ಅಶ್ವಿನೀದೇವತೆಗಳ ಅಸಾಧಾರಣವಾದ ಪ್ರಭಾವವು ವರ್ಣಿತವಾಗಿರುವುದು.

**ದಧ್ಯಙ್ ಹ ಯನ್ಮಧ್ವಾಥರ್ವಣಃ—ಅಥರ್ವಣಃ ಪುತ್ರಃ । ಏತತ್ಸಂಜ್ಞಃ ಋಷಿಃ ।** ಅಥರ್ವಣ ಎಂಬ ಋಷಿಪುತ್ರನಾದ ಆಥರ್ವಣನೆಂಬ ಹೆಸರುಳ್ಳ ಋಷಿಯು ಎಂದು ಅರ್ಥ. ನಿರುಕ್ತಕಾರರು—**ದಧ್ಯಙ್ ಪ್ರತ್ಯಕ್ತೋ ಧ್ಯಾನಮಿತಿ ವಾ ಪ್ರತ್ಯಕ್ತಮಸ್ಮಿನ್ ಧ್ಯಾನಮಿತಿ ವಾ** (ನಿ. ೧೨-೩೩) **ದಧ್ಯಙ್, ಅಥರ್ವಾ, ಮನುಃ.** ಎಂಬ ಮೂರು ಶಬ್ದಗಳೂ ಪರ್ಯಾಯ ಪದಗಳಲ್ಲದೆ ಬೇರೆಯ ಅರ್ಥವನ್ನು ಬೋಧಿಸುವಾಗ (ಆದಿತ್ಯ ಸಂಬಂಧವಾದ ಗುಣವನ್ನೂ ಹೊಂದಿರುವ ಕಾರಣ) ಆದಿತ್ಯನ ಜೊತೆಯಲ್ಲಿ ಸಂಚರಿಸುವ ದ್ಯುಸ್ಥಾನರಾದ ಮೂರು ಜನ ಋಷಿಗಳಾಗಿರುವರು. ಇವರು ಆದಿತ್ಯನಿಗಿಂತ ಬೇರೆಯಾದವರಲ್ಲ ಎಂಬುದಾಗಿ ಹೇಳುವುದಾದರೆ ಆಗ ಇವರು ದ್ಯುಸ್ಥಾನದಲ್ಲಿರುವವರೆಂದೂ, ಆದಿತ್ಯನ ಗುಣಸಂಬಂಧವನ್ನು ಹೊಂದಿರುವವರೆಂದೂ ಎರಡು ವಿಧವಾದ ವ್ಯಾಖ್ಯಾನ ವನ್ನು ಮಾಡಿರುವರು. ಇದಕ್ಕಾಗಿಯೇ **ಧ್ಯಾನಂ ಅಸ್ಮಿನ್ ಪ್ರತ್ಯಕ್ತಂ, ಪ್ರತ್ಯಕ್ತೋ ಧ್ಯಾನಂ** ಎಂದು ಎರಡು ವಿಧವಾಗಿ ಅರ್ಥವನ್ನೂ ವಿವರಿಸಿರುವರು.

ಸ್ಕಂದಸ್ವಾಮಿಗಳೂ ಸಾಯಣರೂ ಇಲ್ಲಿ ಒಂದು ಇತಿಹಾಸವನ್ನು ಹೇಳಿರುವರು. ವಾಜಸನೇಯ ಬ್ರಾಹ್ಮಣದಲ್ಲಿ ಈ ಇತಿಹಾಸವು ಪ್ರಸಿದ್ಧವಾಗಿರುವುದು.

> **ಆಥರ್ವಣಾಯ—ದಧೀಚೇ ಮಧ್ವಾಖ್ಯಂ ಪರಂ ಬ್ರಹ್ಮ ಇಂದ್ರ ಉವಾಚ । ಪ್ರೋಚ್ಯ ಚ ಯದಿ ವಕ್ಷ್ಯಸಿ ಶಿರಸ್ತೇ ಪತಿಷ್ಯತೀತಿ । ತಮಶ್ವಿನೌ ಮಧ್ವರ್ಥಿನಾವಾಗತ್ಯ ಊಚತುಃ । ಪ್ರಬ್ರೂಹಿ ನೌ ಪರಂ ಬ್ರಹ್ಮೇತಿ । ಸ ತೌ ಪ್ರತ್ಯುವಾಚ । ಶಿರಃಪಾತಭಯಾನ್ನ ಬ್ರವೀಮೀತಿ । ತೌ ತಂ ಪ್ರತ್ಯೂಚತುಃ । ಅನ್ಯತ್ ತೇ ಆವಾಂ ಶಿರ ಆದಧ್ವಹೇ । ತೇನ ಪ್ರಬ್ರೂಹಿ । ಸ ತಥೇತಿ ಪ್ರಪೇದ । ತಸ್ಯಾಶ್ವಿನೌ ಶಿರಶ್ಛಿತ್ವಾ ಅಶ್ವಶಿರ ಆದಧಾತೇ । ತೇನಾಸೌ ತಾನಧ್ಯಾಪಯಾಂ- ಚಕಾರೇತಿ । ತದೇತದಿಹೋಚ್ಯತೇ ದಧ್ಯಙ್ ಹ ಯದಿತ್ಯಾದಿನಾ ॥**

ಅಥರ್ವಣಪುತ್ರನಾದ ದಧೀಚನೆಂಬ ಋಷಿಗೆ ಮಧು ಎಂದು ಹೆಸರುಳ್ಳ ಪ್ರಸಿದ್ಧವಾದ ಪರಬ್ರಹ್ಮೋಪದೇಶವನ್ನು (ಮಧುವಿದ್ಯಾ) ಇಂದ್ರನು ಮಾಡಿ ಇದನ್ನು ನೀನು ಇತರರು ಯಾರಿಗಾದರೂ ಉಪದೇಶಮಾಡಿದರೆ ನಿನ್ನ ತಲೆಯು ಕೆಳಕ್ಕೆ ಬಿದ್ದುಹೋಗುವುದು ಎಂದು ಹೇಳಿದನು. ಅಶ್ವಿನೀದೇವತೆಗಳು ಮಧುವಿದ್ಯೆಯನ್ನು ಹೊಂದಲು ಆಸೆಯುಳ್ಳವರಾಗಿ ದಧೀಚಿಋಷಿಯ ಸಮೀಪಕ್ಕೆ ಬಂದು ನಮಗೆ ಮಧುವಿದ್ಯಾಪ್ರತಿಪಾದ್ಯವಾದ ಪರಬ್ರಹ್ಮೋಪದೇಶವನ್ನು ಮಾಡು ಎಂದು ದಧೀಚಿಋಷಿಯನ್ನು ಕೇಳಿದರು. ಆಗ ಅವನು ತನ್ನ ತಲೆಯು ಬಿದ್ದುಹೋಗುವುದೆಂಬ ಭಯದಿಂದ ಅವರಿಗೆ ನಾನು ಉಪದೇಶವನ್ನು ಮಾಡುವುದಿಲ್ಲವೆಂದು ಹೇಳಿದನು. ಆಗ ಅಶ್ವಿನೀದೇವತೆಗಳು ನಿನಗೆ ಬೇರೆಯ ತಲೆಯನ್ನು ನಾವು ಸೇರಿಸುತ್ತೇವೆಯಾದಕಾರಣ ಉಪದೇಶಮಾಡು ಎಂದು ಹೇಳಲು ಆ ಮಾತನ್ನು ಕೇಳಿ ಅದಕ್ಕೆ ಸಮ್ಮತಿಸಿದನು. ಆಗ ಅಶ್ವಿನೀದೇವತೆಗಳು ಅವನ ತಲೆಯನ್ನು ಕತ್ತರಿಸಿ ಕುದುರೆಯ ತಲೆಯನ್ನು ಸೇರಿಸಿದರು. ಅವನು ಮಧುವಿದ್ಯೆಯನ್ನು ಅವರಿಗೆ ಉಪದೇಶಮಾಡಿದನು ಎಂದು ಇತಿಹಾಸವು ಸ್ಕಂದಸ್ವಾಮಿ ಭಾಷ್ಯದಲ್ಲಿರುವುದು.

> **ತದಿಂದ್ರೋ ಜ್ಞಾತ್ವಾ ವಜ್ರೇಣ ತಚ್ಛಿರೋ ಅಚ್ಛಿನತ್ । ಅಥಾಶ್ವಿನೌ ತಸ್ಯ ಸ್ವಕೀಯಂ ಮಾನುಷಂ ಶಿರಃ ಪ್ರತ್ಯಧತ್ತಾಂ ॥**

ಇಂದ್ರನು ಇದನ್ನು ತಿಳಿದು ತನ್ನ ವಜ್ರಾಯುಧದಿಂದ ದಧೀಚಿಋಷಿಯ ತಲೆಯನ್ನು ಕತ್ತರಿಸಿದನು. ಅನಂತರ ಅಶ್ವಿನೀ ದೇವತೆಗಳು ಅವನ ಹಿಂದಿನ ಮನುಷ್ಯನ ಆಕಾರದ ತಲೆಯನ್ನೇ ದಧೀಚಿಋಷಿಯ ಶರೀರಕ್ಕೆ ಸೇರಿಸಿ ಅವನನ್ನು ರಕ್ಷಿಸಿದರು ಎಂಬ (ಕಥಾ) ಇತಿಹಾಸದ ಭಾಗವು ಸಾಯಣಭಾಷ್ಯದಲ್ಲಿ ಉಕ್ತವಾಗಿರುವುದು.

**ಅಶ್ವಸ್ಯ ಶೀರ್ಷ್ಣಾ ಪ್ರ ಯದೀಂ ಉವಾಚ—ಯುಷ್ಮತ್ ಸಾಮರ್ಥ್ಯೇನ ಪ್ರತಿಹಿತೇನ ಶಿರಸಾ ಯುವಾಭ್ಯಾಂ ಇಮಾಂ ಮಧುವಿದ್ಯಾಂ ಯದಾ ಚ ಉಕ್ತವಾನ್ ।** ಕುದುರೆಯ ತಲೆಯನ್ನು ತಂದು ಸೇರಿಸಿರುವ ನಿಮ್ಮ ಸಾಮರ್ಥ್ಯವನ್ನೂ, ದಧೀಚಿಋಷಿಯು ಮಧುವಿದ್ಯೆಯನ್ನು ಉಪದೇಶಮಾಡಿರುವುದನ್ನು ನೀವು ಅವನಿಗೆ ಶಿರಸ್ಸುಗಳ ಪರಿವರ್ತನೆಯಿಂದ ಉಪದೇಶವನ್ನು ಹೊಂದಿ ಅವನನ್ನು ರಕ್ಷಿಸಿರುವುದನ್ನೂ, ಇಲ್ಲಿ ಪ್ರಕಟಿಸಿರುವೆನು ಎಂದು ಈ ಋಕ್ಕಿನಲ್ಲಿ ವರ್ಣಿಸಿರುತ್ತದೆ.

ದಧ್ಯಂಚ್ ಅಥವಾ ದಧೀಚಿ ಎಂಬ ಋಷಿಯು ಪುರಾಣಾದಿಗಳಲ್ಲಿ ಪ್ರಸಿದ್ಧನಾದವನು. ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು—ಅಥರ್ವನೆಂಬುವನ ಪುತ್ರನಾದ ದಧ್ಯಂಚ್ ಎಂಬ ಋಷಿಯು ಜೀವಿಸಿದ್ದಾಗ ಅವನ ದರ್ಶನದಿಂದ ಅಸುರರು ಭೀತರಾಗಿ ಓಡಿಹೋಗಿದ್ದರು. ಅವನು ಮೃತನಾಗಿ ಸ್ವರ್ಗಕ್ಕೆ ಹೋದ ಬಳಿಕ ಅಸುರರು ನಿರ್ಭಯವಾಗಿ ಭೂಮಿಯೆಲ್ಲವನ್ನೂ ವ್ಯಾಪಿಸಿದರು. ಬಳಿಕ ಇಂದ್ರನು ಈ ಅಸುರರೊಡನೆ ಯುದ್ಧಮಾಡ ಲಶಕ್ತನಾಗಿ ಆ ಋಷಿಯನ್ನು ಹುಡುಕಿದನು. ಋಷಿಯು ಸ್ವರ್ಗಸ್ಥನಾದನೆಂದು ತಿಳಿಯಬಂದಿತು. ಆಗ ಇಂದ್ರನು ಸಮೀಪದಲ್ಲಿದ್ದವರನ್ನು ಕುರಿತು ಆ ಋಷಿಯ ಅಂಗಗಳಲ್ಲಿ ಯಾವುದಾದರೂ ಅವಶೇಷವಿದೆಯೇ ಎಂದು ಕೇಳಲು ಆಗ ಅವರು—ದಧೀಚಿಋಷಿಯು ಒಂದಾನೊಂದು ಕಾಲದಲ್ಲಿ ಅಶ್ವಿನೀದೇವತೆಗಳಿಗೆ ಮಧುವಿದ್ಯವನ್ನು ಕಲಿಸಿದ ಕುದುರೆಯ ತಲೆಬುರುಡೆಯು ಮಾತ್ರ ಇರುವುದೆಂದೂ, ಅದು ಸಹ ಎಲ್ಲಿರುವುದೋ ಗೊತ್ತಿಲ್ಲವೆಂದೂ ಹೇಳಿದರು. ಆಗ ಇಂದ್ರನು ಅದನ್ನು ಹುಡುಕುವಂತೆ ಅವರಿಗೆ ಹೇಳಲು, ಅವರು ಅದು ಕುರುಕ್ಷೇತ್ರದ ಸಮೀಪದಲ್ಲಿರುವ ಶರ್ಯಣಾವತ್ ಎಂಬ ಸರೋವರದಲ್ಲಿ ಬಿದ್ದಿರುವುದನ್ನು ಹುಡುಕಿ ತೆಗೆದುಕೊಂಡುಬಂದರು. ಇಂದ್ರನು ಆ ತಲೆಬುರುಡೆಯ ಮೂಳೆಗಳಿಂದ ಅಸುರರನ್ನು ಜಯಿಸಿದನು ಎಂದರೆ, ಒಂಬತ್ತುಸಲ ತೊಂಬತ್ತು ಎಂದರೆ ಎಂಟನೂರು ಹತ್ತಾವರ್ತಿ ಅಸುರರ ಮಾಯಾಜಾಲವನ್ನು ವಿಫಲಗೊಳಿಸಿದನು. ಇಲ್ಲಿ ಒಂಭತ್ತುಸಲ ತೊಂಭತ್ತು ಎಂಬ ಸಂಖ್ಯೆಯನ್ನು ವಿವರಿಸುವಾಗ ಭಾಷ್ಯಕಾರರು—ಮೂರು ಲೋಕಗಳಲ್ಲಿರುವ ದೇವತೆಗಳನ್ನು ಜಯಿಸಲು ಮೊದಲು ಅಸುರರಿಗೆ ಮೂರುವಿಧವಾದ ಮಾಯಾಭೇದಗಳಿದ್ದವು. ಅವುಗಳಲ್ಲಿ ಒಂದೊಂದೂ ವರ್ತಮಾನ ಭೂತ ಭವಿಷ್ಯತ್ ಎಂದು ಮೂರುವಿಧವಾಗಿದ್ದುದರಿಂದ ಒಟ್ಟು ಒಂಭತ್ತು ವಿಧಗಳಾದವು. ಮತ್ತೆ ಆ ಒಂಬತ್ತು ಮಾಯೆಗಳು ಉತ್ಸಾಹಾದಿಶಕ್ತಿತ್ರಯಗಳಿಂದ ಕೂಡಿ ೯×೩=೨೭ ಆದುವು. ಮತ್ತೆ ಅವು ಸಾತ್ವಿಕಾದಿ ಗುಣತ್ರಯಗಳಿಂದ ಕೂಡಿ ೨೭×೩=೮೧ ಆದುವು. ಈ ಎಂಭತ್ತೊಂದು ಮಾಯೆಗಳು ದಶದಿಕ್ಕುಗಳಲ್ಲಿ ಆಚರಿಸಲ್ಪಡುವುದರಿಂದ ಒಟ್ಟು ೮೧×೧೦=೮೧೦ ಅಥವಾ ಒಂಬತ್ತುಸಲ ತೊಂಭತ್ತು ೯×೯೦=೮೧೦ ಆದುವು. ಈ ವಿಧವಾದ ವೃತ್ರರೂಪವಾದ ಅಸುರರ ಮಾಯಾಜಾಲಗಳನ್ನು ಇಂದ್ರನು ನಿರರ್ಥಕಗೊಳಿಸಿದನು ಎಂದು ವಿವರಿಸಿರುವರು. (ಋ. ಸಂ. ೧-೮೦-೧೬)

ಸ್ಕಂದಸ್ವಾಮಿಯು ಬೇರೊಂದು ಇತಿಹಾಸವನ್ನು ಹೇಳಿರುವರು–ಪೂರ್ವದಲ್ಲಿ ಕಾಲಕಂಜರೆಂಬ ಅಸುರರಿದ್ದರು. ಅವರು ಪ್ರಬಲರಾಗಿ ದೇವತೆಗಳನ್ನು ಕೊಲ್ಲುತ್ತಾ ತುಂಬಾ ತೊಂದರೆ ಕೊಡುತ್ತಿದ್ದರು. ಆಗ ದೇವತೆಗಳು ಬ್ರಹ್ಮನ

ಸಮೀಪಕ್ಕೆ ಹೋಗಿ ಈ ಅಸುರರನ್ನು ಸಂಹಾರಮಾಡಲು ಉಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಲು, ಬ್ರಹ್ಮನು-ಎಲೈ ದೇವತೆಗಳಿರಾ, ದಧ್ಯಙ್ ಎಂಬ ಋಷಿಯು ಇರುವನು. ನೀವು ಅವನ ಸಮೀಪಕ್ಕೆ ಹೋಗಿರಿ, ಅವನು ಅಸುರರ ಸಂಹಾರ ವಿಷಯದಲ್ಲಿ ತಕ್ಕ ಉಪಾಯವನ್ನು ತಿಳಿಸುವನು ಎಂದನು. ದೇವತೆಗಳು ಬ್ರಹ್ಮನ ಮಾತಿನಂತೆ ದಧೀಚಿ ಋಷಿಯ ಸಮೀಪಕ್ಕೆ ಹೋಗಿ ಬ್ರಹ್ಮನು ತಮ್ಮನ್ನು ಕಳುಹಿಸಿರುವನೆಂದು ಅರಿಕೆಮಾಡಿದರು. ಆ ಋಷಿಯು ಯೋಗ ದೃಷ್ಟಿಯಿಂದ ಇವರು ಬಂದ ಕಾರ್ಯವನ್ನು ತಿಳಿದು ಯೋಗಸಮಾಧಿಯಿಂದ ತನ್ನ ಪ್ರಾಣಗಳನ್ನು ವಿಸರ್ಜಿಸಿದನು. ಆಗ ಆ ಋಷಿಯ ಮೂಳೆಗಳಿಂದ ಇಂದ್ರನು ಅಸುರರನ್ನು ಸಂಹಾರಮಾಡಿದನು. ಈ ವಿಷಯವೇ ಈ ಋಕ್ಕಿನಲ್ಲಿ ವಿವರಿಸಲ್ಪಟ್ಟಿರುವುದೆಂದು ಸ್ಕಂದಸ್ವಾಮಿಯು ಹೇಳಿರುವರು. (ಋ. ಸಂ. ೧-೮೦-೧೬)

ದಧೀಚಿಋಷಿಯ ತಲೆಯು ಕುದುರೆಯ ತಲೆಯುಹಾಗಿದ್ದಿತೆಂದೂ ಅದು ಅಶ್ವಿನೀದೇವತೆಗಳಿಂದ ಅವನಿಗೆ ಕೊಡಲ್ಪಟ್ಟಿದ್ದಿತೆಂದೂ ಪ್ರತೀತಿ ಇರುವುದು. ದಧೀಚಿಋಷಿಯು ಮೃತನಾದನೇಲೆ ಕುದುರೆ ತಲೆಯಂತಿದ್ದ ಅವನ ಶಿರಸ್ಸನ್ನು ಇಂದ್ರನು ಹುಡುಕಿದನು. ಅದು ಒಂದು ಪರ್ವತದ ಮರೆಯಲ್ಲಿ ಶರ್ಯಣಾವತಿಯೆಂಬ ಒಂದು ಸರೋವರದಲ್ಲಿ ಸಿಕ್ಕಿತೆಂದು ಋ. ಸಂ. ೧-೮೪-೧೩ ರಲ್ಲಿ ವಿವರಿಸಲಾಗಿರುವುದು.

ದಧೀಚಿಋಷಿಗೆ ಕುದುರೆಯ ಶಿರಸ್ಸು ಹೇಗೆ ಬಂದಿತೆಂಬ ವಿಚಾರದಲ್ಲಿ ಸ್ಕಂದಸ್ವಾಮಿಯು ಒಂದು ಪೂರ್ವೇತಿಹಾಸವನ್ನು ಹೇಳಿರುವರು—ಅಥರ್ವಣ ಪುತ್ರನಾದ ದಧೀಚಿಋಷಿಗೆ ಇಂದ್ರನು ಮಧುವೆಂಬ ಪರಬ್ರಹ್ಮನ ಸ್ವರೂಪವನ್ನು ಉಪದೇಶಮಾಡಿ ಇದನ್ನು ಯಾರಿಗೂ ಹೇಳಕೂಡದೆಂದೂ ಹಾಗೆ ಒಂದು ವೇಳೆ ಹೇಳಿದರೆ ನಿನ್ನ ತಲೆಯು ಬಿದ್ದುಹೋಗುವುದೆಂದೂ ಹೇಳಿದ್ದನು. ಕೆಲವು ಕಾಲದ ಮೇಲೆ ಅಶ್ವಿನೀದೇವತೆಗಳು ಆ ದಧೀಚಿಋಷಿಯ ಸಮೀಪಕ್ಕೆ ಬಂದು, ಇಂದ್ರನು ನಿನಗೆ ತಿಳಿಸಿದ ಬ್ರಹ್ಮಸ್ವರೂಪವನ್ನು ವಿವರಿಸೆನಲು, ದಧೀಚಿಋಷಿಯು ಅವನನ್ನು ಕುರಿತು ಈ ವಿಷಯವನ್ನು ನಾನು ನಿಮಗೆ ತಿಳಿಸಿದಲ್ಲಿ ನನ್ನ ತಲೆಯು ಬಿದ್ದುಹೋಗುವುದೆಂದು ಇಂದ್ರನು ಹೇಳಿರುವನು. ಆ ಭಯದಿಂದ ನಾನು ಹೇಳುವುದಿಲ್ಲವೆನ್ನಲು, ಅಶ್ವಿನೀದೇವತೆಗಳು ಅದಕ್ಕಾಗಿ ಚಿಂತಿಸಬೇಡ, ನಿನ್ನ ತಲೆಯು ಬಿದ್ದುಹೋದರೆ ಬೇರೆ ತಲೆಯನ್ನು ನಿನಗೆ ಕೊಡುವುವೆಂದರು. ದಧೀಚಿಯು ಅದಕ್ಕೆ ಸಮ್ಮತಿಸಿ ಹೇಳಿದನು. ಅದರಿಂದ ದಧೀಚಿಋಷಿಯ ಶಿರಸ್ಸು ಬಿದ್ದುಹೋಗಲು ಅಶ್ವಿನೀದೇವತೆಗಳು ಒಂದು ಕುದುರೆಯ ಶಿರಸ್ಸನ್ನು ಕತ್ತರಿಸಿ ತಂದು ದಧೀಚಿಋಷಿಯ ಶರೀರಕ್ಕೆ ಸೇರಿಸಿದರು. ಅದರಿಂದ ದಧೀಚಿಋಷಿಯ ಶಿರಸ್ಸು ಕುದುರೆಯ ಶಿರಸ್ಸಿನಂತಿರುವುದು ಎಂದು ವರ್ಣಿತವಾಗಿದೆ ಈ ವಿಷಯವನ್ನು ಕಕ್ಷೀವಾನ್ ಎಂಬ ಋಷಿಯು ಋ. ಸಂ. ೧-೧೧೬-೧೨ ಮತ್ತು ೧-೧೧೭-೨೨ ಋಕ್ಕುಗಳಲ್ಲಿ ವರ್ಣಿಸಿರುವನು.

ಈ ಋಷಿಯ ಹೆಸರು ಋಗ್ವೇದ ಸಂಹಿತೆಯಲ್ಲಿ ೧-೮೦-೧೬ : ೧-೮೪-೧೩ ; ೧-೮೪-೧೪ ; ೧-೧೧೬-೧೨; ೧-೧೧೭-೨೨ ; ೧-೧೧೯-೯ ಮೊದಲಾದ ಋಕ್ಕುಗಳಲ್ಲಿಯೂ ತೈತ್ತಿರೀಯ ಸಂಹಿತಾ. ೫-೧-೪-೪ ; ೫-೬-೬-೩ ಕಾಠಕ ಸಂಹಿತಾ ೧೯-೪ ; ಶತಪಥ ಬ್ರಾಹ್ಮಣ ೪-೧-೫-೧೮ ; ೬-೪-೨-೩ ; ೧೪-೧-೧-೧೮ ; ೧೪-೧-೧-೨೦ ; ೧೪-೧-೧-೨೫ ; ೧೪-೧-೪-೧೩ ; ಬೃಹದಾರಣ್ಯಕೋಪನಿಷತ್ ೨-೫-೨೨ ; ೪-೫-೨೮ ಮೊದಲಾದ ಸ್ಥಳಗಳಲ್ಲಿ ಪಠಿತವಾಗಿದೆ.

Welson ಎಂಬ ಪಾಶ್ಚಾತ್ಯಪಂಡಿತನು ಈ ವಿಷಯದಲ್ಲಿ ಈ ರೀತಿ ಬರೆಯುತ್ತಾನೆ—

We have here rather obscure allusions to a legend which was probably afterwards modified by the Purana's in which the name also occurs as Dadhicha. In the Mahabharata, Vana Parva, Vol. I. it is merely related, that the gods, being oppressed by the kalakeya Asuras, solicited from the sage Dadhicha his bones, which he gave them, and from which Twashtri fabricated the thunderbolt with which Indra slew Vritra and routed the Asuras. The legend of the text differs from this; Indra—having taught the sciences called Pravargya vidya and Madhu-vidya to Dadhyanch, threatened that he would cut off his head if ever he taught them to any one else; the Aswins prevailed upon him, nevertheless, to teach them the prohibited knowledge, and, to evade Indra's threat, took off the head of the sage, replacing it by that of a horse; Indra, apprized of Dadhyanch's breach of faith, struck off his equine head with the thunderbolt; on which the Aswins restored to him his own. The Pravargya vidya is said to imply certain verses of the Rik, Yajur, and Sama Vedas, and the Madhu-vidya the Brahmana.

**ಆಥರ್ವಣಃ—ಅಥರ್ವಾ** ಎಂಬ ಋಷಿಯು ದಧೀಚಿಋಷಿಗೆ ತಂದೆಯೆಂದು ಈ ಋಕ್ಕಿನಲ್ಲಿ ಹೇಳಲ್ಪಟ್ಟಿರುವುದು. ಅನೇಕ ಗುಪ್ತ ಮತ್ತು ಮಾಯಾವಿದ್ಯೆಗಳನ್ನೊಳಗೊಂಡಿರುವ ಮಂತ್ರಗಳು ಅಥರ್ವವೇದದಲ್ಲಿರುವುವೆಂದೂ ಈ ವೇದಕ್ಕೆ ಈ ಹೆಸರು ಬರಲು ಈ ಅಥರ್ವನೆಂಬ ಋಷಿಯು ಈ ವಿದ್ಯೆಗಳಲ್ಲಿ ಪ್ರವೀಣನಾಗಿ ಆ ವೇದದ ಅನೇಕ ಸೂಕ್ತಗಳಿಗೆ ದ್ರಷ್ಟೃವಾಗಿರುವುದೇ ಕಾರಣವೆಂದೂ ಪ್ರಸಿದ್ಧಿ ಇರುವುದು.

ಅಥರ್ವಾ ಎಂಬ ಹೆಸರಿನ ಋಷಿಯು ಪ್ರಸಿದ್ಧವಾದ ಒಂದು ಋತ್ವಿಗ್ವಂಶಕ್ಕೆ ಮೂಲಪುರುಷನು. ಈ ಶಬ್ದದ ಬಹುವಚನಪ್ರಯೋಗವಿರುವ ಸ್ಥಳಗಳಲ್ಲಿ ಈ ಋಷಿಯ ವಂಶಸ್ಥರೆಂದು ಅರ್ಥವು. ಕೆಲವುಕಡೆ ಎಂದರೆ—

**ದಶ ರಥಾನ್ ಪ್ರಷ್ಟಿಮತಃ ಶತಂ ಗಾ ಅಥರ್ವಭ್ಯಃ ।**
**ಅಶ್ವಥಃ ಪಾಯವೇಽದಾತ್ ॥**

(ಋ. ಸಂ. ೬-೪೭-೨೪).

ಮೊದಲಾದ ಋಕ್ಕುಗಳಲ್ಲಿ ಅಶ್ವಥನೆಂಬ ರಾಜನು ಅಥರ್ವವಂಶದವರಿಗೆ ರಥ, ಗೋವುಗಳು ಮೊದಲಾದವುಗಳನ್ನು ಕೊಟ್ಟ ದಾನಸ್ತುತಿಯ ಪ್ರಶಂಸೆ ಇರುವುದು.

**ಅಭಿ ತೇ ಮಧುನಾ ಪಯೋಽಥರ್ವಾಣೋ ಅಶಿಶ್ರಯುಃ ।**
**ದೇವಂ ದೇವಾಯ ದೇವಯು ॥**

(ಋ. ಸಂ. ೯-೧೧-೨).

ಎಂಬ ಋಕ್ಕಿನಲ್ಲಿ ಈ ಅಥರ್ವವಂಶದವರು ಸೋಮನಿಗೆ ಹಾಲನ್ನು ಬೆರಸಿದ ಸೋಮರಸವನ್ನು ಅರ್ಪಿಸಿದ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು. ಈ ಋಷಿಯ ಹೆಸರು—

**ಯಜ್ಞೈರಥರ್ವಾ ಪ್ರಥಮಃ ಪಥಸ್ತತೇ ತತಃ ಸೂರ್ಯೋ ವ್ರತಪಾ ವೇನ ಆಜನಿ ।**
(ಋ. ಸಂ. ೧-೮೩-೫).

**ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ ।**
(ಋ. ಸಂ. ೬-೧೬-೧೩).

**ಏವಾ ಮಹಾನ್ಬೃಹದ್ದಿವೋ ಅಥರ್ವಾವೋಚತ್ಸ್ವಾಂ ತನ್ವ೧ಮಿಂದ್ರಮೇವ ।**
(ಋ. ಸಂ. ೧೦-೧೨೦-೯).

ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು. ಈ ಆಥರ್ವಋಷಿಯ ವಂಶಸ್ಥನಾದ ಬೃಹದ್ದಿವ ಎಂಬ ಋಷಿದೃಷ್ಟವಾದ ಇಂದ್ರದೇವತಾಕವಾದ ಒಂದು ಸೂಕ್ತವು ಋಗ್ವೇದದ ಹತ್ತನೆಯ ಮಂಡಲದಲ್ಲಿ (ಋ. ಸಂ. ೧೦-೧೨೦) ಇರುವುದು.

॥ ವ್ಯಾಕರಣಪ್ರಕ್ರಿಯಾ ॥

**ಸನಯೇ**—ಷಣು ದಾನೇ. ಧಾತು. **ಖನಿಕಷಿಕಸ್ಯಜ್ಯ ವಸಿಧ್ವನಿಸ್ತನಿವನಿ ಸನಿ ಗ್ರಂಥಿ ಚರಿಭ್ಯಶ್ಚ** (ಉ. ಸೂ. ೪-೫೭೯) ಎಂಬುದರಿಂದ ಇದಕ್ಕೆ ಇಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಕೃಣೋಮಿ**—ಕೃವಿ ಹಿಂಸಾಕರಣಯೋಶ್ಚ. ಧಾತು. ಲಟ್ ಉತ್ತಮಪುರುಷ ಏಕವಚನ ಪರವಾದಾಗ **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರ ಅಂತಾದೇಶ. ಉ ವಿಕರಣ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ಅಲೋಪಕ್ಕೆ ಸ್ಥಾನಿವದ್ಭಾವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ತನ್ಯತುಃ**—ತನು ವಿಸ್ತಾರೇ. ಧಾತು. **ಋತನ್ಯಞ್ಜಿ**—(ಉ. ಸೂ. ೪-೪೪೨) ಎಂಬುದರಿಂದ ಇದಕ್ಕೆ ಯತುಚ್ ಪ್ರತ್ಯಯ. ಅಥವಾ ಸ್ತನ ಶಬ್ದೇ. ಧಾತು. **ಉಣಾದಯೋ ಬಹುಲಂ** ಎಂಬುದರಿಂದ ಇದಕ್ಕೆ ಯತುಚ್ ಪ್ರತ್ಯಯ. ಆಗ ಛಾಂದಸವಾಗಿ ಸಲೋಪ ಬರುತ್ತದೆ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಪ್ರತ್ಯಯ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವೃಷ್ಟಿಂ**—ವೃಷು ಸೇಚನೇ. ಧಾತು. ವೃಷ್ಯತೇ ಸಿಚ್ಯತೇ ಅನೇನ ಇತಿ ವೃಷ್ಟಿಃ ಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನಿಗೆ ಉದಾತ್ತಸ್ವರ ಬರುತ್ತದೆ. ಷ್ಟುತ್ವದಿಂದ ತಕಾರಕ್ಕೆ ಟಕಾರಾದೇಶ.

**ಆಥರ್ವಣಃ**—ಅಥರ್ವಣಃ ಅಪತ್ಯಂ ಪುಮಾನ್. ಸಃ ಆಥರ್ವಣಃ. **ತಸ್ಯಾಪತ್ಯಂ** (ಪಾ. ಸೂ. ೪-೧-೯೨) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ನಸ್ತದ್ಧಿತೇ** ಸೂತ್ರದಿಂದ ಟಿಲೋಪ ಪ್ರಾಪ್ತವಾದರೆ **ಅನ್** (ಪಾ. ಸೂ. ೬-೪-೧೬೭) ಎಂಬುದರಿಂದ ಪ್ರಕೃತಿಭಾವ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶೀರ್ಷ್ಣಾ**—**ಶೀರ್ಷಂಶ್ಛಂದಸಿ** (ಪಾ ಸೂ. ೬-೧-೬೦) ಎಂಬುದರಿಂದ ಶಿರಶ್ಶಬ್ದ ಪರ್ಯಾಯವಾಗಿ **ಶೀರ್ಷನ್** ಶಬ್ದವು ಅಂತೋದಾತ್ತವಾಗಿ ನಿಪಾತಿತವಾಗಿದೆ. ತೃತೀಯಾ ಏಕವಚನ ಪರವಾದಾಗ ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ ಲೋಪ. ಅನುದಾತ್ತವನ್ನು (ವಿಭಕ್ತಿ) ನಿಮಿತ್ತೀಕರಿಸಿ ಉದಾತ್ತವಾದ ಅಕಾರಕ್ಕೆ ಲೋಪ ಬಂದುದರಿಂದ **ಅನುದಾತ್ತಸ್ಯಚಯತ್ರೋ**-(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಉವಾಚ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಿಟ್ಟಿನಲ್ಲಿ **ಬ್ರುವೋವಚಿಃ** (ಪಾ ಸೂ. ೨-೪-೫೩) ಎಂಬುದರಿಂದ ಅದಕ್ಕೆ ವಚ್ಯಾದೇಶ. ಲಿಣ್ಣಿಮಿತ್ತವಾಗಿ ದ್ವಿತ್ವ. **ಲಿಟ್ಯಭ್ಯಾಸಸ್ಯೋಭಯೇಷಾಂ** (ಪಾ. ಸೂ. ೬-೧-೧೭) ಎಂಬುದರಿಂದ ಸಂಪ್ರಸಾರಣ ಅಭ್ಯಾಸಕ್ಕೆ ಬರುತ್ತದೆ. ಪ್ರತ್ಯಯ ಣಿತ್ತಾದುದರಿಂದ **ಅತಉಪಧಾಯಾಃ** (ಪಾ. ಸೂ. ೭-೧-೧೧೬) ಎಂಬುದರಿಂದ ಉಪಧಾವೃದ್ಧಿ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ಅಜೋಹವೀನ್ನಾಸತ್ಯಾ ಕರಾ ವಾಂ ಮಹೇ ಯಾಮನ್ಪುರುಭುಜಾ
ಪುರಂಧಿಃ ।
ಶ್ರುತಂ ತಚ್ಛಾಸುರಿವ ವಧ್ರಿಮತ್ಯಾ ಹಿರಣ್ಯಹಸ್ತಮಶ್ವಿನಾ-
ವದತ್ತಂ ॥ ೧೩ ॥

॥ ಪದಪಾಠಃ ॥

ಅಜೋಹವೀತ್ । ನಾಸತ್ಯಾ । ಕರಾ । ವಾಂ । ಮಹೇ । ಯಾಮನ್ ।
ಪುರುಽಭುಜಾ । ಪುರಂಽಧಿಃ ।
ಶ್ರುತಂ । ತತ್ । ಶಾಸುಃಽಇವ । ವಧ್ರಿಽಮತ್ಯಾಃ । ಹಿರಣ್ಯಽಹಸ್ತಂ । ಅಶ್ವಿನಾ ।
ಅದತ್ತಂ ॥ ೧೩ ॥

॥ ಸಾಯಣಭಾಷ್ಯಂ ॥

ವಧ್ರಿಮತೀ ನಾಮ ಕಸ್ಯಚಿದ್ರಾಜರ್ಷೇಃ ಪುತ್ರೀ ನಪುಂಸಕಭರ್ತೃಕಾ । ಸಾ ಪುತ್ರಲಾಭಾರ್ಥಮಶ್ವಿನಾವಾಜುಹಾವ । ತದಾಹ್ವಾನಂ ಶ್ರುತ್ವಾಶ್ವಿನಾವಾಗತ್ಯ ತಸ್ಯೈ ಹಿರಣ್ಯಹಸ್ತಾಖ್ಯಂ ಪುತ್ರಂ ದದತುಃ । ತದೇತದಾಹ । ಪುರುಭುಜಾ ಬಹೂನಾಂ ಪಾಲಕೌ ಪ್ರಭೂತಹಸ್ತೌ ವಾ ಹೇ ನಾಸತ್ಯಾವಶ್ವಿನೌ ಮಹೇ ಮಹನೀಯೇ ಪೂಜನೀಯೇ ಯಾಮನ್ ಯಾಮನಿ । ಯಾತಿ ಗಚ್ಛತೀತಿ ಯಾಮ ಸ್ತೋತ್ರಂ । ತಸ್ಮಿನ್ಸತಿ ಕರಾಭಿಮತಫಲಸ್ಯ ಕರ್ತಾರೌ ವಾಂ ಯುವಾಂ ಪುರಂಧಿರ್ಬಹುಧೀರ್ವಧ್ರಿಮತೀ ।: ವಧ್ರಿಃ ಪುತ್ರೋತ್ಪಾದನಾಶಕ್ತಃ ಷಂಡಕಃ । ತದ್ವತೀ ಏತತ್ಸಂಜ್ಞಾ ರಾಜಪುತ್ರ್ಯಜೋಹವೀತ್ । ಪುನಃಪುನಃ ಸ್ತುತ್ವಾ ಪುತ್ರಲಾಭಾರ್ಥಮಾಹೂತವತೀ । ಯುವಾಂ ಚ ವಧ್ರಿಮತ್ಯಾಸ್ತದಾಹ್ವಾನಂ ಶ್ರುತಂ। ಅಶೃಣುತಂ । ತತ್ರ ದೃಷ್ಟಾಂತಃ । ಶಾಸುರಿವ । ಯಥಾ ಶಾಸುರಾಚಾರ್ಯಸ್ಯ ವಚನಂ ಶಿಷ್ಯೋಽವಹಿತಃ ಸನ್ನೈಕಾಗ್ರ್ಯೇಣ ಶೃಣೋತಿ ತದ್ವತ್ । ಶ್ರುತ್ವಾ ಚ ಹೇ ಅಶ್ವಿನೌ ತಸ್ಯೈ ಹಿರಣ್ಯಹಸ್ತಂ ಸುವರ್ಣಮಯಪಾಣಿಂ ಹಿತರಮಣೀಯಪಾಣಿಂ ವಾ । ಏತತ್ಸಂಜ್ಞಂ ಪುತ್ರಮದತ್ತಂ । ಪ್ರಾಯಚ್ಛತಂ ॥ ಅಜೋಹವೀತ್ । ಹ್ವಯತೇರ್ಯಙ್ಲುಗಂತಾಲ್ಲಙ್ । ಯಙೋ ವೇತಿ ತಿಪ ಈಡಾಗಮಃ । ಕರಾ । ಕರೋತೇಃ ಪಚಾದ್ಯಚ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಯಾಮನ್ । ಆತೋ ಮನಿನ್ಕ್ವನಿಬ್ವನಿಪಶ್ಚೇತಿ ಮನಿನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಶ್ರುತಂ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಶಾಸುಃ । ಶಾಸ್ತುಃ । ಶಾಸು ಅನುಶಿಷ್ಟೌ । ಶಂಸಿಶಸಿಶಾಸೀತ್ಯಾದಿನಾ । ಉ. ೨-೯೪ । ಸಂಜ್ಞಾಯಾಂ ತೃನ್ । ಇಡಭಾವಃ । ಛಾಂದಸಸ್ತಲೋಪಃ ॥

॥ ಪ್ರತಿಪದಾರ್ಥ ॥

**ಪುರುಭುಜಾ**—ಬಹುಜನರನ್ನು ಪಾಲಿಸುವ ಅಥವಾ ದೊಡ್ಡ ಹಸ್ತಗಳುಳ್ಳ । **ನಾಸತ್ಯಾ**—ಎಲೈ ಅಶ್ವಿನೀ ದೇವತೆಗಳೇ । **ಮಹೇ**—ಪೂಜ್ಯವಾದ । **ಯಾಮನ್**—ಸ್ತೋತ್ರ (ಮಾಡಲು) । **ಕರಾ**—ಅಭೀಷ್ಟದಾತೃಗಳಾದ । **ವಾಂ**—ನಿಮ್ಮಿಬ್ಬರನ್ನು । **ಪುರಂಧಿಃ**—ಜ್ಞಾನಿಯಾದ (ವಧ್ರಿಮತಿಯೆಂಬ ರಾಜಪುತ್ರಿಯು) । **ಅಜೋಹವೀತ್**—

ಪುನಃ ಪುನಃ ಆಹ್ವಾನಿಸಿದಳು (ನೀವಿಬ್ಬರೂ) | **ವಧ್ರಿಮತ್ಯಾಃ**—(ಷಂಡನನ್ನು ಪತಿಯಾಗಿ ಹೊಂದಿದ್ದ) ವಧ್ರಿಮತಿಯು | **ಆಹ್ವಾನಂ**—ಕರೆಯನ್ನು | **ಶಾಸುರಿವ**—(ಗುರುವಿನ ವಾಕ್ಯಗಳನ್ನು ಗಮನಿಸಿ ಕೇಳುವ) ಶಿಷ್ಯನಂತೆ | **ಶ್ರುತಂ**—(ನೀವು) ಕೇಳಿದಿರಿ. ಅನಂತರ | **ಅಶ್ವಿನಾ**—ಅಶ್ವಿನೀದೇವತೆಗಳೇ | **ಹಿರಣ್ಯಹಸ್ತಂ**—ಹಿರಣ್ಯಹಸ್ತನೆಂಬ ಪುತ್ರನನ್ನು | **ಅದತ್ತಂ**—ಕೊಟ್ಟಿರಿ.

|| ಭಾವಾರ್ಥ ||

ಬಹುಜನರ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ಉತ್ತಮ (ರೀತಿಯಲ್ಲಿ) ಸ್ತುತಿಸಲು ಅಭೀಷ್ಟಪ್ರದರಾದ ನಿಮ್ಮನ್ನು, ಜ್ಞಾನಿಯಾದ (ನಪುಂಸಕನನ್ನು ಪತಿಯಾಗಿ ಹೊಂದಿದ್ದ) ವಧ್ರಿಮತಿಯು ಪುನಃ ಪುನಃ (ಸ್ತುತಿಸಿ) ಕರೆಯಲು, (ಆವಳ) ಕರೆಯನ್ನು ಗುರುವಿನ ವಾಕ್ಯವನ್ನು ಶಿಷ್ಯನು ಕೇಳುವಂತೆ (ಗಮನಿಸಿ ಕೇಳಿ ಅವಳಿಗೆ) ಹಿರಣ್ಯಹಸ್ತನೆಂಬ ಪುತ್ರನನ್ನು ದಾನಮಾಡಿದಿರಿ (ಅನುಗ್ರಹಿಸಿದಿರಿ).

## English Translation.

The intelligent (Vadhrimati) idvoked you NASATYAS, who are the accomplishers (of desires) and the protectors of many, with a sacred hymn ; herr prayer was heard, like (the instruction of) a teacher, and you, Aswins, gave to the wife of an impotent husband, Hiranyahasta, her son,

|| ವಿಶೇಷವಿಷಯಗಳು ||

**ಪುರುಭುಜಾ**—**ಬಹೂನಾಂ ಪಾಲಕೌ ಪ್ರಭೂತಹಸ್ತೌ ವಾ** ಬಹಳ ಜನಗಳನ್ನು ರಕ್ಷಿಸುವವರು. ಅತಿಶಯವಾಗಿ ದಾನಮಾಡುವ ಹಸ್ತಗಳುಳ್ಳವರು ಎಂದೂ ಅರ್ಥ **ಬಹೂನಾಂ ಹವಿಷಾಮಭ್ಯವಹರ್ತಾರೌ ಪಾಲಯಿತಾರೌ ವಾ ಆರ್ತಾನಾಂ** ಅನೇಕವಾದ ಹವಿಸ್ಸುಗಳನ್ನು ಸ್ವೀಕರಿಸುವವರು ಅಥವಾ ಸಂಕಟಪಡುವವರನ್ನೂ ರಕ್ಷಿಸುವವರು ಅಶ್ವಿನೀದೇವತೆಗಳು ಎಂದು ಸ್ಕಂದಸ್ವಾಮಿಗಳು ಅರ್ಥಮಾಡಿರುವರು.

**ಯಾಮನ್**—**ಯಾಮನಿ ಯಾತಿ ಗಚ್ಛತೀತಿ ಯಾಮ ಸ್ತೋತ್ರಂ** | ಸ್ತೋತ್ರಮಾಡುವವರು ಹೇಳುವ ಸ್ತುತಿಯು. ಸ್ತುತಿಗೆ ಉದ್ದಿಷ್ಟವಾದವರನ್ನು ವಿಷಯೀಕರಿಸುವ ಕಾರಣ (ಸ್ತುತ್ಯರಿಗೂ ಸ್ತೋತೃವಿಗೂ ಜ್ಞಾನರೂಪದಿಂದ ಸಂಬಂಧವು ಉಂಟಾಗುವುದರಿಂದ ಯಾಮ ಎಂದರೆ ಸ್ತುತಿ ಎಂದು ಅರ್ಥ. ಸ್ಕಂದಸ್ವಾಮಿಗಳು **ಯಾಂತಿ ಯೋದ್ಧಾರೋ ಯಸ್ಮಿನ್ ಸ ಯಾಮಃ ಸಂಗ್ರಾಮಃ ಇಹಾಭಿಪ್ರೇತಃ** ಯುದ್ಧಮಾಡುವ ಶೂರರು ಯುದ್ಧಕ್ಕಾಗಿ ಸೇರುವ ಸನ್ನಿವೇಶವೂ ಸಂಗ್ರಾಮವೆನಿಸುವುದು ಎಂದು ಅರ್ಥಮಾಡಿರುವರು.

**ವಧ್ರಿಮತೀ**—**ವಧ್ರಿಃ ಪುತ್ರೋತ್ಪಾದನಾಶಕ್ತಃ ಷಣ್ಡಕಃ** ತದ್ವತೀ ರಾಜಪುತ್ರೀ. ಪುತ್ರನನ್ನು ಉತ್ಪಾದನೆಯಾಗಲು ತಕ್ಕ ವೀರ್ಯದ ಶಕ್ತಿಯಿಲ್ಲದ ನಪುಂಸಕನು ವಧ್ರಿ ಎನಿಸುವನು ಎಂದು ಸಾಯಣರು ವ್ಯಾಖ್ಯಾನಮಾಡಿ ಈ ವಿಧವಾದ ನಪುಂಸಕನನ್ನು ಪತಿಯನ್ನಾಗಿ ಹೊಂದಿರುವವಳು ವಧ್ರಿಮತೀ ಎಂದು ಹೆಸರನ್ನು

ಹೊಂದಿರುವವಳು ಎಂದು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು—**ವಧ್ರಿಮತೀ ನಾಮ ಯೋಧ್ರೀ ಶತ್ರುಭಿಃ ಸಂಗ್ರಾಮೇ ಛಿನ್ನಹಸ್ತಾ** । ವಧ್ರಿಮತೀ (ಎಂಬ ರಾಜಪುತ್ರಿಯು) ಎಂಬುವಳು ಯುದ್ಧಮಾಡುವ ಸ್ತ್ರೀಯು. ಯುದ್ಧದಲ್ಲಿ (ಶತ್ರುಗಳ ಸಂಗಡ ಯುದ್ಧಮಾಡಿ) ಹಸ್ತವನ್ನು ಕಳೆದುಕೊಂಡಳು ಎಂದು ವಧ್ರಿಮತೀ ಶಬ್ದಕ್ಕೆ ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳೂ—ಸಾಯಣರೂ ಕೂಡ ಈ ಋಕ್ಕಿಗೆ ಅರ್ಥವನ್ನು ಮಾಡುವುದರಲ್ಲಿ ಬೇರೆ ಬೇರೆ ಅಭಿಪ್ರಾಯಪಟ್ಟಿದ್ದರೂ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದರೆಂಬ ವಿಷಯದಲ್ಲಿ—ಇಬ್ಬರ ಅಭಿಪ್ರಾಯವೂ ಒಂದೇ ವಿಧವಾಗಿರುವುದು. ಸಾಯಣರು ವಧ್ರಿಶಬ್ದವು ನಪುಂಸಕನೆಂಬ ಅರ್ಥವುಳ್ಳದ್ದಾದ ಕಾರಣ ಅವನನ್ನು ಪತಿಯನ್ನಾಗಿ ಹೊಂದಿರುವವಳು ವಧ್ರಿಮತಿಯಾಗಿರುವಳು ಎಂದು ಅರ್ಥವನ್ನು ವಿವರಿಸಿ ನಪುಂಸಕನಾದ ಪತಿಯನ್ನು ಹೊಂದಿದ ರಾಜಪುತ್ರಿಯೊಬ್ಬಳು ಅಶ್ವಿನೀದೇವತೆಗಳನ್ನು ಬಹಳವಾಗಿ ಸ್ತೋತ್ರಮಾಡಿ ಅವರನ್ನು ಮೆಚ್ಚಿಸಿದಳು. ಅವಳ ಸ್ತುತಿಗೆ ಮೆಚ್ಚಿ ಪ್ರತ್ಯಕ್ಷರಾಗಿ ಅಶ್ವಿನೀದೇವತೆಗಳು ಅವಳ ಇಚ್ಛೆಯಂತೆ ಹಿರಣ್ಯಹಸ್ತನೆಂಬ (ಪುತ್ರನನ್ನು) ಹೆಸರುಳ್ಳ ಪುತ್ರನು ಉತ್ಪನ್ನನಾಗುವಂತೆ ವರವನ್ನು ಕೊಟ್ಟರು ಎಂದು ಇತಿಹಾಸವನ್ನು ಹೇಳಿರುವರು. ಸ್ಕಂದಸ್ವಾಮಿಗಳು—

**ವಧ್ರಿಮತೀ ನಾಮ ಯೋಧ್ರೀ ಸಂಗ್ರಾಮೇ ಶತ್ರುಭಿಶ್ಛಿನ್ನಹಸ್ತಾ ಅಶ್ವಿನೌ ತುಷ್ಟಾವ । ತಸ್ಯಾಃ ಅಶ್ವಿನೌ ಹಿರಣ್ಯಹಸ್ತಂ ದದತುಃ ಇತಿ ॥**

ವಧ್ರಿಮತೀ ಎಂಬ ಹೆಸರುಳ್ಳ ಯುದ್ಧಮಾಡುವ ವೀರಸ್ತ್ರೀಯು ಯುದ್ಧದಲ್ಲಿ ಶತ್ರುಗಳಿಂದ ಹಸ್ತವು ಕತ್ತರಿಸಿಹೋದ ಕಾರಣ ಅಶ್ವಿನೀದೇವತೆಗಳನ್ನು ಸ್ತುತಿಸಿದಳು. ಅವರು ಅವಳ ಇಷ್ಟಾನುಸಾರವಾಗಿ ಹಸ್ತವನ್ನು ಮೊದಲು ಇರುವಂತೆಯೇ ಮಾಡಿದರು. ಆ ಹಸ್ತವೂ ಹಿರಣ್ಯಮಯವಾಗಿದ್ದಿತು ಎಂದು ಹೇಳಿ,

**ಹಿರಣ್ಯಹಸ್ತಃ—ಹಿರಣ್ಮಯೌ ಹಸ್ತೌ ಯಸ್ಮಿನ್ ಸ ಹಿರಣ್ಯಹಸ್ತಃ । ಬಾಹುಃ ।** ಹಿರಣ್ಯಶಬ್ದಕ್ಕೆ ಸುವರ್ಣ ಚಿನ್ನ ಎಂದು ಅರ್ಥವು. ಆದುದರಿಂದ ಹಿರಣ್ಮಯವಾದ ಬಾಹುವುಳ್ಳವಳೆಂದು ಅರ್ಥಮಾಡಿರುವರು. ಸಾಯಣರು ಹಿರಣ್ಯಹಸ್ತಶಬ್ದದ ಅರ್ಥವನ್ನೂ ಹಿತರಮಣೀಯಪಾಣಿಂ (ಹಿತವಾದ) ಸುಖಕರವಾದ ಸುಂದರವಾದ ಹಸ್ತವುಳ್ಳ ಅಥವಾ ಹಿರಣ್ಯಹಸ್ತನೆಂದು ನಾಮವುಳ್ಳವನು ಎಂದು ಹೇಳಿ ಪುತ್ರನಿಗೆ ವಿಶೇಷಣವನ್ನಾಗಿ ವಿವರಿಸಿರುವರು.

**ಶಾಸುರಿವ**—ಅಶ್ವಿನೀದೇವತೆಗಳು ತಮ್ಮನ್ನು ಸ್ತುತಿಮಾಡುವವರ ಸ್ತುತಿಗಳನ್ನು, ಗುರುವು ಉಪದೇಶ ಮಾಡುವುದನ್ನು ಶಿಷ್ಯನು ಆದರದಿಂದ ಆಲಿಸಿ ಕೇಳುವ ಹಾಗೆ ಇವರೂ ಕೇಳಿ ಅವರವರ ಇಷ್ಟಗಳನ್ನು ನೆರವೇರಿಸುವರು ಎಂದು **ಶಾಸುರಿವ** ಎಂಬ ಪದದ ಅರ್ಥವಿವರಣೆಯು ಇರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಅಜೋಹವೀತ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಅತಿಶಯಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. ಅದಕ್ಕೆ **ಯಙೋಽಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅನೈಮಿತ್ತಕವಾಗಿ ಲೋಪ. **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. **ಯಙೋವಾ** (ಪಾ. ಸೂ. ೭-೩-೯೪) ಎಂಬುದರಿಂದ ಲಙ್ ಪ್ರಥಮಪುರುಷ ಏಕವಚನ ತಿಪ್ ಬಂದಾಗ ಅದಕ್ಕೆ

ಈಟ್ ಬರುತ್ತದೆ. **ಗುಣೋಯಙ್‌ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಚುತ್ವ ಬಂದಾಗ ಗುಣ. ಪ್ರತ್ಯಯನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಕರಾ**—ಡುಕೃಞ್ ಕರಣೇ. ಪಚಾದಿಯ ಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮಹೇ**—ಮಹ ಪೂಜಾಯಾಂ, ಧಾತು. ಹಿಂದಿನಂತೆ ಅಚ್ ಪ್ರತ್ಯಯ. ಸಪ್ತಮೀ ಏಕವಚನಾಂತರೂಪ.

**ಯಾಮನ್**—ಯಾ ಪ್ರಾಪಣೇ. ಧಾತು. **ಆತೋಮನಿನ್‌ಕ್ವನಿಬ್‌ವನಿಬಶ್ಚ** (ಪಾ. ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯ. ಯಾಮನ್ ಶಬ್ದವಾಗುತ್ತದೆ. ಸಪ್ತಮೀ ಏಕವಚನ ಪರವಾದಾಗ **ಸುಪಾಂ-ಸುಲುಕ್**—ಎಂಬುದರಿಂದ ಅದಕ್ಕೆ ಲುಕ್.

**ಪುರುಭುಜಾ**—ಭುಜ ಪಾಲನಾಭ್ಯವಹಾರಯೋಃ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಪುರು ಭುಙ್ಕ್ತಃ ಇತಿ ಪುರುಭುಜೌ. ದ್ವಿವಚನಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪುರಂಧಿಃ**— ಬಹುಧೀ ಎಂಬುದಕ್ಕೆ **ಪೃಷೋದರಾದೀನಿಯಥೋಪದಿಷ್ಟಂ** ಎಂಬುದರಿಂದ ಪುರಂಧಿಭಾವ **ಕರ್ಮಣ್ಯಧಿಕರಣೇ ಚ** (ಪಾ. ಸೂ. ೩-೩-೯೩) ಎಂಬುದರಿಂದ ಧಾ ಧಾತುವಿಗೆ ಕಿ ಪ್ರತ್ಯಯ.

**ಶ್ರುತಂ**—ಶ್ರು ಶ್ರವಣೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಸಾರ್ವಧಾತುಕ-ಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ಬಹುಲಂಛಂದಸ್ಯ-ಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶಾಸುಃ**—ಶಾಸ್ತುಃ ಎಂದು ವಾಸ್ತವವಾದ ರೂಪ. ಶಾಸು ಅನುಶಿಷ್ಟೌ ಧಾತು. **ಶಂಸಿಶಸಿಶಾಸಿ**—(ಉ. ಸೂ. ೨-೯೪) ಎಂಬುದರಿಂದ ಸಂಜ್ಞಾತೋರುವಾಗ ತೃನ್ ಪ್ರತ್ಯಯ. ಅನಿಟ್ಟಾದುದರಿಂದ ಇಡಾಗಮ ಬರುವುದಿಲ್ಲ. ಛಾಂದಸವಾಗಿ ತಕಾರಕ್ಕೆ ಲೋಪ

**ಅದತ್ತಂ**—ಡುದಾಞ್ ದಾನೇ. ಧಾತು. ಲಙ್ ಮಧ್ಯಮಪುರ.ಷದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥



॥ ಸಂಹಿತಾಪಾಠಃ ॥

ಆಸ್ನೋ ವೃಕಸ್ಯ ವರ್ತಿಕಾಮಭೀಕೇ ಯುವಂ ನರಾ ನಾಸತ್ಯಾ-
ಮುಮುಕ್ತಂ ।
ಉತೋ ಕವಿಂ ಪುರುಭುಜಾ ಯುವಂ ಹ ಕೃಪಮಾಣಮಕೃಣು-
ತಂ ವಿಚಕ್ಷೇ ॥ ೧೪ ॥

॥ ಪದಪಾಠಃ ॥

ಆಸ್ನಃ । ವೃಕಸ್ಯ । ವರ್ತಿಕಾಂ । ಅಭೀಕೇ । ಯುವಂ । ನರಾ । ನಾಸತ್ಯಾ ।
ಅಮುಮುಕ್ತಂ ।
ಉತೋ ಇತಿ । ಕವಿಂ । ಪುರುಽಭುಜಾ । ಯುವಂ । ಹ । ಕೃಪಮಾಣಂ । ಅಕೃ-
ಣುತಂ । ವಿಽಚಕ್ಷೇ ॥ ೧೪ ॥

॥ ಸಾಯಣಭಾಷ್ಯಂ ॥

ವರ್ತಿಕಾ ಚಟಕಸದೃಶಸ್ಯ ಪಕ್ಷಿಣಃ ಸ್ತ್ರೀ । ತಾಮರಣ್ಯೇ ವರ್ತಮಾನೇನ ಶುನಾ ಗ್ರಸ್ತಾಂ ಪುರಾ ಕಿಲಾಶ್ವಿನಾವಮೋಚಯತಾಂ । ತದೇತದಾಹ । ಹೇ ನರಾ ನೇತಾರೌ ನಾಸತ್ಯಾವಶ್ವಿನೌ ಯುವಂ ಯುವಾಮಭೀಕೇಽಭಿಗತೇ ವೃಕವರ್ತಿಕಯೋಃ ಸಂಗ್ರಾಮೇ ವೃಕಸ್ಯ ವಿಕರ್ತಕಸ್ಯ ಶುನ ಆಸ್ನ ಆಸ್ಯಾದ್ವರ್ತಿಕಾಂ ಚಟಕಸದೃಶೀಮಮುಮುಕ್ತಂ । ಅಮೋಚಯತಂ । ಯಾಸ್ಕಸ್ತ್ವಾಹ । ಪುನಃ ಪುನರ್ವರ್ತತೇ ಪ್ರತಿದಿವಸಮಾವರ್ತತೆ ಇತಿ ವರ್ತಿಕೋಷಾಃ । ತಾಂ ವೃಕೇಣಾವರಕೇಣ ಸರ್ವಜಗತ್ಪ್ರ-ಕಾಶೇನಾಚ್ಛಾದಯಿತ್ರಾ ಸೂರ್ಯೇಣ ಗ್ರಸ್ತಾಂ ತದೀಯಮುಖಾದಶ್ವಿನಾವಮುಂಚತಾಮಿತಿ । ಉತೋ ಅಪಿ ಚ ಪುರುಭುಜಾ ಮಹಾಬಾಹೂ ಪ್ರಭೂತಹಸ್ತೌ ವಾ ಯುವಂ ಹ ಯುವಾಂ ಖಲು ಕೃಪಮಾಣಂ ಸ್ತುವಂತಂ ಕವಿಂ ಏತತ್ಸಂಜ್ಞಮಂಧಮೃಷಿಂ ವಿಚಕ್ಷೇ ವಿಶೇಷೇಣ ದ್ರಷ್ಟುಂ ಸಮರ್ಥಮಕೃಣುತಂ । ಅಕುರುತಂ ॥ ಆಸ್ನಃ । ಪದ್ದನ್ನಿತ್ಯಾದಿನಾಸ್ಯಸ್ಯಾಸನ್ನಾದೇಶಃ । ಅಲ್ಲೋಪೋಽನ ಇತ್ಯಕಾರಲೋಪೇ ಉದಾತ್ತನಿವೃತ್ತಿಸ್ವರೇಣೋಡಿದಮಿತಿ ವಿಭಕ್ತೇರುದಾತ್ತತ್ವಂ । ಅಮುಮುಕ್ತಂ । ಮುಚೇರಂತರ್ಭಾವಿ-ತಣ್ಯರ್ಥಾಲ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಕೃಪಿಃ ಸ್ತುತಿಕರ್ಮಾ ತುದಾದಿಷು ದ್ರಷ್ಟವ್ಯಃ । ವಿಕರಣಸ್ವರೇ ಪ್ರಾಪ್ತೇ ವೃಷಾದೀನಾಂ ಚೇತ್ಯಾದ್ಯುದಾತ್ತತ್ವಂ । ವಿಚಕ್ಷೇ । ತುಮರ್ಥೇ ಸೇಸೇನಿತಿ ಸೇನ್ಪ್ರತ್ಯಯಃ । ಸ್ನೋಃ ಸಂಯೋಗಾದ್ಯೋರಿತಿ ಸಲೋಪಃ ॥

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ । **ಹೇ ನಾಸತ್ಯಾ**—ಎಲೈ ನಾಸತ್ಯರೇ । **ಯುವಂ**—ನೀವಿಬ್ಬರು । **ಅಭೀಕೇ**—ಕಾಳಗದಲ್ಲಿ । **ವೃಕಸ್ಯ**—ನಾಯಿಯ (ತೋಳನ) । **ಆಸ್ನಃ**—ಬಾಯಿಯಿಂದ । **ವರ್ತಿಕಾಂ**—ವರ್ತಿಕಾ ಎಂಬ ಪಕ್ಷಿಯನ್ನು (ಗುಬ್ಬಚ್ಚಿಯನ್ನು) । **ಅಮುಮುಕ್ತಂ**—ಬಿಡಿಸಿದಿರಿ । **ಉತೋ**—ಮತ್ತೂ । **ಪುರುಭುಜಾ**—ಮಹಾಬಾಹುಗಳಾದ । **ಯುವಂ ಹ**—ನೀವೇ । **ಕೃಪಮಾಣಂ**—ಸ್ತುತಿಸುತ್ತಿರುವ । **ಕವಿಂ**—ಕವಿಯೆಂಬ (ಅಂಧ) ಋಷಿಯನ್ನು । **ವಿಚಕ್ಷೇ**—ಚೆನ್ನಾಗಿ ನೋಡಲು ಶಕ್ತನನ್ನಾಗಿ । **ಅಕೃಣುತಂ**—ಮಾಡಿದಿರಿ.

॥ ಭಾವಾರ್ಥ ॥

ನೇತೃಗಳಾದ ನಾಸತ್ಯರೇ, ನೀವಿಬ್ಬರೂ (ವೃಕವರ್ತಿಕೆಗಳ) ಕಾಳಗದಲ್ಲಿ ವೃಕದಬಾಯಿಯಿಂದ ವರ್ತಿಕಾ ಎಂಬ ಪಕ್ಷಿಯನ್ನು ಬಿಡಿಸಿದಿರಿ. ಮತ್ತು, ಮಹಾಬಾಹುಗಳಾದ ನೀವೇ ಸ್ತುತಿಸುತ್ತಿರುವ ಕವಿಯೆಂಬ (ಅಂಧ) ಋಷಿಗೆ ಚೆನ್ನಾಗಿ ನೋಡಲು ಶಕ್ತಿಯನ್ನೂ ಅನುಗ್ರಹಿಸಿದಿರಿ.

## English Translation.

Nasatyas, leaders, you liberated the quail from the mouth of the dog that had seized her, and you, who are benefactors of many, have granted to the sage who praises you, to behold (true wisdom).

॥ ವಿಶೇಷವಿಷಯಗಳು ॥

**ಅಭೀಕೇ—ವೃಕವರ್ತಿಕಯೋಃ ಸಂಗ್ರಾಮೇ ಅಭಿಗತೇ—ಅಭೀಕ** ಶಬ್ದವು ನಲವತ್ತಾರು ಸಂಗ್ರಾಮಪದಗಳಲ್ಲಿಯೂ (ನಿ. ೩-೯) ಇಪ್ಪತ್ತಾರು ದಿಗ್ವಾಚಕಪದಗಳಲ್ಲಿಯೂ (ನಿ. ೩-೨೦) ಉಕ್ತವಾಗಿರುವುದು. ಇಲ್ಲಿ ಸಂಗ್ರಾಮವೆಂದರೆ ಯುದ್ಧವೆಂದು ಅರ್ಥ—ಒಂದು ಅರಣ್ಯದಲ್ಲಿ ಒಂದು ನಾಯಿಗೂ ಗುಬ್ಬಚ್ಚಿಗೂ ಜಗಳವಾಗಿ ಗುಬ್ಬಚ್ಚಿಯನ್ನು ನಾಯಿಯು ಕಚ್ಚಿಕೊಂಡಾಗ ಅಶ್ವಿನೀದೇವತೆಗಳು ನಾಯಿಯ ಬಾಯಿನಲ್ಲಿ ಸಿಕ್ಕಿಬಿದ್ದಿದ್ದ ಗುಬ್ಬಚ್ಚಿಯನ್ನು ರಕ್ಷಿಸಿದರು ಎಂದು ಇತಿಹಾಸವನ್ನು ಬೋಧಿಸುವ ಪದಗಳಿಂದ ಉಷಸ್ಸು ಸೂರ್ಯನಿಂದ ಬಿಡುಗಡೆಯನ್ನು ಹೊಂದಿತು ಎಂದು ಬೇರೆಯ ಅರ್ಥವೂ ಇಲ್ಲಿ ವ್ಯಕ್ತವಾಗುತ್ತದೆ. ಈ ಅರ್ಥದಲ್ಲಿ ಯಾಸ್ಕರು ಪ್ರತಿದಿನವೂ ಬರುವುದರಿಂದಲೂ ಪುನಃ ಪುನಃ ಆವೃತ್ತಿ ಯಾಗುವುದರಿಂದಲೂ ಉಷಸ್ಸು ವರ್ತಿಕಾ ಎಂಬ ಪದದ ಅರ್ಥವಾಗಿರುವುದು. ಜಗತ್ತೆಲ್ಲವನ್ನೂ ತನ್ನ ಪ್ರಕಾಶದಿಂದಲೇ ಮುಚ್ಚುತ್ತಿರುವ ಸೂರ್ಯನೂ ಈ ಉಷಸ್ಸನ್ನೂ (ಮುಚ್ಚುವ) ಆವರಿಸುವ ಕಾರಣ ವೃಕಶಬ್ದ ವಾಚ್ಯನಾಗಿರುವನು. ಉಷಸ್ಸು ಈ ಪ್ರಕಾಶದಿಂದ ವೃಕಗ್ರಸ್ತವಾಗಿರುವುದು. ಆದ್ದರಿಂದ ಉಷಸ್ಸನ್ನು ಅಶ್ವಿನೀದೇವತೆಗಳು ಸೂರ್ಯನಿಂದ ಗ್ರಸ್ತವಾದದ್ದನ್ನು ಬಿಡಿಸಿದರು—ಎಂದು ಅರ್ಥವನ್ನು ಬೋಧಿಸುವ **ಪುನಃ ಪುನಃ ವರ್ತತೇ ಪ್ರತಿ ದಿವಸಮಾವರ್ತತೇ ಇತಿ ವರ್ತಿಕಾ ಉಷಾಃ** ಎಂಬ ವಾಕ್ಯಗಳನ್ನು ಹೇಳಿರುವರು.

**ವೃಕಸ್ಯ—ವಿಕರ್ತಕಸ್ಯ ।** ಅತಿಶಯವಾಗಿ ಹಿಂಸೆಮಾಡುವ ಎಂದು ಅರ್ಥ. ವೃಕಶಬ್ದವು ಹದಿನೆಂಟು ವಜ್ರನಾಮಗಳಲ್ಲಿಯೂ (ನಿ. ೨-೧೧) ಹದಿನಾಲ್ಕು ಸ್ತೇನನಾಮಗಳಲ್ಲಿಯೂ (ನಿ. ೩-೧೯) ಪಠಿತವಾಗಿರುವುದು. ಮತ್ತೂ—

**ವೃಕಃ-ವೃಕಶ್ಚಂದ್ರಮಾ ಭವತಿ ವಿವೃತಜ್ಯೋತಿಷ್ಕೋ ವಾ ವಿಕೃತಜ್ಯೋತಿಷ್ಕೋ ವಾ ವಿಕ್ರಾಂತಜ್ಯೋತಿಷ್ಕೋ ವಾ ॥** (ನಿ. ೫-೨೧).

ಪ್ರಕಾಶಿತವಾದ ಜ್ಯೋತಿಸ್ಸುಳ್ಳವನಾದುದರಿಂದಲೂ, ಅಥವಾ ಶೀತಕರವಾದ (ತಣ್ಣಗಿರುವ) ಪ್ರಕಾಶದ ಅತಿಶಯದಿಂದ ಇತರರನ್ನು ವಿಕೃತಮಾಡುವ ಕಾರಣದಿಂದಲೂ ಅಥವಾ ಗ್ರಹನಕ್ಷತ್ರಾದಿಜ್ಯೋತಿಸ್ಸುಗಳಿಗಿಂತ ಹೆಚ್ಚಾದ ಪ್ರಕಾಶವುಳ್ಳ ಕಾರಣದಿಂದಲೂ ಚಂದ್ರನು ವೃಕಶಬ್ದವಾಚ್ಯನಾಗಿರುವನು ಎಂದು ವೃಕಶಬ್ದದ ಅರ್ಥವನ್ನು ಯಾಸ್ಕರು ವಿವರಿಸಿರುವರು—

**ಅರುಣೋ ಮಾ ಸಕೃದ್ವೃಕಃ ಪಥಾ ಯಂತಂ ದದರ್ಶ ಹಿ ।**
**ಉಜ್ಜಿಹೀತೇ ನಿಚಾಯ್ಯಾ ತಷ್ಟೇವ ಪೃಷ್ಟ್ಯಾಮಯೀ ವಿತ್ತಂ ಮೇ ಅಸ್ಯ ರೋದಸೀ ॥**
(ಋ. ಸಂ ೧-೧೦೫-೧೮)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು—

**ಅರುಣ ಆರೋಚನೋ ಮಾಸಕೃನ್ಮಾಸಾನಾಂ ಚಾರ್ಧಮಾಸಾನಾಂ ಚ ಕರ್ತಾ ಭವತಿ ಚಂದ್ರಮಾ ವೃಕಃ ಪಥಾ ಯಂತಂ ದದರ್ಶ ನಕ್ಷತ್ರಗಣಮಭಿಜಿಹೀತೇ ನಿಚಾಯ್ಯ ಯೇನ ಯೇನ ಯೋಕ್ಷ್ಯಮಾಣೋ ಭವತಿ ಚಂದ್ರಮಾಸ್ತಕ್ಷ್ಣುವನ್ನಿವ ಪೃಷ್ಠರೋಗೀ ಜಾನೀತಂ ಮೇಽಸ್ಯ ದ್ಯಾವಾಪೃಥಿವ್ಯಾವಿತಿ ॥** (ನಿ ೫-೨೧)

ಈ ಋಕ್ಕಿನಲ್ಲಿರುವ ವೃಕಶಬ್ದಕ್ಕೆ ಚಂದ್ರನೆಂದು ಅರ್ಥವನ್ನು ವಿವರಿಸಿರುವರು.

**ಆದಿತ್ಯೋಽಪಿ ವೃಕ ಉಚ್ಯತೇ । ಯದಾವೃಂಕ್ತೇ** (ನಿ. ೫-೨೧) ಆದಿತ್ಯನಿಗೂ ವೃಕ ಎಂದು ಹೆಸರು. ಏತಕ್ಕೆಂದರೆ ತಮಸ್ಸನ್ನು (ಕತ್ತಲೆಯನ್ನು) ತನ್ನ ಪ್ರಕಾಶದಿಂದ (ಅಥವಾ ಕಿರಣಗಳಿಂದ) ಆವರಿಸುವನು (ಮುಚ್ಚುವನು) ಎಂದು ಹೇಳಿ—

**ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂಚತಂ ವೃಕಸ್ಯ ।**
**ವಿ ಜಯುಷಾ ಯಯಥುಃ ಸಾನ್ವದ್ರೇರ್ಜಾತಂ ವಿಷ್ವಾಚೋ ಅಹತಂ ವಿಷೇಣ ॥**
(ಋ. ಸಂ. ೧-೧೧೭-೧೬)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟು—**ಅಹ್ವಯದುಷಾ ಅಶ್ವಿನಾವಾದಿತ್ಯೇನಾಭಿಗ್ರಸ್ತಾ ತಾಮುಶ್ವಿನೌ ಪ್ರಮುಮುಚತುರಿತ್ಯಾಖ್ಯಾನಂ ।** ಎಂದು ನಿರ್ವಚನವನ್ನು ಹೇಳಿ ವೃಕನೆಂದರೆ ಆದಿತ್ಯನೆಂದು ಹೇಳಿರುವರು.

**ಶ್ವಾಪಿ ವೃಕ ಉಚ್ಯತೇ ವಿಕರ್ತನಾತ್ ।**

(ನಿ. ೫-೨೧)

ವೃಕ ಎಂದರೆ ನಾಯಿಯೆಂದೂ ಅರ್ಥವಾಗುವುದು. ಉದಾಹರಣೆಗಾಗಿ—

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಾಯುನೇಷು ಭೂಷತಿ ।**
**ಸೇಮಂ ನಃ ಸ್ತೋಮಂ ಜುಜುಷಾಣ ಆ ಗಹೀಂದ್ರ ಪ್ರ ಚಿತ್ರಯಾ ಧಿಯಾ ॥**

(ಋ. ಸಂ ೮-೬೬-೮)

ಎಂಬ ಋಕ್ಕನ್ನು ಹೇಳಿ—**ವಿವಿಧಮಸೌ ಕೃಂತತಿ ತಸ್ಮಾದ್ವೃಕಃ** । ಆಹಾರವನ್ನು ತಿನ್ನುವಾಗ ಅದನ್ನು ತುಂಡು ತುಂಡಾಗಿ ಕತ್ತರಿಸಿ ತಿನ್ನುವುದರಿಂದ ನಾಯಿಗೆ ವೃಕ ಎಂದು ಹೆಸರು. ಈ ಋಕ್ಕಿನಲ್ಲಿ ಇರುವ ವೃಕಶಬ್ದಕ್ಕೆ ದೇವತೆಗಳ ನಾಯಿಯಾದ ಸಾರಮೇಯವು ಎಂದು ಅರ್ಥವಿವರಣೆ ಮಾಡಿರುವರು.

**ವೃದ್ಧವಾಶಿನ್ಯಪಿ ವೃಕ್ಯುಚ್ಯತೇ ।** (ನಿ. ೫-೨೧). ದೊಡ್ಡದಾದ ಹೆಣ್ಣುನರಿಗಾಗಲಿ, ತೋಳನಿಗಾಗಲಿ ವೃಕೀ ಎಂದು ಹೆಸರು ಎಂದು ಹೇಳಿ ಈ ಅರ್ಥಸಮರ್ಥನೆಗಾಗಿ—

**ಶತಂ ಮೇಷಾನ್ ವೃಕ್ಯೇ ಚಕ್ಷದಾನಮೃಜ್ರಾಶ್ವಂ ತಂ ಪಿತಾಂಧಂ ಚಕಾರ ।**
**ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ ಆಧತ್ತಂ ದಸ್ರಾ ಭಿಷಜಾವನರ್ವನ್ ॥**

(ಋ. ಸಂ. ೧-೧೧೬-೧೬)

ಎಂಬ ಋಕ್ಕನ್ನು ಉದಾಹರಿಸಿ ಇಲ್ಲಿರುವ ವೃಕ್ಯೇ ಎಂಬ ಶಬ್ದಕ್ಕೆ ಹೆಣ್ಣುನರಿಗೆ ಅಥವಾ ತೋಳನಿಗೆ ಎಂಬರ್ಥವನ್ನು ಹೇಳಿರುವರು. ಹೀಗೆ ವೃಕಶಬ್ದಕ್ಕೆ ಅನೇಕಾರ್ಥಗಳಿರುವುದನ್ನು ತೋರಿಸಿ ಆಯಾಯ ಉದಾಹರಣೆಗಳನ್ನೂ ಉದಾಹರಿಸಿರುವರು.

ಸ್ಕಂದಸ್ವಾಮಿಗಳು **ವೃಕೇಣ ಗ್ರಸ್ಯಮಾನಾಂ ಚಟಿಕಾಂ ವೃಕಸ್ಯ ಆಸ್ಯಾತ್ ಮೋಚಿತವಂತೌ** ಸಾಯಣರು ಅರ್ಥಮಾಡಿರುವಂತೆಯೇ ನಾಯಿಯ ಮುಖದಿಂದ ಗುಬ್ಬಚ್ಚಿಯನ್ನು ಅಶ್ವಿನೀದೇವತೆಗಳು ಬಿಡಿಸಿ ರಕ್ಷಿಸಿದರು ಎಂದು ಅರ್ಥವನ್ನು ವಿವರಿಸಿ

**ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ ತಾಭಿರೂ ಷು ಊತಿಭಿರಶ್ವಿನಾಗತಮ್ ॥**

(ಋ. ಸಂ. ೧-೧೧೨-೮)

ಎಂದು ಉದಹರಿಸಿರುವರು.

**ಕೃಪಮಾಣಂ—ಸ್ತುವಂತಂ.** ಸ್ತೋತ್ರಮಾಡುತ್ತಿರುವವನೆಂದು ಅರ್ಥ. ಸ್ಕಂದಸ್ವಾಮಿಗಳು—ಕೃಪಣ್ಯತಿ ಎಂದು ನಲವತ್ತನಾಲ್ಕು ಅರ್ಚತಿ ಕರ್ಮಗಳಲ್ಲಿ ಕೃಪಣ್ಯತಿ ಶಬ್ದವು (ನಿ. ೩-೧೯) ಉಕ್ತವಾಗಿರುವುದರಿಂದಲೂ, ಕೃಪಣ್ಯು ಎಂದು ಹದಿಮೂರು ಸ್ತೋತೃ ನಾಮಗಳಲ್ಲಿ (ನಿ. ೩-೧೯) ಪಾಠಮಾಡಿರುವುದರಿಂದಲೂ ಕೃಪಾಶಬ್ದವು ಸ್ತುತಿ ಎಂದು ಅರ್ಥವನ್ನು ಬೋಧಿಸುವುದು ಎಂದು ಅರ್ಥಮಾಡುವ **ಕೃಪಾಕೃಪಣ್ಯತೀತ್ಯರ್ಚತಿ ಕರ್ಮಸು**

**ಪಾಠಾತ್ ಕೃಪಣ್ಯುರಿತಿ ಸ್ತೋತ್ರೈನಾಮಸು ಚ ಪಾಠಾತ್ ಕೃಪಿಃ ಸ್ತುತ್ಯರ್ಥಃ ಇತಿ ಗಮ್ಯತೇ**-ಎಂದು ವ್ಯಾಖ್ಯಾನಮಾಡಿ ಕವಿ ಎಂಬ ಹೆಸರುಳ್ಳ ಕಣ್ಣು ಇಲ್ಲದ ಕುರುಡನಾದ ಋಷಿಗೆ ಕಣ್ಣುಗಳು ಬರುವಂತೆ ಅನುಗ್ರಹಿಸಿ ಎಲ್ಲಾ ಪದಾರ್ಥಗಳನ್ನೂ ನೋಡುವ ಶಕ್ತಿಯುಳ್ಳವನನ್ನಾಗಿ ಅಶ್ವಿನೀದೇವತೆಗಳು ಮಾಡಿರುವರು ಎಂದು ಅರ್ಥವನ್ನು ವಿವರಿಸಿ ಈ ವಿಷಯಸಮರ್ಥನೆಗಾಗಿ

**ಯುವಂ ಕಣ್ವಾಯಾಪಿರಿಪ್ತಾಯ ಚಕ್ಷುಃ ಪ್ರತ್ಯಧತ್ತಂ ಸುಷ್ಟುತಿಂ ಜುಜುಷಾಣಾ** ॥

(ಋ. ಸಂ. ೧-೧೧೮-೭)

**ಯಾಭಿಃ ಕಣ್ವಂ ಪ್ರಸಿಷಾಸಂತಮಾವತಂ ತಾಭಿರೂ ಷು ಊತಿಭಿರಶ್ವಿನಾಗತಮ್** ॥

(ಋ. ಸಂ. ೧-೧೧೨-೫)

ಎಂಬ ಈ ಋಕ್ಕುಗಳನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಆಸ್ನಃ**—ಆಸ್ಯ ಶಬ್ದ. ಪಂಚಮೀ ಏಕವಚನಪರವಾದಾಗ **ಪದ್ದನ್ನೋಮಾಸ್**-(ಪಾ ಸೂ. ೬-೧-೬೩) ಎಂಬುದರಿಂದ ಆಸನ್ ಆದೇಶ. ಭಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ ಲೋಪ. ಉದಾತ್ತಾಕಾರ ಲೋಪವಾದುದರಿಂದ **ಊಡಿದಂ ಪದಾದಿ**-(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯುವಮ್—ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್**-(೭-೨-೮೮) ಎಂಬುದರಿಂದ ವೇದದಲ್ಲಿ ಆತ್ವ ಬರುವುದಿಲ್ಲ.

**ಅಮುಮುಕ್ತಮ್**—ಮುಚ್ಲೃ ಮೋಕ್ಷಣೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ಶೇಷ. **ಚೋಃಕುಃ** ಎಂಬುದರಿಂದ ಚಕಾರಕ್ಕೆ ಕುತ್ವ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕೃಪಮಾಣಮ್**—ಕೃಪ ಧಾತುವು ಸ್ತುತ್ಯರ್ಥದಲ್ಲಿ ಪಠಿತವಾಗಿದೆ. ತುದಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ತುದಾದಿಭ್ಯಃಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಇದಕ್ಕೆ ಙಿದ್ವದ್ಭಾವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಆನೇಮುಕ್**-(ಪಾ. ಸೂ. ೭-೨-೮೨) ಎಂಬುದರಿಂದ ಅದಂತಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**-(ಪಾ ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ವಿಕರಣ ಸ್ವರವು ಪ್ರಾಪ್ತವಾದಾಗ **ವೃಷಾದೀನಾಂ ಚ**-(ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಕೃಣುತಮ್**—ಕೃವಿ ಹಿಂಸಾಕರಣಯೋಶ್ಚ ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾ ದೇಶ. **ಧಿನ್ವಿಕೃಣ್ವ್ಯೋರಚ**-(ಪಾ. ಸೂ. ೩-೧-೮೦) ಎಂಬುದರಿಂದ ಅಕಾರ ಅಂತಾದೇಶ. ಉ ವಿಕರಣ ಬರುತ್ತದೆ. ಇದಿತ್ತಾದ:ದರಿಂದ ಧಾತುವಿಗೆ ನುಮಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಚಕ್ಷೇ**– ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು ಅದಾದಿ ತುಮುನರ್ಥತೋರುವಾಗ **ತುಮರ್ಥೇ-ಸೇಸೇನಸೇ**-(ಪಾ. ಸೂ. ೩-೪-೯) ಎಂಬುದರಿಂದ ಸೇನ್ ಪ್ರತ್ಯಯ. **ಸ್ಕೋಃ ಸಂಯೋಗಾದ್ಯೋರಂತೇ ಚ**-(ಪಾ. ಸೂ. ೮-೨-೨೯) ಎಂಬುದರಿಂದ ಧಾತುವಿನ ಕಕಾರಕ್ಕೆ ಲೋಪ. ಷಕಾರಕ್ಕೆ ಕತ್ವ. ಸಕಾರಕ್ಕೆ ತನ್ನಿಮಿತ್ತವಾಗಿ ಷತ್ವ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ ೬-೧-೧೯೭) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. **ಕೃನ್ಮೇಜಂತಃ** ಎಂಬುದರಿಂದ ಏಜಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ. ॥ ೧೪ ॥

---

॥ ಸಂಹಿತಾಪಾಠಃ ॥

ಚರಿತ್ರಂ ಹಿ ವೇರಿವಾಚ್ಛೇದಿ ಪರ್ಣಮಾಜಾ ಖೇಲಸ್ಯ ಪರಿತ-
ಕ್ಮ್ಯಾಯಾಂ ।
ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ ಧನೇ ಹಿತೇ
ಸರ್ತವೇ ಪ್ರತ್ಯಧತ್ತಂ ॥ ೧೫ ॥

॥ ಪದಪಾಠಃ ॥

ಚರಿತ್ರಂ । ಹಿ । ವೇಃऽಇವ । ಅಚ್ಛೇದಿ । ಪರ್ಣಂ । ಆಜಾ । ಖೇಲಸ್ಯ । ಪರಿऽ-
ತಕ್ಮ್ಯಾಯಾಂ ।
ಸದ್ಯಃ । ಜಂಘಾಂ । ಆಯಸೀಂ । ವಿಶ್ಪಲಾಯೈ । ಧನೇ । ಹಿತೇ । ಸರ್ತವೇ ।
ಪ್ರತಿ । ಅಧತ್ತಂ ॥ ೧೫ ॥

॥ ಸಾಯಣಭಾಷ್ಯಂ ॥

ಅಗಸ್ತ್ಯಪುರೋಹಿತಃ ಖೇಲೋ ನಾಮ ರಾಜಾ । ತಸ್ಯ ಸಂಬಂಧಿನೀ ವಿಶ್ಪಲಾ ನಾಮ ಸ್ತ್ರೀ ಸಂಗ್ರಾಮೇ ಶತ್ರುಭಿಶ್ಛಿನ್ನಪಾದಾಸೀತ್ । ಪುರೋಹಿತೇನಾಗಸ್ತ್ಯೇನ ಸ್ತುತಾವಶ್ವಿನೌ ರಾತ್ರಾವಾಗತ್ಯಾ-ಯೋಮಯಂ ಪಾದಂ ಸಮಧತ್ತಾಂ । ತದೇತದಾಹ । ಆಜಾ ಆಜೌ ಸಂಗ್ರಾಮೇಽಗಸ್ತ್ಯಪುರೋಹಿತಸ್ಯ ಖೇಲಸ್ಯ ಸಂಬಂಧಿನ್ಯಾ ವಿಶ್ಪಲಾಖ್ಯಾಯಾಶ್ಚರಿತ್ರಂ ಚರಣಂ ವೇರಿವ ವೇಃ ಪಕ್ಷಿಣಃ ಪರ್ಣಂ ಪತತ್ರಮಿ-ವಾಚ್ಛೇದಿ ಹಿ । ಪುರಾ ಛಿನ್ನಮಭೂತ್ಖಲು । ಹೇ ಅಶ್ವಿನೌ ಯುವಾಮಗಸ್ತ್ಯೇನ ಸ್ತುತೌ ಸಂತೌ ಪರಿತಕ್ಮ್ಯಾಯಾಂ । ಪರಿತಕ್ಮ್ಯಾ ರಾತ್ರಿಃ ಪರಿತ ಏನಾಂ ತಕತೀತಿ ಯಾಸ್ಕಃ । ನಿ. ೧೧-೨೫ । ಏನಾ-ಮುಭಯತಃ ಸೂರ್ಯೋ ಗಚ್ಛತೀತಿ ತಸ್ಯಾರ್ಥಃ । ರಾತ್ರಾವಾಗತ್ಯ ಸದ್ಯಸ್ತದಾನೀಮೇವ ಹಿತೇ ಶತ್ರುಷು ನಿಹಿತೇ ಧನೇ ಜೇತವ್ಯೇ ವಿಷಯಭೂತೇ ಸತಿ ಸರ್ತವೇ ಸರ್ತುಂ ಗಂತುಂ ವಿಶ್ಪಲಾಯಾ ಆಯಸೀಮ-ಯೋಮಯೀಂ ಜಂಘಾಂ ಜಂಘೋಪಲಕ್ಷಿತಂ ಪಾದಂ ಪ್ರತ್ಯಧತ್ತಂ । ಸಂಧಾನಮೇಕೀಕರಣಂ ಕೃತ-ವಂತಾವಿತ್ಯರ್ಥಃ ॥ ಚರಿತ್ರಂ । ಅರ್ತಿಲೂಧೂಸೂಖನಸಹಚರ ಇತ್ರ ಇತಿ ಕರಣ ಇತ್ರಃ । ಆಜಾ । ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ಆಯಸೀಂ । ಅಯಃಶಬ್ದಾದ್ವಿಕಾರಾರ್ಥೇ ಪ್ರಾಣಿರಜತಾದಿಭ್ಯೋಽಞ್ ಪಾ. ೪-೩-೧೫೪ । ಟಿಡ್ಢಾಣಞಿತಿ ಙೀಪ್ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಆಜಾ**—ಯುದ್ಧದಲ್ಲಿ । **ಖೇಲಸ್ಯ**—ಖೇಲನೆಂಬರಾಜನ (ಸಂಬಂಧಿಯಾದ ವಿಶ್ಪಲೆ ಎಂಬುವಳ । **ಚರಿತ್ರಂ**—ಚರಣವು (ಪಾದವು) । **ವೇಃ**—ಪಕ್ಷಿಯ । **ಪರ್ಣಂ ಇವ**—ರೆಕ್ಕೆಯಂತೆ । **ಅಚ್ಛೇದಿ ಹಿ**—ಛೇದಿಸಲ್ಪಟ್ಟಿತಷ್ಟೇ । **ಪರಿತಕ್ಮ್ಯಾಯಾಂ**—ರಾತ್ರಿಯಲ್ಲಿ (ಖೇಲನಪುರೋಹಿತನಾದ ಅಗಸ್ತ್ಯನಿಂದ ಸ್ತುತರಾಗಿ ನೀವಿಬ್ಬರೂ ಬಂದು) । **ಸದ್ಯಃ**—ಕೂಡಲೇ । **ಹಿತೇ**—(ಶತ್ರುಗಳಿಂದ) ನಿಹಿತವಾದ । **ಧನೇ**—ಧನಕ್ಕಾಗಿ । **ಸರ್ತವೇ**—ಹೋಗುವುದಕ್ಕೋಸ್ಕರ । **ವಿಶ್ಪಲಾಯೈ**—ವಿಶ್ಪಲೆಗೆ । **ಆಯಸೀಂ**—ಕಬ್ಬಿಣದಿಂದ ಮಾಡಿದ । **ಜಂಘಾಂ**—ಪಾದವನ್ನು । **ಪ್ರತ್ಯಧತ್ತಂ**—ಜೋಡಿಸಿದಿರಿ (ಕೊಟ್ಟಿರಿ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ ಸಂಗ್ರಾಮದಲ್ಲಿ, ಪಕ್ಷಿಯರೆಕ್ಕೆಯಂತೆ, ಛೇದಿಸಲ್ಪಟ್ಟಿದ್ದ ಪಾದವುಳ್ಳ ಖೇಲನ (ಸಂಬಂಧಿಯಾದ) ವಿಶ್ಪಲೆಗೆ, (ಅವನ ಪುರೋಹಿತನಾದ ಅಗಸ್ತ್ಯಋಷಿಯಿಂದ ಸ್ತುತಿಸಲ್ಪಟ್ಟ ನೀವಿಬ್ಬರೂ) ರಾತ್ರಿಯಲ್ಲಿ (ಬಂದು) (ಶತ್ರುಗಳಿಂದ ನಿಹಿತವಾದ) ಧನವನ್ನು (ಜಯಿಸಲು) ಓಡಾಡುವಂತೆ, ಕಬ್ಬಿಣದ ಪಾದವನ್ನು ಜೋಡಿಸಿದಿರಿ.

## English Translation.

The foot of (Vispala, the wife of) Khela, was cut off, like the wing of a bird, in an engagement by night; immediately you gave her an iron leg, that she might walk, the hidden treasure (of the enemy being the object of the conflict).

॥ ವಿಶೇಷವಿಷಯಗಳು ॥

**ಪರಿತಕ್ಮ್ಯಾಯಾಂ—ಪರಿತಕ್ಮ್ಯಾ** ರಾತ್ರಿಃ ರಾತ್ರಿ ಎಂದು ಅರ್ಥ. **ಪರಿತ ಏನಾಂ ತಕತಿ** (ನಿ. ೧೧-೨೫) **ಏನಾಂ ಸೂರ್ಯೋ ಉಭಯತಃ ಗಚ್ಛತೀತಿ ತಸ್ಯಾರ್ಥಃ** ಸೂರ್ಯನು (ಸುತ್ತಲೂ) ಎರಡು ಕಡೆಯಲ್ಲಿಯೂ ಎಂದರೆ ರಾತ್ರಿಯ ಪ್ರಾರಂಭದಲ್ಲಿಯೂ ಮತ್ತೂ ಕೊನೆಯಲ್ಲಿಯೂ ಇರುವವನಾಗಿ ಸುತ್ತುವ ನಿಮಿತ್ತ ಪರಿತಕ್ಮಾ ಎಂದರೆ ರಾತ್ರಿಯು ಎಂದು ಅರ್ಥ. ಸ್ಕಂದಸ್ವಾಮಿಗಳು **ಪರಿತಕ್ಮ್ಯಾಯಾಂ ಸೇನಾಯಾಂ ವರ್ತಮಾನಾಯಾಂ** ಸೇನೆಯಲ್ಲಿ ಇರುವ ಎಂದು ಅರ್ಥಮಾಡಿರುತ್ತಾರೆ. ಖೇಲನೆಂಬ ರಾಜನು ಅಗಸ್ತ್ಯಋಷಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡನು. ಅವನಿಗೆ ವಿಶ್ಪಲಾ ಎಂದು ಹೆಸರುಳ್ಳ ಹೆಂಡತಿಯೂ ಇದ್ದಳು. ಶತ್ರುಗಳ ಸಂಗಡ ಯುದ್ಧವು ನಡೆಯುತ್ತಿರುವಾಗ ವಿಶ್ಪಲಾ ಎಂಬ ಸ್ತ್ರೀಯ ಪಾದವು ಕತ್ತರಿಸಿ ಹೋಯಿತು. ಆಗ ವಿಶ್ಪಲೆಗೆ ಕಾಲು ಬರಬೇಕೆಂದು ಅಗಸ್ತ್ಯಋಷಿಯು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಲಾಗಿ ಅಶ್ವಿನೀದೇವತೆಗಳು ರಾತ್ರಿಯಲ್ಲಿ ಬಂದು ಇವಳ ಕತ್ತರಿಸಿಹೋದ ಕಾಲುಗಳಿಗೆ ಬದಲಾಗಿ ಕಬ್ಬಿಣದ ಕಾಲುಗಳನ್ನು ಸೇರಿಸಿ ಆಸ್ತ್ರೀಗೆ ಪಾದಗಳು ಬರುವಂತೆ ಮಾಡಿದರು ಎಂದು ಇತಿಹಾಸವು ಇಲ್ಲಿ ಉಕ್ತವಾಗಿರುವುದು. ಈ ವಿಷಯವು-

**ಯಾಭಿರ್ವಿಶ್ಪಲಾಂ ಧನಸಾಮಥರ್ವ್ಯಂ ಸಹಸ್ರಮೀಳ್ಹ ಆಜಾವಜಿನ್ವತಂ ।**

(ಋ. ಸಂ. ೧-೧೧೨-೧೦)

**ಅಗಸ್ತ್ಯೇ ಬ್ರಹ್ಮಣಾ ವಾವೃಧಾನಾ ಸಂ ವಿಶ್ಪಲಾಂ ನಾಸತ್ಯಾ ಪರಿಣೀತಂ ।**

(ಋ. ಸಂ. ೧-೧೧೭-೧೧)

**ಅಮುಂಚತಂ ವರ್ತಿಕಾಮಂಹಸೋ ನಿಃ ಪ್ರತಿ ಜಂಘಾಂ ವಿಶ್ಪಲಾಯಾ ಅಧತ್ತಂ ।**

(ಋ. ಸಂ. ೧-೧೧೮-೮)

**ಯುವಂ ವಂದನಮೃಶ್ಯದಾದುದೂಪಥುರ್ಯುವಂ ಸದ್ಯೋ ವಿಶ್ಪಲಾಮೇತವೇ ಕೃಥಃ ।**

(ಋ. ಸಂ. ೧೦-೩೯-೮)

ಎಂಬ ಋಕ್ಕುಗಳಲ್ಲಿ ವಿವರಿಸಲ್ಪಟ್ಟಿರುವುದು.

**ಚರಿತ್ರಂ—ಚರಣಂ** । ಪಾದ ಎಂದು ಸಾಯಣರೂ **ಚರಿತಿ ಗಚ್ಛತಿ** ಯೇನ ತಚ್ಚರಿತ್ರಂ ಜಂಘಾ ಇಹಾಭಿಪ್ರೇತಾ ನಡೆಯುವುದಕ್ಕೆ ತಕ್ಕಸಾಧನವು ಎಂದು ಅರ್ಥವನ್ನು ವಿವರಿಸಿ ಜಂಘೆಯು ಗಮನಸಾಧನವಾಗಿರುವುದು ಎಂದು ವ್ಯಾಖ್ಯಾನವನ್ನು ಸ್ಕಂದಸ್ವಾಮಿಗಳೂ ವಿವರಿಸಿರುವರು.

**ಧನೇ ಹಿತೇ**—ಎಂಬಲ್ಲಿ ನಿಮಿತ್ತ ಏಷಾ ಸಪ್ತಮೀ । ಸಪ್ತಮೀವಿಭಕ್ತಿಯು ನಿಮಿತ್ತವಾಚಕವಾಗಿರುವುದು. ಆದರೆ ಇಲ್ಲಿ ಪ್ರಯೋಜನವೇ ನಿಮಿತ್ತರೂಪವಾಗಿ ವಿವಕ್ಷಿತವಾಗಿರುತ್ತದೆ. ಆದ್ದರಿಂದ **ಹಿತಂ ಧನಂ ಪ್ರಾಪ್ತುಂ ಯಃ ಅನಯೋಃ ಪ್ರಕ್ರಾಂತಃ ಸಂಗ್ರಾಮಃ ತಸ್ಯ ಗಮನಸ್ಯ ವ್ಯಾಘಾತಾರ್ಥಂ ಇತ್ಯರ್ಥಃ** ಹಿತಕರವಾದ ಧನವನ್ನು ಹೊಂದುವುದಕ್ಕಾಗಿ ಉಪಕ್ರಾಂತವಾದ ಯುದ್ಧದಲ್ಲಿ ಗಮನಕ್ಕೆ ತಡೆಯು ಉಂಟಾದ ಕಾರಣ ಅದನ್ನು ತಪ್ಪಿಸಿ ನಡೆಯುವಂತೆ ಮಾಡುವುದಕ್ಕಾಗಿ ಎಂದು ಅರ್ಥವನ್ನು ವಿವರಿಸಿರುವರು. ಸಾಯಣರು **ಶತ್ರುಷು ನಿಹಿತೇ ಧನೇ ಜೇತವ್ಯೇ ವಿಷಯಭೂತೇ ಸತಿ** ಶತ್ರುವಶದಲ್ಲಿರುವ ಧನವನ್ನು ಜಯಿಸಿ ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಮಾಡುವಯುದ್ಧದಲ್ಲಿ ಎಂದು ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಚರಿತ್ರಮ್**—ಚರ ಗತಿಭಕ್ಷಣಯೋಃ ಧಾತು. **ಅರ್ತಿಲೂಧೂಸೂಖನಸಹಚರಇತ್ರಃ** (ಪಾ. ಸೂ. ೩-೨-೧೮೪) ಎಂಬುದರಿಂದ ಇತ್ರ ಪ್ರತ್ಯಯ. ಇದು ಇಲ್ಲಿ ಕರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಅಚ್ಛೇದಿ**—ಛಿದಿರ್ ದ್ವೈಧೀಕರಣೇ. ಧಾತು ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. ತನ್ನಿ-ಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದಲ್ಲಿರುವ ತಶಬ್ದಕ್ಕೆ ಲೋಪ. ಅಂಗಕ್ಕೆ ಅಡಾಗಮ. ಹಿ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದ ವಾಗುತ್ತದೆ.

**ಆಜಾ**—ಆಜಿ+ಟಾ ಎಂದಿರುವಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಟಿಗೆ ಲೋಪ. ಉದಾತ್ತ ನಿವೃತ್ತಿಸ್ವರದಿಂದ ಅಂತೋದಾತ್ತವಾಗುತ್ತದೆ.

**ಆಯಸೀಮ್**—ಅಯಸಃ ವಿಕಾರಃ ಎಂಬರ್ಥದಲ್ಲಿ **ಪ್ರಾಣಿರಜತಾದಿಭ್ಯೋಽಞ್** (ಪಾ. ಸೂ. ೪-೩-೧೫೪) ಎಂಬುದರಿಂದ ಅಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದ ರಿಂದ ಆದಿವೃದ್ಧಿ. ಸ್ತ್ರೀತ್ವದಲ್ಲಿ **ಟಿಡ್ಢಾಣಞ್**—(ಪಾ. ಸೂ. ೪-೧-೧೫.) ಎಂಬುದರಿಂದ ಙೀಪ್. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಹಿತೇ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ದಧಾತೇರ್ಹಿಃ** (ಪಾ. ಸೂ. ೭-೪-೪೨.) ಎಂಬುದರಿಂದ ಧಾತುವಿಗೆ ಹಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತರೂಪ.

**ಸರ್ತವೇ**—ಸೃ ಗತೌ ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯ ಸಂಜ್ಞಾ ಬರುತ್ತದೆ.

**ಅಧತ್ತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೫ ॥



॥ ಸಂಹಿತಾಪಾಠಃ ॥

ಶತಂ ಮೇಷಾನ್ವೃಕ್ಯೇ ಚಕ್ಷದಾನಮೃಜ್ರಾಶ್ವಂ ತಂ ಪಿತಾಂಧಂ ಚಕಾರ ।
ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ ಆಧತ್ತಂ ದಸ್ರಾ ಭಿಷಜಾವನರ್ವನ್ ॥ ೧೬ ॥

॥ ಪದಪಾಠಃ ॥

ಶತಂ । ಮೇಷಾನ್ । ವೃಕ್ಯೇ । ಚಕ್ಷದಾನಂ । ಋಜ್ರಽಅಶ್ವಂ । ತಂ । ಪಿತಾ । ಅಂಧಂ । ಚಕಾರ ।
ತಸ್ಮೈ । ಅಕ್ಷೀ ಇತಿ । ನಾಸತ್ಯಾ । ವಿಽಚಕ್ಷೇ । ಆ । ಅಧತ್ತಂ । ದಸ್ರಾ । ಭಿಷಜೌ । ಅನರ್ವನ್ ॥ ೧೬ ॥

॥ ಸಾಯಣಭಾಷ್ಯಂ ॥

ವೃಷಾಗಿರಃ ಪುತ್ರ ಋಜ್ರಾಶ್ವೋ ನಾಮ ರಾಜರ್ಷಿಃ । ತಸ್ಯ ಸಮೀಪೇಽಶ್ವಿನೋರ್ವಾಹನಭೂತೋ ರಾಸಭೋ ವೃಕೀ ಭೂತ್ವಾವತಸ್ಥೇ । ಸ ಚ ತಸ್ಯಾ ಆಹಾರಾರ್ಥಮೇಕೋತ್ತರಶತಸಂಖ್ಯಾಕಾನ್ಪೌರಜನಾನಾಂ ಸ್ವಭೂತಾನ್ಮೇಷಾನ್ ಶಕಲೀಕೃತ್ಯ ಪ್ರದದೌ । ಋಜ್ರಾಶ್ವಃ ಶತಮೇಕಂ ಚ ಮೇಷಾನಿತಿ ಮಂತ್ರಾಂತರೇ ದರ್ಶನಾತ್ । ಏವಂ ಪೌರಾಣಾಮಹಿತೇ ಪ್ರವೃತ್ತಂ ಪಿತಾ ಶಾಪೇನ ನೇತ್ರಹೀನಮಕರೋತ್ । ತೇನ ಸ್ತೂಯಮಾನಾವಶ್ವಿನಾವಸ್ಮದ್ವಾಹನನಿಮಿತ್ತಮಸ್ಯಾಂಧ್ಯಂ ಜಾತಮಿತಿ ಜಾನಂತೌ ತಸ್ಮಾ ಅಕ್ಷಿಣೀ ಪ್ರಾಯಚ್ಛತಾಮಿತಿ । ತದೇತದಾಹ । ಅತ್ರ ತಚ್ಛಬ್ದಶ್ರುತೇರ್ಯಚ್ಛಬ್ದಾಧ್ಯಾಹಾರಃ । ಯ ಋಜ್ರಾಶ್ವಃ ಶತಂ ಶತಸಂಖ್ಯಾಕಾನ್ಮೇಷಾನ್ವೃಕ್ಯ ಆತ್ಮನಾ ಪೋಷಿತಾಯೈ ವೃಕಸ್ತ್ರಿಯೈ ಶಕಲೀಕೃತ್ಯ ಪ್ರಾದಾತ್ ತಂ ಚಕ್ಷದಾನಂ । ಕ್ಷದತಿರತ್ತಿಕರ್ಮಾತ್ರ ಶಕಲೀಕರಣಾರ್ಥಃ । ಶಕಲೀಕೃತ್ಯ ದತ್ತವಂತಮೃಜ್ರಾಶ್ವಂ ಪಿತಾ ಶಾಪೇನಾಂಧಂ ದೃಷ್ಟಿಹೀನಂ ಚಕಾರ । ಕೃತವಾನ್ । ಹೇ ನಾಸತ್ಯಾ ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ವಾ ಭಿಷಜೌ ದೇವಾನಾಂ ವೈದ್ಯಭೂತೌ । ಅಶ್ವಿನೌ ವೈ ದೇವಾನಾಂ ಭಿಷಜೌ । ಐ. ಬ್ರಾ. ೧-೧೮ । ಇತಿ ಶ್ರುತೇಃ । ದಸ್ರಾ ದರ್ಶನೀಯಾವೇತತ್ಸಂಜ್ಞೌ ವಾ ಹೇ ಅಶ್ವಿನಾವನರ್ವನ್ನನರ್ವಣೀ ದ್ರಷ್ಟವ್ಯಂ ಪ್ರತಿ ಪಿತೃಶಾಪಾದ್ಗಮನರಹಿತೇ ಅಕ್ಷೀ ಚಕ್ಷುಷೀ ವಿಚಕ್ಷೇ ವಿವಿಧಂ ದ್ರಷ್ಟುಂ ಸಮರ್ಥೇ ತಸ್ಮೈ ಋಜ್ರಾಶ್ವಾಯಾಧತ್ತಂ । ವ್ಯಧತ್ತಂ । ಅಕುರುತಂ ॥ ವೃಕ್ಯೇ । ವೃಕೋಽರಣ್ಯಶ್ವಾ । ತಸ್ಯ ಸ್ತ್ರೀ ವೃಕೀ । ಜಾತೇರಸ್ತ್ರೀವಿಷಯಾತ್ । ಪಾ. ೪-೧-೬೩ । ಇತಿ ದಿತಿ ಜೀಙ್ । ಜಸಾದಿಷು ಛಂದಸಿ ವಾವಚನಮಿತಿ ಚತುರ್ಥ್ಯೇಕವಚನಸ್ಯಾಡಭಾವೇ ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ಚಕ್ಷದಾನಂ । ಕ್ಷದೇರ್ಲಿಟಃ ಕಾನಚ್ । ಚಿತ್ಸ್ವರಃ । ಅಕ್ಷೀ । ಈ ಚ ದ್ವಿವಚನೇ । ಪಾ. ೭-೧-೭೭ । ಇತಿ ಪರತ್ವಾದಕ್ಷಶಬ್ದಸ್ಯೇಕಾರಾಂತಾದೇಶಃ । ಸ ಚೋದಾತ್ತಃ । ತಸ್ಮಿನ್ಕೃತೇ ಸಕೃದ್ಗತೌ ವಿಪ್ರತಿಷೇಧೇ । ಪರಿ. ೪೦ । ಇತಿ ಪರಿಭಾಷಯಾ ಪುನರ್ನುಮ್ನ ಭವತಿ । ವಿಚಕ್ಷೇ । ಚಕ್ಷೇಃ ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಅನರ್ವನ್ । ಋ ಗತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ದೃಶಿಗ್ರಹಣಸ್ಯ ವಿಧ್ಯಂತರೋಪಸಂಗ್ರಹಾರ್ಥತ್ವಾದ್ಭಾವೇ ವನಿಪ್ । ಅರ್ವ ಗಮನಂ ವಿಷಯಂ ಪ್ರತ್ಯೇನಯೋರ್ನಾಸ್ತೀತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸುಪಾಂ ಸುಲುಗಿತಿ ದ್ವಿವಚನಸ್ಯ ಲುಕ್ । ಛಾಂದಸೋ ನಲೋಪಾಭಾವಃ ॥

॥ ಪ್ರತಿಪದಾರ್ಥ ॥

(**ಯಃ**—ಯಾವ ಋಜ್ರಾಶ್ವನು) । **ಶತಂ**—ನೂರು । **ಮೇಷಾನ್**—ಆಡುಗಳನ್ನು । **ವೃಕ್ಯೇ**—ಹೆಣ್ಣು ತೋಳಕ್ಕೆ (ಕೊಟ್ಟನೋ) । **ತಂ**—ಆ । **ಚಕ್ಷದಾನಂ**—(ಕತ್ತರಿಸಿ) ಕೊಟ್ಟ । **ಋಜ್ರಾಶ್ವಂ**—ಋಜ್ರಾಶ್ವನನ್ನು । **ಪಿತಾ**—(ಅವನ) ತಂದೆಯು । **ಅಂಧಂ**—(ಶಾಪದಿಂದ) ಅಂಧನನ್ನಾಗಿ (ಕುರುಡನನ್ನಾಗಿ) । **ಚಕಾರ**—ಮಾಡಿದನು । **ನಾಸತ್ಯಾ**—ಸತ್ಯಸ್ವಭಾವದವರಾದ । **ಭಿಷಜೌ**—(ದೇವತೆಗಳ) ವೈದ್ಯರಾದ । **ದಸ್ರಾ**—ಎಲೈ ಸುಂದರರಾದ ಅಶ್ವಿನೀದೇವತೆಗಳೇ (ನೀವು ಋಜ್ರಾಶ್ವನಿಗೆ) । **ಅನರ್ವನ್**—(ಕುರುಡಾದುದರಿಂದ) ಗಮನರಹಿತವಾದ

(ಕಾಣಿಸದಿರುವ) । **ಅಕ್ಷೀ**—ಕಣ್ಣುಗಳೆರಡನ್ನೂ । **ಶಸ್ಮೈ**—ಆ ಋಜ್ರಾಶ್ವನಿಗೆ । **ವಿಚಕ್ಷೇ**—ದೃಷ್ಟಿಯುಕ್ತವನ್ನಾಗಿ (ಮಾಡಿ) । **ಆಧತ್ತಂ**—ಮಾಡಿದಿರಿ.

॥ ಭಾವಾರ್ಥ ॥

ಅಶ್ವಿನೀದೇವತೆಗಳ ವಾಹನವಾದ ರಾಸಭವು ಹೆಣ್ಣುತೋಳನ ರೂಪದಿಂದ ಋಜ್ರಾಶ್ವನ ಸಮೀಪದಲ್ಲಿದ್ದಿತು. ಅದರ ಆಹಾರಾರ್ಥವಾಗಿ ಗ್ರಾಮದ ಜನರ ಆಡುಗಳನ್ನು ಮೇಯಿಸುತ್ತಿದ್ದ ಆ ಋಜ್ರಾಶ್ವನು ನೂರು ಆಡುಗಳನ್ನು ಕತ್ತರಿಸಿ ಆ ತೋಳಕ್ಕೆ ಕೊಟ್ಟನು. ಅದರಿಂದ ಕೋಪಗೊಂಡ ಅವನ ತಂದೆಯು ಆ ಋಜ್ರಾಶ್ವನಿಗೆ ಶಾಪಕೊಟ್ಟು ಅವನನ್ನು ಕುರುಡನನ್ನಾಗಿ ಮಾಡಿದನು. ಸತ್ಯಸ್ವಭಾವದವರೂ, ದೇವತೆಗಳ ವೈದ್ಯರೂ, ದರ್ಶನೀಯರೂ ಆದ ನೀವು (ಕುರುಡಾದ್ದರಿಂದ ಪದಾರ್ಥಗಳಕಡೆ) ಗಮನಾಸಮರ್ಥವಾದ ಋಜ್ರಾಶ್ವನ ಕಣ್ಣುಗಳನ್ನು ದೃಷ್ಟಿಸಾಮರ್ಥ್ಯಯುಕ್ತಗಳನ್ನಾಗಿ ಮಾಡಿದಿರಿ.

## English Translation

When his father caused Rijrashwa, as he was giving to a she-wolf a hundred sheep cut up in pieces, to become blind, you, Dasras, physicians (of the gods), gave him eyes (that had been) unable to find their way, with which he might see.

॥ ವಿಶೇಷವಿಷಯಗಳು ॥

**ಶತಂ ಮೇಷಾನ್ ವೃಕ್ಯೇ—ಆತ್ಮನಾ ಪ್ರೇಷಿತಾಯೈ ವೃಕಸ್ತ್ರಿಯೈ ಶಕಲೀಕೃತ್ಯ ಪ್ರಾದಾತ್.** ವೃಷಾಗಿರ ಎಂಬ ರಾಜನ ಮಗನಾದ ಋಜ್ರಾಶ್ವನೆಂದು ಹೆಸರುಳ್ಳ ರಾಜಋಷಿಯ ಹತ್ತಿರ ಅಶ್ವಿನೀದೇವತೆಗಳ ವಾಹನವಾದ ಕತ್ತೆಯು ಹೆಣ್ಣುತೋಳದ ಆಕಾರದಿಂದ ಇತ್ತು. ಅದರ ಆಹಾರಕ್ಕಾಗಿ ಋಜ್ರಾಶ್ವನು ನೂರೊಂದು ಕುರಿಗಳನ್ನು ಕತ್ತರಿಸಿ ಉಪಯೋಗಿಸಿದನು. ಈ ಕುರಿಗಳು ಪ್ರಜೆಗಳಿಗೆ ಸೇರಿದವುಗಳಾದರೂ ಅವರ ಅನುಮತಿ ಇಲ್ಲದೆ ರಾಜಪುತ್ರನು ಹೀಗೆ ಮಾಡಿರುವ ಕಾರ್ಯವು ಪ್ರಜೆಗಳಿಗೆ ಅಹಿತವಾದ ಕಾರಣ ಈ ಋಜ್ರಾಶ್ವನ ತಂದೆಯು ಅಸಮಾಧಾನದಿಂದ ಕುರುಡನಾಗುವಂತೆ ಇವನಿಗೆ ಶಾಪವನ್ನು ಕೊಟ್ಟನು. ಋಜ್ರಾಶ್ವನಿಗೆ ತಂದೆಯ ಶಾಪದಿಂದ ಕಣ್ಣುಗಳು ಹೋದವು. ಆಗ ಅವನು ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಅವರು ತಮ್ಮ ವಾಹನದ ನಿಮಿತ್ತವಾಗಿ ಇವನು ಕುರುಡನಾದನು ಎಂದು ತಿಳಿದುಕೊಂಡು ಅವನಿಗೆ ಮೊದಲಿನಂತೆಯೇ ಕಣ್ಣುಗಳು ಬರುವಂತೆ ಮಾಡಿ ದೃಷ್ಟಿಯನ್ನು ಅನುಗ್ರಹಿಸಿದರು ಎಂದು ಇತಿಹಾಸವು ಈ ಋಕ್ಕಿನಿಂದ ಉಕ್ತವಾಗಿರುತ್ತದೆ. ಇದೇ ಇತಿಹಾಸವು—

**ಶತಂ ಮೇಷಾನ್ವೃಕ್ಯೇ ಮಾಮಹಾನಂ ತಮಃ ಪ್ರಣೀತಮಶಿವೇನ ಪಿತ್ರಾ ।**
**ಆಕ್ಷೀ ಋಜ್ರಾಶ್ವೇ ಅಶ್ವಿನಾವಧತ್ತಂ ಜ್ಯೋತಿರಂಧಾಯ ಚಕ್ರಥುರ್ವಿಚಕ್ಷೇ ॥**

(ಋ. ಸಂ. ೧-೧೧೭-೧೭)

**ಶುನಮಂಧಾಯ ಭರಮಹ್ವಯತ್ಸಾ ವೃಕೀರಶ್ವಿನಾ ವೃಷಣಾ ನರೇತಿ ।**
**ಜಾರಃ ಕನೀನ ಇವ ಚಕ್ಷದಾನ ಋಜ್ರಾಶ್ವಃ ಶತಮೇಕಂ ಚ ಮೇಷಾನ್ ।**

(ಋ. ಸಂ. ೧–೧೧೭–೧೮.)

ಎಂಬ ಋಕ್ಕುಗಳಲ್ಲಿ ವಿವೃತವಾಗಿರುತ್ತದೆ ಇಲ್ಲಿ "ಶತಂ ಮೇಷಾನ್" ನೂರು ಕುರಿಗಳು ಎಂದು ಉಕ್ತವಾಗಿರುವುದು. "ಶುನಮಂಧಾಯ" ಎಂಬ ಮಂತ್ರದಲ್ಲಿ "ಶತಮೇಕಂಚ ಮೇಷಾನ್" ಎಂದು ಉಕ್ತವಾಗಿರುತ್ತದೆ. ಸ್ಕಂದಸ್ವಾಮಿಗಳೂ ಈ ಇತಿಹಾಸವನ್ನು ತಮ್ಮ ಭಾಷ್ಯದಲ್ಲಿ ಇದೇರೀತಿಯಾಗಿ ವಿವರಿಸಿರುತ್ತಾರೆ ಈ ಋಜ್ರಾಶ್ವನ ಹೆಸರು ಋ. ಸಂ. ೧–೧೦೦–೧೬ ರಲ್ಲಿ ಇಂದ್ರನು ಇವನಿಗೆ ಅನುಗ್ರಹಮಾಡಿದನೆಂಬ ವಿಷಯವನ್ನೂ, ಋ. ಸಂ. ೧–೧೦೦–೧೭ ರಲ್ಲಿ ಈ ಋಜ್ರಾಶ್ವನು ವೃಷಾಗಿರನೆಂಬ ರಾಜನ ಪುತ್ರರಾದ ಅಂಬರೀಷ, ಸಹದೇವ, ಭಯಮಾನ, ಸುರಾಧಾಃ ಋಜ್ರಾಶ್ವ ಎಂಬುವರಲ್ಲಿ ಇವನೂ ಒಬ್ಬನೆಂದೂ ಹೇಳಿದೆ. ಇವನ ಹೆಸರು ಋಗ್ವೇದದಲ್ಲಿ ಮತ್ತೆಲ್ಲಿಯೂ ಸೂಚಿತವಾಗಿಲ್ಲ.

**ಚಕ್ಷದಾನಂ—ಕ್ಷದತಿಃ ಅತ್ತಿಕರ್ಮಾ । ಅತ್ರ ಶಕಲೀಕರಣಾರ್ಥಃ ಶಕಲೀಕೃತ್ಯ ದತ್ತವಂತಂ ।** ಕ್ಷದ ಧಾತುವು ಭಕ್ಷಣ ಎಂಬ ಅರ್ಥದಲ್ಲಿ ಇರುವುದು. ಇಲ್ಲಿ ಇದನ್ನು ಚೂರು ಚೂರು ಮಾಡು ಎಂಬ ಅರ್ಥದಲ್ಲಿ ಪ್ರಯೋಗಿಸಿದೆ. ಚೂರು ಚೂರಾಗಿ ಅಥವಾ ತುಂಡು ತುಂಡಾಗಿ ಕತ್ತರಿಸಿ ಕೊಟ್ಟನೆಂದು ಅರ್ಥವು.

**ನಾಸತ್ಯಾ—ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ವಾ** ಸತ್ಯವನ್ನು ಹೇಳುವ ಸ್ವಭಾವವುಳ್ಳವರು ಅಥವಾ ನಿಜವಾದ ಮಾರ್ಗದಲ್ಲಿ ಕರೆದುಕೊಂಡು ಹೋಗುವವರು ಎಂದು ಮೊದಲಾಗಿ ಈ ಪದದ ಅರ್ಥವನ್ನು ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿಯೇ (ಋ ಸಂ. ೧–೧೧೬–೧) ವಿವರಿಸಿ ಇದೆ.

**ಭಿಷಜಾ—ದೇವಾನಾಂ ವೈದ್ಯೌ. ಅಶ್ವಿನೌ ವೈ ದೇವಾನಾಂ ಭಿಷಜೌ** (ಐ. ಬ್ರಾ. ೧–೧೮; ತೈ. ಸಂ. ೨–೩–೧೧) **ಇತಿ ಶ್ರುತೇಃ ।** ದೇವತೆಗಳ ವೈದ್ಯರು ಅಶ್ವಿನೀದೇವತೆಗಳು ಎಂದು ಐತರೇಯ ಬ್ರಾಹ್ಮಣದಲ್ಲಿಯೂ ತೈತ್ತಿರೀಯ ಸಂಹಿತೆಯಲ್ಲಿಯೂ ಉಕ್ತವಾಗಿರುತ್ತದೆ.

**ದಸ್ರಾ—ದರ್ಶನೀಯೌ–ಏತತ್ಸಂಜ್ಞೌ ವಾ** ಅಶ್ವಿನೀದೇವತೆಗಳಿಗೆ ದಸ್ರಾ ಎಂಬ ಹೆಸರೂ ಪ್ರಸಿದ್ಧವಾಗಿರುವುದು. ಅಥವಾ ದಸ್ರಾ ಎಂಬ ಶಬ್ದಕ್ಕೆ ಸುಂದರವಾದ ಆಕಾರವುಳ್ಳವರು ಎಂಬ ಅರ್ಥವನ್ನೂ ಹೇಳಬಹುದು.

**ಅನರ್ವನ್—ಅನರ್ವಣೀ ದ್ರಷ್ಟವ್ಯಂ ಪ್ರತಿ ಪಿತೃಶಾಪಾತ್ ಗಮನರಹಿತೇ ।** ನೋಡಬೇಕಾದ ವಸ್ತುವಿನ ವಿಷಯದಲ್ಲಿ ತಂದೆಯ ಶಾಪದಿಂದ ದೃಷ್ಟಿಯು ಸಂಚಾರವಿಲ್ಲದಿರುವ ಎಂದು ಅರ್ಥ. ಸ್ಕಂದಸ್ವಾಮಿಗಳು ಈ ಶಬ್ದಕ್ಕೆ—

**ಅರ್ತೇರ್ಗತ್ಯರ್ಥಸ್ಯೇದಂ ರೂಪಂ । ಅನ್ಯಂ ಪ್ರತ್ಯಾಶ್ರಿತತಯಾ ಯೋ ನ ಗತಃ ಸೋ ಅನರ್ವಾ ।**
**ಅನರ್ವಣಿ ಅನನ್ಯಾಶ್ರಿತೇ ಸ್ವಾಯತ್ತೇ । ಪಿತ್ರಾ ಶಾಪೇನ ಅಪನೇತುಮಶಕ್ಯೇ ಇತ್ಯರ್ಥಃ—**

ಗತ್ಯರ್ಥಕವಾಗಿರುವ ಋಧಾತುವಿನಿಂದ ಅರ್ವನ್‌ಶಬ್ದವು ನಿಷ್ಪನ್ನವಾಗಿ ಸ್ವತಂತ್ರವಾದ ಗಮನವುಳ್ಳವನು ಎಂಬ ಅರ್ಥವನ್ನು ಬೋಧಿಸುವುದು. ಇತರರ ಆಶ್ರಯದಿಂದ ತನ್ನ ಸ್ವಾತಂತ್ರ್ಯವನ್ನು ಹೊಂದದೆ ಇರುವವನು ಅನರ್ವನಾಗುವನು. ಹೀಗೆ ಇರುವ ಅನ್ಯಾಶ್ರಯಣವೂ ಇಲ್ಲದೆ ಇರುವ ತನ್ನ ಅಧೀನತೆಯೂ ಕೂಡ ಅನರ್ವಪದದಿಂದ ಉಕ್ತವಾಗಿರುವುದು. ಈ ಪ್ರಕಾರವಾದ ಸ್ಥಿತಿಯು ಋಜ್ರಾಶ್ವನಿಗೆ ಅವನ ತಂದೆಯಶಾಪದಿಂದ ನಶಿಸಿಹೋಗಿ ಶಾಪವನ್ನು ತಪ್ಪಿಸಿಕೊಳ್ಳುವುದಕ್ಕೆ ಆಗದಿರುವಾಗ ಅಶ್ವಿನೀದೇವತೆಗಳು ಅವನಿಗೆ (ನೇತ್ರ) ಕಣ್ಣುಗಳನ್ನು ಕೊಟ್ಟು ರಕ್ಷಿಸಿದರು ಎಂದು ವಿವರಿಸಿ—

**ಯಾಭಿಃ ಶಚೀಭಿರ್ವೃಷಣಾ ಪರಾವೃಜಂ ಪ್ರಾಂಧಂ ಶ್ರೋಣಂ ಚಕ್ಷಸ ಏತವೇ ಕೃಥಃ ।**
**ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೮)

ಎಂಬ ಋಕ್ಕನ್ನು ಉದಹರಿಸಿ ಈ ಅರ್ಥವು ಇಲ್ಲಿ ವಿವೃತವಾಗಿರುವುದು ಎಂದು ವ್ಯಾಖ್ಯಾನಮಾಡಿರುವರು. ಯಾಸ್ಕರು **ಅನರ್ವಾ ಪ್ರತ್ಯೃತೋ ಅನ್ಯಸ್ಮಿನ್** (ನಿ. ೬-೨೩) **ಅನರ್ವಮಪ್ರತ್ಯೃತಮನ್ಯಸ್ಮಿನ್** ಇತರನನ್ನು ಆಶ್ರಯಿಸದೆ ಇರುವವನು, ತನ್ನ ಸ್ವಾತಂತ್ರ್ಯದಿಂದ ಇರುವವನು, ಎಂದು ಅರ್ಥವನ್ನು ಹೇಳಿ—

**ಅನರ್ವಾಣಂ ವೃಷಭಂ ಮಂದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ ।**
**ಗಾಥಾನ್ಯಃ ಸುರುಚೋ ಯಸ್ಯ ದೇವಾ ಆಶೃಣ್ವಂತಿ ನವಮಾನಸ್ಯ ಮರ್ತಾಃ ॥**

(ಋ. ಸಂ. ೧-೧೯೦-೧)

ಎಂಬ ಋಕ್ಕನ್ನು ಉದಹರಿಸಿರುವರು. ಈ ಋಕ್ಕಿನಲ್ಲಿ ಅನರ್ವಪದವು ಇನ್ನೊಬ್ಬನಿಗೆ ಅಧೀನತೆಯನ್ನು ಹೊಂದದೆ ಇರುವವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಸಾಯಣರು—**ಅರ್ವ ಗಮನಂ ವಿಷಯಂ ಪ್ರತಿ ಏನಯೋಃ ನಾಸ್ತೀತಿ ಬಹುವ್ರೀಹೌ ಅನರ್ವಣೀ ।** ಅರ್ವ ಎಂದರೆ ಗಮನವು. ಗಮನವು ಎಂದರೆ ನೋಡುವ ಸಾಮರ್ಥ್ಯವು ಕಣ್ಣುಗಳಿಗೆ ಇಲ್ಲದಿರುವ ಕಾರಣ ಅನರ್ವಣೀ ಎಂದು ಅರ್ಥವನ್ನು ವಿವರಿಸಿರುತ್ತಾರೆ. **ಅನರ್ವನ್ ಅಕ್ಷೀ** ಎಂದರೆ ನೋಡಲು ಸಾಮರ್ಥ್ಯವಿಲ್ಲದಿರುವ, ಅಥವಾ ದೃಷ್ಟಿಯಿಲ್ಲದ, ಅಥವಾ ಕುರುಡಾದ ಕಣ್ಣುಗಳು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ವೃಕ್ಯೈ**—ವೃಕವೆಂದರೆ ಅರಣ್ಯದ ನಾಯಿ. ತಸ್ಯ ಸ್ತ್ರೀ (ಅದರ ಹೆಂಡತಿ) ವೃಕೀ. ಜಾತಿವಾಚಕವಾದುದರಿಂದ ಸ್ತ್ರೀತ್ವದಲ್ಲಿ **ಜಾತೇರಸ್ತ್ರೀವಿಷಯಾದಯೋಪಧಾತ್** (ಪಾ. ಸೂ. ೪-೧-೬೩) ಎಂಬುದರಿಂದ ಙೀಷ್ ಬರುತ್ತದೆ. **ಯಸ್ಯೇತಿಚ** ಎಂಬುದರಿಂದ ಅಕಾರಕ್ಕೆ ಲೋಪ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ **ಆಣ್‌ನದ್ಯಾಃ** ಎಂಬುದರಿಂದ ಆಡಾಗಮ ಬಾರದಿರುವುದರಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪.) ಎಂಬುದರಿಂದ ಪರದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ.

**ಚಕ್ಷದಾನಮ್**—ಕ್ಷದ ಧಾತುವು ಭಕ್ಷಣಾರ್ಥದಲ್ಲಿ ಇದ್ದರೂ ಇಲ್ಲಿ ತುಂಡುಮಾಡುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚ್. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚಕಾರಾದೇಶ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಚಕಾರ**—ಡುಕೃಞ್ ಕರಣೇ ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅಕ್ಷೀ—ಈ ಚ ದ್ವಿವಚನೇ** (ಪಾ. ಸೂ. ೭-೧-೭೭) ಎಂಬುದರಿಂದ ಪರವಾದುದರಿಂದ ಅಕ್ಷ ಶಬ್ದಕ್ಕೆ ಈಕಾರಾಂತಾದೇಶವಾಗಿ ಬರುತ್ತದೆ. ಅದು ಉದಾತ್ತವಾಗುತ್ತದೆ. ಈಕಾರಾಂತಾದೇಶ ಬಂದ ಮೇಲೆ **ಸಕೃದ್ಗತೌ ವಿಪ್ರತಿಷೇಧೇನ ಯದ್ಬಾಧಿತಂ ತದ್ಬಾಧಿತಮೇವ** (ಪರಿ. ಭಾ. ೪೦) ಎಂಬ ಪರಿಭಾಷೆಯಿಂದ ಪುನಃ ನುಮಾಗಮ ಬರುವುದಿಲ್ಲ. (ಒಂದು ಸಾರಿ ಬಾಧಿಸಲ್ಪಟ್ಟಮೇಲೆ ಪುನಃ ಸಾಮಾನ್ಯ ಸೂತ್ರಕ್ಕೆ ಪ್ರವೃತ್ತಿ ಇಲ್ಲ.)

**ವಿಚಕ್ಷೇ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. **ಸಂಪದಾದಿಭ್ಯಃ ಕ್ವಿಪ್** (ವಾ. ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ಚತುರ್ಥೀಏಕವಚನಾಂತರೂಪ. **ಗತಿಕಾರಕೋಪಪದಾತ್ ಕೃತ್** (ಪಾ ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಸ್ರಾ—ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಅನರ್ವಣ್**—ಋ ಗತೌ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬಲ್ಲಿ ದೃಶಿಗ್ರಹಣವು ಇತರ ಕಾರ್ಯಸಂಗ್ರಹಕ್ಕೋಸ್ಕರವಿರುವುದರಿಂದ ಇದಕ್ಕೆ ಭಾವಾರ್ಥದಲ್ಲಿ ವನಿಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ ರಪರವಾಗಿ ಬರುತ್ತದೆ. ಅರ್ವನ್ ಶಬ್ದವಾಗುತ್ತದೆ. ಅರ್ವ ಗಮನಂ ವಿಷಯಂ ಪ್ರತಿ ಏನಯೋಃ ನಾಸ್ತಿ ಇತಿ. ಅನರ್ವಣ್. ಬಹುವ್ರೀಹಿಸಮಾಸ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ಪದಾಂತವಾದರೂ ಛಾಂದಸವಾಗಿ ನಲೋಪ ಬರುವುದಿಲ್ಲ. ॥ ೧೬ ॥



॥ ಸಂಹಿತಾಪಾಠಃ ॥

ಆ ವಾಂ ರಥಂ ದುಹಿತಾ ಸೂರ್ಯಸ್ಯ ಕಾರ್ಷ್ಮೇವಾತಿಷ್ಠದರ್ವತಾ
ಜಯಂತೀ ।
ವಿಶ್ವೇ ದೇವಾ ಅನ್ವಮನ್ಯಂತ ಹೃದ್ಭಿಃ ಸಮು ಶ್ರಿಯಾ ನಾಸತ್ಯಾ
ಸಚೇಥೇ ॥ ೧೭ ॥

॥ ಪದಪಾಠಃ ॥

ಆ । ವಾಂ । ರಥಂ । ದುಹಿತಾ । ಸೂರ್ಯಸ್ಯ । ಕಾರ್ಷ್ಮಾಽಇವ । ಅತಿಷ್ಠತ್ ।
ಅರ್ವತಾ । ಜಯಂತೀಂ ।
ವಿಶ್ವೇ । ದೇವಾಃ । ಅನು । ಅಮನ್ಯಂತ । ಹೃತ್ಽಭಿಃ । ಸಂ । ಊಂ ಇತಿ ।
ಶ್ರಿಯಾ । ನಾಸತ್ಯಾ । ಸಚೇಥೇ ಇತಿ ॥ ೧೭ ॥

॥ ಸಾಯಣಭಾಷ್ಯಂ ॥

ಸವಿತಾ ಸ್ವದುಹಿತರಂ ಸೂರ್ಯಾಖ್ಯಾಂ ಸೋಮಾಯ ರಾಜ್ಞೇ ಪ್ರದಾತುಮೈಚ್ಛತ್ । ತಾಂ ಸೂರ್ಯಾಂ ಸರ್ವೇ ದೇವಾ ವರಯಾಮಾಸುಃ । ತೇಽನ್ಯೋನ್ಯಮೂಚುಃ । ಆದಿತ್ಯಮವಧಿಂ ಕೃತ್ವಾಜಿಂ ಧಾವಾಮ । ಯೋಽಸ್ಮಾಕಂ ಮಧ್ಯ ಉಜ್ಜೇಷ್ಯತಿ ತಸ್ಯೇಯಂ ಭವಿಷ್ಯತೀತಿ । ತತ್ರಾಶ್ವಿನಾವುದಜಯತಾಂ । ಸಾ ಚ ಸೂರ್ಯಾ ಜಿತವತೋಸ್ತಯೋ ರಥಮಾರುರೋಹ । ಅತ್ರ ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ । ಐ. ಬ್ರಾ. ೪-೭ । ಇತ್ಯಾದಿಕಂ ಬ್ರಾಹ್ಮಣಮನುಸಂಧೇಯಂ । ಇದಂ ಚಾಖ್ಯಾನಂ ಸೂರ್ಯಾವಿವಾಹಸ್ಯ ಸ್ತಾವಕೇನ ಸತ್ಯೇನೋತ್ತಭಿತಾ ಭೂಮಿರಿತಿ ಸೂಕ್ತೇನ ವಿಸ್ಪಷ್ಟಯಿಷ್ಯತೇ । ಹೇ ಅಶ್ವಿನಾ ವಾಂ ಯುವಯೋ ರಥಂ ಕಾರ್ಷ್ಮೇವ । ಕಾರ್ಷ್ಮಶಬ್ದಃ ಕಾಷ್ಠಾವಾಚೀ । ಯಥಾ ಕಾಷ್ಠಮಾಜಿಧಾವನಸ್ಯಾವಧಿತಯಾ ನಿರ್ದಿಷ್ಟಂ ಲಕ್ಷ್ಯಮಾಶುಗಾಮೀ ಕಶ್ಚಿತ್ಸರ್ವೇಭ್ಯೋ

**ಧಾವದ್ಭ್ಯಃ ಪೂರ್ವಂ ಪ್ರಾಪ್ನೋತಿ । ಏವಮೇವ ಸರ್ವೇಭ್ಯೋ ದೇವೇಭ್ಯಃ ಪೂರ್ವಮರ್ವತಾ ಶೀಘ್ರಮವಧಿಂ ಪ್ರಾಪ್ನುವತಾ ಯುಷ್ಮದೀಯೇನಾಶ್ವೇನ ಕರಣಭೂತೇನ ಯುವಾಭ್ಯಾಂ ಜಯಂತೀ ಜೀಯಮಾನಾ ಸೂರ್ಯಸ್ಯ ಸವಿತುರ್ದುಹಿತಾತಿಷ್ಠತ್ । ಆರೂಢವತೀ । ವಿಶ್ವೇ ಸರ್ವ ಇತರೇ ದೇವಾ ಏತದಾರೋಹಣಸ್ಥಾನಂ ಹೃದ್ಭಿರ್ಹೃದಯೈರನ್ವಮನ್ಯಂತ । ಅನ್ವಜಾನನ್ । ತದಾನೀಂ ಹೇ ನಾಸತ್ಯಾವಶ್ವಿನೌ ಶ್ರಿಯಾ ಋಕ್ಸಹಸ್ರಲಾಭರೂಪಯಾ ಸಂಪದಾ ಕಾಂತ್ಯಾ ವಾ ಯುವಾಂ ಸಂ ಸಚೇಥೇ । ಸಂಗಚ್ಛೇಥೇ ॥ ಜಯಂತೀ । ವ್ಯತ್ಯಯೇನ ಕರ್ಮಣಿ ಶತೃಪ್ರತ್ಯಯಃ । ಹೃದ್ಭಿಃ । ಪದ್ದನ್ನಿತ್ಯಾದಿನಾ ಹೃದಯಶಬ್ದಸ್ಯ ಹೃದ್ಭಾವಃ । ಸಚೇಥೇ । ಷಚ ಸಮವಾಯೇ । ಸ್ವರಿತೇತ್ತ್ವಾದಾತ್ಮನೇಪದಂ ॥**

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ,) **ಕಾರ್ಷ್ಮ ಇವ**—(ಅವಧಿಯೆಂದು ನಿರ್ದಿಷ್ಟವಾದ ಸ್ಥಾನವನ್ನು ಸೇರಿ ಗೆಲ್ಲುವಂತೆ । **ಅರ್ವತಾ**—ಶೀಘ್ರಗಾಮಿಯಾದ ನಿಮ್ಮ ಅಶ್ವದಿಂದ । **ಜಯಂತೀ**—ಜಯಿಸಲ್ಪಟ್ಟ । **ಸೂರ್ಯಸ್ಯ**—ಸೂರ್ಯನ । **ದುಹಿತಾ**—ಪುತ್ರಿಯು । **ವಾಂ**—ನಿಮ್ಮಿಬ್ಬರ । **ರಥಂ**—ರಥವನ್ನು । **ಆ ಅತಿಷ್ಠತ್**—ಏರಿದಳು । **ವಿಶ್ವೇ**—ಇತರ ಎಲ್ಲಾ । **ದೇವಾಃ**—ದೇವತೆಗಳೂ । **ಹೃದ್ಭಿಃ**—ಹೃದಯದಿಂದ (ಹೃತ್ಪೂರ್ವಕವಾಗಿ) **ಅನ್ವಮನ್ಯಂತ**—ಅನುಮೋದಿಸಿದರು । (**ತದಾನೀಂ**—ಆಗ) **ಶ್ರಿಯಾ**—ಸಂಪತ್ತಿನಿಂದ (ಕಾಂತಿಯಿಂದ, ಕೀರ್ತಿಯಿಂದ) । **ಸಂ ಸಚೇಥೇ ಉ**—ಯುಕ್ತರಾದರಲ್ಲವೇ ।

॥ ಭಾವಾರ್ಥ ॥

ಎಲೈ ನಾಸತ್ಯರೇ, (ಪಂದ್ಯದಲ್ಲಿ ಅವಧಿಯೆಂದು ನಿರ್ದಿಷ್ಟವಾದ) ಸ್ಥಾನವನ್ನು ಸೇರಿ ಗೆಲ್ಲುವಂತೆ ಶೀಘ್ರಗಾಮಿಯಾದ (ನಿಮ್ಮ) ಅಶ್ವದಿಂದ ಜಿತಳಾದ ಸೂರ್ಯಪುತ್ರಿಯು ನಿಮ್ಮ ರಥವನ್ನು ಏರಿದುದನ್ನು (ಇತರ) ದೇವತೆಗಳೆಲ್ಲರೂ ಅನುಮೋದಿಸಿದರು. (ಆದರಿಂದ) ನೀವು ಕೀರ್ತಿಯುಕ್ತರಾದಿರಿ.

## English Translation.

The daughter of the sun ascended your car, (like a runner) to a goal : when you won (the race) with your swift horse, all the gods looked on with (anxious heart), and you, Nasatyas, were associated with glory.

॥ ವಿಶೇಷವಿಷಯಗಳು ॥

**ಕಾರ್ಷ್ಮೇವ—ಕಾರ್ಷ್ಮಶಬ್ದಃ ಕಾಷ್ಠವಾಚೀ । ಯಥಾ ಕಾಷ್ಠಂ ಆಜಿಧಾವನಸ್ಯ ಅವಧಿತಯಾ ನಿರ್ದಿಷ್ಟಂ ಲಕ್ಷ್ಯಂ ಆಶುಗಾಮೀ ಕಶ್ಚಿತ್ ಸರ್ವೇಭ್ಯೋ ಧಾವದ್ಭ್ಯಃ ಪೂರ್ವಂ ಪ್ರಾಪ್ನೋತಿ ಏವಮೇವ ಸರ್ವೇಭ್ಯೋ ದೇವೇಭ್ಯಃ ಪೂರ್ವಂ ।** ಕಾರ್ಷ್ಮ ಎಂಬ ಶಬ್ದಕ್ಕೆ ಕಟ್ಟಿಗೆ ಎಂದು ಅರ್ಥ. ಪರಸ್ಪರಸ್ಪರ್ಧೆಯು ಉಂಟಾದಾಗ ಅವರವರಲ್ಲಿ ತಾರತಮ್ಯವನ್ನು ತಿಳಿದು ಉತ್ತಮ ನ್ಯೂನತೆಯನ್ನು ಅಥವಾ ಯಾವುದು ಹೆಚ್ಚು ಯಾವುದು

ಕಡಿಮೆ ಎಂಬುದನ್ನು ತಿಳಿಯುವುದಕ್ಕಾಗಿ ಒಂದು ಗೊತ್ತಾದ ಸ್ಥಾನದಲ್ಲಿ ನೆಟ್ಟಿರುವ ನಿರ್ದಿಷ್ಟವಾದ ಮರವು. ವೇಗ ವಾಗಿ ಓಡಿಹೋಗಿ ಆ ಮರವನ್ನು ಮುಟ್ಟಿದವರು (ಸೇರಿದವರು) ಗೆದ್ದಂತೆ ಭಾವಿಸಲಾಗುವುದು. ಅಂತಹ ನಿರ್ದಿಷ್ಟ ಸ್ಥಾನವನ್ನು ಸೂಚಿಸುವ ಮರವೇ ಇಲ್ಲಿ ಕಾಷ್ಠಶಬ್ದದಿಂದ ಹೇಳಲ್ಪಟ್ಟಿರುವುದು. ಇದು ಈಗ ಆಟಗಳಲ್ಲಿ ರೂಢಿಯಾಗಿ ಇರುವುದು. ಆಂಗ್ಲಭಾಷೆಯಲ್ಲಿ ಇದನ್ನು (Goal) ಜಯಾಪಜಯವನ್ನು ನಿರ್ದಿಷ್ಟಮಾಡುವ ಸ್ಥಾನವಾಗಿರುವುದೆಂದು ಹೇಳುವರು. ಓಡುವುದರಲ್ಲಿ ಅಧಿಕನಾದವನನ್ನು ಗೊತ್ತುಮಾಡುವುದಕ್ಕಾಗಿ ಅನೇಕರನ್ನು ನಿರ್ದೇಶಮಾಡಿದಾಗ ಅವರಲ್ಲಿ ಒಬ್ಬನು ಮಾತ್ರ ಎಲ್ಲರಿಗಿಂತಲೂ ಮೊದಲು ನಿರ್ದಿಷ್ಟವಾದ ಲಕ್ಷ್ಯವನ್ನು ಸೇರಿ ಉಳಿದ ಎಲ್ಲರಿಗಿಂತಲೂ ಅಧಿಕನೆಂದು ಪರಿಗಣಿಸಲ್ಪಡುವನು. ಅದರಂತೆ ದೇವತೆಗಳು ತಮ್ಮೆಲ್ಲರಲ್ಲಿ ಆಧಿಕ್ಯವನ್ನು ತಿಳಿಯುವುದಕ್ಕಾಗಿ ಸೂರ್ಯಾ ಎಂಬ ಕನ್ಯೆಯು ನಿರ್ದಿಷ್ಟವಾದಾಗ ಅಶ್ವಿನೀದೇವತೆಗಳು ಆ ಲಕ್ಷ್ಯವನ್ನು ಜಯಿಸಿದರು ಇದರಿಂದ ಇವರ ಉತ್ತಮತ್ವ ಅಥವಾ ಆಧಿಕ್ಯವು ಇತರ ದೇವತೆಗಳಿಗಿಂತ ಅಧಿಕವೆಂದು ನಿಶ್ಚಿತವಾಯಿತು ಎಂದು ಇಲ್ಲಿ ವರ್ಣಿಸಿದೆ. ಸವಿತೃದೇವನು ತನ್ನ ಪುತ್ರಿಯಾದ ಸೂರ್ಯಾ ಎಂಬವಳನ್ನು ಸೋಮರಾಜನಿಗೆ ಕೊಟ್ಟು ವಿವಾಹ ಮಾಡಲು ನಿಶ್ಚಯಮಾಡಿದಾಗ ದೇವತೆಗಳು ಅವಳನ್ನು ವರಿಸುವುದಕ್ಕಾಗಿ ಬಂದರು. ಆಗ ಅವರೆಲ್ಲರೂ ಸೇರಿ ತಮ್ಮ ತಮ್ಮಲ್ಲಿ "ನಾವು ಯುದ್ಧಮಾಡೋಣ ಯುದ್ಧದಲ್ಲಿ ಜಯಶೀಲನಾದವನಿಗೆ ಈ ಸೂರ್ಯಾದೇವಿಯು ಸಿಕ್ಕತಕ್ಕದ್ದು" ಎಂದು ನಿಶ್ಚಯವನ್ನು ಮಾಡಿಕೊಂಡರು. ಆಗ ಇತರ ದೇವತೆಗಳಿಗೂ ಅಶ್ವಿನೀದೇವತೆಗಳಿಗೂ ನಡೆದ ಯುದ್ಧದಲ್ಲಿ ಅಶ್ವಿನೀದೇವತೆಗಳು ಜಯಶೀಲರಾದರು. ಇತರ ದೇವತೆಗಳಿಗಿಂತ ಅಧಿಕರೆಂದು ನಿರ್ಣಯಿಸಲ್ಪಟ್ಟ ಅಶ್ವಿನೀದೇವತೆಗಳ ರಥವನ್ನು ಸೂರ್ಯಾದೇವಿಯು ಹತ್ತಿದಳು. ಎಂಬ ಇತಿಹಾಸವು. (ಐತರೇಯ ಬ್ರಾಹ್ಮಣದಲ್ಲಿ) "**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್**" (ಐ. ಬ್ರಾ. ೪-೭) ಎಂಬದಾಗಿ ಉಕ್ತವಾಗಿರುವುದೇ ಇಲ್ಲಿ ವರ್ಣಿತವಾಗಿದೆ. ಮತ್ತು ಈ ಉಪಾಖ್ಯಾನವು ಸೂರ್ಯಾವಿವಾಹವನ್ನು ಪ್ರಶಂಸೆಮಾಡುವ **ಸತ್ಯೇನೋತ್ತಭಿತಾ ಭೂಮಿಃ** ಎಂಬ ಹತ್ತನೆಯ ಮಂಡಲದ ಎಂಭತ್ತೈದನೆಯ ಸೂಕ್ತದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವುದು ಇದಲ್ಲದೆ—ಸ್ಕಂದಸ್ವಾಮಿಗಳು **ಕ್ರಿಯತೇ ತದಿತಿ ಕಾಷ್ಠಂ ಶುಭಾಶುಭಲಕ್ಷಣಂ ಕರ್ಮ ತದ್ಯಥಾ ಕರ್ತಾರಮಾತಿಷ್ಠತಿ ಏವಮಾಸ್ಥಿತವತೀ ಆರೂಢವತೀತ್ಯರ್ಥಃ** ಒಳ್ಳೆಯದು ಅಥವಾ ಕೆಟ್ಟದ್ದು ಆಗಿರುವ ಕರ್ಮವು ಆಯಾಯ ಕರ್ಮವನ್ನು ಆಚರಿಸಿದ ಕರ್ತೃವಿಗೆ ತಾನಾಗಿ ಬಂದು ಒದಗುವಹಾಗೆ ಸೂರ್ಯಾ ಎಂಬ ಸ್ತ್ರೀಯು ಅಶ್ವಿನೀದೇವತೆಗಳ ರಥವನ್ನು ತಾನಾಗಿ ಬಂದು ಹತ್ತಿದಳು ಎಂದು ಅರ್ಥಮಾಡಿ, **ಮಾಡಲ್ಪಡುತ್ತದೆಯಾದುದರಿಂದ** ಕರ್ಮವೆನಿಸುವುದು ಎಂದು ಕಾಷ್ಠ ಶಬ್ದಕ್ಕೆ ಅರ್ಥವನ್ನು ವಿವರಿಸಿರುವರು.

**ಅರ್ವತಾ—ಶೀಘ್ರಮವಧಿಂ ಪ್ರಾಪ್ನುವತಾ ಯುಷ್ಮದೀಯೇನ ಅಶ್ವೇನ ಕರಣಭೂತೇನ** । ಜಾಗ್ರತೆಯಾಗಿ ಎಲ್ಲೆಯನ್ನು ಹೊಂದುವುದರಲ್ಲಿ ಸಾಧನವಾದ ನಿಮ್ಮ ಕುದುರೆಯಿಂದ ಎಂದು ಅರ್ಥ. **ಅರ್ವ** ಎಂಬ ಪದವು ಇಪ್ಪತ್ತಾರು ಅಶ್ವವಾಚಕ ಶಬ್ದಗಳಲ್ಲಿ (ನಿ. ೨-೨೭) ಉಕ್ತವಾಗಿರುವುದು. ಇದರಿಂದ ಅಶ್ವವೆಂದು ಅರ್ಥ. ಈರಣಾದರ್ವಾ-ಗಮನಶೀಲವಾದದ್ದು ಎಂದು ನಿರುಕ್ತದಲ್ಲಿ ಅರ್ಥವಿವರಣೆ ಇರುವುದು.

**ಶ್ರಿಯಾ—ಋಕ್ಸಹಸ್ರಲಾಭರೂಪಯಾ ಸಂಪದಾ ಕಾಂತ್ಯಾ ವಾ** । ಸೂರ್ಯಾವಿವಾಹದಲ್ಲಿ ಸಾವಿರ ಋಕ್ಕುಗಳನ್ನು ಉಚಿತವಾಗಿ ಕೊಟ್ಟಿರುವಕಾರಣ ಸಾವಿರ ಮಂತ್ರಗಳ ಲಾಭವೆಂಬ ಐಶ್ವರ್ಯದಿಂದ ಕೂಡಿರುವ

ಅಥವಾ ಸೂರ್ಯಾ ಎಂಬ ಕನ್ಯಾವಿವಾಹವಾದ ಕಾರಣ ಕಾಂತಿಯಿಂದ ಅಶ್ವಿನೀದೇವತೆಗಳು ಕೂಡಿರುವರು ಎಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ವಾಮ್**—**ಯುಷ್ಮದಸ್ಮದೋಃ ಷಷ್ಠೀ**-(ಪಾ. ಸೂ. ೮-೧-೨೦) ಎಂಬುದರಿಂದ ಅನುದಾತ್ತಸ್ವರ ವಿಶಿಷ್ಟವಾದ ವಾಮ್ ಆದೇಶ.

**ಸೂರ್ಯಸ್ಯ**—ಸುವತಿ ಕರ್ಮಣಿ ಲೋಕಂ ಪ್ರೇರಯತಿ ಇತಿ ಸೂರ್ಯಃ. ಷೂ ಪ್ರೇರಣೇ ಧಾತು. **ರಾಜಸೂಯಸೂರ್ಯ**- (ಪಾ. ಸೂ. ೩-೧-೧೧೪) ಎಂಬುದರಿಂದ ಇದಕ್ಕೆ ಕ್ಯಪ್. ಅದಕ್ಕೆ ರುಟ್ ನಿಪಾತಿತವಾಗಿದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಅತಿಷ್ಠತ್**—ಷ್ಠಾಗತಿನಿವೃತ್ತೌ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ **ಪಾಘ್ರಾಧ್ಮಾ**- (ಪಾ. ಸೂ. ೭-೩-೭೮) ಎಂಬುದರಿಂದ ತಿಷ್ಠಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಅರ್ವತಾ**—ಋ ಗತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ**-(ಪಾ. ಸೂ. ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. ತೃತೀಯಾ ಏಕವಚನಪರವಾದಾಗ **ಅರ್ವಣಸ್ತ್ರಸಾವನಞಃ** (ಪಾ. ಸೂ. ೬-೪-೧೨೭) ಎಂಬುದರಿಂದ ತೃ ಅಂತಾದೇಶವಾಗಿ ಬರುತ್ತದೆ.

**ಜಯಂತೀ**—ಜಿ ಜಯೇ ಧಾತು. ಅನುದಾತ್ತೇತ್. **ವೃತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ **ಲಡ**ರ್ಥದಲ್ಲಿ ಶತೃಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ಉಗಿದಚಾಂ ಸರ್ವ**-(ಪಾ. ಸೂ. ೭-೧-೭೦) ಎಂಬುದರಿಂದ ನುಮಾಗಮ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಮನ್ಯಂತ**—ಮನು ಅವಬೋಧನೇ ಧಾತು. ದಿವಾದಿ. ಲಙ್ ಪ್ರಥಮಪುರುಷ ಬಹುವಚನರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಹೃದ್ಭಿಃ**—ಹೃದಯ ಶಬ್ದ. **ಪದ್ದನ್ನೋಮಾಸ್**-(ಪಾ. ಸೂ.೬-೧-೬೩) ಎಂಬುದರಿಂದ ಅದಕ್ಕೆ ತೃತೀಯಾ ಬಹುವಚನಪರವಾದಾಗ ಹೃದಾದೇಶ. **ಊಡಿದಂ ಪದಾದಿ**- (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶ್ರಿಯಾ**—ತೃತೀಯಾ ಏಕವಚನಪರವಾದಾಗ **ಅಚಿಶ್ನುಧಾತುಭ್ರುವಾಮ್**-(ಪಾ. ಸೂ. ೬-೪-೭೭) ಎಂಬುದರಿಂದ ಇಯಙಾದೇಶ. **ಸಾವೇಕಾಚಸ್ತೃತೀಯಾದಿಃ**-(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನಾಸತ್ಯಾ—ಸುಪಾಂ ಸುಲುಕ್** (ಪಾ. ಸೂ. ೩-೧-೩೯) ಎಂಬುದರಿಂದ ಔ ವಿಭಕ್ತಿಗೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಚೇಥೇ—**ಷಚ ಸಮವಾಯೇ ಧಾತು. ಸ್ವರಿತೇತ್. **ಸ್ವರಿತ ಞಿತಃ ಕರ್ತ್ರಭಿಪ್ರಾಯೇ** (ಪಾ. ಸೂ. ೧-೩-೭೨) ಎಂಬುದರಿಂದ ಫಲವು ಕರ್ತೃಗಾಮಿಯಾಗುವಾಗ ಆತ್ಮನೇಪದಿಯಾಗುತ್ತದೆ. ಲಟ್ ಪ್ರಥಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ಟಿತ ಆತ್ಮನೇ ಪದಾನಾಂ**- (ಪಾ. ಸೂ. ೩-೪-೭೯) ಎಂಬುದರಿಂದ ಟಿಗೆ ಏತ್ವ. ಶಪ್ ವಿಕರಣ. **ಆತೋಽಜಿತಃ**(ಪಾ ಸೂ.೭-೨-೮೧) ಎಂಬುದರಿಂದ ಆಕಾರಕ್ಕೆ ಇಯಾದೇಶ. **ಲೋಪೋವ್ಯೋರ್ವಲಿ** (ಪಾ. ಸೂ. ೬-೧-೬೬) ಎಂಬುದರಿಂದ ಯಕಾರಕ್ಕೆ ಲೋಪ. ಗುಣ. ಸಚೇಥೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೭ ॥



॥ ಸಂಹಿತಾಪಾಠಃ ॥

ಯದಯಾತಂ ದಿವೋದಾಸಾಯ ವರ್ತಿರ್ಭರದ್ವಾಜಾಯಾಶ್ವಿನಾ
ಹಯಂತಾ ।
ರೇವದುವಾಹ ಸಚನೋ ರಥೋ ವಾಂ ವೃಷಭಶ್ಚ ಶಿಂಶುಮಾ-
ರಶ್ಚ ಯುಕ್ತಾ ॥ ೧೮ ॥

॥ ಪದಪಾಠಃ ॥

ಯತ್ । ಅಯಾತಂ । ದಿವಃಽದಾಸಾಯ । ವರ್ತಿಃ । ಭರತ್ಽವಾಜಾಯ ।
ಅಶ್ವಿನಾ । ಹಯಂತಾ ।
ರೇವತ್ । ಉವಾಹ । ಸಚನಃ । ರಥಃ । ವಾಂ । ವೃಷಭಃ । ಚ । ಶಿಂಶುಮಾರಃ ।
ಚ । ಯುಕ್ತಾ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಹಯಂತಾ ಸ್ತುತಿಭಿರಾಹೂಯಮಾನೌ ಯುವಾಂ ಭರದ್ವಾಜಾಯ ಸಂಭ್ರಿಯಮಾಣಹವಿರ್ಲಕ್ಷಣಾನ್ನಾಯ ಯಜಮಾನಾಯ ದಿವೋದಾಸಾಯೈತನ್ನಾಮ್ನೇ ರಾಜರ್ಷಯೇಽಭೀಷ್ಟಂ ಫಲಂ ದಾತುಂ ವರ್ತಿಸ್ತದೀಯಂ ಗೃಹಂ ಯದ್ಯದಾಯಾತಂ ಅಗಚ್ಛತಂ ತದಾನೀಂ ರೇವದ್ಧನಯುಕ್ತಮನ್ನಂ ವಾಂ ಯುವಯೋಃ ಸಚನಃ ಸೇವನೋ ರಥ ಉವಾಹ । ತಸ್ಮೈ ದಿವೋದಾಸಾಯ ಪ್ರಾಪಯಾಮಾಸ । ಅಪಿ ಚ ತಸ್ಮಿನ್ರಥೇ ವೃಷಭೋಽನಡ್ವಾನ್ ಶಿಂಶುಮಾರೋ ಗ್ರಾಹಶ್ಚ ಪರಸ್ಪರವಿರುದ್ಧಾವಪಿ ಸ್ವಸಾಮರ್ಥ್ಯಪ್ರಕಟನಾಯ ಯುಕ್ತಾ । ವಾಹನತಯಾ ಸಂಯುಕ್ತಾವಾಸ್ತಾಂ ॥ ದಿವೋದಾಸಾಯ । ದಿವಶ್ಚ ದಾಸೇ ಷಷ್ಠ್ಯಾ ಅಲುಗ್ವಕ್ತವ್ಯಃ । ಕಾ. ೬-೩-೨೧-೫ । ಇತ್ಯಲುಕ್ । ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಮಿತಿ ಪೂರ್ವಪದಾದ್ಯುದಾತ್ತತ್ವಂ । ಭರದ್ವಾಜಾಯ । ಭೃಞ್ ಭರಣೇ । ಅಸ್ಮಾದ್ವ್ಯತ್ಯಯೇನ ಕರ್ಮಣಿಶತೃಪ್ರತ್ಯಯಃ । ಶತುಶ್ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಲಸಾರ್ವಧಾತುಕಾನುದಾತ್ತತ್ವಾಭಾವಾತ್ಪ್ರತ್ಯಯಾದ್ಯುದಾತ್ತತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಹಯಂತಾ । ಹ್ವೇಞಃ ಕರ್ಮಣಿ ಲಟೋ ವ್ಯತ್ಯಯೇನ ಶತೃ । ಬಹುಲಂ ಛಂದಸೀತಿ ಸಂಪ್ರಸಾರಣಂ । ಶಪಿ ಗುಣೇ ಛಾಂದಸೋಽಯಾದೇಶಃ । ರೇವತ್ । ರಯಿಶಬ್ದಾನ್ಮತುಪ್ । ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ । ಛಂದಸೀರ ಇತಿ ಮತುಪೋ ವತ್ವಂ । ರಯಿಶಬ್ದಾಚ್ಚ । ಕಾ. ೬-೧-೧೭೬-೧ । ಇತಿ ಮತುಪ ಉದಾತ್ತತ್ವಂ । ಸಚನಃ । ಷಚ ಸೇವನೇ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ । ಯುಕ್ತಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಹಯಂತಾ**—ಸ್ತುತಿಗಳಿಂದ ಆಹೂತರಾದ (ಕರೆಯಲ್ಪಟ್ಟ) ನೀವಿಬ್ಬರು । **ಭರದ್ವಾಜಾಯ**—ಹವಿರಾದಿಗಳನ್ನು ಒದಗಿಸಿದ । **ದಿವೋದಾಸಾಯ**—ದಿವೋದಾಸನೆಂಬ ರಾಜರ್ಷಿಗೆ (ಅಭೀಷ್ಟ ಫಲವನ್ನು ಕೊಡಲು) । **ವರ್ತಿಃ**—(ಅವನ) ಮನೆಗೆ । **ಯತ್**—ಯಾವಾಗ । **ಅಯಾತಂ**—ಹೋದಿರೋ (ಆಗ) । **ರೇವತ್**—ಧನಯುಕ್ತವಾದ (ಅನ್ನವನ್ನು) । **ವಾಂ**—ನಿಮ್ಮಿಬ್ಬರಿಗೆ । **ಸಚನಃ**—ಸಹಾಯಕವಾದ । **ರಥಃ**—ರಥವು । **ಉವಾಹ**—ಒಯ್ದಿತು (ಮತ್ತು ಆ ರಥಕ್ಕೆ) । **ವೃಷಭಃ**—ವೃಷಭವೂ (ಎತ್ತೂ) **ಶಿಂಶುಮಾರಃ ಚ**—ಮೊಸಳೆಯೂ ಕೂಡ । **ಯುಕ್ತಾ**—(ನಿಮ್ಮ ಸಾಮರ್ಥ್ಯದಿಂದ ಒಟ್ಟಿಗೆ) ಹೂಡಲ್ಪಟ್ಟಿದ್ದುವು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, (ಸ್ತುತಿಗಳಿಂದ) ಆಹೂತರಾದ ನೀವಿಬ್ಬರು, ಹವಿರಾದಿಗಳನ್ನು ಒದಗಿಸಿದ ದಿವೋದಾಸನೆಂಬ ರಾಜರ್ಷಿಗೆ (ಅಭೀಷ್ಟ ಫಲವನ್ನು ಕೊಡಲು ಅವನ) ಮನೆಗೆ ಹೋದಾಗ (ನಿಮಗೆ) ಸಹಾಯಕವಾದ (ನಿಮ್ಮ) ರಥದಲ್ಲಿ ಧನಯುಕ್ತವಾದ (ಅನ್ನವನ್ನು) ಒಯ್ದಿರಿ. (ಆಗ) ನಿಮ್ಮ ರಥಕ್ಕೆ ವೃಷಭ ಮತ್ತು ಮೊಸಳೆಗಳು (ನಿಮ್ಮ ಸಾಮರ್ಥ್ಯದಿಂದ ಒಟ್ಟಿಗೆ) ಹೂಡಲ್ಪಟ್ಟಿದ್ದುವು.

## English Translation.

When, Ashwins, being invited, you went to his dwelling, (to give due rewards) to Divodasa, offering oblations, then, your helping chariot conveyed (food and) treasure, and the bull and the porpoise were yoked together.

॥ ವಿಶೇಷವಿಷಯಗಳು ॥

**ಭರದ್ವಾಜಾಯ ದಿವೋದಾಸಾಯ-ಸಂಭ್ರಿಯಮಾಣಹವಿರ್ಲಕ್ಷಣಾಯಾನ್ನಾಯ ಯಜಮಾನಾಯಾ ಏತತ್ಸಂಜ್ಞಾಯ ರಾಜರ್ಷಯೇ** ದಿವೋದಾಸನೆಂಬ ರಾಜರ್ಷಿಯು ಯಜ್ಞವನ್ನು ಆಚರಿಸುವುದಕ್ಕಾಗಿ ಹವಿರ್ಭಾಗಗಳಿಗೆ ಉಪಯುಕ್ತವಾಗುವ ಹಾಗೆ ಯಜ್ಞಕ್ಕೆ ಅರ್ಹವಾದ ಪದಾರ್ಥಗಳನ್ನು ಶೇಖರಿಸಿ ಅಶ್ವಿನೀದೇವತೆಗಳನ್ನು ಆಹ್ವಾನ ಮಾಡಿದನು. ಅಶ್ವಿನೀದೇವತೆಗಳು ಇವನ ಇಷ್ಟವನ್ನು ನೆರವೇರಿಸುವುದಕ್ಕಾಗಿ ಈ ರಾಜನ ಮನೆಗೆ ಬಂದರು. ಅವರು ತಮ್ಮ ರಥಕ್ಕೆ ವೃಷಭವನ್ನೂ, ಜಲಚರಪ್ರಾಣಿಯಾದ ಮೊಸಳೆಯನ್ನು ತಮ್ಮ ರಥಕ್ಕೆ ಹೂಡಿ ಬಂದಾಗ ಪರಸ್ಪರ ವಿರುದ್ಧಸ್ವಭಾವದಿಂದ ಇರುವ ಈ ಎರಡು ಪ್ರಾಣಿಗಳೂ ಜಗಳವಾಡದೆ ಏಕಾಭಿಪ್ರಾಯದಿಂದ ಕೆಲಸ ಮಾಡಿರುವುದು. ಈ ಅಶ್ವಿನೀದೇವತೆಗಳ ಮಹಿಮೆಯನ್ನು ವ್ಯಕ್ತಗೊಳಿಸಿರುತ್ತದೆ ಎಂದು ಸಾಯಣರು ವ್ಯಾಖ್ಯಾನ ಮಾಡಿರುವರು.

**ವರ್ತಿಃ—ವರ್ತಿ** ಶಬ್ದಕ್ಕೆ ಸಾಯಣರು ಗೃಹ (ಮನೆ) ಎಂದೂ, ಸ್ಕಂದಸ್ವಾಮಿಗಳು **ವರ್ತನ್ಯಾ ಮಾರ್ಗೇಣ** ದಾರಿಯಿಂದ ಎಂದೂ ಅರ್ಥಮಾಡಿರುವರು. ಇದರಂತೆಯೇ—

ದಿವೋದಾಸಾಯ ಎಂಬ ಪದಕ್ಕೆ **ದಿವೋದಾಸಾರ್ಥಂ ಶಂಬರವಧೇ ದಿವೋದಾಸಸ್ಯ ಸಾಹಾಯ್ಯಂ ಕರ್ತುಂ** ಶಂಬರ ಎಂಬ ಅಸುರನನ್ನು ನಿಗ್ರಹಮಾಡುವಾಗ ದಿವೋದಾಸರಾಜನಿಗೆ ಸಹಾಯವನ್ನು ಮಾಡುವುದಕ್ಕಾಗಿ ಎಂದು ಅರ್ಥವನ್ನು ಮಾಡಿ **ತದೇತತ್ ಕುತ್ಸೇನಾಪ್ಯುಕ್ತಂ**—ಈ ಅಂಶವನ್ನು ಕುತ್ಸಋಷಿಯೂ ಹೇಳಿರುವನು ಎಂದು ಹೇಳಿ,

**ಯಾಭಿರ್ಮಹಾಮತಿಥಿಗ್ವಂ ಕಶೋಜುವಂ ದಿವೋದಾಸಂ ಶಂಬರಹತ್ಯ ಆವತಮ್ ।**

(ಋ. ಸಂ. ೧-೧೧೨-೧೪)

ಎಂಬ ಋಕ್ಕನ್ನು ಉದಹರಿಸಿರುವರು. ಇದರಂತೆಯೇ **ಭರದ್ವಾಜಾಯ ಧನಕಾಮಾಯ ಸ್ತುವತೇ ಧನಂ ದಾತುಂ** ದ್ರವ್ಯವನ್ನು ಅಪೇಕ್ಷಿಸಿ ಅಶ್ವಿನೀದೇವತೆಗಳನ್ನು ಸ್ತುತಿಮಾಡುವ ರಾಜನಿಗೆ ಧನವನ್ನು ಕೊಡುವುದಕ್ಕಾಗಿ ಎಂದು ಅರ್ಥವನ್ನು ವಿವರಿಸಿರುವರು.

**ದಿವೋದಾಸಾಯ**—ದಿವೋದಾಸ ಅಥವಾ ದಿವೋದಾಸ ಅತಿಥಿಗ್ವ ಎಂಬ ಹೆಸರಿನ ರಾಜನು ವೇದಗಳ ಕಾಲದಲ್ಲಿ ಬಹಳ ಪ್ರಸಿದ್ಧಿಯಾಗಿದ್ದ ಒಬ್ಬ ರಾಜನು. ಇವನು ವಧ್ರ್ಯಶ್ವ ಎಂಬುವನ ಮಗನು ಮತ್ತು ಸುದಾಸನೆಂಬು

ವನಿಗೆ ತಂದೆಯು. ಈ ಸುದಾಸನು ಭರತಜನಾಂಗದಲ್ಲಿ ತ್ರಿತ್ಸು ಎಂಬ ವಂಶದ ರಾಜರಲ್ಲಿ ಪ್ರಸಿದ್ಧನಾದವನು. ಆದುದರಿಂದ ದಿವೋದಾಸನೂ ಸಹ ಭರತನೆಂದೂ (ಋ ಸಂ. ೬-೧೬-೪, ೫, ೧೯) ಸುದಾಸನಂತೆ ಇವನೂ ಸಹ ತುರ್ವಶರಿಗೂ ಯದುಗಳಿಗೂ ಪ್ರತಿಕಕ್ಷಿಯಾದ ಶತ್ರುರಾಜನಾಗಿದ್ದನೆಂದೂ ಋ. ಸಂ. ೭-೧೯-೮ ಮೊದಲಾದ ಸ್ಥಳಗಳಲ್ಲಿ ಹೇಳಿದೆ. ಇವನ ಮುಖ್ಯ ಶತ್ರುವೆಂದರೆ ಶಂಬರನೆಂಬ ಅಸುರನು, ಅಥವಾ ದಾಸನು. ಈ ಶಂಬರನು ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಿದ್ದ ಜನರ ಮುಖ್ಯಸ್ಥನೆಂದೂ (ಋ. ಸಂ. ೧-೧೩೦-೭ ; ೨-೧೨-೧೧ ; ೬-೨೬-೫ ; ೭-೧೮-೨೦.) ಇವನನ್ನು ದಿವೋದಾಸನು ಅನೇಕಾವರ್ತಿ ಸೋಲಿಸಿದನೆಂದೂ ಋ. ಸಂ. ೧-೧೧೨-೧೪ ; ೧-೧೧೬-೧೮ ; ೧-೧೧೯-೪ : ೧-೧೩೦-೭ ರಿಂದ ೧೦ ; ೨-೧೯-೬ ; ೪-೨೬-೩ ; ೪-೩೦-೨೦ ; ೬-೨೬-೩ ; ೬-೨೬-೫ ; ೬-೪೩-೧ ; ೬-೪೭-೨೧ ; ೬-೪೭-೨೨ ; ೯-೬೧-೨ ಎಂಬ ಋಕ್ಕುಗಳಲ್ಲಿ ವರ್ಣಿತವಾಗಿದೆ. ಇವನು ಅಗ್ನಿಯನ್ನು ವಿಶೇಷವಾಗಿ ಆರಾಧಿಸುತ್ತಿದ್ದುದರಿಂದ ಅಗ್ನಿಯನ್ನು ಇವನ ಹೆಸರಿನಿಂದ ಋ. ಸಂ. ೮-೧೩-೨ ಎಂಬ ಋಕ್ಕಿನಲ್ಲಿ ಕರೆದಿರುವುದು ಕಂಡುಬರುವುದು. ಋ. ಸಂ. ೧-೧೧೨-೧೩, ೧೪ ; ೧-೧೧೬-೧೮ ; ೬-೧೬-೫ ; ೬-೩೧-೪ ; ಮೊದಲಾದ ಸ್ಥಳಗಳಲ್ಲಿ ಇವನ ಹೆಸರು ಭರದ್ವಾಜಋಷಿಯ ಅಥವಾ ಆ ಋಷಿಯ ವಂಶಸ್ಥರ ಹೆಸರಿನ ಜತೆಯಲ್ಲಿ ಪಠಿತವಾಗಿರುವುದು ಕಂಡುಬರುವುದು. ಋ. ಸಂ. ೬-೬೧-೧ ಎಂಬ ಋಕ್ಕಿನಲ್ಲಿಯೂ ಅದರ ಮುಂದಿನ ಕೆಲವು ಋಕ್ಕುಗಳಲ್ಲಿಯೂ ಈ ದಿವೋದಾಸನು ಪಣಿಗಳು, ಪಾರಾವತರು, ಬೃಸಯರು ಎಂಬುವರೊಡನೆ ಸರಸ್ವತೀನದೀ ತೀರದಲ್ಲಿ ಯುದ್ಧಮಾಡಿದ ವರ್ಣನೆ ಇರುವುದು. ಋ. ಸಂ. ೧-೧೩೦-೧೦ ರಲ್ಲಿ ದಿವೋದಾಸನ ವಂಶಸ್ಥರೆಂದು ಅಥವಾ ಅವನ ಪ್ರಜೆಗಳೆಂದು ಸೂಚಿಸುವ ದಿವೋದಾಸೇಭಿಃ ಎಂಬ ಬಹುವಚನಶಬ್ದದ ಪ್ರಯೋಗವಿರುವುದು ದಿವೋದಾಸನ ಹೆಸರು ೩, ೫, ೮, ೧೦ ನೆಯ ಮಂಡಲಗಳಲ್ಲಿ ಕಂಡುಬರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಅಯಾತಮ್**—ಯಾ ಪ್ರಾಪಣೇ ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ದಿವೋದಾಸಾಯ—ದಿವಶ್ಚ ದಾಸೇ ಷಷ್ಠ್ಯಾ ಅಲುಕ್ ವಕ್ತವ್ಯಃ** (ಕಾ. ೬-೩-೨೧-೫) ಎಂಬುದರಿಂದ ಪೂರ್ವಪದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಭರದ್ವಾಜಾಯ**—ಭೃಞ್ ಭರಣೇ ಧಾತು. ಇದಕ್ಕೆ **ವ್ಯತ್ಯಯೋ ಬಹುಲಮ್** ಎಂಬುದರಿಂದ ಕರ್ಮಣಿಯಲ್ಲಿ ಶತೃ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ರಪರವಾಗಿ ಬರುತ್ತದೆ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ತಾಸ್ಯನುದಾತ್ತೇತ್**-(ಪಾ. ಸೂ ೬-೧-೧೮೬) ಎಂಬುದರಿಂದ ಲಸಾರ್ವಧಾತುಕಾನುದಾತ್ತತ್ವ ಬಾರದಿರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರದಿಂದ ರೇಫೋತ್ತರಾಕಾರವು ಉದಾತ್ತವಾಗುತ್ತದೆ. ಬಹುವ್ರೀಹಿಸಮಾಸವಾದಾಗ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಹಯಂತಾ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಕರ್ಮಣಿಯಲ್ಲಿ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಲಟ್ಟಿಗೆ ಶತ್ರಾದೇಶ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಶಪ್ ವಿಕರಣ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ತನ್ನಿಮಿತ್ತವಾಗಿ ಉಕಾರಕ್ಕೆ ಗುಣ. ಛಾಂದಸವಾಗಿ ಅವಕ್ಕೆ ಅಯಾದೇಶ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿವಚನ ಔ ಪರವಾದುದರಿಂದ **ಸುಪಾಂ ಸುಲುಕ್** ಸೂತ್ರದಿಂದ ಅದಕ್ಕೆ ಆಕಾರಾದೇಶ. **ಉಗಿದಚಾಂ ಸರ್ವನಾಮಸ್ಥಾನೇ** ಎಂಬುದರಿಂದ ನುಮಾಗಮ

**ರೇವತ್**--ರಯಿಃ ಅಸ್ಯ ಅಸ್ತಿ ಇತಿ ರೇವತ್. **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. **ರಯೇರ್ಮತೌ ಬಹುಲಮ್** ಎಂಬ ವಚನದಿಂದ ರಯಿಗೆ ಸಂಪ್ರಸಾರಣ. **ನಸಂಪ್ರಸಾರಣೇ ಸಂಪ್ರಸಾರಣಮ್** (ಪಾ. ಸೂ. ೬-೧-೩೭) ಎಂಬುದರಿಂದ ಇಲ್ಲಿ ಯಕಾರಕ್ಕೆ ಸಂಪ್ರಸಾರಣ. ಗುಣ. **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. **ರಯಿ ಶಬ್ದಾಚ್ಚ** (ಕಾ. ೬-೧-೧೭೬-೧) ಎಂಬ ವಚನದಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಉವಾಹ**—ವಹ ಪ್ರಾಪಣೇ. ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಣಲ್ ಆದೇಶ. ಲಿಣ್ನಿಮಿತ್ತವಾಗಿ ದ್ವಿತ್ವ :ಬಂದಾಗ **ಲಿಟ್ಯಭ್ಯಾಸಸ್ಯೋಭಯೇಷಾಮ್** (ಪಾ. ಸೂ. ೬-೧-೧೭) ಎಂಬುದರಿಂದ ಸಂಪ್ರಸಾರಣ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಚನಃ**—ಷಚ ಸೇವನೇ. ಧಾತು. ಅನುದಾತ್ತೇತ್ತಾದುದರಿಂದ **ಅನುದಾತ್ತೇತಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಎಂಬುದರಿಂದ ಯುಚ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಯುಕ್ತಾ**—ಯುಜಿರ್ ಯೋಗೇ ಧಾತು. ಇದಕ್ಕೆ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಸುಪಾಂ ಸುಲುಕ್** (ಪಾ. ಸೂ ೩-೧-೮೫) ಎಂಬುದರಿಂದ **ದ್ವಿವಚನ** ಔಕಾರ ವಿಭಕ್ತಿಗೆ ಆಕಾರಾದೇಶ. ॥ ೧೮ ॥



॥ ಸಂಹಿತಾಪಾಠಃ ॥

ರಯಿಂ ಸುಕ್ಷತ್ರಂ ಸ್ವಪತ್ಯಮಾಯುಃ ಸುವೀರ್ಯಂ ನಾಸತ್ಯಾ
ವಹಂತಾ ।
ಆ ಜಹ್ನಾವೀಂ ಸಮನಸೋಪ ವಾಜೈಸ್ತ್ರಿರಹ್ನೋ ಭಾಗಂ ದಧ-
ತೀಮಯಾತಂ ॥ ೧೯ ॥

॥ ಪದಪಾಠಃ ॥

ರಯಿಂ । ಸುಽಕ್ಷತ್ರಂ । ಸುಽಅಪತ್ಯಂ । ಆಯುಃ । ಸುಽವೀರ್ಯಂ । ನಾಸತ್ಯಾ ।
ವಹಂತಾ ।
ಆ । ಜಹ್ನಾವೀಂ । ಸಽಮನಸಾ । ಉಪ । ವಾಜೈಃ । ತ್ರಿಃ । ಅಹ್ನಃ । ಭಾಗಂ ।
ದಧತೀಂ । ಅಯಾತಂ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾವಶ್ವಿನೌ ಸುಕ್ಷತ್ರಂ ಶೋಭನಬಲಂ ರಯಿಂ ಧನಂ ಸ್ವಪತ್ಯಂ ಶೋಭನೈಃ ಪುತ್ರಾದಿಭಿರುಪೇತಂ ಸುವೀರ್ಯಂ ಶೋಭನವೀರ್ಯೋಪೇತಮಾಯುಃ। ಅನ್ನನಾಮೈತತ್ । ಏವಂಗುಣ-ವಿಶಿಷ್ಟಮನ್ನಂ ಚ ವಹಂತಾ ಧಾರಯಂತೌ ಯುವಾಂ ಸಮನಸಾ ಸಮಾನಮನಸ್ಕೌ ಸಂತೌ ಜಹ್ನಾವೀಂ ಜಹ್ನೋರ್ಮಹರ್ಷೇಃ ಸಂಬಂಧಿನೀಂ ಪ್ರಜಾಮಾಯಾತಂ । ಆಭಿಮುಖ್ಯೇನಾಗಚ್ಛತಂ । ಕೀದೃಶೀಂ । ವಾಜೈರ್ಹವಿರ್ಲಕ್ಷಣೈರನ್ನೈರುಪೇತಾಂ । ಅಹ್ನಃ । ಅತ್ರಾಹಃಶಬ್ದೇನ ತತ್ರಾನುಷ್ಠೇಯಃ ಸೋಮಯಾಗೋ ಲಕ್ಷ್ಯತೇ । ತಸ್ಯ ಪ್ರಾತಃಸವನಾದಿರೂಪೇಣ ತ್ರಿಸ್ತ್ರಿಧಾ ವಿಭಕ್ತಂ ಭಾಗಮಂಶಂ ದಧತೀಂ ಬಿಭ್ರತೀಂ । ಅನುಸವನಂ ಹವಿರ್ಭಿರ್ಯಜಮಾನಾಮಿತ್ಯರ್ಥಃ ॥ ಸುಕ್ಷತ್ರಂ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರ-ಪದಾಂತೋದಾತ್ತತ್ವಂ । ಸುವೀರ್ಯಂ । ವೀರವೀರ್ಯೌ ಚೇತಿ ಬಹುವ್ರೀಹಾವುತ್ತರಪದಾದ್ಯುದಾತ್ತತ್ವಂ । ಜಹ್ನಾವೀಂ । ಜಹ್ನುಶಬ್ದಾತ್ತಸ್ಯೇದಮಿತ್ಯರ್ಥೇಽಣ್ । ಟಿಡ್ಢಾಣಞಿತಿ ಙೀಪ್ । ಜಾಹ್ನವೀಹ್ರಸ್ವ-ದೀರ್ಘಯೋರ್ವಿನಿಮಯಃ ಪೃಷೋದರಾದಿತ್ವಾತ್ । ಉಕ್ತಂ ಚ । ವರ್ಣಾಗಮೋ ವರ್ಣವಿಪರ್ಯ-ಯಶ್ಚ । ಕಾ. ೬-೩-೧೦೯ । ಇತಿ ಅತ ಏವ ಮಧ್ಯೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಹೇ ನಾಸತ್ಯಾ**—ಎಲೈ ನಾಸತ್ಯರೇ ಅಥವಾ ಅಶ್ವಿನೀದೇವತೆಗಳೇ । **ಸುಕ್ಷತ್ರಂ**—ಒಳ್ಳೆಯ ಬಲವನ್ನೂ । **ರಯಿಂ**—ಧನವನ್ನೂ । **ಸ್ವಪತ್ಯಂ**—ಸುಪುತ್ರರನ್ನೂ । **ಸುವೀರ್ಯಂ**—ವೀರ್ಯೋಪೇತವಾದ । **ಆಯುಃ**—ಅನ್ನವನ್ನೂ । **ವಹಂತಾ**—ವಹಿಸಿದವರಾಗಿ (ನೀವಿಬ್ಬರೂ) । **ಸಮನಸ್ಕಾ**—ಸಮಾನ ಮನಸ್ಕರಾಗಿ । **ವಾಜೈಃ**—ಹವಿರಾದಿಗಳಿಂದ (ಯುಕ್ತವಾದ) । **ಅಹ್ನಃ**—ಸೋಮಯಾಗದ । **ತ್ರಿಃ ಭಾಗಂ**—ಪ್ರಾತಃಸವನ, ಮಾಧ್ಯಂದಿಸವನ ತೃತೀಯಸವನಗಳೆಂಬ ಮೂರು ವಿಧವಾದ ಯಜ್ಞಕರ್ಮಗಳನ್ನು । **ದಧತೀಂ**—ಧರಿಸಿರುವ (ಆಚರಿಸುತ್ತಿರುವ) । **ಜಹ್ನಾವೀಂ**—ಜಹ್ನು ಮಹರ್ಷಿಯ ಸಂತಾನದ ಅಭಿಮುಖರಾಗಿ । **ಆ ಅಯಾತಂ**—ಬಂದಿರಿ.

॥ ಭಾವಾರ್ಥ ॥

ಅಶ್ವಿನೀದೇವತೆಗಳೇ, ನೀವಿಬ್ಬರೂ ಸಮಾನಮನಸ್ಕರಾಗಿ, ಬಲ, ಧನ, ಸುಸಂತಾನ, ವೀರ್ಯಪ್ರದವಾದ ಅನ್ನ, ಇವುಗಳಿಂದ ಯುಕ್ತರಾಗಿ, ಹವಿರಾದಿಗಳಿಂದ ಯುಕ್ತರಾದ, ಸೋಮಯಾಗದ (ಅಂಗವಾದ ಪ್ರಾತಸ್ಸವನಾದಿರೂಪವಾದ) ಮೂರು ಯಜ್ಞಕರ್ಮಗಳನ್ನು ಆಚರಿಸುತ್ತಿರುವ, ಜಹ್ನುಮಹರ್ಷಿಯ ವಂಶದವರನ್ನು ಸಮೀಪಿಸಿದಿರಿ.

## English Translation.

Nasatyas, bearing strength and wealth with posterity and vigour-sustaining food, you came, with one intention, to the family of Jahnu. (provided) with (sacrificial) viands, and possessing a third portion of the daily offerings).

॥ ವಿಶೇಷವಿಷಯಗಳು ॥

**ಜಾಹ್ನವೀಂ—ಜಹ್ನೋಃ ಮಹರ್ಷೇಃ ಸಂಬಂಧಿನೀಂ ಪ್ರಜಾಂ ।** ಜುಹ್ನು ಮಹರ್ಷಿಯ ಪ್ರಜೆಗಳನ್ನು ನೋಡಿ ಅವರಲ್ಲಿ ದಯೆಯಿಟ್ಟು ಅಶ್ವಿನೀದೇವತೆಗಳು ಅವರ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳವರಾಗಿ ಅವರು ಆಚರಿಸುವ ಯಾಗದಲ್ಲಿ ಪ್ರಾತರ್ಮಧ್ಯಾಹ್ನಸಾಯಂಕಾಲವೆಂಬ ಮೂರು ಸವನಗಳಲ್ಲಿ ಬೇರೆ ಬೇರೆಯಾಗಿ ಅರ್ಪಿಸುವ ಹವಿರ್ಭಾಗಗಳನ್ನು ಸ್ವೀಕರಿಸಿ ಆಯುರ್ಬಲಾರೋಗ್ಯೈಶ್ವರ್ಯಗಳನ್ನೂ ಉತ್ತಮವಾದ ಪ್ರಜೆಗಳನ್ನೂ ಅನುಗ್ರಹಿಸಿರುವರು ಎಂದು ಸಾಯಣರು ವ್ಯಾಖ್ಯಾನಮಾಡಿರುತ್ತಾರೆ. ಈ **ಜಹ್ನಾವೀ** ಎಂಬ ಶಬ್ದವು ಋಗ್ವೇದದಲ್ಲಿ ಈ ಋಕ್ಕಿನಲ್ಲಿಯೂ—

**ಪುರಾಣಮೋಕಃ ಸಖ್ಯಂ ಶಿವಂ ವಾಂ ಯುವೋರ್ನರಾ ದ್ರವಿಣಂ ಜಹ್ನಾವ್ಯಾಂ ।**

(ಋ. ಸಂ ೩-೫೮-೬)

ಎಂಬ ಋಕ್ಕಿನಲ್ಲಿ ಮಾತ್ರ ಪಠಿತವಾಗಿರುವುದು. ಜಹ್ನುಮಹರ್ಷಿಯ ಪತ್ನಿಯೆಂಬ ಅರ್ಥವನ್ನೂ ಈ ಶಬ್ದವು ಸೂಚಿಸುವುದು. ವೇದಗಳಲ್ಲಿ ಜಹ್ನುವು ಒಬ್ಬ ಋಷಿಯೆಂದು ಹೇಳಿದ್ದರೂ ವಿಷ್ಣುಪುರಾಣವೇ ಮೊದಲಾದ ಪುರಾಣಗಳಲ್ಲಿ ಇವನು ಚಂದ್ರವಂಶದ ಒಬ್ಬ ರಾಜನೆಂದು ಹೇಳಿರುವುದು.

ಸ್ಕಂದಸ್ವಾಮಿಗಳು—**ಜಹ್ನೋರ್ಭಾರ್ಯಾ ಧನಾದಿಕಾಮಾ ಸೋಮೇನಾಯಜತ್ । ತಸ್ಯೈ ಅಶ್ವಿನಾವಾಗತ್ಯ ಧನಾದೀನ್ಯದದತುಃ ತದೇತದಿಹೋಚ್ಯತೇ ರಯಿಮಿತ್ಯಾದಿನಾ** ।: ಜಹ್ನು ಋಷಿಯ ಪತ್ನಿಯು ಧನವೇ ಮೊದಲಾದವುಗಳನ್ನು ಹೊಂದಲು ಇಚ್ಛೆಯುಳ್ಳವಳಾಗಿ ಸೋಮಯಾಗವನ್ನು ಮಾಡಿದಳು. ಆಗ ಅಶ್ವಿನೀದೇವತೆಗಳು ಆ ಯಜ್ಞಕ್ಕೆ ಬಂದು ಹವಿರ್ಭಾಗಗಳನ್ನು ಸ್ವೀಕರಿಸಿ ಅವಳ ಇಚ್ಛಾನುಸಾರವಾಗಿ ಎಲ್ಲವನ್ನೂ ಅನುಗ್ರಹಿಸಿದರು ಎಂದು ಒಂದು ವಿಧವಾದ ಅರ್ಥವನ್ನು **ಜಹ್ನೋಃ ಭಾರ್ಯಾ ಜಾಹ್ನವೀ** ಎಂಬ ವ್ಯಾಖ್ಯಾನವನ್ನು ಮಾಡಿ ಹೇಳಿರುವರು ಮತ್ತು—**ಜಹ್ನೋಃ ಅಪತ್ಯಂ ಜಾಹ್ನವೀ ತಸ್ಯ ಪ್ರಜಾ ತಾಂ ಬಲಾಕಾಶ್ವಕುಶಿಕಗಾಧಿವಿಶ್ವಾಮಿತ್ರಪ್ರಭೃತಿಕಾಂ**। ಜಹ್ನುವಿನ ಅಪತ್ಯವು ಪ್ರಜೆಯು ಜಾಹ್ನವಿಯು ಎಂಬದಾಗಿ ವ್ಯಾಖ್ಯಾನದ ಪಕ್ಷದಲ್ಲಿ ಬಲಾಕಾಶ್ವ, ಕುಶಿಕ, ಗಾಧಿ. ವಿಶ್ವಾಮಿತ್ರ ಎಂಬ ಜಹ್ನುವಿನ ಮಕ್ಕಳಿಗೆ ಅನುಗ್ರಹವನ್ನು ಮಾಡಿರುವರು ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ವಿವರಿಸಿರುವರು.

**ಸುಕ್ಷತ್ರಂ**—ಕ್ಷತ್ರಶಬ್ದವು ನೂರೊಂದು **ಉದಕ** ವಾಚಕಗಳಲ್ಲಿ (ನಿ. ೨-೨೪) ಉಕ್ತವಾಗಿರುವುದು. ಆದರೆ ಸ್ಕಂದಸ್ವಾಮಿಗಳು **ಅಪಹಿತಮಪಿ ಬಲನಾಮ** ಎಂದು ವ್ಯಾಖ್ಯಾನಮಾಡಿ ಸುಕ್ಷತ್ರ ಶಬ್ದಕ್ಕೆ ಸುಬಲವೆಂದು ಅರ್ಥವನ್ನೂ ಹೇಳಿರುತ್ತಾರೆ. **ಶೋಭನೇನ ಅಸುರಾದಿ ದುಷ್ಟಜನನಿರಾಸಪಟುನಾ ಬಲೇನ ಸಹಿತಂ** ರಾಕ್ಷಸರೇ ಮೊದಲಾದ ದುಷ್ಟರನ್ನು ನಾಶಮಾಡುವದರಲ್ಲಿ ಸಮರ್ಥವಾದ ಶಕ್ತಿಯಿಂದ ಕೂಡಿ ಇರುವ ಎಂದು ಅರ್ಥ.

**ರಯಿಂ—ಧನಂ** । ರಯಿ ಶಬ್ದವು ನೂರೊಂದು ಉದಕನಾಮಗಳಲ್ಲಿಯೂ (ನಿ. ೨-೨೪) ಇಪ್ಪತ್ತೆಂಟು ಧನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿರುವುದು. ಮತ್ತು **ರಯಿರಿತಿ ಧನನಾಮ ರಾತೇರ್ದಾನಕರ್ಮಣಃ** (ನಿ. ೪-೧೭) ದಾನ ಎಂದು ಅರ್ಥವುಳ್ಳ ರಾಧಾತುವಿನಿಂದ ನಿಷ್ಪನ್ನವಾದ ರಯಿಶಬ್ದಕ್ಕೆ ಧನವೆಂದು ಅರ್ಥ ಎಂದು ನಿರುಕ್ತಕಾರರೂ ವ್ಯಾಖ್ಯಾನಮಾಡಿರುತ್ತಾರೆ.

**ಅಹ್ನಃ ತ್ರಿಃ ಭಾಗಂ—ಅತ್ರ ಅಹಶ್ಶಬ್ದೇನ ತತ್ರಾನುಷ್ಠೇಯಃ ಸೋಮಯಾಗೋ ಲಕ್ಷ್ಯತೇ । ತಸ್ಯಪ್ರಾತಸ್ಸವನಾದಿರೂಪೇಣ ತ್ರಿಧಾ ವಿಭಕ್ತಂ ಭಾಗಂ ಅನುಸವನಂ ಹವಿರ್ಭಿರ್ಯಜಮಾನಾಂ ।** ನಿರುಕ್ತದಲ್ಲಿ ಅಹಶ್ಶಬ್ದವು **ಅಹಃ ಕಸ್ಮಾದುಪಾಹರಂತ್ಯಸ್ಮಿನ್ ಕರ್ಮಾಣಿ** ಸೂರ್ಯನು ಪ್ರಕಾಶಿಸುವ ಕಾಲದಿಂದ ಕೂಡಿದ ಹಗಲಿನಲ್ಲಿ ಕರ್ಮಗಳನ್ನು ಆಚರಿಸುವ ಕಾರಣ ಅಹಸ್ಸೆಂದು ಪ್ರಸಿದ್ಧವಾಗಿರುವುದು ಎಂದು ವ್ಯಾಖ್ಯಾತವಾಗಿರುವುದು. ಇಲ್ಲಿ ಅಹಶ್ಶಬ್ದಕ್ಕೆ ಅಹಸ್ಸಿನಲ್ಲಿ ಅಚರಿಸಬಹುದಾದ ಸೋಮಯಾಗವು ಎಂದು ಅರ್ಥವನ್ನು ಹೇಳಬೇಕು. ಈ ಸೋಮಯಾಗದಲ್ಲಿ ಪ್ರಾತಸ್ಸವನ ಮಾಧ್ಯಂದಿನಸವನ ತೃತೀಯಸವನ ಎಂಬ ಹೆಸರಿನಿಂದ ಪ್ರಾತಃಕಾಲ ಮಧ್ಯಾಹ್ನಕಾಲ, ಸಾಯಂಕಾಲಗಳಲ್ಲಿ ಸೋಮರಸವನ್ನು ಹಿಂಡುವ ಮೊದಲಾದ ಯಾಗಸಂಬಂಧವಾದ ಹೋಮಾದಿ ಕರ್ಮಗಳು ಆಚರಿಸಲ್ಪಡುತ್ತವೆ. ಜಹ್ನು ಸಂತತಿಯವರು ಆಚರಿಸಿದ ಯಾಗಗಳಲ್ಲಿ ಅಶ್ವಿನೀದೇವತೆಗಳು ಬಂದು ಹವಿರ್ಭಾಗಗಳನ್ನೂ ಸ್ವೀಕರಿಸಿದರೆಂದು ಮುಖ್ಯಾಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಸುಕ್ಷತ್ರಂ**—ಶೋಭನಂ ಕ್ಷತ್ರಂ ಬಲಂ ಯಸ್ಯ ತತ್ ಬಹುವ್ರೀಹಿಯಲ್ಲಿ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಹೀಗೆಯೇ ಸ್ವಪತ್ಯಮ್ ಎಂಬಲ್ಲಿಯೂ ಅಂತೋದಾತ್ತಸ್ವರ ಬರುತ್ತದೆ

**ಸುವೀರ್ಯಂ**—ಶೋಭನಂ ವೀರ್ಯಂ ಯಸ್ಯ ತತ್. ಇಲ್ಲಿ **ವೀರವೀರ್ಯೌ ಚ** (ಪಾ. ಸೂ. ಎಂಬುದರಿಂದ ಬಹುವ್ರೀಹಿಸಮಾಸವಾದಾಗ ಸುವಿನ ಸ್ವರವು ಬಾಧಿತವಾಗಿ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ವಹಂತಾ**—ವಹ ಪ್ರಾಪಣೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಅದಕ್ಕೆ ಆಕಾರಾದೇಶ. **ಉಗಿದಚಾಂ**—ಸೂತ್ರ ದಿಂದ ನುಮಾಗಮ.

**ಜಹ್ನಾವೀಂ**—ಜಹ್ನೋಃ ಅಪತ್ಯಂ ಸ್ತ್ರೀ ಜಾಹ್ನವೀ ತಾಮ್ **ತಸ್ಯೇದಂ**- (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. ಸ್ತ್ರೀತ್ವದಲ್ಲಿ **ಟಿಡ್ಢಾಣಞ್**—(ಪಾ. ಸೂ. ೪-೧-೧೫) ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ಓರ್ಗುಣಃ** (ಪಾ. ಸೂ ೬-೪-೧೪೬) ಎಂಬುದರಿಂದ ಉಕಾರಕ್ಕೆ ಗುಣ. ಅವಾದೇಶ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಹ್ರಸ್ವದೀರ್ಘಗಳಿಗೆ ವಿನಿಮಯ ಬರುತ್ತದೆ. **ಪೃಷೋದರಾದೀನಿಯಥೋಪದಿಷ್ಟಂ** (ಪಾ. ಸೂ. ೬-೩-೧೦೯) ಎಂಬಲ್ಲಿ—**ವರ್ಣಾಗಮೋ ವರ್ಣವಿಪರ್ಯಶ್ಚ** ಎಂದು ವಚನವಿರುವುದರಿಂದ ಇದು ಸಂಗತವಾಗುತ್ತದೆ. ಅದರಿಂದಲೇ ಮಧ್ಯೋದಾತ್ತವೂ ಸಿದ್ಧವಾಗುತ್ತದೆ.

**ಸಮನಸಾ**—ಸಮಾನಂ ಮನಃ ಯಯೋಸ್ತೌ ಸಮನಸ್. **ಸುಪಾಂ ಸುಲುಕ್**- ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಧತೀಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶ್ಲು ವಿಕರಣ. ಧಾತುವಿಗೆ ದ್ವಿತ್ವಾದಿ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಸ್ತ್ರೀತ್ವದಲ್ಲಿ **ಉಗಿತಶ್ಚ**-(ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ನಾಭ್ಯಸ್ತಾಚ್ಛತುಃ**-(ಪಾ. ಸೂ. ೭-೧-೭೮) ಎಂಬುದರಿಂದ ನುಮಾಗಮ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಆಯಾತಂ**—ಯಾ ಪ್ರಾಪಣೇ ಧಾತು. ಲಙ್ ಮಧ್ಯಮಪುರುಷ ದ್ವಿವಚನರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧೯ ॥

|| ಸಂಹಿತಾಪಾಠಃ ||

ಪರಿವಿಷ್ಟಂ ಜಾಹುಷಂ ವಿಶ್ವತಃ ಸೀಂ ಸುಗೇಭಿರ್ನಕ್ತಮೂಹಥೂ ರಜೋಽಭಿಃ ।
ವಿಭಿಂದುನಾ ನಾಸತ್ಯಾ ರಥೇನ ವಿ ಪರ್ವತಾँ ಅಜರಯೂ ಅಯಾತಂ || ೨೦ ||

|| ಪದಪಾಠಃ ||

ಪರಿಽವಿಷ್ಟಂ । ಜಾಹುಷಂ । ವಿಶ್ವತಃ । ಸೀಂ । ಸುಽಗೇಭಿಃ । ನಕ್ತಂ । ಊಹಥುಃ । ರಜಃಽಭಿಃ ।
ವಿಽಭಿಂದುನಾ । ನಾಸತ್ಯಾ । ರಥೇನ । ವಿ । ಪರ್ವತಾನ್ । ಅಜರಯೂ ಇತಿ । ಅಯಾತಂ || ೨೦ ||

|| ಸಾಯಣಭಾಷ್ಯಂ ||

ಜಾಹುಷೋ ನಾಮ ಕಶ್ಚಿದ್ರಾಜಾ । ವಿಶ್ವತಃ ಸರ್ವತಃ ಪರಿವಿಷ್ಟಂ ಶತ್ರುಭಿಃ ಪರಿವೃತಂ ತಂ ರಾಜಾನಂ ಹೇ ನಾಸತ್ಯಾ ವಶ್ವಿನಾವಜರಯೂ ಜರಾರಹಿತೌ ನಿತ್ಯತರುಣೌ ಯುವಾಂ ವಿಭಿಂದುನಾ ವಿಶೇಷೇಣ ಸರ್ವಸ್ಯ ಭೇದಕೇನಾತ್ಮೀಯೇನ ರಥೇನ ನಕ್ತಂ ರಾತ್ರೌ ಸುಗೇಭಿಃ ಸುಷ್ಠು ಗಂತುಂ ಶಕ್ಯೈ ರಜೋಭೀ ರಂಜಕೈರ್ಮಾರ್ಗೈರೂಹಥುಃ । ತಸ್ಮಾಚ್ಛತ್ರುಸಮೂಹಾನ್ನಿರಗಮಯತಂ । ಸೀಮಿ-ತ್ಯೇತತ್ಪಾದಪೂರಣಂ । ನಿರ್ಗತೇನ ತೇನ ಸಹ ಪರ್ವತಾನ್ ಶತ್ರುಭಿರಾರೋಢುಮಶಕ್ಯಾನ್ ಶಿಲೋಚ್ಚಯಾನ್ವ್ಯಯಾತಂ । ವಿಶೇಷೇಣಾಗಚ್ಛತಂ ॥ ಪರಿವಿಷ್ಟಂ । ವಿಶ ಪ್ರವೇಶನೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಸುಗೇಭಿಃ ಸುದುರೋರಧಿಕರಣ ಇತಿ ಗಮೇರ್ಡಃ । ವಿಭಿಂದುನಾ । ಭಿದಿರ್ ವಿದಾರಣೇ ಔಣಾದಿಕ ಉಪ್ರತ್ಯಯೋ ನುಮಾಗಮಶ್ಚ । ಅಜರಯೂ । ನ ಜರಾ ಅಜರಾ । ತಾಮಾತ್ಮನ ಇಚ್ಛತಃ ಸುಪ ಆತ್ಮನಃ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವ ದೀರ್ಘ । ಯೋರ್ನಿಷೇಧಃ ಕ್ಯಾಚ್ಛಂದಸೀತ್ಯುಪ್ರತ್ಯಯಃ ||

॥ ಪ್ರತಿಪದಾರ್ಥ ॥

**ಅಜರಯೋ—**ಜರಾರಹಿತರಾದ, ನಿತ್ಯತರುಣರಾದ । **ಹೇ ನಾಸತ್ಯಾ—**ಎಲೈ ನಾಸತ್ಯರೇ । **ವಿಶ್ವತಃ—**ಸುತ್ತಲೂ । **ಪರಿವಿಷ್ಟಂ—**ಶತ್ರುಗಳಿಂದ ಸುತ್ತುವರೆಯಲ್ಪಟ್ಟ । **ಜಾಹುಷಂ—**ಜಾಹುಷನೆಂಬ (ರಾಜನನ್ನು) **ವಿಭಿಂದುನಾ—**ಚೆನ್ನಾಗಿ (ಎಲ್ಲವನ್ನೂ) ಭೇದಿಸುವ । **ರಥೇನ—**(ನಿಮ್ಮ) ರಥದಿಂದ । **ನಕ್ತಂ—**ರಾತ್ರಿಯಲ್ಲಿ **ಸುಗೇಭಿಃ—**ಸುಗಮವಾದ । **ರಜೋಭಿಃ—**ಮಾರ್ಗಗಳಿಂದ । **ಊಹಥುಃ—**ಶತ್ರುಗಳಿಂದ ಬಿಡಿಸಿ ಕರೆದುಕೊಂಡು ಹೋದಿರಿ । (ಅವನನ್ನು) **ಪರ್ವತಾನ್—**(ಶತ್ರುಗಳಿಗೆ ದುರ್ಗಮವಾದ) ಪರ್ವತಗಳಿಗೆ । **ವಿ ಅಯಾತಂ—**ಸೇರಿಸಿದಿರಿ.

॥ ಭಾವಾರ್ಥ ॥

ನಿತ್ಯತರುಣರಾದ ಎಲೈ ಅಶ್ವಿನೀದೇವತೆಗಳೇ, ಶತ್ರುಗಳಿಂದ ಆವೃತನಾದ ಜಾಹುಷನೆಂಬ ರಾಜನನ್ನು, ಸರ್ವಭೇದಕವಾದ ನಿಮ್ಮ ರಥದಲ್ಲಿ, ರಾತ್ರಿವೇಳೆ, (ನಿಮ್ಮ ಸಾಮರ್ಥ್ಯದಿಂದ) ಸುಗಮವಾದ ಮಾರ್ಗಗಳಿಂದ, ಕರೆದುಕೊಂಡುಹೋಗಿ, (ಶತ್ರುಗಳಿಗೆ ದುರ್ಗಮವಾದ) ಪರ್ವತಗಳನ್ನು ಹತ್ತಿದಿರಿ.

## English Translation.

Undecaying Nasatyas, you bore away by night, in your foe-overwhelming car, Jahusha, surrounded on every side by (enemies), through practicable roads, and went to (inaccessible) mountains.

॥ ವಿಶೇಷವಿಷಯಗಳು ॥

**ಜಾಹುಷಂ— ಜಾಹುಷೋ ನಾಮ ಕಶ್ಚಿದ್ರಾಜಾಃ** ಜಾಹುಷನೆಂದು ಹೆಸರುಳ್ಳ ಒಬ್ಬ ರಾಜನು ಎಂದು ಸಾಯಣರು ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳು—

**ಜಾಹುಷೋ ನಾಮ ಋಷಿಃ ವೃದ್ಧಃ ವೃದ್ಧಯಾ ಭಾರ್ಯಯಾ ವೃದ್ಧೈಶ್ಚ ಪುತ್ರಪೌತ್ರಾದಿಭಿಃ ಪರಿವೃತೋ ದೇವಾನಿಯಾಜ । ತಂ ದೃಷ್ಟ್ವಾ ಅಸುರಾಃ ತುಂಗೈಃ ಪರ್ವತೈಃ ಪರಿಕ್ಷಿಪ್ತೇ ಮರುದೇಶೇ ಪ್ರಚಿಕ್ಷಿಪುಃ । ಸ ತತೋ ಪ್ರವೃದ್ಧತ್ವಾತ್ ಸ್ವಯಂ ನಿರ್ಗಂತುಮಶಕ್ನುವನ್ ಮಹಾಕಾರುಣಿಕಾವಶ್ವಿನೌ ತುಷ್ಟಾವ । ತಮಶ್ವಿನಾವಾಗತ್ಯ ಏಕಯೈವ ರಾತ್ರ್ಯಾ ಅಶ್ವೇನ ರಥೇನ ತಾನ್ ಪರ್ವತಾನತಿಕ್ರಾಮಯಾಂ ಚಕ್ರತುಃ ಇತಿ ।**

ಜಾಹುಷನೆಂಬ ಹೆಸರುಳ್ಳ ಮುದುಕನಾದ ಒಬ್ಬ ಋಷಿಯು ವೃದ್ಧಳಾದ ತನ್ನ ಪತ್ನಿ ಮತ್ತು ಮಕ್ಕಳು ಮಮ್ಮೊಕ್ಕಳು ಇವರೊಡನೆ ಕೂಡಿ ದೇವತೆಗಳನ್ನು ಕುರಿತು ಯಜ್ಞವನ್ನು ಮಾಡಿದನು. ರಾಕ್ಷಸರು ಇದನ್ನು ನೋಡಿ ಎತ್ತರವಾದ ಪರ್ವತಗಳಿಂದ ಸುತ್ತುವರಿದಿರುವ ಮರುಭೂಮಿಗೆ ಆ ಋಷಿಯನ್ನು ಕರೆದುಕೊಂಡು ಬಂದು ಇರಿಸಿದರು. ಇವನಿಗೆ ಬಹಳ ವಯಸ್ಸಾಗಿದ್ದುದರಿಂದ ಅಲ್ಲಿಂದ ಹೊರಕ್ಕೆ ಬರಲು ಅಶಕ್ತನಾಗಿ ಪರಮ ಕಾರುಣಿಕರಾದ ಅಶ್ವಿನೀದೇವತೆಗಳನ್ನು

ಸ್ತೋತ್ರಮಾಡಿದನು. ಅವನ ಸ್ತುತಿಯನ್ನು ಕೇಳಿ ಅಶ್ವಿನೀದೇವತೆಗಳು ಒಂದು ರಾತ್ರಿಯಲ್ಲಿಯೇ ತಮ್ಮ ರಥದಿಂದ ಬಂದು ಜಾಹುಷನನ್ನು ಆ ಪರ್ವತಗಳಿಂದ ದಾಟಿಸಿ ರಕ್ಷಿಸಿದರು ಎಂದು ಇತಿಹಾಸವನ್ನು ಉದಾಹರಿಸಿರುವರು.

**ಅಜರಯೂ— ಜರಾರಹಿತೌ ನಿತ್ಯತರುಣೌ । ನ ಜರಾ ಅಜರಾ ತಾಮಾತ್ಮನ ಇಚ್ಛತಃ** ಜರಾ ಎಂದರೆ ಮುದುಕತನವು, ಮುಪ್ಪಿನಿಂದ ರಹಿತರಾದ ಎಂದರೆ ಮುದುಕರಲ್ಲದ ಅಶ್ವಿನೀದೇವತೆಗಳು, ನಿತ್ಯವಾದ ಯೌವ್ವನದಿಂದ ಕೂಡಿದವರು ಎಂದು ಅರ್ಥ. ಜರಯೂ ಎಂಬ ಪದದಲ್ಲಿ ಯು ಪ್ರತ್ಯಯವು ಇರುವುದು. ಇದು ಮತ್ವರ್ಥದಲ್ಲಿ ಬಂದಿರುವುದು.

ಯಾಸ್ಕರು **ಇದಂಯುರಿದಂ ಕಾಮಯಮಾನೋ ಅಥಾಪಿ ತದ್ವದರ್ಥೇ ಭಾಷ್ಯತೇ ವಸುಂಯು- ರಿಂದ್ರೋ ವಸುಮಾನಿತ್ಯರ್ಥಃ । ಅಶ್ವಯುರ್ಗವ್ಯೂ ರಥಯುರ್ವಸೂಯುರಿತ್ಯಪಿ ನಿಗಮೋ ಭವತಿ ।** (ನಿ. ೬-೩೧)

ಸ್ಕಂದಸ್ವಾಮಿಗಳು, ಯಾಸ್ಕರು ವ್ಯಾಖ್ಯಾನಮಾಡಿ ವಿವರಿಸಿರುವ ಇದಂಯು ಅಶ್ವಯು ಗವಯು ರಥಯು ಎಂಬ ಶಬ್ದಗಳ ಹಾಗೆ ಅಜರಯೂ ಎಂಬ ಶಬ್ದವೂ ಮತುಬಂತವಾಗಿರುವುದೆಂದು ವಿವರಿಸಿ,

**ಇಂದ್ರೋ ಅಶ್ರಾಯಿ ಸುಧ್ಯೋ ನಿರೇಕೇ ಪಜ್ರೇಷು ಸ್ತೋಮೋ ದುರ್ಯೋ ನ ಯೂಪಃ ।**
**ಅಶ್ವಯುರ್ಗವ್ಯೂ ರಥಯುರ್ವಸೂಯುರಿಂದ್ರ ಇದ್ರಾಯಃ ಕ್ಷಯತಿ ಪ್ರಯಂತಾ ॥**
(ಋ. ಸಂ. ೧-೫೧-೧೪)

ಎಂಬ ಈ ಋಕ್ಕನ್ನು ಉದಹರಿಸಿರುವರು ಮತ್ತು **ಪರಿವಿಷ್ಟಂ** ಎಂಬ ಪದದ ಅರ್ಥವನ್ನು **ಪರಿಶಬ್ದೋಽತ್ರ ವಿಶ್ವತ ಇತ್ಯನೇನ ಪೌನರುಕ್ತ್ಯಪ್ರಸಂಗಾತ್ ಧಾತ್ವರ್ಥಾನುವಾದೀ ವಿಷಿರ್ವ್ಯಾಪ್ತ್ಯರ್ಥಃ ವ್ಯಾಪ್ತಂ ಜರಯಾ । ಪರಿ** ಎಂಬುವುದು ಧಾತ್ವರ್ಥ ಮಾತ್ರವನ್ನು ಬೋಧಿಸುವುದು. ಅಲ್ಲದೆ ಉಪಸರ್ಗಸಹಿತವಾದ ಧಾತ್ವರ್ಥವು ಇಲ್ಲಿ ಪ್ರತ್ಯೇಕವಾಗಿ ಹೇಳಲ್ಪಡುವುದು ಎಂದು ಹೇಳುವುದಾದರೆ ವಿಶ್ವತಃ ಎಂಬ ಪದದಕೂಡ ಅನ್ವಯವು ವಿವಕ್ಷಿತವಾಗಿ ಪುನರುಕ್ತಿಯಾಗುತ್ತದೆ. ಆದ್ದರಿಂದ ಧಾತುವಿಗೂ ಉಪಸರ್ಗಕ್ಕೂ ಸೇರಿ ಸಾಮಾನ್ಯವಾದ ಅರ್ಥವನ್ನು ಇಲ್ಲಿ ಹೇಳಿರುವುದರಿಂದ ಮುಪ್ಪಿನಿಂದ ವ್ಯಾಪ್ತನೆಂದು ಅರ್ಥವು ಎಂದು ವಿವರಿಸಿರುವರು.

**ರಜೋಭಿಃ— ರಜಶ್ಶಬ್ದೋಽತ್ರ ತೇಜೋವಚನಃ ತೇಜಸ್ವಿಭಿಃ ಶೀಘ್ರಗಾಮಿಭಿರಿತ್ಯರ್ಥಃ**–ಸುಗೇಭಿಃ ಎಂಬ ಪದಕ್ಕೆ ಇದು ವಿಶೇಷಣವಾಗಿರುವುದರಿಂದ ಸುಗ ಶಬ್ದವು ಇಲ್ಲಿ ಅಶ್ವವಾಚಿಯಾಗಿ ಉಪಯೋಗಿಸಲ್ಪಟ್ಟಕಾರಣ ಅಶ್ವಿನೀದೇವತೆಗಳು ತೇಜಶ್ಶಾಲಿಗಳಾಗಿರುವ ಮತ್ತು ವೇಗವಾಗಿ ಸಂಚರಿಸಬಲ್ಲ ಕುದುರೆಗಳನ್ನು ಕಟ್ಟಿರುವ ರಥದಿಂದ ಜಾಹುಷನೆಂಬವನನ್ನು ರಕ್ಷಿಸಿದರೆಂದು ವರ್ಣಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪರಿವಿಷ್ಟಂ**—ವಿಶ ಪ್ರವೇಶನೇ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ವ್ರಶ್ಚಭ್ರಸ್ಜಸೃಜ**—(ಪಾ ಸೂ. ೮-೨-೩೬) ಎಂಬುದರಿಂದ ಶಕಾರಕ್ಕೆ ಷತ್ವ. ತನ್ನಿಮಿತ್ತ

ವಾಗಿ ಪ್ರತ್ಯಯಕ್ಕೆ ಷ್ಯತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ

**ಜಾಹುಷಂ—ಫಿಷೋಂತ ಉದಾತ್ತಃ**—(ಫಿ. ಸೂ. ೧) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಿಶ್ವತಃ—ಪಂಚಮ್ಯಾಸ್ತಸಿಲ್** (ಪಾ. ಸೂ. ೫-೩-೭) ಎಂಬುದರಿಂದ ಪಂಚಮ್ಯರ್ಥದಲ್ಲಿ ತಸಿಲ್ ಪ್ರತ್ಯಯ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸುಗೇಭಿಃ—**ಗಮ್ಲೃ ಗತೌ ಧಾತು. **ಸುದುರೋರಧಿಕರಣೇ**—(ಪಾ. ಸೂ. ೩-೨-೪೮) ಎಂಬುದರಿಂದ ಅಧಿಕರಣಾರ್ಥದಲ್ಲಿ ಡಪ್ರತ್ಯಯ ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ (ಅಮ್) ಲೋಪ. ಸುಗ ಎಂದು ರೂಪವಾದಾಗ ಇದಕ್ಕೆ ಭಿಸ್ ಪರವಾದಾಗ **ಬಹುಲಂಛಂದಸಿ** (ಪಾ. ಸೂ. ೭-೧-೧೦) ಎಂಬುದರಿಂದ ಭಿಸಿಗೆ ಐಸ್ ಭಾವ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಊಹಥುಃ**—ವಹ ಪ್ರಾಪಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ ಅಥುಸ್ ಆದೇಶ. **ವಚಿಸ್ವಪಿಯಜಾದೀನಾಂಕಿತಿ** (ಪಾ ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ ದ್ವಿತ್ವಾದಿ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಭಿಂದುನಾ**—ಭಿದಿರ್ ವಿದಾರಣೇ. ಧಾತು. ಇದಕ್ಕೆ ಔಣಾದಿಕವಾದ **ಉ**ಪ್ರತ್ಯಯ. ತತ್ಸಂಸಿಯೋಗದಿಂದ ನುಮಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಅಜರಯೂ**—ನ ಜರಾ ಅಜರಾ. ಅಜರಾಂ ಆತ್ಮನಃ ಇಚ್ಛತಃ ಎಂದು ಅರ್ಥವಿವಕ್ಷಾಮಾಡಿದಾಗ, **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ನಚ್ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಕ್ಯಚ್ ನಿಮಿತ್ತವಾಗಿ ಈತ್ವಾದಿಗಳು ಬರುವುದಿಲ್ಲ. **ಸನಾದ್ಯಂತಾ ಧಾತವಃ** ಎಂಬುದರಿಂದ ಅಜರಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. **ಕ್ಯಾಚ್ಛಂದಸಿ** (ಪಾ. ಸೂ ೩-೨-೧೭೦) ಎಂಬುದರಿಂದ ಇದರ ಮೇಲೆ ಉಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾದ್ವಿವಚನಾಂತ ರೂಪ. ॥ ೨೦ ॥



॥ ಸಂಹಿತಾಪಾಠಃ ॥

ಏಕಸ್ಯಾ ವಸ್ತೋರಾವತಂ ರಣಾಯ ವಶಮಶ್ವಿನಾ ಸನಯೇ
ಸಹಸ್ರಾ ।
ನಿರಹತಂ ದುಚ್ಛುನಾ ಇಂದ್ರವಂತಾ ಪೃಥುಶ್ರವಸೋ ವೃಷಣಾ-
ವರಾತೀಃ ॥ ೨೧ ॥

॥ ಪದಪಾಠಃ ॥

ಏಕಸ್ಯಾಃ । ವಸ್ತೋಃ । ಆವತಂ । ರಣಾಯ । ವಶಂ । ಅಶ್ವಿನಾ । ಸನಯೇ ।
ಸಹಸ್ರಾ ।
ನಿಃ । ಅಹತಂ । ದುಚ್ಛುನಾಃ । ಇಂದ್ರವಂತಾ । ಪೃಥುಽಶ್ರವಸಃ । ವೃಷಣೌ ।
ಅರಾತೀಃ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಶನಾಮೈತತ್ಸಂಜ್ಞಮೃಷಿಮೇಕಸ್ಯಾ ವಸ್ತೋರೇಕಸ್ಯಾಹ್ನೋ ರಣಾಯ ರಮಣೀಯಾಯ ಸಹಸ್ರಾ ಸಹಸ್ರಸಂಖ್ಯಾಕಾಯ ಸನಯೇ ಧನಲಾಭಾಯಾವತಂ । ಅರಕ್ಷತಂ । ಸ ಋಷಿಃ ಪ್ರತ್ಯಹಂ ಯಥಾ ಸಹಸ್ರಸಂಖ್ಯಂ ಧನಂ ಲಭತೇ ತಥಾ ರಕ್ಷಿತವಂತಾವಿತ್ಯರ್ಥಃ, । ಅಪಿ ಚ ಹೇ ವೃಷಣೌ ಕಾಮಾನಾಂ ವರ್ಷಿತಾರಾವಶ್ವಿನೌ । ಇಂದ್ರವಂತಾ ಇಂದ್ರೇಣ ಸಂಯುಕ್ತೌ ಯುವಾಂ ದುಚ್ಛುನಾ ದುಷ್ಟಸುಖಾನ್ದುಃಖಸ್ಯ ಕರ್ತೄನ್ ಪೃಥುಶ್ರವಸೋ ವಿಸ್ತೀರ್ಣಯಶಸೋಽರಾತೀಃ ಶತ್ರೂನ್ನಿರಹತಂ । ನಿಃಶೇಷೇಣಾವಧಿಷ್ಟಂ । ಯದ್ವಾ । ಕಾನೀನಸ್ಯ ಪೃಥುಶ್ರವಃಸಂಜ್ಞಸ್ಯ ರಾಜ್ಞಃ ಶತ್ರೂನಿತಿ ಯೋಜ್ಯಂ ॥ ಸಹಸ್ರಾ । ಸುಪಾಂ ಸುಲುಗಿತಿ ಚತುರ್ಥ್ಯಾ ಡಾದೇಶಃ । ಅಹತಂ । ಲಙಿ ಥಸಸ್ತಂ । ಅನುದಾತ್ತೋ-

**ಪದೇಶೇತ್ಯಾದಿನಾನುಸಿಕಲೋಪಃ । ದುಚ್ಛುನಾಃ । ಶುನಮಿತಿ ಸುಖನಾಮ । ದುಷ್ಟಂ ಸುಖಂ ಯೊಸಾಂ ತಾಸ್ತಥೋಕ್ತಾಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಹೇ ಅಶ್ವಿನೌ**— ಎಲೈ ಅಶ್ವಿನೀದೇವತೆಗಳೇ । **ವಶಂ**—ವಶನೆಂಬ ಋಷಿಯನ್ನು । **ಏಕಸ್ಯಾಃ ವಸ್ತೋಃ**—ಪ್ರತಿ ಒಂದು ದಿವಸದಲ್ಲಿಯೂ । **ರಣಸ್ಯ**— ರಮಣೀಯವಾದ । **ಸಹಸ್ರಾ**—ಸಹಸ್ರಸಂಖ್ಯಾಕವಾದ । **ಸನಯೇ**—ಧನಲಾಭಕ್ಕಾಗಿ । **ಅವತಂ**— ರಕ್ಷಿಸಿದಿರಿ । **ಅಪಿ ಚ**— ಮತ್ತೂ । **ವೃಷಣೌ**— ಇಷ್ಟಾರ್ಥದಾಯಕವಾದ (ಅಶ್ವಿನೀದೇವತೆಗಳೇ) । **ಇಂದ್ರವಂತಾ**— ಇಂದ್ರನಿಂದ ಯುಕ್ತರಾಗಿ । **ದುಚ್ಛುನಾಃ**—ದುಃಖಕಾರಕರಾದ । **ಪೃಥುಶ್ರವಸಃ**—ಪ್ರಥುಶ್ರವಸ್ ಎಂಬುವನ । **ಅರಾತೀಃ**— ಶತ್ರುಗಳನ್ನು । **ನಿಃ ಅಹತಂ**—ನಿಶ್ಶೇಷವಾಗಿ ವಧೆಮಾಡಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ವಶನೆಂಬ ಋಷಿಗೆ, ಪ್ರತಿದಿವಸವೂ ಒಂದೊಂದು ಸಾವಿರ ಧನವು (ದೊರಕುವಂತೆ) (ಅವನನ್ನು) ರಕ್ಷಿಸಿದಿರಿ. (ಮತ್ತು) ಇಷ್ಟಾರ್ಥದಾಯಕರಾದ ನಾಸತ್ಯರೇ, (ನೀವು) ಇಂದ್ರಸಹಿತರಾಗಿ, ದುಃಖಕಾರಕರಾದ, ಪೃಥುಶ್ರವಸನ ಶತ್ರುಗಳನ್ನು ನಿಃಶೇಷವಾಗಿ ನಾಶಮಾಡಿದಿರಿ.

English Translation.

You preserved Vasha, Ashwins, (that he might obtain) in a single day a thousand acceptable gifts ; showerers (of benefits), associated with Indra, yon destroyed the malignant enemies of Prithushravas

॥ ವಿಶೇಷವಿಷಯಗಳು ॥

**ರಣಾಯ—ರಣಃ ವಿವಾಕ್** ಮೊದಲಾದ ನಲವತ್ತಾರು ಸಂಗ್ರಾಮ ನಾಮಗಳಲ್ಲಿ ರಣ ಶಬ್ದವು (ನಿ ೩-೯) ಉಕ್ತವಾಗಿರುವುದರಿಂದ ಯುದ್ಧವೆಂದು ಅರ್ಥ. ಯುದ್ಧಕ್ಕಾಗಿ ಎಂದು ಸ್ಕಂದಸ್ವಾಮಿಗಳೂ, **ರಣಾಯ-ರಮಣೀಯಾಯ** ಸುಂದರವಾದ ಅಥವಾ ಮನಸ್ಸಿಗೆ ಹಿತವಾದ ಎಂದು ಸಾಯಣರೂ, ಅರ್ಥವನ್ನು ಹೇಳಿರುವರು. ಈ ಋಕ್ಕಿನ ಅರ್ಥವನ್ನು ಸಾಯಣರು ಒಂದು ವಿಧವಾಗಿಯೂ ಸ್ಕಂದಸ್ವಾಮಿಗಳು ಮತ್ತೊಂದು ವಿಧವಾಗಿಯೂ ವಿವರಿಸಿ ಹೇಳಿರುವರು. ಆದರೂ ಅಶ್ವಿನೀದೇವತೆಗಳು ಅನುಗ್ರಹಿಸಿರುವರು ಎಂಬ ತಾತ್ಪರ್ಯವು ಮಾತ್ರ ಎರಡು ವ್ಯಾಖ್ಯಾನದಲ್ಲಿಯೂ ಒಂದೇ ಆಗಿ ಅಶ್ವಿನೀದೇವತೆಗಳ ಪ್ರಭಾವದ ಮಹತ್ತ್ವವು ವರ್ಣಿತವಾಗಿದೆ.

**ದುಚ್ಛುನಾ—ದುಃಖಸ್ಯ ಕರ್ತ್ರೀನ್ । ಶುನಂ** ಎಂಬ ಶಬ್ದವು ಇಪ್ಪತ್ತು ಸುಖನಾಮಗಳಲ್ಲಿ (ನಿ.೩-೧೩) ಉಕ್ತವಾಗಿರುವುದರಿಂದ ಸುಖವೆಂಬ ಅರ್ಥವನ್ನು ಬೋಧಿಸುವುದು. ಸಾಯಣರು **ದುಷ್ಟಂ ಸುಖಂ ಯೊಸಾಂ**

**ತಾಃ** ಎಂದು ಸಮಾಸವನ್ನು ಹೇಳಿ ಕೆಟ್ಟದ್ದಾದ ಸುಖವನ್ನು ಉಂಟುಮಾಡುವವರು ಅಥವಾ ಸುಖದ ವಿಷಯದಲ್ಲಿ ಬಾಧಕವನ್ನು ಉಂಟುಮಾಡುವವರು ಎಂದು ಅರ್ಥಮಾಡಿ ವಶನೆಂದು ಹೆಸರುಳ್ಳ ಋಷಿಗೆ ದಿನ ಒಂದಕ್ಕೆ ಒಂದು ಸಾವಿರ ಸಂಖ್ಯೆಯುಳ್ಳ ಧನವು ದೊರೆಯುವಂತೆ ಅನುಗ್ರಹಿಸಿ ರಕ್ಷಿಸಿರುವ ಅಶ್ವಿನೀದೇವತೆಗಳ ಪ್ರಭಾವವನ್ನು ಈ ಋಕ್ಕಿನ ಪೂರ್ವಾರ್ಧದಿಂದ ವರ್ಣಿಸಿರುವರು. ಉತ್ತರಾರ್ಧದಲ್ಲಿ **ಪೃಥುಶ್ರವಸಃ ಅರಾತೀಃ ನಿರಹತಂ । ಕಾನೀತಸ್ಯ ಪೃಥುಶ್ರವಸಂಜ್ಞಸ್ಯ ರಾಜ್ಞಃ ಶತ್ರೂನ್ ನಿಶ್ಶೇಷೇಣಾವಧಿಷ್ಟಂ ।** ಕನ್ಯಾಪುತ್ರನಾದ ಪೃಥುಶ್ರವನೆಂಬ ರಾಜನಿಗೆ ತೊಂದರೆಯನ್ನು ಕೊಡುತ್ತಿದ್ದ ಅವನ ಶತ್ರುಗಳನ್ನು ನಿಗ್ರಹಮಾಡುವಾಗ ಇಂದ್ರನ ಸಹಿತರಾಗಿ ಬಂದು ಅಶ್ವಿನೀದೇವತೆಗಳು ಆ ರಾಜನನ್ನು ರಕ್ಷಿಸಿದರು ಎಂದು ಅಶ್ವಿನೀದೇವತೆಗಳ ಮಹಿಮೆಯನ್ನು ಬೇರೆ ಬೇರೆ ಎರಡು ವಾಕ್ಯಗಳಿಂದ ಅನ್ವಯವನ್ನು ತೋರಿಸಿ ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು **ಅವತಂ—ಅವತಿರ್ಗತ್ಯರ್ಥಃ ಗತವಂತೌ ।** ಅವ ಧಾತುವು ಗಮನ ಎಂಬ ಅರ್ಥವನ್ನು ಬೋಧಿಸುವುದು ಆದ್ದರಿಂದ **ಏಕಸ್ಯಾ ವಸ್ತೋಃ ಸಹಸ್ರಾ ಸನಯೇ ರಣಾಯ ಅವತಂ । ಏಕಸ್ಮಿನ್ ಅಹ್ನಿ ಸಹಸ್ರಸಂಖ್ಯಾಕಾನಾಂ ಧನಾನಾಂ ಲಾಭಾಯ ಸಂಗ್ರಾಮಾರ್ಥಂ ಗತವಂತೌ** ವಶನೆಂಬ ರಾಜನಿಗೆ ದಿನ ಒಂದಕ್ಕೆ ಒಂದು ಸಾವಿರ ದ್ರವ್ಯವನ್ನು ನಾಶಪಡಿಸುತ್ತಿದ್ದ ಶತ್ರುಗಳೊಡನೆ ಯುದ್ಧವನ್ನು ಮಾಡುವುದಕ್ಕಾಗಿ ಅಶ್ವಿನೀದೇವತೆಗಳು ಯುದ್ಧಕ್ಕೆ ಹೋಗಿ ಆ ರಾಜನ ಶತ್ರುಗಳನ್ನು ನಿಗ್ರಹಿಸಿ ರಾಜನನ್ನು ರಕ್ಷಿಸಿದರು ಎಂದು ಅರ್ಥವನ್ನು ವಿವರಿಸಿ **ತದೇತತ್ ಕುತ್ಸೇನಾಪ್ಯುಕ್ತಂ**—ಈ ವಿಷಯವನ್ನು ಕುತ್ಸನೂ ಕೂಡ ವರ್ಣಿಸಿರುವನು ಎಂದು ಹೇಳಿ—

**ಯಾಭಿರ್ವಿಶ್ಪಲಾಂ ಧನಸಾಮಥರ್ವ್ಯಂ ಸಹಸ್ರಮೀಳ್ಹ ಆಜಾವಜಿನ್ವತಂ ।**
**ಯಾಭಿರ್ವಶಮಶ್ವ್ಯಂ ಪ್ರೇಣಿಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೧೦)

ಎಂಬ ಈ ಋಕ್ಕನ್ನು ಉದಹರಿಸಿರುವರು ಮತ್ತು—

**ಪೃಥುಶ್ರವೋ ನಾಮ ರಾಜಾ ಸಂತತೈರ್ಬಹುಭಿರ್ದುರ್ಭಿಕ್ಷೈಃ ಪೀಡ್ಯಮಾನೋ ಅಶ್ವಿನಾವಿಯಾಜ ತುಷ್ಟಾವ ಚ । ತಸ್ಯಾಶ್ವಿನೌ ತು ಮಹತ್ಯಾ ವೃಷ್ಟ್ಯಾ ತಾನ್ಯಪನಿನ್ಯತುರಿತಿ ತದೇತದಿಹೋಚ್ಯತೇ ನಿರಹತಮಿತ್ಯಾದಿ । ದುಚ್ಛುನಾ ದುರ್ಭಿಕ್ಷಾ ಉಚ್ಯಂತೇ ॥**

ಪೃಥುಶ್ರವನೆಂಬ ರಾಜನು ಎಡಬಿಡದೆ ಪ್ರಾಪ್ತವಾಗುತ್ತಿರುವ ನಿರತಿಶಯವಾದ ಕ್ಷಾಮಗಳಿಂದ ಪೀಡಿತನಾಗಿ ಅಶ್ವಿನೀದೇವತೆಗಳನ್ನು ಹವಿರ್ಭಾಗಗಳಿಂದ ತೃಪ್ತಿಪಡಿಸಿ ಸ್ತುತಿಮಾಡಿದನು. ಅವರು ಅದರಿಂದ ಸಂತುಷ್ಟರಾಗಿ ಇಂದ್ರನೊಡನೆ ಸೇರಿ ಬಹಳವಾದ ಮಳೆಯು ಬರುವಂತೆ ಮಾಡಿ ಆ ಕ್ಷಾಮವನ್ನು ನಾಶಮಾಡಿದರು ಎಂಬ ವಿಷಯವು ನಿರಹತಂ ಎಂಬ ಪದದಿಂದ ಇಲ್ಲಿ ವ್ಯಕ್ತವಾಗುತ್ತದೆ—ಎಂದು ವಿವರಿಸಿ, ದುಚ್ಛುನಾ ಎಂಬ ಪದಕ್ಕೆ ದುರ್ಭಿಕ್ಷ (ಕ್ಷಾಮ) ಎಂಬ ಅರ್ಥವನ್ನೂ, ಅರಾತಿ ಶಬ್ದಕ್ಕೆ ದಾನವನ್ನು ಮಾಡದಿರುವ ಎಂದೂ ಅರ್ಥವನ್ನು ವಿವರಿಸಿರುತ್ತಾರೆ. ಈ ಅರಾತಿ ಎಂಬ ಪದವು ಯಾವನಾದರೂ, ಯಾರಿಗಾದರೂ, ಏನನ್ನೂ ದಾನಮಾಡಲು ಶಕ್ತನಾಗದಿರುವಷ್ಟು ಪ್ರತಿಬಂಧಕವನ್ನು ಉಂಟುಮಾಡುವ ಎಂದು ಅರ್ಥವನ್ನು ಬೋಧಿಸುವುದರಿಂದ ಕ್ಷಾಮದ ಸಾಮರ್ಥ್ಯವನ್ನು ವಿಶದವಾಗಿ ಉಪಪಾದನೆ ಮಾಡಿ ದುಚ್ಛುನಾ ಎಂಬ ಪದಕ್ಕೆ ವಿಶೇಷಣಮಾಡಿರುತ್ತಾರೆ.

**ವಶಂ**—ಈ ಶಬ್ದಕ್ಕೆ ಭಾಷ್ಯಕಾರರು ವಶನೆಂಬ ಹೆಸರಿನ ಋಷಿಯನ್ನು ಎಂದು ಹೇಳಿರುವರು. ಇವನನ್ನು ಅಶ್ವಿನೀದೇವತೆಗಳು ರಕ್ಷಿಸಿದರೆಂಬ ವಿಷಯದಲ್ಲಿ ಋ. ಸಂ. ೧-೧೧೨-೧೦; ೧-೧೧೬-೨೧; ೮-೮-೨೦; ೮-೨೪-೧೪; ೮-೪೬-೨೧; ೮-೪೬-೨೩; ೮-೫೦-೯; ೧೦-೪೦-೭ ಎಂಬ ಋಕ್ಕುಗಳಲ್ಲಿ ಈ ಋಷಿಯ ಪ್ರಸ್ತಾಪವಿರುವುದು. ಕೆಲವು ಋಕ್ಕುಗಳಲ್ಲಿ ಇವನ ಹೆಸರನ್ನು ವಶ ಅಥವಾ ವಶ ಆಶ್ವ್ಯನೆಂದು ಹೇಳಿದೆ. ಈ ಋಷಿಯ ಎಂದರೆ ವಶೋಽಶ್ವ್ಯಃ ಎಂಬ ಋಷಿದೃಷ್ಟವಾದ ಒಂದು ಸೂಕ್ತವು ಎಂಟನೆಯ ಮಂಡಲದಲ್ಲಿರುವುದು. ಈ ಸೂಕ್ತದಲ್ಲಿ ಎಂದರೆ ಋ ಸಂ· ೮-೪೬ ರಲ್ಲಿ ೩೩ ಋಕ್ಕುಗಳಿರುವವು.

**ಪೃಥುಶ್ರವಸಃ**—ಪೃಥುಶ್ರವಸ್ ಅಥವಾ ಪೃಥುಶ್ರವಸ್ ಕಾನೀತ ಎಂಬುವನು ಒಬ್ಬ ರಾಜನು. ಇವನು ಮೇಲೆ ಹೇಳಿದ (ಈ ಋಕ್ಕಿನಲ್ಲಿ ಹೇಳಿರುವ) ವಶನೆಂಬ ಋಷಿಗೆ ಮಾಡಿದ ದಾನಸ್ತುತಿಯ ಪ್ರಶಂಸೆಯು ಋ. ಸಂ. ೮-೪೬-೨೧ ರಿಂದ ೨೩ ಋಕ್ಕುಗಳಲ್ಲಿರುವುದು. ಅಲ್ಲಿ ವಶನೆಂಬ ಋಷಿಯು ತನಗೆ ಈ ಪೃಥುಶ್ರವಸ್ಸೆಂಬುವನು ಎಪ್ಪತ್ತು ಸಾವಿರ ಕುದುರೆಗಳನ್ನೂ, ಇನ್ನೂರು ಒಂಟೆಗಳನ್ನೂ, ಸಾವಿರ ಕೆಂಪು (ಹೆಣ್ಣು) ಕುದುರೆಗಳನ್ನೂ, ಕೆಂಪುಬಣ್ಣಮಿಶ್ರವಾದ ಒಂದು ಲಕ್ಷ ಗೋವುಗಳನ್ನೂ ಕೊಟ್ಟನೆಂದೂ ಈ ಕಾನೀತ ಪೃಥುಶ್ರವಸ್ಸೆಂಬುವನು ತುಂಬಾ ಐಶ್ವರ್ಯವಂತನೂ. ಧರ್ಮಿಷ್ಠನೂ ಕೀರ್ತಿವಂತನೂ, ಉದಾರಿಯಾದ ದಾನಿಯೂ ಆಗಿದ್ದನೆಂದೂ ವರ್ಣಿಸಿದಾನೆ.

**ಸನಯೇ**—ಎಂಬ ಪದವು **ಲಾಭಾಯ** ಪ್ರಾಪ್ತಿಗಾಗಿ (ಹೊಂದುವುದಕ್ಕಾಗಿ) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿ ಇರುವುದು. (ನಿ. ೩-೫)

**ಅಭ್ರಾತೇವ ಪುಂಸ ಏತಿ ಪ್ರತೀಚೀ ಗರ್ತಾರುಗಿವ ಸನಯೇ ಧನಾನಾಂ ।**
**ಜಾಯೇವ ಪತ್ಯ ಉಶತೀ ಸುವಾಸಾ ಉಷಾ ಹಸ್ರೇವ ನಿ ರಿಣೀತೇ ಅಪ್ಸಃ ॥**

(ಋ. ಸಂ. ೧-೧೨೪-೭)

**ಹಿನೋತಾ ನೋ ಅಧ್ವರಂ ದೇವಯಜ್ಯಾ ಹಿನೋತ ಬ್ರಹ್ಮ ಸನಯೇ ಧನಾನಾಂ ।**
**ಋತಸ್ಯ ಯೋಗೇ ವಿ ಷ್ಯಧ್ವಮೂಧಃ ಶ್ರುಷ್ಟೀವರೀರ್ಭೂತನಾಸ್ಮಭ್ಯಮಾಪಃ ॥**

(ಋ. ಸಂ. ೧೦-೩೦-೧೧)

ಈ ಋಕ್ಕುಗಳಲ್ಲಿ ಸನಾಯ ಎಂಬ ಪದವು ಲಾಭಾಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

**ವಸ್ತೋಃ**—ಎಂಬ ಪದವು ಹನ್ನೆರಡು ಅಹನರ್ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿರುತ್ತದೆ.

**ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।**
**ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ॥**

(ಋ. ಸಂ. ೧೦-೪೦-೨)

**ಪ್ರಾಚೀನಂ ಬರ್ಹಿಃ ಪ್ರದಿಶಾ ಪೃಥಿವ್ಯಾ ವಸ್ತೋರಸ್ಯಾ ವೃಜ್ಯತೇ ಅಗ್ರೇ ಅಹ್ನಾಂ ।**
**ವ್ಯು ಪ್ರಥತೇ ವಿತರಂ ವರೀಯೋ ದೇವೇಭ್ಯೋ ಅದಿತಯೇ ಸ್ಯೋನಂ ॥**

(ಋ. ಸಂ. ೧೦-೧೧೦-೪)

ಎರಡನೆಯ ಉದಾಹರಣೆಯಲ್ಲಿ ಈ ವಸ್ತೋಃ ಎಂಬ ಪದವು ಆಚ್ಛಾದನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದನ್ನು ವ್ಯಕ್ತಗೊಳಿಸುವುದು. ಇದರಿಂದ ವಸ್ತೋಃ ಎಂಬ ಪದಕ್ಕೆ ಅನೇಕಾರ್ಥಗಳು ಇರುತ್ತವೆ, ಎಂದು ತಿಳಿಯಬೇಕು.

॥ ವ್ಯಾಕರಣಪ್ರಕ್ರಿಯಾ ॥

**ಅವತಮ್**—ಅವ ರಕ್ಷಣೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಶ್ವಿನಾ**—ದ್ವಿವಚನ ಔ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಸಹಸ್ರಾ**—ಇದಕ್ಕೆ ಚತುರ್ಥೀವಿಭಕ್ತಿಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ.

**ಅಹತಮ್**—ಹನ ಹಿಂಸಾಗತ್ಯೋಃ ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ತಮಾದೇಶ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ಪಿಗೆ ಲುಕ್. **ಸಾರ್ವಧಾತುಕಮಪಿತ್** ಸೂತ್ರದಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ **ಅನುದಾತ್ತೋಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ ಅತಿಙಂತ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದುಚ್ಛುನಾಃ**—ಶುನಂ ಎಂದರೆ ಸುಖದ ಹೆಸರು. ದುಷ್ಟಂ ಶುನಂ ಸುಖಂ ಯಾಸಾಂ ತಾಃ ದುಚ್ಛುನಾಃ **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಆದ್ಯುದಾತ್ತಸ್ವರ ಬರುತ್ತದೆ.

**ಇಂದ್ರವಂತಾ**—ಇಂದ್ರಃ ಅನಯೋಃ ಅಸ್ತಿ ಇತಿ ಇಂದ್ರವಂತೌ. **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ದ್ವಿವಚನದಲ್ಲಿ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಡಾದೇಶ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ವೃಷಣೌ**—ವೃಷು ಸೇಚನೇ. ಧಾತು. **ಕನಿನ್‌ಯುವೃಷಿ**—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ಸಂಬೋಧನದ್ವಿವಚನಾಂತರೂಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೨೧ ॥



॥ ಸಂಹಿತಾಪಾಠಃ ॥

ಶರಸ್ಯ ಚಿದಾರ್ಚತ್ಕಸ್ಯಾವತಾದಾ ನೀಚಾದುಚ್ಚಾ ಚಕ್ರಥುಃ
ಪಾತವೇ ವಾಃ ।

ಶಯವೇ ಚಿನ್ನಾಸತ್ಯಾ ಶಚೀಭಿರ್ಜಸುರಯೇ ಸ್ತರ್ಯಂ
ಪಿಪ್ಯಥುರ್ಗಾಂ ॥ ೨೨ ॥

॥ ಪದಪಾಠಃ ॥

ಶರಸ್ಯ । ಚಿತ್ । ಆರ್ಚತ್ಽಕಸ್ಯ । ಅವತಾತ್ । ಆ । ನೀಚಾತ್ । ಉಚ್ಚಾ ।
ಚಕ್ರಥುಃ । ಪಾತವೇ । ವಾರಿತಿ ವಾಃ ।

ಶಯವೇ । ಚಿತ್ । ನಾಸತ್ಯಾ । ಶಚೀಭಿಃ । ಜಸುರಯೇ । ಸ್ತರ್ಯಂ । ಪಿಪ್ಯಥುಃ ।
ಗಾಂ ॥ ೨೨ ॥

॥ ಸಾಯಣಭಾಷ್ಯಂ ॥

ಆರ್ಚತ್ಕಸ್ಯ ಋಚತ್ಕಪುತ್ರಸ್ಯ ಶರಸ್ಯೈತತ್ಸಂಜ್ಞಸ್ಯಾಪಿ ಸ್ತೋತುಃ ಪಿಪಾಸಿತಸ್ಯ ಪಾತವೇ ಪಾನಾರ್ಥಂ ನೀಚಾನ್ನೀಚೀನಾದವತಾತ್ಕೂಪಾದುಚ್ಚಾ ಉಚ್ಚೈರುಪರಿಷ್ಠಾದ್ವಾರುದಕಂ ಹೇ ಅಶ್ವಿನಾ ಯುವಾಮಾ ಚಕ್ರಥುಃ । ಆಭಿಮುಖ್ಯೇನ ಕೃತವಂತೌ । ತಥಾ ಹೇ ನಾಸತ್ಯಾವಶ್ವಿನೌ ಶಚೀಭಿರ್ಯುಷ್ಮದೀಯೈಃ ಕರ್ಮಭಿಃ ಪರಿಚರಣೈರ್ಜಸುರಯೇ ಶ್ರಾಂತಾಯ ಶಯವೇ ಚಿತ್ ಶಯುನಾಮ್ನ ಋಷಯೇ ಸ್ತರ್ಯಂ ನಿವೃತ್ತಪ್ರಸವಾಂ ಗಾಮಗ್ನಿಹೋತ್ರಾರ್ಥಸ್ಯ ಪಯಸೋ ದೋಗ್ಧ್ರೀಂ ಪಿಪ್ಯಥುಃ । ಪಯಸಾ ಯುವಾಮಾಪೂರಿತವಂತೌ ॥ ಪಾತವೇ । ಪಾ ಪಾನೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ಜಸುರಯೇ । ಜಸು ಹಿಂಸಾಯಾಂ । ಜಸಿಸಹೋರುರಿನ್ । ಉ. ೨-೭೩ । ಸ್ತರ್ಯಂ । ಸ್ತೀರ್ಯತ ಆಚ್ಛಾದ್ಯತೇ ಪ್ರಸವಸಾಮರ್ಥ್ಯಾಭಾವೇನೇತಿ ಸ್ತರೀಃ । ಅವಿತೃಸ್ತೃತಂತ್ರಿಭ್ಯ ಈಃ । ಉ. ೩-೧೫೮ । ಇತೀಕಾರಪ್ರತ್ಯಯಃ । ವಾ ಛಂದಸೀತ್ಯಮಿ ಪೂರ್ವತ್ವಸ್ಯ ವಿಕಲ್ಪಿತತ್ವಾದಭಾವೇ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ಪಿಪ್ಯಥುಃ । ಪ್ಯಾಯೀ ವೃದ್ಧೌ । ಲಿಟಿ ವ್ಯತ್ಯಯೇನ ಪರಸ್ಮೈಪದಂ । ಲಿಡ್ಯಙೋಶ್ಚ । ಪಾ. ೬-೧-೨೯ । ಇತಿ ಪೀಭಾವಃ ॥

॥ ಪ್ರತಿಪದಾರ್ಥ ॥

**ಆರ್ಚತ್ಕಸ್ಯ**—ಋಚತ್ಕ ಪುತ್ರನಾದ । **ಶರಸ್ಯ ಚಿತ್**—ಶರ ಎಂಬುವನಿಗೆ । **ಪಾತವೇ**—ಪಾನಕ್ಕಾಗಿ । **ನೀಚಾತ್**—ಆಳವಾದ । **ಅವತಾತ್**—ಬಾವಿಯಿಂದ । **ವಾಃ**—ಉದಕವನ್ನು । **ಉಚ್ಚಾ**—ಮೇಲಕ್ಕೆ । **ಆ ಚಕ್ರಥುಃ**—(ಬರುವಂತೆ) ಮಾಡಿದಿರಿ । (**ತಥಾ**—ಹಾಗೆಯೇ) । **ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ಶಚೀಭಿಃ**—(ನಿಮ್ಮ) ಕರ್ಮಗಳಿಂದ । **ಜಸುರಯೇ**—ಶ್ರಾಂತನಾದ । **ಶಯವೇ ಚಿತ್**—ಶಯು ಎಂಬ ಋಷಿಯ । **ಸ್ತರ್ಯಂ**—ಗೊಡ್ಡಾದ । **ಗಾಂ**—ಗೋವನ್ನು । **ಪಿಪ್ಯಥುಃ**—(ಕ್ಷೀರದಿಂದ) ಪೂರ್ಣವನ್ನಾಗಿ ಮಾಡಿದಿರಿ.

॥ ಭಾವಾರ್ಥ ॥

ಋಚತ್ಕ ಪುತ್ರನಾದ (ನೀರಡಿಸಿದ್ದ) ಶರ ಎಂಬುವನ ಪಾನಕ್ಕೋಸ್ಕರ, ಆಳವಾದ ಬಾವಿಯಲ್ಲಿದ್ದ ನೀರನ್ನು ಮೇಲಕ್ಕೆ (ಬರುವಂತೆ) ಮಾಡಿದಿರಿ. (ಹಾಗೆಯೇ) ಎಲೈ ನಾಸತ್ಯರೇ, ಶ್ರಾಂತನಾದ ಶಯು ಎಂಬ ಋಷಿಯ (ಯಜ್ಞ ಕರ್ಮಗಳಿಗೋಸ್ಕರ ಅವನ) ಗೊಡ್ಡಾದ ಗೋವನ್ನು (ನಿಮ್ಮ) ಕರ್ಮಗಳಿಂದ ಕ್ಷೀರಯುಕ್ತವನ್ನಾಗಿ ಮಾಡಿದಿರಿ. (ಹಾಲು ಕೊಡುವಂತೆ ಮಾಡಿದಿರಿ.)

## English Translation

You raised the water from the bottom to the top of the well, for the drinking of Shara, the son of Richatka, and by your powers, Nasatyas, you filled, for the sake of the weary Shayu, the barren cow (with milk).

॥ ವಿಶೇಷ ವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಋಚತ್ಕನೆಂಬ ಋಷಿಯ ಪುತ್ರನಾದ ಶರನೆಂಬ ಋಷಿಗೆ ಸಹಾಯಮಾಡಿರುವುದೂ ಮತ್ತು ಅಶ್ವಿನೀದೇವತೆಗಳ ಶುಶ್ರೂಷೆಯಿಂದ ಆಯಾಸವನ್ನು ಹೊಂದಿದ ಶಯು ಎಂಬ ಋಷಿಗೆ, ಸಹಾಯ ಮಾಡಿರುವ ಅಶ್ವಿನೀದೇವತೆಗಳ ಪ್ರಭಾವವೂ ಉಕ್ತವಾಗಿರುವುದು. ಸ್ಕಂದಸ್ವಾಮಿಗಳು ಭಾಷ್ಯದಲ್ಲಿ ಈ ವಿಷಯವನ್ನೂ ಹೇಳಿರುವರು.—

**ಶರೋ ನಾಮ ಋಷಿಃ ಸಃ ಮರುದೇಶೇ ಗಚ್ಛನ್ ಪಿಪಾಸಿತಸ್ಸನ್ ಸುದೂರತೋಽಯಂ ಕೂಪಂ ದದರ್ಶ ಸ ತತಃ ಪಾತುಮಶಕ್ನುವನ್ ಅಶ್ವಿನೌ ತುಷ್ಟಾವ । ತಸ್ಯಾಶ್ವಿನೌ ಸುಲಭ್ಯಂ ಚಕ್ರತುರಿತಿ । ತದೇತದಿಹೋಚ್ಯತೇ ಶರಸ್ಯ ಚಿದಿತ್ಯಾದಿನಾ ।**

ಶರನೆಂಬ ಋಷಿಯು ಮರುಳುಕಾಡಿನಲ್ಲಿ ಹೋಗುತ್ತಿರುವಾಗ ಬಾಯಾರಿಕೆಯಾದಕಾರಣ ನೀರನ್ನು ಹುಡುಕಿದಾಗ ಒಂದು ಆಳವಾದ ಬಾವಿಯಲ್ಲಿ ನೀರನ್ನು ಕಂಡು ಅದನ್ನು ಹೊಂದಲು ಕಷ್ಟವಾಗಿರುವುದರಿಂದ ಸುಲಭವಾಗಿ ಆ ನೀರು ದೊರೆಯುವುದಕ್ಕಾಗಿ ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿದನು. ಅವರು ಅವನ ಸ್ತುತಿಗೆ ಮೆಚ್ಚಿ ಆಳದಲ್ಲಿ ಇದ್ದ

ಆ ಭಾವಿಯ ನೀರು ಅವನಿಗಾಗಿ ಮೇಲಕ್ಕೆ ಉಕ್ಕಿ ಬರುವಂತೆ ಮಾಡಿ ಅವನ ಬಾಯಾರಿಕೆಯು ಅಣಗುವಂತೆಮಾಡಿ ಆ ಋಷಿಯನ್ನು ರಕ್ಷಿಸಿದರು. ಶರಸ್ಯ ಚಿತ್ ಎಂಬ ಋಕ್ಕಿನಲ್ಲಿ ಈ ಇತಿಹಾಸವು ಹೇಳಲ್ಪಟ್ಟಿರುತ್ತದೆ.

**ಅವತಾತ್**—ಅವಶಬ್ದವೂ ಕೂಪಃ ಕಾತುಃ ಎಂಬ ಹದಿನಾಲ್ಕು ಕೂಪನಾಮಗಳಲ್ಲಿ (ನಿ. ೩–೧೯) ಉಕ್ತವಾಗಿ ರುವುದರಿಂದ ಕೂಪ (ಭಾವಿ) ಎಂದು ಅರ್ಥ.

ವಾಃ—**ಉದಕಂ** ವಾಃ ಎಂಬ ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿರುವುದ ರಿಂದ ನೀರು ಎಂದು ಅರ್ಥ. ವಾಃ ಎಂಬ ಪದವು.

**ಕದಾ ವಸೋ ಸ್ತೋತ್ರಂ ಹರ್ಯತ ಆವ ಶ್ಮಶಾ ರುಧದ್ವಾಃ ।**
**ದೀರ್ಘಂ ಸುತಂ ವಾತಾಪ್ಯಾಯ ॥**

(ಋ. ಸಂ. ೧೦–೧೦೫–೧)

ಎಂಬ ಋಕ್ಕಿನಲ್ಲಿ ಉದಕವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು.

**ಜಸುರಯೇ—ಶ್ರಾಂತಾಯ** ಜಸುರಿಃ (ನಿ. ೪–೨೪) ನಿರುಕ್ತಕಾರರು ಜಸುರಿಃ ಎಂಬ ಪದದ ಅರ್ಥವನ್ನು ವಿವರಿಸುವಾಗ—

**ಉತ ಸ್ಮೈನಂ ವಸ್ತ್ರಮಥಿಂ ನ ತಾಯುಮನು ಕ್ರೋಶಂತಿ ಕ್ಷಿತಯೋ ಭರೇಷು ।**
**ನೀಚಾಯಮಾನಂ ಜಸುರಿಂ ನ ಶ್ಯೇನಂ ಶ್ರವಶ್ಚಾಚ್ಛಾ ಪಶುಮಚ್ಚ ಯೂಥಂ ॥**

(ಋ. ಸಂ ೪–೩೮–೫)

ಎಂಬ ಋಕ್ಕನ್ನು ಉದಹರಿಸಿ **ಜಸುರಿಂ** ಎಂಬುದಕ್ಕೆ **ಜಸ್ತಂ ಬದ್ಧಂ** ಕಟ್ಟಲ್ಪಟ್ಟು ಆಯಾಸಗೊಂಡಿರುವ ಎಂದು ಅರ್ಥವನ್ನು ವಿವರಿಸಿರುವರು.

**ಸ್ತರ್ಯಂ—ನಿವೃತ್ತಪ್ರಸವಾಂ । ಸ್ತೀರ್ಯತೇ ಆಚ್ಛಾದ್ಯತೇ ಪ್ರಸವಸಾಮರ್ಥ್ಯಾಭಾವೇನ ಇತಿ ಸ್ತರೀಃ** ಗರ್ಭಧಾರಣೆಯನ್ನು ಹೊಂದಿ ಕರುವನ್ನು (ಪ್ರಸುವಿಸುವ) ಈಯುವ ಶಕ್ತಿಯಿಲ್ಲದ ಹಸುವಿಗೆ ಸ್ತರೀ ಎಂದು ಹೆಸರು.

**ಗಾಂ—ಪಿಪ್ಯಥುಃ—ಪಯಸೋ ದೋಗ್ಧ್ರೀಂ ಪಯಸಾ ಆಪೂರಿತವಂತೌ ।** ಹಾಲುಕರೆಯುವ ಹಸುವನ್ನಾಗಿ ಮಾಡಿದರು ಎಂದು ಅರ್ಥ—

**ಶಚೀಭಿಃ ಜಸುರಯೇ ಶಯವೇ**—ಎಂಬ ಪದಗಳಿಗೆ ಶಯು ಎಂಬ ಋಷಿಯು ಅಶ್ವಿನೀದೇವತೆಗಳನ್ನು ಸೇವಿಸಿಆಯಾಸಪಟ್ಟವನು ಎಂದು ಸಾಯಣರು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು **ಶಯವೇ ಚಿತ್ ರಾಜ್ಞೇ ಶಚೀಭಿಃ ಸ್ವಾಭಿಃ ಅತಿಶಯವತೀಭಿಃ ಪ್ರಜ್ಞಾಭಿಃ ಕರ್ಮಭಿರ್ವಾ ಜಸುರಯೇ ಶತ್ರೂಣಾಂ ತಾಡಯಿತ್ರೇ ತಾಡಿತಾಯ ವಾ** ತನ್ನ ನಿರತಿಶಯವಾದ ಅಥವಾ ಉತ್ತಮೋತ್ತಮವಾದ ಬುದ್ಧಿ ಅಥವಾ ಕೆಲಸಗಳಿಂದ ಕೂಡಿರುವ, ಶತ್ರುಗಳನ್ನು ನಾಶಪಡಿಸುವ ಅಥವಾ ಶತ್ರುಗಳಿಂದ ಏಟನ್ನು ತಿಂದಿರುವ ಶಯು ಎಂಬ ರಾಜನು ಎಂದು ಅರ್ಥವನ್ನು ವಿವರಿಸಿರುವರು. ಶಯುವೆಂಬವನ ಒಂದು ಹಸುವೂ ಕರುವನ್ನು ಹಾಕುವ ಸಾಮರ್ಥ್ಯವಿಲ್ಲದೆ (ಗೊಡ್ಡಾಗಿ)

ಇರುವಾಗ ಅದನ್ನು ಹಾಲುಕರೆಯುವಂತೆ ಮಾಡಿದ ಅಶ್ವಿನೀದೇವತೆಗಳ ಮಹಿಮೆಯು ಎರಡು ಭಾಷ್ಯಗಳಲ್ಲಿಯೂ ವರ್ಣಿತವಾಗಿದೆ.—ಸ್ಕಂದಸ್ವಾಮಿಗಳು ಕುತ್ಸೇನಾಪ್ಯುಕ್ತಂ—ಕುತ್ಸಋಷಿಯೂ ಕೂಡ ಈವಿಷಯವನ್ನು ಹೇಳಿರುವನು ಎಂದು ಉದಹರಿಸಿರುವರು—

**ಅಧೇನುಂ ದಸ್ರಾ ಸ್ತರ್ಯ೧ಂ ವಿಷಕ್ತಾಮಪಿನ್ವತಂ ಶಯವೇ ಅಶ್ವಿನಾ ಗಾಂ ।**

(ಋ. ಸಂ. ೧–೧೧೭–೨೦)

**ಯಾಭಿರ್ಧೇನುಮಸ್ವಂ೧ ಪಿನ್ವಥೋ ನರಾ ತಾಭಿರೂ ಷು ಊತಿಭಿರಶ್ವಿನಾಗತಂ ॥**

(ಋ. ಸಂ. ೧–೧೧೨–೩)

ಈ ಋಕ್ಕುಗಳನ್ನು ಉದಹರಿಸಿರುವರು. ಈ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ಮನುಷ್ಯರು ಸ್ತೋತ್ರಮಾಡುವ ಸ್ತೋತ್ರಕ್ಕೆ ಮೆಚ್ಚಿ ಎಲ್ಲರಿಗೂ ಒಂದೇ ಸಮನಾಗಿ ಉಪಕಾರಮಾಡಿರುವರು ಎಂದು ವರ್ಣಿಸಿದೆ.

**ಶಯವೇ**—ಇವನನ್ನು ಅಶ್ವಿನೀದೇವತೆಗಳು ರಕ್ಷಿಸಿದ ವಿಷಯವು ಋ. ಸಂ. ೧–೧೧೨–೧೬ : ೧–೧೧೬–೨೨ ; ೧–೧೧೭–೨೦ ; ೧–೧೧೮–೮ ; ೧–೧೧೯–೬ : ೬–೬೨–೭ ; ೭–೬೨–೮ ; ೧೦–೩೯–೧೩ ; ೧೦–೪೦–೮ ಎಂಬ ಋಕ್ಕುಗಳಲ್ಲಿ ವರ್ಣಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಆರ್ಚತ್ಕಸ್ಯ**—ಅರ್ಚತ್ಕಸ್ಯ ಅಪತ್ಯಮ್. ಆರ್ಚತ್ಕಃ ತಸ್ಯ. **ತಸ್ಯಾಪತ್ಯಮ್** (ಪಾ. ಸೂ. ೪–೧–೯೨ ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭–೨–೧೧೭) ಎಂಬುದರಿಂದ ಆದಿವೃದ್ಧಿ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ಚಕ್ರಥುಃ**—ಡುಕೃಞ್ ಕರಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪಾತವೇ**—ಪಾ ಪಾನೇ. ಧಾತು. ತುಮುನರ್ಥತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩–೪–೯) ಎಂಬುದರಿಂದ ತವೇನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬–೧–೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಕೃನ್ಮೇಜಂತಃ** (ಪಾ. ಸೂ. ೧–೧–೩೯) ಎಂಬುದರಿಂದ ಏಜಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಜಸುರಯೇ**—ಜಸು ಹಿಂಸಾಯಾಮ್. **ಜಸಿಸಹೋರುರಿನ್** (ಉ. ಸೂ. ೨–೨೩೧) ಎಂಬುದರಿಂದ ಉರಿನ್ ಪ್ರತ್ಯಯ. ಜಸುರಿ ಶಬ್ದವಾಗುತ್ತದೆ. ನಿತ್ತಾದುದರಿಂದ ಹಿಂದಿನಂತೆ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸ್ತರ್ಯಮ್**—ಸ್ತೃಞ್ ಆಚ್ಛಾದನೇ ಧಾತು. ಸ್ತೀರ್ಯತೇ ಆಚ್ಛಾದ್ಯತೇ, ಪ್ರಸವಸಾಮರ್ಥ್ಯಾಭಾವೇನ ಇತಿ ಸ್ತರೀಃ (ಪ್ರಸವಶಕ್ತಿ ಇಲ್ಲದಿರುವುದು) **ಅವಿತೃಸ್ತೃತಂತ್ರಿಭ್ಯ ಈಃ** (ಪಾ. ಸೂ. ೩-೪೩೮) ಎಂಬುದರಿಂದ ಈ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಇದಕ್ಕೆ ಅಮ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಅಮಿನ ಪೂರ್ವರೂಪವು ವಿಕಲ್ಪಿತವಾದುದರಿಂದ ಅದು ಬಾರದಿರುವಾಗ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಎಂಬುದರಿಂದ ಪರದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ.

**ಪಿಪ್ಯಥುಃ**—ಪ್ಯಾಯೀ ವೃದ್ಧೌ ಧಾತು. ಆತ್ಮನೇಪದಿಯಾದರೂ ಲಿಟಿನಲ್ಲಿ **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಪ್ರತ್ಯಯ ಬರುತ್ತದೆ. ಮಧ್ಯಮಪುರುಷದ್ವಿವಚನದಲ್ಲಿ ಅಥುಸಾದೇಶ. **ಲಿಟ್ಯಙೋಶ್ಚ** (ಪಾ. ಸೂ. ೬-೧-೨೯) ಎಂಬುದರಿಂದ ಧಾತುವಿಗೆ ಪೀ ಭಾವ ಬರುತ್ತದೆ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಇಯಙಾದೇಶ ಪ್ರಾಪ್ತವಾದರೆ **ಏರನೇಕಾಚೋಽಸಂಯೋಗಪೂರ್ವಸ್ಯ** (ಪಾ. ಸೂ. ೬-೪-೮೨) ಎಂಬುದರಿಂದ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨೨ ॥

---

॥ ಸಂಹಿತಾಪಾಠಃ ॥

ಅವಸ್ಯತೇ ಸ್ತುವತೇ ಕೃಷ್ಣಿಯಾಯ ಋಜೂಯತೇ ನಾಸತ್ಯಾ ಶಚೀಭಿಃ ।
ಪಶುಂ ನ ನಷ್ಟಮಿವ ದರ್ಶನಾಯ ವಿಷ್ಣಾಪ್ವಂ ದದಥುರ್ವಿಶ್ವಕಾಯ ॥ ೨೩ ॥

‖ ಪದಪಾಠಃ ‖

ಅವಸ್ಯತೇ । ಸ್ತುವತೇ । ಕೃಷ್ಣಿಯಾಯ । ಋಜುಽಯತೇ । ನಾಸತ್ಯಾ । ಶಚೀಭಿಃ । ಪಶುಂ । ನ । ನಷ್ಟಂಽಇವ । ದರ್ಶನಾಯ । ವಿಷ್ಣಾಪ್ವಂ । ದದಥುಃ । ವಿಶ್ವ-ಕಾಯ ‖ ೨೩ ‖

‖ ಸಾಯಣಭಾಷ್ಯಂ ‖

ಅವಸ್ಯತೇಽವನಂ ರಕ್ಷಣಮಾತ್ಮನ ಇಚ್ಛತೇ ಸ್ತುವತೇ ಸ್ತುತಿಂ ಕುರ್ವತೇ ಕೃಷ್ಣಿಯಾಯ । ಕೃಷ್ಣೋ ನಾಮ ಕಶ್ಚಿತ್ । ತಸ್ಯ ಪುತ್ರಾಯ ಋಜೂಯತೆ ಆರ್ಜವಮಿಚ್ಛತೇ ವಿಶ್ವಕಾಯೈತನ್ನಾಮ್ನೇ ಋಷಯೇ ಹೇ ನಾಸತ್ಯಾ ಯುವಾಂ ಶಚೀಭಿರಾತ್ಮೀಯೈಃ ಕರ್ಮಭಿರ್ವಿಷ್ಣಾಪ್ವಂ ನಾಮ ವಿನಷ್ಟಂ ಪುತ್ರಂ ದರ್ಶನಾಯ ದರ್ಶನಾರ್ಥಂ ದದಥುಃ । ದತ್ತವಂತೌ । ತತ್ರ ದೃಷ್ಟಾಂತಃ । ಪಶುಂ ನ ನಷ್ಟ-ಮಿವ । ಏಕ ಉಪಮಾರ್ಥೀಯಃ ಪೂರಕಃ । ಯಥಾ ಕಶ್ಚಿದ್ವಿನಷ್ಟಂ ಪಶುಂ ಸ್ವಾಮಿನೋ ದೃಷ್ಟಿಪಥಂ ಪ್ರಾಪಯತಿ ತದ್ವತ್ ‖ ಅವಸ್ಯತೇ । ಅವಸ್ಶಬ್ದಾತ್ಸುಪ ಆತ್ಮನಃ ಕ್ಯಚ್ । ಚತುರನುಮ ಇತಿ ವಿಭಕ್ತೇ-ರುದಾತ್ತತ್ವಂ । ಕೃಷ್ಣಿಯಾಯ । ಕೃಷ್ಣಶಬ್ದಾದಪತ್ಯಾರ್ಥೇ ಛಾಂದಸೋ ಘಃ ‖

‖ ಪ್ರತಿಪದಾರ್ಥ ‖

ಹೇ ನಾಸತ್ಯಾ—ಎಲೈ ನಾಸತ್ಯರೇ । ಅವಸ್ಯತೇ—ರಕ್ಷಣಾರ್ಥಿಯಾದ । ಸ್ತುವತೇ—(ನಿಮ್ಮನ್ನು) ಸ್ತುತಿಸುತ್ತಿರುವ । ಕೃಷ್ಣಿಯಾಯ—ಕೃಷ್ಣ ಎಂಬುವನ ಪುತ್ರನಾತ । ಋಜೂಯತೇ—ಋಜುಮಾರ್ಗವನ್ನೇ ಇಚ್ಛಿಸುವ । ವಿಶ್ವಕಾಯ—ವಿಶ್ವಕನೆಂಬುವನಿಗೆ । ವಿಷ್ಣಾಪ್ವಂ—ವಿಷ್ಣಾಪ್ವು ಎಂಬ (ನಷ್ಟನಾಗಿದ್ದ ಪುತ್ರ ನನ್ನು । ನಷ್ಟಮಿವ—ನಷ್ಟವಾದ (ತಪ್ಪಿಸಿಕೊಂಡು ಹೋಗಿದ್ದ) । ಪಶುಂ ನ—ಪಶುವನ್ನು ತಂದುಕೊಡುವಂತೆ । ದರ್ಶನಾರ್ಥಂ—ದರ್ಶನಕ್ಕೋಸ್ಕರ । ಶಚೀಭಿಃ—(ನಿಮ್ಮ) ಕರ್ಮಗಳಿಂದ । ದದಥುಃ—ಕೊಟ್ಟಿರಿ.

‖ ಭಾವಾರ್ಥ ‖

ಎಲೈ ನಾಸತ್ಯರೇ, (ನಿಮ್ಮನ್ನು) ಸ್ತುತಿಸಿದ, (ನಿಮ್ಮ) ರಕ್ಷಣಾರ್ಥಿಯಾದ, ಋಜುಮಾರ್ಗೇಚ್ಛುವಾದ, ಕೃಷ್ಣ ಎಂಬುವನ ಮಗನಾದ ವಿಶ್ವಕನೆಂಬುವನಿಗೆ, ನಷ್ಟನಾಗಿದ್ದ (ಅವನ ಮಗ) ವಿಷ್ಣಾಪ್ವುವು, ನಷ್ಟನಾಗಿದ್ದ ಪಶುವಿನ ನಂತೆ, ನಿಮ್ಮ ಕರ್ಮಗಳಿಂದ ಕಾಣುವಂತೆ ಮಾಡಿದಿರಿ.

## English Translation.

Nasatyas, by your acts you restored to Vishwaka, the son of Krishna, soliciting your protection, adoring you, and a lover of rectitude, his son Vishnapu, (welcome) to his sight as an animal that had been lost.

॥ ವಿಶೇಷವಿಷಯಗಳು ॥

**ಪಶುಂ ನ ನಷ್ಟಮಿವ**—**ಏಕಃ ಉಪಮಾರ್ಥೀಯಃ ಪೂರಕಃ । ಯಥಾ ವಿನಷ್ಟಂ ಕಶ್ಚಿತ್ ಪಶುಂ ಸ್ವಾಮಿನೋ ದೃಷ್ಟಪಥಂ ಪ್ರಾಪಯತಿ ತದ್ವತ್** ನ ಎಂಬುವ ಪದವು ಉಪಮಾರ್ಥಕವಾಗಿರುವಂತೆ ಇವ ಎಂಬುವುದೂ ಉಪಮಾರ್ಥದಲ್ಲಿ ಇರುವುದರಿಂದ ನ ಎಂಬುವುದು ಇಲ್ಲಿ ಪದಪೂರಕವೆಂದು ಸಾಯಣರು ಹೇಳಿರುವರು. ಸ್ಕಂದಸ್ವಾಮಿಗಳೂ ಕೂಡ **ಇವಶಬ್ದೋತ್ರ ನೇತ್ಯನೇನ ಪೌನರುಕ್ತ್ಯಾತ್ ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗಃ** (ನಿ. ೭-೩೧) **ಇತಿ ಪದಪೂರಣಃ ಯಥಾ ಪಶುಂ ನಷ್ಟಂ ಕಶ್ಚಿದಾನೀಯ ಕಸ್ಮೈಚಿದ್ದರ್ಶನಾಯ ದದ್ಯಾತ್ ಏವಂ ।** ಇಲ್ಲಿ ಇವ ನ, ಎಂಬ ಎರಡು ಉಪಮಾವಾಚಕಗಳು ಇರುವಕಾರಣ ಪುನರುಕ್ತಿಯಾಗುವುದರಿಂದ, ನ ಎಂಬುವ ಪದಕ್ಕೆ **ಉಪಮಾ** ಎಂಬ ಅರ್ಥವಿರುವಂತೆ **ಸಂಪ್ರತಿ** ಎಂಬ ಅರ್ಥವೂ ಇರುವುದರಿಂದ ಇಲ್ಲಿ ನ ಎಂಬುವುದು ಪದಪೂರ್ವಕವಾಗಿರುವುದು ಎಂದು ವಿವರಿಸಿರುವರು.

**ವಿಶ್ವಕೋ ನಾಮ ರಾಜರ್ಷೇಃ ಪುತ್ರಃ ಪ್ರಮಾದಾದುಪನನಾಶ ಸ್ನೇಹಾದ್ವಿಪತ್ತ್ಯಾಶಂಕಯಾ ತಸ್ಯ ಪಾಲನಂ ಪುನಶ್ಚ ದರ್ಶನಂ ಇಚ್ಛನ್ ಅಶ್ವಿನೌ ತುಷ್ಟಾವ। ತಸ್ಮೈ ತಮಾನೀಯ ಅಶ್ವಿನೌ ದದತುರಿತಿ । ತದೇತದಿಹೋಚ್ಯತೇ ಅವಸ್ಯವ ಇತ್ಯಾದಿನಾ ।** ವಿಶ್ವಕನೆಂಬ ರಾಜರ್ಷಿಯ ಮಗನು ಪ್ರಮಾದದಿಂದ ತಂದೆಯ ದೃಗ್ಗೋಚರನಾಗದೆ ಇರುವಾಗ ಪುತ್ರನ ವಿರಹದಿಂದಲೂ, ಅವನಲ್ಲಿದ್ದ ಪ್ರೇಮದಿಂದಲೂ, (ಅವನಿಗೆ) ಮಗನಿಗೆ ವಿಪತ್ತು ಬಂದಿರುವುದು ಎಂದು ಸಂದೇಹಪಟ್ಟುಕೊಂಡಿದ್ದ ವಿಶ್ವಕನು, ತನ್ನ ಪುತ್ರನನ್ನು ನೋಡಬೇಕು ಎಂದು ವ್ಯಸನಪಡುತ್ತಾ ಅಶ್ವಿನೀದೇವತೆಗಳನ್ನು ಸ್ತುತಿಮಾಡಲು ಅಶ್ವಿನೀದೇವತೆಗಳು ಆ ಮಗನನ್ನು ವಿಶ್ವಕನ ಬಳಿಗೆ ಕರೆದುಕೊಂಡು ಬಂದು ತೋರಿಸಿದರು. ಇದು ತಪ್ಪಿಸಿಕೊಂಡು ಹೋಗಿದ್ದ ಹಸುವನ್ನು ಇನ್ನೊಬ್ಬನು ಹುಡುಕಿ ಕರೆದುಕೊಂಡು ಬಂದು ತೋರಿಸಿಕೊಡುವಹಾಗೆ ವಿಶ್ವಕರಾಜನ ಮಗನನ್ನು ಅಶ್ವಿನೀ ದೇವತೆಗಳು ಕರೆದು ತಂದು ತೋರಿಸಿರುವರು ಎಂದು ಇಲ್ಲಿ ವರ್ಣಿಸಿದೆ.

**ಕೃಷ್ಣಿಯಾಯ**—**ಕೃಷ್ಣೋ ನಾಮ ಕಶ್ಚಿತ್ । ತಸ್ಯ ಪುತ್ರಃ ಕೃಷ್ಣಿಯಃ ।** ಕೃಷ್ಣನೆಂದು ಒಬ್ಬನ ಹೆಸರು. ಕೃಷ್ಣನ ಮಗನು ಎಂಬ ಅರ್ಥದಲ್ಲಿ ಪ್ರತ್ಯಯವು ಬಂದು ಕೃಷ್ಣಿಯ ಎಂದು ರೂಪವಾಗುತ್ತದೆ.

**ವಿಶ್ವಕಾಯ**—**ಏತತ್ಸಂಜ್ಞಾಕಾಯ । ವಿಶ್ವಕ ಇತಿ ಸಂಜ್ಞಾಯಸ್ಯ**—ವಿಶ್ವಕ ಎಂದು ಹೆಸರು ಉಳ್ಳವನೆಂದು ಅರ್ಥ.

**ಋಜೂಯತೇ**—**ಋಜುಂ ಆತ್ಮನಃ ಇಚ್ಛತೇ ।** ವಂಚನೆಯೂ ತುಂಟತನವೂ ಇಲ್ಲದಿರುವ ಸರಿಯಾದ ಸತ್ಪುರುಷರ ನಡತೆಯಲ್ಲಿರುವುದಕ್ಕಾಗಿ ಅಪೇಕ್ಷೆಯುಳ್ಳವನಿಗೆ ಎಂದು ಅರ್ಥ.

**ವಿಷ್ಣಾಪ್ವಂ**—ವಿಷ್ಣಾಪ್ವು ಎಂಬುವನು ವಿಶ್ವಕ ಎಂಬುವನ ಪುತ್ರನು. ಇವನ ವಿಷಯವು ಈ ಋಕ್ಕಿನಲ್ಲಿಯೂ ಋ. ಸಂ. ೧-೧೧೭-೭ ; ೮-೮೬-೩ ; ೧೦-೬೫-೧೨ ಎಂಬ ಋಕ್ಕುಗಳಲ್ಲಿಯೂ ಹೇಳಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಅವಸ್ಯತೇ**—ಅವಃ-ರಕ್ಷಣಂ ಆತ್ಮನಃ ಇಚ್ಛತಿ ಅವಸ್ಯತಿ. **ಸುಪಆತ್ಮನಃಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. **ಸನಾದ್ಯಂತಾಧಾತವಃ** ಎಂಬುದರಿಂದ ಅವಸ್ಯ ಎಂಬುದು ಧಾತು ಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. **ಅತೋ ಗುಣೇ** ಎಂಬುದರಿಂದ ಪರರೂಪ. ಅವಸ್ಯತ್ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಸ್ತುವತೇ**—ಷ್ಟುಞ್ ಸ್ತುತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಇದಕ್ಕೆ ಙಿದ್ವದ್ಭಾವವಿರುವುದರಿಂದ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಮ್**—ಎಂಬುದರಿಂದ ಉವಙಾದೇಶ. ಹಿಂದಿನಂತೆ ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ (ಚತುರ್ಥೀ ಏಕವಚನ) ಬಂದುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಕೃಷ್ಣಿಯಾಯ**—ಕೃಷ್ಣಸ್ಯ ಅಪತ್ಯಂ ಪುಮಾನ್. ಕೃಷ್ಣಿಯಃ, ಛಾಂದಸವಾಗಿ ಅಪತ್ಯಾರ್ಥದಲ್ಲಿ ಘಚ್. ಪ್ರತ್ಯಯ. **ಆಯನೇಯೀನೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿಚ** ಎಂಬುದರಿಂದ ಅಕಾರಕ್ಕೆ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಋಜೂಯತೇ**—ಋಜುಂ ಆತ್ಮನಃ ಇಚ್ಛತಿ ಋಜೂಯತಿ. **ಸುಪಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. ಹಿಂದಿನಂತೆ ಇದರ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನಷ್ಟಮ್**—ಣಶ ಅದರ್ಶನೇ. ಧಾತು. ಇದಕ್ಕೆ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಣೋ ನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. **ವ್ರಶ್ಚಭ್ರಸ್ಜಸೃಜ**—(ಪಾ. ಸೂ.- ೮-೨-೩೬) ಎಂಬುದರಿಂದ ಧಾತುವಿನ ಶಕಾರಕ್ಕೆ ಷತ್ವ. ತನ್ನಿಮಿತ್ತವಾಗಿ ಪ್ರತ್ಯಯಕ್ಕೆ ಷ್ಟುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ದರ್ಶನಾಯ**—ದೃಶಿರ್ ಪ್ರೇಕ್ಷಣೇ. ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ದದಥುಃ**—ಡುದಾಞ್ ದಾನೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨೩ ॥



॥ ಸಂಹಿತಾಪಾಠಃ ॥

ದಶ ರಾತ್ರೀರಶಿವೇನಾ ನವದ್ಯೂನವನದ್ಧಂ ಶ್ನಥಿತಮಪ್ಸ್ವಂ೧ತಃ ।
ವಿಪ್ರುತಂ ರೇಭಮುದನಿ ಪ್ರವೃಕ್ತಮುನ್ನಿನ್ಯಥುಃ ಸೋಮಮಿವ
ಸ್ರುವೇಣ ॥ ೨೪ ॥

॥ ಪದಪಾಠಃ ॥

ದಶ । ರಾತ್ರೀಃ । ಅಶಿವೇನ । ನವ । ದ್ಯೂನ್ । ಅವಽನದ್ಧಂ । ಶ್ನಥಿತಂ ।
ಅಪ್ಽಸು । ಅಂತರಿತಿ ।
ವಿಽಪ್ರುತಂ । ರೇಭಂ । ಉದನಿ । ಪ್ರಽವೃಕ್ತಂ । ಉತ್ । ನಿನ್ಯಥುಃ । ಸೋಮಂಽ
ಇವ । ಸ್ರುವೇಣ ॥ ೨೪ ॥

॥ ಸಾಯಣಭಾಷ್ಯಂ ॥

ಪುರಾ ಖಲು ರೇಭಮೃಷಿಂ ಪಾಪೈರ್ಬದ್ಧ್ವಾಸುರಾಃ ಕೂಪೇ ಕಸ್ಯಚಿದ್ದಿವಸಸ್ಯ ಸಾಯಂಕಾಲೇ ಪ್ರಚಿಕ್ಷಿಪುಃ । ಸ ಚಾಶ್ವಿನೌ ಸ್ತುವನ್ ದಶ ರಾತ್ರೀರ್ನವಾಹಾನಿ ಚ ಕೂಪಮಧ್ಯೇ ತಥೈವಾವತಸ್ಥೇ । ದಶಮೇಽಹನಿ ಪ್ರಾತರಶ್ವಿನೌ ತಂ ಕೂಪಾದುದತಾರಯತಾಮಿತಿ । ತದಾಹ । ಅಪ್ಸು ಕೂಪಾಂತರ್ವರ್ತಮಾನಾಸ್ವಂತರ್ಮಧ್ಯೇಽಸುರೈಃ ಪಾತಿತಮಶಿವೇನ ದುಃಖಹೇತುನಾ ದಾಮ್ನಾವನದ್ಧಂ ಬದ್ಧಂ ಶ್ನಥಿತಂ ಶತ್ರುಭಿರ್ಹಿಂಸಿತಂ ದಶ ರಾತ್ರೀರ್ದಶಸಂಖ್ಯಾಕಾ ನಿಶಾ ನವ ದ್ಯೂನ್ ನವಸಂಖ್ಯಾಕಾನ್ಯಹಾನಿ ಚ । ಅತ್ಯಂತಸಂಯೋಗೇ ದ್ವಿತೀಯಾ । ಏತಾವಂತಂ ಕಾಲಂ ತತ್ರೈವ ಕೂಪೇಽವಸ್ಥಿತಂ । ಅತ ಏವೋದನ್ಯುದಕೇ ವಿಪ್ರುತಂ ವಿಪ್ಲುತಂ ವ್ಯಾಕ್ಷಿಪ್ತಸರ್ವಾಂಗಂ ಪ್ರವೃತ್ತಂ । ಉಪ್ರೋಽಪಮೇತತ್ । ಪ್ರವ್ಯಂಜನೇನ ಸಂತಪ್ತಂ ಘರ್ಮಮಿವ ವ್ಯಥಯಾ ಸಂತಪ್ಯಮಾನಂ ಏವಂಭೂತಂ ರೇಭಂ ಹೇ ಅಶ್ವಿನೌ ಯುವಾಮುನ್ನಿನ್ಯಥುಃ । ತಸ್ಮಾತ್ಕೂಪಾದುನ್ನೀತಮುತ್ತೀರ್ಣಂ ಕೃತವಂತೌ । ತತ್ರ ದೃಷ್ಟಾಂತಃ । ಸೋಮಮಿವ

ಯಥಾಗ್ನಿಹೋತ್ರಹೋಮಾರ್ಥಮಭಿಷುತಂ ಸೋಮರಸಂ ಕೂಪಸದೃಶೇಽಗ್ನಿಹೋತ್ರಸ್ಥಾಲೀಮಧ್ಯೇ ವರ್ತಮಾನಂ ಸ್ರುವೇಣಾಧ್ವರ್ಯುರುನ್ನಯತ್ಯೂರ್ಧ್ವಂ ನಯತಿ ತದ್ವತ್ ‖ ಅವನದ್ಧಂ । ಣಹ ಬಂಧನೇ । ಕರ್ಮಣಿ ನಿಷ್ಠಾ । ನಹೋ ಧಃ । ಪಾ. ೮-೨-೩೪ । ಝಷಸ್ತಥೋರ್ಧೋಽಧ ಇತಿ ನಿಷ್ಠಾತಕಾರಸ್ಯ ಧತ್ವಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಶ್ನಥಿತಂ । ಶ್ನಥ ಹಿಂಸಾರ್ಥಃ । ನಿಷ್ಠಾ । ವಿಪ್ರುತಂ । ಪ್ರುಙ್ ಗತೌ । ಅವನದ್ಧವತ್ತೃತೀಯಸ್ವರೌ । ಕಪಿಲಕಾದಿತ್ವಾಲ್ಲತ್ವವಿಕಲ್ಪಃ । ಉದನಿ । ಪದ್ದನ್ನಿತ್ಯಾದಿನೋದಕಶಬ್ದಸ್ಯೋದನ್ಭಾವಃ ‖

‖ ಪ್ರತಿಪದಾರ್ಥ ‖

**ಅಪ್ಸು ಅಂತಃ**—(ಬಾವಿಯಲ್ಲಿರುವ) ನೀರಿನ ಒಳಗಡೆ । **ಅಶಿವೇನ**—ದುಃಖಹೇತುವಾದ (ಅಸುರರಿಂದ ಹಾಕಲ್ಪಟ್ಟ) ಹಗ್ಗದಿಂದ । **ಅವನದ್ಧಂ**—ಕಟ್ಟಲ್ಪಟ್ಟ । **ಶ್ನಥಿತಂ**—ಹಿಂಸಿಸಲ್ಪಟ್ಟ । **ದಶ ರಾತ್ರೀಃ**—ಹತ್ತು ರಾತ್ರಿಗಳೂ । **ನವದ್ಯೂನ್**—ಒಂಭತ್ತು ಹಗಲೂ । **ಉದನಿ**—ನೀರಿನಲ್ಲಿ । **ವಿಪ್ಲುತಂ**—ಮುಳುಗಿದ್ದ । **ಪ್ರವೃಕ್ತಂ**—ಸಂತಪ್ತನಾದ । **ರೇಭಂ**—ರೇಭನೆಂಬುವನನ್ನು । **ಸ್ರುವೇಣ**—ಸ್ರುವದಿಂದ (ಅಧ್ವರ್ಯುವು) । **ಸೋಮಮಿವ**—ಸೋಮರಸವನ್ನು (ಅಗ್ನಿಹೋತ್ರ ಮಾಡುವಾಗ ಪಾತ್ರೆಯಿಂದ ಮೇಲಕ್ಕೆ ಎತ್ತುವಂತೆ) । **ಉನ್ನಿನ್ಯಥುಃ**—ಮೇಲಕ್ಕೆ ಎತ್ತಿದಿರಿ.

‖ ಭಾವಾರ್ಥ ‖

(ಅಸುರರಿಂದ ಬಾವಿಯಲ್ಲಿರುವ) ನೀರಿನೊಳಕ್ಕೆ (ಹಾಕಲ್ಪಟ್ಟು) ದುಃಖಜನಕವಾದ ಪಾಶದಿಂದ ಬದ್ಧನಾಗಿ ಹಿಂಸಿತನಾದ, ಹತ್ತುರಾತ್ರಿ ಮತ್ತು ಒಂಭತ್ತು ಹಗಲುಗಳೂ ನೀರಿನಲ್ಲಿ ಮುಳುಗಿದ್ದು, (ಅದರಿಂದ) ಸಂತಪ್ತನಾಗಿದ್ದ ರೇಭನೆಂಬುವನನ್ನು, (ಅಧ್ವರ್ಯುವು ಅಗ್ನಿಹೋತ್ರಕಾಲದಲ್ಲಿ ಪಾತ್ರೆಯಲ್ಲಿರುವ ಸೋಮರಸವನ್ನು ಸ್ರುವದಿಂದ ಮೇಲಕ್ಕೆ ಎತ್ತುವಂತೆ ಬಾವಿಯಿಂದ) ಮೇಲಕ್ಕೆ ಎತ್ತಿದಿರಿ.

English Translation.

Ashwins, you raised up, like Soma in a ladle, Rebha, who for ten nights and nine days had lain (in a well), bound with tight bonds, wounded, immersed, and suffering distress from the water.

‖ ವಿಶೇಷವಿಷಯಗಳು ‖

**ಅಶಿವೇನ—ದುಃಖಹೇತುನಾ ದಾಮ್ನಾ** ದುಃಖವನ್ನು ಉಂಟುಮಾಡಲು ಕಾರಣವಾದ ಹಗ್ಗದಿಂದ ಬದ್ಧನಾದ ಎಂಬುದಾಗಿ ಸಾಯಣರು ಈ ಋಕ್ಕಿನಲ್ಲಿ ಹೇಳಿರುವ ಅರ್ಥವು ಸ್ಕಂದಸ್ವಾಮಿಗಳ ಭಾಷ್ಯದಲ್ಲಿ ಬೇರೆಯಾಗಿದ್ದರೂ ಒಟ್ಟಿನಲ್ಲಿ ತಾತ್ಪರ್ಯವು ಮಾತ್ರ ಒಂದೇ ಆಗಿರುತ್ತದೆ. ಆದರೆ ಸಾಯಣರು ಈ ಇತಿಹಾಸವನ್ನು ಪೂರ್ತಿಯಾಗಿ ಇಲ್ಲಿ ಹೇಳಿರುತ್ತಾರೆ. ಸ್ಕಂದಸ್ವಾಮಿಗಳ ಭಾಷ್ಯದಲ್ಲಿ ಈ ಇತಿಹಾಸವು ಆಯಾಯ ಪದಗಳಿಗೆ ವಿವರಿಸಿರುವ ಅರ್ಥಗಳಿಂದ ಗಮ್ಯವಾಗುವುದು.

**ಪುರಾ ಖಲು ರೇಭಮೃಷಿಂ ಪಾಶೈರ್ಬಧ್ವಾ ಅಸುರಾಃ ಕೂಪೇ ಕಸ್ಯಚಿದ್ದಿವಸಸ್ಯ ಸಾಯಂಕಾಲೇ ಪ್ರಚಿಕ್ಷಿಪುಃ । ಸ ಚ ಅಶ್ವಿನೌ ಸ್ತುವನ್ ದಶರಾತ್ರೀಃ ನವಾಹಾನಿ ಚ ಕೂಪಮಧ್ಯೇ ತಥೈವಾವತಸ್ಥೇ । ದಶಮೇಽಹನಿ ಪ್ರಾತಃ ಅಶ್ವಿನೌ ತಂ ಕೂಪಾತ್ ಉದತಾರಯತಾಮಿತಿ । ತದಾಹ ॥**

ರೇಭನೆಂಬ ಒಬ್ಬ ಋಷಿಯನ್ನು ಅಸುರರು ಹಗ್ಗಗಳಿಂದ ಕಟ್ಟಿ ಒಂದು ದಿನ ಸಾಯಂಕಾಲದಲ್ಲಿ ಭಾವಿಯಲ್ಲಿ ಹಾಕಿದರು. ಅವನು ಅಶ್ವಿನೀದೇವತೆಗಳನ್ನು ಸ್ತುತಿಮಾಡುತ್ತಾ ಒಂಬತ್ತು ಹಗಲು ಅಥವಾ ಹತ್ತು ರಾತ್ರಿಗಳು ಭಾವಿಯುವಳಗೆ ಕೈಕಾಲು ಕಟ್ಟಿದವನಾಗಿ ಬಿದ್ದಿದ್ದನು. ಹತ್ತನೆಯ ಹಗಲಿನಲ್ಲಿ ಪ್ರಾತಃಕಾಲದಲ್ಲಿಯೇ ಅಶ್ವಿನೀದೇವತೆಗಳು ಬಂದು ಅವನನ್ನು ಭಾವಿಯಿಂದ ಮೇಲಕ್ಕೆ ಎತ್ತಿ ರಕ್ಷಿಸಿದರು ಎಂಬ ಇತಿಹಾಸವು ಇಲ್ಲಿ ಹೇಳಲ್ಪಟ್ಟಿರುತ್ತದೆ.

ಸ್ಕಂದಸ್ವಾಮಿಗಳು— **ಅಶಿವೇನ । ಶಿವಂ ಸುಖಂ । ತತೋ ಅನ್ಯದಶಿವಂ ದುಃಖಂ । ತತ್ಕರತ್ವಾದತ್ರಾ-ಸುರಾ ಅಶಿವಾ ಉಚ್ಯಂತೇ । ಸಮೂಹಾಭಿಪ್ರಾಯಂ ಚ ಏಕವಚನಂ ದುಃಖಕರೇಣ ಅಸುರಸಮೂಹೇನ.** ಶಿವ ಎಂದರೆ ಸುಖವು ಎಂದು ಅರ್ಥ. ಸುಖಕ್ಕಿಂತ ಬೇರೆಯಾಗಿ ಸುಖವಿರೋಧಿಯಾಗಿರುವುದು ದುಃಖವು. ದುಃಖವನ್ನುಉಂಟು ಮಾಡುವ ಕಾರಣ ಅಸುರರು ಅಶಿವಪದವಾಚ್ಯರಾಗಿರುವರು. ಸಮೂಹವನ್ನು ಬೋಧಿಸುವ ಅಭಿಪ್ರಾಯದಿಂದ ಇಲ್ಲಿ ಏಕವಚನವನ್ನು ಹೇಳಿರುತ್ತದೆ. ದುಃಖವನ್ನು ಉಂಟುಮಾಡುವ ಅಸುರರ ಗುಂಪಿನಿಂದ ಎಂದರೆ ಅನೇಕ ಮಂದಿ ಅಸುರರಿಂದ ಎಂದು ಅರ್ಥ.

**ಶ್ನಥಿತಂ—ಶತ್ರುಭಿರ್ಹಿಂಸಿತಂ** ಶತ್ರುಗಳಿಂದ ಹಿಂಸಿಸಲ್ಪಟ್ಟವನು ಎಂದು ಸಾಯಣರೂ **ತಾಡಿತಂ—** ಹೊಡೆಯಲ್ಪಟ್ಟವನು ಎಂದು ಸ್ಕಾಂದಸ್ವಾಮಿಗಳೂ ಅರ್ಥಮಾಡಿರುವರು.

**ಪ್ರವೃಕ್ತಂ—ಪ್ರವ್ಯಂಜನೇನ ಸಂತಪ್ತಂ । ಘರ್ಮಮಿವ ವ್ಯಥಯಾ ಸಂತಪ್ಯಮಾನಂ । ಉಪ್ತೋ-ಪಮಮೇತತ್ ।** ಹತ್ತುರಾತ್ರೆಗಳವರಿಗೂ ನೀರಿನಲ್ಲಿಯೇ ಮುಳುಗಿರುವುದರಿಂದ ಅಗ್ನಿಯ ತಾಪದಿಂದ ಸಂಕಟ ಪಡುವವರ ಹಾಗೆ ದುಃಖದಿಂದ ಸಂಕಟಪಡುತ್ತಿರುವ ಎಂದು ಸಾಯಣರು—**ವೃಜೀ ವರ್ಜನೇ ಅನ್ಯತ್ರ ಇಹ ತು ಸಾಮರ್ಥ್ಯಾನ್ನಿಮಜ್ಜನೇ ನಿಮಗ್ನಂ ।** ವರ್ಜನರೂಪಾರ್ಥವನ್ನು ಬೋಧಿಸುವ ವೃಜೀ ಎಂಬ ಧಾತುವು ಇಲ್ಲಿ ಮುಳುಗು ಎಂಬ ಅರ್ಥವನ್ನು ಈ ಪ್ರಕರಣದಲ್ಲಿ ಬೋಧಿಸುವುದರಿಂದ ಮುಳುಗಿರುವವನು ಎಂದು ಹೇಳಿರುವರು.

**ವಿಪ್ರುತಂ—ವ್ಯಾಕ್ಷಿಪ್ತಸರ್ವಾಂಗಂ ।** ಶರೀರದ ಅವಯವಗಳನ್ನು ಸರಿಯಾಗಿ ಉಪಯೋಗಿಸಲು (ಹಗ್ಗದಿಂದ ಕಟ್ಟಲ್ಪಟ್ಟಿದ್ದ ಕಾರಣ) ಶಕ್ತಿಯಿಲ್ಲದ ಕಾರಣ ಒಂದೇ ರೀತಿಯಾಗಿರುವನೆಂದು ಅರ್ಥ. ಸ್ಕಂದಸ್ವಾಮಿಗಳು **ಅಪಾಂ ಮಧ್ಯೇ ಕರ್ಮಭಿಃ ವಿಗತಂ ರಹಿತಂ ನಿಶ್ಚೇಷ್ಟಂ**—ನೀರಿನ ಮಧ್ಯದಲ್ಲಿ ಇರುವ ಕಾರಣ ಕೆಲಸಮಾಡಲು ಶಕ್ತಿಯಿಲ್ಲದವನು ಎಂದರೆ ನಿಶ್ಚೇಷ್ಟನಾಗಿರುವವನು ಎಂದು ಹೇಳಿ, ಹೀಗೆ ಇರುವ ರೇಭಋಷಿಯನ್ನು ಅಶ್ವಿನೀದೇವತೆಗಳು ಬಾವಿಯ ನೀರಿನಿಂದ ಮೇಲಕ್ಕೆತ್ತಿದರು ಎಂದು ವರ್ಣಿಸಿರುವುದನ್ನು ವಿವರಿಸಿರುವರು.

**ಸೋಮಮಿವ ಸ್ರುವೇಣ—ಯಥಾ ಕಾಶ್ಚಿತ್ ಸ್ರುವೇಣ ಸೋಮಮುನ್ನಯತಿ ತದ್ವತ್ । ಸ್ರುವಶಬ್ದೇನ ಸಾದೃಶ್ಯಾತ್ ಚಮಸಾದಿಸೋಮಪಾತ್ರಮುಚ್ಯತೇ । ಅಥವಾ ಕಠಾನಾಮಗ್ನಿಹೋತ್ರ**

**ಹೋಮಃ ಸೋಮೇನ ಬ್ರಹ್ಮವರ್ಚಸಕಾಮಸ್ಯ ವಿಧೀಯತೇ ತದಭಿಪ್ರಾಯೇಣುಪಮಾನಮೇತತ್** ಸ್ರುವದಿಂದ ಸೋಮರಸವನ್ನು ಮೇಲಕ್ಕೆ ಎತ್ತಿದಂತೆ ಎಂದು ಇಲ್ಲಿ ಉಪಮಾನವನ್ನು ಹೇಳಿರುತ್ತದೆ. ಈ ಉಪಮಾನ ದಿಂದ ಚಮಸಾದಿ ಪಾತ್ರೆಗಳೂ ಉಕ್ತವಾಗಿರುತ್ತವೆ. ಅಥವಾ ಕಠಶಾಖೆಯವರು ಎಂದರೆ ಯಜುರ್ವೇದದ ಕಠಶಾಖೆಯನ್ನು ಅಧ್ಯಯನಮಾಡುವವರು ಬ್ರಹ್ಮವರ್ಚಸ್ಸನ್ನಪೇಕ್ಷಿಸಿ ಅಗ್ನಿಹೋತ್ರದ ಅಗ್ನಿಯಲ್ಲಿಯೇ ಸೋಮರಸವನ್ನು ಹೋಮಮಾಡುವರು. ಇವರು ಹೋಮವನ್ನು ಆಚರಿಸುವಾಗ ಚಮಸ, ಸ್ರುವ, ಇವೇ ಮೊದಲಾದ ಯಜ್ಞಪಾತ್ರೆಗಳು ಅವಶ್ಯಕವಾಗಿರುತ್ತದೆ. ಆದ್ದರಿಂದ ಚಮಸ ಪಾತ್ರೆಯಲ್ಲಿರುವ ಸೋಮರಸವನ್ನು ಸ್ರುವದಿಂದ ಹೋಮಮಾಡುವ ಕಾಲದಲ್ಲಿ ಸೋಮರಸವನ್ನು ಎತ್ತಿದಂತೆ ಎಂಬ ಉಪಮಾನವು ರೇಭಋಷಿಯನ್ನು ಭಾವಿಯಿಂದ ಮೇಲಕ್ಕೆ ಎತ್ತಿದ ವಿಷಯದಲ್ಲಿ ಇರುವುದು ಎಂದು ಉದಾಹರಣೆಯನ್ನು ತೋರಿಸಿರುವರು.

**ಅಶ್ವಂ ನ ಗೂಳ್ಹಮಶ್ವಿನಾ ದುರೇವೈರ್ಋಷಿಂ ನರಾ ವೃಷಣಾ ರೇಭಮಪ್ಸು ।**
**ಸಂ ತಂ ರಿಣೀಥೋ ವಿಪ್ರುತಂ ದಂಸೋಭಿರ್ನ ವಾಂ ಜೂರ್ಯಂತಿ ಪೂರ್ವ್ಯಾ ಕೃತಾನಿ ॥**
(ಋ. ಸಂ. ೧-೧೧೬-೪)

**ಯಾಭೀ ರೇಭಂ ನಿವೃತಂ ಸಿತಮದ್ಭ್ಯ ಉದ್ವಂದನಮೈರಯತಂ ಸ್ವರ್ದೃಶೇ ।**
**ಯಾಭಿಃ ಕಣ್ವಂ ಪ್ರ ಸಿಷಾಸಂತಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಮ್ ॥**
(ಋ. ಸಂ. ೧-೧೧೨-೫)

ಈ ಋಕ್ಕುಗಳಲ್ಲಿಯೂ ಅಶ್ವಿನೀದೇವತೆಗಳು ರೇಭಋಷಿಯನ್ನು ರಕ್ಷಿಸಿದ ವಿಷಯವು ವರ್ಣಿತವಾಗಿರುವುದು.

ರೇಭಂ—ರೇಭನನ್ನು ಅಶ್ವಿನೀದೇವತೆಗಳು ರಕ್ಷಿಸಿದ ವಿಷಯವು ಋ. ಸಂ. ೧-೧೧೨-೫ ; ೧-೧೧೬-೨೪ ; ೧-೧೧೭-೪ ; ೧-೧೧೮-೬ ; ೧-೧೧೯-೬ ; ೧೦-೩೯-೯ ಎಂಬ ಋಕ್ಕುಗಳಲ್ಲಿ ಹೇಳಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಅಶಿವೇನ**—ನ ಶಿವಂ ಅಶಿವಂ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದದ ಪ್ರಕೃತಿಸ್ವರ ಬರುತ್ತದೆ.

**ದಶ, ನವ**—ನಾಂತ ಸಂಖ್ಯಾವಾಚಕವಾದುದರಿಂದ **ನ್ಸಂಖ್ಯಾಯಾಃ** (ಫಿ. ಸೂ. ೨೮) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಅವನದ್ಧಮ್**—ಣಹ ಬಂಧನೇ. ಧಾತು. **ಕರ್ಮಣಿ**ಯಲ್ಲಿ **ನಿಷ್ಠಾ** (ಪಾ. ಸೂ ೩-೨-೧೦೨) ಎಂಬುದ ರಿಂದ ಕ್ತ ಪ್ರತ್ಯಯ. **ಣೋ ನಃ** (ಪಾ. ಸೂ. ೬-೧-೬೫) ಎಂಬುದರಿಂದ ಧಾತ್ವಾದಿಗೆ ನತ್ವ. **ನಹೋ ಧಃ** (ಪಾ. ಸೂ. ೮-೨-೩೪) ಎಂಬುದರಿಂದ ಧಾತುವಿನ ಹಕಾರಕ್ಕೆ ಧತ್ವ. ಝಷಿನ ಪರದಲ್ಲಿ ತಕಾರ ಬಂದುದರಿಂದ **ಝಷಸ್ತಥೋರ್ಧೋಽಧಃ** (ಪಾ. ಸೂ. ೮-೨-೪೦) ಎಂಬುದರಿಂದ ನಿಷ್ಠಾ ತಕಾರಕ್ಕೆ ಧತ್ವ. **ಝಲಾಂ ಜಶ್ ಝಶಿ** (ಪಾ. ಸೂ.

೮-೪-೫೩) ಎಂಬುದರಿಂದ ಪೂರ್ವಥಕಾರಕ್ಕೆ ದತ್ವ. **ಗತಿರನಂತರಃ** (ಪಾ. ಸೂ. ೬-೧-೪೯) ಎಂಬುದರಿಂದ ಗತಿಗೆ (ಅವ) ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶ್ನಥಿತಮ್**—ಶ್ನಥ ಹಿಂಸಾಯಾಮ್. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಆರ್ಧಧಾತುಕಸ್ಯೇಡ್ವ-ಲಾದೇಃ** ಎಂಬುದರಿಂದ ಇಡಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಪ್ಸು—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ವಿಪ್ರುತಮ್**—ಪ್ರುಙ್ ಗತೌ ಧಾತು ಹಿಂದಿನಂತೆ ಕ್ತ ಪ್ರತ್ಯಯ. ಹಿಂದಿನಂತೆ **ಗತಿರನಂತರಃ** ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ. ಕಾಪಿಲಕಾದಿಯಲ್ಲಿ ಸೇರಿರುವುದರಿಂದ ಲತ್ವ ವಿಕಲ್ಪವಾಗಿ ಬರುತ್ತದೆ.

**ಉದನಿ—**ಉದಕ ಶಬ್ದಕ್ಕೆ ಸಪ್ತಮೀಏಕವಚನ ಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಅದಕ್ಕೆ ಉದನ್ ಆದೇಶ. **ವಿಭಾಷಾ ಙಿಶ್ಯೋಃ** (ಪಾ. ಸೂ. ೬-೪-೧೩೬) ಎಂಬುದರಿಂದ ವಿಕಲ್ಪವಾಗಿ ಅನಿನ ಅಕಾರಕ್ಕೆ ಲೋಪವೆಂಬುದರಿಂದ ಇಲ್ಲಿ ಬರುವುದಿಲ್ಲ.

**ನಿನ್ಯಥುಃ**—ಣೀಞ್ ಪ್ರಾಪಣೇ. ಧಾತು. ಲಿಟ್ ಮಧ್ಯಮಪುರುಷ ದ್ವಿವಚನದರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೨೪ ‖



‖ ಸಂಹಿತಾಪಾಠಃ ‖

ಪ್ರ ವಾಂ ದಂಸಾಂಸ್ಯಶ್ವಿನಾವವೋಚಮಸ್ಯ ಪತಿಃ ಸ್ಯಾಂ ಸುಗವಃ
ಸುವೀರಃ ।

ಉತ ಪಶ್ಯನ್ನಶ್ನುವನ್ದೀರ್ಘಮಾಯುರಸ್ತಮಿವೇಜ್ಜರಿಮಾಣಂ
ಜಗಮ್ಯಾಂ ‖ ೨೫ ‖

॥ ಪದಪಾಠಃ ॥

ಪ್ರ । ವಾಂ । ದಂಸಾಂಸಿ । ಅಶ್ವಿನೌ । ಅವೋಚಂ । ಅಸ್ಯ । ಪತಿಃ । ಸ್ಯಾಂ ।
ಸುಽಗವಃ । ಸುಽವೀರಃ ।

ಉತ । ಪಶ್ಯನ್ । ಅಶ್ನುವನ್ । ದೀರ್ಘಂ । ಆಯುಃ । ಅಸ್ತಂಽಇವ । ಇತ್ ।
ಜರಿಮಾಣಂ । ಜಗಮ್ಯಾಂ ॥ ೨೫ ॥

॥ ಸಾಯಣಭಾಷ್ಯಂ ॥

ಏವಮನೇನ ಸೂಕ್ತೇನಾಶ್ವಿನೋರ್ಮಹಿಮಾನಂ ಪ್ರಶಸ್ಯಾಧುನಾ ಮಂತ್ರದ್ರಷ್ಟಾ ಸ್ವಾಭೀಷ್ಟಂ ಪ್ರಾರ್ಥಯತೇ । ಹೇ ಅಶ್ವಿನೌ ವಾಂ ಯುವಯೋರ್ದಂಸಾಂಸಿ ಪುರಾ ಕೃತಾನಿ ಕರ್ಮಾಣಿ ಪ್ರಾವೋಚಂ । ಇತ್ಥಮುಕ್ತವಾನಸ್ಮಿ । ಸೋಽಹಂ ಸುಗವಃ ಶೋಭನಗೋಭಿರ್ಯುಕ್ತಃ ಸುವೀರಃ ಶೋಭನವೀರಶ್ಚ ಭೂತ್ವಾಸ್ಯ ರಾಷ್ಟ್ರಸ್ಯ ಪತಿರಧಿಪತಿಃ ಸ್ಯಾಂ । ಭವೇಯಂ । ಉತಾಪಿ ಚ ಪಶ್ಯನ್ನಕ್ಷಿಭ್ಯಾಂ ಪಶ್ಯನ್ । ಉಪಲಕ್ಷಣಮೇತತ್ । ಸರ್ವೈರಿಂದ್ರಿಯೈಃ ಸ್ವಸ್ವವಿಷಯಸಮರ್ಥೈರ್ದೀರ್ಘಂ ವರ್ಷಶತರೂಪೇಣಾಯತಮಾಯುರ್ಜೀವಿತಂ ಚಾಶ್ನುವನ್ ಪ್ರಾಪ್ನುವನ್ನಹಮಸ್ತಮಿವ ಯಥಾ ಗೃಹಂ ಸ್ವಾಮೀ ನಿಷ್ಕಂಟಕಂ ಪ್ರವಿಶತಿ ಏವಂ ಜರಿಮಾಣಂ ಜರಾಂ ಜಗಮ್ಯಾಂ । ಕಂಟಕರಾಹಿತ್ಯೇನ ಪ್ರಾಪ್ನುಯಾಂ । ವೃದ್ಧಃ ಸಂಶ್ಚಿರಕಾಲಂ ನಿವಸೇಯಮಿತ್ಯರ್ಥಃ ॥ ಸ್ಯಾಂ । ಅಸ್ತೇಃ ಪ್ರಾರ್ಥನಾಯಾಂ ಲಿಙ್ । ಯಾಸುಟ್ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಅಶ್ನುವನ್ । ಅಶೂ ವ್ಯಾಪ್ತೌ । ವ್ಯತ್ಯಯೇನ ಶತೃ । ಜರಿಮಾಣಂ । ಜೄಷ್ ವಯೋಹಾನೌ । ಅಸ್ಮಾದೌಣಾದಿಕ ಇಮನಿಚ್ । ಜಗಮ್ಯಾಂ । ಗಮೇಃ ಪ್ರಾರ್ಥನಾಯಾಂ ಲಿಙಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ ॥

॥ ಪ್ರತಿಪದಾರ್ಥ ॥

ಹೇ ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮಿಬ್ಬರ । ದಂಸಾಂಸಿ—ಕರ್ಮಗಳನ್ನು । ಪ್ರ ಅವೋಚಂ—ಹೇಳಿದ್ದೇನೆ. (ಅಂತಹ ನಾನು) । ಸುಗವಃ—ಒಳ್ಳೆಯ ಗೋವುಗಳಿಂದ ಯುಕ್ತನಾಗಿಯೂ । ಸುವೀರಃ—ವೀರ್ಯಯುಕ್ತನಾಗಿಯೂ ಆಗಿ । ಅಸ್ಯ—ಈ ರಾಷ್ಟ್ರದ । ಪತಿಃ ಸ್ಯಾಂ—ಅಧಿಪತಿಯಾಗುವಂತಾಗಲಿ । ಉತ—ಮತ್ತು । ಪಶ್ಯನ್—(ಕಣ್ಣುಗಳಿಂದ)ನೋಡುವವನಾಗಿ (ಇಂದ್ರಿಯ ಪಾಟವವುಳ್ಳವನಾಗಿ) । ದೀರ್ಘಂ ಆಯುಃ—ಹೆಚ್ಚು ಆಯುಸ್ಸನ್ನು । ಅಶ್ನುವನ್—ಹೊಂದಿದವನಾಗಿ (ಬಹುಕಾಲ ಬದುಕುವವನಾಗಿ । ಅಸ್ತಮಿವ—(ಮನೆಯ ಯಜಮಾನನು) ಮನೆಯನ್ನು (ಪ್ರವೇಶಿಸುವಂತೆ) । ಜರಿಮಾಣಂ—ವಾರ್ಧಕ್ಯವನ್ನು (ಮುಪ್ಪನ್ನು) । ಜಗಮ್ಯಾಂ—ಪ್ರವೇಶಿಸುವೆನು ।

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮಿಬ್ಬರ ಮಹತ್ಕಾರ್ಯಗಳನ್ನೂ ವರ್ಣಿಸಿದ್ದೇನೆ. ನಾನು ವೀರ್ಯವಂತನಾಗಿಯೂ, ಒಳ್ಳೆಯ ಗೋವುಗಳಿಂದ ಯುಕ್ತನಾಗಿಯೂ ಈ ರಾಷ್ಟ್ರದ ಅಧಿಪತಿಯಾಗುವಂತೆಯೂ, ಇಂದ್ರಿಯ ಪಾಟವವುಳ್ಳವನಾಗಿ ಬಹುಕಾಲ ಜೀವಿಸಿ (ಅನಂತರ ಯಜಮಾನನು ತನ್ನ) ಮನೆಯನ್ನು (ಪ್ರವೇಶಿಸುವಂತೆ) ವಾರ್ಧಕ್ಯವನ್ನು ಹೊಂದುವಂತೆಯೂ, ಅನುಗ್ರಹಿಸಿ.

## English Translation.

Thus, Ashwins, have I declared your exploits; may I become the master (of this place), having abundant cattle and a numerous progeny, and retaining my sight, and enjoying a long life: may I enter into old age, as (a master enters) his house.

॥ ವಿಶೇಷವಿಷಯಗಳು ॥

**ದಂಸಾಂಸಿ—ಪುರಾ ಕೃತಾನಿ ಕರ್ಮಾಣಿ ।** ಅಪಃ, ಅಪ್ನಃ ಎಂಬ ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩–೨) ದಂಸಪದವು ಉಕ್ತವಾಗಿರುವುದರಿಂದ ದಂಸ ಎಂದರೆ ಕರ್ಮ ಎಂದು ಅರ್ಥ. ಈ ಋಕ್ಕಿನಲ್ಲಿ ಈ ಸೂಕ್ತವನ್ನು ಕಂಡುಹಿಡಿದು ಪಠನ ಪಾಠನಾದಿಗಳನ್ನು ಆಚರಿಸಿದ ಕಕ್ಷೀವಂತನು ಈ ಸೂಕ್ತ ಪ್ರತಿಪಾದ್ಯರಾದ ಅಶ್ವಿನೀದೇವತೆಗಳನ್ನು ಕುರಿತು ಪ್ರಾರ್ಥಿಸಿ ಪಡೆಯಬೇಕಾದ ಅಂಶಗಳು ವಿವೃತವಾಗಿವೆ ಅಶ್ವಿನೀದೇವತೆಗಳು ಕಷ್ಟಕ್ಕೆ ಸಿಕ್ಕಿದವರ ವಿಷಯದಲ್ಲಿ ಮಾಡಿರತಕ್ಕ ಅನುಗ್ರಹರೂಪವಾದ ಅನೇಕ ಕರ್ಮಗಳು ಉಕ್ತವಾಗಿರುತ್ತವೆ. ಇದರಿಂದ ಈ ದೇವತೆಗಳ ಮಹಿಮೆಯು ಚೆನ್ನಾಗಿ ವ್ಯಕ್ತವಾಗುವುದರಿಂದ ಕಕ್ಷೀವಂತನು ಉತ್ತಮವಾದ ಪಶುಪುತ್ರಾದಿಗಳಿಂದ ಕೂಡಿ ಈ ರಾಷ್ಟ್ರಕ್ಕೆ ಅಧಿಪತಿಯಾಗಿ ಬಹುಕಾಲದವರಿಗೂ ಜೀವಿಸಲು ಅನುಕೂಲವಾದ ಇಂದ್ರಿಯಗಳ ಪಾಟವವನ್ನೂ ಹೊಂದಲು ಮತ್ತು ಆರೋಗ್ಯದಿಂದ ದೃಢಕಾಯನಾಗಿ ಬಹಳಕಾಲದವರಿಗೂ ಜೀವಿಸಿ ಬಳಿಕ ಮುಪ್ಪನ್ನು ಹೊಂದುವಂತೆ ಅನುಗ್ರಹಿಸಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿರುವನು.

**ಅಸ್ತಮಿವ—ಯಥಾ ಗೃಹಂ ಸ್ವಾಮೀ ನಿಷ್ಕಂಟಕಂ ಪ್ರವಿಶತಿ ಏವಂ ಜರಾಂ ಕಂಟಕರಾಹಿತ್ಯೇನ ಪ್ರಾಪ್ನುಯಾಂ ವೃದ್ಧಸ್ಸನ್ ಚಿರಕಾಲಂ ನಿವಸೇಯಮಿತ್ಯರ್ಥಃ ॥** ಗಯಃ, ಕೃದರಃ ಎಂಬ ಇಪ್ಪತ್ತೆರಡು ಗೃಹನಾಮಗಳಲ್ಲಿ ಅಸ್ತಪದವೂ (ನಿ. ೩–೧೩) ಉಕ್ತವಾಗಿರುವುದರಿಂದ ಅಸ್ತ ಎಂದರೆ ಮನೆ ಎಂದು ಅರ್ಥ. ಮನೆಯ ಯಜಮಾನನು ತನ್ನ ಮನೆಯನ್ನು ಯಾವ ಭಯವೂ, ಯಾವ ತೊಂದರೆಯೂ ಇಲ್ಲದಂತೆ ಪ್ರವೇಶಿಸುವ ಹಾಗೆ ರೋಗಾದ್ಯುಪದ್ರವಗಳು ಇಲ್ಲದಿರುವಂತೆ ಅಶ್ವಿನೀದೇವತೆಗಳ ಅನುಗ್ರಹದಿಂದ ಬಹುಕಾಲ ಜೀವಿಸಿ ಬಳಿಕ ಮುದುಕನಾಗಿ ಉಳಿದ ಆಯುಸ್ಸನ್ನು ಸುಖದಿಂದ ಕಳೆಯಬೇಕೆಂಬ ಆಶಂಸನೆಯು ಇಲ್ಲಿ ಉಕ್ತವಾಗಿದೆ.

**ಸುವೀರಃ—ಶೋಭನವೀರಶ್ಚ ಭೂತ್ವಾ** | ಉತ್ತಮನಾದ ಶೂರನಾಗಿ, ಎಂದು ಸಾಯಣರ ವ್ಯಾಖ್ಯಾನವು. **ಶೋಭನೈಃ ವೀರೈಃ ಪುತ್ರೈಃ ಪೌತ್ರೈಃಶ್ಚೋಪೇತಃ** ಉತ್ತಮರಾದ ಅಂದರೆ ಪರಾಕ್ರಮಿಗಳಾವ ಅಥವಾ ಒಳ್ಳೆಯ ಕೆಲಸಗಳನ್ನು ಆಚರಿಸುವ ಮನಸ್ಸುಳ್ಳ ಮಕ್ಕಳು, ಮೊಮ್ಮಕ್ಕಳು ಮೊದಲಾದವರಿಂದ ಕೂಡಿದವನಾಗಿ ಎಂದು ಸ್ಕಂದಸ್ವಾಮಿಗಳು ಅರ್ಥಮಾಡಿರುವರು.

**ಪಶ್ಯನ್—ಅಕ್ಷಿಭ್ಯಾಂ ಪಶ್ಯನ್** | **ಸ್ವಸ್ವವಿಷಯದರ್ಶನಸಮರ್ಥೈಃ ಸರ್ವೈರಿಂದ್ರಿಯೈಃ** | ಕಣ್ಣುಗಳಿಂದ ನೋಡುವವನಾಗಿ ಎಂದುಮಾತ್ರ ಹೇಳಿದ್ದರೂ ಕಣ್ಣುಗಳಿಂದ ನೋಡುವುದಕ್ಕೆ ಚಕ್ಷುರಿಂದ್ರಿಯದ ಪಾಟವವು ಸರಿಯಾಗಿ ಇರುವ ಹಾಗೆ ಇತರ ಎಲ್ಲಾ ಇಂದ್ರಿಯಗಳೂ ತಮ್ಮ ತಮ್ಮ ವ್ಯಾಪಾರಾದಿಗಳಲ್ಲಿ ಪ್ರವರ್ತಿಸುತ್ತಾ ಆರೋಗ್ಯವು ಒಂದೇ ಸಮನಾಗಿರುವಂತೆ ಅನುಗ್ರಹಿಸಬೇಕು ಎಂಬ ಅರ್ಥವು ಉಪಲಕ್ಷಣ ವಿಧದಿಂದ ಉಕ್ತವಾಗಿರುತ್ತದೆ.

|| ವ್ಯಾಕರಣಪ್ರಕ್ರಿಯಾ ||

**ಅವೋಚೇಮ್**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲುಙ್ ಉತ್ತಮಪುರುಷ ಏಕವಚನದಲ್ಲಿ **ತಸ್ಥಸ್ಥ**—(ಪಾ. ಸೂ. ೩-೪-೧೦೧) ಎಂಬುದರಿಂದ ಅಮಾದೇಶ. **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚ್ಯಾದೇಶ. **ಅಸ್ಯತಿವಕ್ತಿಖ್ಯಾ**—(ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಉಮಾಗಮ, ಗುಣ. ಅಂಗಕ್ಕೆ ಅಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಯಾಮ್—**ಅಸ ಭುವಿ. ಧಾತು. **ವಿಧಿನಿಮಂತ್ರಣಾ**—(ಪಾ. ಸೂ. ೩-೩-೧೬೧) ಎಂಬುದರಿಂದ ಪ್ರಾರ್ಥನಾರ್ಥದಲ್ಲಿ ಲಿಙ್. ಉತ್ತಮಪುರುಷ ಏಕವಚನದಲ್ಲಿ ಹಿಂದಿನಂತೆ ಅಮಾದೇಶ. **ಯಾಸುಟ್ಪರಸ್ಮೈಪ**—(ಪಾ. ಸೂ. ೩-೪-೧೦೩) ಎಂಬುದರಿಂದ ಯಾಸುಟಾಗಮ. ಅದಕ್ಕೆ ಙಿತ್ವಾತಿದೇಶವಿರುವುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ ತಿಙಂತನಿಘಾತಸ್ವರ ಬರುತ್ತದೆ.

**ಸುವೀರಃ—ವೀರವೀರ್ಯೌ ಚ** (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಪಶ್ಯನ್—**ದೃಶಿರ್ ಪ್ರೇಕ್ಷಣೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಶ್ಯಾದೇಶ. ಅದುಪದೇಶದ ಪರದಲ್ಲಿ ಲಸಾರ್ವಧಾತುಕಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಶ್ನುವನ್—**ಅಶೂ ವ್ಯಾಪ್ತೌ. ಧಾತು. ಆತ್ಮನೇಪದಿಯಾದರೂ **ವ್ಯತ್ಯಯೋ ಬಹುಲಮ್** (ಪಾ. ಸೂ. ೩ ೧-೮೫) ಎಂಬುದರಿಂದ ಲಡರ್ಥದಲ್ಲಿ ಶತೃ ಪ್ರತ್ಯಯ. **ಸ್ವಾದಿಭ್ಯಃ ಶ್ನುಃ** (ಪಾ. ಸೂ. ೩-೧-೭೩. ) ಎಂಬುದರಿಂದ

ಶ್ನುವಿಕರಣ. **ಅಚಿಶ್ನುಧಾತುಭ್ರುವಾಂ**— ಎಂಬುದರಿಂದ ಉವಜಾದೇಶ. ಪ್ರತ್ಯಯಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಜರಿಮಾಣಮ್**—ಜ್ಯಾಷ್ ವಯೋಹಾನೌ ಧಾತು. ಇದಕ್ಕೆ ಔಣಾದಿಕವಾದ ಇಮನಿಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ಜರಿಮನ್ ಶಬ್ದವಾಗುತ್ತದೆ. **ಚಿತಃ** (ಪಾ. ಸೂ. ೬–೧–೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ **ಸರ್ವನಾಮಸ್ಥಾನೇಚಾಽಸಂಬುದ್ಧೌ** ಎಂಬುದರಿಂದ ಉಪಧಾದೀರ್ಘ.

**ಜಗಮ್ಯಾಮ್**—ಗಮ್ಲೃ ಗತೌ ಧಾತು. ಪ್ರಾರ್ಥನಾರ್ಥದಲ್ಲಿ ಲಿಙ್. ಉತ್ತಮಪುರುಷ ಏಕವಚನದಲ್ಲಿ ಅಮಾದೇಶ **ಯಾಸುಟ್‌ಪರಸ್ಮೈ**—ಸೂತ್ರದಿಂದ ಅದಕ್ಕೆ ಯಾಸುಟಾಗಮ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಚುತ್ವದಿಂದ ಜಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨೫ ॥

ನೂರಹದಿನಾರನೇ ಸೂಕ್ತವು ಸಮಾಪ್ತವು.



# ನೂರಹದಿನೇಳನೆಯ ಸೂಕ್ತವು

**ಮಧ್ವ ಇತಿ ಪಂಚವಿಂಶತ್ಯೃಚಂ ದ್ವಿತೀಯಂ ಸೂಕ್ತಂ । ಔಶಿಜಸ್ಯ ಕಕ್ಷೀವತ ಆರ್ಷಂ ತ್ರೈಷ್ಟುಭಮಾಶ್ವಿನಂ । ಮಧ್ವ ಇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಪೂರ್ವಸೂಕ್ತೇನ ಸಹೋಕ್ತೋ ವಿನಿಯೋಗಃ ॥**

ಅನುವಾದವು—**ಮಧ್ವಃ ಸೋಮಸ್ಯ** ಎಂಬ ಈ ಸೂಕ್ತವು ಹದಿನೇಳನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಉಶಿಜಪುತ್ರನಾದ ಕಕ್ಷೀವಾನ್ ಎಂಬುವನು ಋಷಿಯು. ಅಶ್ವಿನೀದೇವತೆಗಳು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಮಧ್ವ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಸಂಬಂಧವಾದ ಮಂತ್ರಗಳಿಗಾಗಿ ಈ ಸೂಕ್ತದ ಮತ್ತು ಹಿಂದಿನ ಸೂಕ್ತದ ವಿನಿಯೋಗವಿರುವುದು.

## ಸೂಕ್ತ—೧೧೭

|| ಮಂಡಲ—೧ || ಅನುವಾಕ—೧೭ || ಸೂಕ್ತ—೧೧೭ ||

|| ಅಷ್ಟಕ—೧ || ಅಧ್ಯಾಯ ೮ || ವರ್ಗ—೧೩, ೧೪, ೧೫, ೧೬, ೧೭ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ||

|| ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ||

|| ದೇವತಾ—ಅಶ್ವಿನೌ ||

|| ಛಂದಃ—ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಮಧ್ವಃ ಸೋಮಸ್ಯಾಶ್ವಿನಾ ಮದಾಯ ಪ್ರತ್ನೋ ಹೋತಾ ವಿವಾಸತೇ ವಾಂ ।
ಬರ್ಹಿಷ್ಮತೀ ರಾತಿರ್ವಿಶ್ರಿತಾ ಗೀರಿಷಾ ಯಾತಂ ನಾಸತ್ಯೋಪ ವಾಜೈಃ ॥ ೧ ॥

|| ಪದಪಾಠಃ ||

ಮಧ್ವಃ । ಸೋಮಸ್ಯ । ಅಶ್ವಿನಾ । ಮದಾಯ । ಪ್ರತ್ನಃ । ಹೋತಾ । ಆ । ವಿವಾಸತೇ । ವಾಂ ।
ಬರ್ಹಿಷ್ಮತೀ । ರಾತಿಃ । ವಿऽಶ್ರಿತಾ । ಗೀಃ । ಇಷಾ । ಯಾತಂ । ನಾಸತ್ಯಾ । ಉಪ । ವಾಜೈಃ ॥ ೧ ॥

|| ಸಾಯಣಭಾಷ್ಯಂ ||

ಹೇ ಅಶ್ವಿನೌ ಮಧ್ವೋ ಮಧುನಾ ಮಾಧುರ್ಯೋಪೇತೇನ ಸೋಮಸ್ಯ ಸೋಮೇನ ಮದಾಯ ಯುವಯೋರ್ಮದಾರ್ಥಂ ಪ್ರತ್ನಶ್ಚಿರಂತನೋ ಹೋತಾ ಹೋಮನಿಷ್ಪಾದಕೋ ಯಜಮಾನೋ ವಾಂ

**ಯುವಾಮಾ ವಿವಾಸತೇ । ವಿವಾಸತಿಃ ಪರಿಚರಣಕರ್ಮಾ । ಆಙ್ ಮರ್ಯಾದಾಯಾಂ । ಯಥಾಶಾಸ್ತ್ರಂ ಪರಿಚರತಿ । ಅಪಿ ಚ ರಾತಿರ್ದಾತವ್ಯಂ ಹವಿರ್ಬರ್ಹಿಷ್ಮತೀ । ಆಸ್ತೀರ್ಣೇನ ಬರ್ಹಿಷಾ ಯುಕ್ತಂ । ಯುಷ್ಮದರ್ಥಂ ಬರ್ಹಿಷ್ಯಾಸಾದಿತಮಿತ್ಯರ್ಥಃ । ತಥಾ ಗೀಃ ಸ್ತುತಿಲಕ್ಷಣಾ ವಾಕ್ ಚ ವಿಶ್ರಿತಾ । ಋತ್ವಿಕ್ಷು ಸಮವೇತಾ । ತೈಃ ಸ್ತುತಿರಪಿ ಕ್ರಿಯತ ಇತ್ಯರ್ಥಃ । ಅತೋ ಹೇ ನಾಸತ್ಯಾವಶ್ವಿನೌ ಇಷಾಸ್ಮಭ್ಯಂ ದಾತವ್ಯೇನಾನ್ನೇನ ವಾಜೈರ್ಬಲೈಶ್ಚ ಸಹ ಯುವಾಮುಪ ಯಾತಂ । ಅಸ್ಮತ್ಸಮೀಪಂ ಪ್ರಾಪ್ನುತಂ ॥ ಮಧ್ವಃ । ಸುಪಾಂ ಸುಪೋ ಭವಂತೀತಿ ತೃತೀಯಾರ್ಥೇ ಷಷ್ಠೀ । ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ । ಮದಾಯ । ಮದೀ ಹರ್ಷೇ । ಮದೋಽನುಪಸರ್ಗ ಇತ್ಯಪ್ । ರಾತಿಃ । ರಾ ದಾನೇ । ಕರ್ಮಣಿ ಕ್ತಿನ್ । ಮಂತ್ರೇ ವೃಷೇಷೇತ್ಯಾದಿನಾ ತಸ್ಯೋದಾತ್ತತ್ವಂ । ವಿಶ್ರಿತಾ । ಶ್ರಿಞ್ ಸೇವಾಯಾಂ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮಧ್ವಃ**—ಮಾಧುರ್ಯಯುಕ್ತವಾದ । **ಸೋಮಸ್ಯ**—ಸೋಮರಸದಿಂದ । **ಮದಾಯ**—(ನಿಮ್ಮಿಬ್ಬರ) ತೃಪ್ತಿಗೋಸ್ಕರ । **ಪ್ರತ್ನಃ**—ಪುರಾತನನಾದ । **ಹೋತಾ**—ಹೋಮಮಾಡುವ (ಯಜಮಾನನು) ವನು । **ವಾಂ**—ನಿಮ್ಮಿಬ್ಬರನ್ನು । **ಆ ವಿವಾಸತೇ**—(ಶಾಸ್ತ್ರೋಕ್ತವಾಗಿ) ಪರಿಚರಿಸುತ್ತಾನೆ । **ರಾತಿಃ**—(ನಿಮಗೆ ಕೊಡಬೇಕಾದ) ಹವಿಸ್ಸು । **ಬರ್ಹಿಷ್ಮತೀ**—ದರ್ಭೆಗಳಿಂದ ಯುಕ್ತವಾಗಿದೆ (ದರ್ಭೆಗಳಮೇಲೆ ಇಡಲ್ಪಟ್ಟಿದೆ) । **ಗೀಃ**—(ಸ್ತುತಿರೂಪವಾದ) ವಾಕ್ಕು । **ವಿಶ್ರಿತಾ**—(ಋತ್ವಿಜರಲ್ಲಿ) ಸಿದ್ಧವಾಗಿದೆ । (**ಅತಃ**—ಆದುದರಿಂದ) **ಹೇ ನಾಸತ್ಯಾ**—ಎಲೈ ನಾಸತ್ಯರೇ । **ಇಷಾ**—(ನಮಗೆ ಕೊಡಬೇಕಾದ) ಅನ್ನದಿಂದಲೂ । **ವಾಜೈಃ**—ಬಲದಿಂದಲೂ (ಸಹಯುಕ್ತರಾಗಿ) । **ಉಪ ಯಾತಂ**—(ನಮ್ಮ ಬಳಿಗೆ) ನೀವಿಬ್ಬರೂ ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ತೃಪ್ತಿಪಡಿಸುವುದಕ್ಕೋಸ್ಕರ, ಪುರಾತನನೂ, ಹೋಮಕರ್ತೃವೂ ಆದ ಯಜಮಾನು ಮಧುರವಾದ ಸೋಮರಸದಿಂದ ನಿಮ್ಮನ್ನು ಉಪಚರಿಸುತ್ತಾನೆ; ನಿಮಗೆ ದಾತವ್ಯವಾದ ಹವಿಸ್ಸು ದರ್ಭೆಗಳ ಮೇಲೆ ಸಿದ್ಧವಾಗಿದೆ; ಋತ್ವಿಜರೂ ಸ್ತುತಿಸಲು ಸಿದ್ಧವಾಗಿದಾರೆ; ಆದುದರಿಂದ, ಎಲೈ ನಾಸತ್ಯರೆ, (ನಮಗೆ ಕೊಡಬೇಕಾದ) ಬಲ, ಹವಿಸ್ಸುಗಳಿಂದ ಯುಕ್ತರಾಗಿ ನಮ್ಮನ್ನು ಸಮೀಪಿಸಿ.

## English Translation

Ashwins, for your gratification by the pleasant Soma juice, your ancient worshipper adores you: the offering is placed upon the sacred grass, the hymn is ready (for repetition); come, Nasatyas, with food and with vigour.

॥ ವಿಶೇಷ ವಿಷಯಗಳು ॥

**ಪ್ರತ್ನಃ ಹೋತಾ—ಚಿರಂತನಃ ಯಜಮಾನಃ ಹೋಮನಿಷ್ಪಾದಕಃ । ಪ್ರದಿವಃ, ಪ್ರವಯಾಃ** ಎಂಬ ಆರು ಪುರಾಣನಾಮಗಳಲ್ಲಿ **ಪ್ರತ್ನ**ಪದವು ಉಕ್ತವಾಗಿರುವುದರಿಂದಲೂ, (ನಿ. ೩–೨೦) ಮತ್ತು–

**ಪವಿತ್ರವಂತಃ ಪರಿ ವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿ ರಕ್ಷತಿ ವ್ರತಂ ।**
**ಮಹಃ ಸಮುದ್ರಂ ವರುಣಸ್ತಿರೋ ದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಂ ॥**

(ಋ. ಸಂ. ೯–೭೩–೩)

ಎಂಬಲ್ಲಿ **ಪ್ರತ್ನಃ ಪುರಾಣಃ** ಎಂದು ಯಾಸ್ಕರು ವ್ಯಾಖ್ಯಾನಮಾಡಿರುವುದರಿಂದಲೂ **ಚಿರಂತನಃ**—ಹಿಂದಿನಕಾಲದಿಂದಲೂ ನಡೆದು ಬಂದಿರುವುದು ಎಂದು ಸಾಯಣರು ಅರ್ಥವನ್ನು ಮಾಡಿರುತ್ತಾರೆ. ದೇವತೆಗಳಿಗಾಗಿ ಹವಿಸ್ಸನ್ನು ಅರ್ಪಿಸುವ ಯಜಮಾನನು ಎಂದು ಅರ್ಥ.

ಈ ಋಕ್ಕಿನಲ್ಲಿ ಹೋತೃವಾದ ಯಜಮಾನನು ಮಧುರವಾದ ಸೋಮರಸದಿಂದ ಕೂಡಿದ ಹವಿಸ್ಸನ್ನು ಅರ್ಪಿಸಿ ಅಶ್ವಿನೀದೇವತೆಗಳನ್ನು ಸೇವಿಸುತ್ತಾನೆ. ಇಲ್ಲಿ ಹೋತೃವು ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಮಂತ್ರದೃಕ್ಕಾಗಿರುವ ಕಕ್ಷೀವಂತನೂ ಕೂಡ ಯಾಗವನ್ನು ಮಾಡಿ ಅಥವಾ ಸ್ತುತಿಯನ್ನುಮಾಡಿ ಸಂತೋಷಪಡಿಸುವನೆಂದುಅರ್ಥವು.

**ಬರ್ಹಿಷ್ಮತೀ–ಆಸ್ತೀರ್ಣೇನ ಬರ್ಹಿಷಾ ಯುಕ್ತಂ। ಯುಷ್ಮದರ್ಥಂ ಬರ್ಹಿಷಿ ಆಸಾದಿತಂ।** ಯಜ್ಞವೇದಿಯಲ್ಲಿ ಬರ್ಹಿಸ್ಸೆಂಬ ದರ್ಭೆಗಳನ್ನು ಹರಡಿ ಮಂತ್ರಪೂರ್ವಕವಾಗಿ ಸಂಸ್ಕಾರಮಾಡಲ್ಪಟ್ಟ ಹವಿಸ್ಸು ಅಶ್ವಿನೀದೇವತೆಗಳಿಗಾಗಿ ಸಿದ್ಧವಾಗಿರುವುದೆಂದು ಅರ್ಥ.

**ಗೀಃ—ಸ್ತುತಿಲಕ್ಷಣಾ ವಾಕ್ ಚ ।** ಸ್ತುತಿರೂಪವಾಗಿರುವ ವಚನವೂ ಕೂಡ ಯಜ್ಞದಲ್ಲಿ ಅಶ್ವಿನೀದೇವತೆಗಳಿಗಾಗಿ ಹೇಳಲ್ಪಡುವಕಾರಣ ನಾಸತ್ಯಶಬ್ದಬೋಧ್ಯರಾದ ಅಶ್ವಿನೀದೇವತೆಗಳನ್ನು ಕುರಿತು ನೀವು ಯಜ್ಞಮಾಡುವ ಯಜಮಾನರ ಋತ್ವಿಕ್ಕುಗಳು ಹೇಳುವ ಸ್ತುತಿಗಳನ್ನು ಕೇಳಿ, ಅವರು ಅರ್ಪಿಸುವ ಹವಿಸ್ಸುಗಳನ್ನು ಸ್ವೀಕರಿಸಿ ನಮಗೆ ಬಲವನ್ನೂ ಮತ್ತು ಅನ್ನವನ್ನೂ ಅನುಗ್ರಹಿಸುವುದಕ್ಕಾಗಿ ನಮ್ಮ ಯಾಗಕ್ಕೆ ಬನ್ನಿರಿ ಎಂದು ಅಶ್ವಿನೀದೇವತೆಗಳನ್ನು ಈ ಋಕ್ಕಿನಲ್ಲಿ ಪ್ರಾರ್ಥಿಸಿದೆ.

**ವಾಜೈಃ—ಬಲೈಶ್ಚ–ಅಂಧಃ, ಪಯಃ** ಎಂಬ ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೨–೯) ಉಕ್ತವಾಗಿರುವ ವಾಜಶಬ್ದಕ್ಕೆ ಅನ್ನವೆಂದು ಅರ್ಥ. ಸಾಯಣರು ಇಲ್ಲಿ ಬಲವೆಂದು ಅರ್ಥವನ್ನು ವಿವರಿಸಿರುವರು.

**ಹಿರಣ್ಯಸ್ತೂಪಸ್ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ ।**
**ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ ॥**

(ಋ. ಸಂ. ೧೦–೧೪೯–೫)

**ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ ।**
**ಯಜ್ಞಂ ವಷ್ಟು ಧಿಯಾವಸುಃ ॥**

(ಋ. ಸಂ. ೧-೩-೧೦)

ಎಂಬ ಈ ಋಕ್ಕುಗಳಲ್ಲಿ **ವಾಜೇ ಅನ್ನೇ** ಎಂದು ಯಾಸ್ಕರು ಅರ್ಥವನ್ನು ವಿವರಿಸಿರುವುದರಿಂದ ವಾಜಶಬ್ದವು ಅನೇಕಾರ್ಥಕವಾಗಿರುವುದು. ಮತ್ತು **ಋಭುರ್ವಿಭ್ವಾ ವಾಜ ಇತಿ ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಃ** ಎಂದು ಯಾಸ್ಕರ ವಿವರಣೆಯಿಂದ ಋಭು, ವಿಭ್ವಾ, ವಾಜ ಎಂದು ಹೆಸರುಳ್ಳ ಮೂರು ಜನ ಪುತ್ರರು ಆಂಗಿರಸ್ಸಿನ ವಂಶದ ಸುಧನ್ವನಿಗೆ ಉತ್ಪನ್ನರಾಗಿದ್ದರು ಎಂದು ವಾಜ ಶಬ್ದವು ಒಬ್ಬ ವ್ಯಕ್ತಿಯ ಹೆಸರೂ ಆಗಿರುತ್ತದೆ. ಇದರಿಂದ ವಾಜ ಶಬ್ದವು ಅನೇಕಾರ್ಥವಾಚಕವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಮಧ್ವಃ**—ಮಧು ಶಬ್ದ. **ಸುಪಾಂ ಸುಪೋ ಭವಂತಿ** ಎಂಬವಚನದಿಂದ ತೃತೀಯಾರ್ಥದಲ್ಲಿ ಷಷ್ಠೀ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ **ಘೇರ್ಙಿತಿ** (ಪಾ. ಸೂ. ೭-೩-೧೧೧) ಎಂಬುದರಿಂದ ಗುಣ ಬರುವುದಿಲ್ಲ. ಯಣಾದೇಶ.

**ಅಶ್ವಿನಾ**—ಸಂಬೋಧನಾ ದ್ವಿವಚನದಲ್ಲಿ **ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮದಾಯ**—ಮದೀ ಹರ್ಷೇ. ಧಾತು. **ಮದೋನುಪಸರ್ಗೇ** (ಪಾ. ಸೂ. ೩-೩-೬೭) ಎಂಬುದರಿಂದ ಅಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಚತುರ್ಥೀ ಏಕ ವಚನಾಂತರೂಪ.

**ಪ್ರತ್ನಃ—ನಶ್ಚ ಪುರಾಣೇ ಪ್ರಾತ್** (ಪಾ. ಸೂ. ೫-೪-೨-೫೧) ಎಂಬುದರಿಂದ ಪ್ರಾಚೀನ ಎಂಬರ್ಥದಲ್ಲಿ ತ್ನ ಪ್ರತ್ಯಯ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹೋತಾ**—ಹು ದಾನಾದನಯೋಃ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿವಾಸತೇ**—ವಿವಾಸ ಸೇವಾಯಾಮ್. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ರಾತಿಃ**—ರಾ ದಾನೇ ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪.) ಎಂಬುದರಿಂದ ಕರ್ಮಣಿಯಲ್ಲಿ ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ವಿಶ್ರಿತಾ**—ಶ್ರಿಞ್ ಸೇವಾಯಾಂ ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೧-೪೯) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್‌ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಯೋ ವಾಮಶ್ವಿನಾ ಮನಸೋ ಜವೀಯಾನ್ರಥಃ ಸ್ವಶ್ವೋ ವಿಶ ಆಜಿಗಾತಿ ।
ಯೇನ ಗಚ್ಛಥಃ ಸುಕೃತೋ ದುರೋಣಂ ತೇನ ನರಾ ವರ್ತಿರಸ್ಮಭ್ಯಂ ಯಾತಂ ॥ ೨ ॥

॥ ಪದಪಾಠಃ ॥

ಯಃ । ವಾಂ । ಅಶ್ವಿನಾ । ಮನಸಃ । ಜವೀಯಾನ್ । ರಥಃ । ಸುಽಅಶ್ವಃ । ವಿಶಃ । ಆಽಜಿಗಾತಿ ।
ಯೇನ । ಗಚ್ಛಥಃ । ಸುಽಕೃತಃ । ದುರೋಣಂ । ತೇನ । ನರಾ । ವರ್ತಿಃ । ಅಸ್ಮಭ್ಯಂ । ಯಾತಂ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ವಾಂ ಯುವಯೋಃ ಸ್ವಭೂತೋ ಮನಸೋ ಜವೀಯಾನ್ ಮನಸೋಽಪ್ಯತಿಶಯೇನ ವೇಗವಾನ್ ಸ್ವಶ್ವಃ ಶೋಭನಾಶ್ವ ಏವಂಭೂತೋ ಯೋ ರಥೋ ವಿಶಃ ಪ್ರಜಾ ಆಜಿಗಾತಿ ಅಭಿಮುಖ್ಯೇನ ಗಚ್ಛತಿ । ಯೇನ ರಥೇನ ಸುಕೃತಃ ಶೋಭನಂ ಯಾಗಂ ಕುರ್ವತೋ ಯಜಮಾನಸ್ಯ ದುರೋಣಂ ದೇವಯಜನಲಕ್ಷಣಂ ಗೃಹಂ ಗಚ್ಛಥಃ । ಹೇ ನರಾ ನೇತಾರಾವಶ್ವಿನೌ ತೇನ ರಥೇನಾಸ್ಮಭ್ಯಮಸ್ಮಾಕಂ ವರ್ತಿರ್ವರ್ತನಾಧಿಕರಣಂ ಗೃಹಂ ಯಾತಂ । ಆಗಚ್ಛತಂ ॥ ಜವೀಯಾನ್ । ಜವೋಽಸ್ಯಾಸ್ತೀತಿ ಜವವಾನ್ ತದಸ್ಯಾಸ್ತೀತಿ ಮತುಪ್ । ತತ ಆತಿಶಾಯನಿಕ ಈಯಸುನ್ । ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ । ಜಿಗಾತಿ । ಗಾ ಸ್ತುತೌ । ಜುಹೋತ್ಯಾದಿಕಃ । ಗತಿಕರ್ಮಸು ಪಾಠಾದತ್ರ ಗತ್ಯರ್ಥಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ ॥**

॥ ಪ್ರತಿಪದಾರ್ಥ ॥

**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರಿಗೆ (ಸೇರಿದ) । **ಮನಸಃ**—ಮನಸ್ಸಿಗಿಂತಲೂ । **ಜವೀಯಾನ್**—(ಹೆಚ್ಚಾಗಿ) ವೇಗಶಾಲಿಯಾದುದೂ । **ಸ್ವಶ್ವಃ**—ಒಳ್ಳೆಯ ಅಶ್ವಗಳಿಂದ ಯುಕ್ತವಾದುದೂ ಆದ । **ಯಃ ರಥಃ**—ಯಾವ ರಥವು । **ವಿಶಃ**—ಪ್ರಜೆಗಳಿಗೆ । **ಆಜಿಗಾತಿ**—ಅಭಿಮುಖವಾಗಿ ಹೋಗುತ್ತದೆಯೋ, । **ಯೇನ**—ಯಾವ ರಥದಿಂದ । **ಸುಕೃತಃ**—ಮಂಗಳಕರವಾದ ಯಾಗಗಳನ್ನು ಮಾಡುವ (ಯಜಮಾನನ) ವನ । **ದುರೋಣಂ**—ಪೂಜಾಗೃಹಕ್ಕೆ । **ಗಚ್ಛಥಃ**—ಹೋಗುತ್ತೀರೋ, । **ತೇನ**—ಆ ರಥದಿಂದ । **ಹೇ ನರಾ**—ಎಲೈ ನೇತೃಗಳಾದ ಅಶ್ವಿನೀದೇವತೆಗಳೇ, । **ಅಸ್ಮಭ್ಯಂ**-ನಮ್ಮ । **ವರ್ತಿಃ**—ವಾಸಗೃಹಕ್ಕೆ । **ಯಾತಂ**—ಬನ್ನಿ.

॥ ಪದಪಾಠಃ ॥

ಎಲೈ ನೇತೃಗಳೇ, ಮನಸ್ಸಿಗಿಂತಲೂ ವೇಗಶಾಲಿಯಾದ ಒಳ್ಳೆಯ ಅಶ್ವಗಳಿಂದ ಯುಕ್ತವಾದ ಯಾವ ರಥದಲ್ಲಿ (ಎಲ್ಲಾ) ಪ್ರಜೆಗಳ ಅಭಿಮುಖವಾಗಿ ಹೋಗುತ್ತೀರೋ, ಮತ್ತು ಯಾವ ರಥದಲ್ಲಿ, ಯಾಗಕರ್ತೃಗಳ ಪೂಜಾಗೃಹಕ್ಕೆ ಹೋಗುತ್ತೀರೋ, ಅದೇ ರಥದಲ್ಲಿ, ಎಲೈ ಅಶ್ವಿನೀದೇವತೇಗಳೇ, ನಮ್ಮ ವಾಸಗೃಹಕ್ಕೂ (ನೀವಿಬ್ಬರೂ) ಆಗಮಿಸಿ.

## English Translation.

With that car, Ashwins, which, rapid as thought, drawn by good horses, appears before men, and with which you repair to the dwelling of the virtuous, come, leaders of (sacrifices), to our abode.

॥ ವಿಶೇಷವಿಷಯಗಳು ॥

**ಅಶ್ವಿನಾ**—ಯಾಸ್ಕರು ಅಶ್ವಿನೀದೇವತೆಗಳ ವಿಷಯದಲ್ಲಿ ಇವರು ಯಾರು ಎಂಬುವದನ್ನು ವಿಮರ್ಶೆಮಾಡಿರುವರು. ನಿರುಕ್ತದಲ್ಲಿ ಈ ವಿಷಯದಲ್ಲಿ ಹೇಳಿರುವ ಕ್ರಮವು ಹೀಗೆ ಇರುತ್ತದೆ—

**ಅಥಾತೋ ದ್ಯುಸ್ಥಾನಾ ದೇವತಾಃ । ತಾಸಾಮಶ್ವಿನೌ ಪ್ರಥಮಾಗಾಮಿನೌ ಭವತಃ । ಅಶ್ವಿನೌ ಯದ್ವ್ಯಶ್ನುವಾತೇ ಸರ್ವಂ ರಸೇನಾನ್ಯೋ ಜ್ಯೋತಿಷಾನ್ಯಃ । ಅಶ್ವೈರಶ್ವಿನಾವಿತ್ಯೌರ್ಣವಾಭಃ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ಅಹೋರಾತ್ರಾವಿತ್ಯೇಕೇ । ಸೂರ್ಯಾಚಂದ್ರಮಸಾವಿತ್ಯೇಕೇ । ರಾಜಾನೌ ಪುಣ್ಯಕೃತಾವಿತ್ಯೈತಿಹಾಸಿಕಾಃ ।** (ನಿ. ೧೨-೧)

ಇಲ್ಲಿಂದ ಮುಂದಕ್ಕೆ ದ್ಯುಸ್ಥಾನದಲ್ಲಿರುವ ದೇವತೆಗಳನ್ನು ವಿವರಿಸುವೆವು ಎಂದು ಪ್ರಾರಂಭಿಸಿ ಅದರಲ್ಲಿ ಅಶ್ವಿನೀದೇವತೆಗಳು ಯಾರು ಎಂಬುದನ್ನು ವಿಮರ್ಶೆಮಾಡುವುದು ಮೊದಲನೆಯ ವಿಷಯವಾಗಿರುತ್ತದೆ ಎಂದು ವಿವರಣೆಯನ್ನು ಉಪಕ್ರಮಮಾಡಿರುವರು. ಉದಕದಿಂದ ಎಲ್ಲವನ್ನೂ ವ್ಯಾಪಿಸುವವನು ಒಬ್ಬನು. ತೇಜಸ್ಸಿನಮೂಲಕ ಎಲ್ಲವನ್ನೂ ವ್ಯಾಪಿಸಿರುವವನು ಒಬ್ಬನು ಎಂದು ಇವರಿಬ್ಬರು ಇರುವರು ಎಂದು ಒಂದು ಮತವು. ಊರ್ಣವಾಭನೆಂಬ ಆಚಾರ್ಯನು ಅಶ್ವಗಳುಳ್ಳ ಇಬ್ಬರು ದೇವತೆಗಳು ಅಶ್ವಿನೀದೇವತೆಗಳು ಎಂದು ಹೇಳುವನು. ಇನ್ನು ಕೆಲವರು ಅಶ್ವಿನೀದೇವತೆಗಳು ಯಾರು ಎಂಬ ವಿಚಾರದಲ್ಲಿ ಭೂಮಿಯನ್ನು ಅನ್ನದಿಂದಲೂ, ಅಂತರಿಕ್ಷವನ್ನು ತೇಜಸ್ಸಿನಿಂದಲೂ ವ್ಯಾಪಿಸಿರುವ ಇಬ್ಬರು ದೇವತೆಗಳು ಎಂದು ಪ್ರತ್ಯಕ್ಷವಾಗಿ ಎಲ್ಲರಿಗೂ ತಿಳಿದಿರುವ (ಭೂವ್ಯಂತರಿಕ್ಷ) ದ್ಯಾವಾಪೃಥಿವಿಗಳನ್ನಾಗಿ ಹೇಳುತ್ತಾರೆ. ಇನ್ನು ಕೆಲವರು ಹಗಲನ್ನು ಬೆಳಕಿನಿಂದಲೂ, ರಾತ್ರಿಯನ್ನು ಹಿಮದಿಂದಲೂ ವ್ಯಾಪಿಸಿರುವ ಇಬ್ಬರು ದೇವತೆಗಳೇ ಅಶ್ವಿನೀದೇವತೆಗಳೆಂದು ಹೇಳುವುದಕ್ಕೆ ಬದಲಾಗಿ ಇವರಿಬ್ಬರ ವ್ಯಾಪ್ತಿಗೆ ಆಶ್ರಯವಾದ ಅಹೋರಾತ್ರರೂಪವಾದ ಕಾಲವನ್ನೇ ಅಶ್ವಿನೀದೇವತೆಗಳೆಂದು ಹೇಳುತ್ತಾರೆ. ಮತ್ತೆ ಕೆಲವರು-ಸೂರ್ಯನು ಪ್ರಕಾಶದಿಂದಲೂ ಚಂದ್ರನು ಉದಕದಿಂದಲೂ ವ್ಯಾಪಿಸುವಕಾರಣ ಕಾಲನಿಯಾಮಕರಾದ ಚಂದ್ರಸೂರ್ಯರನ್ನೇ ಅಶ್ವಿನೀದೇವತೆಗಳನ್ನಾಗಿ ಹೇಳುವರು. ಇತಿಹಾಸವನ್ನು ಅಂದರೆ ಹಿಂದಿನಕಾಲದಲ್ಲಿ ನಡೆದುಬಂದಿರುವ ಕ್ರಮವನ್ನು ಅಥವಾ ವಿದ್ಯಮಾನವನ್ನು ತಿಳಿದವರು ಪುಣ್ಯವನ್ನು ರಾಶಿರಾಶಿಯಾಗಿರುವಂತೆ ಕೂಡಿಹಾಕಿರುವ ಇಬ್ಬರು ರಾಜರುಗಳೇ ಅಶ್ವಿನೀದೇವತೆಗಳು ಎಂದು ಹೇಳುವರು. ಈ ಮತವು ಊರ್ಣವಾಭರೆಂಬ ಆಚಾರ್ಯರು ಒಪ್ಪಿರುವ ಮತಕ್ಕೆ ಸರಿಯಾಗುವುದು.

**ತಯೋಃ ಕಾಲ ಊರ್ಧ್ವಮರ್ಧರಾತ್ರಾತ್ ಪ್ರಕಾಶೀಭಾವಸ್ಯಾನುವಿಷ್ಟಂಭಂ । ಅನುತ್ತಮೋ ಭಾಗೋ ಹಿ ಮಧ್ಯಮಃ ಜ್ಯೋತಿರ್ಭಾಗ ಆದಿತ್ಯಃ ।**

(ನಿ. ೧೨-೧)

ಉದಯಕ್ಕಿಂತ ಪೂರ್ವದಲ್ಲಿ ಅಶ್ವಿನೀದೇವತೆಗಳ ಸ್ತೋತ್ರವನ್ನೂ, ಸೂರ್ಯನ ಉದಯವಾದನಂತರ ಸೂರ್ಯನ ಸ್ತೋತ್ರಗಳನ್ನು ಪಠಿಸುವುದರಿಂದ ಕೊಂಚಮಟ್ಟಿನ ಕತ್ತಲೆಯಿಂದ ಕೂಡಿರುವ ಬೆಳಕಿನ ಭಾಗವು ಸೂರ್ಯೋದಯಕ್ಕಿಂತ ಪೂರ್ವದಲ್ಲಿರುವುದು ಮಧ್ಯಮವೆನಿಸಿರುತ್ತದೆ. ಕತ್ತಲೆಯನ್ನು ಸಂಪೂರ್ಣವಾಗಿ ಹೋಗಲಾಡಿಸುವ ಸ್ವತಂತ್ರವಾಗಿಯೂ ಪ್ರಕಾಶವನ್ನು ಹೊಂದಿರುವ ಜ್ಯೋತಿಸ್ಸಿನ ಭಾಗವು ಉತ್ತಮವಾಗಿ ಆದಿತ್ಯನೆಂದು ಹೆಸರನ್ನು

ಹೊಂದಿರುವುದು. ಹೀಗೆ ಮಧ್ಯಮ ಮತ್ತು ಉತ್ತಮಭಾವದಿಂದ ಇರುವ ಕಾಲವು ಅಶ್ವಿನೀದೇವತೆಗಳೆಂದು ನಿರುಕ್ತಕಾರರ ಮತವಾಗಿರುತ್ತದೆ.

**ವಸಾತಿಷು ಸ್ಮ ಚರಥೋಽಸಿತೌ ಪೇತ್ವಾವಿವ ।**
**ಕದೇದಮಶ್ವಿನಾ ಯುವಮಭಿದೇವಾँ ಅಗಚ್ಛತಮ್ ॥**

**ಇತಿ ಸಾ ನಿಗದವ್ಯಾಖ್ಯಾತಾ । ವಸಾತಿಷು ಸ್ಮ ಚರಥೋ ವಸಾತೆಯೋ ರಾತೆಯೋ ವಸಂತೇ ಸ್ಮಾ ಇತರೇತರಾ ತಯೋಃ, ವಕ್ತೇರ್ವಾ ವಹತೇರ್ವಾ ಸಿತೌ ಪೇತ್ವಾವಿವ । ಅಪೇತ್ವಾ ವೃತ್ರೈಹಣಂ ಸುರಾತೆಯೋಃ ॥ (ನಿ. ೧೨-೧)**

ದೇವತೆಗಳ ಶಕ್ತಿಯಿಂದ ದರ್ಶನಕಾರ್ಯವನ್ನು ಆಚರಿಸುತ್ತಿರುವ ಕಣ್ಣಿನ ಪ್ರಕಾಶವು ಕಡಿಮೆಯಾದಾಗ ರಾತ್ರಿಯಲ್ಲಿಯೂ, ಅಹೋರಾತ್ರಿಗಳ ಸಂಧಿಕಾಲದಲ್ಲಿಯೂ, ಕಪ್ಪಗಿರುವ ಮೇಘಗಳ ಹಾಗೆ ಸಂಚರಿಸುತ್ತಿರುವ ನಿಮ್ಮನ್ನು ಉಷಃಕಾಲದಲ್ಲಿ ನಾನು ಅತಿಪ್ರಯಾಸದಿಂದ ಗುರ್ತಿಸಿರುವೆನು. ಇತರ ದೇವತೆಗಳೆಲ್ಲರೂ ಯಾಗಕ್ಕಾಗಿ ಬರುವ ಕಾಲದಲ್ಲಿಯೇ ಅಶ್ವಿನೀದೇವತೆಗಳಾದ ನೀವೂ ಬರುತ್ತೀರಿ ಎಂದು ಈ ಮಂತ್ರದಲ್ಲಿ ಉಕ್ತವಾಗಿರುವುದರಿಂದ ಇವರಿಬ್ಬರೂ ಯಾಗಕ್ಕೆ ಬರುವ ಕಾಲವು ಅರ್ಧರಾತ್ರಿಯು ಕಳೆದನಂತರ ಆಗಿರುತ್ತದೆ. ಇವರಿಬ್ಬರಿಗೋಸ್ಕರ ಎರಡು ಪಾತ್ರೆಗಳಲ್ಲಿ (ಎರಡು ಕಪಾಲಗಳಲ್ಲಿ) ಹವಿಸ್ಸನ್ನು ಸಿದ್ಧಪಡಿಸುವರು. ಇವರಿಬ್ಬರೂ ಒಂದೇ ಅಭಿಪ್ರಾಯವುಳ್ಳವರಾಗಿ ಕಾರ್ಯವನ್ನು ನೆರವೇರಿಸುವವರು. ಇವರ ಸ್ತೋತ್ರವೂ ಕೂಡ ಇಬ್ಬರನ್ನೂ ಒಂದೇ ರೀತಿಯಾಗಿ ಲಕ್ಷೀಕರಿಸಿರುವುದು ಎಂದು ಇವರ ವಿಷಯವು ತಿಳಿದುಬರುತ್ತದೆ. ಊರ್ಣವಾಭಾಚಾರ್ಯರು ಹೇಳುವುದಕ್ಕೂ ನಿರುಕ್ತಕಾರರು ಹೇಳುವುದಕ್ಕೂ ಆಧಾರವಾದ ಮಂತ್ರದಲ್ಲಿ ಇವರಿಬ್ಬರೂ ಬೇರೆಬೇರೆಯಾದ ಅರ್ಥಗಳನ್ನು ಕಲ್ಪಿಸಿರುವರು.

ಈ ಮಂತ್ರದಲ್ಲಿ ವಸಾತಿಷು-ವಸಾತಿ ಎಂಬ ಪದವು ದೇಶದ ಹೆಸರು. ಅದಕ್ಕೆ ರಾಜರಾದವರು ಇಬ್ಬರು ವಾಸಾತ್ಯರೆನಿಸಿರುವರು. ಇವರಿಗೆ ಬಹಳ ಕುದುರೆಗಳು ಇದ್ದವು. ಆದ್ದರಿಂದ ಅಶ್ವವುಳ್ಳವರು ಅಶ್ವಿನಿಗಳು ಎಂದು ಇವರಿಗೆ ಹೆಸರಾಯಿತು. ಇವರು ಬಹಳ ಪುಣ್ಯವನ್ನು ಆರ್ಜನೆಮಾಡಿ ದೇವತೆಗಳ ಯಜ್ಞಗಳಲ್ಲಿ ಸಹಾಯಕರಾಗಿದ್ದರು. ಇವರು ಇಬ್ಬರೂ ಒಂದೇಸಮನಾದ ವೇಷ, ರೂಪ, ಕಾರ್ಯಾಚರಣೆ ಇವುಗಳು ಉಳ್ಳವರಾಗಿ ಸಂಚರಿಸುತ್ತಾ ದೇವತೆಗಳೊಡನೆ ಗಣನೆಗೆ ಸೇರಿರುವರು ಎಂದು ಊರ್ಣವಾಭಾಚಾರ್ಯರು ಅರ್ಥವನ್ನು ಹೇಳುತ್ತಾರೆ. ಈ ಮತವನ್ನು ಖಂಡಿಸುತ್ತಾ ನಿರುಕ್ತಕಾರರು.

**ತಯೋಃ ಸಮಾನಕಾಲಯೋಃ ಸಮಾನಕರ್ಮಣೋಃ ಸಂಸ್ತುತಪ್ರಾಯಯೋಃ ಅಸಂಸ್ತವೇ-ನೈಷೋಽರ್ಧರ್ಚೋ ಭವತಿ । ವಾಸಾತ್ಯೋ ಅನ್ಯ ಉಚ್ಯತೆ ಉಷಃ ಪುತ್ರಸ್ತ್ವನ್ಯ ಇತಿ ।**

ಇವರಿಬ್ಬರಿಗೂ ಒಂದೇಕಾಲವೂ, ಇವರಬ್ಬರ ಕೆಲಸವೂ ಒಂದೇ ವಿಧವಾಗಿಯೂ ಸ್ತುತಿಯು ಅತಿಶಯವಾಗಿಯೂ ಇರುವುದರಿಂದ **ವಸಾತಿಷು** ಎಂಬ ಋಕ್ಕಿನ ಪೂರ್ವಾರ್ಧವು ಇವರಿಬ್ಬರ ರೂಪ ಮತ್ತು ಕರ್ಮಗಳನ್ನು ವಿವರಿಸತಕ್ಕದ್ದಾಗಿರುತ್ತದೆ. ಇದರಿಂದ ವಾಸಾತ್ಯನೆಂಬವನು ಒಬ್ಬನು ಬೇರೆಯಾಗಿರುವನು ಇನ್ನೊಬ್ಬನು ಉಷಸ್ಸಿನ ಪುತ್ರನಾಗಿರು

ವನು ಎಂದು ಹೇಳಿರುವರು. ಇದರಿಂದ ಇವರು ಬೇರೆಬೇರೆಯಾದವರು ಎಂದು ಸ್ತುತಿಯನ್ನು ಬೋಧಿಸುವ ಈ ಅರ್ಥ ಋಕ್ಕಿನಿಂದ ವಾಸಾತ್ಯನೆಂಬವನು ಮಧ್ಯಮಸ್ಥಾನೀಯನಾದ ರಾತ್ರಿಯ ಪುತ್ರನು. ಮತ್ತೊಬ್ಬನು ಉಷಃಪುತ್ರನು ಎಂದು ವರ್ಣಿಸಿದೆ. ಈ ಅಶ್ವಿನೀದೇವತೆಗಳ ಮಧ್ಯಮೋತ್ತಮ ಭಾವವು--

**ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ೩ ನಾಮಭಿಃ ಸ್ವೈಃ ।**
**ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ ॥**

(ಋ. ಸಂ. ೧-೧೮೧-೪)

ಈ ಋಕ್ಕಿನಲ್ಲಿ **ಇಹ ಚ** ದ್ಯುಸ್ಥಾನೇ ಮಧ್ಯಮಸ್ಥಾನೇ ಎಂದು ವ್ಯಾಖ್ಯಾನಮಾಡಿ **ದಿವಃ ಅನ್ಯಃ ಸುಭಗಃ ಪುತ್ರಃ ಊಹೇ** ಎಂಬುದಾಗಿಯೂ **ಜಿಷ್ಣುರ್ವಾಮನ್ಯಃ** ಎಂಬುದಾಗಿಯೂ ವಾಯುವಿನಿಂದ ದ್ಯುಸ್ಥಾನದ ಒಬ್ಬ ಪುತ್ರನು ವಹಿಸಲ್ಪಡುವನು. ಇನ್ನೊಬ್ಬನು ಜಯಶೀಲನಾಗಿರುವ ಆದಿತ್ಯನು ಎಂದು ಹೇಳಿರುವುದರಿಂದ ಇವರ ಉತ್ತಮ ಮಧ್ಯಮಭಾವವು ವ್ಯಕ್ತವಾಗಿರುತ್ತದೆ.

**ಪ್ರಾತರ್ಯುಜಾ ವಿ ಬೋಧಯಾಶ್ವಿನಾವೇಹ ಗಚ್ಛತಾಂ ।**
**ಅಸ್ಯ ಸೋಮಸ್ಯ ಪೀತಯೇ ॥**

(ಋ. ಸಂ. ೧-೨೨-೧)

ಎಂಬ ಈ ಋಕ್ಕಿನಿಂದ ಇವರು ಸ್ತುತಿಪ್ರಿಯರಾಗಿರುವರು. ಇಬ್ಬರೂ ಒಂದೇವಿಧವಾದ ಅಭಿಪ್ರಾಯದಿಂದ ಕಾರ್ಯವನ್ನು ಮಾಡುತ್ತಾ ಸಹಚಾರಿಗಳಾಗಿರುವರು ಎಂದು ವಿವರಿಸಿದೆ.

**ಪ್ರಾತರ್ಯಜಧ್ವಮಶ್ವಿನಾ ಹಿನೋತ ನ ಸಾಯಮಸ್ತಿ ದೇವಯಾ ಅಜುಷ್ಟಮ್ ।**
**ಉತಾನ್ಯೋ ಅಸ್ಮದ್ಯಜತೇ ವಿ ಚಾವಃ ಪೂರ್ವಃಪೂರ್ವೋ ಯಜಮಾನೋ ವನೀಯಾನ್ ॥**

(ಋ. ಸಂ. ೫-೭೭-೨)

ಎಂಬ ಈ ಋಕ್ಕಿನಲ್ಲಿ ಈ ಅಶ್ವಿನೀದೇವತೆಗಳಿಗಾಗಿ ಪ್ರಾತಃಕಾಲದಲ್ಲಿಯೇ ಸ್ತುತಿಯನ್ನು ಮಾಡಿ ಹವಿಸ್ಸುಗಳನ್ನು ಅರ್ಪಿಸಬೇಕು ಎಂದು ವರ್ಣಿಸಿದೆ. ಸಾಯಂಕಾಲದಲ್ಲಿ ಇವರಿಗಾಗಿ ಹೋಮವನ್ನು ಆಚರಿಸಕೂಡದೆಂದು ವಿವರಿಸಿದೆ. ತೈತ್ತಿರೀಯ ಆರಣ್ಯಕದಲ್ಲಿಯೂ ಕೂಡ ಈ ಅಶ್ವಿನೀದೇವತೆಗಳ ವಿಷಯದಲ್ಲಿ **ವಾಸಾತ್ಯೌ ಕೃಷ್ಣೌ ಜಗತೋ ನಿಧಾನೌ । ದ್ಯಾವಾಭೂಮೀ ಚರಥಸ್ಸಂಸಖಾಯೌ ।** ಎಂದು ಮೊದಲಾಗಿ ಇವರ ರೂಪನಡವಳಿಕೆ ಮೊದಲಾದವನ್ನು ವಿವರಿಸಿದೆ.

ಅಶ್ವಿನೀದೇವತೆಗಳ ರಥವು ಉತ್ತಮವಾದ ಕುದುರೆಗಳನ್ನು ಕಟ್ಟಿದ್ದಾಗಿ ಮನೋವೇಗಕ್ಕಿಂತಲೂ ಅತಿಶಯವಾದ ವೇಗದಿಂದ ಸಂಚರಿಸತಕ್ಕದ್ದು. ಅಶ್ವಿನೀದೇವತೆಗಳನ್ನು ಯಜ್ಞಮಾಡುವ ಯಜಮಾನನ ಮತ್ತು ಪ್ರಜೆಗಳಾದ ನಮ್ಮ ಮನೆಗೂ ಈ ಪ್ರಕಾರದಿಂದ ಇರುವ ರಥದಿಂದ ಬರಬೇಕೆಂದು ಪ್ರಾರ್ಥನೆಯು ವರ್ಣಿಸಿದೆ.

**ವರ್ತಿಃ—ವರ್ತನಾಧಿಕರಣಂ ಗೃಹಂ**—ವಾಸಮಾಡಲು ಆಶ್ರಯವಾದ ಮನೆಯು ಎಂದು ಸಾಯಣರು ವರ್ತಿಶಬ್ದಕ್ಕೆ ಅರ್ಥವನ್ನು ವಿವರಿಸಿರುವರು.

**ತಿರಶ್ಚಿದರ್ಯಯಾ ಪರಿ ವರ್ತಿರ್ಯಾತಮದಾಭ್ಯಾ ಮಾಧ್ವೀ ಮಮ ಶ್ರುತಂ ಹವಂ ।**

(ಋ. ಸಂ. ೫-೭೫-೭)

**ಅಭೀದು ಶಕ್ರಾಃ ಪರಶುರ್ಯಥಾ ವನಂ ಪಾತ್ರೇವ ಭಿಂದನ್ತ್ಸತ ಏತಿ ರಕ್ಷಸಃ ।**

(ಋ. ಸಂ. ೭-೧೦೪-೨೧)

ಎಂದು ನಿರುಕ್ತದಲ್ಲಿ (ನಿ. ೩-೨೦) ಯಾಸ್ಕರು ಉದಾಹರಣೆಯನ್ನು ಕೊಟ್ಟಿರುವರು. **ವರ್ತಿಃ** ಎಂಬ ಶಬ್ದವನ್ನು ಉಪಸರ್ಗದೊಡನೆ ಸೇರಿಸಿ **ಪರಿವರ್ತಿಃ ಯಾತಂ ಪರಿವರ್ತನಂ ಕೃತ್ವಾ ಆಯಾತಂ** ರಥವನ್ನು ತಿರುಗಿಸಿಕೊಂಡು ಬನ್ನಿರಿ ಎಂದು ವೃತ್ತಿಯಲ್ಲಿ ವ್ಯಾಖ್ಯಾನಮಾಡಿರುತ್ತಾರೆ. ಇಲ್ಲಿ ವರ್ತಿಃ ಎಂಬ ಶಬ್ದವನ್ನು ಕ್ರಿಯಾವಿಶೇಷಣವಾಗಿ ಉಪಯೋಗಿಸಿದೆ. ಸ್ಕಂದಸ್ವಾಮಿಗಳು **ವರ್ತಿಃ ವರ್ತನ್ಯಾ ಮಾರ್ಗೇಣ** ರಥವು ಬರತಕ್ಕ ಮಾರ್ಗದಿಂದ ಎಂದು ವರ್ತಿಃ ಶಬ್ದಕ್ಕೆ ಅರ್ಥವನ್ನು ಹೇಳಿರುತ್ತಾರೆ.

**ದುರೋಣಂ—ದೇವಯಜನಲಕ್ಷಣಂ ಗೃಹಂ** ದೇವತೆಗಳಿಗಾಗಿ ಯಜ್ಞವನ್ನು ಮಾಡುವ ಮನೆಯು. ಯಜ್ಞಶಾಲೆ ಎಂದು ಅರ್ಥ. **ದುರೋಣೆ** ಎಂಬ ಶಬ್ದವು ಇಪ್ಪತ್ತೆರಡು ಗೃಹವಾಚಕಗಳಲ್ಲಿ (ನಿ. ೩-೧೩) ಪಠಿತವಾಗಿದೆ.

**ವಿಶಃ—ಪ್ರಜಾಃ ।** ಪ್ರಜೆಗಳು ಎಂದು ಅರ್ಥ. ಇಪ್ಪತ್ತೈದು ಮನುಷ್ಯನಾಮಗಳಲ್ಲಿ (ನಿ. ೩-೮) ಈ ಪದವು ಉಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಶ್ವಿನಾ—ಸುಪಾಂ ಸುಲುಕ್—**(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಜವೀಯಾನ್**—ಜವಃ ಅಸ್ಯಾಸ್ತೀತಿ ಜವವಾನ್. **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಇದರ ಮೇಲೆ ಅತಿಶಯಾರ್ಥತೋರುವಾಗ **ದ್ವಿವಚನವಿಭಜ್ಯೋ**—(ಪಾ. ಸೂ. ೫-೩-೫೭) ಎಂಬುದರಿಂದ ಈಯಸುನ್ ಪ್ರತ್ಯಯ. ಇದು ಪರವಾದಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ಮತುಪ್ ಪ್ರತ್ಯಯಕ್ಕೆ ಲುಕ್. **ಟೇಃ** (ಪಾ. ಸೂ. ೬-೪-೧೪೩) ಎಂಬುದರಿಂದ ಟಿಗೆ (ಅಕಾರ) ಲೋಪ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಜವೀಯಸ್ ಶಬ್ದ ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ.

**ಜಿಗಾತಿ**—ಗಾ ಸ್ತುತೌ. ಧಾತು. ಜುಹೋತ್ಯಾದಿ. ಗತಿಕರ್ಮಕಧಾತು ಮಧ್ಯದಲ್ಲಿ ಪಾಠಮಾಡಿರುವುದರಿಂದ ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಅಭ್ಯಾಸಕ್ಕೆ ಜಕಾರಾದೇಶ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**

(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗಚ್ಛಥಃ**—ಗಮ್ಲೃ ಗತೌ. ಧಾತು. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಇಷುಗಮಿಯಮಾಂ ಛಃ** (ಪಾ. ಸೂ ೭-೩-೭೭) ಎಂಬುದರಿಂದ ಧಾತುವಿಗೆ ಛಾದೇಶ. ಹಿಂದಿನಂತೆ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಯಾತಮ್**—ಯಾ ಪ್ರಾಪಣೇ ಧಾತು ಲೋಟ್ ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

॥ ಸಂಹಿತಾಪಾಠಃ ॥

ಋಷಿಂ ನರಾವಂಹಸಃ ಪಾಂಚಜನ್ಯಮೃಬೀಸಾದತ್ರಿಂ ಮುಂ-
ಚಥೋ ಗಣೇನ ।
ಮಿನಂತಾ ದಸ್ಯೋರಶಿವಸ್ಯ ಮಾಯಾ ಅನುಪೂರ್ವಂ ವೃಷಣಾ
ಚೋದಯಂತಾ ॥ ೩ ॥

॥ ಪದಪಾಠಃ ॥

ಋಷಿಂ । ನರೌ । ಅಂಹಸಃ । ಪಾಂಚಽಜನ್ಯಂ । ಋಬೀಸಾತ್ । ಅತ್ರಿಂ ।
ಮುಂಚಥಃ । ಗಣೇನ ।
ಮಿನಂತಾ । ದಸ್ಯೋಃ । ಅಶಿವಸ್ಯ । ಮಾಯಾಃ । ಅನುಽಪೂರ್ವಂ । ವೃಷಣಾ ।
ಚೋದಯಂತಾ ॥ ೩ ॥

॥ ಸಾಯಣಭಾಷ್ಯಂ ॥

ಹಿಮೇನಾಗ್ನಿಂ । ಋಗ್ವೇ. ೧-೧೧೬-೮ । ಇತ್ಯನಯೋಕ್ತ ಏವಾರ್ಥಃ ಪುನಃ ಪ್ರಕಾರಾಂತರೇಣಾನಯಾ ಪ್ರತಿಪಾದ್ಯತೇ । ಅತಸ್ತತ್ರೋಕ್ತಂ ಸರ್ವಮತ್ರಾಪಿ ದ್ರಷ್ಟವ್ಯಂ । ಅಕ್ಷರಾರ್ಥಸ್ತು । ಹೇ ನರೌ ನೇತಾರೌ ವೃಷಣಾ ಕಾಮಾನಾಂ ವರ್ಷಿತಾರಾವಶ್ವಿನೌ ಪಾಂಚಜನ್ಯಂ । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚ ಜನಾಃ । ತೇಷು ಭವಂ । ಸ್ವರ್ಭಾನುನಾ ಗೃಹೀತಮಮುಂ ಸೂರ್ಯಂ ಮೋಚಯನ್ನತ್ರಿಃ ಸರ್ವೇಷಾಂ ಹಿತಾಚರಣಾತ್ತತ್ರ ಭವ ಇತ್ಯುಚ್ಯತೇ । ತಾದೃಶಮೃಷಿಮಂಹಸಃ ಪಾಪರೂಪಾದೃಬೀಸಾತ್ ಶತದ್ವಾರೇ ಯಂತ್ರಗೃಹೇಽತ್ರೇಃ ಪೀಡಾರ್ಥಮಸುರೈಃ ಪ್ರಕ್ಷಿಪ್ತಾತ್ತುಷಾಗ್ನೇಃ ಸಕಾಶಾದ್ಗಣೇನೇಂದ್ರಿಯವರ್ಗೇಣ ಪುತ್ರಪೌತ್ರಾದಿಗಣೇನ ವಾ ಸಹ ಮುಂಚಥಃ । ಅಮೋಚಯತಂ । ಕಿಂ ಕುರ್ವಂತೌ । ಮಿನಂತಾ ಶತ್ರೂನ್ ಹಿಂಸಂತೌ ದಸ್ಯೋರುಪಕ್ಷಪಯಿತುರಶಿವಸ್ಯ ದುಃಖಕಾರಿಣೋಽಸುರಸ್ಯ ಸಂಬಂಧಿನೀಸ್ತಸ್ಮಿನ್ನತ್ರೌ ಪ್ರಯುಕ್ತಾ ಮಾಯಾಶ್ಚಾನುಪೂರ್ವಮಾನುಪೂರ್ವ್ಯೇಣ ಚೋದಯಂತಾ ಪ್ರೇರಯಂತೌ ನಿವಾರಯಂತೌ ॥ ಪಾಂಚಜನ್ಯಂ । ಬಹಿರ್ದೇವಪಂಚಜನೇಭ್ಯಶ್ಚೇತಿ ವಕ್ತವ್ಯಂ । ಕಾ. ೪-೩-೫೮-೧ । ಇತಿ ಭವಾರ್ಥೇ ಞ್ಯಃ । ಮಿನಂತಾ । ಮೀಞ್ ಹಿಂಸಾಯಾಂ । ಕ್ರ್ಯಾದಿಕಃ । ಲಟಃ ಶತೃ । ಮೀನಾತೇರ್ನಿಗಮ ಇತಿ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ಹೇ ನರೌ**—ಎಲೈ ನೇತೃಗಳಾದ ಅಶ್ವಿನೀದೇವತೆಗಳೇ । **ವೃಷಣಾ**—ಅಭೀಷ್ಟದಾಯಕರಾದ (ನೀವು) । **ಪಾಂಚಜನ್ಯಂ**—ಪಂಚಜನಸಂಬಂಧಿಯಾದ । **ಅತ್ರಿಂ ಋಷಿಂ**—ಅತ್ರಿ ಋಷಿಯನ್ನು । **ಅಂಹಸಃ**—ಪಾಪರೂಪವಾದ । **ಋಬೀಸಾತ್**—ಯಂತ್ರಗೃಹದಿಂದ (ಯಂತ್ರಗೃಹದಲ್ಲಿ ಪ್ರಕ್ಷಿಪ್ತವಾದ ಅಗ್ನಿಯಿಂದ) । **ಗಣೇನ**—ಇಂದ್ರಿಯ (ಪುತ್ರಪೌತ್ರಾದಿ) ವರ್ಗದೊಡನೆ । **ಮಿನಂತಾ**—(ಶತ್ರುಗಳನ್ನು) ಹಿಂಸಿಸುವವರಾಗಿ । **ದಸ್ಯೋಃ**—ಹಿಂಸಕನೂ । **ಅಶಿವಸ್ಯ**—ದುಃಖಕಾರಿಯೂ ಆದ (ಅಸುರನ) । **ಮಾಯಾಃ**—(ಅತ್ರಿಯ ಮೇಲೆ ಪ್ರಯೋಗಿಸಲ್ಪಟ್ಟ) ಮಾಯೆಗಳನ್ನು । **ಅನುಪೂರ್ವಂ**—ನಿರ್ಮೂಲವಾಗಿ । **ಚೋದಯಂತಾ**—ನಿವಾರಿಸುವವರಾಗಿ । **ಮುಂಚಥಃ**—ಬಿಡಿಸಿದಿರಿ ।

॥ ಭಾವಾರ್ಥ ॥

ನೇತೃಗಳೂ ಅಭೀಷ್ಟದಾಯಕರೂ ಆದ ಎಲೈ ಅಶ್ವಿನೀದೇವತೆಗಳೇ, ಪಂಚಜನಸಂಬಂಧಿಯಾದ ಅತ್ರಿಋಷಿಯನ್ನು ಪಾಪರೂಪವಾದ ಯಂತ್ರಗೃಹದಿಂದ (ಅಸುರರಿಂದ ಪ್ರಕ್ಷಿಪ್ತವಾದ ಅಗ್ನಿಯಿಂದ) ವಿಕಲೇಂದ್ರಿಯನನ್ನಾಗಿ (ಪುತ್ರಪೌತ್ರಾದಿಯುಕ್ತನನ್ನಾಗಿ) ಬಿಡುಗಡೆಮಾಡಿದಿರಿ; (ಅವನ) ಹಿಂಸಕರೂ, ದುಃಖಕಾರಿಗಳೂ ಆದ ಆ ಅಸುರರ ಮಾಯೆಗಳನ್ನು ಸಂಪೂರ್ಣವಾಗಿ ನಾಶಮಾಡಿದಿರಿ.

English Translation.

3. You liberated, leaders (of rites), the sage Atri, who was venerated by the five classes of men, from the wicked prison, together with his troop (of children), destroying his enemies and baffling, showerers (of benefits), the devices of the malignant Dasyus.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವನ್ನು ವಿವರಿಸುವಾಗ ಸಾಯಣರು ಈ ಋಕ್ಕಿನಲ್ಲಿ ಹೇಳುವ ಅಭಿಪ್ರಾಯವು—

**ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಂ ।**
**ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥**

(ಋ. ಸಂ ೧-೧೧೬-೮)

ಎಂಬ ಮಂತ್ರದಿಂದ ವಿವೃತವಾಗಿರುವುದು ಎಂದು ಹೇಳಿ ಇದೇ ಅರ್ಥವನ್ನೇ ಬೇರೆ ವಿಧದಿಂದ ಇಲ್ಲಿ ಹೇಳಿರುತ್ತದೆ ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ.

**ಪಾಂಚಜನ್ಯಂ—ನಿಷಾದಪಂಚಮಾಃ ಚತ್ವಾರೋ ವರ್ಣಾಃ ಪಂಚ ಜನಾಃ ತೇಷು ಭವಂ ।** ಬೇಡರವನೇ ಐದನೆಯವನಾಗಿರುವಂತೆ ಪರಿಗಣಿಸಿ ಇರುವ ನಾಲ್ಕುವರ್ಣಗಳು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಬೇಡರವನು ಎಂಬ ಇವುಗಳು) ಪಂಚಜನಶಬ್ದದಿಂದ ಉಕ್ತವಾಗಿರುತ್ತವೆ. ಇವರಿಗೆ ಹಿತಕರವಾದ ಎಂದು ಅರ್ಥವನ್ನು ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳು—

**ಪಾಂಚಜನ್ಯಂ—ಬಾಹ್ಯೋ ದೈವ್ಯಃ ಪಾಂಚಜನ್ಯಃ (ಪಾ. ೪-೩-೬೦-೩) ಇತ್ಯೇವಮಯಂ ಹಿತೇಽತ್ರ ತ್ಯಪ್ರತ್ಯಯೋ ದ್ರಷ್ಟವ್ಯಃ । ಪಂಚಭ್ಯೋಽಪಿ ಜನೇಭ್ಯಃ ಗಂಧರ್ವಾಃ ಪಿತರೋ ದೇವಾಃ ಅಸುರಾ ರಕ್ಷಾಂಸೀತ್ಯೇತೇಭ್ಯಃ ನಿಷಾದಪಂಚಮೇಭ್ಯೋ ಚತುರ್ಭ್ಯೋ ವರ್ಣೇಭ್ಯಃ ಹಿತಂ । ಪಂಚಾನಾಂ ಹಿ ಜನಾನಾಂ ಸ್ಥಿತಿಕರೀ ವೃಷ್ಟಿಃ । ತಸ್ಯಾ ಹೇತುಭೂತೋ ಯಜ್ಞಃ ತಸ್ಯ ಕರ್ತಾ ಅತ್ರಿಃ ಇತ್ಯೇವಮಸ್ಯ ಹಿತತ್ವಂ ।**

ಪಂಚಜನ ಶಬ್ದದಮೇಲೆ ಹಿತ ಎಂಬ ಅರ್ಥದಲ್ಲಿ ತ್ಯಪ್ರತ್ಯಯವು ಬಂದು ಪಾಂಚಜನ್ಯ ಎಂದು ರೂಪವಾಗಿರುತ್ತದೆ. ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಪಂಚಜನಶಬ್ದಗತವಾದ ಪಂಚತ್ವವನ್ನು ವಿವರಿಸಿ, ಅಥವಾ ಸಾಯಣರು ಹೇಳಿರುವಂತೆಯೇ ಪಂಚತ್ವವನ್ನು ಹೇಳಿ ಇವರಿಗೆ ಎಲ್ಲರಿಗೂ ಹಿತವಾದ ವೃಷ್ಟಿಯನ್ನು, ಅತ್ರಿಯು ಉಂಟುಮಾಡುತ್ತಿದ್ದನು ಎಂದು ಪಾಂಚಜನ್ಯಶಬ್ದವನ್ನು ಅತ್ರಿಪದಕ್ಕೆ ವಿಶೇಷಣವಾಗಿ ಅರ್ಥಮಾಡಿರುವರು. ಸಾಯಣರೂ ಹೀಗೆಯೇ ವಿಶೇಷಣವಾಗಿ ಅರ್ಥವನ್ನು ಹೇಳಿದ್ದರೂ, **ತೇಷು ಭವಂ ಸ್ವರ್ಭಾನುನಾ ಗೃಹೀತಂ ಅಮುಂ ಸೂರ್ಯಂ ಮೋಚಯನ್** ಅತ್ರಿಃ ಪಂಚಜನರಲ್ಲಿ ಉತ್ಪನ್ನನಾದ ಸೂರ್ಯನನ್ನು ರಾಹುವು ಹಿಡಿದಿದ್ದಾಗ ಅವನನ್ನು ಅತ್ರಿಋಷಿಯು ಬಿಡಿಸಿದನೆಂದು ಬೇರೆಯ ವಿಧವಾಗಿ ಅರ್ಥವನ್ನು ಮಾಡಿದಾರೆ. ಸೂರ್ಯನೂ ಕೂಡ ವೃಷ್ಟಿಪ್ರದನಾಗಿ ಎಲ್ಲರಿಗೂ ಹಿತಕರನಾದಕಾರಣ ಹಿತಾರ್ಥದಲ್ಲಿ ತ್ಯಪ್ರತ್ಯಯವನ್ನು ಹೇಳುವ ಸ್ಕಂದಸ್ವಾಮಿಗಳ ವ್ಯಾಖ್ಯಾನವು ಇಲ್ಲಿ ಚೆನ್ನಾಗಿ ಒಪ್ಪುತ್ತದೆ.

ನಿರುಕ್ತಕಾರರು—ಮನುಷ್ಯನಾಮಗಳಲ್ಲಿ ಪಂಚಜನಶಬ್ದವು ಪರಿಗಣಿತವಾಗಿರುವುದರಿಂದ ಪಂಚಜನಶಬ್ದದ ವ್ಯುತ್ಪತ್ತಿಯನ್ನು ಮಾಡಿರುವರು—

IX 21

**ತತ್ರ ಪಂಚಜನಾ ಇತ್ಯೇತಸ್ಯ ನಿಗಮಾ ಭವಂತಿ** (ನಿ. ೩-೮)

ಮನುಷ್ಯವಾಚಕಗಳಲ್ಲಿ ಪಂಚಜನಶಬ್ದದ ಅರ್ಥವನ್ನು ವಿವರಿಸುವ ವೇದವಾಕ್ಯವು ಹೀಗೆ ಇರುವುದು ಎಂದು

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾಃ ಮಮ ಹೋತ್ರಂ ಜುಷಧ್ವಂ ॥**

(ಋ. ಸಂ. ೧೦-೫೩-೪)

ಎಂಬ ಋಕ್ಕನ್ನು ಉದಹರಿಸಿ

**ಪಂಚಜನಾಃ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾಃ ನಿಷಾದಃ ಪಂಚಮ ಇತ್ಯೌಪಮನ್ಯವಃ ।**

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಪಂಚಸಂಖ್ಯೆಯನ್ನು ವಿವರಿಸುವ ಒಂದು ಮತವನ್ನೂ, ನಿಷಾದ-ಬೇಡರವನನ್ನೂ ಸೇರಿಸಿ ನಾಲ್ಕು ವರ್ಣವನ್ನೂ ಪಂಚಜನರೆಂದು ಹೇಳುವ ಉಪಮನ್ಯು ಮತವನ್ನೂ ವಿವರಿಸಿರುವರು. ಮತ್ತೂ—

**ನಿಷಾದಃ ಕಸ್ಮಾನ್ನಿಷದನೋ ಭವತಿ ನಿಷಣ್ಣಮಸ್ಮಿನ್ ಪಾಪಕಮಿತಿ ನೈರುಕ್ತಾಃ । ಯತ್ ಪಾಂಚಜನ್ಯಯಾ ವಿಶಾ ಪಂಚಜನೀನಯಾ ವಿಶಾ ಪಂಚಪೃಕ್ತಾ ಸಂಖ್ಯಾ ಸ್ತ್ರೀನಪುಂಸಕೇಷ್ವವಿಶಿಷ್ಟಾ ।**

ಇವನಲ್ಲಿ (ಬೇಡನಲ್ಲಿ) ಪಾಪವು ಅತಿಶಯವಾಗಿ ಇರುವ ಕಾರಣ ನಿಷಾದನಾಗಿರುವನು ಎಂದು ನಿಷಾದ ಶಬ್ದಾರ್ಥವನ್ನು ವಿವರಿಸಿ **ಯತ್ ಪಾಂಚಜನ್ಯಯಾ** ವಿಶಾ ಎಂಬ ಬೇರೆಯ ಋಕ್ಕಿನಲ್ಲಿರುವ (ಪಂಚಜನಸಂಬಂಧಿಯಾದ) ಪಾಂಚಜನ್ಯ ಶಬ್ದಗತವಾದ ಪಂಚ-ಐದು ಎಂಬ ಸಂಖ್ಯೆಯಿಂದ ಸ್ತ್ರೀ, **ಪುರುಷ, ನಪುಂಸಕ** ಎಂಬ ಭೇದಗಳು ವಿಶಾಶಬ್ದ ಬೋಧ್ಯರಾದ ಪ್ರಜೆಗಳಲ್ಲಿ ಇರುವುದಿಲ್ಲ ಎಂದು ಅರ್ಥವನ್ನು ವಿವರಿಸಿರುವರು.

ಸ್ಕಂದಸ್ವಾಮಿಗಳು **ದಸ್ಯೋಃ**—ಎಂಬ ಪದದ ಅರ್ಥವಿವರಣೆಮಾಡುವಾಗ—

**ವಿ ಜಾನೀಹ್ಯಾರ್ಯಾನ್ ಯೇ ಚ ದಸ್ಯವೋ ಬರ್ಹಿಷ್ಮತೇ ರಂಧಯಾ ಶಾಸದವ್ರತಾನ್ ।**
**ಶಾಕೀ ಭವ ಯಜಮಾನಸ್ಯ ಚೋದಿತಾ ವಿಶ್ವೇತ್ತಾ ತೇ ಸಧಮಾದೇಷು ಚಾಕನ ॥**

(ಋ. ಸಂ. ೧-೫೧-೮)

ಈ ಋಕ್ಕನ್ನು ಉದಹರಿಸಿರುವರು. ಇದರಲ್ಲಿ ಯಾಗಗಳನ್ನು ಮಾಡುವವರು, ಅಥವಾ ವ್ರತಗಳನ್ನು ಆಚರಿಸುವವರು, ಆರ್ಯರೆಂದೂ ಇವರಿಗಿಂತ ಬೇರೆಯಾದವರು ದೇವತೆಗಳ ಶತ್ರುಗಳಾದ ದಸ್ಯುಗಳೆಂದೂ ಯಾಗದ ವಿಷಯದಲ್ಲಿ ಆಸಕ್ತಿ ಇಲ್ಲದವರೆಂದೂ ಅರ್ಥವನ್ನು ವಿವರಿಸಿದೆ. ಸಾಯಣರು **ಉಪಕ್ಷಪಯಿತುಃ ಅಶಿವಸ್ಯ ದುಃಖಕಾರಿಣಃ ಅಸುರಸ್ಯ ।** ಅಪಾಯವನ್ನು ಉಂಟುಮಾಡುವ, ದುಃಖವನ್ನು ಹೆಚ್ಚಿಸುವ, ಪ್ರಾಣವನ್ನು ತೆಗೆಯುವ ದುಷ್ಟನ ಎಂದು ದಸ್ಯುಪದಕ್ಕೆ ಅರ್ಥವನ್ನು ವಿವರಿಸಿರುವರು.

**ಅನುಪೂರ್ವಂ ಚೋದಯಂತಾ**—**ಅನುಪೂರ್ವ್ಯೇಣ ಪ್ರೇರಯಂತೌ ನಿವಾರಯಂತೌ**—ಅಶ್ವಿನೀದೇವತೆಗಳು ಅತ್ರಿಋಷಿಯ ವಿಷಯದಲ್ಲಿ ಅಸುರರು ಆಚರಿಸುವ ಅಪಾಯಕರವಾದ ಮೋಸಗಳನ್ನು ತಪ್ಪಿಸಿದರೆಂದು ಅರ್ಥವನ್ನು ವಿವರಿಸಿರುವರು. ಸ್ಕಂದಸ್ವಾಮಿಗಳು **ಹೇ ವೃಷಣಾ ವರ್ಷಿತಾರೌ ತಾಸು ತಾಸ್ವಭಿಪ್ರೇತೆ ಫಲಾಸು ಅತ್ರಿಂ ಚೋದಯಂತಾ ಉಪದೇಶಾದಿನಾ ಪ್ರೇರಯಂತೌ**—ಯಜಮಾನರುಗಳಿಗೆ ಅವರವರ ಅಭಿಲಾಷೆಗಳನ್ನು ನೆರವೇರಿಸಿಕೊಡುವ ಅಶ್ವಿನೀದೇವತೆಗಳು ಅತ್ರಿಋಷಿಗೆ ಅವನ ಇಚ್ಛಾನುಸಾರವಾದ ಫಲವನ್ನು ಹೊಂದುವುದಕ್ಕಾಗಿ ಉಪದೇಶವನ್ನು ಮಾಡಿ ಅವನ ಅಭೀಷ್ಟಗಳನ್ನು ನೆರವೇರಿಸಿದರೆಂದು ಅರ್ಥವನ್ನು ಹೇಳಿ ಅತ್ರಿ ಋಷಿಯನ್ನು ರಕ್ಷಿಸಿರುವ ವಿಷಯವು ಕುತ್ಸಋಷಿಯಿಂದಲೂ,

**ಯಾಭಿಃ ಶುಚಂತಿಂ ಧನಸಾಂ ಸುಷಂಸದಂ ತಪ್ತಂ ಘರ್ಮಮೋಮ್ಯಾವಂತಮತ್ರಯೇ ।**
**ಯಾಭಿಃ ಪೃಶ್ನಿಗುಂ ಪುರುಕುತ್ಸಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಮ್ ॥**

(ಋ. ಸಂ. ೧-೧೧೨-೭)

ಈ ಋಕ್ಕಿನಲ್ಲಿ ವಿವೃತವಾಗಿರುವುದು ಎಂದು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ನರೌ**—ಣೃ ನಯೇ. ಧಾತು. **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ಸಂಬೋಧನಾ ದ್ವಿವಚನದಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪಾಂಚಜನ್ಯಮ್**—ಪಂಚಜನೇಷು ಭವಮ್ ಪಾಂಚಜನ್ಯಮ್. **ಬಹಿರ್ದೇವ ಪಂಚಜನೇಭ್ಯಶ್ಚೇತಿ-ವಕ್ತವ್ಯಮ್** (ಕಾ ೪-೩-೫೮೧) ಎಂಬುದರಿಂದ ಭವಾರ್ಥದಲ್ಲಿ ಞ್ಯ ಪ್ರತ್ಯಯ. ಞಿತ್ತಾದುದರಿಂದ **ತದ್ಧಿತೇಷ್ವ-ಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಭಸಂಜ್ಞಾ ಇರುವುದರಿಂದ **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. ಪ್ರತ್ಯಯ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮುಂಚಥಃ**—ಮುಚ್ಲೃ ಮೋಕ್ಷಣೇ. ಧಾತು. ತುದಾದಿ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್. ಶ ವಿಕರಣ. **ಶೇಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ಧಾತುವಿಗೆ ನುಮಾಗಮ. **ಮಿದ-ಚೋಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚ್ಚಿನಪರವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಿನಂತಾ**—ಮೀಞ್ ಹಿಂಸಾಯಾಮ್. ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಸಾರ್ವಧಾತುಕಮಪಿತ್** ಎಂಬುದದರಿಂದ ಶತೃವಿಗೆ ಙಿತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ. ಸೂ ೬-೪-೧೧೨) ಎಂಬುದರಿಂದ ಶ್ನಾ ವಿಕರಣದ ಆಕಾರಕ್ಕೆ ಲೋಪ. **ಮೀನಾತೇರ್ನಿಗಮೇ** (ಪಾ. ಸೂ. ೭-೩-೮೧) ಎಂಬುದರಿಂದ ಧಾತುವಿಗೆ ಹ್ರಸ್ವ. ಪ್ರತ್ಯಯದ ಆದ್ಯುದಾತ್ತ

ಸ್ವರ ಬರುತ್ತದೆ ದ್ವಿವಚನ ಪರವಾದಾಗ **ಸುಪಾಂ ಸುಲುಕ್**:—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

**ಚೋದಯಂತಾ**—ಚುದ ಪ್ರೇರಣೇ. ಧಾತು. ಚುರಾದಿ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಣಿಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚ್ಚಿಗೆ ಗುಣ ಅಯಾದೇಶ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಅಶ್ವಂ ನ ಗೂಳ್ಹಮಶ್ವಿನಾ ದುರೇವೈರ್ಋಷಿಂ ನರಾ ವೃಷಣಾ ರೇಭಮಪ್ಸು ।
ಸಂ ತಂ ರಿಣೀಥೋ ವಿಪ್ರುತಂ ದಂಸೋಭಿರ್ನ ವಾಂ ಜೂರ್ಯಂತಿ ಪೂರ್ವ್ಯಾ ಕೃತಾನಿ ॥ ೪ ॥

॥ ಪದಪಾಠಃ ॥

ಅಶ್ವಂ । ನ । ಗೂಳ್ಹಂ । ಅಶ್ವಿನಾ । ದುಃऽಏವೈಃ । ಋಷಿಂ । ನರಾ । ವೃಷಣಾ । ರೇಭಂ । ಅಪ್ऽಸು ।
ಸಂ । ತಂ । ರಿಣೀಥಃ । ವಿऽಪ್ರುತಂ । ದಂಸಃऽಭಿಃ । ನ । ವಾಂ । ಜೂರ್ಯಂತಿ । ಪೂರ್ವ್ಯಾ । ಕೃತಾನಿ ॥ ೪ ॥

|| ಸಾಯಣಭಾಷ್ಯಂ ||

ನರಾ ನೇತಾರೌ ವೃಷಣಾ ಕಾಮಾನಾಂ ವರ್ಷಕೌ ಹೇ ಅಶ್ವಿನೌ ದುರೇವೈರ್ದುಷ್ಪ್ರಾಪ್ಯೈರಸುರೈರಪ್ಸು ಕೂಪಸ್ಥೇಷೂದಕೇಷು ಗೂಳ್ಹಂ ನಿಗೂಢಂ ನಿಖಾತಂ ರೇಭಮೃಷಿಂ ಕೂಪಾದುನ್ನೀಯ ವಿಪ್ರುತಂ ವಿಶ್ಲಿಷ್ಟಾವಯವಂ ತಮಶ್ವಂ ನ ವ್ಯಾಧಿತಮಶ್ವಮಿವ ದಂಸೋಭಿರಾತ್ಮೀಯೈರ್ಭೈಷಜ್ಯರೂಪೈಃ ಕರ್ಮಭಿಃ ಸಂ ರಿಣೀಥಃ । ಸಮಧತ್ತಂ । ಸರ್ವೈರವಯವೈರುಪೇತಮಕುರುತಮಿತ್ಯರ್ಥಃ । ವಾಂ ಯುವಯೋಃ ಸಂಬಂಧೀನಿ ಪೂರ್ವ್ಯಾ ಚಿರಂತನಾನಿ ಕೃತಾನಿ ಕರ್ಮಾಣಿ ನ ಜೂರ್ಯಂತಿ । ನ ಹಿ ಜೀರ್ಣಾನಿ ಭವಂತಿ ॥ ದುರೇವೈಃ । ದುರುಪಸೃಷ್ಟಾದೇತೇರೀಷದ್ದುಃಸುಷ್ವಿತಿ ಖಲ್ । ರಿಣೀಥಃ । ರೀ ಗತಿರೇಷಣಯೋಃ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವಃ । ಜೂರ್ಯಂತಿ । ಜ್ವಾಷ್ ವಯೋಹಾನೌ । ದೈವಾದಿಕತ್ವಾಚ್ಛ್ಯನ್ । ಬಹುಲಂ ಛಂದಸೀತ್ಯುತ್ವಂ । ಹಲಿ ಚೇತಿ ದೀರ್ಘಃ ॥

|| ಪ್ರತಿಪದಾರ್ಥ ||

ನರಾ—ನೇತೃಗಳೂ । **ವೃಷಣಾ**—ಇಷ್ಟಾರ್ಥಪ್ರದರೂ (ಆದ) । **ಅಶ್ವಿನಾ**—ಅಶ್ವಿನೀದೇವತೆಗಳೇ । **ದುರೇವೈಃ**—ದುರ್ಜಯರಾದ (ಅಸುರರಿಂದ) । **ಅಪ್ಸು**—ಕೂಪೋದಕದಲ್ಲಿ । **ಗೂಳ್ಹಂ**—ನಿಗೂಢನಾಗಿದ್ದ । **ರೇಭಂ ಋಷಿಂ**—ರೇಭಋಷಿಯನ್ನು (ಬಾವಿಯಿಂದ ಎತ್ತಿ) । **ವಿಪ್ರುತಂ**—ವಿಶ್ಲಿಷ್ಟಾವಯವವುಳ್ಳ । **ತಂ**—ಅವನನ್ನು । **ಅಶ್ವಂ ನ**—(ವ್ಯಾಧಿಗ್ರಸ್ತವಾದ) ಅಶ್ವವನ್ನು ಗುಣಪಡಿಸುವಂತೆ । **ದಂಸೋಭಿಃ**—(ನಿಮ್ಮ) ವೈದ್ಯ ಕ್ರಿಯೆಗಳಿಂದ । **ಸಂ ರಿಣೀಥಃ**—ಗುಣಪಡಿಸಿದಿರಿ । (ಸರ್ವಾವಯವಯುಕ್ತನನ್ನಾಗಿ ಮಾಡಿದಿರಿ) । **ವಾಂ**—ನಿಮ್ಮಿಬ್ಬರ । **ಪೂರ್ವ್ಯಾ**—ಚಿರಂತನವಾದ । **ಕೃತಾನಿ**—ಕರ್ಮಗಳು । **ನ ಜೂರ್ಯಂತಿ**—ಜೀರ್ಣವಾಗುವುದಿಲ್ಲ (ಮರೆಯುವುದಿಲ್ಲ).

|| ಭಾವಾರ್ಥ ||

ನೇತೃಗಳೂ, ಇಷ್ಟಾರ್ಥದಾಯಕರೂ (ಆದ) ಅಶ್ವಿನೀದೇವತೆಗಳೇ, ದುರ್ಜಯರಾದ ಅಸುರರಿಂದ ಕೂಪೋದಕದಲ್ಲಿ ನಿಗೂಢನಾಗಿದ್ದ ರೇಭಋಷಿಯನ್ನು (ಎತ್ತಿ) ವಿಶ್ಲಿಷ್ಟವಾದ (ಅವನ) ಅವಯವಗಳನ್ನು । (ವ್ಯಾಧಿ ಪೀಡಿತವಾದ) ಅಶ್ವವನ್ನು (ಗುಣಪಡಿಸುವಂತೆ) ಗುಣಪಡಿಸಿದಿರಿ. ನಿಮ್ಮ (ಸಾಹಸ) ಕಾರ್ಯಗಳು ಪುರಾತನವಾದರೂ ಮರೆಯುವುದಿಲ್ಲ.

## English Translation.

Leaders (of sacrifice), showerers (of benefits), you restored Rebha cast by unassailable (enemies) into the water, and wounded, like a (sick) horse, by your (healing) skill: your ancient exploits do not fade (from recollection).

|| ವಿಶೇಷವಿಷಯಗಳು ||

**ಅಶ್ವಂ ನ ದಂಸೋಭಿಃ ಸಂ ರಿಣೀಥಃ—ವ್ಯಾಧಿತಮಶ್ವಮಿವ ಆತ್ಮೀಯೈಃ ಭೈಷಜ್ಯರೂಪೈಃ ಕರ್ಮಭಿಃ ಸಮುಥತ್ತಂ ಸರ್ವೈರವಯವೈರುಪೇತಂ ಅಕುರುತಮಿತ್ಯರ್ಥಃ ।** ದಂಸಶಬ್ದವು ಇಪ್ಪತ್ತಾರು ಕರ್ಮನಾಮಗಳಲ್ಲಿ (ನಿ. ೩–೨) ಉಕ್ತವಾಗಿರುತ್ತದೆ. ರೇಭನೆಂಬ ಋಷಿಯನ್ನು ಅಸುರರು ಹಗ್ಗದಿಂದ ಕಟ್ಟಿ ಭಾವಿಗೆ ಹಾಕಿದಾಗ ಅವನ ಅಂಗಗಳಿಗೆ ಅಪಾಯವು ಆಗಿರುವುದನ್ನು ನೋಡಿ ಅಶ್ವಿನೀದೇವತೆಗಳು ಅವನನ್ನು ಭಾವಿಯಿಂದ ಮೇಲಕ್ಕೆ ಎತ್ತಿ ಅಪಾಯವನ್ನು ಹೊಂದಿರುವ ಕುದುರೆಯನ್ನು ಮೇಲಕ್ಕೆ ಎಬ್ಬಿಸಿ ಔಷಧಾದಿಗಳಿಂದ ಉಪಚರಿಸುವ ಹಾಗೆ ರೇಭಋಷಿಗೆ ಔಷಧಿಯನ್ನು ಮಾಡಿ ಉಪಚರಿಸಿ ಆರೋಗ್ಯವಾಗಿರುವಂತೆ ಮಾಡಿ ರಕ್ಷಿಸಿದರು ಎಂದು ವರ್ಣಿಸಿದೆ.

**ವಾಂ ಪೂರ್ವ್ಯಾ ಕೃತಾನಿ ನ ಜೀರ್ಯಂತಿ—ಯುವಯೋಃ ಸಂಬಂಧೀನಿ ಚಿರಂತನಾನಿ ಕರ್ಮಾಣಿ ನ ಜೀರ್ಣಾನಿ ಭವಂತಿ ।** ಅಶ್ವಿನೀದೇವತೆಗಳು ಮಾಡಿರುವ ಹಿಂದಿನಕಾಲದ ಉಪಕಾರರೂಪವಾದ ಕರ್ಮಗಳು ಮರೆತುಹೋಗುವುದಿಲ್ಲವೆಂದು ಅಶ್ವಿನೀದೇವತೆಗಳ ಪ್ರಭಾವವೂ, ಕಷ್ಟದಲ್ಲಿ ಇರುವವರ ವಿಷಯದಲ್ಲಿ ಅವರು ದಯೆಯಿಂದ ವರ್ತಿಸಿ ರಕ್ಷಿಸುವ ಸ್ವಭಾವವೂ ಇಲ್ಲಿ ವರ್ಣಿಸಿರುತ್ತದೆ. ಸ್ಕಂದಸ್ವಾಮಿಗಳು **ನ ವಾಂ ಯುವಯೋಃ ಜೂರ್ಯಂತಿ ಜೀರ್ಯಂತೆ ವಿನಶ್ಯಂತೀತ್ಯರ್ಥಃ ಪೂರ್ವ್ಯಾ ಪೂರ್ವಮಿತಿ ಪುರಾಣನಾಮ । ಪುರಾಣಾನಿ ಕೃತಾನಿ ಕರ್ಮಾಣಿ** ಎಂದು ಸಾಯಣರು ಹೇಳಿರುವಹಾಗೆಯೇ ಅರ್ಥವನ್ನು ಮಾಡಿ ಅಶ್ವಿನೀದೇವತೆಗಳು ಕಷ್ಟಕ್ಕೆ ಒಳಗಾಗಿರುವವರನ್ನು ರಕ್ಷಿಸಿರುವ ಕರ್ಮಗಳು ಯಾವಾಗಲೂ ನಾಶವಾಗದೆ ನಿದರ್ಶನಗಳಾಗಿ ಇರುತ್ತವೆ ಎಂದು ವಿವರಿಸಿ ಈ ಋಕ್ಕಿನಲ್ಲಿ ಉಕ್ತವಾಗಿರುವ ರೇಭಋಷಿಯ ವಿಷಯವಾದ ಇತಿಹಾಸವು—

**ದಶ ರಾತ್ರೀರಶಿವೇನಾ ನವ ದ್ಯೂನವನದ್ಧಂ ಶ್ನಥಿತಮಪ್ಸ್ವಂತಃ ।**
**ವಿಪ್ರುತಂ ರೇಭಮುದನಿ ಪ್ರವೃಕ್ತಮುನ್ನಿನ್ಯಥುಃ ಸೋಮಮಿವ ಸ್ರುವೇಣ ॥**

(ಋ. ಸಂ. ೧–೧೧೬–೨೪)

ಎಂಬ ಈ ಋಕ್ಕಿನಲ್ಲಿಯೂ ಉಕ್ತವಾಗಿರುವುದು ಎಂದು ಉದಹರಿಸಿರುವರು.

|| ವ್ಯಾಕರಣಪ್ರಕ್ರಿಯಾ ||

**ಗೂಳ್ಹಮ್**—ಗುಹೂ ಸಂವರಣೇ· ಧಾತು· **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ· **ಯಸ್ಯವಿಭಾಷಾ** (ಪಾ· ಸೂ· ೭-೨-೧೫) ಎಂಬುದರಿಂದ ಇಡಾಗಮ ಬರುವುದಿಲ್ಲ· **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋರ್ಧಃ** ಎಂಬುದರಿಂದ ತಕಾರಕ್ಕೆ ಧತ್ವ· ಅದಕ್ಕೆ ಷ್ಟುತ್ವದಿಂದ ಢತ್ವ· **ಢೋಢೇಲೋಪಃ** ಎಂಬುದರಿಂದ ಪೂರ್ವಢಕಾರಕ್ಕೆ ಲೋಪ· **ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ** ಎಂಬುದರಿಂದ ಪೂರ್ವದ ಉಕಾರಕ್ಕೆ ದೀರ್ಘ· ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದುರೇವೈಃ**—ದುರ್ ಉಪಸರ್ಗ. ಇದು ಉಪಪದವಾಗಿರುವಾಗ, ಇಣ್ ಗತೌ ಧಾತುವಿಗೆ **ಈಷದ್ದುಃ–ಸುಷು**—(ಪಾ. ಸೂ. ೩–೩–೧೨೬) ಎಂಬುದರಿಂದ ಖಲ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಲಿತಿ**

(ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ನರಾ**—ಣ್ಣಾ ನಯೇ ಧಾತು. **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಋಕಾರಕ್ಕೆ ಗುಣ. ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ ೩-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಪ್ಸು**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ಸಪ್ತಮೀಬಹುವಚನ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಿಣೀಥಃ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಸಾರ್ವಧಾತುಕಮಪಿತ್** ಸೂತ್ರದಿಂದ ಙಿದ್ವದ್ಭಾವವಿರುವುದರಿಂದ ಅದು ಹಲಾದಿಯಾಗಿರುವುದರಿಂದ **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಶ್ನಾ ಪ್ರತ್ಯಯಾಕಾರಕ್ಕೆ ಈತ್ವ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಪ್ರುತಮ್**—ಪ್ರು ಗತೌ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ಜೂರ್ಯಂತಿ**—ಜ್ಯಾಷ್ ವಯೋಹಾನೌ. ದಿವಾದಿ. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಪ್ರತ್ಯಯ. **ಝೋಽಂತಃ** (ಪಾ. ಸೂ. ೭-೧-೩) ಎಂಬುದರಿಂದ ಅದಕ್ಕೆ ಅಂತಾದೇಶ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. **ಉರಣ್ರಪರಃ** ಪರಿಭಾಷೆಯಿಂದ ರಪರವಾಗಿ ಬರುತ್ತದೆ. **ಹಲಿ ಚ** (ಪಾ. ಸೂ. ೮-೨-೭೭) ಎಂಬುದರಿಂದ ರೇಫಾಂತ ಉಪಧೆಗೆ ದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪೂರ್ವ್ಯಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಸುಷುಪ್ವಾಂಸಂ ನ ನಿರ್ಋತೇರುಪಸ್ಥೇ ಸೂರ್ಯಂ ನ ದಸ್ರಾ ತಮಸಿ ಕ್ಷಿಯಂತಂ ।
ಶುಭೇ ರುಕ್ಮಂ ನ ದರ್ಶತಂ ನಿಖಾತಮುದೂಪಥುರಶ್ವಿನಾ ವಂದನಾಯ ॥ ೫ ॥

॥ ಪದಪಾಠಃ ॥

ಸುಸುಪ್ವಾಂಸಂ । ನ । ನಿಃಽಋತೇಃ । ಉಪಽಸ್ಥೇ । ಸೂರ್ಯಂ । ನ । ದಸ್ರಾ । ತಮಸಿ । ಕ್ಷಿಯಂತಂ ।
ಶುಭೇ । ರುಕ್ಮಂ । ನ । ದರ್ಶತಂ । ನಿಽಖಾತಂ । ಉತ್ । ಊಪಥುಃ । ಅಶ್ವಿನಾ । ವಂದನಾಯ ॥ ೫ ॥

॥ ಸಾಯಣಭಾಷ್ಯಂ ॥

ನಿರ್ಋತಿರಿತಿ ಭೂನಾಮ । ನಿರ್ಋತೇಃ ಪೃಥಿವ್ಯಾ ಉಪಸ್ಥ ಉತ್ಸಂಗೇ ಸುಷುಪ್ವಾಂಸಂ ಸುಪ್ತವಂತಂ ಪುರುಷಮಿವ ಕೂಪಮಧ್ಯೇ ಶಯಾನಂ ಸೂರ್ಯಂ ನ ಸೂರ್ಯಮಿವ । ತಮಸಿ ಕೂಪಾಂತರ್ಗತಾಂಧಕಾರೇ ಕ್ಷಿಯಂತಂ ನಿವಸಂತಂ ಸೂರ್ಯಮಿವ ತೇಜಸ್ವಿನಮಿತ್ಯರ್ಥಃ । ಶುಭೇ ಶೋಭಾರ್ಥಂ ನಿರ್ಮಿತಂ ರುಕ್ಮಂ ನ ರೋಚಮಾನಂ ಸುವರ್ಣಮಯಾಭರಣಮಿವ ದರ್ಶತಂ ದರ್ಶನೀಯಂ ಏವಂಗುಣವಿಶಿಷ್ಟಂ ಕೂಪೇಽಸುರೈರ್ನಿಖಾತಂ ವಂದನಾಯ ವಂದನಮೃಷಿಂ ಹೇ ದಸ್ರಾ ದರ್ಶನೀಯಾವಶ್ವಿನೌ ಯುವಾಮುದೂಪಥುಃ । ಉದ್ಧೃತವಂತೌ ॥ ಸುಷುಪ್ವಾಂಸಂ । ಞಿಷ್ವಪ ಶಯೇ । ಲಿಟಃ ಕ್ವಸುಃ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ ದ್ವಿರ್ವಚನಾದಿ । ಉಪಸ್ಥೇ । ಉಪಪೂರ್ವಾತ್ತಿಷ್ಠತೇರ್ಘಞರ್ಥೇ ಕವಿಧಾನಮಿತ್ಯಧಿಕರಣೇ ಕಪ್ರತ್ಯಯಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ವಂದನಾಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ॥

॥ ಪ್ರತಿಪದಾರ್ಥ ॥

**ನಿರ್ಋತೇಃ**—ಭೂಮಿಯ । **ಉಪಸ್ಥೇ**—ತೊಡೆಯಮೇಲೆ । **ಸುಷುಪ್ವಾಂಸಂ**—ನಿದ್ರೆಮಾಡುತ್ತಿರುವ ಪುರುಷನಂತೆ ಕೂಪಮಧ್ಯದಲ್ಲಿ ಮಲಗಿರುವವನೂ । **ತಮಸಿ**—ಅಂಧಕಾರದಲ್ಲಿ । **ಕ್ಷಿಯಂತಂ**—ಅಡಗಿರುವ । **ಸೂರ್ಯಂ ನ**—ಸೂರ್ಯನಂತೆ ತೇಜಸ್ವಿಯೂ । **ಶುಭೇ**—ಅಲಂಕಾರಕ್ಕಾಗಿ (ನಿರ್ಮಿತವಾದ) । **ರುಕ್ಮಂ ನ**—ಪ್ರಕಾಶಮಾನವಾದ ಸುವರ್ಣಾಭರಣದಂತೆ । **ದರ್ಶತಂ**—ದರ್ಶನೀಯನೂ । **ನಿಖಾತಂ**— (ಅಸುರರಿಂದ ಬಾವಿಯಲ್ಲಿ) ಹೂಳಲ್ಪಟ್ಟಿದ್ದವನೂ ಆದ । **ವಂದನಾಯ**—ವಂದನಋಷಿಯನ್ನು । **ಹೇ ದಸ್ರಾ ಅಶ್ವಿನಾ**—ದರ್ಶನೀಯರಾದ ಎಲೈ ಅಶ್ವಿನೀದೇವತೆಗಳೇ (ನೀವು) । **ಉದೂಪಥುಃ**—ಉದ್ಧರಿಸಿದಿರಿ.

॥ ಭಾವಾರ್ಥ ॥

ಎಲೈ ದರ್ಶನೀಯರಾದ ಅಶ್ವಿನೀದೇವತೆಗಳೇ, ಭೂದೇವಿಯ ಅಂಕದಲ್ಲಿ ಸುಪ್ತನಾದ ಪುರುಷನಂತೆ ಭಾವಿಯಲ್ಲಿ ಬಿದ್ದಿದ್ದು, ಅಂಧಕಾರಾವೃತನಾದ ಸೂರ್ಯನಂತೆ (ನಿಗೂಢತೇಜಸ್ಸುಳ್ಳ), ಅಲಂಕಾರಕ್ಕಾಗಿ ಮಾಡಿದ ಸುವರ್ಣಾಭರಣದಂತೆ ದರ್ಶನೀಯನಾದ, (ಅಸುರರಿಂದ ಬಾವಿಯಲ್ಲಿ) ಹೂಳಲ್ಪಟ್ಟಿದ್ದ ವಂದನಋಷಿಯನ್ನು, (ನೀವು) ಮೇಲಕ್ಕೆ ಎತ್ತಿದಿರಿ.

## English Translation.

You extricated, Dasras, the sage Vandana, cast into a well, like a handsome and splendid ornament designed for embellishment, and (lying), Ashwins, like one sleeping on the lap of the earth, or like the sun disappearing in darkness.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಸುರರಿಂದ ಭಾವಿಯನೀರಿನಲ್ಲಿ ಹಾಕಲ್ಪಟ್ಟ ವಂದನಋಷಿಯನ್ನು ಅಶ್ವಿನೀದೇವತೆಗಳು ಭಾವಿಯಿಂದ ಮೇಲಕ್ಕೆ ಎತ್ತಿ ರಕ್ಷಿಸಿದ ಅಶ್ವಿನೀದೇವತೆಗಳ ಮಹಿಮೆಯು ವರ್ಣಿತವಾಗಿದೆ. ಭಾವಿಯ ನೀರಿನಲ್ಲಿ ಬಿದ್ದಿದ್ದು ನಿಶ್ಚೇಷ್ಟನಾಗಿಯೂ ಕಾಂತಿಹೀನನಾಗಿಯೂ ಇದ್ದ ವಂದನಋಷಿಯ ವಿಷಯದಲ್ಲಿ ಮೂರು ಉಪಮಾನಗಳನ್ನು ಹೇಳಿದೆ. **ನಿರ್ಋತೇರುಪಸ್ಥೇ ಸುಷುಪ್ವಾಂಸಂ ನ**—ಭೂಮಿಯ ಮೇಲೆ ಮಲಗಿ ನಿಶ್ಚೇಷ್ಟನಾಗಿರುವ ಮನುಷ್ಯನಂತೆಯೂ, **ತಮಸಿ ಕ್ಷಿಯಂತಂ ಸೂರ್ಯಂ ನ**—ಕತ್ತಲೆಯಲ್ಲಿ ಕಾಂತಿಹೀನನಾದ ಸೂರ್ಯನಂತೆಯೂ, **ಶುಭೇ ರುಕ್ಮಂನ**—ಬಹಳ ಕಾಂತಿಯಿಂದ ಹೊಳೆಯುವಂತೆ ನಿರ್ಮಿಸಿದ ಚಿನ್ನದ ಆಭರಣವು ಚೆನ್ನಾಗಿ ಕಾಣುವಂತೆ ವಂದನಋಷಿಯು ಇದ್ದನು ಎಂದು ಋಷಿಯ ಸ್ಥಿತಿಯನ್ನು ಸಾಯಣರು ವರ್ಣಿಸಿರುತ್ತಾರೆ. ಸ್ಕಂದಸ್ವಾಮಿಯು ಈ ವಿಷಯದಲ್ಲಿ ಹೆಚ್ಚು ವಿವರಣೆಯನ್ನು ಕೊಟ್ಟಿರುವರು.

**ಸೂರ್ಯಂ ನ—ಸೂರ್ಯಮಿವ ಕದಾ ಪುನಃ ತಮಸಿ ನ್ಯುಷಿತರ್ವಾ ಸೂರ್ಯಃ ಯೇನೈವಮು-ಚ್ಯತೇ ಸೂರ್ಯಮಿವ ತಮಸಿ ಕ್ಷಿಯಂತಮಿತಿ । ಉಚ್ಯತೇ । ಯದಾ ವೃತ್ರೋ ಮಹತ್ತ-ಮಸ್ತ್ರಾನ ತಂ ಚ ಹತ್ವೇಂದ್ರಃ ಸೂರ್ಯಂ ದಿವ್ಯಾರೋಹಯಾಂ ಚಕಾರೇತಿ ।**

ಸೂರ್ಯನು ಕತ್ತಲೆಯಲ್ಲಿ ಕಾಂತಿಹೀನನಾಗಿರುವುದು ಎಂದು ಉಪಮಾನವನ್ನು ಇಲ್ಲಿ ಹೇಳಿರುವ ಕಾರಣ ಸೂರ್ಯನನ್ನು ಕತ್ತಲೆಯು ಯಾವಾಗ ಆವರಿಸಿರುವುದು ಎಂದು ವಿಮರ್ಶಿಸಿ ವೃತ್ರಾಸುರನು ಸೂರ್ಯನನ್ನು ಮೇಘಗಳಿಂದ ಆವರಿಸಿ ಪ್ರಬಲವಾದ ಕತ್ತಲೆಯನ್ನು ನಿರ್ಮಿಸಿದಾಗ ಸೂರ್ಯನು ಕಾಂತಿಹೀನನಾಗಿದ್ದನೆಂದೂ ಇಂದ್ರನು ಆ ವೃತ್ರನನ್ನು ನಿಗ್ರಹಮಾಡಿ ಸೂರ್ಯನು ಮೊದಲಿನಹಾಗೆಯೇ ಇರುವಂತೆ (ಎಂದರೆ ಚೆನ್ನಾಗಿ ಎಲ್ಲರಿಗೂ ಕಾಣುವಂತೆ) ಮಾಡಿದನು ಎಂದು ವಿವರಿಸಿರುವರು. ಮತ್ತು ತದೇತತ್ ಸವ್ಯೇನೋಕ್ತಮ್—ಸವ್ಯನೆಂಬ ಋಷಿಯಿಂದಲೂ ಈ ವಿಷಯವು ಉಕ್ತವಾಗಿ ಇರುವುದು ಎಂದು ಹೇಳಿ—

**ತ್ವಮಪಾಮಪಿಧಾನಾವೃಣೋರಪಾಧಾರಯಃ ಪರ್ವತೇ ದಾನುಮದ್ವಸು ।**
**ವೃತ್ರಂ ಯದಿಂದ್ರ ಶವಸಾವಧೀರಹಿಮಾದಿತ್ಸೂರ್ಯಂ ದಿವ್ಯಾರೋಹಯೋ ದೃಶೇ ॥**

(ಋ. ಸಂ. ೧-೫೧-೪)

ಈ ಋಕ್ಕಿನಲ್ಲಿ ವೃತ್ರನನ್ನು ಇಂದ್ರನು ನಿಗ್ರಹಮಾಡಿ ಸೂರ್ಯನನ್ನು ಪೂರ್ವದಂತೆ ಇರುವಹಾಗೆ ಮಾಡಿರುವುದು ವರ್ಣಿತವಾಗಿದೆ ಎಂದು ವ್ಯಾಖ್ಯಾನಮಾಡಿರುವರು. ಮತ್ತು—

**ವಂದನಮೃಷಿಂ—ಯಥಾ ಭೂಮೌ ಸುಪ್ತಂ ಕಂಚಿತ್ ಕಶ್ಚಿತ್ ಹಸ್ತೇನ ಗೃಹೀತ್ವಾ ಉತ್ಥಾಪಯೇತ್ ಯಥಾಚ ವೃತ್ರಕೃತೇನ ತಮಸಾ ಅವಷ್ಟಬ್ಧಂ ಸೂರ್ಯಂ ದಿವ್ಯಾರೋಹಣಾರ್ಥ-ಮಿಂದ್ರ ಉದ್ಧೃತರ್ವಾ ಯಥಾ ಚಾತ್ಮನಃ ಶೋಭನಾರ್ಥಂ ರುಕ್ಮಂ ನಿಖಾತಂ ಸಂತಂ ಕಶ್ಚಿದುದ್ಧರೇತ್ ಏವಂ ಯುವಾಂ ವಂದನಂ ಕೂಪೇ ನಿಪತಿತಂ ತತ ಉದ್ಧೃತವಂತೌ ಇತಿ ಸಮಸ್ತಾರ್ಥಃ ।**

ಭೂಮಿಯಮೇಲೆ ಮಲಗಿರುವವನನ್ನು ಕೈಯಿಂದ ತಟ್ಟಿ ಹಿಡಿದು ಎಬ್ಬಿಸಿದಂತೆಯೂ, ವೃತ್ರನು ನಿರ್ಮಿಸಿದ ಕತ್ತಲೆಯಿಂದ ಮಂಕಾಗಿರುವ ಸೂರ್ಯನನ್ನು ಇಂದ್ರನು ಪುನಃ ಕಾಂತಿಯುಳ್ಳವನನ್ನಾಗಿ ಮಾಡಿ ಸ್ವರ್ಗಕ್ಕೆ ಏರಿಸಿದಂತೆಯೂ, ತನಗೆ ಅಲಂಕಾರಕ್ಕಾಗಿ ಮಾಡಿದ ಆಭರಣವು ಭೂಮಿಯಲ್ಲಿ ಬಿದ್ದಿದ್ದಾಗ ಅದನ್ನು ಮೇಲಕ್ಕೆ ಎತ್ತಿದಂತೆಯೂ ಅಶ್ವಿನೀದೇವತೆಗಳು ವಂದನಋಷಿಯನ್ನು ಬಾವಿಯಿಂದ ಮೇಲಕ್ಕೆ ಎತ್ತಿ ರಕ್ಷಿಸಿದರು ಎಂದು ಒಟ್ಟು ತಾತ್ಪರ್ಯವು. ಎಂದು ಹೇಳಿ ಈ ವಿಷಯವೂ—

**ತದ್ವಾಂ ನರಾ ಶಂಸ್ಯಂ ರಾಧ್ಯಂ ಚಾಭಿಷ್ಟಿಮನ್ನಾಸತ್ಯಾ ವರೂಥಂ ।**
**ಯದ್ವಿದ್ವಾಂಸಾ ನಿಧಿಮಿವಾಪಗೂಳ್ಹಮುದ್ದರ್ಶತಾದೂಪಥುರ್ವಂದನಾಯ ॥**

(ಋ. ಸಂ. ೧-೧೧೬-೧೧)

**ಯಾಭೀ ರೇಭಂ ನಿವೃತಂ ಸಿತಮುದ್ಭ್ಯ ಉದ್ವಂದನಮೈರಯತಂ ಸ್ವರ್ದೃಶೇ ।**
**ಯಾಭಿಃ ಕಣ್ವಂ ಪ್ರ ಸಿಷಾಸಂತಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೫)

ಎಂಬ ಈ ಋಕ್ಕುಗಳಲ್ಲಿಯೂ ವಿವೃತವಾಗಿರುತ್ತದೆ ಎಂದು ಈ ಋಕ್ಕುಗಳನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸುಷುಪ್ವಾಂಸಮ್**—ಞಿಷ್ವಪ್ ಶಯೇ. ಧಾತು. ಇದಕ್ಕೆ ಲಿಟ್‌ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಆದೇಶ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಪ್ರತ್ಯಯ ನಿಮಿತ್ತವಾಗಿ ಸುಪ್ ಎಂಬ ಧಾತುವಿಗೆ ದ್ವಿತ್ವ. ಅಭ್ಯಾಸದಲ್ಲಿ ಆದಿಹಲ್‌ಶೇಷ. ಧಾತುವಿನ ಸಕಾರಕ್ಕೆ ಷತ್ವ. ಸುಷುಪ್ವಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನ ಅಮ್ ಪರವಾದಾಗ **ಅತ್ವಸಂತಸ್ಯ**— ಸೂತ್ರದಿಂದ ಉಪಧಾ ದೀರ್ಘ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅಪದಾಂತದಲ್ಲಿ ಅನುಸ್ವಾರ.

**ಉಪಸ್ಥೇ**—ಉಪ ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. ಉಪ ಉಪಪದವಾಗಿರುವಾಗ ಇದಕ್ಕೆ **ಘಞರ್ಥೇಕವಿಧಾನಮ್** ಎಂಬುದರಿಂದ ಅಧಿಕರಣಾರ್ಥದಲ್ಲಿ ಕಪ್ರತ್ಯಯ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಮರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಮ್** (ಪಾ. ಸೂ. ೬-೨-೧೦೬-೨) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚ. ನಾಂತರೂಪ.

**ದಸ್ರಾ**—**ಸುಪಾಂ ಸುಲುಕ್**— (ಪಾ. ಸೂ. ೩-೧-೩೯) ಎಂಬುದರಿಂದ ಔಕಾರವಿಭಕ್ತಿಗೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಕ್ಷಿಯಂತಮ್**—ಕ್ಷಿ ನಿವಾಸಗತ್ಯೋಃ ಧಾತು. ದಿವಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಅತೋ ಗುಣೇ** ಸೂತ್ರದಿಂದ ಪರರೂಪ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ.

**ದರ್ಶತಮ್**—ದೃಶಿರ್ ಪ್ರೇಕ್ಷಣೇ. ಧಾತು. ಇದಕ್ಕೆ ಔಣಾದಿಕವಾದ ಅತಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ನಿಖಾತಮ್**—ಖನು ಅವಧಾರಣೇ. ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ಯಸ್ಯ ವಿಭಾಷಾ** (ಪಾ. ಸೂ. ೭-೧-೧೫) ಎಂಬುದರಿಂದ ಇಣ್ನಿಷೇಧ ಬರುತ್ತದೆ. **ಜನಸನಖನಾಂ ಸಞ್ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಊಪಥುಃ**—ಟುವಪ್ ಬೀಜಸಂತಾನೇ. ಧಾತು. ಭ್ವಾದಿ. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ **ಪರಸ್ಮೈಪದಾನಾಂ**—ಸೂತ್ರದಿಂದ ಅಥುಸಾದೇಶ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಸವರ್ಣದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಂದನಾಯ**—**ಕ್ರಿಯಾಗ್ರಹಣಂ ಕರ್ತವ್ಯಮ್** ಎಂಬ ವಾರ್ತಿಕದಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥೀ ವಿಭಕ್ತಿ ಬಂದಿದೆ. ವದಿ ಅಭಿವಾದನ ಸ್ತುತ್ಯೋಃ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. **ಇದಿತೋನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. || ೫ ||



|| ಸಂಹಿತಾಪಾಠಃ ||

ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ
ಪರಿಜ್ಮನ್ ।
ಶಫಾದಶ್ವಸ್ಯ ವಾಜಿನೋ ಜನಾಯ ಶತಂ ಕುಂಭಾ ಅಸಿಂಚತಂ
ಮಧೂನಾಂ || ೬ ||

|| ಪದಪಾಠಃ ||

**ತತ್ । ವಾಂ । ನರಾ । ಶಂಸ್ಯಂ । ಪಜ್ರಿಯೇಣ । ಕಕ್ಷೀವತಾ । ನಾಸತ್ಯಾ ।**
**ಪರಿऽಜ್ಮನ್ ।**
**ಶಫಾತ್ । ಅಶ್ವಸ್ಯ । ವಾಜಿನಃ । ಜನಾಯ । ಶತಂ । ಕುಂಭಾನ್ । ಅಸಿಂಚತಂ ।**
**ಮಧೂನಾಂ || ೬ ||**

॥ ಸಾಯಣಭಾಷ್ಯಂ ॥

ಹೇ ನರಾ ನೇತಾರೌ ನಾಸತ್ಯಾವಶ್ವಿನೌ ಪರಿಜ್ಮನ್ ಪರಿಗಮನೇಽಭೀಷ್ಟಸ್ಯ ಪ್ರಾಪಣೇ ನಿಮಿತ್ತಭೂತೇ ಸತಿ ಪಜ್ರಿಯೇಣ ಪಜ್ರಾಣಾಮಂಗಿರಸಾಂ ಕುಲೇ ಜಾತೇನ ಕಕ್ಷೀವತಾ ಮಯಾ ವಾಂ ಯುವಯೋಃ ಸಂಬಂಧಿ ತತ್ಕರ್ಮ ಶಂಸ್ಯಂ । ಪ್ರಕರ್ಷೇಣ ಶಂಸನೀಯಂ । ತಚ್ಛಬ್ದ ಶ್ರುತೇರ್ಯಚ್ಛಬ್ದಾಧ್ಯಾಹಾರಃ । ಯಜ್ಜನಾಯಾಪೇಕ್ಷಮಾಣಾಯ ಪುರುಷಾಯ ವಾಜಿನೋ ವೇಗವ-ತಸ್ತ್ವದೀಯಸ್ಯಾಶ್ವಸ್ಯ ಶಫಾನ್ನಿರ್ಗತೈರ್ಮಧೂನಾಂ ಮಧುಭಿಃ ಶತಸಂಖ್ಯಾಕಾನ್ಕುಂಭಾನಸಿಂಚತಂ । ಅಪೂರಯತಂ । ಸಿಂಚತಿರತ್ರ ಪೂರಣಾರ್ಥಃ । ಯದೇತನ್ಮಧುನಾ ಪೂರಣಂ ತಚ್ಛಂಸ್ಯಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ನರಾ**—(ಯಾಗಗಳ) ನೇತೃಗಳಾದ । **ನಾಸತ್ಯಾ**—ನಾಸತ್ಯರೇ । **ಜನಾಯ** — (ಅಪೇಕ್ಷೆಪಡುವ) ಜನಗಳಿಗೆ । **ವಾಜಿನಃ ಅಶ್ವಸ್ಯ**—ವೇಗವುಳ್ಳ (ನಿಮ್ಮ) ಅಶ್ವದ । **ಶಫಾತ್** — ಗೊರಸಿನಿಂದ (ನಿರ್ಗತವಾದ) **ಮಧೂನಾಂ**—ಮಧುರವಾದ ಮದ್ಯದಿಂದ । **ಶತಂ ಕುಂಭಾನ್** — ನೂರು ಗಡಿಗೆಗಳನ್ನು । **ಅಸಿಂಚತಂ**—ತುಂಬಿಸಿದಿರಿ । (**ಇತಿ ಯತ್** — ಎಂಬುದು ಯಾವುದೋ) । **ವಾಂ**—ನಿಮ್ಮಿಬ್ಬರ । **ತತ್**—ಆಕರ್ಮವು । **ಪರಿಜ್ಮನ್**—ಅಭೀಷ್ಟಪ್ರಾಪ್ತಿಗೋಸ್ಕರ । **ಪಜ್ರಿಯೇಣ**—(ಅಂಗಿರಸ) ಪಜ್ರಕುಲೋತ್ಪನ್ನನಾದ । **ಕಕ್ಷೀವತಾ**—ಕ್ಷೀವಂತನಾದ (ನನ್ನಿಂದ) **ಶಂಸ್ಯಂ**—ಪ್ರಶಂಸಿಸಲ್ಪಡಬೇಕು ।

॥ ಭಾವಾರ್ಥ ॥

(ಯಾಗಗಳ) ನೇತೃಗಳಾದ ಎಲೈ ನಾಸತ್ಯರೇ, ಪಜ್ರರ (ಅಂಗಿರಸರ) ಕುಲೋತ್ಪನ್ನನಾದ ಕಕ್ಷೀವಂತನೆಂಬ ಕನಾನು, ವೇಗಗಾಮಿಯಾದ (ನಿಮ್ಮ) ಅಶ್ವದ ಗೊರಸಿನಿಂದ ನಿರ್ಗಮಿಸುವ ಮಧುವಿನಿಂದ (ನೂರು) ಕುಂಭಗಳನ್ನು ಅಪೇಕ್ಷಿಸಿದ ಜನಗಳಿಗಾಗಿ ತುಂಬಿಸಿದ ನಿಮ್ಮ ಮಹತ್ಕಾರ್ಯವನ್ನು, ಅಭೀಷ್ಟಪ್ರಾಪ್ತಿಗಾಗಿ ಪ್ರಶಂಸಿಸುತ್ತೇನೆ.

## English Translation

That (exploit) of yours, leader (of sacrifice), is to be celebrated, Nasatyas, by Kakshivat, of the race of Pajra, when you filled for the (expectant) man a hundred vases of sweet (liquors) from the hoof of your fleet horse.

॥ ವಿಶೇಷವಿಷಯಗಳು ॥

**ಪರಿಜ್ಮನ್—ಪರಿಗಮನೇ ಅಭೀಷ್ಟಸ್ಯ ಪ್ರಾಪಣೇ ನಿಮಿತ್ತಭೂತೇ ಸತಿ** । ಇಷ್ಟಾರ್ಥವನ್ನು ಹೊಂದ ಬೇಕಾದ ವಿಷಯವು ಉಪಸ್ಥಿತವಾದಾಗ ಎಂದು ಸಾಯಣರೂ, **ಸರ್ವತೋ ಗಚ್ಛಂತಿ ದೇವಾ ಯತ್ರ ಸ ಪರಿಜ್ಮಾ**

**ಯಜ್ಞಃ** । ದೇವತೆಗಳು ಎಲ್ಲಾ ಕಡೆಯಲ್ಲಿಯೂ ಹೋಗಬೇಕಾದ ಪ್ರದೇಶವು ಯಜ್ಞವು ನಡೆಯುವ ಪ್ರದೇಶವೇ ಆಗಿರುವುದರಿಂದ ಇಲ್ಲಿ ಪರಿಜ್ಮಶಬ್ದಕ್ಕೆ ಯಜ್ಞವೆಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಮಾಡಿರುವರು.

**ಪಜ್ರಿಯೇಣ—ಪಜ್ರಾಣಾಂ ಅಂಗಿರಸಾಂ ಕುಲೇ ಜಾತೇನ** ಅಂಗಿರಾಋಷಿಗಳ ವಂಶದವರಿಗೆ ಪಜ್ರರೆಂದು ಹೆಸರು. ಅವರ ವಂಶದಲ್ಲಿ ಉತ್ಪನ್ನನಾದ ಎಂದು ಅರ್ಥ. ಸ್ಕಂದಸ್ವಾಮಿಗಳು—**ಪಾಜಃ ಅನ್ನಂ ಹವಿರ್ಲಕ್ಷಣಂ ತದ್ವತಾ ಅಥವಾ ಪಜ್ರಾಃ ಅಂಗಿರಸಃ ತದಪತ್ಯಭೂತೇನ ಮಯಾ ಕಕ್ಷೀವತಾ** ಪಾಜಶಬ್ದಕ್ಕೆ ಹವಿಸ್ಸಿನ ರೂಪವಾದ ಅನ್ನವೆಂದು ಅರ್ಥಮಾಡಿ ಆ ರೂಪವಾಗಿರುವ ಅನ್ನವನ್ನು ಹೊಂದಿರುವವನು ಎಂದರೆ ಅರ್ಪಿಸುವುದಕ್ಕಾಗಿ ಸಿದ್ಧಪಡಿಸಿಕೊಂಡಿರುವವನು ಎಂದು ಒಂದು ವಿಧವಾಗಿಯೂ, ಅಥವಾ ಅಂಗಿರಾಋಷಿಗಳ ವಂಶದವರು ಪಜ್ರರೆನಿಸಿರುವರು ಅವರ ವಂಶದಲ್ಲಿ ಉತ್ಪನ್ನನಾದವನು ಕಕ್ಷೀವಂತನೆಂಬವನು ಎಂದು ಈ ಸೂಕ್ತದ ದ್ರಷ್ಟೃವಾದ ಋಷಿಯು ಎಂದು ಇನ್ನೊಂದು ವಿಧವಾಗಿಯೂ ಅರ್ಥವನ್ನು ಮಾಡಿರುವರು.

ಈ ಋಕ್ಕಿನಲ್ಲಿ ಈ ಸೂಕ್ತದ್ರಷ್ಟೃವಾದ ಕಕ್ಷೀವಂತನೆಂಬ ಋಷಿಯು ಅಶ್ವಿನೀದೇವತೆಗಳ ಪ್ರಭಾವವನ್ನು ಪ್ರಕಟಿಸುವವನಾಗಿ ಅವರ ಔದಾರ್ಯವನ್ನು ಪ್ರಶಂಸೆಮಾಡಿರುವುದು ವರ್ಣಿತವಾಗಿದೆ. ಎಂದರೆ ಸೌತ್ರಾಮಣಿ ಎಂಬ ಯಜ್ಞವನ್ನು ಮಾಡುವಾಗ ಯಜಮಾನನು ಮದ್ಯವನ್ನು ಅಪೇಕ್ಷಿಸಿದಾಗ ಅಶ್ವಿನೀದೇವತೆಗಳು ಕುದುರೆಯ ಕಾಲಿನ ಗೊರಸಿನಿಂದ ಮದ್ಯದ ಕುಂಭಗಳನ್ನೇ ಬಹಳವಾಗಿ ನಿರ್ಮಿಸಿ ಅನುಗ್ರಹಿಸಿದರೆಂಬ ಅಶ್ವಿನೀದೇವತೆಗಳ ಔದಾರ್ಯವು ಸ್ಕಂದಸ್ವಾಮಿಗಳಿಂದ ವಿವೃತವಾಗಿರುವುದು.

**ಕಕ್ಷೀವತಾ—ಮಯಾ** । ಈ ಮಂತ್ರದ ಋಷಿಯಾದ ನನ್ನಿಂದ ಎಂದು ಸಾಯಣರ ಅರ್ಥವು. ನಿರುಕ್ತಕಾರರು—

> **ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ । ಕಕ್ಷೀವಂತಂ ಯ ಔಶಿಜಃ ।**
> (ಋ. ಸಂ. ೧-೧೮-೧)

> **ಸೋಮಾನಾಂ ಸೋತಾರಂ ಪ್ರಕಾಶನವಂತಂ ಕುರು ಬ್ರಹ್ಮಣಸ್ಪತೇ ಕಕ್ಷೀವಂತಮಿವ ಯ ಔಶಿಜಃ ಕಕ್ಷೀವಾನ್ ಕಕ್ಷ್ಯಾವಾನ್ ಔಶಿಜಃ ಉಶಿಜಃ ಪುತ್ರಃ ಉಶಿಗ್ವಷ್ಟೇಃ ಕಾಂತಿಕರ್ಮಣಃ ಅಪಿ ತ್ವಯಂ ಮನುಷ್ಯ ಕಕ್ಷ ಏವಾಭಿಪ್ರೇತಃ ಸ್ಯಾತ್ ತಂ ಸೋಮಾನಾಂ ಸೋತಾರಂ ಮಾಂ ಪ್ರಕಾಶನವಂತಂ ಕುರು ಬ್ರಹ್ಮಣಸ್ಪತೇ ॥** (ನಿ. ೬-೧೧)

ವಶ ಕಾಂತೌ, ಕಾಂತಿರಿಚ್ಛಾ । ಇಚ್ಛಾರ್ಥಕವಾದ ವಶ ಧಾತುವಿನಿಂದ ಉಶಿಕ್ ಎಂಬ ಶಬ್ದವು ನಿಷ್ಪನ್ನವಾಗಿರುವುದು. ಉಶಿಕ್ ಎಂಬ ಸ್ತ್ರೀಯಲ್ಲಿ ಉತ್ಪನ್ನನಾದ ಕಕ್ಷೀವಂತನೆಂಬವನು ಬ್ರಹ್ಮಣಸ್ಪತಿಯನ್ನು (ಬ್ರಾಹ್ಮಣರಿಗೆ ರಾಜನಾದ ಸೋಮನನ್ನು) ಸೋಮರಸವನ್ನು ಹಿಂಡುವಂತೆ ಮಾಡು ಎಂದು ಪ್ರಾರ್ಥನೆಮಾಡಿರುವುದು ಈ ಋಕ್ಕಿನಲ್ಲಿ ಉಕ್ತವಾಗಿರುವುದು. ಇದರಿಂದ ಕಕ್ಷೀವಂತನೆಂಬವನು ಉಶಿಕ್ ಎಂಬ ಸ್ತ್ರೀಯ ಪುತ್ರನೆಂದೂ ಮನುಷ್ಯ (ಕಕ್ಷ್ಯೆ)ರ ಗುಂಪಿನಲ್ಲಿ ಸೇರಿ ಯಜ್ಞಗಳನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಿರುವನೆಂದೂ ತಿಳಿದುಬರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಶಂಸ್ಯಮ್**—ಶಂಸು ಸ್ತುತೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಜ್ರಿಯೇಣ**—ಪಜ್ರಸ್ಯ ಅಯಂ ಪಜ್ರಿಯಃ ಇದಕ್ಕೆ ಶೈಷಿಕವಾದ ಘಚ್ ಪ್ರತ್ಯಯ. **ಆಯನೇಯೀ-ನಿಯಃ**—(ಪಾ. ಸೂ. ೭-೧-೨) ಎಂಬುದರಿಂದ ಅಕಾರಕ್ಕೆ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದ ರಿಂದ ಅದಕ್ಕೆ ಇಯಾದೇಶ. **ಯಸ್ಯೇತಿ ಚ** ಎಂಬುದರಿಂದ ಅಕಾರಕ್ಕೆ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಕಕ್ಷೀವತಾ—ಆಸಂದೀವದಷ್ಠೀವತ್**—(ಪಾ. ಸೂ. ೮-೨-೧೨) ಎಂಬುದರಿಂದ ನಿಪಾತಿತವಾಗಿದೆ. ತೃತೀಯಾ ಏಕವಚನಾಂತರೂಪ.

**ಪರಿಜ್ಮನ್**—**ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯಾಂತವಾಗಿ ನಿಪಾತಿತ ವಾಗಿದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್.

**ಅಸಿಂಚತಮ್**—ಷಿಚಿರ್ ಕ್ಷರಣೇ ಧಾತು. **ಧಾತ್ವಾದೇಃ ಷಃಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ತುದಾದಿಭ್ಯಃಶಃ** (ಪಾ. ಸೂ. ೩-೧-೭೭) ಸೂತ್ರದಿಂದ ಶವಿಕರಣ. **ಶೇಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಯುವಂ ನರಾ ಸ್ತುವತೇ ಕೃಷ್ಣಿಯಾಯ ವಿಷ್ಣಾಪ್ವಂ ದದಥು-
ರ್ವಿಶ್ವಕಾಯ ।
ಘೋಷಾಯೈ ಚಿತ್ಪಿತೃಷದೇ ದುರೋಣೇ ಪತಿಂ ಜೂರ್ಯಂತ್ಯಾ
ಅಶ್ವಿನಾವದತ್ತಂ ॥ ೭ ॥

॥ ಪದಪಾಠಃ ॥

ಯುವಂ । ನರಾ । ಸ್ತುವತೇ । ಕೃಷ್ಣಿಯಾಯ । ವಿಷ್ಣಾಪ್ವಂ । ದದಥುಃ । ವಿಶ್ವ-ಕಾಯ ।

ಘೋಷಾಯೈ । ಚಿತ್ । ಪಿತೃऽಸದೇ । ದುರೋಣೇ । ಪತಿಂ । ಜೂರ್ಯಂತ್ಯೈ । ಅಶ್ವಿನೌ । ಅದತ್ತಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ಯುವಂ ಯುವಾಂ ಸ್ತುವತೇ ಸ್ತೋತ್ರಂ ಕುರ್ವತೇ ಕೃಷ್ಣಿಯಾಯ ಕೃಷ್ಣಾಖ್ಯಸ್ಯ ಪುತ್ರಾಯ ವಿಶ್ವಕಾಯ ವಿಷ್ಣಾಪ್ವಂ ದದಥುಃ । ವಿಷ್ಣಾಪ್ವಂ ನಾಮ ವಿನಿಷ್ಟಂ ಪುತ್ರಂ ಪತ್ತವಂತೌ । ಘೋಷಾ ನಾಮ ಬ್ರಹ್ಮವಾದಿನೀ ಕಕ್ಷೀವತೋ ದುಹಿತಾ । ಸಾ ಕುಷ್ಠಿನೀ ಸತೀ ಕಸ್ಮೈಚಿದ್ವರಾಯಾದತ್ತಾ ಪಿತೃಗೃಹೇ ನಿಷಣ್ಣಾ ಜೀರ್ಣಾಸೀತ್ । ಸಾಶ್ವಿನೋರನುಗ್ರಹಾನ್ನಷ್ಟಕುಷ್ಠಾ ಸತೀ ಪತಿಂ ಲೇಭೇ । ತದೇತದಾಹ । ಹೇ ಅಶ್ವಿನೌ ಪಿತ್ರಾ ಸಂಬದ್ಧೇ ದುರೋಣೇ ಸ್ವಕೀಯಜನಕಗೃಹೇ ಕುಷ್ಠರೋಗೇಣ ಭರ್ತಾರಮಪ್ರಾಪ್ಯ ಪಿತೃಷದೇ ಪಿತೃಸಮೀಪೇ ನಿಷಣ್ಣಾಯೈ ಜೂರ್ಯಂತ್ಯೈ ಜರಾಂ ಪ್ರಾಪ್ನುವತ್ಯೈ ಘೋಷಾಯೈ ಚಿತ್ ಏತತ್ಸಂಜ್ಞಾಯೈ ಬ್ರಹ್ಮವಾದಿನ್ಯಾ ಅಪಿ ರೋಗೋಪಶಮನೇನ ಪತಿಂ ಭರ್ತಾರಮದತ್ತಂ । ಯುವಾಂ ಪತ್ತವಂತೌ ॥ ಪಿತೃಷದೇ । ಷದ್ಲೃ ವಿಶರಣಾದಿಷು । ಕ್ವಿಪ್ಚೇತಿ ಕ್ವಿಪ್ । ಜೂರ್ಯಂತ್ಯೈ । ಜ್ಯಾಷ್ ವಯೋಹಾನೌ । ಲಟಃ ಶತೃ । ದಿವಾದಿಭ್ಯಃ ಶ್ಯನ್ । ಬಹುಲಂ ಛಂದಸೀತ್ಯುತ್ವಂ । ಹಲಿ ಚೇತಿ ದೀರ್ಘಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶ್ಯನೋ ನಿತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಹೇ ನರಾ-ನೇತೃಗಳಾದ ಅಶ್ವಿನೀದೇವತೆಗಳೇ । **ಯುವಂ**-ನೀವಿಬ್ಬರು । **ಸ್ತುವತೇ**-ಸ್ತುತಿಸಿದ । **ಕೃಷ್ಣಿಯಾಯ**—ಕೃಷ್ಣ ಎಂಬುವನ ಪುತ್ರನಾದ । **ವಿಶ್ವಕಾಯ**—ವಿಶ್ವಕನಿಗೆ । **ವಿಷ್ಣಾಪ್ವಂ**—ವಿಷ್ಣಾಪ್ವು (ನಷ್ಟನಾಗಿದ್ದ ಅವನ ಪುತ್ರ) ವನ್ನು । **ದದಥುಃ**—ದೊರಕಿಸಿದಿರಿ । **ಹೇ ಅಶ್ವಿನೌ**—ಅಶ್ವಿನೀದೇವತೆಗಳೇ । **ದುರೋಣೇ**—(ಸ್ವಜನರ) ಮನೆಯಲ್ಲಿ । **ಪಿತೃಷದೇ**—(ಕುಷ್ಠರೋಗಿಯಾದುದರಿಂದ ವಿವಾಹವಿಲ್ಲದೇ) ತಂದೆಯ ಸಮೀಪದಲ್ಲಿಯೇ (ಕುಳಿತಿದ್ದ) । **ಜೂರ್ಯಂತ್ಯೈ**—ಜೀರ್ಣಳಾಗುತ್ತಿದ್ದ (ವೃದ್ಧಾಪ್ಯವನ್ನು ಪಡೆಯುತ್ತಿದ್ದ) । **ಘೋಷಾಯೈ**—ಘೋಷಾ ಎಂಬುವಳಿಗೆ (ರೋಗೋಪಶಮನವಾಡಿ) । **ಪತಿಂ ಚಿತ್**—ಪತಿಯನ್ನೂ । **ಅದತ್ತಂ**—ಅನುಗ್ರಹಿಸಿದಿರಿ.

॥ ಭಾವಾರ್ಥ ॥

ಎಲೈ ನೇತೃಗಳಾದ ಅಶ್ವಿನೀದೇವತೆಗಳೇ, (ನಿಮ್ಮನ್ನು) ಸ್ತುತಿಸಿದ ಕೃಷ್ಣ ಎಂಬುವನ ಮಗ ವಿಶ್ವಕನಿಗೆ (ಅವನ ನಷ್ಟಪುತ್ರ) ವಿಷ್ಣಾಪುವನ್ನು ದೊರಕಿಸಿದಿರಿ ಮತ್ತು (ತಂದೆಯ) ಮನೆಯಲ್ಲಿ (ವಿವಾಹವಿಲ್ಲದೇ) ತಂದೆಯ ಸಮೀಪದಲ್ಲೇ ಇದ್ದು ವಾರ್ಧಕ್ಯವನ್ನು ಹೊಂದುತ್ತಿದ್ದ ಘೋಷಾ ಎಂಬುವಳಿಗೆ ಪತಿಯನ್ನೂ ಅನುಗ್ರಹಿಸಿದಿರಿ.

## English Translation.

You restored, leaders (of sacrifices), Vishnapu (his lost son) to Vishwaka, the son of Krishna, when he praised you; you bestowed, Ashwins, a husband upon Ghosha grnwing old and tarrying in her father's dwelling.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳು ತಮ್ಮನ್ನು ಸ್ತುತಿಮಾಡಿರುವ ಕೃಷ್ಣನೆಂಬವನ ಮಗನಾದ ವಿಶ್ವಕನೆಂಬವನಿಗೆ ನಾಶವಾದ (ಎಲ್ಲಿಯೋ ಹೊರಟುಹೋಗಿದ್ದ) ವಿಷ್ಣಾಪ್ವನೆಂದು ಹೆಸರುಳ್ಳ ಮಗನನ್ನು ಹಿಂದಕ್ಕೆ ತಂದುಕೊಟ್ಟು ಅನುಗ್ರಹಿಸಿದರೆಂದು ಇಲ್ಲಿ ವರ್ಣಿತವಾಗಿದೆ.

**ಘೋಷಾಯೈ ಚಿತ್ ಪತಿಂ ಅದತ್ತಂ ವಿತತ್ಸಂಜ್ಞಾಯೈ ಬ್ರಹ್ಮವಾದಿನ್ಯೈ ಅಪಿ ರೋಗೋಪ-ಶಮನೇನ ಭರ್ತಾರಂ ಯುವಾಂ ದತ್ತವಂತೌ ।** ಘೋಷಾ ಎಂಬ ಹೆಸರುಳ್ಳ ಬ್ರಹ್ಮವಾದಿನಿಯಾದ ಸ್ತ್ರೀಗೆ ಅಶ್ವಿನೀ ದೇವತೆಗಳು ಪತಿಯನ್ನು ಅನುಗ್ರಹಿಸಿದರು ಎಂದು ಅರ್ಥ. ಘೋಷಾ ಎಂಬವಳು ಕಕ್ಷೀವಂತ ಋಷಿಯ ಮಗಳು. ಇವಳಿಗೆ ಕುಷ್ಠರೋಗವು ಬಂದಕಾರಣ ಇವಳ ಪತಿಯು ಇವಳನ್ನು ತ್ಯಾಗಮಾಡಿದ್ದರಿಂದ ಇವಳು ತನ್ನ ತಂದೆಯ ಮನೆಯಲ್ಲಿಯೇ ಇದ್ದು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿ ಅವರಿಂದ ತನ್ನ ಪತಿಯನ್ನು ಹೊಂದಿದಳು ಮತ್ತು ಕುಷ್ಠರೋಗವಿಲ್ಲದವಳೂ ಆದಳು ಎಂದು ಇತಿಹಾಸವು ಇಲ್ಲಿ ಉಕ್ತವಾಗಿರುವುದು.

ಇದನ್ನು ಸ್ಕಂದಸ್ವಾಮಿಗಳು ಬೇರೆಯ ವಿಧವಾಗಿ ಹೇಳಿ ಇದನ್ನು ವಿವರಿಸಿರುವ ಋಕ್ಕನ್ನೂ ಉದಹರಿಸಿರುವರು. ಮತ್ತು ವಿಶ್ವಕನೆಂಬ ಋಷಿಗೆ ಅವನ ಮೃತನಾದ ವಿಷ್ಣಾಪ್ವನೆಂಬ ಹೆಸರುಳ್ಳ ಅವನ ಮಗನನ್ನು ಬದುಕಿಸಿಕೊಟ್ಟ ಇತಿಹಾಸವನ್ನು ವಿವರಿಸಿ ಅದನ್ನು ಹೇಳಿರುವ ಋಕ್ಕನ್ನೂ ಉದಹರಿಸಿರುವರು.

**ಅವಸ್ಯತೇ ಸ್ತುವತೇ ಕೃಷ್ಣಿಯಾಯ ಋಜೂಯತೇ ನಾಸತ್ಯಾ ಶಚೀಭಿಃ ।**
**ಪಶುಂ ನ ನಷ್ಟಮಿವ ದರ್ಶನಾಯ ವಿಷ್ಣಾಪ್ವಂ ದದಥುರ್ವಿಶ್ವಕಾಯ ॥**

(ಋ. ಸಂ. ೧-೧೧೬-೨೩)

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು, ಪುತ್ರದಾನಮಾಡಿದ ವಿಷಯವು ಉಕ್ತವಾಗಿದೆ.

**ಘೋಷಾ ನಾಮ ಕಕ್ಷೀವತೋ ದುಹಿತಾ ಸಾ ದುರ್ಭಗತ್ವಾತ್ ಪರಿತ್ಯಕ್ತಾ ಪಿತುರೇವ ಗೃಹೇ ಜರಾಂ ಜಗಾಮ । ಸಾ ಜೀರ್ಣಾ ಅಶ್ವಿನೌ ಶೋಭನಂ ಭಗಂ ಯಯಾಚೇ । ತಸ್ಯೈ ಅಶ್ವಿನೌ ಸ್ವಯಮೇವ ಭಗತಾಂ ಜಗ್ಮತುಃ ಇತಿ । ತದೇತತ್ ಘೋಷೈವ ವಕ್ಷ್ಯತಿ ॥**

ಈ ವಿಷಯದಲ್ಲಿ—

**ಅಮಾಜುರಶ್ಚಿದ್ಭವಥೋ ಯುವಂ ಭಗೋಽನಾಶೋಶ್ಚಿದವಿತಾರಾಪಮಸ್ಯ ಚಿತ್ ।**
**ಅಂಧಸ್ಯ ಚಿನ್ನಾಸತ್ಯಾ ಕೃಶಸ್ಯ ಚಿದ್ಯುವಾಮಿದಾಹುರ್ಭಿಷಜಾ ರುತಸ್ಯ ಚಿತ್ ॥**

(ಋ. ಸಂ. ೧೦-೩೯-೩)

ಎಂಬ ಋಕ್ಕನ್ನು ಉದಹರಿಸಿ, ಘೋಷಾ ಎಂಬ ಹೆಸರುಳ್ಳ ಕಕ್ಷೀವಂತಋಷಿಯ ಮಗಳು ದುರ್ಭಗಳಾಗಿ ಪತಿಯಿಂದ ಪರಿತ್ಯಕ್ತಳಾಗಿ ತನ್ನ ತಂದೆಯ ಮನೆಯಲ್ಲಿಯೇ ವಯಸ್ಕಳಾಗಿ ತನ್ನ ಪ್ರಾಯವನ್ನು ಕಳೆದುಕೊಂಡು ವೃದ್ಧೆಯಾಗುತ್ತಿರುವಾಗ ಅಶ್ವಿನೀದೇವತೆಗಳನ್ನು ಸ್ತುತಿಸಿ ಸೌಭಾಗ್ಯವನ್ನು ಕೇಳಿಕೊಂಡಳು. ಅಶ್ವಿನೀದೇವತೆಗಳು ತಾವೇ ಸೌಭಾಗ್ಯರೂಪವನ್ನು ಹೊಂದಿ ಅವಳ ಇಷ್ಟವು ನೆರವೇರುವಹಾಗೆ ಮಾಡಿದರೆಂದು ಇತಿಹಾಸವು ಇಲ್ಲಿ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಯುವಮ್**—ಯುಷ್ಮಚ್ಛಬ್ದ. ದ್ವಿತೀಯಾದ್ವಿವಚನಾಂತರೂಪ. **ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್** ಎಂಬಲ್ಲಿ ಲೋಕದಲ್ಲಿ ಮಾತ್ರ ಆತ್ವ ಹೇಳಿರುವುದರಿಂದ ಆತ್ವ ಬರುವುದಿಲ್ಲ.

**ಸ್ತುವತೇ**—ಷ್ಟುಞ್ ಸ್ತುತೌ ಧಾತು. ಧಾತ್ವಾದಿಗೆ ಸತ್ವ. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ಪಿಗೆ ಲುಕ್. **ಅಚಿಶ್ನುಧಾತುಭ್ರುವಾಂ**—(ಪಾ. ಸೂ. ೬-೪-೭೭) ಎಂಬುದರಿಂದ ಉವಜಾದೇಶ. ಚತುರ್ಥೀಏಕವಚನಾಂತ ರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ**—(ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಕೃಷ್ಣಿಯಾಯ**—ಕೃಷ್ಣಸ್ಯ ಅಯಂ ಕೃಷ್ಣಿಯಃ. ಶೈಷಿಕವಾದ ಘಚ್ ಪ್ರತ್ಯಯ. **ಆಯನೇಯೀ**—(ಪಾ. ಸೂ. ೭-೧-೨) ಎಂಬುದರಿಂದ ಇಯಾದೇಶ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಿಷ್ಣಾಪ್ವಮ್**—ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ.

**ದದಥುಃ**—ಡುದಾಞ್ ದಾನೇ. ಧಾತು. ಲಿಟ್‌ಮಧ್ಯಮಪುರುಷದ್ವಿವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪಿತೃಷದೇ**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಪಿತೃಶಬ್ದ ಉಪಪದವಾಗಿರುವಾಗ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಜುರ್ಯಂತ್ಯೈ**—ಜ್ಯೂಷ್ ವಯೋಹಾನೌ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. ರಪರವಾಗಿಬರುತ್ತದೆ. **ಹಲಿ ಚ** (ಪಾ. ಸೂ. ೮-೨-೭೭) ಎಂಬುದರಿಂದ ರೇಫಾಂತ ಉಪಧೆಗೆ ದೀರ್ಘ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ**(ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಉಗಿತ್ತಾದುದರಿಂದ ನುಮಾಗಮ. ಚತುರ್ಥೀ ಏಕವಚನಾಂತರೂಪ.

**ಅದತ್ತಮ್**—ಡುದಾಞ್ ದಾನೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತದ ನಿಘಾತಸ್ವರ ಬರುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ಯುವಂ ಶ್ಯಾವಾಯ ರುಶತೀಮದತ್ತಂ ಮಹಃ ಕ್ಷೋಣಸ್ಯಾಶ್ವಿನಾ
ಕಣ್ವಾಯ ।
ಪ್ರವಾಚ್ಯಂ ತದ್ವೃಷಣಾ ಕೃತಂ ವಾಂ ಯನ್ನಾರ್ಷದಾಯ ಶ್ರವೋ
ಅಧ್ಯಧತ್ತಂ ॥ ೮ ॥

॥ ಪದಪಾಠಃ ॥

ಯುವಂ । ಶ್ಯಾವಾಯ । ರುಶತೀಂ । ಅದತ್ತಂ । ಮಹಃ । ಕ್ಷೋಣಸ್ಯ । ಅಶ್ವಿನಾ ।
ಕಣ್ವಾಯ ।
ಪ್ರऽವಾಚ್ಯಂ । ತತ್ । ವೃಷಣಾ । ಕೃತಂ । ವಾಂ । ಯತ್ । ನಾರ್ಸದಾಯ ।
ಶ್ರವಃ । ಅಧಿऽಅಧತ್ತಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ಶ್ಯಾವಾಯ ಕುಷ್ಠರೋಗೇಣ ಶ್ಯಾಮವರ್ಣಾಯರ್ಷಯೇ ರುಶತೀಂ ದೀಪ್ತತ್ವಚಂ ಸ್ತ್ರಿಯಮದತ್ತಂ । ಪ್ರಾಯಚ್ಛತಂ । ಅಪಿ ಚ ಕ್ಷೋಣಸ್ಯ ಕ್ಷೋಣಾಯ ದೃಷ್ಟಿರಾಹಿತ್ಯೇನ ಗಂತುಮಶಕ್ತಃ ಸನ್ನೇಕಸ್ಮಿನ್ನೇವ ಸ್ಥಾನೇ ನಿವಸತಿ ತಸ್ಮೈ ಕಣ್ವಾಯರ್ಷಯೇ ಮಹಸ್ತೇಜಸ್ತೈಜಸಂ ಚಕ್ಷುರಿಂದ್ರಿಯಮದತ್ತಮಿತಿ ಶೇಷಃ । ತಥಾ ಹೇ ವೃಷಣಾ ಕಾಮಾನಾಂ ವರ್ಷಿತಾರೌ ವಾಂ ಯುವಯೋಸ್ತತ್ಕೃತಂ ಕರ್ಮ ಪ್ರವಾಚ್ಯಂ । ಪ್ರಕರ್ಷೇಣ ವಾಚನೀಯಂ ಶಂಸನೀಯಂ । ನಾರ್ಷದಾಯ ನೃಷದಪುತ್ರಾಯ ಬಧಿರಾಯರ್ಷಯೇ ಶ್ರವಃ ಶ್ರವಣೇಂದ್ರಿಯಂ ಯದಧ್ಯಧತ್ತಂ । ದತ್ತವಂತೌ ಸ್ಥ ಇತಿ ಯತ್ ತದಿತ್ಯರ್ಥಃ । ಅಪರ ಆಹ । ಬ್ರಾಹ್ಮಣಸ್ಯ ಪರೀಕ್ಷಾರ್ಥಮಸುರಾಃ ಕಣ್ವಮೃಷಿಂ ಗೂಢೇ ತಮಸಿ ನಿದಧುಃ । ಅತ್ರೈವ ಸ್ಥಿತಃ ಸನ್ ವ್ಯುಷ್ಟಾಮುಷಸಂ ವಿಜಾನೀಹಿ ಯದಿ ತ್ವಂ ಬ್ರಾಹ್ಮಣೋಽಸೀತಿ । ತಮಶ್ವಿನಾವಾಗತ್ಯೋಚತುಃ । ವ್ಯುಷ್ಟಾಯಾಂ ಹರ್ಮ್ಯಸ್ಯೋಪರಿ ವೀಣಾಂ ವಾದಯಂತಾವಾವಾಮಾಗಮಿಷ್ಯಾವಃ । ತಂ ಶಬ್ದಂ ಶ್ರುತ್ವಾ ವ್ಯುಷ್ಟಾಮುಷಸಂ ಬ್ರೂಹಿ । ತದೇತತ್ಪ್ರತಿಪಾದ್ಯತೇ । ಹೇ ವೃಷಣಾ ಕಾಮಾನಾಂ ವರ್ಷಿತಾರಾವಶ್ವಿನೌ ವಾಂ ಯುವಯೋಸ್ತತ್ಕೃತಂ ಕರ್ಮ ಪ್ರವಾಚ್ಯಂ ಪ್ರಶಂಸನೀಯಂ ಯನ್ನಾರ್ಷದಾಯ ನೃಷದಪುತ್ರಾಯ ಕಣ್ವಾಯ ಕ್ಷೋಣಸ್ಯ । ಕ್ಷೋಣಃ ಶಬ್ದಕಾರೀ ವೀಣಾವಿಶೇಷಃ । ಮಹೋ ಮಹತಃ ಕ್ಷೋಣಸ್ಯ ಶ್ರವಃ ಶಬ್ದಮಧ್ಯಧತ್ತಂ ಉಷಸೋ ವಿಜ್ಞಾನಾರ್ಥಮಧಿಕಮಕುರುತಂ ॥ ಮಹಃ । ಮಹ ಪೂಜಾಯಾಂ । ಅಸ್ಮಾದೌಣಾದಿಕೋಽಸಿಪ್ರತ್ಯಯಃ । ಪಕ್ಷಾಂತರೇ ತು ಮಹಚ್ಛಬ್ದಾತ್ ಷಷ್ಠ್ಯೇಕವಚನೇ ಛಾಂದಸೋಽಲ್ಲೋಪಃ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ಯದ್ವಾ । ಕ್ವಿಬಂತಾತ್ ಷಷ್ಠ್ಯೇಕವಚನಂ । ಕ್ಷೋಣಸ್ಯ । ಕ್ಷಿ ನಿವಾಸಗತ್ಯೋಃ । ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಲ್ಯುಟ್ । ಪೃಷೋದರಾದಿತ್ವಾತ್ ಕ್ಷೋಣಭಾವಃ । ತದುಕ್ತಂ ಯಾಸ್ಕೇನ । ಕ್ಷೋಣಸ್ಯ ಕ್ಷಯಣಸ್ಯ । ನಿ-೬-೬ । ಇತಿ । ಪಕ್ಷಾಂತರೇ ತು ಟುಕ್ಷು ಶಬ್ದ ಇತ್ಯಸ್ಮಾದೌಣಾದಿಕೋ ನಪ್ರತ್ಯಯಃ । ನಾರ್ಷದಾಯ । ಋಷ್ಯಂಧಕೇತ್ಯಣ್ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರು । **ಶ್ಯಾವಾಯ**—(ಕುಷ್ಠರೋಗದಿಂದ ಶ್ಯಾಮವರ್ಣನಾಗಿದ್ದ) ಶ್ಯಾವ ಎಂಬ ಋಷಿಗೆ । **ರುಶತೀಂ**—ಸ್ಫುರದ್ರೂಪಿಯಾದ ಸ್ತ್ರೀಯನ್ನು (ಪತ್ನಿಯನ್ನಾಗಿ) । **ಅದತ್ತಂ**—ದಾನಮಾಡಿದಿರಿ । **ಕ್ಷೋಣಸ್ಯ**—(ಕುರುಡನಾದುದರಿಂದ) ಚಲಿಸಲು ಅಶಕ್ತನಾದ । **ಕಣ್ವಾಯ**—ಕಣ್ವನೆಂಬ ಋಷಿಗೆ । **ಮಹಃ**-ತೇಜೋರೂಪವಾದ ದೃಷ್ಟಿಯನ್ನು (ಕೊಟ್ಟಿರಿ) । (**ತಥಾ**-ಹಾಗೆಯೇ) । **ವೃಷಣಾ**-ಇಷ್ಟಾರ್ಥವರ್ಷಿಗಳಾದ ಎಲೈ ಅಶ್ವಿನೀದೇವತೆಗಳೇ । **ನಾರ್ಷದಾಯ**—ನೃಷದನ ಪುತ್ರನೂ (ಬಧಿರನೂ ಆದ) ಋಷಿಗೆ । **ಶ್ರವಃ**—ಶ್ರವಣೇಂದ್ರಿಯವನ್ನು । **ಅಧ್ಯಧತ್ತಂ ಯತ್**—ಅನುಗ್ರಹಿಸಿದಿರಿ (ಎಂಬುದು) ಯಾವುದೋ । [ಅಥವಾ । **ವೃಷಣಾ**—ಕಾಮವರ್ಷಕರಾದ ಅಶ್ವಿನೀದೇವತೆಗಳೇ । **ನಾರ್ಷದಾಯ ಕಣ್ವಾಯ**—ನೃಷದಪುತ್ರನಾದ (ಕಣ್ವನಿಗೆ) । **ಮಹಃ**—ಮಹತ್ತಾದ । **ಕ್ಷೋಣಸ್ಯ**—ವೀಣೆಯ । **ಶ್ರವಃ**—ಶಬ್ದವನ್ನು । **ಅಧ್ಯಧತ್ತಂ ಯತ್**—(ಉಷಃಕಾಲಪರಿಜ್ಞಾನಕ್ಕೋಸ್ಕರ) ಹೆಚ್ಚು ಮಾಡಿದಿರಿ ಎಂಬುದು ಯಾವುದೋ ।] **ವಾಂ**—ನಮ್ಮಿಬ್ಬರ । **ತತ್ ಕೃತಂ**—ಆ ಕಾರ್ಯವು । **ಪ್ರವಾಚ್ಯಂ**—ಪ್ರಶಂಸನೀಯವು.

॥ ಭಾವಾರ್ಥ ॥

ಇಷ್ಟಾರ್ಥಗಳನ್ನು ಸುರಿಸುವ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ, ಶ್ಯಾವನೆಂಬುವನಿಗೆ ಸ್ಫುರದ್ರೂಪಿಯಾದ ಪತ್ನಿಯನ್ನೂ, (ಕುರುಡನಾಗಿ) ಚಲಿಸಲು ಅಶಕ್ತನಾಗಿದ್ದ ಕಣ್ವನಿಗೆ ದೃಷ್ಟಿಯನ್ನೂ ಕೊಟ್ಟಿರಿ; ಹಾಗೆಯೇ ನೃಷದ ಪುತ್ರನಿಗೆ ಶ್ರವಣೇಂದ್ರಿಯವನ್ನನುಗ್ರಹಿಸಿದಿರಿ: ನಿಮ್ಮ ಈ ಕಾರ್ಯವು ಪ್ರಶಂಸನೀಯವು.

## English Translation.

You gave, Aswins, a lovely bride to Syava; you gave sight to Kanwa, unable to see his way; showerers (of benefits), the deed is to be glorified by which you gave hearing to the son of Nrishada.

॥ ವಿಶೇಷವಿಷಯಗಳು ॥

**ಯುವಂ ಶ್ಯಾವಾಯ ರುಶತೀಮದತ್ತಂ—ಕುಷ್ಠರೋಗೇಣ ಶ್ಯಾಮವರ್ಣಾಯ ಋಷಯೇ ದೀಪ್ತತ್ವಚಂ ಶ್ರಿಯಂ ಪ್ರಾಯಚ್ಛತಂ** ॥ ಅಶ್ವಿನೀದೇವತೆಗಳು ಕುಷ್ಠರೋಗದಿಂದ ಕಪ್ಪುಬಣ್ಣವುಳ್ಳವನಾದ ಒಬ್ಬ ಋಷಿಗೆ ಕಾಂತಿಯುಳ್ಳ ಚರ್ಮವು ಆಗುವಂತೆಯೂ, ಕುಷ್ಠರೋಗವು ನಾಶವಾಗುವಂತೆಯೂ ಅನುಗ್ರಹಿಸಿದರು ಎಂದು ವರ್ಣಿಸಿದೆ ಎಂದು ಸಾಯಣರ ವ್ಯಾಖ್ಯಾನವು.

ಸ್ಕಂದಸ್ವಾಮಿಗಳು ಈ ವಿಷಯದಲ್ಲಿ—

**ಯುವಂ ಯುವಾಂ ಶ್ಯಾವಾಯ ಕುತ್ಸಿತತ್ವಾತ್ ಶ್ಯಾವವರ್ಣಾಯ ಅಗ್ನೇಃ ಪುತ್ರಸ್ಯ ಘೋರಸ್ಯ ಜ್ಯೇಷ್ಠಪುತ್ರಾಯ ರುಶತೀಂ ದೀಪ್ತಾಂ ತ್ವಚಂ ಅದತ್ತಂ ದತ್ತವಂತೌ ಸ್ಥಃ । ತಂ ಹಿ ಯುವಾಂ**

**ವಿಕೃತ್ಯೈ ಛಿತ್ವಾ ಚ ಜಂಘಯೋರ್ಮಧ್ಯೇ ಶಿರಸಿ ಚ ಪುನಶ್ಚ ಸಂಧಾಯ ಹಿರಣ್ಯತ್ವಚಂ ಪುನರುಜ್ಜೀವಯಾಂಚಕ್ರತುಃ । ತದೇತತ್ ಪುರಸ್ತಾದಪಿ ವಕ್ಷ್ಯತಿ ॥**

ಎಂದು ಹೇಳಿ—

**ಹಿರಣ್ಯಹಸ್ತಮಶ್ವಿನಾ ರರಾಣಾ ಪುತ್ರಂ ನರಾ ವಧ್ರಿಮತ್ಯಾ ಅದತ್ತಂ ।**
**ತ್ರಿಧಾ ಹ ಶ್ಯಾವಮಶ್ವಿನಾ ವಿಕಸ್ತಮುಜ್ಜೀವಸ ಐರಯತಂ ಸುದಾನೂ ॥**

(ಋ. ಸಂ. ೧-೧೧೭-೨೪)

ಅಗ್ನಿಯ ಮಗನಾದ ಘೋರನೆಂಬುವನ ಜ್ಯೇಷ್ಠಪುತ್ರನು ಕುಷ್ಠರೋಗದಿಂದ ಕಪ್ಪಾದಚರ್ಮವುಳ್ಳವನಾಗಿ ವಿಕಾರ ರೂಪದಿಂದ ಇರುವುದನ್ನು ನೋಡಿ ಅಶ್ವಿನೀದೇವತೆಗಳು ಅವನ ಶರೀರದಲ್ಲಿ ಜಂಘಾಪ್ರದೇಶ ಮತ್ತು ಶಿರಸ್ಸು ಇವುಗಳನ್ನು ಕತ್ತರಿಸಿ ರೋಗೋತ್ಪತ್ತಿಕಾರಣವನ್ನು ನಿರ್ಮೂಲಮಾಡಿ ಪುನಃ ಆ ಶರೀರವನ್ನೇ ಪೂರ್ವದಲ್ಲಿ ಇದ್ದಂತೆ ಸೇರಿಸಿ ಚಿನ್ನದ ಕಾಂತಿಯುಳ್ಳ ಚರ್ಮವುಳ್ಳದ್ದನ್ನಾಗಿ ಮಾಡಿದರು ಎಂದು ಇತಿಹಾಸವನ್ನು ವಿವರಿಸಿ ಅದನ್ನು ವಿವರಿಸಿರುವ ಮೇಲಿನ ಋಕ್ಕನ್ನು ಉದಹರಿಸಿರುವರು.

**ಮಹಃ ಕ್ಷೋಣಸ್ಯ— ಕ್ಷೋಣಾಯ ಯಃ ದೃಷ್ಟಿರಾಹಿತ್ಯೇನ ಗಂತುಮಶಕ್ತಃ ಸ್ವ ಏಕಸ್ಮಿನ್ನೇವ ಸ್ಥಾನೇ ನಿವಸತಿ ತಸ್ಮೈ ಕಣ್ವಾಯ ಋಷಯೇ ತೇಜಃ ತೈಜಸಂ ಚಕ್ಷುರಿಂದ್ರಿಯಂ ಅದತ್ತಂ ।**—ಕಣ್ವನೆಂಬ ಋಷಿಯು ಕಣ್ಣು ಕಾಣದವನಾಗಿ ಒಂದೇಕಡೆಯಲ್ಲಿರುವುದನ್ನು ನೋಡಿ ಅವನಿಗೆ ಕಣ್ಣು ಕಾಣಿಸುವಂತೆ ಅಶ್ವಿನೀದೇವತೆಗಳು ಅನುಗ್ರಹಿಸಿದರೆಂದು ಸಾಯಣರು ವಿವರಿಸಿರುವರು.

ಸ್ಕಂದಸ್ವಾಮಿಗಳೂ ಇದೇರೀತಿಯಾಗಿ ವ್ಯಾಖ್ಯಾನವನ್ನು ಮಾಡಿ-

**ಯುವಂ ಕಣ್ವಾಯಾಪಿರಿಪ್ತಾಯ ಚಕ್ಷುಃ ಪ್ರತ್ಯಧತ್ತಂ ಸುಷ್ಟುತಿಂ ಜುಜುಷಾಣಾ ॥**

(ಋ. ಸಂ. ೧-೧೧೮-೭)

ಎಂಬ ಋಕ್ಕನ್ನು ಉದಹರಿಸಿರುವರು. ಅಶ್ವಿನಾ ಕಣ್ವಾಯ ಎಂಬುದನ್ನು ವ್ಯಾಖ್ಯಾನಮಾಡುವಾಗ ಮಹಃ ಕ್ಷೋಣಸ್ಯ ಎಂಬ ಪದಗಳನ್ನು ಈ ವಾಕ್ಯಕ್ಕೆ ಸೇರಿಸಿ ಒಂದೇವಾಕ್ಯವಾಗಿ ಅರ್ಥವನ್ನು ಮಾಡಿರುವರು.

**ಯನ್ನಾರ್ಷದಾಯ ನೃಷದಃ ಪುತ್ರಾಯ ಕಣ್ವಾಯ ಕ್ಷೋಣಸ್ಯ ಕ್ಷೋಣಃ ಶಬ್ದಕಾರೀ ವೀಣಾ-ವಿಶೇಷಃ । ಮಹಃ ಮಹತಃ ಕ್ಷೋಣಸ್ಯ ಶ್ರವಃ ಶಬ್ದಂ ಅಧ್ಯಧತ್ತಂ ಉಷಸೋ ವಿಜ್ಞಾ-ನಾರ್ಥಂ ಅಧಿಕಂ ಅಕುರುತಂ ।**

ನೃಷದನೆಂಬುವನ ಮಗನಾದ ಕಣ್ವನೆಂಬುವನಿಗೆ ಉಷಃಕಾಲವು ಬಂದಿರುವುದೆಂದು ತಿಳಿಯುವುದಕ್ಕಾಗಿ ವೀಣೆಯ ಧ್ವನಿಯನ್ನು ಮಾಡಿದರು ಎಂದು ಅರ್ಥಮಾಡಿ.

**ಅಪರ ಆಹ-ಬ್ರಾಹ್ಮಣಸ್ಯ ಪರೀಕ್ಷಾರ್ಥಮಸುರಾಃ ಕಣ್ವಮೃಷಿಂ ಗೂಢೇ ತಮಸಿ ನಿದಧುಃ ಅತ್ರೈವ ಸ್ಥಿತಸ್ತ್ವಂ ವ್ಯುಷ್ಟಾಮುಷಸಂ ವಿಜಾನೀಹಿ ಯದಿ ತ್ವಂ ಬ್ರಾಹ್ಮಣೋಽಸಿ । ತಮ-ಶ್ವಿನೌ ಆಗತ್ಯೋಚತುಃ । ವ್ಯುಷ್ಟಾಯಾಂ ಹರ್ಮ್ಯಸ್ಯ ಉಪರಿ ವೀಣಾಂ ವಾದಯಂತಾ ಅವಾಂ ಆಗಮಿಷ್ಯಾವಃ । ತಂ ಶಬ್ದಂ ಶ್ರುತ್ವಾ ವ್ಯುಷ್ಟಾಮುಷಸಂ ಬ್ರೂಹಿ । ತದೇತತ್ ಪ್ರತಿಪಾದ್ಯತೇ ॥**

ನೃಷದಪುತ್ರನಿಗೆ ಕಿವಿಯು ಕೇಳಿಸದಿರುವಾಗ ಅಶ್ವಿನೀದೇವತೆಗಳು ಕಿವಿಯು ಕೇಳುವಂತೆ ಮಾಡಿದರು ಎಂಬ ತಮ್ಮ ವ್ಯಾಖ್ಯಾನಕ್ಕಿಂತ ಬೇರೆ ವಿಧವಾಗಿ ಒಂದೇ ವಾಕ್ಯವಾಗಿ ಅನ್ವಯವನ್ನು ಮಾಡಿ ಅರ್ಥವನ್ನು ಹೇಳಿರುವವರ (ಮತವನ್ನು) ಅಭಿಪ್ರಾಯವನ್ನು ಸಾಯಣರು ವಿವರಿಸಿರುತ್ತಾರೆ. ಅಸುರರು ಬ್ರಾಹ್ಮಣನ ಬ್ರಾಹ್ಮಣತ್ವವನ್ನು ಪರೀಕ್ಷೆಮಾಡುವುದಕ್ಕಾಗಿ ನೃಷದನ ಮಗನಾದ ಕಣ್ವನೆಂಬವನನ್ನು ಬಹಳ ಕತ್ತಲೆಯಾಗಿರುವ ಪ್ರದೇಶಕ್ಕೆ ಕರೆದುಕೊಂಡುಹೋಗಿ ಅಲ್ಲಿ ಅವನನ್ನು ಇರಿಸಿ ನೀನು ಇಲ್ಲಿ ಇದ್ದು ಉಷಃಕಾಲವು ಬಂದು ಕಳೆದುಹೋಗುವುದನ್ನು ತಿಳಿದು ಹೇಳಿದರೆ ನೀನು ಬ್ರಾಹ್ಮಣನಾಗಿರುತ್ತೀಯೆ ಇಲ್ಲದಿದ್ದರೆ ಇಲ್ಲ. ಎಂದು ಹೇಳಿ ಅವನನ್ನು ನಿರ್ಬಂಧದಲ್ಲಿ ಇರಿಸಿದರು. ಅವನಿಗೆ ಕಿವಿಯು ಕೇಳುತ್ತಿರಲಿಲ್ಲ. ಆಗ ಅಶ್ವಿನೀದೇವತೆಗಳು ಅವನ ಹತ್ತಿರಕ್ಕೆ ಬಂದು—ನಿನ್ನನ್ನು ಅಸುರರು ಇರಿಸಿರುವ ಮನೆಯ ಮಹಡಿಯಮೇಲೆ ಬಂದು ನಾವು ವೀಣೆಯನ್ನು ನುಡಿಸುತ್ತೇವೆ. ಅದರ ಧ್ವನಿಯನ್ನು ಕೇಳಿ ನೀನು ಅಸುರರಿಗೆ ಉಷಃಕಾಲವು ಪ್ರಾಪ್ತವಾದದ್ದನ್ನೂ ಕಳೆದದ್ದನ್ನೂ ಕೂಡ ತಿಳಿಸು ಎಂದು ಹೇಳಿ ಅವನಿಗೆ ಕಿವಿಯು ಕೇಳುವಂತೆ ಮಾಡಿದರು ಎಂದು ಇಲ್ಲಿ ವಿವೃತವಾಗಿರುತ್ತದೆ ಎಂದು ತಮ್ಮ ಮತವನ್ನು ಹೇಳಿರುವರು.

ಯಾಸ್ಕರು—**ಕ್ಷೋಣಸ್ಯ—ಕ್ಷಯಣಸ್ಯ** (ನಿ. ೬-೬) ನಿವಾಸಸ್ಥಾನದ ಎಂದು ಕ್ಷೋಣಶಬ್ದದ ಅರ್ಥವನ್ನು ವಿಮರ್ಶೆಮಾಡಿ **ಮಹಃ ಕ್ಷೋಣಸ್ಯಾಶ್ವಿನಾ ಕಣ್ವಾಯ ಇತ್ಯಪಿ ನಿಗಮೋ ಭವತಿ** ಎಂದು ಹೇಳಿರುವರು.

**ಪ್ರವಾಚ್ಯಂ ತದ್ವೃಷಣಾ ಕೃತಂ ವಾಂ** ಎಂಬ ವಾಕ್ಯದಿಂದ ಅವರವರ ಇಚ್ಛಾನುಸಾರವಾಗಿ ಅಭಿಲಾಷೆಯನ್ನು ನೆರವೇರಿಸುವುದರಮೂಲಕ ಆಶ್ರಿತರನ್ನು ರಕ್ಷಿಸುವ ಅಶ್ವಿನೀದೇವತೆಗಳ ಕಾರ್ಯವೆಲ್ಲವೂ ಅತಿಶಯವಾಗಿ ಪ್ರಶಂಸನೀಯವಾಗಿರುವುದು ಎಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ರುಶತೀಮ್**—ರುಶ್ ದೀಪ್ತೌ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ದ್ವಿತೀಯಾ ಏಕವಚನಾಂತರೂಪ.

**ಮಹಃ**— ಮಹ ಪೂಜಾಯಾಂ ಧಾತು. ಇದಕ್ಕೆ ಔಣಾದಿಕವಾದ ಅಸಿ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ. ಅರ್ಥಾಂತರ ವಿವಕ್ಷಾಮಾಡಿದಾಗ ಮಹತ್ ಶಬ್ದ. ಇದಕ್ಕೆ ಷಷ್ಠೀ ಏಕವಚನ ಪರವಾದಾಗ ಛಾಂದಸವಾಗಿ ಅತ್ ಎಂಬುದಕ್ಕೆ ಲೋಪ. **ಬೃಹನ್ಮಹತೋರುಪಸಂಖ್ಯಾನಮ್** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಥವಾ ಮಹ ಧಾತುವಿಗೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್‌ಪ್ರತ್ಯಯ. ಮಹ್ ಎಂದು ರೂಪವಾಗುತ್ತದೆ ಷಷ್ಠೀ ಏಕವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರಬರುತ್ತದೆ.

**ಕ್ಷೋಣಸ್ಯ**— ಕ್ಷಿ ನಿವಾಸಗತ್ಯೋಃ ಧಾತು. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬುದರಿಂದ ಕರ್ತರಿಯಲ್ಲಿ ಲ್ಯುಟ್ ಪ್ರತ್ಯಯ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅದಕ್ಕೆ ಕ್ಷೋಣಭಾವ. ಈ ವಿಷಯದಲ್ಲಿ

ಯಾಸ್ಕರು ಹೀಗೆ ಹೇಳಿರುತ್ತಾರೆ. **ಕ್ಷೋಣಸ್ಯ ಕ್ಷಯಣಸ್ಯ** (ನಿರು. ೬-೬) ಇತಿ ಎರಡನೇ ಅರ್ಥವನ್ನು ಸ್ವೀಕರಿಸಿದಾಗ ಟುಕ್ಷು ಶಬ್ದೇ. ಇದಕ್ಕೆ ಔಣಾದಿಕ ನ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಷಕಾರ ನಿಮಿತ್ತವಿರುವುದರಿಂದ ನಕಾರಕ್ಕೆ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರವಾಚ್ಯಮ್**—ವಚ ಪರಿಭಾಷಣೇ ಧಾತು. **ಹೇತುಮತಿಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಣಿಜಂತದಮೇಲೆ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ ಣಿಚ್ ನಿಮಿತ್ತವಾಗಿ **ಅತಉಪಧಾಯಾಃ** (ಪಾ. ಸೂ ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಯತೋಽನಾವಃ** (ಪಾ. ಸೂ. ೬-೧-೧೩) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಗತಿಸಮಾಸವಾದಾಗ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ನಾರ್ಷದಾಯ—**ನೃಷದಃ ಅಪತ್ಯಂ ಪುಮಾನ್—**ಋಷ್ಯಂಧಕವೃಷ್ಣಿಕುರುಭ್ಯಶ್ಚ** (ಪಾ. ಸೂ. ೪-೧-೧೧೪) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ.೭-೨-೧೧೭) ಎಂಬುದರಿಂದ ಆದಿವೃದ್ಧಿ **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥಿ ಏಕ ವಚನಾಂತರೂಪ.

**ಅಧತ್ತಮ್**—ಡುಧಾಞ್ ಧಾರಣಪೋಷಣಯೋಃ ಧಾತು ಲಙ್ ಮಧ್ಯಮಪುರುಷ ದ್ವಿವಚನರೂಪ. ಯದ್ಯೋಗವಿರುವುದರಿಂದ **ನಿಪಾತೈರ್ಯದ್ಯದಿ** (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತನಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅಧಿ) ನಿಘಾತಸ್ವರಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಪುರೂ ವರ್ಪಾಂಸ್ಯಶ್ವಿನಾ ದಧಾನಾ ನಿ ಪೇದವ ಊಹಥುರಾಶು-
ಮಶ್ವಂ ।
ಸಹಸ್ರಸಾಂ ವಾಜಿನಮಪ್ರತೀತಮಹಿಹನಂ ಶ್ರವಸ್ಯಂ೧ ತ-
ರುತ್ರಂ ॥ ೯ ॥

॥ ಪದಪಾಠಃ ॥

ಪುರು । ವರ್ಪಾಂಸಿ । ಅಶ್ವಿನಾ । ದಧಾನಾ । ನಿ । ಪೇದವೇ । ಊಹಥುಃ ।

ಆಶುಂ । ಅಶ್ವಂ ।

ಸಹಸ್ರಽಸಾಂ. । ವಾಜಿನಂ । ಅಪ್ರತಿಽಇತಂ । ಅಹಿಽಹನಂ । ಶ್ರವಸ್ಯಂ ।

ತರುತ್ರಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಪುರು ಪುರೂಣಿ ಬಹೂನಿ ವರ್ಪಾಂಸಿ । ರೂಪನಾಮೈತತ್ । ಆತ್ಮೀಯೈಃ ಕರ್ಮಭಿಃ ಕೃತಾನಿ ರೂಪಾಣಿ ದಧಾನಾ ಧಾರಯಂತೌ ಯುವಾಮಾಶುಂ ಶೀಘ್ರಗಾಮಿನಮಶ್ವಂ ಪೇದವೇ ಪೇದುನಾಮ್ನೇ ಸ್ತುವತೇ ನ್ಯೂಹಥುಃ । ನಿತರಾಂ ಪ್ರಾಪಿತವಂತೌ । ದತ್ತವಂತಾವಿತ್ಯರ್ಥಃ । ಕೀದೃಶಮಶ್ವಂ। ಸಹಸ್ರಸಾಂ । ಸಹಸ್ರಸಂಖ್ಯಾಕಸ್ಯ ಧನಸ್ಯ ಸನಿತಾರಂ ದಾತಾರಂ ವಾಜಿನಂ ಬಲವಂತಂ ಅತ ಏವಾಪ್ರತೀತಂ ಶತ್ರುಭಿರಪ್ರತಿಗತಂ ಅಹಿಹನಮಹೀನಾಮಾಗತ್ಯ ಹಂತ್ಯಾಣಾಂ ಶತ್ರೂಣಾಂ ಶತ್ರೂನ್ವಾ ಹಂತಾರಂ ಶ್ರವಸ್ಯಂ । ಶ್ರವಃ ಶ್ರವಣೀಯಂ ಸ್ತೋತ್ರಂ । ತತ್ರ ಭವಂ । ಸ್ತುತಿವಿಷಯಮಿತ್ಯರ್ಥಃ । ತರುತ್ರಂ ತರಿತಾರಂ ॥ ವರ್ಪಾಂಸಿ । ವೃಞ್ ವರಣೇ । ವೃಞ್ಶೀಙ್ಭ್ಯಾಂ ರೂಪಸ್ವಾಂಗಯೋಃ ಪುಕ್ಚ । ಉ-೪-೨೦೦ । ಇತ್ಯಸುನ್ ಪುಗಾಗಮಶ್ಚ । ದಧಾನಾ । ದಧಾತೇರ್ಲಟಃ ಶಾನಚ್ । ಅಭ್ಯಸ್ತಾನಾಮಾದಿರಿ-ತ್ಯಾದ್ಯುದಾತ್ತತ್ವಂ । ಸಹಸ್ರಸಾಂ । ಷಣು ದಾನೇ । ಜನಸನಖನೇತಿ ವಿಟ್ । ವಿಡ್ವನೋರನುನಾಸಿಕಸ್ಯಾದಿ-ತ್ಯಾತ್ವಂ । ಶ್ರವಸ್ಯಂ । ಶ್ರವಃ ಶಬ್ದಾದ್ಭವೇ ಛಂದಸೀತಿ ಯತ್ । ತಿತ್ಸ್ವರಿತಃ । ತರುತ್ರಂ । ತೄ ಪ್ಲವನತರ-ಣಯೋಃ । ಅಶಿತ್ರಾದಿಭ್ಯ ಇತ್ರೋತ್ರೌ । ಉ-೪-೧೭೨ । ಇತ್ಯುತ್ರಪ್ರತ್ಯಯಃ । ವ್ಯತ್ಯಯೇನಾದ್ಯುದಾ-ತ್ತತ್ವಂ । ಯದ್ವಾ । ಗ್ರಸಿತಸ್ಕಭಿತೇತ್ಯಾದೌ ನಿಪಾತನಾತ್ತೃನಂತಾತ್ತರುತೃಶಬ್ದಾದಮಿ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವೇ ಯಣ್ । ನಿತ್ಸ್ವರೇಣಾದ್ಯುದಾತ್ತತ್ವಂ ।

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಪುರು ವರ್ಪಾಂಸಿ—ಅನೇಕರೂಪಗಳನ್ನು । ದಧಾನಾ—ಧರಿಸುವವರಾಗಿ । ಆಶುಂ—ಶೀಘ್ರಗಾಮಿಯೂ । ಸಹಸ್ರಸಾಂ—ಸಹಸ್ರಸಂಖ್ಯಾಕವಾದ (ಧನವನ್ನು) ಕೊಡತಕ್ಕುದೂ । ವಾಜಿನಂ—ಬಲಿಷ್ಠವಾದುದೂ । ಅಪ್ರತೀತಂ—(ಶತ್ರುಗಳಿಂದ) ಎದುರಿಸಲಸಾಧ್ಯವಾದುದೂ । ಅಹಿಹನಂ—ಶತ್ರುನಾಶಕವಾದುದೂ । ಶ್ರವಸ್ಯಂ—(ಶ್ರವಣೀಯ) ಸ್ತುತ್ಯವಾದುದೂ । ತರುತ್ರಂ—(ತೊಂದರೆಗಳಿಂದ)

ಪಾರುಮಾಡುವುದೂ ಆದ । **ಅಶ್ವಂ**—ಅಶ್ವವನ್ನು । **ಪೇದವೇ**—ಪೇದು (ಎಂಬ ನಿಮ್ಮ ಆರಾಧಕನಿಗೆ) ವಿಗೆ । **ನಿ ಊಹಥುಃ**—ದೊರಕಿಸಿದಿರಿ (ಅನುಗ್ರಹಿಸಿದಿರಿ.)

॥ ಭಾವಾರ್ಥ ॥

ನಾನಾರೂಪಧಾರಿಗಳಾದ ಎಲೈ ಅಶ್ವಿನೀದೇವತೆಗಳೇ, (ನೀವು) ಪೇದುವಿಗೆ ಶೀಘ್ರಗಾಮಿಯಾದುದೂ ಸಹಸ್ರ ಸಂಖ್ಯಾಕ (ಧನವನ್ನು) ಕೊಡುವುದೂ, ಬಲಿಷ್ಠವಾಗಿ ಶತ್ರುಗಳಿಗೆ ಎದುರಿಸಲಸಾಧ್ಯವಾದುದೂ, ಸ್ತುತಿಯೋಗ್ಯವಾದದ್ದೂ, (ಕಷ್ಟಗಳಿಂದ) ಪಾರುಮಾಡುವುದೂ ಆದ ಒಂದು ಉತ್ತಮವಾದ ಅಶ್ವವನ್ನು ಅನುಗ್ರಹಿಸಿದಿರಿ.

## English Translation.

Aswins, who assume many forms, you gave to Pedu a swift horse, the bringer of a thousand (treasures), powerful, irresistible, the destroyer of foes, the object of praise, the bearer (over dangers)

॥ ವಿಶೇಷವಿಷಯಗಳು ॥

**ಪೇದವ ಊಹಥುರಾಶುಮಶ್ವಮ್—ಪೇದುನಾಮ್ನೇ ಸ್ತುವತೇ ಶೀಘ್ರಗಾಮಿನಂ ಅಶ್ವಂ ನಿತರಾಂ ಪ್ರಾಪಿತವಂತೌ ದತ್ತವಂತಾವಿತ್ಯರ್ಥಃ ।** ಪೇದು ಎಂದು ಪ್ರಸಿದ್ಧನಾದ ರಾಜನು ಬಹಳ ಭಕ್ತಿಯಿಂದ ಅಶ್ವಿನೀ ದೇವತೆಗಳನ್ನು ಸ್ತುತಿಮಾಡಿರುವಕಾರಣ ಅವನ ಸ್ತುತಿಗೆ ಮೆಚ್ಚಿ ಬಹಳ ಉತ್ತಮವಾದ ಮತ್ತು ವೇಗಶಾಲಿಯಾದ ಒಂದು ಕುದುರೆಯನ್ನು ಕೊಟ್ಟರು ಎಂದು ಇತಿಹಾಸವು ಇಲ್ಲಿ ವರ್ಣಿತವಾಗಿರುತ್ತದೆ.

**ವಪೂಂಸಿ—ಆತ್ಮೀಯೈಃ ಕರ್ಮಭಿಃ ಕೃತಾನಿ ರೂಪಾಣಿ । ವಪು** ಶಬ್ದವು ಹದಿನಾರು ರೂಪನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ರೂಪವೆಂದು ಅರ್ಥ. ಅಶ್ವಿನೀದೇವತೆಗಳು ತಮ್ಮ ಆಶ್ರಿತರ ಮತ್ತು ಇತರರ ವಿಷಯದಲ್ಲಿ ಅವರವರನ್ನು ರಕ್ಷಿಸುವುದಕ್ಕಾಗಿಯೂ, ಅವರ ಇಚ್ಛೆಗಳನ್ನು ನೆರವೇರಿಸುವುದಕ್ಕಾಗಿಯೂ ಬೇರೆ ಬೇರೆಯಾದ ರೂಪಗಳನ್ನು ಧರಿಸಿರುವರು. ಆದಕಾರಣ ಅವರ ಮಹಿಮೆಯು ಅನಿರ್ವಚನೀಯವಾಗಿರುವುದು ಎಂದು ಅಭಿಪ್ರಾಯವು.

**ಸಹಸ್ರಸಾಂ—ಸಹಸ್ರಸಂಖ್ಯಾಕಸ್ಯ ಧನಸ್ಯ ಸನಿತಾರಂ ದಾತಾರಂ ।** ಪೇದುರಾಜನಿಗೆ ಅಶ್ವಿನೀ ದೇವತೆಗಳು ಕೊಟ್ಟಿರುವ ಅಶ್ವವು ಸಾವಿರಸಂಖ್ಯೆಯುಳ್ಳ ಧನವನ್ನು ಕೊಡುತ್ತಿರುವುದು ಎಂದು ಅರ್ಥ.

**ಅಪ್ರತೀತಂ—ಶತ್ರುಭಿರಪ್ರತಿಗತಮ್** ಶತ್ರುಗಳಿಂದ ಎದುರಿಸಲು ಅಸಾಧ್ಯವಾದದ್ದು ಎಂದು ಕುದುರೆಯ ಸಾಮರ್ಥ್ಯವು ಈ ಪದದಿಂದ ವರ್ಣಿತವಾಗಿರುವುದು. ಮತ್ತು **ಅಹಿಹನಂ ಅಹೀನಾಂ ಆಗತ್ಯ ಹಂತ್ರ್ಣಾಂ ಶತ್ರೂಣಾಂ ಶತ್ರೂರ್ಣ ವಾ ಹಂತಾರಂ** ಈ ಅಶ್ವವು, ಶತ್ರುಗಳು ಮೇಲೆ ಬಿದ್ದು ಕೊಲ್ಲುವವರಾದರೂ ಅವರನ್ನು ಇದು ನಾಶಪಡಿಸುವುದೆಂದು ಅಶ್ವದ ಅದ್ಭುತವಾದಶಕ್ತಿಯನ್ನು ವಿವರಿಸಿದೆ.

**ಶ್ರವಸ್ಯಂ—ಶವಃ ಶ್ರವಣೀಯಂ ಸ್ತೋತ್ರಂ । ತತ್ರ ಭವಂ ।** ಶ್ರವಶ್ಶಬ್ದವು ಧನನಾಮಗಳಲ್ಲಿಯೂ (ನಿ. ೩-೯) **ಶ್ರವ ಇಚ್ಛಮಾನಃ** ಎಂಬಲ್ಲಿ (ನಿ. ೯-೧೧) ಪ್ರಶಂಸಾ ಎಂಬರ್ಥದಲ್ಲಿಯೂ. ಶ್ರವ ಇತ್ಯನ್ನನಾಮ (ನಿ. ೧೦-೩) ಎಂದು ಅನ್ನನಾಮಗಳಲ್ಲಿಯೂ ಉಕ್ತವಾಗಿರುವುದರಿಂದ ಅನೇಕಾರ್ಥಗಳುಳ್ಳದ್ದಾಗಿರುವುದು

ಸ್ಕಂದಸ್ವಾಮಿಗಳು—**ಪೇದುರ್ನಾಮ ರಾಜಾ ತಸ್ಮೈ ಪರಯಾ ಭಕ್ತ್ಯಾ ಪರಿತುಷ್ಟಾವಶ್ವಿನೌ ಮಹಾವೀರ್ಯಂ ಶ್ವೇತಮಶ್ವಂ ದದತುಃ ಇತಿ ತತ್ಪರಸ್ತಾದ್ವಕ್ಷ್ಯತಿ ।** ಪೇದು ಎಂಬ ರಾಜನ ಉತ್ತಮವಾದ ಭಕ್ತಿಗೆ ಮೆಚ್ಚಿ ಅಶ್ವಿನೀದೇವತೆಗಳು ಉತ್ತಮವಾದ ಮತ್ತು ಬಹಳ ಶಕ್ತಿಯುಳ್ಳ ಬಿಳಿಯ ಕುದುರೆಯನ್ನು ಕೊಟ್ಟರು ಎಂದು ಅರ್ಥವನ್ನು ಹೇಳಿ—

**ಯುವಂ ಶ್ವೇತಂ ಪೇದವ ಇಂದ್ರಜೂತಮಹಿಹನಮಶ್ವಿನಾ ದತ್ತಮಶ್ವಮ್ ।**
**ಜೋಹೂತ್ರಮರ್ಯೋ ಅಭಿಭೂತಿಮುಗ್ರಂ ಸಹಸ್ರಸಾಂ ವೃಷಣಂ ವೀಡ್ವಂಗಮ್ ॥**

(ಋ. ಸಂ. ೧-೧೧೮-೯)

ಎಂಬ ಈ ಋಕ್ಕನ್ನು ಉದಹರಿಸಿರುವರು. ಇದಲ್ಲದೆ ಇದೇ ಅಭಿಪ್ರಾಯವುಳ್ಳ ಬೇರೆಯ ಋಕ್ಕನ್ನು ಇವರು ಉದಾಹರಿಸಿರುತ್ತಾರೆ.

**ಯುವಂ ಶ್ವೇತಂ ಪೇದವೇಽಶ್ವಿನಾಶ್ವಂ ನವಭಿರ್ವಾಜೈರ್ನವತೀ ಚ ವಾಜಿನಂ ।**
**ಚರ್ಕೃತ್ಯಂ ದದಥುರ್ದ್ರಾವಯತ್ಸಖಂ ಭಗಂ ನ ನೃಭ್ಯೋ ಹವ್ಯಂ ಮಯೋಭುವಂ ॥**

(ಋ. ಸಂ. ೧೦-೩೯-೧೦)

ಮತ್ತು **ಅಹಿಹನಂ** ಎಂಬ ಪದಕ್ಕೆ **ಬಲಾವಲೇಪೇನ ಅನಷ್ಟುರಪಿ ಶತ್ರೋರ್ಹಂತಾರಂ ಅಹಿನಾಮ್ನೋ ವಾ ಅಸುರಸ್ಯ** ಶತ್ರುಗಳನ್ನು ನಿಗ್ರಹಿಸುವ ಅಥವಾ ಅಹಿ ಎಂಬ ರಾಕ್ಷಸನನ್ನೂ ಕೊಂದಿರುವ ಎಂದು ಅರ್ಥಮಾಡಿ— ಶ್ರವಃ ಎಂಬ ಶಬ್ದಕ್ಕೆ ಕೀರ್ತಿಮಂತಂ ಕೀರ್ತಿಯುಳ್ಳದ್ದು ಎಂದು ಅರ್ಥವನ್ನು ಹೇಳಿ—

**ಇಂದ್ರೋ ಅಶ್ರಾಯಿ ಸುಧ್ಯೋ ನಿರೇಕೇ ಪಜ್ರೇಷು ಸ್ತೋಮೋ ದುರ್ಯೋ ನ ಯೂಪಃ ।**
**ಅಶ್ವಯುರ್ಗವ್ಯೂ ರಥಯುರ್ವಸೂಯುರಿಂದ್ರ ಇದ್ರಾಯಃ ಕ್ಷಯತಿ ಪ್ರಯಂತಾ ॥**

(ಋ. ಸಂ. ೧-೫೧-೧೪)

ಎಂಬ ಈ ಋಕ್ಕನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪುರು**—**ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ **ಲೋಪ.**

**ವರ್ಪಾಂಸಿ**—ವೃಞ್ ವರಣೇ. ಧಾತು. **ವೃಞ್‌ಶೀಙ್‌ಭ್ಯಾಂರೂಪೆ ಸ್ವಾಂಗಯೋಃ ಪುಕ್‌ಚ** (ಉ. ಸೂ. ೪-೬೪೦) ಎಂಬುದರಿಂದ ಇದಕ್ಕೆ ಅಸುನ್ ಪ್ರತ್ಯಯ. ಅದರೊಡನೆ ಧಾತುವಿಗೆ ಪುಕಾಗಮ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ವರ್ಪಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿ-**

**ತ್ಯೈಮ್** (ಪಾ ಸೂ. ೬-೧-೧೬೭) ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ದಧಾನಾ**—ಡುಧಾಞ್ ಧಾರಣಪೋಷಣಯೋಃ ಧಾತು. ಲಡರ್ಥದಲ್ಲಿ ಅದಕ್ಕೆ ಶಾನಚ್ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ ಜಸ್ತ್ವ. **ಅಭ್ಯಾಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಊಹಥುಃ**—ವಹ ಪ್ರಾಪಣೇ. ಧಾತು. ಲಿಟ್‌ಮಧ್ಯಮಪುರುಷ ದ್ವಿವಚನದಲ್ಲಿ ಅಥುಸಾದೇಶ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ದ್ವಿತ್ವಾದಿ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಸಹಸ್ರಸಾಮ್**—ಷಣು ದಾನೇ. ಧಾತು. **ಧಾತ್ವಾದೇಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. **ಜನ ಸನ ಖನ**—(ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ವಿಟ್‌ಪರವಾದಾಗ ಧಾತುವಿಗೆ—ಆತ್ವ. ವಿಟಿನಲ್ಲಿ ಸರ್ವಲೋಪ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಪ್ರತೀತಮ್**—ಇಣ್‌ಗತೌ. ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ನ ಪ್ರತೀತಃ ಅಪ್ರತೀತಃ ತಮ್. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಶ್ರವಸ್ಯಮ್**—ಶ್ರು ಶ್ರವಣೇ. ಧಾತು. ಅಸುನ್‌ಪ್ರತ್ಯಯ. ಶ್ರವಃ ಎಂದು ರೂಪವಾಗುತ್ತದೆ. ಶ್ರವಸಿ ಭವಮ್. ಶ್ರವಸ್ಯಮ್. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಪ್ರತ್ಯಯ ತಿತ್ ಆದುದರಿಂದ **ತಿತ್‌ಸ್ವರಿತಮ್** (ಪಾ. ಸೂ. ೬-೧-೧೮೫.) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ತರುತ್ರಮ್**—ತ್ರೄ ಪ್ಲವನತರಣಯೋಃ ಧಾತು. **ಅಶಿತ್ರಾದಿಭ್ಯಃ ಇತ್ರೋತ್ರೌ**—(ಉ. ಸೂ. ೪-೬೧೨) ಎಂಬುದರಿಂದ ಇದಕ್ಕೆ ಉತ್ರ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ **ಗ್ರಸಿತಸ್ಕಭಿತ**—(ಪಾ. ಸೂ. ೭-೨-೩೪) ಎಂಬಲ್ಲಿ ನಿಪಾತಮಾಡಿರುವ ತೃನ್ನಂತವಾದ ತರುತೃಶಬ್ದಕ್ಕೆ ಅಮ್ ವಿಭಕ್ತಿ ಬಂದಾಗ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ಪರಿಭಾಷೆಯಿಂದ **ಋತೋಙಿ ಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ ಬಾರದಿರುವಾಗ ಯಣಾದೇಶ ಬಂದ ತರುತ್ರಮ್ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಏತಾನಿ ವಾಂ ಶ್ರವಸ್ಯಾ ಸುದಾನೂ ಬ್ರಹ್ಮಾಂಗೂಷಂ ಸದನಂ
ರೋದಸ್ಯೋಃ ।
ಯದ್ವಾಂ ಪಜ್ರಾಸೋ ಅಶ್ವಿನಾ ಹವಂತೇ ಯಾತಮಿಷಾ ಚ
ವಿದುಷೇ ಚ ವಾಜಂ ॥ ೧೦ ॥

॥ ಪದಪಾಠಃ ॥

ಏತಾನಿ । ವಾಂ । ಶ್ರವಸ್ಯಾ । ಸುದಾನೂ ಇತಿ ಸುಽದಾನೂ । ಬ್ರಹ್ಮ । ಆಂಗೂಷಂ ।
ಸದನಂ । ರೋದಸ್ಯೋಃ ।
ಯತ್ । ವಾಂ । ಪಜ್ರಾಸಃ । ಅಶ್ವಿನಾ । ಹವಂತೇ । ಯಾತಂ । ಇಷಾ । ಚ ।
ವಿದುಷೇ । ಚ । ವಾಜಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಸುದಾನೂ ಶೋಭನದಾನಾವಶ್ವಿನೌ ವಾಂ ಯುವಯೋಃ ಸಂಬಂಧೀನ್ಯೇತಾನಿ ಸಮನಂತರೋಕ್ತಾನಿ ವೀರ್ಯಾಣಿ ಶ್ರವಸ್ಯಾ ಶ್ರವಣೀಯಾನಿ ಸರ್ವೈರ್ಜ್ಞಾತವ್ಯಾನಿ ಭವಂತಿ । ತದರ್ಥಂ ರೋದಸ್ಯೋರ್ದ್ಯಾವಾಪೃಥಿವ್ಯಾತ್ಮನಾ ವರ್ತಮಾನಯೋರ್ಯುವಯೋಃ । ಉಕ್ತಂ ಚ ಯಾಸ್ಕೇನ । ತತ್ಕಾವಶ್ವಿನೌ ದ್ಯಾವಾಪೃಥಿವ್ಯಾವಿತ್ಯೇಕೇ । ನಿ ೧೨-೧ । ಇತಿ । ತಥಾ ಚ ತೈತ್ತಿರೀಯಕಂ । ಇಮೇ ಅಶ್ವಿನಾ ಸಂವತ್ಸರೋಽಗ್ನಿರ್ವೈಶ್ವಾನರ ಇತಿ । ತಯೋರ್ಯುವಯೋಃ ಸದನಂ ಸ್ತೋತೃಸಮೀಪೇ ನಿವೇಶನಂ ಪ್ರಸಾದನಹೇತುಭೂತಂ ವಾಂಗೂಷಮಾಘೋಷಣೀಯಂ ಬ್ರಹ್ಮ ಮಂತ್ರರೂಪಂ ಸ್ತೋತ್ರಂ ನಿಷ್ಪನ್ನಮಿತಿ ಶೇಷಃ । ಯದ್ಯದಾ ಪಜ್ರಾಸೋಽಂಗಿರಸಾಂ ಗೋತ್ರೋತ್ಪನ್ನಾ ಯಜಮಾನಾ ಹೇ ಅಶ್ವಿನೌ ವಾಂ ಯುವಾಂ ಹವಂತೇ ಸ್ತುತಿಭಿರಾತ್ಮರಕ್ಷಣಾರ್ಥಮಾಹ್ವಯಂತಿ ತದಾನೀಮಿಷಾ ದಾತವ್ಯೇನಾನ್ನೇನ

ಸಹಾ ಯಾತಂ । ಆಗಚ್ಛತಂ ಚ । ವಿದುಷೇ ಯುಷ್ಮದ್ವಿಷಯಂ ಸ್ತೋತ್ರಂ ಜಾನತೇ ಮಹ್ಯಂ ಚ ವಾಜಮನ್ನಂ ಬಲಂ ವಾ ಪ್ರಯಚ್ಛತಮಿತಿ ಶೇಷಃ ॥ ಯಾತಂ । ಚವಾಯೋಗೇ ಪ್ರಥಮೇತಿ ನಿಘಾತಪ್ರತಿಷೇಧಃ । ವಿದುಷೇ । ವಿದ ಜ್ಞಾನೇ । ವಿದೇಃ ಶತುರ್ವಸುಃ । ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥

॥ ಪ್ರತಿಪದಾರ್ಥ ॥

**ಸುದಾನೂ**—ಅಭೀಷ್ಟಗಳನ್ನು ಕೊಡುವ ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ಏತಾನಿ**—(ಉಕ್ತವಾದ) ಈ ಕರ್ಮಗಳು । **ಶ್ರವಸ್ಯಾ**—ಸ್ತುತ್ಯವಾದುವು (ಶ್ರವಣೀಯವಾದುವು) । **ರೋದಸ್ಯೋಃ**-(ಭೂಮ್ಯಾಕಾಶಗಳಲ್ಲಿರುವ) ಭೂಮ್ಯಾಕಾಶರೂಪವಾಗಿರುವ । **ಸದನಂ**—(ಪ್ರಸಾದವನ್ನು ಸಾಧಿಸಲು) ಹೇತುಭೂತವೂ । **ಆಂಗೂಷಂ**—ಘೋಷಿಸಲ್ಪಡಬೇಕಾದುದೂ ಆದ । **ಬ್ರಹ್ಮ**—ಮಂತ್ರರೂಪವಾದ ಸ್ತೋತ್ರವು (ಸಿದ್ಧವಾಗಿದೆ) । **ಯತ್**—ಯಾವಾಗ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪಜ್ರಾಸಃ**—(ಅಂಗಿರಸ ಪಜ್ರಕುಲೋತ್ಪನ್ನರಾದ (ಯಜಮಾನರು) । **ವಾಂ**—ನಿಮ್ಮಿಬ್ಬರನ್ನು । **ಹವಂತೇ**—(ಸ್ತುತಿಗಳಿಂದ ಆತ್ಮರಕ್ಷಣಾರ್ಥವಾಗಿ) ಆಹ್ವಾನಿಸುತ್ತಾರೋ (ಆಗ) । **ಇಷಾ**—ಅನ್ನದೊಡನೆ । **ಯಾತಂ**—ಬನ್ನಿ । **ಚ**—ಮತ್ತು । **ವಿದುಷೇ ಚ**—(ನಿಮ್ಮ ಸಂಬಂಧವಾದ ಸ್ತುತಿಯನ್ನು) ತಿಳಿದಿರುವವನಿಗೂ (ನನಗೂ) । **ವಾಜಂ**—ಬಲವನ್ನು (ಅನ್ನವನ್ನು ಕೊಡಿ).

॥ ಭಾವಾರ್ಥ ॥

ಒಳ್ಳೆಯ ದಾನಮಾಡುವ ಎಲೈ ಅಶ್ವಿನೀದೇವತೆಗಳೇ, ನಿಮ್ಮ (ಈ ವರೆಗೆ ಉಕ್ತವಾದ) ಕರ್ಮಗಳು ಶಂಸನೀಯವಾದುವು; ಭೂಮ್ಯಾಕಾಶಗಳಲ್ಲಿರುವ ನಿಮ್ಮ ಪ್ರಸಾದಸಂಪಾದಕವಾದ, ಘೋಷಿಸಲ್ಪಡಬೇಕಾದ ಮಂತ್ರವು (ನಿಮಗೆ ತೃಪ್ತಿಕರವು) ; ಪಜ್ರಕುಲೋತ್ಪನ್ನರಾದ ಯಜಮಾನರು (ನಿಮ್ಮನ್ನು) ಸ್ತುತಿಗಳಿಂದ ಕರೆದಾಗ ಅನ್ನಾದಿಗಳೊಡನೆ ಬನ್ನಿ ; (ನಿಮ್ಮ ಸ್ತುತಿಗಳನ್ನು) ತಿಳಿದಿರುವ ನನಗೂ ಬಲ ಅಥವಾ ಅನ್ನವನ್ನು ಕೊಡಿ

English Translation.

Liberal givers, these your exploits are to be celebrated, and the resounding prayer propitiates you will abiding in heaven and earth; when the descendants of Pajra invite you, Aswins, come with food, and grant strength to the sage (who worships you),

॥ ವಿಶೇಷವಿಷಯಗಳು ॥

**ಸುದಾನೂ—ಶೋಭನದಾನೌ ಅಶ್ವಿನೌ ।** ಅಶ್ವಿನೀದೇವತೆಗಳು ಯಾವಾಗಲೂ ಒಳ್ಳೆಯದನ್ನು ಉಂಟುಮಾಡುವ ಸ್ವಭಾವವುಳ್ಳವರು. ನಿರುಕ್ತಕಾರರೂ ಕೂಡ **ಸುದಾನವಃ ಕಲ್ಯಾಣದಾನಾಃ** (ನಿ. ೬-೨೪) ಮಂಗಳವನ್ನು ಉಂಟುಮಾಡುವವರು ಎಂದು ಅರ್ಥಮಾಡಿರುವರು.

**ಶ್ರವಸ್ಯಾ—ಶ್ರವಣೀಯಾನಿ ಸರ್ವೈರ್ಜ್ಞಾತವ್ಯಾನಿ ಭವಂತಿ ।** ಅಶ್ವಿನೀದೇವತೆಗಳ ಪ್ರಶಂಸಾರ್ಹವಾದ ಕಾರ್ಯಗಳು ಸ್ತುತಿಗಳೂ ಕೂಡ ಎಲ್ಲರೂ ಕೇಳಿ ತಿಳಿಯಲ್ಪಡುವವುಗಳಾಗಿ ಇರುತ್ತವೆ ಎಂದು ಅರ್ಥ.

**ರೋದಸ್ಯೋಃ— ದ್ಯಾವಾಪೃಥಿವ್ಯಾತ್ಮನಾ ವರ್ತಮಾನಯೋಃ ।** ರೋದಸೀ ಎಂಬ ಪದವು ಇಪ್ಪತ್ತು ನಾಲ್ಕು ದ್ಯಾವಾಪೃಥಿವೀನಾಮಗಳಲ್ಲಿ (ನಿ. ೩-೩೦) ಪಠಿತವಾಗಿರುವುದರಿಂದ ದ್ಯಾವಾಪೃಥಿವಿಗಳೆಂದು ಅರ್ಥ. ನಿರುಕ್ತ ಕಾರರು ಅಶ್ವಿನೀ ಶಬ್ದದ ಅರ್ಥವನ್ನು ವಿಮರ್ಶೆಮಾಡುವಾಗ ತತ್ಕಾವಶ್ವಿನೌ (ನಿ. ೧೨-೧) ಎಂದು ಪ್ರಾರಂಭಮಾಡಿ **ದ್ಯಾವಾಪೃಥಿವ್ಯಾವಿತ್ಯೇಕೇ** ಎಂದು ಹೇಳಿ ಅಶ್ವಿನೀದೇವತೆಗಳು ದ್ಯಾವಾಪೃಥಿವೀ (ಭೂಮ್ಯಂತರಿಕ್ಷ) ರೂಪದಿಂದ ಇರುವರು ಎಂದು ಅರ್ಥಮಾಡಿರುವರು. ಮತ್ತು **ಅಹೋರಾತ್ರಾವಿತ್ಯೇಕೇ । ಸೂರ್ಯಾ ಚಂದ್ರಮಸಾವಿತ್ಯೇಕೇ** ಎಂದು (ನಿ. ೧೨-೧) ಅಶ್ವಿನೀದೇವತೆಗಳ ಸ್ವರೂಪವನ್ನು ವಿವರಿಸಿ ಅಶ್ವಿನೀದೇವತೆಗಳು ಭೂಮ್ಯಂತರಿಕ್ಷರೂಪ, ಅಹೋ ರಾತ್ರಿಗಳ ರೂಪ, ಸೂರ್ಯ ಮತ್ತು ಚಂದ್ರ ಇವರ ರೂಪ ಇವುಗಳಿಂದಲೂ ಇರುವರೆಂದು ಅವರಿಗೆ ಸರ್ವಾತ್ಮಭಾವ ವನ್ನು ಪ್ರತಿಪಾದಿಸಿರುವರು. **ಇಮೌ ಅಶ್ವಿನಾ ಸಂವತ್ಸರೋ ಅಗ್ನಿರ್ವೈಶ್ವಾನರಃ** (ತೈ. ಸಂ. ೫-೬-೪-೧) ಎಂದು ತೈತ್ತಿರೀಯ ಸಂಹಿತೆಯಲ್ಲಿಯೂ ಅಶ್ವಿನೀದೇವತೆಗಳಿಗೆ ವೈಶ್ವಾನರಾಗ್ನಿರೂಪದಿಂದ ಇರುವಿಕೆಯೂ ಸಹ ಉಕ್ತ ವಾಗಿರುತ್ತದೆ.

**ಪಜ್ರಾಸಃ— ಅಂಗಿರಸಾಂ ಗೋತ್ರೋತ್ಪನ್ನಾಃ ।** ಪಜ್ರಶಬ್ದಕ್ಕೆ ಸ್ಕಂದಸ್ವಾಮಿಗಳೂ, ಸಾಯಣರೂ ಕೂಡ ಅಂಗಿರಾಋಷಿಗಳ ವಂಶವೆಂದು ಅರ್ಥಮಾಡಿ—

**ತದ್ವಾಂ ನರಾ ಶಂಸ್ಯಂ ಪಜ್ರಿಯೇಣ ಕಕ್ಷೀವತಾ ನಾಸತ್ಯಾ ಪರಿಜ್ಮನ್ ।**
**ಶಫಾದಶ್ವಸ್ಯ ವಾಜಿನೋ ಜನಾಯ ಶತಂ ಕುಂಭಾಁ ಅಸಿಂಚತಂ ಮಧೂನಾಂ ॥**

(ಋ. ಸಂ. ೧-೧೧೭-೬)

ಎಂಬ ಋಕ್ಕಿನಲ್ಲಿ **ಪಜ್ರಿಯೇಣ ಅಂಗೀರಸಾಂ ಕುಲೇ ಜಾತೇನ** ಎಂದು ಅರ್ಥಮಾಡಿರುವ ಕಾರಣ ಇಲ್ಲಿ **ಪಜ್ರಾಸಃ** ಎಂದರೆ ಅಂಗಿರಾಋಷಿಯ ವಂಶವೆಂದು ಅರ್ಥಮಾಡಿ ಯಜ್ಞಮಾಡುವ ಯಜಮಾನರು ಅಂಗಿರಾಋಷಿಗಳ ವಂಶದಲ್ಲಿ ಉತ್ಪನ್ನರಾದವರು ಎಂದು ವಿವರಿಸಿದರು.

**ಸದನಂ— ಸ್ತೋತೃಸಮೀಪೇ ನಿವೇಶನಂ ಪ್ರಸಾದನಹೇತುಭೂತಂ ವಾ ।** ಸದನ ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುತ್ತದೆಯಾದಕಾರಣ ಉದಕವೆಂಬ ಅರ್ಥದಲ್ಲಿ ಜೇರಿ ಕಡೆಯಲ್ಲಿ ಪ್ರಯುಕ್ತವಾಗಿದೆ.

**ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ ।**
**ತ ಆವವೃತ್ರನ್ತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ॥**

(ಋ. ಸಂ. ೧-೧೬೪-೪೭)

ಇಲ್ಲಿ ಸದನಶಬ್ದವು **ಸಹಸ್ಥಾನ** ಎಂಬ ಅರ್ಥದಲ್ಲಿ ಉಕ್ತವಾಗಿರುತ್ತದೆ. ಇದರಂತೆ ಈ ಋಕ್ಕಿನಲ್ಲಿ ಸಾಯಣರು ಸದನ ಶಬ್ದಕ್ಕೆ ಸ್ತುತಿಮಾಡುವವರ ಸಮೀಪದಲ್ಲಿ ಇರುವಿಕೆ ಎಂದು ಅರ್ಥವನ್ನು ಹೇಳಿರುತ್ತಾರೆ.

**ಆಂಗೂಷಂ—ಆಘೋಷಣೀಯಂ ।** ಗುಣ ಅಥವಾ ಕೀರ್ತಿ ಇವುಗಳನ್ನು ಪ್ರಕಟಮಾಡುವ ಸ್ತುತಿ. ಇದನ್ನು ಯಜ್ಞದಲ್ಲಿ ಶಸ್ತ್ರವೆಂಬ ಶಬ್ದದಿಂದ ಕರೆಯುತ್ತಾರೆ. ನಿರುಕ್ತಕಾರರು **ಆಂಗೂಷಃ—ಸ್ತೋಮಃ ಆಘೋಷಃ** ಎಂದು ಆಂಗೂಷ ಶಬ್ದದ ಅರ್ಥವನ್ನು ಘಟ್ಟಿಯಾಗಿ ಪಠನಮಾಡುವ ಸ್ತೋತ್ರವೆಂದು (ನಿ. ೫-೧೨) ವಿವರಿಸಿ,

**ಏನಾಂಗೂಷೇಣ ವಯಮಿಂದ್ರವಂತೋಽಭಿ ಷ್ಯಾಮ ವೃಜನೇ ಸರ್ವವೀರಾಃ ।**
**ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥**
(ಋ. ಸಂ. ೧-೧೦೫-೧೯)

ಎಂಬ ಈ ಋಕ್ಕನ್ನು ಉದಹರಿಸಿರುವರು.

**ಬ್ರಹ್ಮ—ಮಂತ್ರರೂಪಂ ಸ್ತೋತ್ರಂ ।** ಬ್ರಹ್ಮಶಬ್ದವು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಧನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದಾದರೂ ಇಲ್ಲಿ ಸ್ತೋತ್ರ ಎಂಬ ಅರ್ಥದಲ್ಲಿ ಉಕ್ತವಾಗಿದೆ.

ಈ ಋಕ್ಕಿನಲ್ಲಿ ಅಂಗಿರಾಋಷಿಗಳ ವಂಶದಲ್ಲಿ ಉತ್ಪನ್ನರಾದ ಸ್ತೋತ್ರಮಾಡುವವರ ಅಥವಾ ಯಜ್ಞಮಾಡುವವರ ವಿಷಯದಲ್ಲಿ (ಕಲ್ಯಾಣ) ಮಂಗಳವನ್ನು ಅಶ್ವಿನೀದೇವತೆಗಳು ಅನುಗ್ರಹಿಸುವ ಸ್ವಭಾವವುಳ್ಳವರೆಂದು ಹೇಳಿ ಈ ಅಶ್ವಿನೀದೇವತೆಗಳು ಭೂಮಿ, ಅಂತರಿಕ್ಷ, ಅಹೋರಾತ್ರ, ಚಂದ್ರಸೂರ್ಯರು ಎಂಬ ರೂಪದಿಂದ ಇರುವ ಕಾರಣ ಸರ್ವಾತ್ಮಭಾವವನ್ನು ಹೊಂದಿ ಇರುವರು ಎಂದೂ, ಈ ವಿಧವಾದ ಮಹಿಮೆಯನ್ನುಳ್ಳ ಈ ಅಶ್ವಿನೀದೇವತೆಗಳ ಪ್ರಭಾವವು ಸ್ತುತ್ಯವಾಗಿರುವುದರಿಂದ ಎಲ್ಲರೂ ಇವರ ಪ್ರಭಾವ, ಕೀರ್ತಿ, ಇವುಗಳನ್ನು ತಿಳಿದು ಇವರನ್ನು ಸ್ತುತಿಮಾಡಬೇಕೆಂದೂ ವರ್ಣಿಸಿದೆ. ಮತ್ತು ಈ ಅಶ್ವಿನೀದೇವತೆಗಳ ವಿಷಯವನ್ನು ತಿಳಿದು ಇವರನ್ನು ಸ್ತುತಿಮಾಡುವವರಿಗೂ ಅಥವಾ ಇವರನ್ನು ಕುರಿತು ಯಜ್ಞಾದಿಗಳನ್ನು ಮಾಡಿ ಹವಿಸ್ಸನ್ನು ಅರ್ಪಿಸಿ ಸಂತೋಷಪಡಿಸುವವರಿಗೂ ಅನ್ನ, ಬಲ, ಧನ, ಇವುಗಳನ್ನು ಅಶ್ವಿನೀದೇವತೆಗಳು ಅನುಗ್ರಹಿಸಲಿ ಎಂದು ಪ್ರಾರ್ಥಿಸಿದೆ.

**ವಾಜಂ—ಬಲಂ ಅನ್ನಂ ವಾ ।** ವಾಜಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯) ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿ ಅನೇಕಾರ್ಥಕವಾಗಿರುವುದು. ಇಲ್ಲಿ ಬಲ, ಅಥವಾ ಅನ್ನ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಶ್ರವಸ್ಯಾ—**ಶ್ರವಸಿ ಭವಾನಿ ಶ್ರವಸ್ಯಾನಿ. **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಸದನಮ್—**ಷದ್ಲೃ ವಿಶರಣಗತ್ಯವಸಾದನೇಷು ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಪಜ್ರಾಸಃ**—ಪಜ್ರಾ+ಜಸ್ ಎಂದಿರುವಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸ್ಸಿಗೆ ಅಸುಕಾಗಮ. ಅಂತ್ಯಸಕಾರಕ್ಕೆ ರುತ್ವವಿಸರ್ಗ.

**ಹವಂತೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ ಅಂತಾದೇಶ. ಶಪ್‌ವಿಕರಣ **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪಬಂದಾಗ ಅದಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಅವಾದೇಶ. **ಅತೋ ಗುಣೇ** ಸೂತ್ರದಿಂದ ಪರರೂಪ. ಯತ್ ಎಂಬುದು ಹಿಂದೆ ಇರುವುದರಿಂದ **ನಿಪಾತೈರ್ಯದ್ಯದಿ**—(ಪಾ ಸೂ ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಲಸಾರ್ವಧಾತುಕವು ಅದುಪದೇಶದ ಪರದಲ್ಲಿ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಧಾತುಸ್ವರ ಉಳಿಯುತ್ತದೆ.

**ಯಾತಮ್**—ಯಾ ಪ್ರಾಪಣೇ ಧಾತು. ಅದಾದಿ. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ **ಚವಾಯೋಗೇ ಪ್ರಥಮಾ** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯದ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಇಷಾ**—ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿದುಷೇ**—ವಿದ ಜ್ಞಾನೇ ಧಾತು ಲಡರ್ಥದಲ್ಲಿ ಶತೃಪ್ರತ್ಯಯ ಬಂದಾಗ **ವಿದೇಃ ಶತುರ್ವಸುಃ** (ಪಾ. ಸೂ. ೭-೧-೩೬) ಎಂಬುದರಿಂದ ಅದಕ್ಕೆ ವಸುರಾದೇಶ. ವಿದ್ವಸ್ ಶಬ್ದವಾಗುತ್ತದೆ ಚತುರ್ಥೀಏಕವಚನ ಪರವಾದಾಗ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

ಸೂನೋರ್ಮಾನೇನಾಶ್ವಿನಾ ಗೃಣಾನಾ ವಾಜಂ ವಿಪ್ರಾಯ ಭುರಣಾ ರದಂತಾ ।
ಅಗಸ್ತ್ಯೇ ಬ್ರಹ್ಮಣಾ ವಾವೃಧಾನಾ ಸಂ ವಿಶ್ಪಲಾಂ ನಾಸತ್ಯಾರಿಣೀತಂ ॥ ೧೧ ॥

॥ ಪದಪಾಠಃ ॥

ಸೂನೋಃ । ಮಾನೇನ । ಅಶ್ವಿನಾ । ಗೃಣಾನಾ । ವಾಜಂ । ವಿಪ್ರಾಯ । ಭುರಣಾ । ರದಂತಾ ।

ಅಗಸ್ತ್ಯೇ । ಬ್ರಹ್ಮಣಾ । ವವೃಧಾನಾ । ಸಂ । ವಿಶ್ಪಲಾಂ । ನಾಸತ್ಯಾ । ಅರಿಣೀತಂ ॥ ೧೧ ॥

॥ ಸಾಯಣಭಾಷ್ಯಂ ॥

ಭುರಣಾ ಭರ್ತಾರೌ ಪೋಷಕೌ ನಾಸತ್ಯಾ ಸತ್ಯಸ್ವಭಾವೌ ಹೇ ಅಶ್ವಿನೌ ಸೂನೋಃ ಕುಂಭಾತ್ಪ್ರಸೂತಸ್ಯಾಗಸ್ತ್ಯಸ್ಯ ಖೇಲಪುರೋಹಿತಸ್ಯ ಸಂಬಂಧಿನಾ ಮಾನೇನ ಸ್ತುತ್ಯಸ್ಯ ಪರಿಚ್ಛೇದಕೇನ ಸ್ತೋತ್ರೇಣ ಗೃಣಾನಾ ಸ್ತೂಯಮಾನೌ ವಿಪ್ರಾಯ ಮೇಧಾವಿನೇ ಭರದ್ವಾಜಾಯರ್ಷಯೇ ವಾಜಮನ್ನಂ ರದಂತಾ ವಿಲಿಖಂತೌ ನಿಷ್ಪಾದಯಂತೌ ಯುವಾಂ ವಿಶ್ಪಲಾಂ ಸಂಗ್ರಾಮೇ ಛಿನ್ನಜಂಘಾಂ ಖೇಲಸ್ಯ ಸಂಬಂಧಿನೀಂ ಸ್ತ್ರಿಯಂ ಸಮರಿಣೀತಂ । ಪುನರಾಯಸ್ಯಾ ಜಂಘಯಾ ಸಮಯೋಜಯತಂ । ತೃತೀಯೇನ ಪಾದೇನ ಪ್ರಥಮಪಾದೋಕ್ತೋಽರ್ಥೋ ವಿವ್ರಿಯತೇ । ಅಗಸ್ತ್ಯೇ ಋಷೌ ಬ್ರಹ್ಮಣಾ ಮಂತ್ರರೂಪೇಣ ಸ್ತೋತ್ರೇಣ ವವೃಧಾನಾ ಪ್ರವರ್ಧಿತಾವಿತಿ ॥ ಗೃಣಾನಾ । ಗೄ ಶಬ್ದೇ । ವ್ಯತ್ಯಯೇನ ಕರ್ಮಣಿ ಕರ್ತೃ ಪ್ರತ್ಯಯಃ । ಪ್ವಾದೀನಾಂ ಹ್ರಸ್ವಃ । ಭುರಣಾ । ಭುರಣ ಧಾರಣಪೋಷಣಯೋಃ । ಕಂಡ್ವಾದಿಃ । ಪಚಾದ್ಯಚ್ । ಅತೋಲೋಪಯಲೋಪೌ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಆಮಂತ್ರಿತನಿಘಾತಃ । ವಿಪ್ರಾಯೇತ್ಯಸ್ಯ ರದಂತೇತ್ಯನೇನಾಸಾಮರ್ಥ್ಯಾನ್ನ ಪರಾಂಗವತ್ತ್ವಂ । ವಾವೃಧಾನಾ । ವೃಧೇರ್ಲಿಟಃ ಕಾನಚ್ । ಸಂಹಿತಾಯಾಂ ಛಾಂದಸಮಭ್ಯಾಸಸ್ಯ ದೀರ್ಘತ್ವಂ । ತುಜಾದಿತ್ವೇ ಹಿ ತೂತುಜಾನ ಇತಿವತ್ ಪದಕಾಲೇಽಪಿ ಸ್ಯಾತ್ । ಅರಿಣೀತಂ । ರೀ ಗತಿರೇಷಣಯೋಃ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವಃ ॥

॥ ಪ್ರತಿಪದಾರ್ಥ ॥

ಭುರಣಾ—ಪೋಷಕರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಸೂನೋಃ—ಕುಂಭದಿಂದ (ಉತ್ಪನ್ನನಾದ ಮತ್ತು ಖೇಲ ಎಂಬುವನ ಪುರೋಹಿತನಾದ ಅಗಸ್ತ್ಯನ) । ಮಾನೇನ—ಸ್ತುತಿಯಿಂದ । ಗೃಣಾನಾ—ಸ್ತುತರಾಗಿ । ವಿಪ್ರಾಯ—ಜ್ಞಾನಿಯಾದ (ಭರದ್ವಾಜಋಷಿಗೆ) । ವಾಜಂ—ಅನ್ನವನ್ನು । ರದಂತಾ—ದಾನಮಾಡಿದ (ನೀವು) । ಅಗಸ್ತ್ಯೇ—ಅಗಸ್ತ್ಯನ । ಬ್ರಹ್ಮಣಾ—ಮಂತ್ರರೂಪವಾದ ಸ್ತುತಿಯಿಂದ । ವವೃಧಾನಾ—ಪ್ರವರ್ಧಿತರಾಗಿ । ವಿಶ್ಪಲಾಂ—ಯುದ್ಧದಲ್ಲಿ ಕಾಲುಕಳೆದುಕೊಂಡಿದ್ದ ಖೇಲಸಂಬಂಧಿಯಾದ ವಿಶ್ಪಲೆ ಎಂಬುವಳನ್ನು । ಸಂ ಅರಿಣೀತಂ—ಕಬ್ಬಿಣದ ಕಾಲಿನಿಂದ ಯುಕ್ತಳನ್ನಾಗಿ ಮಾಡಿದಿರಿ.

॥ ಭಾವಾರ್ಥ ॥

ಮನುಷ್ಯರ ಪೋಷಕರಾದ ಎಲೈ ನಾಸತ್ಯರೇ, ಕುಂಭಜಾತನಾದ ಅಗಸ್ತ್ಯನ ಸ್ತುತಿಯಿಂದ ತೃಪ್ತರಾಗಿ ಜ್ಞಾನಿಯಾದಭರದ್ವಾಜಋಷಿಗೆ (ಬಲಿದಾಯಕವಾದ) ಅನ್ನವನ್ನು ಅನುಗ್ರಹಿಸಿದಿರಿ; (ಅದೇ) ಅಗಸ್ತ್ಯನ ಮಂತ್ರ ರೂಪವಾದ ಸ್ತುತಿಯಿಂದ ಪ್ರವರ್ಧಿತರಾದ ನೀವು (ವಿಕಲಳಾಗಿದ್ದ ಮತ್ತು ಖೇಲನ ಸಂಬಂಧಿಯಾದ ವಿಶ್ಪಲೆಗೆ ಕಾಲುಗಳನ್ನು ಕೊಟ್ಟಿರಿ.

## English Translation.

Aswins, glorified by the praises of the son (of the jar), and giving food, nourishers (of men), to the sage (Bharadwaja), exalted by Agastya with prayer, you restored Nasatyas, Vispala.

॥ ವಿಶೇಷವಿಷಯಗಳು ॥

**ಸೂನೋಃ—ಕುಂಭಾತ್ ಪ್ರಸೂತಸ್ಯ ಅಗಸ್ತ್ಯಸ್ಯ ಖೇಲಪುರೋಹಿತಸ್ಯ ।** ಖೇಲನೆಂಬ ಒಬ್ಬ ರಾಜನು ಅಗಸ್ತ್ಯಋಷಿಯನ್ನು ಪುರೋಹಿತನನ್ನಾಗಿ ಮಾಡಿಕೊಂಡು ಇದ್ದನು. ಇವನು ಯುದ್ಧಕ್ಕಾಗಿ ಹೋಗಿ ಶತ್ರುಗಳ ಸಂಗಡ ಯುದ್ಧಮಾಡುವಾಗ ಇವನ ಸ್ತ್ರೀಯು ವಿಶ್ಪಲಾ ಎಂಬುವಳು ಕಾಲನ್ನು ಮುರಿದುಕೊಂಡ ಕಾರಣ ಅಗಸ್ತ್ಯಋಷಿಯು ಅಶ್ವಿನೀದೇವತೆಗಳನ್ನು ಪ್ರಾರ್ಥನೆಮಾಡಿದನು. ಈ ಋಷಿಯ ಪ್ರಾರ್ಥನೆಯಂತೆ ಅಶ್ವಿನೀದೇವತೆಗಳು ಬಂದು ಆ ಸ್ತ್ರೀಯ ಜಂಘಾಪ್ರದೇಶಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡಿ ರಕ್ಷಿಸಿದರೆಂಬ ಇತಿಹಾಸವು ಈ ಋಕ್ಕಿನಿಂದ ಉಕ್ತವಾಗಿರುತ್ತದೆ. ಅಗಸ್ತ್ಯಋಷಿಯು ಗಡಿಗೆಯಿಂದ ಉತ್ಪನ್ನನಾದಕಾರಣ ಇಲ್ಲಿ ಸೂನು ಎಂಬ ಪದದಿಂದ ಈ ವಿಷಯವು ಉಕ್ತವಾಗಿದೆ. ಸ್ಕಂದಸ್ವಾಮಿಗಳು—

**ಸೂನುರಿತ್ಯಪತ್ಯನಾಮ । ಮೀಯತೇ ಅನೇನೇತಿ ಮಾನಃ ಕುಂಭಃ । ಷಷ್ಠೀ ತೃತೀಯೇ ಚ ವ್ಯತ್ಯಾಸೇನ ಯೋಜಯಿತವ್ಯೇ । ಸೂನುನಾಸ್ಯಾಪತ್ಯಭೂತೇನ ಕುಂಭಸ್ಯ ಅಗಸ್ತ್ಯೇ ಹಿ ಉರ್ವಶೀದರ್ಶನಾತ್ ಮಿತ್ರಾವರುಣಯೋಃ ಸ್ಕನ್ನಾದ್ರೇತಸಃ ಕುಂಭೇ ಜಾತಃ । ಏವಂ ಹಿ ಆಖ್ಯಾನವಿದ ಆಹುಃ—**

**ಬಹುಧಾ ಪತಿತಂ ರೇತಃ ಕಲಶೇಽಥ ಜಲೇ ಸ್ಥಲೇ ।**
**ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತೋ ಋಷಿಸತ್ತಮಃ ।**
**ಕುಂಭೇ ತ್ವಗಸ್ತ್ಯಸ್ಸಂಭೂತೋ ಜಲೇ ಮತ್ಸ್ಯೋ ಮಹಾದ್ಯುತಿಃ ॥ ಇತಿ ।**
**ವಸಿಷ್ಠೋಽಪಿ ತತ್ಪುತ್ರೋ ವಾ ವಕ್ಷ್ಯತಿ ॥**

**ಸತ್ರೇ ಹ ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃ ಸಮಾನಂ ।**
**ತತೋ ಹ ಮಾನ ಉದಿಯಾಯ ಮಧ್ಯಾತ್ತತೋ ಜಾತಮೃಷಿಮಾಹುರ್ವಸಿಷ್ಠಂ ॥**

(ಋ. ಸಂ. ೭-೩೩-೧೩)

ಸೂನು ಎಂಬ ಪದವು ಅಪತ್ಯನಾಮಗಳಲ್ಲಿ (ನಿ. ೩-೨) ಉಕ್ತವಾಗಿರುವುದರಿಂದ ಪುತ್ರನೆಂದು ಅರ್ಥ. ಮಾನ ಶಬ್ದವು ಕುಂಭ ಎಂಬ ಅರ್ಥಬೋಧಕವಾಗಿರುವುದು. **ಸೂನೋಃ ಮಾನೇನ** ಎಂಬಲ್ಲಿ ಇರುವ ವಿಭಕ್ತಿಯನ್ನು ವ್ಯತ್ಯಾಸವಾಗಿ ಹೇಳಿದರೆ **ಮಾನಸ್ಯ ಸೂನನಾ** ಕುಂಭದ ಪುತ್ರನಿಂದ ಎಂದು ಅರ್ಥವಾಗಿ ಇಲ್ಲಿ ಅಗಸ್ತ್ಯಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಮಾಡಿರುವುದು ಉಕ್ತವಾಗಿರುವಕಾರಣ ಅಗಸ್ತ್ಯಋಷಿಯ ಉತ್ಪತ್ತಿಕ್ರಮವು ಸಂಕ್ಷೇಪವಾಗಿ ಇಲ್ಲಿ ಹೇಳಿರುತ್ತದೆ. ಊರ್ವಶಿ ಎಂಬ ಅಪ್ಸರಸ್ತ್ರೀಯು ದರ್ಶನದಿಂದ ಮಿತ್ರಾವರುಣರ ವೀರ್ಯವು ಭೂಮಿಯಲ್ಲಿಯೂ ನೀರಿನಲ್ಲಿಯೂ ಬಿದ್ದಾಗ ಭೂಮಿಯಲ್ಲಿ ಬಿದ್ದ ವೀರ್ಯದಿಂದ ಅಗಸ್ತ್ಯನೂ, ಜಲದಲ್ಲಿ ಬಿದ್ದ ವೀರ್ಯದಿಂದ ವಸಿಷ್ಠ ಋಷಿಯೂ ಉತ್ಪನ್ನರಾಗಿರುವರು. ಈ ವಿಷಯವು **ಸತ್ರೇಹ ಜಾತೌ** ಎಂಬ ಮೇಲೆ ಉದಹರಿಸಿರುವ ಮಂತ್ರದಿಂದ ಹೇಳಲ್ಪಟ್ಟಿರುತ್ತದೆ. ಎಂದು ವಿವರಿಸಿ **ಏವಂ ಕುಂಭಸ್ಯಾಪತ್ಯಭೂತೋ ಅಗಸ್ತ್ಯಃ ಖೇಲಸ್ಯ ಚ ಪುರೋಹಿತಃ** ಹೀಗೆ ಕುಂಭದ ಪುತ್ರನಾದ ಅಗಸ್ತ್ಯನು ಖೇಲರಾಜನ ಪುರೋಹಿತನಾಗಿರುವನು ಎಂದು ಸಾಯಣರು ಹೇಳಿರುವಂತೆಯೇ ಅರ್ಥವನ್ನು ಇಲ್ಲಿ ಹೇಳಿರುವರು.

ಸಾಯಣರು **ಮಾನೇನ ಸ್ತುತ್ಯಸ್ಯ ಪರಿಚ್ಛೇದಕೇನ ಸ್ತೋತ್ರೇಣ ಗೃಣಾನಾ ಸ್ತೂಯಮಾನೌ ।** ಸ್ತುತಿಗೆ ವಿಷಯವಾದ ವಸ್ತುವಿನ ಇಯತ್ತೆಯನ್ನು ಬೋಧಿಸುವ ಸ್ತೋತ್ರದಿಂದ ಸ್ತುತಿಸಲ್ಪಡುವವರು ಅಶ್ವಿನೀದೇವತೆಗಳು ಎಂದು ಮಾನ ಪದಕ್ಕೆ ಸ್ತುತಿ ಎಂದು ಅರ್ಥವನ್ನು ಹೇಳಿ, ಭರದ್ವಾಜನೆಂಬ ಋಷಿಯು ಸ್ತುತಿಗೆ ಮೆಚ್ಚಿದ ಅಶ್ವಿನೀದೇವತೆಗಳು ಅವನಿಗೆ ಅನ್ನವನ್ನೂ, ಧನವನ್ನೂ ಕೊಟ್ಟರೆಂದು ಅರ್ಥಮಾಡಿರುವರು.

**ಬ್ರಹ್ಮಣಾ ವಾವೃಧಾನೌ ಅತ್ಯರ್ಥಂ ವರ್ಧಮಾನೌ ।** ಮಂತ್ರರೂಪವಾದ ಸ್ತುತಿಯಿಂದ ಬಹಳ ಸಂತುಷ್ಟರಾಗಿ ಎಂದರ್ಥಮಾಡಿ ಸ್ಕಂದಸ್ವಾಮಿಗಳು—

**ಚರಿತ್ರಂ ಹಿ ವೇರಿವಾಚ್ಛೇದಿ ಪರ್ಣಮಾಜಾ ಖೇಲಸ್ಯ ಪರಿತಕ್ಮ್ಯಾಯಾಂ ।**
**ಸದ್ಯೋ ಜಂಘಾಮಾಯಸೀಂ ವಿಶ್ಪಲಾಯೈ ಧನೇ ಹಿತೇ ಸರ್ತವೇ ಪ್ರತ್ಯಧತ್ತಂ ॥**

(ಋ. ಸಂ. ೧-೧೧೬-೧೫)

ಎಂಬ ಋಕ್ಕನ್ನು ಉದಾಹರಿಸಿರುವರು. ಇಲ್ಲಿ ವಿಶ್ಪಲೆ ಎಂಬ ಸ್ತ್ರೀಗೆ ಕಬ್ಬಿಣದಿಂದ ನಿರ್ಮಿತವಾದ ಕಾಲನ್ನು ಜೋಡಿಸಿದರು ಎಂದು ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಮಾನೇನ**—ಮಾಙ್ ಮಾನೇ. ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಗೃಣಾನಾ**– ಗೄ ಶಬ್ದೇ. ಧಾತು. ಕ್ರ್ಯಾದಿ. ಕರ್ಮಣಿಯಲ್ಲಿ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಲಡರ್ಥದಲ್ಲಿ ಕರ್ತೃಪ್ರತ್ಯಯ. (ಶಾನಚ್) **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಋಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ. ಗೃಣಾನ ಎಂಬುದಕ್ಕೆ ದ್ವಿವಚನ ಔ ಪರವಾದಾಗ **ಸುಪಾಂ**

**ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಭುರಣಾ**—ಭುರಣ ಧಾರಣಪೋಷಣಯೋಃ ಧಾತು. ಕಂಡ್ವಾದಿ. **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಇದು ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಧಾತುವಿಗೆ ಸ್ವಾರ್ಥದಲ್ಲಿ ಯಕ್. ಅಚ್ ಪರವಾದಾಗ **ಯಸ್ಯ ಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಕಾರಕ್ಕೂ **ಅತೋಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಉಳಿದ ಅಕಾರಕ್ಕೂ ಲೋಪ. **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ವಿಶ್ರಾಯ ಎಂಬ ಪದಕ್ಕೆ ರದಂತಾ ಎಂಬಲ್ಲಿ ಸಂಬಂಧವಿರುವುದರಿಂದ ಭುರಣಾ ಎಂಬಲ್ಲಿ ಸಂಬಂಧವಿಲ್ಲದಿರುವುದರಿಂದ ಸಾಮರ್ಥ್ಯವಿಲ್ಲದಿರುವುದರಿಂದ ಪರಾಂಗವದ್ಭಾವ ಬರುವುದಿಲ್ಲ. ಆದುದರಿಂದ ಸಮುದಾಯಕ್ಕೆ ನಿಘಾತಸ್ವರ ಬರುವುದಿಲ್ಲ.

**ರದಂತಾ**—ರದ ವಿಲೇಖನೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ, ಶಪ್ ವಿಕರಣ. ರದತ್ ಶಬ್ದವಾಗುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಉಗಿತ್ತಾದುದರಿಂದ ನುಮಾಗಮ ಬರುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ ನುಮಾಗಮ ಬರುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವವೃಧಾನಾ**—ವೃಧು ವೃದ್ಧೌ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಉರತ್** (ಪಾ. ಸೂ. ೭-೪-೬೬) ಎಂಬುದರಿಂದ ಅಭ್ಯಾಸಕ್ಕೆ ಅತ್ವ. ರಪರವಾಗಿ ಬಂದಾಗ ಆದಿಹಲ್‌ಶೇಷ ಬರುತ್ತದೆ. ಪ್ರತ್ಯಯಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣಬರುವುದಿಲ್ಲ. ಸಂಹಿತಾದಲ್ಲಿ ಛಾಂದಸವಾಗಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ** ಎಂಬುದರಿಂದ ಹೇಳುವುದಾದರೆ ಪದಕಾಲದಲ್ಲಿಯೂ ದೀರ್ಘಶ್ರವಣವಾಗಬೇಕಾಗುತ್ತದೆ.

**ಅರಿಣೀತಮ್**—ರೀ. ಗತಿರೇಷಣಯೋಃ ಧಾತು. ಕ್ರ್ಯಾದಿ. ಲಙ್‌ಮಧ್ಯಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥ**—ಸೂತ್ರದಿಂದ ತಮಾದೇಶ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಪ್ರತ್ಯಯಕ್ಕೆ ಙಿದ್ವದ್ಭಾವವಿದ್ದು ಹಲಾದಿಯಾದುದರಿಂದ **ಈ ಹಲ್ಯಘೋಃ** (ಪಾ. ಸೂ ೬-೪-೧೧೩) ಎಂಬುದರಿಂದ ವಿಕರಣಾಕಾರಕ್ಕೆ ಈತ್ವ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಕುಹ ಯಾಂತಾ ಸುಷ್ಟುತಿಂ ಕಾವ್ಯಸ್ಯ ದಿವೋ ನಪಾತಾ ವೃಷಣಾ ಶಯುತ್ರಾ ।
ಹಿರಣ್ಯಸ್ಯೇವ ಕಲಶಂ ನಿಖಾತಮುದೂಪಥುರ್ದಶಮೇ ಅಶ್ವಿನಾಹನ್ ॥ ೧೨ ॥

॥ ಪದಪಾಠಃ ॥

ಕುಹ । ಯಾಂತಾ । ಸುಽಸ್ತುತಿಂ । ಕಾವ್ಯಸ್ಯ । ದಿವಃ । ನಪಾತಾ । ವೃಷಣಾ । ಶಯುಽತ್ರಾ ।
ಹಿರಣ್ಯಸ್ಯಽಇವ । ಕಲಶಂ । ನಿಽಖಾತಂ । ಉತ್ । ಊಪಥುಃ । ದಶಮೇ । ಅಶ್ವಿನಾ । ಅಹನ್ ॥ ೧೨ ॥

॥ ಸಾಯಣಭಾಷ್ಯಂ ॥

ಪುರಾ ಖಲೂಶನಸಃ ಸ್ತುತಿಂ ಗಚ್ಛಂತಾವಶ್ವಿನೌ ಮಾರ್ಗಮಧ್ಯೇ ಕೂಪೇ ಪತಿತಂ ರೇಭಂ ದೃಷ್ಟ್ವಾ ತಂ ಕೂಪಾದುದತಾರಯತಾಂ । ತದಾನೀಮಶ್ವಿಭ್ಯಾಂ ಗಂತವ್ಯಂ ಕಾವ್ಯಸ್ಯ ನಿವಾಸಸ್ಥಾನಮಜಾನನ್ನೃಷಿರಶ್ವಿನೌ ಪೃಚ್ಛತಿ । ಹೇ ದಿವೋ ನಪಾತಾ ದ್ಯೋತಮಾನಸ್ಯ ಸೂರ್ಯಸ್ಯ ಪುತ್ರೌ ವೃಷಣಾ ಕಾಮಾಭಿವರ್ಷಕಾವಶ್ವಿನೌ ಕುಹ ಕುತ್ರ ಶಯುತ್ರಾ ಶಯನೇ ನಿವಾಸಸ್ಥಾನೇ ವರ್ತಮಾನಸ್ಯ ಕಾವ್ಯಸ್ಯ ಭಾರ್ಗವಸ್ಯ ಸುಷ್ಟುತಿಂ ಶೋಭನಾಂ ಸ್ತುತಿಂ ಶ್ರೋತುಂ ಯಾಂತಾ ಗಚ್ಛಂತೌ । ಯದ್ವಾ । ಶಯುತ್ರೇತ್ಯೇತದಶ್ವಿನೋರ್ವಿಶೇಷಣಂ । ಶಯುನಾಮ್ನಃ ಸ್ತ್ರಾಯಕೌ ಯುವಾಂ । ಹಿರಣ್ಯಸ್ಯೇವ ಕಲಶಂ ಯಥಾ ಹಿರಣ್ಯಪೂರಿತಂ ಕಲಶಂ ಭೂಮ್ಯಾಂ ನಿಕ್ಷಿಪ್ತಂ ಸರ್ವೈರ್ದುರ್ಜ್ಞಾತಂ ಕಶ್ಚಿದಭಿಜ್ಞ ಉದ್ಧರತಿ ಏವಮಸುರೈಃ ಕೂಪೇ ನಿಖಾತಂ ದಶ ರಾತ್ರೀರ್ನವಾಹಾನಿ ಚ ತತ್ರೈವ ನಿವಸಂತಂ ರೇಭಮುವಗತ್ಯ ದಶಮೇಽಹನ್ನಹನ್ಯುದೂಪಥುಃ । ಕೂಪಾದುನ್ನೀತವಂತೌ । ಕಿಂ ತನ್ನಿವಾಸಸ್ಥಾನಮಿತಿ ಪ್ರಶ್ನಃ । ರೇಭಸ್ಯಾನುಕ್ತಾವಪಿ ದಶ ರಾತ್ರೀರಶಿವೇನ । ಋ-೧-೧೧೬-೨೪ । ಇತಿ ಮಂತ್ರಾಂತರಸಾಮರ್ಥ್ಯಾತ್ಪ್ರತೀತಿಃ ॥

ಯದ್ವಾ । ಕಾವ್ಯಸ್ಯ ಸ್ತುತಿಂ ಪ್ರತಿ ಗಚ್ಛಂತೌ ಯುವಾಂ ಕುಹ ಕಸ್ಮಿನ್ಸ್ಥಾನೇ ರೇಭಂ ಯುವಾಮುನ್ನಿನ್ಯಥುರಿತಿ ಪ್ರಶ್ನಃ ॥ ಕುಹ । ವಾ ಹ ಚ ಛಂದಸೀತಿ ಸಪ್ತಮ್ಯರ್ಥೇ ಹಪ್ರತ್ಯಯಃ । ದಿವೋ ನಪಾತಾ । ಸುಬಾಮಂತ್ರಿತೇ ಪರಾಂಗವತ್ಸ್ವರ ಇತಿ ಪರಾಂಗವದ್ಭಾವೇನ ಷಷ್ಠ್ಯಂತಸ್ಯಾಮಂತ್ರಿತಾನುಪ್ರವೇಶಾದಾಮಂತ್ರಿತಸ್ಯ ಚೇತಿ ಪದದ್ವಯಸಮುದಾಯಸ್ಯ ಷಾಷ್ಠಿಕಮಾದ್ಯುದಾತ್ತತ್ವಂ । ಪಾದಾದಿತ್ವಾದಾಷ್ಟಮಿಕನಿಘಾತಾಭಾವಃ । ನಪಾದಿತ್ಯಪತ್ಯನಾಮ । ನ ಪಾತಯತೀತಿ ನಪಾತ್ । ನಭ್ರಾಣ್ನಪಾದಿತಿ ನಞಃ ಪ್ರಕೃತಿಭಾವಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಶಯುತ್ರಾ । ಅಶಿತ್ರಾದಿಭ್ಯ ಇತ್ರೋತ್ರಾವಿತಿ ಶೀಙ ಉತ್ರಃ । ಯದ್ಯಂತೋದಾತ್ತತಾ ನ ಸ್ಯಾತ್ ತರ್ಹ್ಯೇವಂ । ಶಯುಂ ತ್ರಾಯೇತೇ ಇತಿ ಶಯುತ್ರೌ । ತ್ರೈಙ್ ಪಾಲನೇ । ಆದೇಚ ಇತ್ಯಾತ್ವಂ । ಆತೋಽನುಪಸರ್ಗೇ ಕಃ । ಅತ ಏವ ವ್ಯುತ್ಪತ್ತ್ಯನವಧಾರಣಾದನವಗ್ರಹಃ । ನಿಖಾತಂ । ಖನು ಅವಧಾರಣೇ । ಅಸ್ಮಾತ್ಕರ್ಮಣಿ ನಿಷ್ಠಾ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಜನಸನಖನಾಂ ಸಞ್ಝಲೋರಿತ್ಯಾತ್ವಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಅಹನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ನ ಙಿಸಂಬುದ್ಧ್ಯೋರಿತಿ ನಲೋಪಪ್ರತಿಷೇಧಃ ॥

॥ ಪ್ರತಿಪದಾರ್ಥ ॥

**ದಿವಃ**—ಪ್ರಕಾಶಮಾನನಾದ ಸೂರ್ಯನ । **ನಪಾತಾ**—ಪುತ್ರರೂ । **ವೃಷಣಾ**—ಕಾಮಾಭಿವರ್ಷಕರೂ । **ಶಯುತ್ರಾ**—ಶಯು ಎಂಬುವನನ್ನು ರಕ್ಷಣೆಮಾಡಿದವರೂ ಆದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಕುಹ**—(ಎಲ್ಲಿ) ಯಾವ । **ಶಯುತ್ರಾ**—ಶಯುನದಲ್ಲಿ (ನಿವಾಸಸ್ಥಾನದಲ್ಲಿ) ಇದ್ದ । **ಕಾವ್ಯಸ್ಯ**—ಭಾರ್ಗವನ । **ಸುಷ್ಟುತಿಂ**—ಶುಭವಾದ ಸ್ತುತಿಯನ್ನು (ಶ್ರವಣಮಾಡಲು) । **ಯಾಂತಾ**—ಹೋಗುತ್ತಿದ್ದಿರಿ ? ಮತ್ತು । **ಹಿರಣ್ಯಸ್ಯ ಇವ ಕಲಶಂ**—(ಯಾರಿಗೂ ತಿಳಿಯದಂತೆ ಹೂತಿಡಲ್ಪಟ್ಟಿದ್ದ) ಬಂಗಾರದ ಕಲಶವನ್ನು ತೆಗೆಯುವಂತೆ । **ನಿಖಾತಂ**—(ಅಸುರರಿಂದ) ಹೂಳಲ್ಪಟ್ಟು (ಹತ್ತು ರಾತ್ರಿ ಮತ್ತು ಒಂಭತ್ತು ಹಗಲು ಅಲ್ಲೇ ಬಿದ್ದಿದ್ದ ರೇಭ ಎಂಬುವನನ್ನು) । **ದಶಮೇ ಅಹನ್**—ಹತ್ತನೆಯ ದಿನ । **ಉತ್ ಊಪಥುಃ** । ಮೇಲಕ್ಕೆ ಎತ್ತಿದಿರಿ.

॥ ಭಾವಾರ್ಥ ॥

ಸೂರ್ಯಪುತ್ರರೂ, ಕಾಮವರ್ಷಕರೂ, ಶಯು ಎಂಬುವನ ರಕ್ಷಕರೂ ಆದ ಎಲೈ ಅಶ್ವಿನೀದೇವತೆಗಳೇ, ಯಾವ ನಿವಾಸಸ್ಥಾನದಲ್ಲಿ ಇದ್ದ ಭಾರ್ಗವನ ಶುಭವಾದ ಸ್ತೋತ್ರವನ್ನು ಶ್ರವಣಮಾಡುವುದಕ್ಕೋಸ್ಕರ (ನೀವಿಬ್ಬರೂ) ಹೋಗುತ್ತಿದ್ದಿರಿ? ಮತ್ತು (ಯಾರಿಗೂ ತಿಳಿಯದಂತೆ ಹೂಳಲ್ಪಟ್ಟಿರುವ) ಬಂಗಾರದ ಕಲಶವನ್ನು ಅಗೆದು ತೆಗೆಯುವಂತೆ ಅಸುರರಿಂದ ಹೂಳಲ್ಪಟ್ಟು ಹತ್ತು ರಾತ್ರಿ ಮತ್ತು ಒಂಭತ್ತು ಹಗಲು ಅಲ್ಲೇ ಬಿದ್ದಿದ್ದ ರೇಭ ಎಂಬುವನನ್ನು ಹತ್ತನೆಯ ದಿನ ಮೇಲಕ್ಕೆ ಎತ್ತಿದಿರಿ.

## English Translation.

Whither were you going, son of heaven, showerers (of benefits), when on your way to the dwelling of Kavya, (to receive his) adoration, you raised up (Rebha), Aswins, on the tenth day, like a burried vessel full of gold ?

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಒಂಭತ್ತು ದಿನಗಳೂ ಹತ್ತು ರಾತ್ರಿಯೂ ಭಾವಿಯಲ್ಲಿ ಬಿದ್ದಿದ್ದ ರೇಭಋಷಿಯನ್ನು ಅಶ್ವಿನೀ ದೇವತೆಗಳು ಭಾವಿಯಿಂದ ಮೇಲಕ್ಕೆ ಎತ್ತಿ ರಕ್ಷಿಸಿದರು ಎಂಬುದಾಗಿ ಹೇಳಿರುತ್ತದೆ.

**ದಶ ರಾತ್ರೀರಶಿವೇನಾ ನವ ದ್ಯೂನವನದ್ಧಂ ಶ್ನಥಿತಮಪ್ಸ್ವ೧ನ್ತಃ |**
**ವಿಪ್ರುತಂ ರೇಭಮುದನಿ ಪ್ರವೃಕ್ತಮುನ್ನಿನ್ಯಥುಃ ಸೋಮಮಿವ ಸ್ರುವೇಣ ||**

(ಋ. ಸಂ. ೧-೧೧೬-೨೪)

ಈ ಋಕ್ಕಿನಲ್ಲಿಯೂ ರೇಭಋಷಿಯನ್ನು ಭಾವಿಯಿಂದ ಮೇಲಕ್ಕೆ ಎತ್ತಿ ರಕ್ಷಿಸಿದ ಇತಿಹಾಸವು ವಿವೃತವಾಗಿರುತ್ತದೆ.

**ದಿವೋ ನಪಾತಾ—ದ್ಯೋತಮಾನಸ್ಯ ಸೂರ್ಯಸ್ಯ ಪುತ್ರೌ |** ಪ್ರಕಾಶಿಸುತ್ತಿರುವ ಸೂರ್ಯನ ಮಕ್ಕಳು. ಅಶ್ವಿನೀದೇವತೆಗಳೆಂದು ಅರ್ಥ. ಸ್ಕಂದಸ್ವಾಮಿಗಳು ಅಶ್ವಿನೀದೇವತೆಗಳು ಆದಿತ್ಯನ ಪುತ್ರರು ಎಂಬುವ ವಿಷಯವನ್ನು ವಿವರವಾಗಿ ತಿಳಿಸಿರುವರು.

**ದಿವೋ ಹಿ ಪುತ್ರ ಆದಿತ್ಯಃ ಐತರೇಯಬ್ರಾಹ್ಮಣೇ—ಪ್ರಜಾಪತಿರಕಾಮಯತ ಪ್ರಜಾಯೇಯ ಭೂಯಾನ್ ಸ್ಯಾಂ ಇತ್ಯುಪಕ್ರಮ್ಯ—ಅಗ್ನಿರೇವ ಪೃಥಿವ್ಯಾ ಅಜಾಯತ | ವಾಯುರಂತರಿಕ್ಷಾತ್ | ಆದಿತ್ಯೋ ದಿವಃ |** (ಐ. ಬ್ರಾ. ೫-೩೨-೧) **ಇತಿ ಶ್ರುತೇಃ |**

ಆದಿತ್ಯನು ದ್ಯುಶಬ್ದವಾಚ್ಯವಾದ ಸ್ವರ್ಗದ (ಅಂತರಿಕ್ಷದ) ಪುತ್ರನಾಗಿರುವನು ಎಂದು ಅರ್ಥಮಾಡಿ ಪ್ರಜೆಗಳಿಗೆ ಅಧಿಪ ನಾದ ಬ್ರಹ್ಮನು ತಾನು ಬಹಳ ಪ್ರಜಾವಂತನಾಗಬೇಕು ಎಂದು ಅಪೇಕ್ಷಿಸಿಪಟ್ಟನು ಎಂದು ಮುಂತಾದ ಅರ್ಥವುಳ್ಳ ಐತರೇಯ ಬ್ರಾಹ್ಮಣದ ವಾಕ್ಯವನ್ನು ಉದಾಹರಿಸಿ ಪೃಥಿವಿಯಿಂದ ಅಗ್ನಿಯು ಉತ್ಪನ್ನನಾದನು. ವಾಯುವು ಅಂತರಿಕ್ಷ ದಿಂದ ಉತ್ಪನ್ನನಾದನು, ಆದಿತ್ಯನು ಸ್ವರ್ಗದಿಂದ ಉತ್ಪನ್ನನಾದನು ಎಂದು ಐತರೇಯ ಬ್ರಾಹ್ಮಣದ ವಾಕ್ಯವನ್ನೂ **ಏವಂ ಹಿ ಐತಿಹಾಸಿಕಾಃ ಸ್ಮರಂತಿ**—ಇತಿಹಾಸವನ್ನು ವಿವರವಾಗಿ ತಿಳಿದವರೂ ಹೀಗೆಯೇ ಹೇಳುತ್ತಾರೆ ಎಂದು ಪುರಾಣವಾಕ್ಯವನ್ನೂ ಉದಹರಿಸಿರುವರು.

**ದಿವಃ ಪುತ್ರೋ ಬೃಹದ್ಭಾನುಃ ಚಕ್ಷುರಾತ್ಮಾ ವಿಭಾವಸುಃ | ಸವಿತಾ ಸ ಋಚೀಕೋಽರ್ಕೋ ಭಾನುರಾಗಾವಹೋ ರವಿಃ || ಪುರಾ ವಿವಸ್ವತಸ್ಸರ್ವೇ ತೇಷಾಂ ಜ್ಯೇಷ್ಠಸ್ತಥಾಪರಃ || ಇತಿ |**

ಬೃಹದ್ಭಾನು, ಚಕ್ಷುಃ, ಆತ್ಮಾ, ವಿಭಾವಸು, ಸವಿತಾ, ಋಚೀಕ, ಅರ್ಕ, ಭಾನು, ಆಗಾವಹ, ರವಿ, ವಿವಸ್ವಾನ್ ಎಂಬುವರು ಸ್ವರ್ಗದ ಪುತ್ರರಾಗಿರುವರು. ಇವರಲ್ಲಿ ವಿವಸ್ವಾನ್ ಎಂಬವನು ಮಾತ್ರ ಎಲ್ಲರಿಗಿಂತಲೂ ಜ್ಯೇಷ್ಠನಾಗಿರುವನು ಎಂದು ವಿವರಿಸಿ.

**ಏವಂ ದಿವಃ ಪುತ್ರೋ ವಿವಸ್ವಾನ್ ತಸ್ಯ ಪುತ್ರಾವಶ್ವಿನೌ |** ವಿವಸ್ವಾನ್ ಎಂಬುವನು ಈ ಪ್ರಕಾರದಿಂದ ದಿವಸ್ಪುತ್ರನಾಗಿರುವನು. ಇವನ ಮಕ್ಕಳೇ ಅಶ್ವಿನೀದೇವತೆಗಳು—

**ಏವಂ ಹೀತಿಹಾಸಮಾಚಕ್ಷತೇ—ತ್ವಾಷ್ಟ್ರೀಸರಣ್ಯೂರ್ವಿವಸ್ವತ ಆದಿತ್ಯಾತ್ ಯಮೌ ಮಿಥುನೌ ಜನಯಾಂಚಕಾರ। ಸಾ ಸವರ್ಣಾಂ ಪ್ರತಿವಿಧಾಯಾನ್ಯಾಂ ಅಶ್ವಂ ರೂಪಂ ಕೃತ್ವಾ ಪ್ರದುದ್ರಾವ। ವಿವಸ್ವಾನ್ ಆದಿತ್ಯಃ ಅಶ್ವಮೇವ ರೂಪಂ ಕೃತ್ವಾ ತಾಮನುಸೃತ್ಯ ಸಂಬಭೂವ। ತತೋ ಅಶ್ವಿನೌ ಜಜ್ಞಾತೇ ಇತಿ। ಏವಂ ಅಶ್ವಿನೌ ದಿವಃ ಪೌತ್ರೌ ॥**

ತ್ವಷ್ಟೃಬ್ರಹ್ಮನ ಮಗಳಾದ ಸರಣ್ಯೂ ಎಂಬುವಳು ವಿವಸ್ವಾನ್ ಎಂದು ಹೆಸರುಳ್ಳ ಆದಿತ್ಯನಿಂದ ಯಮ, ಯಮುನಾ ಎಂಬ ಮಕ್ಕಳುಗಳನ್ನು ಪಡೆದಳು. ಆದಿತ್ಯನ ಹತ್ತಿರದಲ್ಲಿ ಇರಲು ಅಶಕ್ತಳಾಗಿ ತನ್ನಹಾಗೆ ಇರುವಂತೆ ಬೇರೆ (ಆಕೃತಿಯನ್ನು ಮಾಡಿ ಇರಿಸಿ) ಯಾದ ಸ್ತ್ರೀಯನ್ನು ಮಾಡಿ ಇರಿಸಿ ತಾನು ಕುದುರೆಯ ರೂಪದಿಂದ ಸೂರ್ಯನ ಸಮೀಪವನ್ನು ಬಿಟ್ಟು ಹೊರಟುಹೋದಳು. ಆಗ ಆದಿತ್ಯನು ತಾನೂ ಕೂಡ ಕುದುರೆಯ ಆಕಾರವನ್ನು ಧರಿಸಿಕೊಂಡು ಕುದುರೆಯ ರೂಪದಿಂದ ಇರುವ ಆವಳನ್ನು ಅನುಸರಿಸಿ ಹೋಗಿ ಹಿಂಬಾಲಿಸಿದಾಗ ಅಶ್ವಿನೀದೇವತೆಗಳು ಇವರ ಸಮಾಗಮದಿಂದ ಉತ್ಪನ್ನರಾದರು. ಹೀಗೆ ಅಶ್ವಿನೀದೇವತೆಗಳು (ಸ್ವರ್ಗದ) ಎಲ್ಲವನ್ನೂ ಪ್ರಕಾಶಗೊಳಿಸುವ ಬ್ರಹ್ಮನ ಮೊಮ್ಮಕ್ಕಳು ಎಂದು ಇತಿಹಾಸವನ್ನು ವಿವರಿಸಿರುತ್ತಾರೆ.

**ಕುಹ ಯಾಂತಾ ಸುಷ್ಟುತಂ ಕಾವ್ಯಸ್ಯ ಶಯುತ್ರಾ—ಶಯನೇ ನಿವಾಸಸ್ಥಾನೇ ವರ್ತಮಾನಸ್ಯ ಭಾರ್ಗವಸ್ಯ ಶೋಭನಾಂ ಸ್ತುತಿಂ ಶ್ರೋತುಂ ಕುಹ ಗಚ್ಛಂತೌ।** ತನ್ನ ವಾಸಸ್ಥಾನದಲ್ಲಿ ಸುಖವಾಗಿ ಕುಳಿತುಕೊಂಡು ಇರುವ ಭೃಗುವಂಶದಲ್ಲಿ ಉತ್ಪನ್ನನಾದ ಶುಕ್ರಾಚಾರ್ಯನು ಹೇಳುವ ಸ್ತುತಿಯನ್ನು ಕೇಳುವುದಕ್ಕಾಗಿ ಅಶ್ವಿನೀದೇವತೆಗಳಾದ ನೀವು ಎಲ್ಲಿಗೆ ಹೋಗಿದ್ದಿರಿ ಎಂದು ಪ್ರಶ್ನೆಮಾಡಿರುವುದರಿಂದ ಅಶ್ವಿನೀದೇವತೆಗಳ ನಿವಾಸಸ್ಥಾನವನ್ನು ತಿಳಿಯದಿರುವವನ ಪ್ರಶ್ನೆಯಾಗುತ್ತದೆ. ಇಲ್ಲಿ—

**ಪುರಾ ಖಲು ಉಶನಸಃ ಸ್ತುತಿಂ ಗಚ್ಛನ್ತಾವಶ್ವಿನೌ ಮಾರ್ಗಮಧ್ಯೇ ಕೂಪೇ ಪತಿತಂ ರೇಭಂ ದೃಷ್ಟ್ವಾ ತಂ ಕೂಪಾದುದತಾರಯತಾಂ। ತದಾನೀಂ ಅಶ್ವಿಭ್ಯಾಂ ಗಂತವ್ಯಂ ಕಾವ್ಯಸ್ಯ ನಿವಾಸಸ್ಥಾನಂ ಅಜಾನನ್ ಋಷಿಃ ಅಶ್ವಿನೌ ಪೃಚ್ಛತಿ ॥**

ಪೂರ್ವದಲ್ಲಿ ಶುಕ್ರಾಚಾರ್ಯನ ಸ್ತುತಿಯನ್ನು ಕೇಳುವುದಕ್ಕಾಗಿ ಹೋಗುತ್ತಿರುವ ಅಶ್ವಿನೀದೇವತೆಗಳು ಮಾರ್ಗಮಧ್ಯದಲ್ಲಿ ಭಾವಿಯಲ್ಲಿ ಬಿದ್ದಿರುವ ರೇಭಋಷಿಯನ್ನು ನೋಡಿ ಅವನನ್ನು ಮೇಲಕ್ಕೆ ಎತ್ತಿ ಹೊರಟುಹೋದರು. ಅನಂತರ ರೇಭಋಷಿಯು ಅವರನ್ನು ಕಾಣದೆ ಅವರು ಇರುವ ಸ್ಥಳವನ್ನು ತಿಳಿಯುವುದಕ್ಕಾಗಿ ಪ್ರಶ್ನೆಯನ್ನು ಮಾಡಿರುವನೆಂದು ಇಲ್ಲಿ ವರ್ಣಿತವಾಗಿದೆ ಎಂದು ಸಾಯಣರು ಅರ್ಥಮಾಡಿರುವರು. ಮತ್ತು **ಶಯುತ್ರಾ** ಎಂಬ ಪದಕ್ಕೆ ಶಯುವೆಂಬವನನ್ನು ರಕ್ಷಿಸಿದವನು ಎಂದು ಅಶ್ವಿನೀದೇವತೆಗಳಿಗೆ ವಿಶೇಷಣವಾಗಿ ಅರ್ಥವನ್ನು ವಿವರಿಸಿರುವರು.

**ಹಿರಣ್ಯಸ್ಯೇವ ಕಲಶಂ**—ಎಂಬಲ್ಲಿ ಹಿರಣ್ಯಸ್ಯ ಕಲಶಮಿವ ಎಂದು ಅನ್ವಯವನ್ನು ಮಾಡಿ ಇವ ಶಬ್ದಕ್ಕೆ ಉಪಮಾರ್ಥವನ್ನು ಹೇಳಿ, **ಯಥಾ ಹಿರಣ್ಯಪೂರಿತಂ ಕಲಶಂ ಭೂಮ್ಯಾಂ ನಿಕ್ಷಿಪ್ತಂ ಸರ್ವೈಃ ದುರ್ಜ್ಞಾತಂ ಕಶ್ಚಿದಭಿಜ್ಞಃ ಉದ್ಧರತಿ ಏವಂ ರೇಭಮವಗತ್ಯ ಕೂಪಾದುನ್ನೀತವಂತೌ।** ಚಿನ್ನದಿಂದ (ಅಥವಾ ಸುವರ್ಣ ದ್ರವ್ಯದಿಂದ) ತುಂಬಿರುವ ಕಲಶವು ಭೂಮಿಯ ಒಳಗಡೆಯಲ್ಲಿ ಯಾರಿಗೂ ತಿಳಿಯದಂತೆ ಹೂತಿರುವುದನ್ನು ನಿಪುಣನಾದವನು

ಮೇಲಕ್ಕೆತ್ತುವಂತೆ ಭಾವಿಯಲ್ಲಿ ಇರುವ ರೇಭನನ್ನು ಮೇಲಕ್ಕೆತ್ತಿದರು ಎಂದು ಅರ್ಥವನ್ನುಮಾಡಿ **ಕಾವ್ಯಸ್ಯ ಸ್ತುತಿಂ ಪ್ರತಿ ಗಚ್ಛಂತೌ ಯುವಾಂ ಕುಹ ಕಸ್ಮಿನ್ ಸ್ಥಾನೇ ರೇಭಂ ಯುವಾಂ ಉನ್ನಿನ್ಯಥುಃ ಇತಿ ಪ್ರಶ್ನಃ |** ಶುಕ್ರಾಚಾರ್ಯನು ನಿಮ್ಮನ್ನು ಕುರಿತು ಹೇಳುವ ಸ್ತುತಿಯನ್ನು ಕೇಳುವುದಕ್ಕಾಗಿ ಹೋಗುವಾಗ ರೇಭಋಷಿಯನ್ನು ಭಾವಿಯಿಂದ ಮೇಲಕ್ಕೆ ಎತ್ತಿದ ಪ್ರದೇಶವು ಯಾವುದು ಎಂದು ಇನ್ನೊಂದು ವಿಧವಾದ ವ್ಯಾಖ್ಯಾನವನ್ನೂ ಮಾಡಿರುವರು.

|| ವ್ಯಾಕರಣಪ್ರಕ್ರಿಯಾ ||

**ಕುಹ**—ಕಿಮ್ ಶಬ್ದಕ್ಕೆ ಸಪ್ತಮ್ಯರ್ಥದಲ್ಲಿ **ವಾಹ ಚ ಛಂದಸಿ** (ಪಾ. ಸೂ. ೫–೩–೧೩) ಎಂಬುದರಿಂದ ಹ ಪ್ರತ್ಯಯ. **ಕುತಿಹೋಃ** (ಪಾ. ಸೂ. ೭–೨–೪) ಎಂಬುದರಿಂದ ಪ್ರಕೃತಿಗೆ ಕು ಎಂಬ ಆದೇಶ.

**ಯಾಂತಾ**— ಯಾ ಪ್ರಾಪಣೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಪ್ರಥಮಾದ್ವಿವಚನದಲ್ಲಿ **ಸುಪಾಂ ಸುಲುಕ್**—(ಪಾ. ಸೂ. ೭–೧–೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರಪರಸವರ್ಣ.

**ದಿವೋ ನಪಾತಾ**—**ಸುಬಾಮಂತ್ರಿತೇ ಪರಾಂಗವತ್ ಸ್ವರೇ** (ಪಾ. ಸೂ. ೨–೧–೨) ಎಂಬುದರಿಂದ ದಿವಃ ಎಂಬುದು ಪರದ ಆಮಂತ್ರಿತಕ್ಕೆ ಅವಯವದಂತೆ ಆಗುತ್ತದೆ. ಆಗ **ಆಮಂತ್ರಿತಸ್ಯ** (ಪಾ. ಸೂ. ೬–೧–೧೯೮) ಎಂಬುದರಿಂದ ದಿವೋ ನಪಾತಾ ಎಂಬ ಸಮುದಾಯದ ಆದಿಗೆ ಉದಾತ್ತಸ್ವರ ಬರುತ್ತದೆ. ಪಾದಾದಿಯಲ್ಲಿರುವುದರಿಂದ ಆಷ್ಟಮಿಕನಿಘಾತಸ್ವರ ಬರುವುದಿಲ್ಲ. ನಪಾತ್ ಎಂಬುದು ಅಪತ್ಯ ಅಂದರೆ ಮಕ್ಕಳ ಹೆಸರು. ನ ಪಾತಯತಿ ಇತಿ ನಪಾತ್. **ನಭ್ರಾಣ್ ನಪಾತ್**—(ಪಾ. ಸೂ. ೬–೩–೭೫) ಎಂಬುದರಿಂದ ನಞಿನ ನಕಾರಕ್ಕೆ ಲೋಪಬಾರದೆ ನಿಪಾತಿತವಾಗಿದೆ. **ಸುಪಾಂ ಸುಲುಕ್**—(ಪಾ. ಸೂ. ೭–೧–೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. ವೃಷಣಾ ಎಂಬಲ್ಲಿಯೂ ಹೀಗೆಯೇ ಆಕಾರಾದೇಶ.

**ಶಯುತ್ರಾ**—ಶೀಙ್ ಸ್ವಪ್ನೇ. ಧಾತು. **ಅಶಿತ್ರಾದಿಭ್ಯ ಇತ್ರೋತ್ರೌ** (ಉ. ಸೂ. ೪-೬೧೨) ಎಂಬುದರಿಂದ ಇದಕ್ಕೆ ಉತ್ರ ಪ್ರತ್ಯಯ. ಹೀಗೆ ಹೇಳಿದರೆ **ಪ್ರತ್ಯಯಃ ಆದ್ಯುದಾತ್ತಶ್ಚ** (ಪಾ. ಸೂ. ೩–೧–೩) ಎಂಬುದರಿಂದ ಪ್ರತ್ಯಯಕ್ಕೆ ಆದ್ಯುದಾತ್ತಸ್ವರ ಬರುವುದರಿಂದ ಉಕಾರ ಉದಾತ್ತವಾಗಬೇಕಾಗುತ್ತದೆ. ಆದುದರಿಂದ ಬೇರೆ ರೀತಿಯಿಂದ ನಿರ್ವಚನಮಾಡಬೇಕು. ಶಯುಂ ತ್ರಾಯೇತೇ ಇತಿ ಶಯುತ್ರಾ. ತ್ರೈಙ್ ಪಾಲನೇ ಧಾತು. **ಆದೇಚ ಉಪದೇಶೇಽಶಿತಿ** (ಪಾ. ಸೂ. ೬–೧–೪೫) ಎಂಬುದರಿಂದ ಧಾತುವಿನ ಏಚ್ಚಿಗೆ ಆತ್ವ. ಆದಂತವಾದ ಧಾತುವಾದುದರಿಂದ **ಆತೋಽನುಪಸರ್ಗೇ ಕಃ** (ಪಾ. ಸೂ. ೩–೨–೩) ಎಂಬುದರಿಂದ ಕ ಪ್ರತ್ಯಯ. ಇದು ಕಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ **ಆತೋ ಲೋಪ ಇಟಿ ಚ** (ಪಾ. ಸೂ. ೬–೪–೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಶಯುತ್ರ ಎಂದು ರೂಪವಾಗುತ್ತದೆ. ಈ ವ್ಯುತ್ಪತ್ತಿಯನ್ನು ತಿಳಿಯದೇ ಅವಗ್ರಹವನ್ನು ಮಾಡುವುದಿಲ್ಲ. ಇದನ್ನು ಅನುಸರಿಸಿದರೆ ಅವಗ್ರಹವಿದ್ದೇ ಇದೆ. ಇದಕ್ಕೆ ದ್ವಿವಚನ ಔ ಪರವಾದಾಗ ಹಿಂದಿನಂತೆ ಅದಕ್ಕೆ ಆಕಾರಾದೇಶ-ಪ್ರತ್ಯಯಸ್ವರದಿಂದ ಅಂತೋದಾತ್ತವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬–೨–೧೩೯) ಎಂಬುದರಿಂದ ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ನಿಖಾತಮ್**—ಖನು ಅವಧಾರಣೇ. ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಉದಿತೋ ವಾ** (ಪಾ. ಸೂ. ೭-೨-೫೬) ಎಂಬುದರಿಂದ ಕ್ತ್ವಾ ಪ್ರತ್ಯಯ ಪರವಾದಾಗ ಇಟ್ ವಿಕಲ್ಪಿತವಾದುದರಿಂದ **ಯಸ್ಯ ವಿಭಾಷಾ**(ಪಾ. ಸೂ. ೭-೨-೧೫) ಎಂಬುದರಿಂದ ಇಣ್ನಿಷೇಧ ಬರುತ್ತದೆ. **ಜನಸನಖನಾಂ ಸಞ್ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಆತ್ವ ಬರುತ್ತದೆ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಸಮಾಸದಲ್ಲಿ ಗತಿಗೆ (ನಿ) ಪ್ರಕೃತಿಸ್ವರ ಬರುತ್ತದೆ.

**ಊಪಥುಃ**—ಡುವಪ್ ಬೀಜಸಂತಾನೇ. ಧಾತು. ಲಿಟ್‌ಮಧ್ಯಮಪುರುಷ ದ್ವಿವಚನರೂಪ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ದಶಮೇ**—ದಶನ್ ಶಬ್ದ. **ನಾಂತಾದಸಂಖ್ಯಾದೇರ್ಮಟ್** (ಪಾ. ಸೂ. ೫-೨-೪೯) ಎಂಬುದರಿಂದ ಪೂರಣಾರ್ಥದಲ್ಲಿ ಮಟ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಏಕವಚನಾಂತ ರೂಪ.

**ಅಹನ್**—ಇದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ಅದಕ್ಕೆ ಲುಕ್. **ನಙಿಸಂಬುದ್ಧ್ಯೋಃ** (ಪಾ. ಸೂ. ೮-೨-೮) ಎಂಬುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ. ॥ ೧೨ ॥



॥ ಸಂಹಿತಾಪಾಠಃ ॥

ಯುವಂ ಚ್ಯವಾನಮಶ್ವಿನಾ ಜರಂತಂ ಪುನರ್ಯುವಾನಂ ಚಕ್ರ-
ಥುಃ ಶಚೀಭಿಃ ।
ಯುವೋ ರಥಂ ದುಹಿತಾ ಸೂರ್ಯಸ್ಯ ಸಹ ಶ್ರಿಯಾ ನಾಸತ್ಯಾ-
ವೃಣೀತ ॥ ೧೩ ॥

॥ ಪದಪಾಠಃ ॥

ಯುವಂ । ಚ್ಯವಾನಂ । ಅಶ್ವಿನಾ । ಜರಂತಂ । ಪುನಃ । ಯುವಾನಂ । ಚಕ್ರಥುಃ । ಶಚೀಭಿಃ ।

ಯುವೋಃ । ರಥಂ । ದುಹಿತಾ । ಸೂರ್ಯಸ್ಯ । ಸಹ । ಶ್ರಿಯಾ । ನಾಸತ್ಯಾ । ಅವೃಣೀತ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ಶಚೀಭಿರಾತ್ಮೀಯೈರ್ಭೈಷಜ್ಯಲಕ್ಷಣೈಃ ಕರ್ಮಭಿರ್ಜರಂತಂ ಜೀರ್ಯಂತಂ ಚ್ಯವಾನಂ ಸ್ತುತೀನಾಂ ಚ್ಯಾವಯಿತಾರಮೇತತ್ಸಂಜ್ಞಮೃಷಿಂ ಯುವಾನಂ ಪುನರ್ಯೌವನೋಪೇತಂ ಚಕ್ರಥುಃ । ಕೃತವಂತೌ । ಅಪಿ ಚ ಹೇ ನಾಸತ್ಯಾವಶ್ವಿನೌ ಯುವೋರ್ಯುವಯೋ ರಥಂ ಸೂರ್ಯಸ್ಯ ದುಹಿತಾ ಸೂರ್ಯಾಖ್ಯಾ ಶ್ರಿಯಾ ಸಹ ಋಕ್ಸಹಸ್ರರೂಪಯಾ ಸಂಪದಾ ಕಾಂತ್ಯಾ ವಾ ಸಹಾವೃಣೀತ । ಸಮಭಜತ । ಆಗತ್ಯಾರೂಢವತೀತ್ಯರ್ಥಃ । ಆ ವಾಂ ರಥಂ ದುಹಿತಾ। ಋ ೧.೧೧೬.೧೭। ಇತ್ಯತ್ರ ಲಿಖಿತಮಾಖ್ಯಾನಮತ್ರಾಪಿ ದ್ರಷ್ಟವ್ಯಂ ॥ ಜರತಂ । ಜೄಷ್ ವಯೋಹಾನೌ। ವ್ಯತ್ಯಯೇನ ಶಪ್ । ಯುವೋಃ । ಯುಷ್ಮಚ್ಛಬ್ದಾತ್ ಷಷ್ಠೀದ್ವಿವಚನೇ ವ್ಯತ್ಯಯೇನ ಯೋಽಚೀತಿ ಯತ್ವಾಭಾವೇ ಸತಿ ಶೇಷೇ ಲೋಪ ಇತಿ ದಕಾರಲೋಪಃ । ಅತೋ ಗುಣ ಇತಿ ಪರರೂಪತ್ವಂ । ಏಕಾದೇಶ ಉದಾತ್ತೇನೋದಾತ್ತಃ । ಅವೃಣೀತ । ವೃಙ್ ಸಂಭಕ್ತೌ । ಕ್ರ್ಯಾದಿಕಃ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರು । **ಶಚೀಭಿಃ**—(ನಿಮ್ಮ ವೈದ್ಯ) ಕರ್ಮಗಳಿಂದ । **ಜರಂತಂ**—ಮುದುಕನಾಗುತ್ತಿರುವ । **ಚ್ಯವಾನಂ**—ಚ್ಯವನನೆಂಬುವನನ್ನು । **ಪುನಃ ಯುವಾನಂ**—ಮತ್ತೆ ಯೌವನಯುಕ್ತನನ್ನಾಗಿ । **ಚಕ್ರಥುಃ**—ಮಾಡಿದಿರಿ । (**ಅ ಪಿ ಚ**—ಮತ್ತು) **ನಾಸತ್ಯಾ**—ಎಲೈ ನಾಸತ್ಯರೇ । **ಯುವೋಃ**—ನಿಮ್ಮಿಬ್ಬರ । **ರಥಂ**—ರಥವನ್ನು । **ಸೂರ್ಯಸ್ಯ ದುಹಿತಾ**—ಸೂರ್ಯ ಪುತ್ರಿಯು (ಸೂರ್ಯಾ ಎಂಬುವಳು) । **ಶ್ರಿಯಾ ಸಹ**—ಕಾಂತಿಯಿಂದ (ಋಕ್ಸಹಸ್ರರೂಪವಾದ ಸಂಪತ್ತಿನಿಂದ) ಯುಕ್ತಳಾಗಿ । **ಅವೃಣೀತ**—(ಆರೋಹಿಸಿದಳು) ಪ್ರಾಪ್ತಳಾದಳು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ನಿಮ್ಮ ವೈದ್ಯಕೀಯ ಶಕ್ತಿಯಿಂದ ಮುದುಕನಾಗಿದ್ದ ಚ್ಯವನನನ್ನು ಪುನಃ ಯುವಕನನ್ನಾಗಿ ಮಾಡಿದಿರಿ (ಮತ್ತು) ನಾಸತ್ಯರೇ, ನಿಮ್ಮ ರಥವನ್ನು ಸೂರ್ಯಪುತ್ರಿಯಾದ ಸೂರ್ಯೆ ಎಂಬುವಳು (ಋಕ್ಸಹಸ್ರರೂಪವಾದ ಸಂಪತ್ತಿನಿಂದ) ಕಾಂತಿಯಿಂದ ಯುಕ್ತಳಾಗಿ ಬಂದು ಏರಿದಳು.

## English Translation

You rendered, by your power, Aswins, the aged Chyavana again young: the daughter of the sun, Nasatyas, invested your chariot with beauty.

॥ ವಿಶೇಷವಿಷಯಗಳು ॥

**ಚ್ಯವಾನಂ ಯುವಂ ಶಚೀಭಿಃ ಚಕ್ರಥುಃ—ಚ್ಯಾವಯಿತಾರಂ ಸ್ತುತೀನಾಂ ಏತತ್ಸಂಜ್ಞಂ ಋಷಿಂ ಪುನಃ ಯೌವ್ವನೋಪೇತಂ ಆತ್ಮೀಯೈಃ ಭೈಷಜ್ಯರೂಪೈಃ ಕರ್ಮಭಿಃ ಕೃತವಂತೌ ।** ಅಶ್ವಿನೀದೇವತೆಗಳು ವೃದ್ಧನಾಗಿದ್ದ ಚ್ಯವನಋಷಿಯನ್ನು ತಮ್ಮ ವೈದ್ಯಚಿಕಿತ್ಸೆಯಿಂದ ಯೌವ್ವನವಂತನನ್ನಾಗಿ ಮಾಡಿದರು. ಮತ್ತು ಅವನಿಂದ ಅತಿಶಯವಾಗಿ ಸ್ತುತಿಸಲ್ಪಟ್ಟರು ಎಂದು ಈ ಋಕ್ಕಿನಲ್ಲಿ ವರ್ಣಿಸಿದೆ. ಸ್ಕಂದಸ್ವಾಮಿಗಳು ಸಾಯಣರು ವ್ಯಾಖ್ಯಾನಮಾಡಿರುವಂತೆಯೇ ಅರ್ಥವನ್ನು ಹೇಳಿ ಈ ವಿಷಯವು—ಹಿಂದೆಯೇ ಉಕ್ತವಾಗಿರುತ್ತದೆ ಎಂದು ವಿವರಿಸಿ.

**ಜುಜುರುಷೋ ನಾಸತ್ಯೋತ ವವ್ರಿಂ ಪ್ರಾಮುಂಚತಂ ದ್ರಾಪಿಮಿವ ಚ್ಯವಾನಾತ್ ।**
**ಪ್ರಾತಿರತಂ ಜಹಿತಸ್ಯಾಯುರ್ದಸ್ರಾದಿತ್ಪತಿಮಕೃಣುತಂ ಕನೀನಾಮ್ ॥**

(ಋ. ಸಂ. ೧-೧೧೬-೧೦)

ಎಂಬ ಋಕ್ಕನ್ನು ಉದಹರಿಸಿರುವರು.

**ಸೂರ್ಯಸ್ಯ ದುಹಿತಾ ಯುವೋರಥಂ ಅವೃಣೀತ ಸೂರ್ಯಾಖ್ಯಾ ಸೂರ್ಯಸ್ಯ ದುಹಿತಾ ಯುವಾಂ ರಥಂ ಆಗತ್ಯಾರೂಢವತೀ** ಸೂರ್ಯನ ಪುತ್ರಿಯಾದ ಸೂರ್ಯಾ ಎಂಬವಳು ಸ್ವಯಂವರದಲ್ಲಿ ನಿಮ್ಮನ್ನು ವರಿಸಿ ನಿಮ್ಮ ರಥವನ್ನು ಹತ್ತಿದಳು. ಮತ್ತು ಆಗ ಬಹಳವಾಗಿ ಕಾಂತಿಯುಳ್ಳದ್ದಾಗಿ ನಿಮ್ಮ ರಥವು ಮೆರೆಯುತ್ತಿತ್ತು ಪಣವಾಗಿಟ್ಟಿದ್ದ ಸಹಸ್ರ ಋಕ್ಕುಗಳನ್ನೂ ಸೂರ್ಯಾ ಎಂಬವಳನ್ನೂ ಅಶ್ವಿನೀದೇವತೆಗಳು ಹೊಂದಿದರೆಂಬ ಇತಿಹಾಸವು ಇಲ್ಲಿ ವರ್ಣಿತವಾಗಿದೆ. ಸ್ಕಂದಸ್ವಾಮಿಗಳೂ ಹೀಗೆಯೇ ಅರ್ಥವನ್ನೂ ವಿವರಿಸಿ.

**ಆ ವಾಂ ರಥಂ ದುಹಿತಾ ಸೂರ್ಯಸ್ಯ ಕಾರ್ಷ್ಮೇವಾತಿಷ್ಠದರ್ವತಾ ಜಯಂತೀ ।**
**ವಿಶ್ವೇ ದೇವಾ ಅನ್ವಮನ್ಯಂತ ಹೃದ್ಭಿಃ ಸಮು ಶ್ರಿಯಾ ನಾಸತ್ಯಾ ಸಚೇಥೆ ॥**

(ಋ. ಸಂ. ೧-೧೧೬-೧೭)

ಎಂಬ ಈ ಋಕ್ಕಿನಲ್ಲಿಯೂ ಇದೇ ವಿಷಯವು ಉಕ್ತವಾಗಿರುತ್ತದೆ ಎಂದು ಈ ಋಕ್ಕನ್ನು ಉದಹರಿಸಿರುತ್ತಾರೆ. ಯಾಸ್ಕರು—

**ಚ್ಯವನಃ । ಋಷಿರ್ಭವತಿ ಚ್ಯಾವಯಿತಾ ಸ್ತೋಮಾನಾಂ ಚ್ಯವಾನಮಿತ್ಯಪಿ ನಿಗಮಾ ಭವಂತಿ**

(ನಿ ೪-೧೯)

ಚ್ಯವನ ಚ್ಯವಾನ ಎಂಬ ಎರಡು ಶಬ್ದಗಳೂ, ಒಬ್ಬ ಋಷಿಯ ಹೆಸರಾಗಿದೆ. ಈ ಪದಕ್ಕೆ ಸ್ತುತಿಮಾಡುವನು ಎಂದು ಅರ್ಥವನ್ನು ವಿವರಿಸಿ—

**ಯುವಂ ಚ್ಯವಾನಂ ಸನಯಂ ಯಥಾ ರಥಂ ಪುನರ್ಯುವಾನಂ ಚರಥಾಯ ತಕ್ಷಥುಃ ।**
**ನಿಷ್ಟೌಗ್ರ್ಯಮೂಹಥುರದ್ಭ್ಯಸ್ಪರಿ ವಿಶ್ವೇತ್ತಾ ವಾಂ ಸವನೇಷು ಪ್ರವಾಚ್ಯಾ ॥**

(ಋ. ಸಂ. ೧೦-೩೯-೪)

ಈ ಋಕ್ಕಿನಲ್ಲಿ ಚ್ಯವಾನ ಶಬ್ದಪ್ರಯೋಗವಿರುವುದನ್ನು ಉದಹರಿಸಿ—

**ಯುವಾಂ ಚ್ಯವನಂ ಸನಯಂ ಪುರಾಣಂ ಯಥಾ ರಥಂ ಪುನರ್ಯುವಾನಂ ಚರಣಾಯ ತಕ್ಷಥುಃ ॥ ಯುವಾ ಪ್ರಯೌತೀಕರ್ಮಾಣಿ । ತಕ್ಷತಿಃ ಕರೋತಿಕರ್ಮಾ** (ನಿ. ೪-೧೯) ಅಶ್ವಿನೀದೇವತೆಗಳನ್ನು ಸ್ತುತಿಮಾಡುವ ವೃದ್ಧನಾದ ಚ್ಯವನಋಷಿಯನ್ನು ಯೌವನವುಳ್ಳವನನ್ನಾಗಿ ನಾಸತ್ಯರು ಮಾಡಿದರೆಂದು ವ್ಯಾಖ್ಯಾನ ಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

ಜರಂತಮ್—ಜ್ಯಾಷ್ ವಯೋಹಾನೌ ಧಾತು. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಲಡರ್ಥದಲ್ಲಿ ಶತೃ ಪ್ರತ್ಯಯ ಬಂದಾಗ ಶಪ್ ವಿಕರಣ ಬರುತ್ತದೆ ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಜರತ್ ಶಬ್ದವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್—**(ಪಾ. ಸೂ ೬-೧-೧೮೬) ಎಂಬುದರಿಂದ ಅನು ದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾವಿಭಕ್ತಿಗೆ ಅಮ್ ಪರವಾದಾಗ ಉಗಿತ್ತಾದುದರಿಂದ ನುಮಾಗಮ.

**ಯುವಾನಮ್**—ಯು ಮಿಶ್ರಣೇ ಧಾತು. **ಕನಿನ್ ಯುವೃಷಿ**—(ಉ. ಸೂ. ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅಮಿನಲ್ಲಿ ಉಪಧಾದೀರ್ಘ.

**ಚಕ್ರಥುಃ**—ಡುಕೃಞ್ ಕರಣೇ. ಲಿಟ್ ಮಧ್ಯಮಪುರುಷದ್ವಿವಚನಾಂತರೂಪ. ನಿಘಾತಸ್ವರ ಬರುತ್ತದೆ.

**ಯುವೋಃ**—ಯುಷ್ಮದ್ ಶಬ್ದ. ಷಷ್ಠೀ ದ್ವಿವಚನ ಪರವಾದಾಗ **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ **ಯೋಽಚಿ** (ಪಾ. ಸೂ. ೭-೨-೮೯) ಎಂಬುದರಿಂದ ಯತ್ವ ಬರುವುದಿಲ್ಲ. ಮಪರ್ಯಂತಕ್ಕೆ **ಯುವಾವೌ ದ್ವಿವಚನೇ** (ಪಾ. ಸೂ. ೭-೨-೯೨) ಎಂಬುದರಿಂದ ಯುವ ಎಂಬ ಆದೇಶ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ಸೂತ್ರದಿಂದ ದಕಾರಕ್ಕೆ ಲೋಪ. **ಅತೋ ಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಉಳಿದಿರುವ ಅಕಾರದೊಡನೆ ಪರರೂಪ. ಓಕಾರರೂಪಗುಣ ಪರವಾದುದರಿಂದ ಪುನಃ **ಅತೋಗುಣೇ** ಎಂಬುದರಿಂದ ಪರರೂಪ. ಉದಾತ್ತಸ್ಥಾನದಲ್ಲಿ ಏಕಾದೇಶ ಬಂದುದರಿಂದ **ಏಕಾದೇಶ ಉದಾತ್ತೇನೋದಾತ್ತಃ** (ಪಾ ಸೂ. ೮-೨-೫) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಶ್ರಿಯಾ—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಅವೃಣೀತ**—ವೃಙ್ ಸಂಭಕ್ತೌ ಧಾತು. ಕ್ರ್ಯಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಅದು ಹಲಾದಿಯಾದುದರಿಂದ **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣಕ್ಕೆ ಈತ್ವ ಬರುತ್ತದೆ. ಋಕಾರದ ಪರದಲ್ಲಿರುವುದರಿಂದ ಅದಕ್ಕೆ ಣತ್ವ ಬರುತ್ತದೆ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥

॥ ಸಂಹಿತಾಪಾಠಃ ॥

ಯುವಂ ತುಗ್ರಾಯ ಪೂರ್ವ್ಯೇಭಿರೇವೈಃ ಪುನರ್ಮನ್ಯಾವಭವತಂ ಯುವಾನಾ ।
ಯುವಂ ಭುಜ್ಯುಮರ್ಣಸೋ ನಿಃ ಸಮುದ್ರಾದ್ವಿಭಿರೂಹಥು-ರ್ಋಜ್ರೇಭಿರಶ್ವೈಃ ॥ ೧೪ ॥

॥ ಪದಪಾಠಃ ॥

ಯುವಂ । ತುಗ್ರಾಯ । ಪೂರ್ವ್ಯೇಭಿಃ । ಏವೈಃ । ಪುನಃऽಮನ್ಯೌ । ಅಭವತಂ । ಯುವಾನಾ ।
ಯುವಂ । ಭುಜ್ಯುಂ । ಅರ್ಣಸಃ । ನಿಃ । ಸಮುದ್ರಾತ್ । ವಿऽಭಿಃ । ಊಹಥುಃ । ಋಜ್ರೇಭಿಃ । ಅಶ್ವೈಃ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಯುವಾನಾ ದುಃಖಾನಾಂ ಯೊಪಯಿತಾರಾವಶ್ವಿನೌ ಯುವಂ ಯುವಾಂ ಪೂರ್ವ್ಯೇಭಿಃ । ಪುರಾಣನಾಮ್ನೈತತ್ । ಪೂರ್ವಕಾಲೀನೈಃ ಕ್ಷಿರಂತನೈರೇನ್ಯೈಃ ಸ್ತುತ್ಯಂ ಪ್ರತಿ ಗಂತೃಭಿಃ ಸ್ತೋತ್ರೈಸ್ತುಗ್ರಾಯ ಭುಜ್ಯೋರ್ಜನಕಸ್ಯ ಸಂಬಂಧಿಭಿಃ ಪುನರ್ಮನ್ಯಾ ಯಥಾ ಭುಜ್ಯೋಃ ಸಮುದ್ರಗಮನಾತ್ಪೂರ್ವಂ ಯುವಾಂ ಸ್ತೋತವ್ಯೌ ತಥಾ ಪುನರಪೀದಾನೀಂ ಸ್ತೋತವ್ಯಾವಭವತಂ । ಯದಾ ಯುವಾಂ ಸಮುದ್ರಮಧ್ಯೇ ಸೇನಯಾ ಸಹ ನಿಮಗ್ನಂ ಭುಜ್ಯುಂ ತುಗ್ರಸ್ಯ ಪುತ್ರಮರ್ಣಸೋಽರ್ಣಸ್ವತಃ ಪ್ರೌಢೋದಕಯುಕ್ತಾತ್ಸಮುದ್ರಾದಂಬುರಾಶೇಃ ಸಕಾಶಾದ್ವಿಭಿರ್ಗಂತೃಭಿರ್ನೌಭಿರೃಜ್ರೇಭಿಃ ಶೀಘ್ರಗತಿಯುಕ್ತೈರಶ್ವೈಶ್ಚ ನಿರೂಹಥುಃ ನಿರ್ಗಮಯ್ಯ ಪಿತೃಸಮೀಪಂ ಪ್ರಾಪಿತವಂತೌ । ತದಾನೀಂ ಪುನರಪ್ಯತಿಶಯೇನ ಸ್ತೋತವ್ಯೌ ಜಾತಾವಿತ್ಯರ್ಥಃ । ತುಗ್ರೋ ಹ ಭುಜ್ಯುಂ । ಋ ೧-೧೧೬-೩ । ಇತ್ಯತ್ರೋಕ್ತಮಾಖ್ಯಾನಮತ್ರಾಪ್ಯನುಸಂಧೇಯಂ ॥ ಏನ್ಯೈಃ । ಇಣ್ ಗತೌ । ಇಣ್‌ಶೀಭ್ಯಾಂ ವನ್ । ಪುನರ್ಮನ್ಯಾ । ಮನ ಜ್ಞಾನೇ । ಅತ್ರ ಸ್ತುತ್ಯರ್ಥಃ । ಮನ್ಯತೇ ಸ್ತೌತೀತಿ ಮನಾ ಸ್ತುತಿಃ । ಪಚಾದ್ಯಚ್ । ಛಂದಸಿ ಚೇತ್ಯರ್ಹಾರ್ಥೇ ಯಃ । ಯುವಾನಾ । ಯು ಮಿಶ್ರಣಾಮಿಶ್ರಣಯೋಃ । ಕನಿನ್ಯುವೃಷೀತ್ಯಾದಿನಾ ಕನಿನ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಅರ್ಣಸಃ ಅರ್ಣಃಶಬ್ದಾದುತ್ಪನ್ನಸ್ಯ ಮತ್ವರ್ಥೀಯಸ್ಯ ಬಹುಲಂ ಛಂದಸೀತಿ ಬಹುಲಗ್ರಹಣಾಲ್ಲೋಪಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ ಇತಿ ವಿಭಕ್ತ್ಯುದಾತ್ತಸ್ಯ ವಿಕಲ್ಪನಾದಭಾವಃ । ಋಜ್ರೇಭಿಃ । ಋಜ ಗತಿಸ್ಥಾನಾರ್ಜನೋಪಾರ್ಜನೇಷು । ಋಜ್ರೇಂದ್ರೇತ್ಯಾದೌ ರನ್ಪ್ರತ್ಯಯಾಂತೋ ನಿಪಾತಿತಃ । ಬಹುಲಂ ಛಂದಸೀತಿ ಭಿಸ ಐಸಭಾವಃ ॥

॥ ಪ್ರತಿಪದಾರ್ಥ ॥

**ಯುವಂ**—ನೀವು (ಯಾವಾಗ) । **ಭುಜ್ಯುಂ**—(ತುಗ್ರಪುತ್ರನಾದ) ಭುಜ್ಯು ಎಂಬುವನನ್ನು । **ಅರ್ಣಸಃ**—ಕ್ಷುಬ್ಧವಾಗಿದ್ದ । **ಸಮುದ್ರಾತ್**–ಸಮುದ್ರದಿಂದ । **ವಿಭಿಃ**—ಗಮನಶೀಲವಾದ (ನೌಕೆಗಳಿಂದಲೂ) । **ಋಜ್ರೇಭಿಃ**—ಶೀಘ್ರಗಾಮಿಗಳಾದ । **ಅಶ್ವೈಃ (ಚ)**—ಅಶ್ವಗಳಿಂದಲೂ । **ನಿಃ ಊಹಥುಃ**—ವಹಿಸಿ ತಂದು ತಂದೆಯ ಸಮೀಪಕ್ಕೆ ಸೇರಿಸಿದಿರೋ (ಆಗ) । **ಯುವಾನಾ**—ದುಃಖಪರಿಹಾರಕರಾದ ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರು । **ಪೂರ್ವ್ಯೇಭಿಃ**—ಪುರಾತನವಾದ । **ಏನ್ಯೈಃ**—ಸ್ತುತಿವಾಕ್ಯಗಳಿಂದ । **ತುಗ್ರಾಯ**—ತುಗ್ರ ಎಂಬುವನಿಗೆ । **ಪುನಃ ಮನ್ಯಾ**—ಪುನಃ ಸ್ತುತ್ಯರಾಗಿ । **ಅಭವತಂ**—ಆದಿರಿ.

॥ ಭಾವಾರ್ಥ ॥

ದುಃಖಪರಿಹಾರಕರಾದ ಅಶ್ವಿನೀದೇವತೆಗಳೇ, (ತುಗ್ರಪುತ್ರನಾದ) ಭುಜ್ಯು ಎಂಬುವನನ್ನು ಕ್ಷುಬ್ಧವಾಗಿದ್ದ ಸಮುದ್ರಮಧ್ಯದಿಂದ ನೌಕೆ ಮತ್ತು ಅಶ್ವಗಳ (ಸಹಾಯದಿಂದ ಕರೆತಂದು ತಂದೆಗೆ) ಒಪ್ಪಿಸಿದಾಗ. ಆ ತುಗ್ರ ಎಂಬ ರಾಜನು ಪುರಾತನ ಸ್ತುತಿವಾಕ್ಯಗಳಿಂದ ನಿಮ್ಮನ್ನು ಪುನಃ ಪುನಃ ಸ್ತುತಿಸಿದನು.

## English Translation.

Dissipators of affliction, as you were praised with former praises by Tugra, so were you again adored (by him), when you brought Bhujyu safe from the tossing ocean with swift ships and rapid horses.

‖ ವಿಶೇಷವಿಷಯಗಳು ‖

**ಪುನರ್ಮನ್ಯಾ—ಮನ ಜ್ಞಾನೇ ಅತ್ರ ಸ್ತುತ್ಯರ್ಥಃ ಮನ್ಯತೇ ಸ್ತುತಿಂ ಇತಿ ಮನಾ । ಪಚಾದ್ಯಚ್ ಮನ್ಯಾ ।** ಸ್ತುತಿ ಎಂಬ ಅರ್ಥದಲ್ಲಿ ಇಲ್ಲಿ ಜ್ಞಾನಾರ್ಥಕವಾದ ಮನ ಧಾತುವು ಉಪಯುಕ್ತವಾಗಿದೆ. ಇದರ ಮೇಲೆ ಪಚಾದಿಗಣದ ಅಚ್ ಪ್ರತ್ಯಯವು ಬಂದು ಮನ್ಯಾ ಎಂದು ರೂಪವಾಗಿದೆ. ಪದೇಪದೇ ಸ್ತುತಿಮಾಡಲ್ಪಡುವವರೆಂದು ಅರ್ಥ. ಸ್ಕಂದಸ್ವಾಮಿಗಳು—

**ಪುನಶ್ಯಬ್ದೋತ್ರ ಅಂತರ್ಣೀತವೀಪ್ಸಾರ್ಥಃ । ಮನ್ಯತ ಇತಿ ಅರ್ಚತಿಕರ್ಮಾ ಕಾಂತಿಕರ್ಮಾ ವಾ ಪುನಃ ಪುನಃ ಸ್ತುತ್ಯಾ ಕಾಮ್ಯಾ ವಾ ।**

ಪುನಃ ಎಂಬ ಪದವು ಅನೇಕಾವರ್ತಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಮನ ಧಾತುವು ಸ್ತುತಿ ಎಂಬ ಅರ್ಥದಲ್ಲಿ ಅಥವಾ ಕಾಂತಿ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಅಶ್ವಿನೀದೇವತೆಗಳು ಪುನಃ ಪುನಃ ಸ್ತುತಿಯನ್ನು ಅಪೇಕ್ಷಿಸುವವರು. ಅಥವಾ ಆಯಾಯ ಪ್ರಾಣಿಗಳ ಇಷ್ಟವನ್ನು ನೆರವೇರಿಸುವುದರಿಂದ ಅವರವರಿಗೆ ಅಭಿಲಷಣೀಯರಾಗಿರುವವರು ಎಂದು ವ್ಯಾಖ್ಯಾನಮಾಡಿರುತ್ತಾರೆ.

**ಪೂರ್ವ್ಯೇಭಿಃ— ಪುರಾಣನಾಮ್ನೈತತ್ ಪೂರ್ವಕಾಲೀನೈಃ ।** ಪೂರ್ವಶಬ್ದವು **ಪ್ರತ್ನ, ಪ್ರದಿವ** ಎಂಬ ಆರು ಪುರಾಣನಾಮಗಳಲ್ಲಿ (ನಿ. ೩–೨೦) ಉಕ್ತವಾಗಿರುವುದರಿಂದ ಪುರಾಣ (ಹಳೆಯದು) ಎಂದು ಅರ್ಥ. ಅಶ್ವಿನೀದೇವತೆಗಳು ಬಹಳ ಹಿಂದಿನ ಕಾಲದಿಂದಲೂ ಸ್ತುತ್ಯರೇ ಆಗಿ ಇದ್ದು—ಈಗಲೂ ಅತಿಶಯವಾಗಿ ಸ್ತುತ್ಯರ್ಹರೆಂದು ವರ್ಣಿಸಿದೆ.

**ಭುಜ್ಯುಂ ಅರ್ಣಸಃ ಸಮುದ್ರಾತ್ ಋಜ್ರೇಭಿರಶ್ವೈಃ ನಿರೂಹಥುಃ—** ತುಗ್ರನೆಂಬ ರಾಜನು ಅಶ್ವಿನೀದೇವತೆಗಳನ್ನು ಬಹಳ ಕಾಲದಿಂದಲೂ ಸ್ತುತಿಮಾಡುತ್ತಾ ಇದ್ದನು. ಅವನ ಮಗನಾದ ಭುಜ್ಯುವೆಂಬವನು ಸಮುದ್ರ ಮಧ್ಯದಲ್ಲಿ ಸೇನೆಯೊಡನೆ ಮುಳುಗಿಹೋಗುವುದನ್ನು ನೋಡಿ ಅಶ್ವಿನೀದೇವತೆಗಳು ವೇಗವಾಗಿ ಸಂಚರಿಸುವ ನಾವೆಗಳನ್ನೂ, ಕುದುರೆಗಳನ್ನೂ ತಂದು ಅವನನ್ನು ನೀರಿನ ಮಧ್ಯದಿಂದ ರಕ್ಷಿಸಿ ದಡಕ್ಕೆ ತಂದು ಅವನ ಮನೆಗೆ ಸೇರಿಸಿದರು. ಆದಕಾರಣ ಇವರನ್ನು ತುಗ್ರರಾಜನು ಪುನಃ ಪುನಃ ಸ್ತುತಿಮಾಡುತ್ತಿದ್ದನು ಎಂಬ ಇತಿಹಾಸವು ಇಲ್ಲಿ ವರ್ಣಿತವಾಗಿರುತ್ತದೆ. ಈ ವಿಷಯವು—

**ತುಗ್ರೋ ಹ ಭುಜ್ಯುಮಶ್ವಿನೋದಮೇಘೇ ರಯಿಂ ನ ಕಶ್ಚಿನ್ಮಮೃವಾँ ಅವಾಹಾಃ ।**
**ತಮೂಹಥುರ್ನೌಭಿರಾತ್ಮನ್ವತೀಭಿರಂತರಿಕ್ಷಪ್ರುದ್ಭಿರಪೋದಕಾಭಿಃ ॥**

(ಋ. ಸಂ ೧-೧೧೬-೩)

ಎಂಬ ಋಕ್ಕಿನಲ್ಲಿ ಉಕ್ತವಾಗಿದ್ದರೂ ಇಲ್ಲಿ ಬೇರೆಯ ರೀತಿಯಿಂದ ವಿವೃತವಾಗಿರುತ್ತದೆ.

**ಸಮುದ್ರಾತ್**— **ಅಂಬುರಾಶೇಃ ಸಕಾಶಾತ್** ನಿರುಕ್ತಕಾರರು—

**ಸಮುದ್ರಃ ಕಸ್ಮಾತ್ ಸಮುತ್ ದ್ರವಂತ್ಯಸ್ಮಾದಾಪಃ ಸಮಭಿದ್ರವಂತ್ಯೇನಮಾಪಃ । ಸಮ್ಮೋದಂತೇಽಸ್ಮಿನ್ ಭೂತಾನಿ ಸಮುದಕೋ ಭವತಿ ಸಮುನತ್ತೀತಿ ವಾ ॥**

ಉದಕಗಳು ಇದರಿಂದ ಮೇಲಕ್ಕೆ ಚಿಮ್ಮಿ ಹಾರುತ್ತವೆ. ಅಥವಾ ನದಿಯೇ ಮೊದಲಾದವುಗಳ ಉದಕಗಳು ಎಲ್ಲವೂ ಇದರಲ್ಲಿ ಒಟ್ಟುಗೂಡುತ್ತವೆ ಅಥವಾ ಜಲಚರ ಪ್ರಾಣಿಗಳು ಉದಕರಾಶಿಯಾದ ಇದರಲ್ಲಿ ವಾಸಮಾಡುತ್ತಾ ಸಂತೋಷಪಡುತ್ತವೆ. ಅಥವಾ ಅತಿಶಯವಾಗಿ ಉದಕಗಳಿಂದ ಇದು ಕೂಡಿರುವುದು. ಅಥವಾ ಎಲ್ಲವನ್ನೂ ಉದಕದಿಂದ ಇದು ನೆನಸುವುದು. ಎಂದು ಸಮುದ್ರಶಬ್ದಕ್ಕೆ ನಾನಾವಿಧ ಅರ್ಥವನ್ನು ವಿವರಿಸಿ ಹೇಳಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಪೂರ್ವ್ಯೇಭಿಃ**—ಪೂರ್ವೇ ಭವಾಃ ಪೂರ್ವ್ಯಾಃ. ಯಪ್ರತ್ಯಯ. ತೃತೀಯಾಬಹುವಚನ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಭಿಸ್ಸಿಗೆ ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ.

**ಏವೈಃ**—ಇಣ್ ಗತೌ ಧಾತು. **ಇಣ್ ಶೀಙ್ ಭ್ಯಾಂ ವನ್** (ಉ. ಸೂ. ೧-೧೫೦) ಎಂಬುದರಿಂದ ಇದಕ್ಕೆ ವನ್ ಪ್ರತ್ಯಯ. ತನ್ನಿಮಿತ್ತವಾಗಿ ಇಕಾರಕ್ಕೆ ಗುಣ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ಪುನರ್ಮನ್ಯಾ**—ಮನ ಜ್ಞಾನೇ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಮನ್ಯತೇ ಸ್ತೌತಿ ಇತಿ ಮನಾ ಸ್ತುತಿಃ ಪಚಾದಿಯು ಆಕೃತಿಗಣವಾದುದರಿಂದ **ನಂದಿಗ್ರಹಪಚಾದಿಭ್ಯಃ**—(ಪಾ ಸೂ ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಇದಕ್ಕೆ ಅರ್ಹಾರ್ಥದಲ್ಲಿ **ಛಂದಸಿ ಚ** (ಪಾ. ಸೂ. ೫-೧-೬೭) ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಇದು ಪರವಾದಾಗ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ದ್ವಿವಚನಾಂತರೂಪ.

**ಅಭವತಮ್**— ಭೂ ಸತ್ತಾಯಾಂ ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಯುವಾನಾ**— ಯು ಮಿಶ್ರಣಾಮಿಶ್ರಣಯೋಃ ಧಾತು. ಅದಾದಿ. **ಕನಿನ್ ಯುವೃಷಿ**—(ಉ. ಸೂ. ೧-೧೫೭) ಎಂಬುದರಿಂದ ಇದಕ್ಕೆ ಕನಿನ್ ಪ್ರತ್ಯಯ. **ಅಚಿಶ್ನುಧಾತುಭ್ರುವಾಂ**—(ಪಾ. ಸೂ. ೬-೪-೭೭) ಎಂಬುದರಿಂದ ಉವಙಾದೇಶ. ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಸರ್ವನಾಮಸ್ಥಾನೇಚಾ**—ಎಂಬುದರಿಂದ ಉಪಧಾದೀರ್ಘ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅರ್ಣಸಃ**—ಅರ್ಣಃ ಅಸ್ಮಿನ್ ಅಸ್ತಿ ಎಂದು ಅರ್ಥವಿವಕ್ಷಾಮಾಡಿದಾಗ ಅಸಂತನಿಮಿತ್ತವಾಗಿ ಮತ್ವರ್ಥ ವಿನ್ ಪ್ರತ್ಯಯ ಬರುತ್ತದೆ. ಅದಕ್ಕೆ **ಬಹುಲಂ ಛಂದಸಿ** (ಪಾ. ಸೂ. ೫-೨-೧೨೨) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಲೋಪ. ಅರ್ಣಸ್ ಎಂದೇ ಉಳಿಯುತ್ತದೆ. ಪಂಚಮೀ ಏಕವಚನಾಂತರೂಪ.

ವಿಭಿಃ—ಏಕಾಚಾದುದರಿಂದ ಪರದಲ್ಲಿರುವ ವಿಭಕ್ತಿಗೆ ಉದಾತ್ತಸ್ವರ ಪ್ರಾಪ್ತವಾದರೂ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬ ವಚನಾನುಸಾರವಾಗಿ ಇಲ್ಲಿ ಭಿಸ್ಸಿಗೆ ಉದಾತ್ತಸ್ವರ ಬರುವುದಿಲ್ಲ.

**ಊಹಥುಃ**—ವಹ ಪ್ರಾಪಣೇ. ಧಾತು ಲಿಟ್ ಮಧ್ಯಮಪುರುಷ ದ್ವಿವಚನಾಂತರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಋಜ್ರೇಭಿಃ**—ಋಜ ಗತಿಸ್ಥಾನಾರ್ಜನೋಪಾರ್ಜನೇಷು. ಧಾತು. **ಋಜ್ರೇಂದ್ರಾಗ್ರವಜ್ರ**—(ಉ. ಸೂ. ೨-೧೮೬) ಎಂಬುದರಿಂದ ರನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ನಿತ್ತ್ವಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನ ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಅದಕ್ಕೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ ॥ ೧೪ ॥



॥ ಸಂಹಿತಾಪಾಠಃ ॥

ಅಜೋಹವೀದಶ್ವಿನಾ ತೌಗ್ರ್ಯೋ ವಾಂ ಪ್ರೋಳ್ಹಃ ಸಮುದ್ರಮ-
ವ್ಯಥಿರ್ಜಗನ್ವಾನ್ ।
ನಿಷ್ಟಮೂಹಥುಃ ಸುಯುಜಾ ರಥೇನ ಮನೋಜವಸಾ ವೃಷಣಾ
ಸ್ವಸ್ತಿ ॥ ೧೫ ॥

॥ ಪದಪಾಠಃ ॥

ಅಜೋಹವೀತ್ । ಅಶ್ವಿನಾ । ತೌಗ್ರ್ಯಃ । ವಾಂ । ಪ್ರಽಊಳ್ಹಃ । ಸಮುದ್ರಂ ।
ಅವ್ಯಥಿಃ । ಜಗನ್ವಾನ್ ।
ನಿಃ । ತಂ । ಊಹಥುಃ । ಸುಽಯುಜಾ । ರಥೇನ । ಮನಃಽಜವಸಾ । ವೃಷಣಾ ।
ಸ್ವಸ್ತಿ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ವಾಂ ಯುವಾಂ ತೌಗ್ರ್ಯಸ್ತುಗ್ರಪುತ್ರಃ ಪ್ರೋಳ್ಹಃ ಪಿತ್ರಾ ಪ್ರಾಪಿತಃ ಸಮುದ್ರಮಬ್ಧಿಂ ಜಗನ್ವಾನ್ಗಚ್ಛನ್ನುದಕೇ ನಿಮಗ್ನೋಽಸ್ಯವ್ಯಥಿರ್ವ್ಯಥಾಂ ಪೀಡಾಮಪ್ರಾಪ್ತ ಏವ ಸನ್ನಜೋಹವೀತ್ । ಸ್ತುತಿಭಿರಾಹ್ವಯತ್ । ತಮಾಹ್ವಾತಾರಂ ಹೇ ಮನೋಜವಸಾ ಮನೋವದ್ವೇಗಯುಕ್ತೌ ವೃಷಣಾ ಕಾಮಾಭಿವರ್ಷಕಾವಶ್ವಿನೌ ಸುಯುಜಾ ಸುಷ್ಠ್ವಶ್ವೈರ್ಯುಕ್ತೇನ ರಥೇನ ಸ್ವಸ್ತಿ ಕ್ಷೇಮಂ ಯಥಾ ಭವತಿ ತಥಾ ನಿರೂಹಥುಃ । ಜಲಾನ್ನಿರ್ಗಮಯ್ಯ ಯುವಾಂ ಪಿತೃಗೃಹಂ ಪ್ರಾಪಿತವಂತೌ ॥ ಜಗನ್ವಾನ್ । ಗಮೇರ್ಲಿಟಃ ಕ್ವಸುಃ । ವಿಭಾಷಾ ಗಮಹನವಿದವಿಶಾಮಿತಿ ವಿಕಲ್ಪನಾದಿಡಭಾವಃ । ಮ್ವೋಶ್ಚೇತಿ ಮಕಾರಸ್ಯ ನಕಾರಃ । ನಿಷ್ಟಂ । ಯುಷ್ಮತ್ತತ್ತತಕ್ಷುಃಷ್ವಂತಃಪಾದಮಿತಿ ಮೂರ್ಧನ್ಯಃ । ಮನೋಜವಸಾ । ಮನಸೋ ಜವ ಇವ ಜವೋ ಯಯೋಸ್ತೌ ತಥೋಕ್ತೌ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಪಾದಾದಿತ್ವಾದಾಮಂತ್ರಿತನಿಘಾತಾಭಾವೇ ಷಾಷ್ಠಿಕಮಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪ್ರೋಳ್ಹಃ**—ತಂದೆಯಿಂದ ಸಮುದ್ರ ಸಮೀಪಕ್ಕೆ ಕಳುಹಲ್ಪಟ್ಟ । **ತೌಗ್ರ್ಯಃ**—ತುಗ್ರಪುತ್ರನಾದ ಭುಜ್ಯುವು । **ಸಮುದ್ರಂ**—ಸಮುದ್ರಕ್ಕೆ । **ಜಗನ್ವಾನ್**—ಹೊರಟವನಾಗಿ । **ಅವ್ಯಥಿಃ**—(ನೀರಿನಲ್ಲಿ ಮುಳುಗಿದ್ದರೂ) ವ್ಯಥೆಯಿಲ್ಲದವನಾಗಿ । **ವಾಂ**—ನಿಮ್ಮಿಬ್ಬರನ್ನೂ । **ಅಜೋಹವೀತ್**—(ಸ್ತುತಿಸಿ) ಕರೆದನು । **ತಂ**—(ಸ್ತುತಿಸಿದ) ಅವನನ್ನು । **ಮನೋಜವಸಾ**—ಮನೋವೇಗವುಳ್ಳ । **ವೃಷಣಾ**—ಕಾಮಾಭಿವರ್ಷಕರಾದ (ನೀವು) । **ಸುಯುಜಾ**—ಒಳ್ಳೆಯ ಅಶ್ವಗಳಿಂದ ಯುಕ್ತವಾದ । **ರಥೇನ**—ರಥದಿಂದ । **ಸ್ವಸ್ತಿ**—ಸುರಕ್ಷಿತವಾಗಿ । **ನಿಃ ಊಹಥುಃ**—(ನೀರಿನಿಂದ ಹೊರಕ್ಕೆ ತಂದು ತಂದೆಯ ಹತ್ತಿರಕ್ಕೆ) ಕರೆದು ಕೊಂಡು ಹೋದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ತಂದೆಯಿಂದ ಸಮುದ್ರ ಸಮೀಪಕ್ಕೆ ಕಳುಹಲ್ಪಟ್ಟ ಭುಜ್ಯುವು ಸಮುದ್ರ, ಪ್ರಯಾಣಕ್ಕೆ ಹೊರಟು (ನೀರಿನಲ್ಲಿ ಮುಳುಗಿಹೋಗುತ್ತಿದ್ದರೂ) ಚಿಂತಾರಹಿತನಾಗಿ, ನಿಮ್ಮನ್ನು ಸ್ತುತಿಸಿದನು: ಸ್ತುತಿಸಿದ ಅವನನ್ನು ಮನೋವೇಗವುಳ್ಳವರೂ, ಕಾಮಾಭಿವರ್ಷಕರೂ ಆದ ನೀವು ಉತ್ತಮಾಶ್ವಯುಕ್ತವಾದ ರಥದಲ್ಲಿ ಸುರಕ್ಷಿತವಾಗಿ ತಂದೆಯ ಹತ್ತಿರಕ್ಕೆ ಕರೆದುಕೊಂಡು ಹೋದಿರಿ.

## English Translation.

The son of Tugra, brought back by you, Aswins, (to his father), glorified you when he had crossed the ocean in safety, and you bore him showerers (of benefits), with your well-harnessed car, swift as thought, to safety.

|| ವಿಶೇಷವಿಷಯಗಳು ||

**ಮನೋಜವಸಾ**—**ಮನೋವತ್ ವೇಗಯುಕ್ತೌ । ಮನಸೋ ಜವ ಇವ ಜವೋ ಯಯೋಸ್ತೌ ।** ಮನಸ್ಸಿನ ಹಾಗೆ ವೇಗದಿಂದ ಕೂಡಿದವರು. ಅಥವಾ ಮನಸ್ಸಿನ ವೇಗದ ಹಾಗೆ ಇರುವ ವೇಗವನ್ನು ಹೊಂದಿರುವ ಮನಸ್ಸುಳ್ಳವರು ಅಶ್ವಿನೀದೇವತೆಗಳು ಎಂದು ಅರ್ಥ.

**ಸ್ವಸ್ತಿ**—**ಕ್ಷೇಮಂ ಯಥಾ ಭವತಿ ತಥಾ ।** ಸ್ವಸ್ತಿ ಎಂಬ ಶಬ್ದವನ್ನು ಕ್ರಿಯಾವಿಶೇಷಣವನ್ನಾಗಿ—ಕ್ಷೇಮವಾಗಿ ಅಥವಾ ಸುಖವಾಗಿರುವಂತೆ ಎಂದು ಅರ್ಥಮಾಡಿ **ನಿರೂಹಥುಃ** ಎಂಬ ಕ್ರಿಯಾಪದದೊಡನೆ ಅನ್ವಯ ಮಾಡಿ ಸಾಯಣರು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು ಸ್ವಸ್ತಿ ಎಂಬ ಶಬ್ದವು ಇಲ್ಲಿ ಅಂತರ್ಭಾವಿತಣ್ಯರ್ಥವಾಗಿರುವುದು (ಪ್ರೇರಣಾದಿಂದ ಕೂಡಿರುವ ಅರ್ಥದಿಂದ ಕೂಡಿರುವುದು) ಆದ್ದರಿಂದ **ಸ್ವಸ್ತಿಮಂತಂ** ಕ್ಷೇಮವುಳ್ಳವನನ್ನಾಗಿ ಎಂದು ಅರ್ಥವನ್ನು ಹೇಳಿರುತ್ತಾರೆ.

ಈ ಋಕ್ಕಿನಲ್ಲಿಯೂ ಹಿಂದೆ ೧-೧೧೬-೩ ರಲ್ಲಿಯೂ, ೧-೧೧೭-೧೪ ರಲ್ಲಿಯೂ ಉಕ್ತವಾಗಿರುವ ಭುಜ್ಯುವನ್ನು ರಕ್ಷಿಸಿದ ಅಶ್ವಿನೀದೇವತೆಗಳ ಪ್ರಭಾವವು ಪ್ರಕಾರಾಂತರದಿಂದ ವರ್ಣಿತವಾಗಿದೆ.

ನಿರುಕ್ತಕಾರರು, **ಪಥ್ಯಾ ಸ್ವಸ್ತಿಃ**—**ಪಥಾ ಅಂತರಿಕ್ಷಂ ತನ್ನಿವಾಸಾತ್ ।** (ನಿ. ೧೧-೪೫) ಸ್ವಸ್ತಿ ಎಂಬುವುದು ಅಂತರಿಕ್ಷದಲ್ಲಿ ವಾಸಮಾಡುವುದರಿಂದ ಪಥ್ಯಾ ಎಂಬ ಶಬ್ದವಾಚ್ಯವಾಗಿರುವುದು ಎಂದು ಅರ್ಥವನ್ನು ವಿವರಿಸಿ.

**ಸ್ವಸ್ತಿ ನಃ ಪಥ್ಯಾಸು ಧನ್ವಸು ಸ್ವಸ್ತ್ಯ೧ ಪ್ಸು ವೃಜನೇ ಸ್ವರ್ವತಿ ।**
**ಸ್ವಸ್ತಿ ನಃ ಪುತ್ರಕೃಥೇಷು ಯೋನಿಷು ಸ್ವಸ್ತಿ ರಾಯೇ ಮರುತೋ ದಧಾತನ ॥**
**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**
**ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥**

(ಋ. ಸಂ. ೧೦-೬೩—೧೫ ಮತ್ತು ೧೬)

ಸ್ವಸ್ತಿ ಎಂಬುವುದು ಅಂತರಿಕ್ಷದಲ್ಲಿರುವುದು. ಇದು ಎಲ್ಲ ದೇವತೆಗಳಿಗಿಂತಲೂ ಸ್ತುತ್ಯವಾಗಿರುವುದು, ಶ್ರೇಷ್ಠವಾಗಿರುವುದು. ಇದು ಧನವನ್ನು ಕೊಡುವುದು, ಉದಕವು ದೊರೆಯುವ ಹಾಗೆ ಮಾಡುವುದು, ಈ ಪ್ರಕಾರವಾಗಿರುವ ಸ್ವಸ್ತಿಯು ನಮ್ಮನ್ನು ಮನೆಯಲ್ಲಿಯೂ, ಅರಣ್ಯದಲ್ಲಿಯೂ, ಸಂಚರಿಸುವಾಗಲೂ ರಕ್ಷಿಸಲಿ. ಈ ಸ್ವಸ್ತಿಯನ್ನು ರಶ್ಮಿಗಳು ಹವಿಸ್ಸನ್ನು ಅರ್ಪಿಸುವುದರ ಮೂಲಕ ರಕ್ಷಿಸಲಿ. ಈ ದೇವಿಯು ಪ್ರಕಾಶಿಸುತ್ತಾ ದೇವತೆಗಳನ್ನು ರಕ್ಷಿಸಲಿ. ನಮ್ಮ ವಿಷಯದಲ್ಲಿ ಈ ಸ್ವಸ್ತಿಯು ಒಳ್ಳೆಯ ಅಭಿಪ್ರಾಯವುಳ್ಳದ್ದಾಗಿ ಇರಲಿ ಎಂದು ವ್ಯಾಖ್ಯಾನಮಾಡಿರುವರು.

|| ವ್ಯಾಕರಣಪ್ರಕ್ರಿಯಾ ||

**ಅಜೋಹವೀತ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ ಯಙ್‌ಲುಗಂತದ ಮೇಲೆ ಲಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಕ್ಕೆ ಲೋಪ. **ಅಭ್ಯಸ್ತಸ್ಯ ಚ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨)

ಎಂಬುದರಿಂದ ಚುತ್ವ ಬಂದಾಗ **ಗುಣೋ ಯಙ್ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. **ಯಙೋ ವಾ** (ಪಾ ಸೂ. ೭-೩-೯೪) ಎಂಬುದರಿಂದ ಅಪೃಕ್ತವಾದ ತಿಪ್ಪಿಗೆ ಈಟಾಗಮ. ತನ್ನಿಮಿತ್ತವಾಗಿ ಉಕಾರಕ್ಕೆ ಗುಣ, ಅವಾದೇಶ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ತೌಗ್ರ್ಯಃ**—ತುಗ್ರಸ್ಯ ಅಪತ್ಯಮ್ ಪುಮಾನ್ ತೌಗ್ರ್ಯಃ. ಗರ್ಗಾದಿಯಲ್ಲಿ ಸೇರಿರುವುದರಿಂದ ಯಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ.

**ಜಗನ್ವಾನ್**—ಗಮ್ಲೃ ಗತೌ. ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. **ವಿಭಾಷಾ ಗಮಹನವಿದವಿಶಾಮ್** (ಪಾ. ಸೂ. ೭-೨-೬೮) ಎಂಬುದರಿಂದ ವಿಕಲ್ಪವಾಗಿ ಇಡಾಗಮ ವಿಧಾನಮಾಡಿರುವುದರಿಂದ ಇಲ್ಲಿ ಇಡಾಗಮ ಬರುವುದಿಲ್ಲ ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಬಂದಾಗ **ಕುಹೋಶ್ಚುಃ** ಎಂಬುದರಿಂದ ಜಕಾರಾದೇಶ. **ಮ್ವೋಶ್ಚ** ಎಂಬುದರಿಂದ ವಕಾರಾದಿ ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಮಕಾರಕ್ಕೆ ನಕಾರಾದೇಶ. ಜಗನ್ವಸ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ ಚಾಧಾತೋಃ** ಎಂಬುದರಿಂದ ಉಪಧಾದೀರ್ಘ. ಪ್ರತ್ಯಯ ಉಗಿತ್ತಾದುದರಿಂದ ನುಮಾಗಮ. **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ. ಸಂಯೋಗಾಂತಲೋಪದಿಂದ ತಕಾರಲೋಪ. ಇದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ನಿಷ್ಟಮ್**—ನಿಃ+ತಮ್ ಎಂದಿರುವಾಗ **ಯುಷ್ಮತ್ತತ್ತಕ್ಷುಃಷ್ವಂತಃ ಪಾದಮ್** (ಪಾ. ಸೂ. ೮-೩-೧೦೩) ಎಂಬುದರಿಂದ ವಿಸರ್ಗಕ್ಕೆ ಮೂರ್ಧನ್ಯಾದೇಶ ಬರುತ್ತದೆ.

**ಸುಯುಜಾ**—ಸುಷ್ಠು ಯುಕ್ ಯೋಗಃ ಯಸ್ಯ ಸಃ. ಯುಜಿರ್ ಯೋಗೇ ಧಾತು. ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮನೋಜವಸಾ**—ಮನಸೋ ಜವ ಇವ ಜವೋ ಯಯೋಃ ತೌ ಮನೋಜವಸೌ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ. ಆಮಂತ್ರಿತ ಸಂಜ್ಞೆ ಇದ್ದರೂ ಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಸ್ತಿ**—ಸು ಉಪಪದವಾಗಿರುವಾಗ, ಅಸ ಭುವಿ. ಈ ಧಾತುವಿಗೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಬರುವುದರಿಂದ **ಅಸ್ತೇರ್ಭೂಃ** (ಪಾ. ಸೂ. ೨-೪-೫೨) ಎಂಬುದರಿಂದ ಧಾತುವಿಗೆ ಭೂಭಾವ ಬರುವುದಿಲ್ಲ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೧೫ ॥



॥ ಸಂಹಿತಾಪಾಠಃ ॥

ಅಜೋಹವೀದಶ್ವಿನಾ ವರ್ತಿಕಾ ವಾಮಾಸ್ನೋ ಯತ್ಸೀಮಮುಂ-
ಚತಂ ವೃಕಸ್ಯ ।
ವಿ ಜಯುಷಾ ಯಯಥುಃ ಸಾನ್ವದ್ರೇರ್ಜಾತಂ ವಿಷ್ವಾಚೋ
ಅಹತಂ ವಿಷೇಣ ॥ ೧೬ ॥

॥ ಪದಪಾಠಃ ॥

ಅಜೋಹವೀತ್ । ಅಶ್ವಿನಾ । ವರ್ತಿಕಾ । ವಾಂ । ಆಸ್ನಃ । ಯತ್ । ಸೀಂ ।
ಅಮುಂಚತಂ । ವೃಕಸ್ಯ ।
ವಿ । ಜಯುಷಾ । ಯಯಥುಃ । ಸಾನು । ಅದ್ರೇಃ । ಜಾತಂ । ವಿಷ್ವಾಚಃ ।
ಅಹತಂ । ವಿಷೇಣ ॥ ೧೬ ॥

॥ ಸಾಯಣಭಾಷ್ಯಂ ॥

ಆಸ್ನೋ ವೃಕಸ್ಯ । ಋ. ೧-೧೧೬-೧೪ । ಇತ್ಯರ್ಧರ್ಚೇ ಯದುಕ್ತಂ ತದತ್ರ ಪೂರ್ವಾರ್ಧೇನ ಪ್ರತಿಪಾದ್ಯತೇ । ವರ್ತಿಕಾ ಚಟಕಸದೃಶಸ್ಯ ಪಕ್ಷಿಣಃ ಸ್ತ್ರೀ ವೃಕೇಣಾರಣ್ಯಶುನಾ ಗ್ರಸ್ತಾ ಸತೀ ಹೇ ಅಶ್ವಿನೌ ವಾಂ ಯುವಾಂ ತದಾಜೋಹವಿತ್ ಆಹೂತವತೀ ಯತ್ಸೀಂ ಯದಾ ಖಲು ವೃಕಸ್ಯಾಸ್ನ ಆಸ್ಯಾದ-ಮುಂಚತಂ ವರ್ತಿಕಾಮಮೋಚಯತಂ । ಅಪಿ ಚ ಯುವಾಂ ಜಯುಷಾ ಜಯಶೀಲೇನ ರಥೇನಾದ್ರೇಃ ಪರ್ವತಸ್ಯ ಸಾನು ಸಮುಚ್ಛ್ರಿತಪ್ರದೇಶಂ ವಿ ಯಯಥುಃ । ಶತ್ರುಭಿರಾವೇಷ್ಟಿತಂ ಜಾಹುಷಾಖ್ಯಂ ಸ್ತೋತಾರಂ ಶತ್ರುಸಮೂಹಾನ್ನಿರ್ಗಮಯ್ಯ ತೇನ ಸಹಾನ್ಯೈರ್ಗಂತುಮಶಕ್ಯಂ ಪರ್ವತಾಗ್ರಂ ಗತವಂತಾ-ವಿತ್ಯರ್ಥಃ । ತದುಕ್ತಂ ಪರಿವಿಷ್ಟಂ ಜಾಹುಷಮಿತ್ಯತ್ರ । ಋ. ೧-೧೧೬-೨೦ । ತಥಾ ವಿಷ್ವಾಚೋ ವಿವಿಧ-ಗತಿಯುಕ್ತಸ್ಯೈತತ್ಸಂಜ್ಞಸ್ಯಾಸುರಸ್ಯ ಜಾತಮುತ್ಪನ್ನಮಪತ್ಯಂ ವಿಷೇಣ ಕ್ಷ್ವೇಡೇನಾಹತಂ । ಯುವಾಂ

**ಹತವಂತೌ । ಯದ್ವಾ । ವರ್ತತೇ ಪ್ರತಿದಿವಸಮಾವರ್ತತ ಇತಿ ವರ್ತಿಕೋಷಾಃ । ವೃಕ ಇತಿ ವಿವೃತಜ್ಯೋತಿಷ್ಕಃ ಸೂರ್ಯ ಉಚ್ಯತೇ । ತೇನ ಗ್ರಸ್ತಾ ಸತೀ ಸಾ ಹೇ ಅಶ್ವಿನೌ ಯುವಾಮಜೋಹವೀತ್ । ಆಹ್ವಯತ್ । ಯದಾ ಖಲು ಯುವಾಂ ವೃಕಸ್ಯ ಸೂರ್ಯಸ್ಯಾಸ್ನ ಆಸ್ಯಸ್ಥಾನೀಯಾನ್ಮಂಡಲಾದಮುಂಚತಂ ಅಮೋಚಯತಂ । ಸೂರ್ಯೇಣೈಕೀಭೂತಾಮುಷಸಂ ಪೃಥಕ್ಕೃತ್ಯೋದಯಾತ್ಪೂರ್ವಂ ರಾತ್ರೇರಪರಭಾಗೇ ಸ್ಥಾಪಿತವಂತಾವಿತ್ಯರ್ಥಃ । ತಥಾ ಚ ಯಾಸ್ಕಃ । ಆದಿತ್ಯೋಽಪಿ ವೃಕ ಉಚ್ಯತೇ ಯದಾವೃಂಕ್ತೇ । ಆಹ್ವಯದುಷಾ ಅಶ್ವಿನಾವಾದಿತ್ಯೇನಾಭಿಗ್ರಸ್ತಾ ತಾವಶ್ವಿನೌ ಪ್ರಮುಮುಚತುರಿತ್ಯಾಖ್ಯಾನಂ । ನಿ. ೫-೨೧ । ಇತಿ । ಅಪಿ ಚ ಜಯುಷಾ ಜಯಶೀಲೇನ ರಥೇನಾದ್ರೇರ್ಮೇಘಸ್ಯ ಸಾನು ಸಮುಚ್ಛ್ರಿತಪ್ರದೇಶಂ ವೃಷ್ಟಿಚಿಕೀರ್ಷಯಾ ವಿಶೇಷೇಣ ಯಯಥುಃ । ಯುವಾಂ ಗತವಂತೌ । ಗತ್ವಾ ಚ ವಿಷ್ವಾಚೋ ವಿವಿಧಗತಿಯುಕ್ತಸ್ಯ ಮೇಘಸ್ಯ ಸಂಬಂಧಿನಾ ವಿಷೇಣೋದಕೇನ ಜಾತಮುತ್ಪನ್ನಂ ಸರ್ವಂ ಭೂತಜಾತಮಹತಂ । ಆಗಮಯತಂ । ವೃಷ್ಟಿಂ ಕೃತವಂತಾವಿತ್ಯರ್ಥಃ ॥ ಅಜೋಹವೀತ್ । ಹ್ವಯತೇರ್ಯಙ್ಲುಗಂತಾಲ್ಲಙಿ ತಿಪಿ ಯಙೋ ವೇತೀಡಾಗಮಃ । ಅಭ್ಯಸ್ತಸ್ಯ ಚೇತಿ ದ್ವಿರ್ವಚನಾತ್ಪೂರ್ವಮೇವ ಹ್ವಯತೇಃ ಸಂಪ್ರಸಾರಣಂ । ಆಸ್ನಃ । ಪದ್ದನ್ನಿತ್ಯಾದಿನಾಸ್ಯಶಬ್ದಸ್ಯಾಸನ್ನಾದೇಶಃ । ಅಲ್ಲೋಪೋಽನ ಇತ್ಯಕಾರಲೋಪಃ । ಜಯುಷಾ । ಜಿ ಜಯೇ । ಔಣಾದಿಕ ಉಸಿಪ್ರತ್ಯಯಃ । ವಿಷ್ವಾಚಃ । ವಿಷು ನಾನಾಭಿಮುಖ್ಯೇನಾಂಚತೀತಿ ವಿಗ್ರಹಃ । ಋತ್ವಿಗಿತ್ಯಾದಿನಾ ಕ್ವಿನ್ । ಅಚ ಇತ್ಯಕಾರಲೋಪಃ । ಚಾವಿತಿ ದೀರ್ಘಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವೇ ಪ್ರಾಪ್ತೇ ಚಾವಿತ್ಯಂತೋದಾತ್ತತ್ವಂ । ಅಹತಂ । ಹನ ಹಿಂಸಾಗತ್ಯೋಃ । ಲಙ್ಯದಾದಿತ್ವಾಚ್ಛಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ವರ್ತಿಕಾ**— ವರ್ತಿಕಾ ಎಂಬ ಪಕ್ಷಿಯು (ತೋಳದಿಂದ ಗ್ರಸ್ತವಾಗಿ) **ವಾಂ**— ನಿಮ್ಮಿಬ್ಬರನ್ನೂ । **ಯತ್ ಸೀಂ**— ಯಾವಾಗ । **ಅಜೋಹವೀತ್**—(ಸ್ತುತಿಸಿ) ಕರೆಯಿತೋ । (**ತದಾ**— ಆವಾಗ ಅದನ್ನು) । **ವೃಕಸ್ಯ**— ತೋಳದ । **ಆಸ್ನಃ**— ಬಾಯಿಯಿಂದ । **ಅಮುಂಚತಂ**— ಬಿಡಿಸಿದಿರಿ । (**ಅಪಿ ಚ**— ಮತ್ತು) । **ಜಯುಷಾ**— ಜಯಶೀಲವಾದ (ರಥದಿಂದ) । **ಅದ್ರೇಃ**— ಪರ್ವತದ । **ಸಾನು**— ಮೇಲ್ಭಾಗಕ್ಕೆ । **ವಿ ಯಯಥುಃ**—(ಜಾಹುಷನೊಡನೆ) ಹೋದಿರಿ । (**ತಥಾ**— ಅದೇ ರೀತಿಯಲ್ಲಿ) । **ವಿಷ್ವಾಚಃ**— ವಿವಿಧಗತಿಯುಳ್ಳ (ವಿಷ್ವಾಂಚನೆಂಬ ಅಸುರನ) । **ಜಾತಂ**— ಮಗನನ್ನು । **ವಿಷೇಣ**— ವಿಷದಿಂದ । **ಅಹತಂ**— ವಧಿಸಿದಿರಿ । ಅಥವಾ [**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ವರ್ತಿಕಾ**—(ಪ್ರತಿ ದಿವಸವೂ) ಆವರ್ತಿಸುವ ಉಷಸ್ಸು । **ವಾಂ**— ನಿಮ್ಮಿಬ್ಬರನ್ನು । **ಯತ್ಸೀಂ**— ಯಾವಾಗ । **ಅಜೋಹವೀತ್**—(ಸೂರ್ಯನಿಂದ ಗ್ರಸ್ತಳಾಗಿ) ಸ್ತುತಿಸಿದಳೋ । (**ತದಾ**— ಆಗ) । **ವೃಕಸ್ಯ**—(ಸಮಸ್ತವನ್ನೂ ಆವರಿಸುವ) ಸೂರ್ಯನ । **ಆಸ್ನಃ**— ಮುಖಸ್ಥಾನೀಯವಾದ (ಮಂಡಲದಿಂದ) । **ಅಮುಂಚತಂ**— ಬಿಡಿಸಿದಿರಿ (ಪ್ರತ್ಯೇಕಿಸಿ ರಾತ್ರಿಯ ಕೊನೆಯ ಭಾಗದಲ್ಲಿಟ್ಟಿರಿ) । (**ಅಪಿ ಚ**— ಮತ್ತೂ) । **ಜಯುಷಾ**— ಜಯಶೀಲವಾದ ರಥದ ಮೇಲೆ । **ಅದ್ರೇಃ**— ಮೇಘದ ।

**ಸಾನು**—ಮೇಲ್ಭಾಗಕ್ಕೆ । **ವಿ ಯಯುಥುಃ**—(ಮಳೆಗರೆಯುವ ಉದ್ದೇಶದಿಂದ) ಹೊರಟಿರಿ । (ಹೋಗಿ) **ವಿಷ್ವಾಚಃ**—ವಿವಿಧಗತಿಯುಕ್ತವಾದ ಮೇಘದ (ಸಂಬಂಧಿಯಾದ) । **ವಿಷೇಣ**—ಉದಕದಿಂದ । **ಜಾತಂ**—ಸಕಲ ಭೂತ ಜಾತವನ್ನೂ । **ಅಹತಂ**—(ವೃಷ್ಟಿಯನ್ನು ಕರೆದಿರಿ) ಸೇರಿಸಿದಿರಿ.]

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ವರ್ತಿಕಾ ಎಂಬ ಪಕ್ಷಿಯು (ನಿಮ್ಮನ್ನು) ಸ್ತುತಿಸಿದಾಗ (ಅದನ್ನು) ತೋಳದ ಬಾಯಿಂದ ಬಿಡಿಸಿದಿರಿ; ಜಯಶೀಲವಾದ (ರಥದಮೇಲೆ) ಜಾಹುಷ ಎಂಬುವನೊಡನೆ ಯಾರಿಗೂ ಹತ್ತಲಸಾಧ್ಯವಾದ ಬೆಟ್ಟದ ಮೇಲಕ್ಕೆ ಹೋದಿರಿ; (ಹಾಗೆಯೇ) ವಿಶ್ವಾಂಚನೆಂಬ ಅಸುರನ ಮಗನನ್ನು ವಿಷದಿಂದ ಕೊಂದಿರಿ ಅಥವಾ (ಜಗದಾವರಕನಾದ ಸೂರ್ಯನೊಡನೆ ಸೇರಿ ಹೋಗಿದ್ದ) ಉಷಸ್ಸು ನಿಮ್ಮನ್ನು ಸ್ತುತಿಸಿದಾಗ, ಆಕೆಯನ್ನು ಸೂರ್ಯಮಂಡಲದಿಂದ ಪ್ರತ್ಯೇಕಿಸಿ ರಾತ್ರಿಯ ಕೊನೆಯಲ್ಲಿ ಇರಿಸಿದಿರಿ; ಜಯಶೀಲವಾದ ರಥದಲ್ಲಿ (ಕುಳಿತು) ಮೇಘಗಳ ಮೇಲ್ಭಾಗಕ್ಕೆ (ಮಳೆಗರೆಯುವುದಕ್ಕಾಗಿ) ಹೊರಟು ವಿವಿಧ ಗತಿಯುಳ್ಳ ಮೇಘದ ಉದಕವನ್ನು ಸಕಲ ಭೂತಜಾತಗಳಿಗೆ ದೊರಕಿಸಿದಿರಿ.

## English Translation.

The quaii glorified you, Aswins, when you saved her from the mouth of the wolf; you carried off (Jahusha) to the top of the mountain in our triumphant chariot; and slew the son of Vishwanch with a poisoned (arrow).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು (ಕಾಡುನಾಯಿ) ತೋಳನು ಹಿಡಿದು ಕೊಂಡು ಇದ್ದ ಒಂದು ಗುಬ್ಬಚ್ಚಿಯನ್ನು ಬಿಡಿಸಿ ಅದಕ್ಕೆ ಪ್ರಾಣದಾನ ಮಾಡಿದರೆಂದೂ, ಜಾಹುಷನೆಂಬ ರಾಜನು ಶತ್ರುಗಳಿಂದ ತೊಂದರೆಗೆ ಸಿಕ್ಕಿರುವುದನ್ನು ನೋಡಿ ಅವನಿಗೆ ಸಹಾಯಮಾಡಿ ಶ್ರೇಷ್ಠವಾಗಿರುವ ರಥಗಳಲ್ಲಿ ಕೂರಿಸಿಕೊಂಡು ಪರ್ವತದ ಶಿಖರಕ್ಕೆ ಹೋದರೆಂದೂ, ನಾನಾವಿಧವಾದ ದುರ್ಮಾರ್ಗಗಳಿಂದ ಲೋಕಕ್ಕೆ ಹಿಂಸೆ ಮಾಡುತ್ತಿದ್ದ ವಿಷ್ವಾಚನೆಂಬ ಅಸುರನ ಮಗನಿಗೆ ವಿಷವನ್ನು ಕೊಟ್ಟು ಕೊಂದರೆಂದೂ ಅಶ್ವಿನೀದೇವತೆಗಳ ಮೂರು ಅದ್ಭುತಕಾರ್ಯಗಳು ವರ್ಣಿತವಾಗಿವೆ.

**ಆಸ್ನೋ ವೃಕಸ್ಯ ವರ್ತಿಕಾಮಭೀಕೇ ಯುವಂ ನರಾ ನಾಸತ್ಯಾಮುಮುಕ್ತಂ ।**
**ಉತೋ ಕವಿಂ ಪುರುಭುಜಾ ಯುವಂ ಹ ಕೃಪಮಾಣಮಕೃಣುತಂ ವಿಚಕ್ಷೇ ॥**

(ಋ. ಸಂ. ೧-೧೧೬-೧೪)

ಈ ಋಕ್ಕಿನ ಪೂರ್ವಾರ್ಧದಲ್ಲಿ ಗುಬ್ಬಚ್ಚಿಯನ್ನು ರಕ್ಷಿಸಿದ ವಿಷಯವು ವಿವರಿಸಲ್ಪಟ್ಟಿದೆ.

**ಪರಿವಿಷ್ಟಂ ಜಾಹುಷಂ ವಿಶ್ವತಃ ಸೀಂ ಸುಗೇಭಿರ್ನಕ್ತಮೂಹಥೂ ರಜೋಭಿಃ ।**
**ವಿಭಿನ್ದುನಾ ನಾಸತ್ಯಾ ರಥೇನ ವಿ ಪರ್ವತಾँ ಅಜರಯೂ ಅಯಾತಮ್ ॥**

(ಋ. ಸಂ ೧-೧೧೬-೨೦)

ಎಂಬ ಈ ಋಕ್ಕಿನಲ್ಲಿಯೂ ಜಾಹುಷರಾಜನನ್ನು ರಕ್ಷಿಸಿದ ವಿಷಯವು ಉಕ್ತವಾಗಿದೆ.

"**ವೃಕಸ್ಯ ಆಸ್ನೋ ವಾಂ ವರ್ತಿಕಾಂ ಅಮುಞ್ಚತಂ**" ಎಂಬ ಪದಗಳಿಂದ ಉಷಸ್ಸು ಆದಿತ್ಯ ಮಂಡಲದ ಅಧೀನಕ್ಕೆ ಒಳಪಟ್ಟಿರುವುದನ್ನು ನೋಡಿ ಅದರಿಂದ ಅದನ್ನು ಬಿಡಿಸಿರುವರು ಎಂದರೆ ಪ್ರಾತಃಕಾಲದಲ್ಲಿ ಸೂರ್ಯೋದಯವು ಆಗುವ ಕಾರಣ ಸೂರ್ಯನ ಉದಯಕ್ಕಿಂತ ಪೂರ್ವದಲ್ಲಿ ರಾತ್ರಿಯ ಕೊನೆಯ ಭಾಗದಲ್ಲಿ ಇರುವಂತೆ ಉಷಸ್ಸನ್ನು ಸ್ಥಾಪಿಸಿದರು ಎಂದು ಅರ್ಥಮಾಡಿ **ಸೂರ್ಯೇಣ ಏಕೀಕೃತಾಮುಷಸಂ ಪೃಥಕ್ಕೃತ್ಯ ಉದಯಾತ್ಪೂರ್ವಂ ರಾತ್ರೇರಪರಭಾಗೇ ಸ್ಥಾಪಿತವಂತೌ** ಎಂದು ವ್ಯಾಖ್ಯಾನ ಮಾಡಿ ಸಾಯಣರು— ಯಾಸ್ಕರು ಹೇಳಿರುವ ಈ ಅಭಿಪ್ರಾಯವುಳ್ಳ ನಿರುಕ್ತದ ವಾಕ್ಯವನ್ನು ಉದಹರಿಸಿರುವರು—**ತಥಾ ಚ ಯಾಸ್ಕಃ ।**

**ಆದಿತ್ಯೋಽಪಿ ವೃಕ ಉಚ್ಯತೇ ಯದಾವೃಙ್ಕ್ತೇ । ಅಹ್ವಯದುಷಾ ಅಶ್ವಿನಾ ಆದಿತ್ಯೇನಾಭಿಗ್ರಸ್ತಾ ತಾಮಶ್ವಿನಾ ಪ್ರಮುಮುಚತುರಿತ್ಯಾಖ್ಯಾನಮ್ ॥**

(ನಿ. ೫-೨೧)

ಸಾಯಣರು—**ವಿವೃತಜ್ಯೋತಿಷ್ಕಃ ಸೂರ್ಯಃ ಉಚ್ಯತೇ । ವರ್ತತೇ ಪ್ರತಿದಿವಸಮಾವರ್ತತ ಇತಿ ವರ್ತಿಕಾ ಉಷಾಃ** ಎಂದು ವೃಕವರ್ತಿಕಾ ಶಬ್ದಗಳಿಗೆ ಉಷಸ್ಸು ಮತ್ತು ಸೂರ್ಯನೆಂಬ ಅರ್ಥವನ್ನು ಹೇಳಿರುವರು. ಈ ವ್ಯಾಖ್ಯಾನದಲ್ಲಿ ಬಲಾತ್ಕರಿಸಿ ಗೃಹಿತಳಾದ ಸ್ತ್ರೀಯನ್ನು ಬಿಡಿಸಿದ ವಿಷಯವು ಪ್ರತೀತವಾಗುವುದು. ನಿರುಕ್ತಕಾರರೂ ಕೂಡ ಉಷಸ್ಸು ಎಂಬ ಸ್ತ್ರೀಯು, ಸೂರ್ಯನಿಂದ ಆವೃತಳಾಗಿ ತನ್ನನ್ನು ರಕ್ಷಣೆಮಾಡಲು ಅಶ್ವಿನೀದೇವತೆಗಳನ್ನು (ಆಹ್ವಾನಮಾಡಿದಳು) ಕರೆದಳು ಎಂದು ಹೇಳಿರುವರು. ಮತ್ತು **ವಿಷ್ವಾಚಃ ಅದ್ರೇಃ ಸಾನುಂ ವಿಜಯುಷಾ ಜಾತಂ ಅಹತಂ ಯಯುಥುಃ** ಎಂಬ ವಾಕ್ಯಕ್ಕೆ ಅಶ್ವಿನೀದೇವತೆಗಳು ತಮ್ಮ ಜಯಶೀಲವಾದ ರಥದಿಂದ ಮೇಘವು ಇರುವ ಎತ್ತರವಾದ ಪ್ರದೇಶಕ್ಕೆ ಹೋಗಿ ಮೇಘದಲ್ಲಿರುವ ಮಳೆಯನ್ನು ಸುಯ್ಯುವ ಉದಕಗಳಿಂದ ಮಳೆಯನ್ನು ಸುಯ್ಯಿಸುವುದರಿಂದ ಪ್ರಾಣಿಗಳೆಲ್ಲರನ್ನೂ ರಕ್ಷಿಸಿದರು ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳಿರುವರು.

**ವಿಷ್ವಾಚಃ—ವಿಷು ನಾನಾ ಆಭಿಮುಖ್ಯೇನ ಅಂಚತಿ.** ಅನೇಕವಿಧವಾಗಿ (ಪ್ರಾಣಿಗಳಿಗೆ) ವಿರುದ್ಧರೀತಿಯಿಂದ ಸಂಚರಿಸುವುದು. ವಿಷ್ವಾಚ್ ಎನಿಸಿಕೊಳ್ಳುವುದು ಸ್ಕಂದಸ್ವಾಮಿಗಳು ಈ ಅಭಿಪ್ರಾಯವನ್ನೇ ವಿವರಿಸಿ—

**ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ ತಾಭಿರೂ ಷು ಊತಿಭಿರಶ್ವಿನಾಗತಮ್ ।**

(ಋ. ಸಂ. ೧-೧೧೨-೮)

ಎಂಬ ಈ ಅರ್ಧಋಕ್ಕನ್ನೂ ಉದಹರಿಸಿರುವರು.

|| ವ್ಯಾಕರಣಪ್ರಕ್ರಿಯಾ ||

**ಅಜೋಹವೀತ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ ಯಙ್‌ಲುಗಂತದ ಮೇಲೆ ಲಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಯಙೋ ವಾ** (ಪಾ. ಸೂ. ೭-೩-೯೪) ಎಂಬುದರಿಂದ ಅದಕ್ಕೆ ಈಡಾಗಮ. **ಅಭ್ಯಸ್ತಸ್ಯ ಚ** (ಪಾ. ಸೂ. ೬-೧-೩೩) ಎಂಬುದರಿಂದ ದ್ವಿತ್ವಕ್ಕಿಂತ ಮೊದಲೇ ಸಂಪ್ರಸಾರಣ. ಆಮೇಲೆ ದ್ವಿತ್ವ. ಅಭ್ಯಾಸಕ್ಕೆ ಚುತ್ವ. ಗುಣ. ಅಂಗಕ್ಕೆ ಅಡಾಗಮ. ಇದು ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಆಸ್ನಃ**—ಆಸ್ಯ ಶಬ್ದ. ಇದಕ್ಕೆ ಪಂಚಮೀ ಏಕವಚನ ಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಪ್ರಕೃತಿಗೆ **ಆಸನ್** ಆದೇಶ. ಭ ಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ** (ಪಾ. ಸೂ. ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ **ಲೋಪ**. ಆಸ್ನಃ ಎಂದು ರೂಪವಾಗುತ್ತದೆ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಮುಂಚತಮ್**—ಮುಚ್‌ಲೃ ಮೋಕ್ಷಣೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಜಯುಷಾ**—ಜಿ ಜಯೇ ಧಾತು. ಇದಕ್ಕೆ ಔಣಾದಿಕವಾದ ಉಸಿಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಅಯಾದೇಶ. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಾವಯವ ಸಕಾರಕ್ಕೆ **ಷತ್ವ**. ಪ್ರತ್ಯಯ ಸ್ವರದಿಂದ ಉಕಾರ ಉದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಯಯಥುಃ** – ಯಾ ಪ್ರಾಪಣೇ ಧಾತು. ಲಿಟ್ ಮಧ್ಯಮಪುರುಷ ದ್ವಿವಚನಾಂತರೂಪ. **ಅತಿಙಂತದ** ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಾತಮ್**—ಜನೀ ಪ್ರಾದುರ್ಭಾವೇ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ **ಕ್ತ**ಪ್ರತ್ಯಯ. **ಜನಸನಖನಾಂ ಸಞ್ಝಲೋಃ** (ಪಾ. ಸೂ. ೬-೪-೪೨) ಎಂಬುದರಿಂದ ಧಾತುವಿಗೆ **ಆತ್ವ**. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಷ್ವಾಚಃ**—ವಿಷು ನಾನಾ ಆಭಿಮುಖ್ಯೇನ ಅಂಚತಿ ಇತಿ ವಿಗ್ರಹ. **ಋತ್ವಿಕ್ ದಧೃಕ್**—(ಪಾ ಸೂ. ೩-೨-೫೯) ಎಂಬುದರಿಂದ ಸುಬಂತ ಉಪಪದವಾಗಿರುವಾಗ ಅಂಚು ಗತಿಪೂಜನಯೋಃ ಧಾತುವಿಗೆ ಕ್ವಿನ್ ಪ್ರತ್ಯಯ. **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಭಸಂಜ್ಞಾ ಇರುವುದರಿಂದ ಧಾತುವಿನ ಅಕಾರಕ್ಕೆ ಲೋಪ. **ಚೌ** (ಪಾ. ಸೂ. ೬-೩-೧೩೮) ಎಂಬುದರಿಂದ ಪೂರ್ವಕ್ಕೆ ದೀರ್ಘ. ಅನುದಾತ್ತವಾದ ವಿಭಕ್ತಿನಿಮಿತ್ತವಾಗಿ ಉದಾತ್ತವಾದ ಧಾತುವಿನ ಅಕಾರಕ್ಕೆ **ಲೋಪ** ಬಂದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರವು ಪ್ರಾಪ್ತವಾದರೆ **ಚೌ** (ಪಾ. ಸೂ. ೬-೧-೨೨೨) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

**ಅಹತಮ್**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಙ್. ಮಧ್ಯಮಪುರುಷ ದ್ವಿವಚನದಲ್ಲಿ **ತಸ್ ಥಸ್ ಥ**—ಎಂಬುದರಿಂದ ತಮಾದೇಶ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ ೨-೪-೭೨) ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ **ಅನುದಾತ್ತೋಪದೇಶವನತಿತನೋತ್ಯಾದೀನಾಂ** (ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ನಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೫ ॥

—※—

॥ ಸಂಹಿತಾಪಾಠಃ ॥

ಶತಂ ಮೇಷಾನ್ವೃಕ್ಯೇ ಮಾಮಹಾನಂ ತಮಃ ಪ್ರಣೀತಮಶಿವೇನ ಪಿತ್ರಾ ।
ಆಕ್ಷೀ ಋಜ್ರಾಶ್ವೇ ಅಶ್ವಿನಾವಧತ್ತಂ ಜ್ಯೋತಿರಂಧಾಯ ಚಕ್ರಥುರ್ವಿಚಕ್ಷೇ ॥ ೧೬ ॥

॥ ಪದಪಾಠಃ ॥

ಶತಂ । ಮೇಷಾನ್ । ವೃಕ್ಯೇ । ಮಮಹಾನಂ । ತಮಃ । ಪ್ರಽನೀತಂ । ಅಶಿವೇನ ಪಿತ್ರಾ ।
ಆ । ಅಕ್ಷೀ ಇತಿ । ಋಜ್ರಽಅಶ್ವೇ । ಅಶ್ವಿನೌ । ಅಧತ್ತಂ । ಜ್ಯೋತಿಃ । ಅಂಧಾಯ । ಚಕ್ರಥುಃ । ವಿಽಚಕ್ಷೇ ॥ ೧೬ ॥

॥ ಸಾಯಣಭಾಷ್ಯಂ ॥

ಶತಂ ಮೇಷಾನ್ವೃಕ್ಯೇ ಚಕ್ಷದಾನಂ । ಋ. ೧-೧೧೬-೧೬ । ಇತ್ಯತ್ರ ಯದಾಖ್ಯಾನಮುಪಾದಿಷ್ಟಂ ತದತ್ರಾಪ್ಯನುಸಂಧೇಯಂ । ಶತಂ ಶತಸಂಖ್ಯಾಕಾನ್ಮೇಷಾನ್ವೃಕ್ಯೇ ವೃಕೀರೂಪೇಣಾವಸ್ಥಿತಾಯಾಶ್ವಿನೋರ್ವಾಹನಾಯ ರಾಸಭಾಯ ಮಮಹಾನಂ ಪೂಜಿತವಂತಮುಪಹಾರಾರ್ಥಂ ಸಮರ್ಪಿತವಂತಮಶಿವೇನಾಸುಖಕಾರಿಣಾ ಪಿತ್ರಾ ಸ್ವಕೀಯೇನ ಜನಕೇನ ತಮೋ ದೃಷ್ಟಿರಾಹಿತ್ಯೇನ ಕೃತಮಾಂಧ್ಯಂ ಪ್ರಣೀತಂ ಪ್ರಾಪಿತಮೃಜ್ರಾಶ್ವಂ ಚಕ್ಷುಷ್ಮಂತಮಶ್ವಿನಾವಕುರುತಾಮಿತಿ ಶೇಷಃ । ಏತದೇವ ವಿಶದಯತಿ । ಹೇ ಅಶ್ವಿನಾ ಅಕ್ಷೀ ಪಿತೃಶಾಪಾನ್ನಷ್ಟೇ ಚಕ್ಷುಷೀ ಋಜ್ರಾಶ್ವ ಏತತ್ಸಂಜ್ಞಕೇ ರಾಜರ್ಷಾವಾಧತ್ತಂ । ಪುನರ್ದರ್ಶನಸಮರ್ಥೇ ಅಕುರುತಂ । ಏತದೇವಾಹ । ಅಂಧಾಯ ದೃಷ್ಟಿಹೀನಾಯ ಜ್ಯೋತಿಃ ಪ್ರಕಾಶಕಂ ಚಕ್ಷುಃ ವಿಚಕ್ಷೇ ವಿವಿಧಂ ಜಗದ್ದ್ರಷ್ಟುಂ ಚಕ್ರಥುಃ । ಯುವಾಂ ಕೃತವಂತೌ ॥ ಮಮಹಾನಂ । ಮಹ ಪೂಜಾಯಾಂ । ಲಿಟಃ ಕಾನಚ್ । ಸಂಹಿತಾಯಾಂ ಛಾಂದಸಮಭ್ಯಾಸಸ್ಯ ದೀರ್ಘತ್ವಂ । ಪ್ರಣೀತಂ । ಪ್ರಪೂರ್ವಾನ್ನಯತೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪಿತ್ರಾ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಅಕ್ಷೀ । ಅಕ್ಷಿಶಬ್ದಾದ್ದ್ವಿವಚನೇ ನುಮಾಗಮಶ್ಚ ಪ್ರಾಪ್ನೋತಿ । ಈ ಚ ದ್ವಿವಚನ ಇತೀಕಾರಾಂತಾದೇಶಶ್ಚ । ಪರತ್ವಾದೀಕಾರಾದೇಶಃ । ಕೃತೇ ತಸ್ಮಿನ್ ಸಕೃದ್ಗತಪರಿಭಾಷಯಾ ಪುನರ್ನುಮ್ನ ಭವತಿ । ಉದಾತ್ತ ಇತ್ಯನುವೃತ್ತೇರೀಕಾರಸ್ಯೋದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ಶತಂ**—ನೂರು । **ಮೇಷಾನ್**—ಆಡುಗಳನ್ನು । **ವೃಕ್ಯೇ**—ಹೆಣ್ಣುತೋಳದ ರೂಪದಿಂದಿದ್ದ (ನಿಮ್ಮ ವಾಹನಕ್ಕೆ) । **ಮಮಹಾನಂ**—(ಆಹಾರವಾಗಿ ಕೊಟ್ಟು) ಪೂಜಿಸಿದ (ಮತ್ತು) **ಅಶಿವೇನ**—ಅಸುಖಕಾರಿಯಾದ (ದುಃಖವನ್ನುಂಟುಮಾಡಿದ) । **ಪಿತ್ರಾ**—(ತನ್ನ) ತಂದೆಯಿಂದ । **ತಮಃ**—(ಅಂಧತನದಿಂದುಂಟಾದ) ತಮಸ್ಸನ್ನೂ । **ಪ್ರಣೀತಂ**—ಹೊಂದಿಸಲ್ಪಟ್ಟ (ಎಂದರೆ ಕುರುಡನಾದ ಋಜ್ರಾಶ್ವನನ್ನು ಪುನಃ ದೃಷ್ಟಿಯುಕ್ತನನ್ನಾಗಿ ಮಾಡಿದಿರಿ) । **ಋಜ್ರಾಶ್ವೇ**—ಋಜ್ರಾಶ್ವ ಎಂಬ ರಾಜರ್ಷಿಗೆ । **ಅಕ್ಷೀ**—(ತಂದೆಯ ಶಾಪದಿಂದ ನಷ್ಟವಾದ) ಕಣ್ಣುಗಳನ್ನು । **ಆ ಅಧತ್ತಂ**—(ದರ್ಶನಸಮರ್ಥಗಳನ್ನಾಗಿ)ಮಾಡಿದಿರಿ । **ಅಂಧಾಯ**—ಕುರುಡನಾದ ಅವನಿಗೆ । **ಜ್ಯೋತಿಃ**—ಪ್ರಕಾಶಕವಾದ ಕಣ್ಣುಗಳನ್ನು । **ವಿಚಕ್ಷೇ**—(ಪದಾರ್ಥಗಳನ್ನು) ಚೆನ್ನಾಗಿ ನೋಡುವುದಕ್ಕೆ (ನೋಡುವಂತೆ) । **ಚಕ್ರಥುಃ**—ಮಾಡಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೂರು ಆಡುಗಳನ್ನು ಹೆಣ್ಣುತೋಳದ ರೂಪದಿಂದಿದ್ದ (ನಿಮ್ಮ ವಾಹನಕ್ಕೆ) ಕೊಟ್ಟಿದ್ದರಿಂದ ದುಃಖಕಾರಿಯಾದ ತಂದೆಯಿಂದ (ಶಪ್ತನಾಗಿ) ಕುರುಡನಾಗಿದ್ದ ಋಜ್ರಾಶ್ವನಿಗೆ ಕಣ್ಣುಗಳನ್ನು ಕೊಟ್ಟು ಅವನಿಗೆ ಪದಾರ್ಥಗಳನ್ನು ಚೆನ್ನಾಗಿ ನೋಡುವ ಸಾಮರ್ಥ್ಯವನ್ನುಂಟುಮಾಡಿದಿರಿ.

## English Translation.

You restored eyes to Rijrashwa, who, on presenting a hundred sheep to the she-wolf, had been eondemned to darkness by his indignant father, and gave light to the blind, wherewith to behold all things.

॥ ವಿಶೇಷವಿಷಯಗಳು ॥

ಈ ಋಕ್ಕನ್ನು ವ್ಯಾಖ್ಯಾನಮಾಡುವಾಗ ಸಾಯಣರು—

**ಶತಂ ಮೇಷಾನ್ ವೃಕ್ಯೇ ಚಕ್ಷದಾನಮೃಜ್ರಾಶ್ವಂ ತಂ ಪಿತಾಂಧಂ ಚಕಾರ ॥**
**ತಸ್ಮಾ ಅಕ್ಷೀ ನಾಸತ್ಯಾ ವಿಚಕ್ಷ ಆಧತ್ತಂ ದಸ್ರಾ ಭಿಷಜಾವನರ್ವನ್ ॥**

(ಋ. ಸಂ. ೧-೧೧೬-೧೬)

**ಇತ್ಯತ್ರ ಯದಾಖ್ಯಾನಮುವಾದಿಷ್ಮ ತದತ್ರಾಪ್ಯನುಸಂಧೇಯಂ ।** ಈ ಋಕ್ಕಿನಲ್ಲಿ "ಶತಂ ಮೇಷಾನ್" ಎಂಬ ಋಕ್ಕಿನಲ್ಲಿ ವಿವರಿಸಲ್ಪಟ್ಟ ಅರ್ಥವೇ ವಿಸ್ತೃತವಾಗಿದೆ ಎಂದು ಹೇಳಿರುವರು. ಋಜ್ರಾಶ್ವನೆಂಬ ರಾಜರ್ಷಿಯು ನೂರು ಕುರಿಗಳನ್ನು ಒಂದೊಂದನ್ನಾಗಿ ಕೊಂದು ತೋಳನ ರೂಪದಿಂದಿದ್ದ ಅಶ್ವಿನೀದೇವತೆಗಳ ವಾಹನಕ್ಕೆ ಆಹಾರಕ್ಕಾಗಿ ಕೊಡುತ್ತಿರುವುದನ್ನು ಅವನ ತಂದೆಯು ನೋಡಿ ಋಜ್ರಾಶ್ವನಿಗೆ ಕಣ್ಣುಕಾಣಿಸದೆ ಹೋಗಲಿ ಎಂದು ಶಾಪವನ್ನು ಕೊಟ್ಟನು. ಅದರಿಂದ ಅವನಿಗೆ ಕಣ್ಣು ಕಾಣಿಸದಂತಾಯಿತು. ಋಜ್ರಾಶ್ವನು ಕುರುಡನಾಗಿಯೇ ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಅಶ್ವಿನೀದೇವತೆಗಳು ದೇವತೆಗಳ ವೈದ್ಯರಾದ ಕಾರಣ ಬಂದು ಇವನನ್ನು ನೋಡಿ ಇವನಿಗೆ ಎಲ್ಲವೂ ಚೆನ್ನಾಗಿ ಕಾಣಿಸುವಂತೆ ಇರುವ ಕಣ್ಣನ್ನು ಕೊಟ್ಟು ರಕ್ಷಿಸಿದರು ಎಂಬ ಇತಿಹಾಸವು ಹಿಂದಿನಋಕ್ಕಿನಲ್ಲಿ ಉಕ್ತವಾಗಿದ್ದರೂ ಪುನಃ ಬೇರೆಯ ಪದಗಳಿಂದ ಇಲ್ಲಿಯೂ ಉಕ್ತವಾಗಿರುತ್ತದೆ.

**ವೃಕ್ಯೇ—ವೃಕರೂಪೇಣಾವಸ್ಥಿತಾಯ ಅಶ್ವಿನೋರ್ವಾಹನಾಯ ರಾಸಭಾಯ ।** ಅಶ್ವಿನೀದೇವತೆಗಳ ವಾಹನವಾದ ಕತ್ತೆಯು ತೋಳನ ಆಕಾರವನ್ನು ಧರಿಸಿದ್ದಾಗ ಅದರ ಆಹಾರಕ್ಕಾಗಿ ಎಂದು ಅರ್ಥ.

**ಮಮಹಾನಂ—ಪೂಜಿತವಂತಂ ಆಹಾರಾರ್ಥಂ ಸಮರ್ಪಿತವಂತಂ ।** ಪೂಜಾರ್ಥವಾದ ಮಹ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಅತಿಶಯವಾಗಿ ಪೂಜಿಸುವುದೆಂದು ಅರ್ಥವಾಗಿರುವುದರಿಂದ ಇಲ್ಲಿ ಅಶ್ವಿನೀ ದೇವತೆಗಳ ವಾಹನವಾದ ತೋಳರೂಪವನ್ನು ಧರಿಸಿದ ಕತ್ತೆಗೆ ಆಹಾರವನ್ನು ಒದಗಿಸಿರುವುದೇ ಪೂಜೆಯಾಗಿರುತ್ತದೆ ಎಂದು ತಾತ್ಪರ್ಯ.

**ಪ್ರಣೀತಂ—ಪ್ರಾಪಿತಂ ಋಜ್ರಾಶ್ವಂ ಚಕ್ಷುಷ್ಮಂತಂ ಅಶ್ವಿನಾವಕುರತಾಮಿತಿ ಶೇಷಃ ।** ಪ್ರ ಎಂಬ ಉಪಸರ್ಗವು ನೀಧಾತುವಿಗೆ ಸೇರಿ ಬೇರೆಯ ಅರ್ಥವನ್ನು ಕೊಡುವಕಾರಣ ಪ್ರಣೀತಶಬ್ದಕ್ಕೆ ಹೊಂದಿಸಲ್ಪಟ್ಟನು ಎಂದು ಅರ್ಥವಾಗುತ್ತದೆ. ಇಲ್ಲಿ ಅಶ್ವಿನೀದೇವತೆಗಳು ಋಜ್ರಾಶ್ವನಿಗೆ ಕಣ್ಣುಕಾಣಿಸುವಹಾಗೆಮಾಡಿ ಅವನಿಗೆ ಕಣ್ಣುಗಳನ್ನು ಕೊಟ್ಟರು ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಮಮಹಾನಮ್**—ಮಹ ಪೂಜಾಯಾಂ ಧಾತು. ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ ಶೇಷ ಬರುತ್ತದೆ. ಮಮಹಾನ ಎಂದು ರೂಪವಾಗುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ತುಜಾದಿಯಲ್ಲಿ ಸೇರಿದೆ ಎಂದು ಕಲ್ಪನೆಮಾಡುವುದಾದರೆ ಪದಕಾಲದಲ್ಲಿಯೂ ದೀರ್ಘಶ್ರವಣವಾಗಬೇಕಾಗುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪ್ರಣೀತಮ್**—ಣೀಞ್ ಪ್ರಾಪಣೇ. ಧಾತು. ಇದಕ್ಕೆ ಪ್ರ ಎಂಬ ಉಪಸರ್ಗವು ಪರವಾದಾಗ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ಉಪಸರ್ಗದ ನಿಮಿತ್ತ ಪರದಲ್ಲಿರುವುದರಿಂದ ಣತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ.

**ಅಶಿವೇನ**—ನ ಶಿವಃ ಅಶಿವಃ ತೇನ. **ತತ್ಪುರುಷೇ ತುಲ್ಯಾರ್ಥ**—ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪಿತ್ರಾ**—ಪಿತೃ ಶಬ್ದಕ್ಕೆ ತೃತೀಯಾ ಏಕವಚನ ಟಾ ಪರವಾದಾಗ ಯಣಾದೇಶ. ಉದಾತ್ತವಾದ ಋಕಾರಕ್ಕೆ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್ ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಕ್ಷೀ**—ಅಕ್ಷಿ ಶಬ್ದಕ್ಕೆ ದ್ವಿವಚನ ಪರವಾದಾಗ **ನಪುಂಸಕಸ್ಯ ಝಲಚಃ** (ಪಾ. ಸೂ. ೭-೧-೭೨) ಎಂಬುದರಿಂದ ನುಮಾಗಮವೂ ಪ್ರಾಪ್ತವಾಗುತ್ತದೆ. **ಈಚ ದ್ವಿವಚನೇ** (ಪಾ. ಸೂ. ೭-೧-೭೭) ಸೂತ್ರದಿಂದ ಈಕಾರಾಂತಾದೇಶವೂ ಪ್ರಾಪ್ತವಾಗುತ್ತದೆ. ಆಗ **ವಿಪ್ರತಿಷೇಧೇ ಪರಂ ಕಾರ್ಯಮ್** ಎಂಬ ನ್ಯಾಯದಿಂದ ಈತ್ವವು ಪರಸೂತ್ರದಿಂದ ವಿಧಿಸಿರುವುದರಿಂದ ಅದೇ ಬರುತ್ತದೆ. ಈತ್ವವು ಬಂದರೂ ಅಜಂತತ್ವ ವಿಘಾತವಾಗದಿರುವುದರಿಂದ ಆಮೇಲೆ ನುಮಾಗಮ ಬರಲಿ ಎಂದು ಶಂಕಿಸಬಾರದು. **ಸಕೃದ್ಗತೌ ವಿಪ್ರತಿಷೇಧೇನ ಯದ್ಬಾಧಿತಂ ತದ್ಬಾಧಿತಮೇವ** (ಪರಿ. ೪೦-) ಎಂಬ ಪರಿಭಾಷೆಯಿಂದ ಒಂದುಸಲ ಬಾಧಿತವಾದರೆ ಅದು ಬಾಧಿಸಿದಂತೆಯೇ. ಆದುದರಿಂದ ಬರುವುದಿಲ್ಲ. **ಉದಾತ್ತಃ**—ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದರಿಂದ ಈಕಾರವು ಉದಾತ್ತವಾಗುತ್ತದೆ.

**ಅಧತ್ತಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ಇದಕ್ಕೆ ನಿಘಾತಸ್ವರ ಬರುತ್ತದೆ.

**ವಿಚಕ್ಷೇ**—ವಿ ಉಪಸರ್ಗ. ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ದರ್ಶನಾರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ತುಮರ್ಥ ತೋರುವಾಗ **ತುಮರ್ಥೇ ಸೇಸೇನಸೇ**—

(ಪಾ. ಸೂ. ೩-೪-೯) ಎಂಬುದರಿಂದ ಸೇನ್ ಪ್ರತ್ಯಯ. **ಸ್ಕೋಃ ಸಂಯೋ**—(ಪಾ. ಸೂ. ೮-೨-೨೯) ಎಂಬುದರಿಂದ ಧಾತುವಿನ ಸಂಯೋಗಾದಿ ಕಕಾರಕ್ಕೆ ಲೋಪ. **ಷಢೋಃ ಕಃಸಿ** (ಪಾ. ಸೂ. ೮-೨-೪೧) ಎಂಬುದರಿಂದ ಷಕಾರಕ್ಕೆ ಸಕಾರ ಪರವಾದುದರಿಂದ ಕತ್ವ. ಕಕಾರದ ಪರದಲ್ಲಿರುವುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಚಕ್ಷೇ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ವಿ ಎಂಬುದರೊಡನೆ ಗತಿಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೧೭ ॥



॥ ಸಂಹಿತಾಪಾಠಃ ॥

ಶುನಮಂಧಾಯ ಭರಮಹ್ವಯತ್ಸಾ ವೃಕೀರಶ್ವಿನಾ ವೃಷಣಾ
ನರೇತಿ ।
ಜಾರಃ ಕನೀನ ಇವ ಚಕ್ಷದಾನ ಋಜ್ರಾಶ್ವಃ ಶತಮೇಕಂ ಚ
ಮೇಷಾನ್ ॥ ೧೮ ॥

॥ ಪದಪಾಠಃ ॥

ಶುನಂ । ಅಂಧಾಯ । ಭರಂ । ಅಹ್ವಯತ್ । ಸಾ । ವೃಕೀಃ । ಅಶ್ವಿನಾ ।
ವೃಷಣಾ । ನರಾ । ಇತಿ ।
ಜಾರಃ । ಕನೀನಃऽಇವ । ಚಕ್ಷದಾನಃ । ಋಜ್ರऽಅಶ್ವಃ । ಶತಂ । ಏಕಂ । ಚ ।
ಮೇಷಾನ್ ॥ ೧೮ ॥

॥ ಸಾಯಣಭಾಷ್ಯಂ ॥

ಶುನಮಿತಿ ಸುಖನಾಮ । ಭರಂ ಪೋಷಣಹೇತುಭೂತಂ ಚಕ್ಷುರಿಂದ್ರಿಯೇಣ ನಿಷ್ಪಾದ್ಯಂ ಸುಖಮಂಧಾಯ ದೃಷ್ಟಿಹೀನಾಯ ತಸ್ಮಾ ಋಜ್ರಾಶ್ವಾಯೇಚ್ಛಂತೀ ಸಾ ವೃಕೀರ್ಹೇ ಅಶ್ವಿನಾವಶ್ವಯುಕ್ತೌ ಕೃತ್ಸ್ನಂ ಜಗದ್ವ್ಯಾಪ್ನುವಂತೌ ವಾ ವೃಷಣಾ ಹೇ ವೃಷಣೌ ಕಾಮಾನಾಂ ವರ್ಷಿತಾರಾವಿತ್ಯೇವಂ ಸಂಬೋಧ್ಯ ನರಾ ನೇತಾರಾವಶ್ವಿನಾವಹ್ವಯತ್ । ಆಹೂತವತೀ। ಆಹ್ವಯಂತ್ಯಾಸ್ತಸ್ಯಾಃ ಕೋಽಭಿಪ್ರಾಯ ಇತಿ ಚೇತ್ ತದುಚ್ಯತೇ । ಕನೀನ ಇವ ಯಥಾ ಪ್ರಾಪ್ತಯೌವನಃ ಕಾಮುಕೋ ಜಾರಃ ಪಾರದಾರಿಕಃ ಸನ್ ಪರಸ್ತ್ರಿಯೈ ಸರ್ವಂ ಧನಂ ಪ್ರಯಚ್ಛತಿ ಏವಮೃಜ್ರಾಶ್ವೋ ಮಹ್ಯಂ ಶತಮೇಕಂ ಚೈಕೋತ್ತರಶತ-ಸಂಖ್ಯಾಕಾನ್ಮೇಷಾನ್ಪೌರಜನಾನಾಂ ಸ್ವಭೂತಾನಪಹೃತ್ಯ ಚಕ್ಷದಾನಃ ಶಕಲೀಕುರ್ವನ್ ಪ್ರಾದಾತ್ । ತೇನೇದೃಶೀಂ ದುರ್ದಶಾಂ ಪ್ರಾಪ್ತ ಇತಿ ॥ ಕನೀನಃ । ಯುವಶಬ್ದಾದಿಷ್ಠನಿ ಯುವಾಲ್ಪಯೋಃ ಕನನ್ಯತ-ರಸ್ಯಾಂ । ಪಾ. ೫-೩-೬೪ । ಇತಿ ಯುವಶಬ್ದಸ್ಯ ಕನಾದೇಶಃ । ವ್ಯತ್ಯಯೇನೇಷ್ಠನಃ ಖಾದೇಶಃ । ಯದ್ವಾ । ಕನ ದೀಪ್ತಿಕಾಂತಿಗತಿಷು । ಅಸ್ಮಾದೌಣಾದಿಕ ಈನಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ವೃಷಣಾ**—ಇಷ್ಟಾರ್ಥದಾಯಕರೂ । **ನರಾ**—ನೇತೃಗಳೂ ಆದ । **ಅಶ್ವಿನೌ**-ಎಲೈ ಅಶ್ವಿನೀದೇವತೆಗಳೇ । **ಭರಂ**—ಪುಷ್ಟಿಕಾರಕವಾದ । **ಶುನಂ**—(ಚಕ್ಷುರಿಂದ್ರಿಯದಿಂದ ಪ್ರಾಪ್ಯವಾದ) ಸುಖವನ್ನು । **ಅಂಧಾಯ**—ದೃಷ್ಟಿಹೀನನಾದ (ಋಜ್ರಾಶ್ವನಿಗೆ ಕೊಡಿಸಲಿಚ್ಛಿಸಿ) । **ಸಾ ವೃಕೀಃ**—ಆ ತೋಳವು । **ಋಜ್ರಾಶ್ವಃ**—ಋಜ್ರಾಶ್ವನು । **ಶತಂ ಏಕಂ ಚ**—(ತನಗೆ ಮತ್ತು ಇತರರಿಗೆ ಸೇರಿದ) ನೂರೊಂದು । **ಮೇಷಾನ್**—ಮೇಕೆಗಳನ್ನು । **ಕನೀನಃ**—ತರುಣನಾದ । **ಜಾರ ಇವ**—ಜಾರಪುರುಷನು (ಪರಸ್ತ್ರೀಗೆ ಸರ್ವಸ್ವವನ್ನೂ ಕೊಟ್ಟುಬಿಡುವಂತೆ) । **ಚಕ್ಷದಾನಃ**—ಕತ್ತರಿಸಿ (ನನಗೆ) ಕೊಟ್ಟನು । **ಇತಿ**—ಹೀಗೆಂಬುದಾಗಿ । **ಅಹ್ವಯತ್**—(ನಿಮ್ಮನ್ನು) ಕರೆಯಿತು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಂಧನಾದ ಋಜ್ರಾಶ್ವನಿಗೆ, ಕಣ್ಣಿನಿಂದ ಪ್ರಾಪ್ಯವಾದ ಉತ್ತಮವಾದ ಸುಖವನ್ನು (ಕೊಡಿಸಲಿಚ್ಛಿಸಿ) ಆ ತೋಳವು ನಿಮ್ಮನ್ನು ಕುರಿತು ಎಲೈ ಕಾಮವರ್ಷಕರೇ, ನಾಯಕರೇ, ಅಶ್ವಿನೀ ದೇವತೆಗಳೇ, ಋಜ್ರಾಶ್ವನು ನೂರೊಂದು ಮೇಕೆಗಳನ್ನು, ತರುಣನಾದ ಜಾರಪುರುಷನು (ಸರ್ವಸ್ವವನ್ನೂ ಪರಸ್ತ್ರೀಗೆ ಅರ್ಪಿಸುವಂತೆ) (ನನಗೆ) ಕತ್ತರಿಸಿಕೊಟ್ಟಿದ್ದಾನೆ (ಆದರಿಂದ ಈ ದುರ್ದಶೆಯನ್ನು ಪಡೆದಿದ್ದಾನೆ) ಎಂದು ನಿಮ್ಮನ್ನು ಕರೆಯಿತು.

## English Translation

(Desiring) that the enjoyment (arising from the perfection) of the senses (should be restored to the blind), the she-wolf invoked you, (saying), "Aswins, showerers (of benefits), leaders) of sacrifices), Rijraswa, (lavish) as a youthful gallant, (has given me) a hundred and one sheep, cutting them into fragments."

॥ ವಿಶೇಷವಿಷಯಗಳು ॥

**ಶುನಂ— ಶುನಂ ಇತಿ ಸುಖನಾಮ ।** ಶುನಶಬ್ದವು ಇಪ್ಪತ್ತು ಸುಖನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಸುಖವೆಂದು ಅರ್ಥ.

**ಭರಂ— ಪೋಷಣಹೇತುಭೂತಂ ಚಕ್ಷುರಿಂದ್ರಿಯೇಣ ನಿಷ್ಪಾದ್ಯಂ ಸುಖಂ ।** ಭರಶಬ್ದವು—ನಲವತ್ತಾರು ಸಂಗ್ರಾಮನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಯುದ್ಧವೆಂದು ಅರ್ಥ. ಸಾಯಣರು ಭರ ಶಬ್ದಕ್ಕೆ ಇಲ್ಲಿ ಪೋಷಣೆಯು ಉಂಟಾಗಲು ಕಾರಣವಾದ ಎಂದು ಅರ್ಥವನ್ನು ಮಾಡಿರುವರು. ಇದರಿಂದ ಭರಶಬ್ದವು ಶುನಂ ಎಂಬುವುದಕ್ಕೆ ವಿಶೇಷಣವಾಗಿ ಕಣ್ಣಿನಿಂದ ಉಂಟಾಗುವ ಸುಖವೆಂದು ಅರ್ಥ.

**ಜಾರಃ ಕನೀನ ಇವ ಚಕ್ಷದಾನಃ— ಯಥಾ ಪ್ರಾಪ್ತಯೌವನಃ ಕಾಮುಕಃ ಪಾರದಾರಿಕಸ್ಸ್ವ ಪರಸ್ತ್ರಿಯೈ ಸರ್ವಂ ಧನಂ ಪ್ರಯಚ್ಛತಿ ಏವಂ ಪೌರಜನಾನಾಂ ಸ್ವಭೂತಾನಪಹೃತ್ಯ ಮೇಷಾನ್ ಶಕಲೀಕುರ್ವನ್ ಪ್ರಾದಾತ್ ।** ಯೌವನವನ್ನು ಹೊಂದಿ ಇರುವ ಕಾಮುಕನು ಪರಸ್ತ್ರೀಯಲ್ಲಿ ಅನುರಕ್ತನಾಗಿ ತನ್ನ ಪ್ರೀತಿಪಾತ್ರಳಾದ ಅವಳಿಗೆ ಧನವೆಲ್ಲವನ್ನೂ ಒಪ್ಪಿಸುವಂತೆ, ಋಜ್ರಾಶ್ವನು ನಾಗರಿಕರಾಗಿರುವ ಪ್ರಜೆಗಳ ದ್ರವ್ಯವಾದ ಕುರಿಗಳನ್ನು ಹಿಡಿದುಕೊಂಡು ಬಂದು ಅವುಗಳನ್ನು ಕತ್ತರಿಸಿ ತೋಳನಿಗೆ ಆಹಾರಕ್ಕಾಗಿ ಉಪಯೋಗಿಸುತ್ತಿದ್ದನು ಎಂದು ಅರ್ಥ. ಸ್ಕಂದಸ್ವಾಮಿಗಳು ಕನೀನಶಬ್ದಕ್ಕೆ ಅರ್ಥವನ್ನು ಹೇಳುವುದರಲ್ಲಿ ವಿಮರ್ಶೆಮಾಡಿರುವರು. **ಜಾರಃ-ಕನೀನ ಇವ ವೃಕೀ ವೃಷಣಾ ನರೇತಿ ಅಹ್ವಯತ್** ಎಂದು ಅನ್ವಯವನ್ನು ಹೇಳಿ—ಕನೀನ ಶಬ್ದವು ಕನ್ಯಾವಾಚಕವಾಗಿಲ್ಲ. ಕನ್ಯೆಯನ್ನು ಅಪಹರಿಸಿ ವಿಶಸನಮಾಡುವುದು ಇಲ್ಲಿ ಪ್ರತಿಪಾದ್ಯವಾಗಿರುವುದಿಲ್ಲವಾದಕಾರಣ ಕನ್ಯಾಶಬ್ದವು ಕಾಂತಿ ಎಂಬ ಅರ್ಥವುಳ್ಳ ಕನ ಧಾತುವಿನಿಂದ ನಿಷ್ಪನ್ನವಾಗಿ ಕಾಮಯಿತಾ ಎಂಬ ಅರ್ಥವನ್ನು ಬೋಧಿಸುತ್ತದೆ. ಕಾಮುಕನಾದ ಜಾರಪುರುಷನು ಪರಸ್ತ್ರೀಯನ್ನು ಆದರದಿಂದಲೂ ಪ್ರೀತಿಯಿಂದಲೂ ಆಹ್ವಾನಮಾಡುವುದು ಯುಕ್ತವಾಗಿರುವುದು. ಇದರಂತೆ ಅಶ್ವಿನೀದೇವತೆಗಳ ವಾಹನವು ಇವರನ್ನು **ವೃಷಣಾ**-ಆಶ್ರಿತರಿಗೆ ಬೇಕಾದ ಇಷ್ಟಾರ್ಥಗಳನ್ನು ಅತಿಶಯವಾಗಿ ಕೊಡುವವರು ಮತ್ತು **ನರಾ**....ಸರಿಯಾದ ಮಾರ್ಗದರ್ಶಕರೂ ಆಗಿರುವರು ಎಂದು ಆಹ್ವಾನ ಮಾಡಿರುವುದು ಎಂದು ವ್ಯಾಖ್ಯಾನಮಾಡಿರುವರು. ಮತ್ತು ಋಜ್ರಾಶ್ವನು ಜ್ಞಾನಿಯಾದ ಕಾರಣ ಮುಂದೆ ತನಗೆ ಶತ್ರುಗಳೊಡನೆ ಯುದ್ಧವು ಸಂಭವಿಸುವುದೆಂದೂ ಇದಕ್ಕಾಗಿ ತನ್ನನ್ನು ರಕ್ಷಿಸುವ ಮಹಿಮೆಯುಳ್ಳವರ ಸಹಾಯವು ಅವಶ್ಯಕವಾಗಿರಬೇಕೆಂದೂ ತಿಳಿದುಕೊಂಡು ಅಶ್ವಿನೀದೇವತೆಗಳ ವಾಹನಕ್ಕೆ ಆಹಾರವನ್ನು ಸಿದ್ಧಮಾಡಿಕೊಡುತ್ತಿದ್ದನೆಂದೂ ಅವನ ತಂದೆಯ ಶಾಪಕ್ಕೆ ಗುರಿಯಾಗಿ ಅದರಿಂದ ಪ್ರಾಪ್ತವಾದ ತನ್ನ ಕುರುಡನ್ನು ಅಶ್ವಿನೀದೇವತೆಗಳ ಸಹಾಯದಿಂದ ಪರಿಹರಿಸಿಕೊಂಡನೆಂದು ಕಾರಣವನ್ನೂ ಸಹ ಈ ಋಕ್ಕಿನಲ್ಲಿ ವರ್ಣಿಸಿದೆ ಎಂದು ಅಭಿಪ್ರಾಯವುಳ್ಳ—

> **ಋಜ್ರಾಶ್ವೋ ಹಿ ಯೋಗೈಶ್ವರ್ಯಾತ್ ಪೂರ್ವಮೇವ ಜ್ಞಾತವಾನ್ ಇಯಂ ವೃಕೀ ಅಶ್ವಿನೋಃ ಕಶಾ ಸಮುಮಾಂಧೀಭೂತಸ್ಯ ಮೃತೇ ಪಿತರಿ ಶತ್ರುಭಿಃ ರುದ್ಧಸ್ಯ ಶತ್ರುಜಯಂ ಕರಿಷ್ಯತೀತಿ ಚಕ್ಷದಾನಃ ।**

ಎಂಬ ಈ ವಚನವನ್ನೂ ಉದಾಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಹ್ವಯೇತ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಭ್ವಾದಿ ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪ್ ವಿಕರಣ **ಏಚೋಽಯವಾಯಾವಃ** ಎಂಬುದರಿಂದ ಅಯಾದೇಶ. ಅಂಗಕ್ಕೆ ಅಡಾಗಮ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನರಾ**—ಣ್ಣ ನಯೇ. ಧಾತು. **ಋದೋರಪ್** (ಪಾ. ಸೂ. ೩-೩-೫೭) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರದೇಶ.

**ಕನೀನಃ**—ಯುವನ್ ಶಬ್ದ. ಅಶತಿಯೇನ ಯುವಾ ಕನೀನಃ. **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ಯುವಾಲ್ಪಯೋಃ ಕನನ್ಯತರಸ್ಯಾಮ್** (ಪಾ. ಸೂ. ೫-೩-೬೪) ಎಂಬುದರಿಂದ ಯುವನ್ ಶಬ್ದಕ್ಕೆ ಕನ್ ಆದೇಶ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಇಷ್ಠನ್ ಪ್ರತ್ಯಯಕ್ಕೆ ಖಾದೇಶ. **ಆಯನೇಯೀನಿಯಃ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಈನಾದೇಶ. ಕನೀನ ಎಂದು ರೂಪವಾಗುತ್ತದೆ. ಅಥವಾ ಕನ ದೀಪ್ತಿಕಾಂತಿಗತಿಷು ಧಾತು. ಇದಕ್ಕೆ ಉಣಾದಿನಿಷ್ಪನ್ನವಾದ ಈನ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತಸ್ವರ ಬರುತ್ತದೆ.

**ಚಕ್ಷದಾನಃ**—ಕ್ಷದ ಧಾತುವು ಇಲ್ಲಿ ಶಕಲೀಕರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಲಿಡರ್ಥದಲ್ಲಿ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಬಂದಾಗ **ಕುಹೋಶ್ಚುಃ** (ಪಾ ಸೂ. ೭-೪-೬೨) ಎಂಬುದರಿಂದ ಚುತ್ವ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೧೮ ॥

॥ ಸಂಹಿತಾಪಾಠಃ ॥

ಮಹೀ ವಾಮೂತಿರಶ್ವಿನಾ ಮಯೋಭೂರುತ ಸ್ರಾಮಂ ಧಿಷ್ಣ್ಯಾ ಸಂ ರಿಣೀಥಃ ।
ಅಥಾ ಯುವಾಮಿದಹ್ವಯತ್ಪುರಂಧಿರಾಗಚ್ಛತಂ ಸೀಂ ವೃಷಣಾವವೋಭಿಃ ॥ ೧೯ ॥

॥ ಪದಪಾಠಃ ॥

ಮಹೀ । ವಾಂ । ಊತಿಃ । ಅಶ್ವಿನಾ । ಮಯಃ ऽ ಭೂಃ । ಉತ । ಸ್ರಾಮಂ ।
ಧಿಷ್ಣ್ಯಾ । ಸಂ । ರಿಣೀಥಃ ।

ಅಥ । ಯುವಾಂ । ಇತ್ । ಅಹ್ವಯತ್ । ಪುರಂऽಧಿಃ । ಆ । ಅಗಚ್ಛತಂ । ಸೀಂ ।
ವೃಷಣೌ । ಅವಃऽಭಿಃ ॥ ೧೯ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ವಾಂ ಯುವಯೋರ್ಮಹೀ ಮಹತ್ಯೂತಿಃ ಪಾಲನಂ ಮಯೋಭೂರ್ಮಯಸಃ ಸುಖಸ್ಯ ಭಾವಯಿತ್ರೀ । ಉತಾಪಿ ಚ ಹೇ ಧಿಷ್ಣ್ಯೌ । ಧಿಷಣಾ ಸ್ತುತಿಲಕ್ಷಣಾ ವಾಕ್ । ತಯಾ ಸ್ತೋತವ್ಯೌ ಸ್ರಾಮಂ ವ್ಯಾಧಿತಂ ಪುರುಷಂ ವಿಶ್ಲಿಷ್ಟಾಂಗಮತ್ರ್ಯಾದಿಕಂ ಸಂ ರಿಣೀಥಃ । ಸಂಗತಾವಯವಂ ಕುರುಥಃ । ಅಥಾಪಿ ಚ ಯುವಾಮಿದ್ಯುವಾಮೇವ ಪುರಂಧಿರ್ಬಹುಧೀರ್ಘೋಷಾ ವಿಶ್ಪಲಾ ವಾಹ್ವಯತ್ । ರೋಗೋಪಶಮನಾರ್ಥಮಾಹೂತವತೀ ॥ ಹೇ ವೃಷಣೌ ಕಾಮಾನಾಂ ವರ್ಷಿತಾರಾವಶ್ವಿನೌ ಅವೋಭೀ ರಕ್ಷಣೈಃ ಸಹಾಗಚ್ಛತಂ । ಆಭಿಮುಖ್ಯೇನ ಸೀಮೇನಾಂ ಪ್ರಾಪ್ತವಂತೌ ॥ ಮಹೀ । ಮಹತೀ ।ಛಾಂದಸೋ ವರ್ಣಲೋಪಃ । ಯದ್ವಾ । ಮಹೇರೌಣಾದಿಕ ಇನ್ । ಕೃದಿಕಾರಾದಕ್ತಿನ ಇತಿ ಙೀಷ್ । ಮಯೋಭೂಃ । ಭವತೇರಂತರ್ಭಾವಿತಣ್ಯರ್ಥಾತ್ ಕ್ವಿಪ್ । ರಿಣೀಥಃ । ರೀ ಗತಿರೇಷಣಯೋಃ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರ । **ಮಹೀ**—ಮಹತ್ತರವಾದ । **ಊತಿಃ**—ರಕ್ಷಣೆಯು । **ಮಯೋಭೂಃ**—ಸುಖಕಾರಿಯು । **ಉತ**—ಮತ್ತು । **ಧಿಷ್ಣ್ಯೌ**—ಎಲೈ ಸ್ತುತಿವಾಕ್ಯಗಳಿಂದ ಸ್ತುತ್ಯರೇ । **ಸ್ರಾಮಂ**—ವ್ಯಾಧಿಗ್ರಸ್ತನಾದ (ವಿಶ್ಲಿಷ್ಟಾಂಗನಾದ) (ಅತ್ರಿಮೊದಲಾದ) ಪುರುಷನನ್ನು । **ಸಂ ರಿಣೀತಃ**—ಸಂಪೂರ್ಣಾವಯವನನ್ನಾಗಿ ಮಾಡಿದಿರಿ । **ಅಥ**—ಮತ್ತು । **ಯುವಾಂ ಇತ್**—ನಿಮ್ಮನ್ನೇ **ಪುರಂಧಿಃ**—ಬಹುಜ್ಞಾನಿಯಾದ (ಘೋಷಾ ಎಂಬುವಳು ಅಥವಾ ವಿಶ್ಪಲಾ ಎಂಬುವಳು) । **ಅಹ್ವಯತ್**—(ರೋಗೋಪಶಮನಾರ್ಥವಾಗಿ) ಕರೆದಳು । **ವೃಷಣೌ**—ಇಷ್ಟಾರ್ಥಪ್ರದರಾದ ಎಲೈ ಅಶ್ವಿನೀದೇವತೆಗಳೇ । **ಅವೋಭಿಃ** ರಕ್ಷಣಾಕರ್ಮಗಳೊಡನೆ । **ಸೀಂ**—ಈ ಘೋಷಾ (ವಿಶ್ಪಲಾ) ಎಂಬುವಳ ಬಳಿಗೆ । **ಆ ಅಗಚ್ಛತಂ**—ಬಂದಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಮಹತ್ತರವಾದ ರಕ್ಷಣೆಯು ಸುಖಕಾರಿಯು ; ಸ್ತುತ್ಯರಾದ ಎಲೈ ಅಶ್ವಿನೀ ದೇವತೆಗಳೇ, ವ್ಯಾಧಿಗ್ರಸ್ತನಾದ (ವಿಶ್ಲಿಷ್ಟಾಂಗನಾದ ಅತ್ರ್ಯಾದಿ) ಪುರುಷನ (ಅಂಗಗಳನ್ನು) ಸರಿಪಡಿಸಿದಿರಿ ; ಜ್ಞಾನಿ ಯಾದ ಘೋಷಾ (ವಿಶ್ಪಲಾ) ಎಂಬುವಳೂ ನಿಮ್ಮನ್ನೇ (ರೋಗೋಪಶಮನಾರ್ಥವಾಗಿ) ಕರೆದಳು ; ಇಷ್ಟಾರ್ಥಪ್ರದರಾದ ನೀವೂ (ಅವಳನ್ನು) ರಕ್ಷಿಸುವುದಕ್ಕಾಗಿ ಅವಳ ಬಳಿಗೆ ಹೋದಿರಿ.

English Translation.

Aswins, your powerful protection is the source of happiness, worthy of laudation, you have made whole the maimed; therefore, has the intelligent (Ghosha) called upon you; showerers (of benefits), come hither with your succours

|| ವಿಶೇಷವಿಷಯಗಳು ||

**ಪುರಂಧಿಃ—ಬಹುಧೀಃ ಘೋಷಾ ವಿಶ್ಪಲಾ ವಾ** । ಅನೇಕಾರ್ಥಗಳನ್ನು ಬೋಧಿಸುವ **ಪುರಂಧಿ** ಶಬ್ದವು **ಪುರಂಧಿರ್ಬಹುಧೀಃ** (ನಿ. ೬-೧೩) ಎಂಬ ನಿರುಕ್ತಕಾರರ ವಚನದಂತೆ ಇಲ್ಲಿ ಅತಿಶಯವಾದ ಪ್ರಜ್ಞೆಯುಳ್ಳ ಎಂಬರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಘೋಷಾ ಎಂಬ ಸ್ತ್ರೀಯೂ ವಿಶ್ಪಲಾ ಎಂಬ ಸ್ತ್ರೀಯೂ ಕೂಡ ಅಶ್ವಿನೀದೇವತೆ ಗಳನ್ನು ತಮ್ಮ ರೋಗೋಪಶಾಂತಿಗಾಗಿ ಸ್ತೋತ್ರಮಾಡಿ ಅವರಿಂದ ರಕ್ಷಣೆಯನ್ನು ಹೊಂದಿದರೆಂದೂ ಇವರು ಅವರ ರೋಗವನ್ನು ಗುಣಪಡಿಸಿರುವುದು ನಿರತಿಶಯವಾದ ಇವರ ಪ್ರಭಾವವನ್ನು ಪ್ರಕಾಶಪಡಿಸುವುದೆಂದೂ ಇಲ್ಲಿ ವರ್ಣಿಸಿದೆ.

**ವಾಂ ಊತಿಃ ಮಹತೀ ಮಯೋಭೂಃ**—ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಅನುಗ್ರಹಮಾಡಿ ರಕ್ಷಣೆ ಮಾಡುವುದರಿಂದ ಬಹಳವಾದ ಸುಖವು ಉಂಟಾಗುವುದೆಂದು ಇಲ್ಲಿ ವಿವೃತವಾಗಿದೆ. ಇದಕ್ಕಾಗಿಯೇ ರಕ್ಷಣೆಯೇ ಸುಖಜನಕವೆಂದು ವರ್ಣಿಸಿದೆ. ಮತ್ತು ಇವರ ವಿಷಯವಾದ ಸ್ತುತಿವಚನವೂ ಕೂಡ ರುಗ್ಣನಾದವನಿಗೆ ಆರೋಗ್ಯ ಜನಕವಾಗಿರುತ್ತದೆ ಎಂದೂ ವರ್ಣಿಸಿದೆ.

**ಸೀಂ**—ನಿರುಕ್ತಕಾರರು ಸೀಂ ಎಂಬ ಪದಕ್ಕೆ **ಪರಿಗ್ರಹ** ಅಥವಾ **ಪದಪೂರಣ** ಎಂಬುದಾಗಿ ಅರ್ಥಮಾಡಿರು ವರು. ಇವರು **ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ** (ನಿ. ೧-೭) ಎಂದು ಹೇಳಿ—

**ಪ್ರ ಸೀಮಾದಿತ್ಯೋ ಅಸೃಜದ್ವಿಧರ್ತಾ ಋತಂ ಸಿಂಧವೋ ವರುಣಸ್ಯ ಯಂತಿ ।**
**ನ ಶ್ರಾಮ್ಯಂತಿ ನ ವಿ ಮುಚಂತ್ಯೇತೇ ವಯೋ ನ ಪಪ್ತೂ ರಘುಯಾ ಪರಿಜ್ಮನ್ ॥**

(ಋ. ಸಂ. ೨-೨೮-೪)

ಈ ಋಕ್ಕನ್ನು ಉದಹರಿಸಿ, **ಸೀಮೋತ್ಯೇತದನರ್ಥಕಮುಪಬಂಧಮಾದದೀತ ಪಂಚಮೀಾ ಕರ್ಮಾಣಂ ಸೀಮ್ನಃ ಸೀಮತಃ ಸೀಮಾತಃ ಮರ್ಯಾದಾತಃ, ಸೀಮಾ ಮರ್ಯಾದಾ, ವಿಸೀವ್ಯತಿ ದೇಶಾವಿತಿ ।** ಎಂದು ವಿವರಣೆಯನ್ನು ಹೇಳಿ,

**ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾದ್ವಿಸೀಮತಸ್ಸುರುಚೋ ವೇನ ಆವಃ ।**
(ವಾ. ಸಂ. ೧೩-೩)

ಸೀಂ ಎಂಬುವುದು ಅರ್ಥವಿಲ್ಲದಿರುವ ಶಬ್ದ, ವಾಕ್ಯಪೂರ್ತಿಯಾಗುವುದಕ್ಕಾಗಿ ಉಪಯೋಗಿಸುವ ನಿಪಾತ (ಅವ್ಯಯ) ವೆಂದು ಅರ್ಥಮಾಡಿ **ಪ್ರಸೀಮಾದಿತ್ಯಃ** ಎಂಬ ಮೇಲಿನ ಉದಾಹರಣೆಯನ್ನು ಕೊಟ್ಟಿರುವರು. **ವಿಸೀಮತಸ್ಸುರುಚೋ ವೇನ ಆವಃ** ಎಂಬ ವಾಕ್ಯದಲ್ಲಿರುವ ಸೀಮ ಶಬ್ದವೂ ಸೀಂ ಎಂಬ ಶಬ್ದದಂತೆಯೇ ಅನರ್ಥಕವಾಗಿ ಇರುವುದಾದರೂ ಮರ್ಯಾದಾ (ಎಲ್ಲೆ=Boundary) ದ್ಯೋತಕವಾಗಿರುತ್ತದೆ ಎಂದು ವ್ಯಾಖ್ಯಾನಮಾಡಿರುತ್ತಾರೆ ಸ್ಕಂದಸ್ವಾಮಿಗಳು—

**ಸ್ರಾಮಶಬ್ದಃ । ದ್ವಾಭ್ಯಾಂ ಸ್ರಾಮಃ ಸ್ವಪ್ನಾಯ ಅಂಧಂ ಅಧರ್ಮಾಯ ಬಧಿರಂ** (ವಾ. ಸಂ. ೨೦-೧೦) **ಇತಿ ಪುರುಷಮೇಧಮಂತ್ರೇಷು ಪ್ರಯೋಗದರ್ಶನಾತ್ ಕಾಣವಚನಃ । ತಂ ಕಕ್ಷೀವಂತಂ ಅಂಧಂ ತ್ರಿಕಾಲವಿಷಯಸರ್ವಾರ್ಥವಿಷಯಜ್ಞಾನಪ್ರದಾನೇನ ಪಾಲಯಂತೌ ವಾಂ ಆಹೂತವತೀಂ ಪುರಂಧಿಂ ವಧ್ರಿಮತೀಂ ಹಿರಣ್ಯಹಸ್ತಪ್ರದಾನೇನ ಪಾಲಯಂತಾವಿತ್ಯರ್ಥಃ ॥**

**ಸ್ರಾಮ** ಎಂಬ ಶಬ್ದವು ಕುರುಡ, ಅಥವಾ ಕಿವುಡ ಎಂಬ ಅರ್ಥಬೋಧಕವಾಗಿರುವುದರಿಂದ ಕುರುಡನಾದ ಕಕ್ಷೀವಂತನೆಂಬವನಿಗೆ ಕಣ್ಣನ್ನು ಅಶ್ವಿನೀದೇವತೆಗಳು ಕೊಟ್ಟು ಲೌಕಿಕ ಪದಾರ್ಥದರ್ಶನದಿಂದ ವ್ಯವಹಾರವಾಚರಿಸಲು ಅನುಕೂಲವಾಗುವ ಹಾಗೆ ಮಾಡಿರುವುದಲ್ಲದೆ ಭೂತ, ವರ್ತಮಾನ, ಭವಿಷ್ಯತ್ತೆಂಬ ಮೂರು ಕಾಲದಲ್ಲಿಯೂ ಸಂಭಾವಿತವಾದ ವಿಷಯಗಳನ್ನು ತಿಳಿಯುವ ಕಣ್ಣಿನಂತಿರುವ ದಿವ್ಯಜ್ಞಾನಜನಕವಾದ ಬುದ್ಧಿಯನ್ನೂ ಅನುಗ್ರಹಿಸಿದರೆಂದು ಅರ್ಥಮಾಡಿ.

**ಯುವಂ ನರಾ ಸ್ತುವತೇ ಪಜ್ರಿಯಾಯ ಕಕ್ಷೀವತೇ ಅರದತಂ ಪುರಂಧಿಂ ।**
(ಋ. ಸಂ. ೧-೧೧೬-೭)

ಎಂಬ ಈ ಋಕ್ಕನ್ನು ಉದಹರಿಸಿರುವರು. ಮತ್ತು **ಪುರಂಧಿ** ಎಂದರೆ ಬಹಳ ಬುದ್ಧಿಯುಳ್ಳ ವಧ್ರೀಮತೀ ಎಂಬುವಳು ಅಶ್ವಿನೀದೇವತೆಗಳನ್ನು ಆಹ್ವಾನಮಾಡಿ ಅವರಿಂದ (ಹಿರಣ್ಯಹಸ್ತ) ಸುವರ್ಣಮಯವಾದ ಹಸ್ತವುಳ್ಳ ಪುತ್ರನನ್ನು ಪಡೆದಳೆಂದು ಬೋಧಿಸುವ—

**ಅಜೋಹವೀನ್ನಾಸತ್ಯಾ ಕರಾ ವಾಂ ಮಹೇ ಯಾಮನ್ ಪುರುಭುಜಾ ಪುರಂಧಿಃ ।**
**ಶ್ರುತಂ ತಚ್ಛಾಸುರಿವ ವಧ್ರಿಮತ್ಯಾ ಹಿರಣ್ಯಹಸ್ತಮಶ್ವಿನಾವದತ್ತಮ್ ॥**
(ಋ. ಸಂ. ೧-೧೧೬-೧೩)

ಎಂಬ ಈ ಋಕ್ಕನ್ನೂ ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಮಹೀ**—ಮಹ ಪೂಜಾಯಾಂ ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ಮಹತೀ ಎಂದಿರುವಾಗ ಛಾಂದಸವಾಗಿ ತಕಾರಕ್ಕೆ ಲೋಪ. ಅಥವಾ ಮಹಧಾತುವಿಗೆ **ಇನ್ ಸರ್ವಧಾತುಭ್ಯಃ** (ಉ. ಸೂ. ೪-೫೫೭) ಎಂಬುದರಿಂದ ಇನ್ ಪ್ರತ್ಯಯ. ಮಹಿ ಎಂದಿರುವಾಗ ಸ್ತ್ರೀತ್ವದಲ್ಲಿ **ಕೃದಿಕಾರಾದಕ್ತಿನಃ** ಎಂಬುದರಿಂದ ಙೀಷ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಊತಿಃ**—**ಊತಿಯೂತಿಜೂತಿ**—(ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್. ಉದಾತ್ತಸ್ವರವು ನಿಪಾತಿತವಾಗಿದೆ.

**ಅಶ್ವಿನಾ**—**ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಯೋಭುವಃ**—ಮಯಸಃ ಭಾವಯಿತ್ರೀ ಮಯೋಭುವಃ. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಭೂ ಧಾತುವಿಗೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಧಿಷ್ಣ್ಯಾ**—**ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶವೂ ಆಮಂತ್ರಿತನಿಘಾತಸ್ವರವೂ ಬರುತ್ತದೆ.

**ರಿಣೀಥಃ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಸಾರ್ವಧಾತುಕಮಪಿತ್** ಸೂತ್ರದಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ಅದು ಹಲಾದಿಯಾದುದರಿಂದ **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈತ್ವ. **ಅಟ್‌ಕುಪ್ವಾಙ್ ನುಮ್**—ಸೂತ್ರದಿಂದ ನಕಾರಕ್ಕೆ ಣತ್ವ. ರಿಣೀಥಃ ಎಂದು ರೂಪವಾಗುತ್ತದೆ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಥ**—**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಪುರಂಧಿಃ**—**ಪೃಷೋದರಾದೀನಿ ಯಥೋಪದಿಷ್ಟಮ್** (ಪಾ. ಸೂ. ೬-೩-೧೦೯) ಎಂಬುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ.

**ಅಗಚ್ಛತಮ್**—ಗಮ್ಲೃ ಗತೌ ಧಾತು. ಲಙ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅವೋಭಿಃ**—ಅವ ರಕ್ಷಣೇ. ಧಾತು. **ಸರ್ವಧಾತುಭ್ಯ ಅಸುನ್** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ. ॥ ೧೯ ॥



॥ ಸಂಹಿತಾಪಾಠಃ ॥

ಅಧೇನುಂ ದಸ್ರಾ ಸ್ತರ್ಯಂ೧ ವಿಷಕ್ತಾಮಪಿನ್ವತಂ ಶಯವೇ ಅಶ್ವಿನಾ ಗಾಂ ।
ಯುವಂ ಶಚೀಭಿರ್ವಿಮದಾಯ ಜಾಯಾಂ ನ್ಯೂಹಥುಃ ಪುರುಮಿತ್ರಸ್ಯ ಯೋಷಾಂ ॥ ೨೦ ॥

॥ ಪದಪಾಠಃ ॥

ಅಧೇನುಂ । ದಸ್ರಾ । ಸ್ತರ್ಯಂ । ವಿऽಸಕ್ತಾಂ । ಅಪಿನ್ವತಂ । ಶಯವೇ । ಅಶ್ವಿನಾ । ಗಾಂ ।
ಯುವಂ । ಶಚೀಭಿಃ । ವಿऽಮದಾಯ । ಜಾಯಾಂ । ನಿ । ಊಹಥುಃ । ಪುರುऽಮಿತ್ರಸ್ಯ । ಯೋಷಾಂ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ದಸ್ರಾ ದರ್ಶನೀಯಾವಶ್ವಿನೌ ವಿಷಕ್ತಾಂ ವಿಶೇಷೇಣ ಸಕ್ತಾವಯವಾಂ । ಕೃಶಾವಯವಾಮಿತ್ಯರ್ಥಃ । ಅತ ಏವ ಸ್ತರ್ಯಂ ನಿವೃತ್ತಪ್ರಸವಾಂ ಅತ ಏವಾಧೇನುಮದೋಗ್ಧ್ರೀಂ ಏವಂಭೂತಾಂ ಗಾಂ ಶಯವ ಏತತ್ಸಂಜ್ಞಾಯರ್ಷಯೇಽಪಿನ್ವತಂ । ಪಯಸಾಪೂರಯತಂ । ಅಪಿ ಚ ಪುರುಮಿತ್ರಸ್ಯ । ಪುರುಮಿತ್ರೋ ನಾಮ ಕಶ್ಚಿದ್ರಾಜಾ । ತಸ್ಯ ಯೋಷಾಂ ಕುಮಾರೀಂ ಶಚೀಭಿರಾತ್ಮೀಯೈಃ ಕರ್ಮಭಿರ್ವಿಮದಾಯೈತತ್ಸಂಜ್ಞಾಯರ್ಷಯೇ ಶತ್ರುಭಿಃ ಸಹ ಯೋದ್ಧುಮಶಕ್ತಾಯ ಯುವಾಂ ನ್ಯೂಹಥುಃ । ವಿಮದಸ್ಯ ಗೃಹಂ ಪ್ರಾಪಿತವಂತೌ ॥ ಸ್ತರ್ಯಂ । ಸ್ತೃಞ್ ಆಚ್ಛಾದನೇ । ಅವಿತೃಸ್ತೃತಂತ್ರಿಭ್ಯ ಈರಿತೀಕಾರಪ್ರತ್ಯಯಃ । ವಾ ಛಂದಸೀತ್ಯಮಿ ಪೂರ್ವಸ್ಯ ವಿಕಲ್ಪನಾದಭಾವೇ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ವಿಷಕ್ತಾಂ । ಷಞ್ಜ ಸಂಗೇ । ಕರ್ಮಣಿ ನಿಷ್ಠಾ ।

**ಅನಿದಿತಾಮಿತಿ ನಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಅಪಿನ್ವತಂ । ಪಿವಿ ಸೇಚನೇ । ಇದಿತ್ವಾನ್ನುಮ್ । ಭೌವಾದಿಕಃ । ಪುರುಮಿತ್ರಸ್ಯ । ಪುರೂಣಿ ಮಿತ್ರಾಣಿ ಯಸ್ಯ । ಸಂಜ್ಞಾಯಾಂ ಮಿತ್ರಾಜಿನಯೋಃ । ಪಾ. ೬-೨-೧೬೫ । ಇತಿ ಬಹುವ್ರೀಹಾವುತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ದಸ್ರಾ**—ಎಲೈ ದಸ್ರರೇ (ದರ್ಶನೀಯರಾದ ಅಶ್ವಿನೀದೇವತೆಗಳೇ) । **ವಿಷಕ್ತಾಂ**—ಬಹಳಕೃಶವಾಗಿದ್ದ । **ಸ್ತರ್ಯಂ**—ಕರುಹಾಕದೇ ಇದ್ದ । **ಅಧೇನುಂ**—ಹಾಲುಕೊಡದೇ ಇದ್ದ । **ಗಾಂ**—(ಗೊಡ್ಡಾದ) ಗೋವನ್ನು । **ಶಯವೇ**—ಶಯು ಎಂಬ ಋಷಿಗಾಗಿ । **ಅಪಿನ್ವತಂ**—(ಕ್ಷೀರದಿಂದ) ಯುಕ್ತವನ್ನಾಗಿ ಮಾಡಿದಿರಿ (ಹಾಲುಕೊಡುವಂತೆ ಮಾಡಿದಿರಿ ಮತ್ತು) । **ಪುರುಮಿತ್ರಸ್ಯ**—ಪುರುಮಿತ್ರ ಎಂಬ ರಾಜನ । **ಯೋಷಾಂ**—ಮಗಳನ್ನು । **ಯುವಂ**—ನೀವಿಬ್ಬರು । **ಶಚೀಭಿಃ**—(ನಿಮ್ಮ) ಸಾಹಸಕರ್ಮಗಳಿಂದ । **ವಿಮದಾಯ**—ವಿಮದ ಎಂಬುವನಿಗೆ । **ಜಾಯಾಂ**—ಪತ್ನಿಯನ್ನಾಗಿ (ಮಾಡಿ) । **ನಿ ಊಹಥುಃ**—(ಅವನ ಮನೆಗೆ) ಸೇರಿಸಿದಿರಿ.

॥ ಭಾವಾರ್ಥ ॥

ಎಲೈ ದಸ್ರರೇ, ಬಹಳ ಕೃಶವೂ, (ಆದುದರಿಂದಲೇ) ಕರುವಿಲ್ಲದೇ ಮತ್ತು ಹಾಲುಕೊಡದೇ ಇರುವುದೂ ಆದ ಗೊಡ್ಡಾದ ಗೋವನ್ನು ಶಯುವಿಗೋಸ್ಕರ ಕ್ಷೀರಯುಕ್ತವನ್ನಾಗಿ ಮಾಡಿದಿರಿ; ಮತ್ತು ಪುರುಮಿತ್ರ ಎಂಬ ರಾಜನ ಮಗಳನ್ನು ನೀವಿಬ್ಬರೂ (ನಿಮ್ಮ) ಸಾಮರ್ಥ್ಯದಿಂದ ವಿಮದ ಎಂಬುವನಿಗೆ ಪತ್ನಿಯನ್ನಾಗಿ ಮಾಡಿದಿರಿ.

English Translation.

Dasras, you filled the milkless, barren, and emaciated cow of Sayu with milk; you brought, by your powers, the daughter of Purumitra, as a wife, to Vimda.

॥ ವಿಶೇಷವಿಷಯಗಳು ॥

**ವಿಷಕ್ತಾಂ ಸ್ತರ್ಯಂ ಅಧೇನುಂ ಗಾಂ ಅಪಿನ್ವತಂ—ವಿಶೇಷೇಣ ಸಕ್ತಾವಯವಾಂ ಕೃಶಾವಯವಾಂ ನಿವೃತ್ತಪ್ರಸವಾಂ ಅದೋಗ್ಧ್ರೀಂ ಗಾಂ ಪಯಸಾ ಅಪೂರಯತಮ್ ।** ಶಯು ಎಂಬುವನ ಒಂದು ಹಸುವು ಬಹಳ ಅಶಕ್ತಿಯುಳ್ಳದ್ದಾಗಿ ಸಣ್ಣನಾದ ಕೈಕಾಲುಗಳುಳ್ಳದ್ದಾಗಿತ್ತು. ಅದರ ಶರೀರಸ್ಥಿತಿಯು ಸರಿಯಾಗಿ ಇಲ್ಲದ್ದರಿಂದ ಅದು ಬಹಳ ಕೃಶವಾಗಿ ಕರುವನ್ನು ಹಾಕಿ ಹಾಲನ್ನು ಕೊಡುವ ರೀತಿಯಲ್ಲಿರಲಿಲ್ಲ. ಹೀಗೆ ಇರುವ ಹಸುವಿಗೆ ಶಕ್ತಿಯು ಬರುವಂತೆ ಚಿಕಿತ್ಸೆಯನ್ನು ಮಾಡಿ ಅದು ಬಹಳ ಹಾಲು ಕೊಡುವಂತೆ ಅಶ್ವಿನೀದೇವತೆಗಳು ಮಾಡಿದರು ಎಂದು ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳೂ ಹೀಗೆಯೇ ಅರ್ಥವನ್ನು ವಿವರಿಸಿ—

**ಶಯವೇ ಚಿನ್ನಾಸತ್ಯಾ ಶಚೀಭಿರ್ಜಸುರಯೇ ಸ್ತರ್ಯಂ ಪಿಪ್ಯಥುರ್ಗಾಂ ।**

(ಋ. ಸಂ. ೧-೧೧೬-೨೨)

ಎಂಬ ಈ ಋಕ್ಕನ್ನು ಉದಹರಿಸಿರುವರು.

**ಪುರುಮಿತ್ರಸ್ಯ—ಪುರೂಣಿ ಮಿತ್ರಾಣಿ ಯಸ್ಯ** ಬಹಳ ಮಂದಿ ಸ್ನೇಹಿತರನ್ನು ಹೊಂದಿರುವನೆಂದು ಅರ್ಥವನ್ನು ಮಾಡಿರುವರು **ಅಥವಾ** ಪುರುಮಿತ್ರನೆಂದು ಹೆಸರುಳ್ಳ ಒಬ್ಬರಾಜನೆಂದೂ ಅರ್ಥವನ್ನು ಸಾಯಣರು ವಿವರಿಸಿರುವರು.

**ವಿಮದಾಯ—ಏತತ್ಸಂಜ್ಞಾಯ ಋಷಯೇ ಶತ್ರುಭಿಸ್ಸಹ ಯೋದ್ಧುಮಶಕ್ತಾಯ ।** ವಿಮದ ನೆಂಬ ಒಬ್ಬ ಋಷಿಯು ತನ್ನ ಪತ್ನಿಯು ಅಸುರರಿಂದ ಅಸಹೃತಳಾದಾಗ ಶತ್ರುಗಳೊಡನೆ ಯುದ್ಧಮಾಡಲು ಅಶಕ್ತನಾಗಿರುವುದನ್ನು ನೋಡಿ ಅಶ್ವಿನೀದೇವತೆಗಳು ಅವನಿಗೆ ಸಹಾಯಮಾಡಿ ಅವಳನ್ನು ವಿಮದನ ಗೃಹಕ್ಕೆ ಕರೆದುಕೊಂಡು ಬಂದು ಬಿಟ್ಟರು. ಇದರಂತೆಯೇ ಪುರುಮಿತ್ರನೆಂಬ ರಾಜನಿಗೂ ಸಹಾಯಮಾಡಿ ಅವನ ಪುತ್ರಿಯನ್ನೂ ರಕ್ಷಿಸಿರುವರು. ಸ್ಕಂದಸ್ವಾಮಿಗಳ ವ್ಯಾಖ್ಯಾನದಲ್ಲಿ ಇದೇ ಅಭಿಪ್ರಾಯವು ಹೇಳಲ್ಪಟ್ಟಿರುವುದು.

**ಯಾವರ್ಭಗಾಯ ವಿಮದಾಯ ಜಾಯಾಂ ಸೇನಾಜುವಾ ನ್ಯೂಹತೂ ರಥೇನ ।**

(ಋ. ಸಂ. ೧-೧೧೬-೧)

ಈ ಋಕ್ಕಿನಲ್ಲಿ ವಿಮದನನ್ನು ರಕ್ಷಿಸಿದ ವಿಷಯವು ಮಾತ್ರ ಉಕ್ತವಾಗಿದೆ.

**ಶಚೀಭಿಃ—ಆತ್ಮೀಯೈಃ ಕರ್ಮಭಿಃ ।** ಶಚೀ ಶಬ್ದವು ಐವತ್ತೇಳು ವಾಙ್ನಾಮಗಳಲ್ಲಿಯೂ (ನಿ. ೨-೨೩) ಇಪ್ಪತ್ತಾರು ಕರ್ಮನಾಮಗಳಲ್ಲಿಯೂ (ನಿ. ೩-೨) ಹದಿನಾಲ್ಕು ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಉಕ್ತವಾಗಿರುವುದು. ಹೀಗೆ ಈ ಶಬ್ದಕ್ಕೆ ಅನೇಕಾರ್ಥಗಳಿರುವಾಗ ಇಲ್ಲಿ ಸಾಯಣರು—

**ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಮ್ ।**

(ಋ. ಸಂ. ೧-೧೬೪-೪೪)

ಎಂಬ ಋಕ್ಕಿನಲ್ಲಿ ನಿರುಕ್ತಕಾರರು ಉದಹರಿಸಿರುವಂತೆ **ಶಚೀಭಿಃ—ಕರ್ಮಭಿಃ** ಕರ್ಮಗಳಿಂದ ಎಂದು ವ್ಯಾಖ್ಯಾನ ಮಾಡಿರುವಂತೆ ಶಚೀ ಶಬ್ದಕ್ಕೆ ಕರ್ಮಪರವಾದ ಅರ್ಥವನ್ನೇ ಇಲ್ಲಿ ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ದಸ್ರಾ—ಸುಪಾಂ ಸುಲುಕ್**—ಸೂತ್ರದಿಂದ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತನಿಘಾತಸ್ವರ ಬರುತ್ತದೆ

**ಸ್ತರ್ಯಮ್**—ಸ್ತೃಞ್ ಆಚ್ಛಾದನೇ. ಧಾತು. **ಅವಿತೃಸ್ತೃತಂತ್ರಿಭ್ಯ ಈಃ** (ಉ. ಸೂ. ೪-೪೩೮) ಎಂಬುದರಿಂದ ಇದಕ್ಕೆ ಈ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಸ್ತರೀ ಶಬ್ದವಾಗುತ್ತದೆ. ಇದಕ್ಕೆ ಅಮ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣ ವಿಕಲ್ಪಿತವಾದುದರಿಂದ ಅದು ಇಲ್ಲಿ ಬರುವುದಿಲ್ಲ. ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು-ಪೂರ್ವದಲ್ಲಿ ವ್ಯಂಜನವಿದ್ದು ಪರದಲ್ಲಿ ವಿಭಕ್ತಿ ಬಂದುದರಿಂದ ಅದಕ್ಕೆ **ಉದಾತ್ತಸ್ವರಿತಯೋರ್ಯಣಃ ಸ್ವ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ವಿಷಕ್ತಾಮ್**—ಷಞ್ಜ ಸಂಗೇ ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. **ಅನಿದಿತಾಂ ಹಲ**—(ಪಾ. ಸೂ. ೬-೪-೨೪) ಎಂಬುದರಿಂದ ಉಪಧಾನಕಾರಕ್ಕೆ ಲೋಪ. **ಚೋಃ ಕುಃ** (ಪಾ. ಸೂ. ೮-೨-೩೦) ಎಂಬುದರಿಂದ ಜಕಾರಕ್ಕೆ ಕುತ್ವ ಬಂದಾಗ **ಖರಿ ಚ** ಎಂಬುದರಿಂದ ಕಕಾರಾದೇಶ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಅಪಿನ್ವತಮ್**—ಪಿವಿ ಸೇಚನೇ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ ೭-೧-೫೮) ಎಂಬುದರಿಂದ ಇದಕ್ಕೆ ನುಮಾಗಮ. ಭ್ವಾದಿಗಣ ಪಠಿತವಾದುದರಿಂದ ಲಙ್ಮಧ್ಯಮಪುರುಷದ್ವಿವಚನದಲ್ಲಿ ಶಪ್ ವಿಕರಣ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ವಿಮದಾಯ**—ಮದೀ ಹರ್ಷಗ್ಲೇಪನಯೋಃ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಸಮಾಸದಲ್ಲಿ ಕೃದುತ್ತರಪದಪಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಪುರುಮಿತ್ರಸ್ಯ**—ಪುರೂಣಿ (ಬಹೂನಿ) ಮಿತ್ರಾಣಿ ಯಸ್ಯ ಸಃ ಪುರುಮಿತ್ರಃ ತಸ್ಯ. **ಸಂಜ್ಞಾಯಾಂ ಮಿತ್ರಾಜಿನಯೋಃ** (ಪಾ. ಸೂ. ೬-೨-೧೬೫) ಎಂಬುದರಿಂದ ಬಹುವ್ರೀಹಿಸಮಾಸದಲ್ಲಿ ಉತ್ತರಪದಕ್ಕೆ ಅಂತೋದಾತ್ತಸ್ವರ ಬರುತ್ತದೆ.

**ಊಹಥುಃ**—ವಹ ಪ್ರಾಪಣೇ. ಧಾತು. ಲಿಟ್‌ಮಧ್ಯಮಪುರುಷದ್ವಿವಚನರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೨೦ ॥



॥ ಸಂಹಿತಾಪಾಠಃ ॥

ಯುವಂ ವೃಕೇಣಾಶ್ವಿನಾ ವಪಂತೇಷಂ ದುಹಂತಾ ಮನುಷಾಯ ದಸ್ರಾ ।
ಅಭಿ ದಸ್ಯುಂ ಬಕುರೇಣಾ ಧಮಂತೋರು ಜ್ಯೋತಿಶ್ಚಕ್ರಥುರಾರ್ಯಾಯ ॥ ೨೧ ॥

॥ ಪದಪಾಠಃ ॥

ಯುವಂ । ವೃಕೇಣ । ಅಶ್ವಿನಾ । ವಪಂತಾ । ಇಷಂ । ದುಹಂತಾ । ಮನುಷಾಯ । ದಸ್ರಾ ॥

ಅಭಿ । ದಸ್ಯುಂ । ಬಕುರೇಣ । ಧಮಂತಾ । ಉರು । ಜ್ಯೋತಿಃ । ಚಕ್ರಥುಃ । ಆರ್ಯಾಯ ॥ ೨೧ ॥

॥ ಸಾಯಣಭಾಷ್ಯಂ ॥

ಆರ್ಯಾಯ ವಿದುಷೇ । ಮನುಷಶಬ್ದೋ ಮನುಶಬ್ದಪರ್ಯಾಯಃ । ಮನುಷಾಯ ಮನವೇ ಮನೋರರ್ಥಂ ಹೇ ದಸ್ರಾ ದರ್ಶನೀಯಾವಶ್ವಿನೌ ವೃಕೇಣ ಲಾಂಗಲೇನ ಕರ್ಷಕೈಃ ಕೃಷ್ಟದೇಶೇ ಯವಂ ಯವಾದ್ಯುಪಲಕ್ಷಿತಂ ಸರ್ವಂ ಧಾನ್ಯಜಾತಂ ವಪಂತಾ ವಾಪಯಂತೌ ತಥೇಷಂ । ಅನ್ನನಾಮೈತತ್ । ತತ್ಕಾರಣಭೂತಂ ವೃಷ್ಟ್ಯುದಕಂ ಚ ದುಹಂತಾ ಮೇಘಾತ್ಕ್ಷಾರಯಂತೌ ತಥಾ ದಸ್ಯುಮುಪಕ್ಷಯಕಾರಿಣಮಸುರಪಿಶಾಚಾದಿಕಂ ಬಕುರೇಣ । ಬಕುರೋ ಭಾಸಮಾನೋ ವಜ್ರಃ । ತೇನಾಭಿ ಧಮಂತಾ । ಧಮತಿರ್ವಧಕರ್ಮಾ । ಅಭಿಘ್ನಂತೌ ಏವಂ ತ್ರಿವಿಧಂ ಕರ್ಮ ಕುರ್ವಂತೌ ಯುವಾಮುರು ವಿಸ್ತೀರ್ಣಂ ಜ್ಯೋತಿಃ ಸ್ವಕೀಯಂ ತೇಜೋ ಮಾಹಾತ್ಮ್ಯಂ ಚಕ್ರಥುಃ । ಕೃತವಂತೌ ದರ್ಶಿತವಂತಾವಿತ್ಯರ್ಥಃ । ಯದ್ವಾ । ತ್ರಿವಿಧಕರ್ಮಾಚರಣೇನಾರ್ಯಾಯ ವಿದುಷೇ ಮನವೇ ವಿಸ್ತೀರ್ಣಂ ಸೂರ್ಯಾಖ್ಯಂ ಜ್ಯೋತಿಶ್ಚಕ್ರಥುಃ । ಕೃತವಂತೌ । ಜೀವನ್ ಹಿ ಸೂರ್ಯಂ ಪಶ್ಯತಿ । ತದ್ಧೇತುಭೂತಾನಿ ತ್ರೀಣಿ ಕರ್ಮಾಣಿ ಯುವಾಭ್ಯಾಂ ಕೃತಾನೀತಿ ಭಾವಃ । ಅತ್ರ ನಿರುಕ್ತಂ ಬಕುರೋ ಭಾಸ್ಕರೋ ಭಯಂಕರೋ ಭಾಸಮಾನೋ ದ್ರವತೀತಿ ವಾ । ಯವಮಿವ ವೃಕೇಣಾಶ್ವಿನೌ ನಿವಪಂತೌ ವೃಕೋ ಲಾಂಗಲಂ ಭವತಿ ವಿಕರ್ತನಾದಿತ್ಯಾದಿಕಮನುಸಂಧೇಯಂ । ನಿ. ೬-೨೬ ॥ ಮನುಷಾಯ । ಮನೇರೌಣಾದಿಕ ಉಷನ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ದಸ್ರಾ ಅಶ್ವಿನಾ**—ಎಲೈ ದರ್ಶನೀಯರಾದ ಅಶ್ವಿನೀದೇವತೆಗಳೇ । **ಆರ್ಯಾಯ**—ಜ್ಞಾನಿಯಾದ । **ಮನುಷಾಯ**—ಮನುವಿಗೋಸ್ಕರ (ಮನುಷ್ಯನಿಗೋಸ್ಕರ) । **ವೃಕೇಣ**—ನೇಗಿಲಿನಿಂದ (ಉಳಲ್ಪಟ್ಟ ಭೂಮಿಯಲ್ಲಿ) । **ಯವಂ**—ಯವಾದಿ ಧಾನ್ಯಗಳನ್ನು । **ವಪಂತಾ**—ಬಿತ್ತಿಸಿದವರಾಗಿ । **ಇಷಂ**—ಅನ್ನಕ್ಕೆ (ಕಾರಣೀಭೂತವಾದ) ಮಳೆಯನ್ನು । **ದುಹಂತಾ**—(ಮೇಘಗಳಿಂದ) ಕರೆಸುವವರಾಗಿ । (**ತಥಾ**—ಹಾಗೆಯೇ) । **ದಸ್ಯುಂ**—ಹಿಂಸಾಕಾರಕ (ದಸ್ಯು, ಪಿಶಾಚಾದಿಗಳನ್ನು) ರನ್ನು । **ಬಕುರೇಣ**—ಪ್ರಕಾಶಮಾನವಾದ ವಜ್ರಾಯುಧ

ದಿಂದ । **ಅಭಿ ಧಮಂತಾ**—ವಧಿಸಿದವರಾಗಿ । **ಉರು**—ಹೆಚ್ಚಾದ । **ಜ್ಯೋತಿಃ**—(ನಿಮ್ಮ) ಕೀರ್ತಿಯನ್ನು (ಮಾಹಾತ್ಮ್ಯೆಯನ್ನು) । **ಚಕ್ರಥುಃ**—ಮಾಡಿದಿರಿ (ತೋರಿಸಿದಿರಿ) । [(ಅಥವಾ) ಮೇಲೆ ಹೇಳಿದ ಯವಾದಿವಾಪನ, ವೃಷ್ಟಿದೋಹನ ಮತ್ತು ದಸ್ಯುವಧಗಳೆಂಬ ತ್ರಿವಿಧ ಕರ್ಮಗಳನ್ನು ಮಾಡಿ) । **ಉರು**—ವಿಸ್ತೃತವಾದ । **ಜ್ಯೋತಿಃ**—ಸೂರ್ಯತೇಜಸ್ಸನ್ನು । **ಮನುಷೇ**—ಮನುವಿಗೋಸ್ಕರ (ಮನುಷ್ಯನಿಗೋಸ್ಕರ) । **ಚಕ್ರಥುಃ**—ಉಂಟು ಮಾಡಿದಿರಿ].

॥ ಭಾವಾರ್ಥ ॥

ದರ್ಶನೀಯರಾದ ಎಲೈ ಅಶ್ವಿನೀದೇವತೆಗಳೇ, ಜ್ಞಾನಿಯಾದ ಮನುವಿಗೋಸ್ಕರ, ನೇಗಿಲಿನಿಂದ (ಉಳಲ್ಪಟ್ಟ ಜಮೀನಿನಲ್ಲಿ) ಯವಾದಿ (ಧಾನ್ಯಗಳನ್ನು ಬಿತ್ತಿಸಿ), ಅನ್ನಕ್ಕೆ (ಕಾರಣೀಭೂತವಾದ ಮಳೆಯನ್ನು) ಕರೆಸಿ, (ಅವುಗಳ) ನಾಶಕರನ್ನು ವಧಮಾಡಿ ವಿಸ್ತೃತವಾದ ಕೀರ್ತಿಯನ್ನು ಪಡೆದಿರಿ (ಆಹಾರವನ್ನುಂಟುಮಾಡಿ, ದಸ್ಯುವಧೆಮಾಡಿ) ವಿಸ್ತೃತವಾದ ಸೂರ್ಯತೇಜಸ್ಸನ್ನು (ಮನುಷ್ಯನಿಗೋಸ್ಕರ ಉಂಟುಮಾಡಿದಿರಿ).

## English Translation.

Aswins, causing the barley to be sown (in the fields that had been prepared) by the plough; milking (the clouds) for the sake of Manu; destroying the Dasyu with the thunderbolt; you have bestowed brilliant light upon the Arya.

॥ ವಿಶೇಷವಿಷಯಗಳು ॥

**ಮನುಷಾಯ—ಮನುಷಶಬ್ದೋ ಮನುಶಬ್ದಪರ್ಯಾಯಃ । ಮನವೇ ಮನೋರರ್ಥಂ ।** ಮನು ಶಬ್ದವು ಯಾವ ಅರ್ಥವನ್ನು ಬೋಧಿಸುವುದೋ ಮನುಷ ಶಬ್ದವೂ ಅದೇ ಅರ್ಥವನ್ನು ಬೋಧಿಸುವಕಾರಣ ಇದು ಮನುಶಬ್ದದ ಪರ್ಯಾಯಶಬ್ದವಾಗಿರುವುದು, ನಿರುಕ್ತದಲ್ಲಿ **ಮನುಃ । ಮನುರ್ಮನನಾತ್** (ನಿ. ೧೨-೩೪) ಮನನ ಮಾಡುವವನು, ಮನುಷ್ಯನು ಎಂದು ಅರ್ಥವಾಗುತ್ತದೆ ಮನುಷ್ಯನಿಗಾಗಿ ಎಂದು ಅರ್ಥ.

**ಬಕುರೇಣ ಅಭಿ ಧಮಂತಾ—ಬಕುರೋ ಭಾಸಮಾನೋ ವಜ್ರಃ । ಅತ್ರ ನಿರುಕ್ತಂ ಬಕುರೋ— ಭಯಂಕರೋ ಭಾಸಮಾನೋ ಪ್ರವತೀತಿ ವಾ** (ನಿ. ೬-೨೫, ೨೬) **ಯವಮಿವ ವೃಕೇಣ ಅಶ್ವಿನಾ ನಿವಪನ್ತಾ ವೃಕೋ ಲಾಂಗಲಂ ಭವತಿ ವಿಕರ್ತನಾತ್ ।** ನಿರುಕ್ತದಲ್ಲಿ ಬಕುರಶಬ್ದಕ್ಕೆ ಭಾಸ್ಕರ—ಪ್ರಕಾಶಿಸುವ ಸೂರ್ಯ, ಭಯವನ್ನು ಉಂಟುಮಾಡುವುದು- ಪ್ರಕಾಶಿಸುವುದು ಎಂಬ ಅರ್ಥಗಳನ್ನು ವಿವರಿಸಿರುವುದರಿಂದ ಇಲ್ಲಿ ಪ್ರಕಾಶಿಸುವ ವಜ್ರಾಯುಧವೆಂದು ಸಾಯಣರು ಅರ್ಥಮಾಡಿರುತ್ತಾರೆ. ವಿಕರ್ತನಾತ್—ವೃಕಃ ಸೀಳುವುದು ಅಥವಾ ಕತ್ತರಿಸುವುದು ಎಂದು ಅರ್ಥವುಳ್ಳದ್ದಾದ ಕಾರಣ ವೃಕಶಬ್ದಕ್ಕೆ ಭೂಮಿಯನ್ನು ಸೀಳುವ ನೇಗಿಲು ಎಂದು ಅರ್ಥವು. ಅಶ್ವಿನೀದೇವತೆಗಳು ವ್ಯವಸಾಯ ಮಾಡಿದ ಭೂಮಿಯಲ್ಲಿ ಬೆಳೆಯುವಂತೆ ಮಾಡಿ, ಅದರ ವೃದ್ಧಿಗೆ

ಮಳೆಯು ಬರುವಂತೆ ಮಾಡಿ, ಬೆಳೆಯನ್ನು ಕಳ್ಳರೇ ಮೊದಲಾದವರು ಕದಿಯದಂತೆ ಅವರನ್ನು ವಜ್ರಾಯುಧವೇ ಮೊದಲಾದ ಭಯಂಕರವಾದ ಆಯುಧಗಳಿಂದ ಶಿಕ್ಷೆಯನ್ನು ಮಾಡಿ ಮನುಷ್ಯರನ್ನು ರಕ್ಷಿಸುತ್ತಿರುವರು. ಇದರಿಂದ ಮನುಷ್ಯರಿಗೆ ತಮ್ಮಗಳಲ್ಲಿರುವ ಉತ್ತಮೋತ್ತಮವಾದ ವಿಪುಲವಾದ ಮಹಿಮೆಯನ್ನು ಪ್ರಕಾಶಗೊಳಿಸುವರು. ಎಂದು ಅರ್ಥವನ್ನು ಸಾಯಣರು ಹೇಳಿರುವರು. ಮತ್ತು ಈ ಪ್ರಕಾರವಾದ ಮೂರು ಕರ್ಮಗಳನ್ನೂ ಆಚರಿಸುವುದರಿಂದ ಮನುಷ್ಯನಿಗೆ ಅತ್ಯಂತ ಪ್ರಭಾವದಿಂದ ಇರುವ ಸೂರ್ಯನೆಂದು ಹೆಸರುಳ್ಳ ಜ್ಯೋತಿಸ್ಸು ಅಂದರೆ ವ್ಯಾವಹಾರಿಕ ಮತ್ತು ಆಧ್ಯಾತ್ಮಿಕವಾದ ಪ್ರಕಾಶವು ಬೆಳಗುವಂತೆ ಮಾಡಿ ಮನುಷ್ಯನು ಆರ್ಯ–ಪೂಜ್ಯನಾಗುವಂತೆ ಮಾಡುವರು. ಮನುಷ್ಯನ ಜೀವನಕ್ಕೆ ಕಾರಣವಾದ ಈ ಮೂರು ವಿಧವಾದ ಕರ್ಮಗಳನ್ನೂ ಅಶ್ವಿನೀದೇವತೆಗಳು ಆಚರಿಸಿ ಮನುಷ್ಯನು ಜೀವಿಸುವಂತೆಯೂ, ಜೀವಿಸಿಕೊಂಡು ಇರುತ್ತಾ ಸೂರ್ಯನನ್ನು ಕಾಣುವಂತೆಯೂ ಮಾಡಿರುವರು ಎಂದು ಇನ್ನೊಂದು ಅರ್ಥವನ್ನೂ ಹೇಳಿರುತ್ತಾರೆ. ಸ್ಕಂದಸ್ವಾಮಿಗಳು ಈ ವಿಷಯದಲ್ಲಿ—

**ಯಾಭಿರ್ನರಾ ಶಯವೇ ಯಾಭಿರತ್ರಯೇ ಯಾಭಿಃ ಪುರಾ ಮನವೇ ಗಾತುಮೀಷಥುಃ ।**
**ಯಾಭಿಶ್ಶಾರೀರಾಜತಂ ಸ್ಯೂಮರಶ್ಮಯೇ ತಾಭಿರೂ ಷು ಊತಿಭಿರಶ್ವಿನಾ ಗತಮ್ ॥**

(ಋ. ಸಂ. ೧-೧೧೨-೧೬)

ಎಂಬ ಋಕ್ಕನ್ನು ಉದಹರಿಸಿ **ಮನುಷಶಬ್ದೋಽತ್ರ ಮನೋಃ ಪರ್ಯಾಯಃ ಮನುನಾಮ್ನೋ ರಾಜ್ಞೋ ಅರ್ಥಾಯ** ಮನುಷಶಬ್ದವು ಮನುಶಬ್ದದ ಪರ್ಯಾಯ ಪದವಾಗಿರುತ್ತದೆ. ಮನು ಎಂದು ಹೆಸರುಳ್ಳ ರಾಜನಿಗಾಗಿ ಎಂದು **ಅರ್ಥ**ವನ್ನು ಮಾಡಿ ೧-೧೧೨-೬ ನೇ ಋಕ್ಕಿನ ಎರಡನೇ ಪಾದದಿಂದ ಈ ಅರ್ಥವು ವಿವೃತವಾಗಿರುತ್ತದೆ ಎಂದು ವ್ಯಾಖ್ಯಾನಮಾಡಿರುವರು. ಮತ್ತೂ—

**ಯುವಾಮಾರ್ಯಸ್ಯಾರ್ಥಾಯ ವಪನವೃಷ್ಟಿದೋಹನದಸ್ಯುಹನನೈಸ್ತ್ರಿಭಿಃ ಕರ್ಮಭಿಃ ಮಹಾಪ್ರಭಾವೌ ಯುವಾಂ ಸಾಧೂನಾಂ ಅನುಗ್ರಹಾರ್ಥಂ ಜಾತೌ । ಅಥವಾ ಅಭಿ ದಸ್ಯುಮಿತಿ ದಸ್ಯುಶಬ್ದೇನ ದುರ್ಭಿಕ್ಷ ಉಚ್ಯತೇ । ಬಕುರಶಬ್ದೇನಾತ್ರ ಮಹಾನ್ ವೃಷ್ಟ್ಯುದಕಸಮೂಹಃ । ಜ್ಯೋತಿಶ್ಶಬ್ದೇನಾಪಿ ಸುಭಿಕ್ಷಮಿತಿ । ಮಹತ್ತ್ವಾತ್ ಭಯಂಕರೇಣ ವೃಷ್ಟ್ಯುದಕಸಮೂಹೇನ ಅಭಿಘ್ನಂತೌ ವಿಸ್ತೀರ್ಣಂ ಸುಭಿಕ್ಷಂ ಕೃತವಂತೌ ಯುವಾಂ ಆರ್ಯಸ್ಯಾರ್ಥಾಯ ॥**

ಅಶ್ವಿನೀದೇವತೆಗಳು ಬೆಳೆಯು ಬೆಳೆಯುವಂತೆ ಬೀಜವನ್ನು ಬಿತ್ತುವುದು, ಬೆಳೆಯು ವೃದ್ಧಿಯಾಗುವುದಕ್ಕೆ (ಮಳೆಯನ್ನು ಹುಯಿಸುವುದು) ವೃಷ್ಟಿಯು ಬರುವಂತೆ ಮಾಡುವುದು, ಆವರವರಿಗೆ ಆ ಬೆಳೆಯು ಸಿಕ್ಕುವಂತೆ ತುಂಟರಾದವರನ್ನು ನಿಗ್ರಹಮಾಡುವುದು ಎಂಬ ಈ ಮೂರು ವಿಧ ಕಾರ್ಯಗಳನ್ನೂ ನಿರ್ವಹಿಸುವುದರಿಂದ ಬಹಳವಾದ ಮಹಿಮೆಯುಳ್ಳವರಾಗಿರುವರು. ಇವರು ದುಷ್ಟನಿಗ್ರಹ ಶಿಷ್ಟಪರಿಪಾಲನೆಯನ್ನು ಮಾಡುತ್ತಾ ಪೂಜ್ಯರಾದ ಆರ್ಯರನ್ನು ರಕ್ಷಣೆ ಮಾಡುವುದಕ್ಕಾಗಿಯೇ ಉತ್ಪನ್ನರಾಗಿರುವರು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿರುವರು. ಮತ್ತು ಅಭಿದಸ್ಯು ಶಬ್ದದಿಂದ ದುರ್ಭಿಕ್ಷ ಅಥವಾ ಕ್ಷಾಮವೂ, ಬಕುರಶಬ್ದದಿಂದ ಅತಿಶಯವಾದ ವೃಷ್ಟಿಯೂ, ಜ್ಯೋತಿಶ್ಶಬ್ದದಿಂದ

ಸುಭಿಕ್ಷವೂ ಹೇಳಲ್ಪಡುವ ಕಾರಣ (ದುರ್ಭಿಕ್ಷ) ಕ್ಷಾಮುಗಾಲದಲ್ಲಿ ಅನಾವೃಷ್ಟಿ ನಿವಾರಕವಾಗುವಂತೆ ಬಹಳವಾಗಿ ಮಳೆಯು ಹುಯ್ಯುವಂತೆಯೂ ಸುಭಿಕ್ಷವುಂಟಾಗುವಂತೆಯೂ ಮಾಡಿ ಕ್ಷಾಮವನ್ನು ನಾಶಗೊಳಿಸಿ ಸಾಧುಗಳನ್ನು ರಕ್ಷಿಸುವ ಕಾರ್ಯವನ್ನು ಆರ್ಯರಿಗಾಗಿ ಅಶ್ವಿನೀದೇವತೆಗಳು ಆಚರಿಸುತ್ತಿರುವರು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ವಪಂತಾ**—ಡುವಪ್ ಬೀಜಸಂತಾನೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದುದೆಂದು ಸ್ವೀಕರಿಸಬೇಕು. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದುಹಂತಾ**—ದುಹ ಪ್ರಪೂರಣೇ. ಧಾತು. ಅದಾದಿ. ಲಡರ್ಥದಲ್ಲಿ ಶತೃಪ್ರಯ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ಪಿಗೆ **ಲುಕ್**. ಅದುಪದೇಶದ ಪರದಲ್ಲಿಲ್ಲದಿರುವುದರಿಂದ ಲಸಾರ್ವಧಾತುಕಕ್ಕೆ ಅನುದಾತ್ತಸ್ವರ ಬರುವುದಿಲ್ಲ. ಆಗ ಪ್ರತ್ಯಯದ ಆದ್ಯುದಾತ್ತಸ್ವರ ಉಳಿಯುತ್ತದೆ. ಅಪಿತ್ತಾದ ಸಾರ್ವಧಾತುಕವಾಗುವುದರಿಂದ ಅದಕ್ಕೆ ಙಿದ್ವದ್ಭಾವವಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ ನುಮಾಗಮ.

**ಮನುಷಾಯ**—ಮನ ಜ್ಞಾನೇ ಧಾತು. ಇದಕ್ಕೆ ಔಣಾದಿಕವಾದ ಉಷನ್ ಪ್ರತ್ಯಯ. ಇದು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದಆದ್ಯುದಾತ್ತಸ್ವರ ಬರುತ್ತದೆ.

**ದಸ್ಯುಮ್**—ದಸು ಉಪಕ್ಷಯೇ ಧಾತು. ದಿವಾದಿ. ಇದಕ್ಕೆ ಔಣಾದಿಕ ಯುನ್ ಪ್ರತ್ಯಯ.

**ಧಮಂತಾ**—ಧಮ ಧಾತುವು ವಧಾರ್ಥದಲ್ಲಿ ಪ್ರಯುಕ್ತವಾಗಿದೆ. ಹಿಂದಿನಂತೆಯೇ ಲಡರ್ಥದಲ್ಲಿ ಶತೃ ಪ್ರತ್ಯಯ. ವಿಭಕ್ತಿಗೆ ಆಕಾರಾದೇಶ. ಲಸಾರ್ವಧಾತುಕ ಅನುದಾತ್ತನಾದುದರಿಂದ ಧಾತುಸ್ವರ ಉಳಿಯುತ್ತದೆ. ನುಮಾಗಮ ಅದಕ್ಕೆ ಅನುಸ್ವಾರ ಪರಸವರ್ಣ.

**ಆರ್ಯಾಯ**—ಋ ಗತೌ ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಋಕಾರಕ್ಕೆ ವೃದ್ಧಿ ರಪರವಾಗಿ ಬರುತ್ತದೆ. ಆರ್ಯ ಎಂದು ರೂಪವಾಗುತ್ತದೆ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೨೧ ॥



॥ ಸಂಹಿತಾಪಾಠಃ ॥

ಆಥರ್ವಣಾಯಾಶ್ವಿನಾ ದಧೀಚೇಽಶ್ವ್ಯಂ ಶಿರಃ ಪ್ರತ್ಯೈರಯತಂ ।
ಸ ವಾಂ ಮಧು ಪ್ರ ವೋಚದೃತಾಯನ್ತ್ವಾಷ್ಟ್ರಂ ಯದ್ದಸ್ರಾವ-
ಪಿಕಕ್ಷ್ಯಂ ವಾಂ ॥ ೨೨ ॥

॥ ಪದಪಾಠಃ ॥

ಆಥರ್ವಣಾಯ । ಅಶ್ವಿನಾ । ದಧೀಚೇ । ಅಶ್ವ್ಯಂ । ಶಿರಃ । ಪ್ರತಿ । ಐರಯತಂ ।
ಸಃ । ವಾಂ । ಮಧು । ಪ್ರ । ವೋಚತ್ । ಋತಽಯನ್ । ತ್ವಾಷ್ಟ್ರಂ । ಯತ್ ।
ದಸ್ರೌ । ಅಪಿಽಕಕ್ಷ್ಯಂ । ವಾಂ ॥ ೨೨ ॥

॥ ಸಾಯಣಭಾಷ್ಯಂ ॥

ತದ್ವಾಂ ನರಾ ಸನಯೇ । ಋ. ೧-೧೧೬-೧೨ । ಇತ್ಯತ್ರೋಕ್ತಮಾಖ್ಯಾನಮಿಹಾಪ್ಯನುಸಂಧೇಯಂ । ಹೇ ಅಶ್ವಿನೌ ಆಥರ್ವಣಾಯಾಥರ್ವಣಃ ಪುತ್ರಾಯ ದಧೀಚೇ ದಧ್ಯಙ್ನಾಮ್ನೇ ಮಹರ್ಷಯೇಽಶ್ವ್ಯಮಶ್ವಸಂಬಂಧಿ ಶಿರಃ ಪ್ರತ್ಯೈರಯತಂ । ಪ್ರತ್ಯಧತ್ತಂ । ತದೀಯಂ ಮಾನುಷಂ ಶಿರಃ ಪ್ರಚ್ಛಿದ್ಯಾನ್ಯತ್ರ ನಿಧಾಯಾಶ್ವ್ಯೇನ ಶಿರಸಾ ತಮೃಷಿಂ ಸಮಯೋಜಯತಮಿತ್ಯರ್ಥಃ । ಸ ಚ ವಾಂ ಯುವಾಭ್ಯಾಂ ಪ್ರವರ್ಗ್ಯವಿದ್ಯಾಂ ಮಧುವಿದ್ಯಾಂ ಚ ವಕ್ಷ್ಯಾಮೀತಿ ಪುರಾ ಕೃತಾಂ ಪ್ರತಿಜ್ಞಾಂ ಋತಾಯನ್ ಸತ್ಯಾಮಾತ್ಮನ ಇಚ್ಛನ್ ಮಧು ಮಧುವಿದ್ಯಾಂ ತ್ವಾಷ್ಟ್ರಂ ತ್ವಷ್ಟುರಿಂದ್ರಾಲ್ಲಬ್ಧಂ ಪ್ರ ವೋಚತ್ । ಪ್ರೋಕ್ತವಾನ್ । ಹೇ ದಸ್ರೌ ದರ್ಶನೀಯಾವಶ್ವಿನೌ ವಾಂ ಯುವಯೋಃ ಸಂಬಂಧಿ ಯದಪಿಕಕ್ಷ್ಯಂ ಛಿನ್ನಸ್ಯ ಯಜ್ಞಶಿರಸಃ ಕಕ್ಷಪ್ರದೇಶೇನ ಪುನಃಸಂಧಾನಭೂತಂ ಪ್ರವರ್ಗ್ಯವಿದ್ಯಾಖ್ಯಂ ರಹಸ್ಯಂ ತದಪಿ ವಾಂ ಯುವಾಭ್ಯಾಂ ಪ್ರಾವೋಚದಿತ್ಯರ್ಥಃ ॥ ದಧೀಚೇ । ಅಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಚತುರ್ಥ್ಯೇಕವಚನೇಽಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಉದಾತ್ತನಿವೃತ್ತಿಸ್ವರೇಣ ವಿಭಕ್ತ್ಯುದಾತ್ತತ್ವೇ ಪ್ರಾಪ್ತೇ ತಸ್ಯಾಪವಾದತ್ವೇನ ಚಾವಿತಿ ವಿಭಕ್ತೇಃ ಪೂರ್ವಸ್ಯೋದಾತ್ತತ್ವಂ ಪ್ರಾಪ್ತಂ । ತಸ್ಯಾಪ್ಯಯಮಪವಾದಃ । ಅಂಚೇಶ್ಛಂದಸ್ಯಸರ್ವನಾಮಸ್ಥಾನಮಿತಿ ವಿಭಕ್ತ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಆಥರ್ವಣಾಯ**—ಅಥರ್ವ ಎಂಬುವನ ಪುತ್ರನಾದ । **ದಧೀಚೇ**—ದಧ್ಯಂಚನೆಂಬ ಮಹರ್ಷಿಗೆ । **ಅಶ್ವ್ಯಂ**—ಅಶ್ವಸಂಬಂಧಿಯಾದ । **ಶಿರಃ**—ಶಿರಸ್ಸನ್ನು । **ಪ್ರತಿ ಐರಯತಂ**—(ಅವನ ಶಿರಸ್ಸಿಗೆ ಬದಲಾಗಿ) ಜೋಡಿಸಿದಿರಿ । **ಸಃ**—ಅವನೂ । **ಋತಾಯನ್**—(ತನ್ನ ಪ್ರತಿಜ್ಞೆಯನ್ನು) ಸತ್ಯವನ್ನಾಗಿ ಮಾಡಿಕೊಳ್ಳಲು । **ವಾಂ**—ನಿಮ್ಮಿಬ್ಬರಿಗೆ । **ತ್ವಾಷ್ಟ್ರಂ**—ತ್ವಷ್ಟೃಸಂಬಂಧವಾದ (ಇಂದ್ರನು ತ್ವಷ್ಟೃವಿನಿಂದ ಪಡೆದಿದ್ದ । **ಮಧು**—ಮಧುವಿದ್ಯೆಯನ್ನು । **ಪ್ರ ವೋಚತ್**—ಹೇಳಿಕೊಟ್ಟನು । **ದಸ್ರಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ ಸಂಬಂಧವಾದ । **ಯತ್**—ಯಾವ । **ಅಪಿಕಕ್ಷ್ಯಂ**—ಕಕ್ಷಪ್ರದೇಶದಿಂದ ಶಿರಸ್ಸನ್ನು ಯೋಜನೆಮಾಡುವುದೆಂಬ ವಿದ್ಯೆಯೋ (ಪ್ರವರ್ಗ್ಯ ಎಂಬ ವಿದ್ಯೆ) । **(ತತ್) ಅಪಿ**—ಅದನ್ನೂ । **ವಾಂ**—ನಿಮಗೆ । **ಪ್ರ ವೋಚತ್**—ಹೇಳಿಕೊಟ್ಟನು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಥರ್ವಪುತ್ರನಾದ ದಧ್ಯಂಚ ಎಂಬ ಋಷಿಗೆ (ನೀವು) ಅಶ್ವದ ಶಿರಸ್ಸನ್ನು ಜೋಡಿಸಿದಿರಿ; ಅವನೂ ತನ್ನ ಪ್ರತಿಜ್ಞೆಯನ್ನು ಉಳಿಸಿಕೊಳ್ಳಲು, ನಿಮಗೆ ತ್ವಷ್ಟೃವಿನಿಂದ (ಇಂದ್ರನಿಗೆ) ಲಬ್ಧವಾಗಿದ್ದ ಮಧುವಿದ್ಯೆಯನ್ನೂ, ಕಕ್ಷಪ್ರದೇಶದಿಂದ ಶಿರೋಯೋಜನೆಮಾಡುವ ಪ್ರವರ್ಗ್ಯ ಎಂಬ ರಹಸ್ಯ ವಿದ್ಯೆಯನ್ನೂ ಉಪದೇಶಿಸಿದನು.

## English Translation

You replaced, Aswins, with the head of a horse, (the head of) Dadhyanch, the son of Atharvan, and true to his promise, he revealed to you the mystic knowledge which he had learned from Twashtri, and which was as a ligature of the waist to you.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರನಿಂದ ಉಪದಿಷ್ಟವಾದ ಅತಿರಹಸ್ಯವಾದ ಮಧುವಿದ್ಯೆಯು ದಧೀಚಿಋಷಿಯಿಂದ ನಿಮಗೆ ಉಪದಿಷ್ಟವಾಯಿತು ಎಂಬ ಇತಿಹಾಸವು ಪುನಃ ಇಲ್ಲಿ ಉಕ್ತವಾಗಿರುತ್ತದೆ.

**ತದ್ವಾಂ ನರಾ ಸನಯೇ ದಂಸ ಉಗ್ರಮಾವಿಷ್ಕೃಣೋಮಿ ತನ್ಯತುರ್ನ ವೃಷ್ಟಿಂ ।**
**ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ ॥**

(ಋ. ಸಂ. ೧-೧೧೬-೧೨)

ಎಂಬ ಈ ಋಕ್ಕಿನಲ್ಲಿ ಮೊದಲು ಹೇಳಿರುವುದನ್ನು ಇನ್ನೊಂದು ವಿಧವಾಗಿ ಹೇಳಿರುತ್ತದೆ.

**ಇಚ್ಛನ್ನಶ್ವಸ್ಯ ಯಚ್ಛಿರಃ ಪರ್ವತೇಷ್ವಪಶ್ರಿತಂ । ತದ್ವಿದಚ್ಛರ್ಯಣಾವತಿ ॥**

(ಋ. ಸಂ. ೧-೮೪-೧೪)

**ಅಥರ್ವಣಾಯ ದಧೀಚೇ ಅಥರ್ವಣಃ ಪುತ್ರಾಯ ದಧ್ಯಙ್ ನಾಮ್ನೇ ಮಹರ್ಷಯೇ ಅಶ್ವಸಂಬಂಧಿ ಶಿರಃ ಪ್ರತ್ಯೈರಯತಂ ಪ್ರತ್ಯಧತ್ತಮ್ ।** ಅಥರ್ವಣ ಪುತ್ರನಾದ ದಧ್ಯಙ್ ಎಂದು ಹೆಸರುಳ್ಳ ಋಷಿಯ ಮನುಷ್ಯಾಕಾರ ವಾದ ತಲೆಯನ್ನು ಕತ್ತರಿಸಿ ಕುದುರೆಯ ತಲೆಯನ್ನು ಸೇರಿಸಿ ಇಂದ್ರನಿಂದ ಉಪದಿಷ್ಟವಾದ ಮಧುವಿದ್ಯೆಯನ್ನು ಅಶ್ವಿನೀ ದೇವತೆಗಳು ಉಪದೇಶಹೊಂದಿದರೆಂಬುವದಾಗಿ ವರ್ಣಿಸಿದೆ.

**ತ್ವಾಷ್ಟ್ರಂ—ತ್ವಷ್ಟುರಿಂದ್ರಾಲ್ಲಬ್ಧಂ.** ಮಧುವಿದ್ಯೆಯು ಇಂದ್ರನಿಂದಲೇ ಪ್ರಕಟವಾಗಿದೆ—ಎಂದು ಮಧು ವಿದ್ಯೆಯ ಮಹತ್ತ್ವವೂ ಅದರ ರಹಸ್ಯವೂ ವಿವೃತವಾಗಿರುತ್ತದೆ. ಸ್ಕಂದಸ್ವಾಮಿಗಳು—

**ತ್ವಷ್ಟೇತ್ಯತ್ರ ಇಂದ್ರ ಉಚ್ಯತೇ । ಶತ್ರೂಣಾಂ ತನೂಕರ್ತೃತ್ವಾತ್ । ತ್ವಾಷ್ಟ್ರಂ ಯದಿತಿ ಅಶ್ವಶಿರಸೋ ವಿಶೇಷಣಂ ನ ಬ್ರಹ್ಮಣಃ । ಯುವಾಭ್ಯಾಂ ಶರ್ಯಣಾವತಿ ನಿಹಿತಂ ಶತ್ರೂಣಾಂ ತನೂಕರ್ತ್ರಾ ಇಂದ್ರೇಣ ದೃಷ್ಟಂ ಯಚ್ಛಿರಃ ಗುಹ್ಯಮಪಿ ಯುವಯೋಃ ॥**

ಎಂದು ಹೇಳಿ **ತ್ವಾಷ್ಟ್ರಂ ಯತ್** ಎಂಬ ಪದವು ಅಶ್ವಶಿರಸ್ಸಿಗೆ ವಿಶೇಷಣವಾಗಿರುತ್ತದೆ. ತ್ವಷ್ಟೃ ಬ್ರಹ್ಮನಿಗೆ ವಿಶೇಷಣ ವಾಗಿಲ್ಲ. ತ್ವಷ್ಟೃ ಶಬ್ದಕ್ಕೆ ಇಂದ್ರನೆಂದು ಅರ್ಥವು. ಶತ್ರುಗಳನ್ನು ತನೂಕರಣ (ನಾಶ) ಮಾಡುವುದರಿಂದ ತ್ವಷ್ಟೃ ವಾಗಿರುವ ಇಂದ್ರನು ದಧೀಚಿಋಷಿಯ ತಲೆಯನ್ನು ಕತ್ತರಿಸಿ, ಯಾರಿಗೂ ತಿಳಿಯದ ಹಾಗೆ (ಅಶ್ವಿನೀದೇವತೆಗಳಿಗೂ) ಇರಿಸಿರುವ ರಹಸ್ಯವನ್ನೂ ತಿಳಿದು ಇರುವನು ಎಂದು ಅರ್ಥಮಾಡಿರುವರು. ಸಾಯಣರು **ತ್ವಾಷ್ಟ್ರಂ** ಎಂಬ ಪದಮನ್ನು **ಅಪಿಕಕ್ಷ್ಯಂ** ಎಂಬ ಪದಕ್ಕೆ ವಿಶೇಷಣಮಾಡಿ. **ತ್ವಷ್ಟುರಿಂದ್ರಾಲ್ಲಬ್ಧಂ—ಛಿನ್ನಸ್ಯ ಯಜ್ಞಶಿರಸಃ ಕಕ್ಷಪ್ರದೇಶೇನ ಪುನಸ್ಸಂಧಾನಭೂತಂ ಪ್ರವರ್ಗ್ಯ ವಿದ್ಯಾಖ್ಯಂ ರಹಸ್ಯಂ ।** ತ್ವಷ್ಟೃಬ್ರಹ್ಮನಿಂದ,ಇಂದ್ರನೂ, ಇಂದ್ರನಿಂದ ದಧೀಚನೂ ಮಧುವಿದ್ಯೆಯನ್ನು ಉಪದೇಶಹೊಂದಿದರು. ಛಿನ್ನವಾದ ಯಜ್ಞಶಿರಸ್ಸನ್ನು ಪುನಸ್ಸಂಧಾನ (ಮಾಡಬಹುದಾದ) ಮಾಡುವ ವಿಷಯವನ್ನು ಬೋಧಿಸುವ ಪ್ರವರ್ಗ ವಿದ್ಯಾರಹಸ್ಯವೆಂದು ಅರ್ಥಮಾಡಿರುವರು.

**ಋತಾಯನ್—ಪ್ರವರ್ಗ್ಯವಿದ್ಯಾಂ ಮಧುವಿದ್ಯಾಂ ಚ ವಕ್ಷ್ಯಾಮೀತಿ ಪುರಾ ಕೃತಾಂ ಪ್ರತಿಜ್ಞಾಂ ಸತ್ಯಾಮಾತ್ಮನ ಇಚ್ಛನ್ ।** ಪ್ರವರ್ಗವಿದ್ಯೆಯನ್ನೂ ಮಧುವಿದ್ಯೆಯನ್ನೂ ಉಪದೇಶಮಾಡುವೆನೆಂದು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡಲು ಇಚ್ಛಿಮಾಡಿದನು ಎಂದು ಸಾಯಣರು ಋತ ಶಬ್ದಕ್ಕೆ ಸತ್ಯಪರವಾಗಿ ಅರ್ಥ ಮಾಡಿರುವರು. ಸ್ಕಂದಸ್ವಾಮಿಗಳು—**ಋತೆಯೇ—ಸುಪ ಆತ್ಮನಃ ಕ್ಯಚ್ ಇತಿ ಕ್ಯಚ್ ಪ್ರತ್ಯಯಃ ಪರೇಚ್ಛಾಯಾಮತ್ರದ್ರಷ್ಟವ್ಯಃ—**

**ತ್ವಂ ನಸ್ಸೋಮ ವಿಶ್ವತೋ ರಕ್ಷಾ ರಾಜನ್ನಘಾಯತಃ । ನ ರಿಷ್ಯೇತ್ತ್ವಾವತಃ ಸಖಾ ॥**

(ಋ. ಸಂ. ೧-೯೧-೮)

**ಇತಿ ಯಥಾ । ಋತಂ ಸತ್ಯಂ । ತದೇವ ಬ್ರಹ್ಮ ತದ್ಯುವಯೋರಿಚ್ಛನ್ ।** ಋತಯನ್ ಎಂಬ ರೂಪವು ಋತ ಶಬ್ದದ ಮೇಲೆ ಪರೇಚ್ಛೆಯಲ್ಲಿ ಬಂದಿರುವ ಕ್ಯಚ್ ಪ್ರತ್ಯಯಾಂತದಿಂದ ಆಗಿರುತ್ತದೆ. **ರಕ್ಷಾ ರಾಜನ್ನಘಾಯತಃ** ಎಂಬಲ್ಲಿರುವ ಅಘಾಯತಃ ಎಂಬ ಶಬ್ದದ ಹಾಗೆ ಕ್ಯಜಂತವಾಗಿರುತ್ತದೆ ಋತವೆಂದರೆ ಸತ್ಯವು. ಸತ್ಯವೇ ಬ್ರಹ್ಮವೆನಿಸಿರುವುದು. ಬ್ರಹ್ಮನನ್ನು (ಬ್ರಹ್ಮವಿದ್ಯೆಯನ್ನು) ನಿಮಗೆ ಉಪದೇಶಮಾಡಲು ಇಚ್ಛಿಸುವೆನು ಎಂಬುವ ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಆಥರ್ವಣಾಯ**—ಅಥರ್ವಣಃ ಅಪತ್ಯಂ ಪುಮಾನ್ ಆಥರ್ವಣಃ. **ತಸ್ಯಾಪತ್ಯಮ್** (ಪಾ. ಸೂ. ೪-೧-೯೨) ಎಂಬುದರಿಂದ ಅಪತ್ಯಾರ್ಥದಲ್ಲಿ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಅನ್** (ಪಾ. ಸೂ. ೬-೪-೧೬೭) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಟಿಲೋಪ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದಧೀಚೇ**—ದಧಿ ಎಂಬುದು ಉಪಪದವಾಗಿರುವಾಗ ಅಂಚು ಗತಿಪೂಜನಯೋಃ ಈ ಧಾತುವಿಗೆ **ಋತ್ವಿಕ್ ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಅನಿದಿತಾಂ ಹಲ ಉಪಧಾ**—(ಪಾ. ಸೂ. ೬-೪-೨೪) ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಇದಕ್ಕೆ ಚತುರ್ಥೀ ಏಕವಚನ ಪರದಲ್ಲಿರುವಾಗ ಭ ಸಂಜ್ಞಾವಿರುವುದರಿಂದ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. **ಚೌ** (ಪಾ. ಸೂ. ೬-೩-೧೩೮) ಸೂತ್ರದಿಂದ ಲುಪ್ತ ನಕಾರ ಅಕಾರವುಳ್ಳ ಅಂಚು ಧಾತುವು ಪರವಾದುದರಿಂದ ಪೂರ್ವಪದಕ್ಕೆ ದೀರ್ಘ. ಅನುದಾತ್ತವಾದ ವಿಭಕ್ತಿನಿಮಿತ್ತಕವಾಗಿ ಧಾತುವಿನ ಉದಾತ್ತಾಕಾರವು ಲುಪ್ತವಾದುದರಿಂದ ವಿಭಕ್ತಿಗೆ **ಅನುದಾತ್ತಸ್ಯ ಚ**—(ಪಾ. ಸೂ. ೬-೧-೧೬೧) ಸೂತ್ರದಿಂದ ಉದಾತ್ತಸ್ವರವು ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ **ಚೌ** (ಪಾ. ಸೂ. ೬-೧-೨೨೨) ಎಂಬುದರಿಂದ ವಿಭಕ್ತಿಯ ಪೂರ್ವಕ್ಕೆ ಉದಾತ್ತಸ್ವರವು ಪ್ರಾಪ್ತವಾಗುತ್ತದೆ. ಇದಕ್ಕೂ ಅಪವಾದವಾಗಿ **ಅಂಚೇಶ್ಛಂದಸ್ಯಸರ್ವನಾಮಸ್ಥಾನಮ್** (ಪಾ. ಸೂ. ೬-೧-೧೭೦) ಎಂಬುದರಿಂದ ಪುನಃ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಶ್ವ್ಯಮ್**—ಅಶ್ವಸ್ಯ ಸಂಬಂಧಿ ಅಶ್ವ್ಯಮ್. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಐರಯತಮ್**—ಈರ ಗತೌ ಕಂಪನೇ ಚ ಧಾತು. ಣಿಜಂತದ ಮೇಲೆ ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ವೋಚತ್**—ವಚ ಪರಿಭಾಷಣೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಅಸ್ಯತಿವಕ್ತಿಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಅಙ್ ಪರವಾದಾಗ ಧಾತುವಿಗೆ ಉಮಾಗಮ.

ಗುಣ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ನಿಘಾತಸ್ವರ ಬರುತ್ತದೆ.

**ಋತಾಯನ್**—ಋತಂ ಸತ್ಯಂ ಆತ್ಮನಃ ಇಚ್ಛತೀತಿ ಋತಾಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. **ಅಕೃತ್ ಸಾರ್ವಧಾತುಕಯೋಃ ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಕ್ಯಚ್ ನಿಮಿತ್ತವಾಗಿ ಪೂರ್ವಕ್ಕೆ ದೀರ್ಘ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಕ್ಯಚ್ ಸ್ವರದಿಂದ ಅಂತೋದಾತ್ತವಾಗುತ್ತದೆ.

**ತ್ವಾಷ್ಟ್ರಮ್**—ತ್ವಷ್ಟುಃ ಲಬ್ಧಮ್. ತ್ವಾಷ್ಟ್ರಮ್. **ತಸ್ಯೇದಮ್** (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇ**—(ಪಾ. ಸೂ. ೭-೧-೧೧೭) ಎಂಬುದರಿಂದ ಆದಿವೃದ್ಧಿ. ಯಣಾದೇಶ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ದಸ್ರಾ**—**ಆಮಂತ್ರಿತಸ್ಯ ಚ** (ಪಾ ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೨೨ ॥



॥ ಸಂಹಿತಾಪಾಠಃ ॥

ಸದಾ ಕವೀ ಸುಮತಿಮಾ ಚಕೇ ವಾಂ ವಿಶ್ವಾ ಧಿಯೋ ಅಶ್ವಿನಾ ಪ್ರಾವತಂ ಮೇ ।
ಅಸ್ಮೇ ರಯಿಂ ನಾಸತ್ಯಾ ಬೃಹಂತಮಪತ್ಯಸಾಚಂ ಶ್ರುತ್ಯಂ ರರಾಥಾಂ ॥ ೨೩ ॥

॥ ಪದಪಾಠಃ ॥

ಸದಾ । ಕವೀ ಇತಿ । ಸುऽಮತಿಂ । ಆ । ಚಕೇ । ವಾಂ । ವಿಶ್ವಾಃ । ಧಿಯಃ । ಅಶ್ವಿನಾ । ಪ್ರ । ಅವತಂ । ಮೇ ।
ಅಸ್ಮೇ ಇತಿ । ರಯಿಂ । ನಾಸತ್ಯಾ । ಬೃಹಂತಂ । ಅಪತ್ಯऽಸಾಚಂ । ಶ್ರುತ್ಯಂ । ರರಾಥಾಂ ॥ ೨೩ ॥

॥ ಸಾಯಣಭಾಷ್ಯಂ ॥

**ಹೇ ಕವೀ ಕ್ರಾಂತದರ್ಶಿನೌ ಮೇಧಾವಿನಾವಶ್ವಿನೌ ವಾಂ ಯುವಯೋಃ ಸುಮತಿಂ ಕಲ್ಯಾಣೀ-ಮನುಗ್ರಹಾತ್ಮಿಕಾಂ ಬುದ್ಧಿಂ ಸದಾ ಸರ್ವದಾ ಚಕೇ । ಆಭಿಮುಖ್ಯೇನ ಪ್ರಾರ್ಥಯೇ । ಮೇ ಮದೀಯಾನಿ ವಿಶ್ವಾ ಧಿಯಃ ಸರ್ವಾಣಿ ಕರ್ಮಾಣಿ ಯುವಾಂ ಪ್ರಾವತಂ । ಪ್ರಕರ್ಷೇಣ ರಕ್ಷತಂ । ಅಪಿ ಚಾಸ್ಮೇ ಅಸ್ಮಭ್ಯಂ ಹೇ ನಾಸತ್ಯಾವಶ್ವಿನೌ ಬೃಹಂತಂ ಮಹಾಂತಮಪತ್ಯಸಾಚಮಪತ್ಯೈಃ ಪುತ್ರಾದಿಭಿಃ ಸಮವೇತಂ ಶ್ರುತ್ಯಂ ಪ್ರಶಂಸನೀಯಮುತ್ಕೃಷ್ಟಂ ರಯಿಂ ಧನಂ ರರಾಥಾಂ । ಪ್ರಯಚ್ಛತಂ ॥ ಚಕೇ । ಕೈ ಗೈ ಶಬ್ದೇ । ವ್ಯತ್ಯಯೇನಾತ್ಮನೇಪದಂ । ಲಿಟ್ಯುತ್ತಮೈಕವಚನೇ ರೂಪಂ । ಅಸ್ಮೇ । ಸುಪಾಂ ಸುಲುಗಿತಿ ಚತುರ್ಥೀ-ಬಹುವಚನಸ್ಯ ಶೇಆದೇಶಃ । ಅಪತ್ಯಸಾಚಂ । ಅಪತ್ಯೈಃ ಸಹ ಸಚತೇ ಸಂಗಚ್ಛತ ಇತ್ಯಪತ್ಯಸಾಚ್ । ಛಾಂದಸೋ ಣ್ವಿಃ । ಶ್ರುತ್ಯಂ । ಶ್ರುತಿಃ ಸ್ತುತಿಃ । ತತ್ರ ಭವಂ ಶ್ರುತ್ಯಂ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ರರಾಥಾಂ । ರಾ ದಾನೇ । ಲೋಟಿ ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ಶಪಃ ಶ್ಲುಃ ॥**

॥ ಪ್ರತಿಪದಾರ್ಥ ॥

**ಕವೀ**—ಕ್ರಾಂತದರ್ಶಿಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ । **ಸುಮತಿಂ**—ಅನುಗ್ರಹಾತ್ಮಿಕವಾದ ಬುದ್ಧಿಯನ್ನು । **ಸದಾ**—ಸರ್ವದಾ । ಆ **ಚಕೇ**—ಪ್ರಾರ್ಥಿಸುತ್ತೇನೆ । **ಮೇ**—ನನ್ನ । **ವಿಶ್ವಾ ಧಿಯಃ**—ಎಲ್ಲಾ ಕರ್ಮಗಳನ್ನೂ । **ಪ್ರಾವತಂ**—(ನೀವಿಬ್ಬರೂ) ಚೆನ್ನಾಗಿ ರಕ್ಷಿಸಿದಿರಿ । (**ಅಪಿ ಚ**—ಮತ್ತು) । **ಅಸ್ಮೇ**—ನಮಗೆ । **ನಾಸನ್ಯಾ**—ಎಲೈ ನಾಸತ್ಯರೇ । **ಬೃಹಂತಂ**—ಹೆಚ್ಚಾದ । **ಅಪತ್ಯಸಾಚಂ**—ಪುತ್ರಾದಿಯುಕ್ತವಾದ ಮತ್ತು । **ಶ್ರುತ್ಯಂ**—ಪ್ರಶಸ್ಯವಾದ (ಉತ್ಕೃಷ್ಟವಾದ) । **ರಯಿಂ**—ಐಶ್ವರ್ಯವನ್ನು । **ರರಾಥಾಂ**—ಅನುಗ್ರಹಿಸಿ.

॥ ಭಾವಾರ್ಥ ॥

ಎಲೈ ತ್ರಿಕಾಲಜ್ಞರಾದ ಆಶ್ವಿನೀದೇವತೆಗಳೇ, ನಿಮ್ಮ ಅನುಗ್ರಹಬುದ್ಧಿಯನ್ನು ನಾನು ಸರ್ವದಾ ಪ್ರಾರ್ಥಿಸುತ್ತೇನೆ; ನನ್ನ ಎಲ್ಲಾ ಕರ್ಮಗಳನ್ನೂ (ನೀವು) ಚೆನ್ನಾಗಿ ರಕ್ಷಿಸಿ; (ಮತ್ತು) ಎಲೈ ನಾಸತ್ಯರೇ, ನಮಗೆ ಪುತ್ರಾದಿಯುಕ್ತವೂ, ಪ್ರಶಸ್ಯವೂ ಆದ ಪ್ರಭೂತೈಶ್ವರ್ಯವನ್ನು ಅನುಗ್ರಹಿಸಿ.

English Translation.

Sapient Aswins, I ever solicit your favour ; protect all my religious duties, and grant, Nasatyas, abundant and excellent wealth, together with offspring.

॥ ವಿಶೇಷವಿಷಯಗಳು ॥

**ಕವೀ— ಕ್ರಾಂತದರ್ಶಿನೌ ಮೇಧಾವಿನಾವಶ್ವಿನೌ** । ಕವಿಶಬ್ದವು ಇಪ್ಪತ್ತುನಾಲ್ಕು ಮೇಧಾವಿನಾಮಗಳಲ್ಲಿ (ನಿ ೩-೧೯) ಉಕ್ತವಾಗಿದೆ. ಮತ್ತು—

**ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।**
**ವಿ ನಾಕಮುಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥**

(ಋ. ಸಂ. ೫-೮೧-೨)

ಎಂಬ ಋಕ್ಕಿನಲ್ಲಿ ನಿರುಕ್ತಕಾರರು **ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ** । (ನಿ. ೧೨-೧೩) ಕವಿಶಬ್ದವನ್ನು ಮೇಧಾವಿ ಪರ್ಯಾಯ ಶಬ್ದಗಳಲ್ಲಿ ಪಾಠಮಾಡಿ ಕವಿಶಬ್ದಕ್ಕೆ ಮೇಧಾವೀ ಎಂದು ಅರ್ಥವನ್ನು ವಿವರಿಸಿರುವರು. ಮತ್ತು **ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ** ಎಂಬಲ್ಲಿಯೂ ಕೂಡ ಈ ಅರ್ಥದ ಜೊತೆಗೆ **ಕವ** ಧಾತುವಿನಿಂದ ನಿಷ್ಪನ್ನವಾದ ಕಾರಣ ಕವಿಶಬ್ದವು ಕ್ರಾಂತದರ್ಶೀ ಎಂಬ ಅರ್ಥಬೋಧಕವಾಗಿರುವುದು ಎಂದು ವ್ಯಾಖ್ಯಾನಮಾಡಿರುವರು. ಸಾಯಣರೂ ಕೂಡ ಕವೀ ಎಂಬ ಶಬ್ದವನ್ನು ಅಶ್ವಿನಾ ಎಂಬ ಪದಕ್ಕೆ ವಿಶೇಷಣವನ್ನು ಮಾಡಿ ಅಶ್ವಿನೀದೇವತೆಗಳು ಮೇಧಾವಿಗಳಾಗಿಯೂ, ವಿಮರ್ಶಕರಾಗಿಯೂ ಇರುವರು ಎಂದು ಅರ್ಥವನ್ನು ವಿವರಿಸಿರುವರು.

**ಅಪತ್ಯಸಾಚಂ— ಅಪತ್ಯೈಃ ಸಹ ಸಚತೇ ಸಂಗಚ್ಛತೆ ಇತಿ ಅಪತ್ಯಸಾಚಂ । ಅಪತ್ಯೈಃ ಪುತ್ರಾದಿಭಿಃ ಸಮವೇತಂ** । ಪುತ್ರರೇ ಮೊದಲಾದವರಿಂದ ಕೂಡಿರುವ ಎಂದು ಅರ್ಥ.

ಮಂತ್ರದ್ರಷ್ಟೃವಾದ ಋಷಿಯು, ಪ್ರಾಜ್ಞರಾಗಿಯೂ, ವಿಮರ್ಶಕರಾಗಿಯೂ ಇರುವ ಅಶ್ವಿನೀದೇವತೆಗಳು ನಮ್ಮ ವಿಷಯದಲ್ಲಿ ಅನುಗ್ರಹ ಬುದ್ಧಿಯನ್ನೂ, ಮಂಗಳವನ್ನೂ ಉಂಟುಮಾಡಲಿ ಎಂಬ ಪ್ರಾರ್ಥನೆಯೂ, ನಮ್ಮ ಬುದ್ಧಿಯನ್ನು ಸರ್ವಕಾರ್ಯಗಳಲ್ಲಿಯೂ ಸರಿಯಾಗಿರುವಂತೆ ರಕ್ಷಿಸಲಿ ಎಂಬ ಆಶಂಸನೆಯೂ ಮತ್ತು ನಮಗೆ ಅಶ್ವಿನೀದೇವತೆಗಳು, ಪುತ್ರಪೌತ್ರಾದಿಗಳೊಡನೆ ಇರುವ ಎಲ್ಲರಿಂದಲೂ ಪ್ರಶಂಸನೀಯವಾದ ಐಶ್ವರ್ಯವನ್ನು ನಮಗೆ ಅನುಗ್ರಹಿಸಲಿ ಎಂಬ ಪ್ರಾರ್ಥನೆಯೂ ಇಲ್ಲಿ ವರ್ಣಿತವಾಗಿರುವುದೆಂದು ವ್ಯಾಖ್ಯಾನಮಾಡಿರುವರು.

**ರಯಿಂ— ಧನಂ** । ರಯಿ ಶಬ್ದವು ನೂರೊಂದು ಉದಕನಾಮಗಳಲ್ಲಿಯೂ (ನಿ. ೨-೨೪) ಇಪ್ಪತ್ತೆಂಟು ಧನನಾಮಗಳಲ್ಲಿಯೂ (ನಿ ೩-೯) ಉಕ್ತವಾಗಿರುತ್ತದೆ. **ರಯಿರಿತಿ ಧನನಾಮ । ರಾತೇರ್ದಾನಕರ್ಮಣಃ** (ನಿ. ೪-೧೭) ಎಂದು ಯಾಸ್ಕರು ವ್ಯಾಖ್ಯಾನಮಾಡಿರುವುದರಿಂದ ಧನವೆಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸುಮತಿಮ್**— ಮನ ಜ್ಞಾನೇ. ಧಾತು. **ಕ್ತಿಚ್ ಕ್ತೌ ಚ ಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ.

**ಚಕೇ— ಕೈ** ಗೈ ಶಬ್ದೇ. ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಿಟ್ ಉತ್ತಮಪುರುಷ ಏಕವಚನದಲ್ಲಿ **ಟಿತ ಆತ್ಮನೇಪದಾನಾಂ ಟೇ ರೇ**ಎಂಬುದರಿಂದ

ಏತ್ವ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಆದೇಚ ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಮೊದಲು ಧಾತುವಿಗೆ ಆತ್ವ ಬಂದಿರುವುದರಿಂದ ಅಭ್ಯಾಸಕ್ಕೆ ಹ್ರಸ್ವ, ಚುತ್ವ. **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಧಿಯಃ**—ಧ್ಯೈ ಚಿಂತಾಯಾಮ್. ಧಾತು. **ಧ್ಯಾಯತೇಃ ಸಂಪ್ರಸಾರಣಂ ಚ** (ಪಾ. ಸೂ. ೩-೨-೧೭೮-೪) ಎಂಬುದರಿಂದ ಕ್ವಿಪ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿಗೆ ಸಂಪ್ರಸಾರಣ. ದೀರ್ಘ.

**ಅವತಮ್**—ಅವ ರಕ್ಷಣೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ಮೇ**—ಅಸ್ಮದ್ ಶಬ್ದ. ಇದಕ್ಕೆ ಚತುರ್ಥೀ ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ಅದಕ್ಕೆ ಶೇ ಆದೇಶ. ಶಿತ್ತಾದುದರಿಂದ **ಅನೇಕಾಲ್ ಶಿತ್ ಸರ್ವಸ್ಯ** ಎಂಬುದರಿಂದ ಸರ್ವಾದೇಶವಾಗಿ ಬರುತ್ತದೆ. **ಶೇಷೇ ಲೋಪಃ** ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪ.

**ನಾಸತ್ಯಾ**— **ನಭ್ರಾಣ್ ನಪಾತ್**—ಎಂಬುದರಿಂದ ನಿಪಾತಿತವಾಗಿದೆ. **ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಅಪತ್ಯಸಾಚಮ್**—ಅಪತ್ಯೈಃ ಸಹ ಸಚತೇ ಸಂಗಚ್ಛತೇ ಇತಿ ಅಪತ್ಯಸಾಚ್. ಛಾಂದಸವಾಗಿ ಷಚ ಸಮವಾಯೇ, ಈ ಧಾತುವಿಗೆ ಣ್ವಿಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶ್ರುತ್ಯಮ್**—ಶ್ರು ಶ್ರವಣೇ. ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. ಶ್ರುತಿಃ (ಅಂದರೆ) ಸ್ತುತಿಃ ತತ್ರ ಭವಮ್ ಶ್ರುತ್ಯಮ್. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರರಾಥಾಮ್**—ರಾ ದಾನೇ. ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಹ್ರಸ್ವಃ** ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨೩ ॥



॥ ಸಂಹಿತಾಪಾಠಃ ॥

ಹಿರಣ್ಯಹಸ್ತಮಶ್ವಿನಾ ರರಾಣಾ ಪುತ್ರಂ ನರಾ ವಧ್ರಿಮತ್ಯಾ ಅದತ್ತಂ ।
ತ್ರಿಧಾ ಹ ಶ್ಯಾವಮಶ್ವಿನಾ ವಿಕಸ್ತಮುಜ್ಜೀವಸ ಐರಯತಂ ಸುದಾನೂ ॥ ೨೪ ॥

॥ ಪದಪಾಠಃ ॥

ಹಿರಣ್ಯಽಹಸ್ತಂ । ಅಶ್ವಿನಾ । ರರಾಣಾ । ಪುತ್ರಂ । ನರಾ । ವಧ್ರಿಽಮತ್ಯಾಃ । ಅದತ್ತಂ ।
ತ್ರಿಧಾ । ಹ । ಶ್ಯಾವಂ । ಅಶ್ವಿನಾ । ವಿಽಕಸ್ತಂ । ಉತ್ । ಜೀವಸೇ । ಐರಯತಂ । ಸುದಾನೂ ಇತಿ ಸುಽದಾನೂ ॥ ೨೪ ॥

॥ ಸಾಯಣಭಾಷ್ಯಂ ॥

ರರಾಣಾ ರಮಮಾಣೌ ದಾತಾರೌ ವಾ ನರಾ ನೇತಾರೌ ಹೇ ಅಶ್ವಿನೌ ಹಿರಣ್ಯಹಸ್ತಂ ನಾಮ ಪುತ್ರಂ ವಧ್ರಿಮತ್ಯಾ ಏತತ್ಸಂಜ್ಞಾಯೈ ಬ್ರಹ್ಮವಾದಿನ್ಯಾ ಅದತ್ತಂ । ಪ್ರಾಯಚ್ಛತಂ ಹ । ಅಪಿ ಚ ಹೇ ಸುದಾನೂ ಶೋಭನದಾನಾವಶ್ವಿನೌ ತ್ರಿಧಾ ತ್ರೇಧಾ ವಿಕಸ್ತಂ ವಿಚ್ಛಿನ್ನಂ ಶ್ಯಾವಾಖ್ಯಮೃಷಿಂ ಜೀವಸೇ ಜೀವಿತುಮುದೈರಯತಂ । ಅಸುರೈಸ್ತ್ರೇಧಾ ಖಂಡಿತಂ ಶರೀರಂ ಪುನರೇಕೀಕೃತ್ಯೋದಗಮಯತಮಿತ್ಯರ್ಥಃ ॥ ರರಾಣಾ । ರಮತೇಃ ಶಾನಚಿ ಬಹುಲಂ ಛಂದಸೀತಿ ಶಪಃ ಶ್ಲುಃ । ವ್ಯತ್ಯಯೇನ ಮಕಾರಸ್ಯಾತ್ವಂ । ರಾತೇರ್ವಾ ವ್ಯತ್ಯಯೇನ ಶಾನಚ್ । ಪೂರ್ವವತ್ ಶ್ಲುಃ । ವಧ್ರಿಮತ್ಯಾಃ ಚತುರ್ಥ್ಯರ್ಥೇ ಬಹುಲಂ ಛಂದಸೀತಿ ಷಷ್ಠೀ । ಜೀವಸೇ । ಜೀವ ಪ್ರಾಣಧಾರಣೇ । ತುಮರ್ಥೇ ಸೇಸೇನಿತ್ಯಸೇಪ್ರತ್ಯಯಃ ॥

‖ ಪ್ರತಿಪದಾರ್ಥ ‖

**ರರಾಣಾ**— ದಾನಿಗಳೂ (ಕ್ರೀಡಾಸಕ್ತರೂ) । **ನರಾ ಅಶ್ವಿನಾ**—ನೇತೃಗಳೂ ಆದ ಎಲೈ ಅಶ್ವಿನೀ ದೇವತೆಗಳೇ । **ಹಿರಣ್ಯಹಸ್ತಂ**—ಹಿರಣ್ಯಹಸ್ತನೆಂಬ । **ಪುತ್ರಂ**—ಮಗನನ್ನು । **ವಧ್ರಿಮತ್ಯಾಃ**—ವಧ್ರಿಮತಿ ಎಂಬುವಳಿಗೆ । **ಅದತ್ತಂ ಹ**—ಕೊಟ್ಟಿರಷ್ಟೇ (ಮತ್ತು) । **ಸುದಾನೂ ಅಶ್ವಿನಾ**—ಉತ್ತಮದಾನವಮಾಡುವ ಎಲೈ ಅಶ್ವಿನೀದೇವತೆಗಳೇ । **ತ್ರಿಧಾ**—ಮೂರಾಗಿ । **ವಿಕಸ್ತಂ**—ಕತ್ತರಿಸಲ್ಪಟ್ಟಿದ್ದ । **ಶ್ಯಾವಂ**—ಶ್ಯಾವನೆಂಬ ಋಷಿಯನ್ನು । **ಜೀವಸೇ**—(ಪುನಃ) ಜೀವಿಸುವಂತೆ । **ಉತ್ ಐರಯತಂ**—(ಮೂರುಚೂರುಗಳನ್ನು ಸೇರಿಸಿ) ಪ್ರೇರಿಸಿದಿರಿ.

‖ ಭಾವಾರ್ಥ ‖

ದಾನಿಗಳೂ (ಕ್ರೀಡಾಸಕ್ತರೂ) ನೇತೃಗಳೂ ಆದ ಎಲೈ ಅಶ್ವಿನೀದೇವತೆಗಳೇ, ವಧ್ರಿಮತಿ ಎಂಬುವಳಿಗೆ ಹಿರಣ್ಯಹಸ್ತನೆಂಬ ಪುತ್ರನನ್ನು ಅನುಗ್ರಹಿಸಿದಿರಿ ; (ಮತ್ತು ದೈತ್ಯರಿಂದ) ಮೂರಾಗಿಕತ್ತರಿಸಲ್ಪಟ್ಟಿದ್ದ ಶ್ಯಾವ ಎಂಬುವನನ್ನು (ಪುನಃ ಸೇರಿಸಿ) ಜೀವಿಸುವಂತೆ ಮಾಡಿದಿರಿ.

English Translation.

Liberal Aswins, leaders (of sacrifices), you gave to Vadhrimathi her son Hiranyahasta ; bounteous Aswins, you restored to life the triply-mutilated Syava.

‖ ವಿಶೇಷವಿಷಯಗಳು ‖

ವಧ್ರಿಮತೀ ಎಂಬ ಸ್ತ್ರೀಗೆ ಅಶ್ವಿನೀದೇವತೆಗಳು ಹಿರಣ್ಯಹಸ್ತನೆಂದು ಹೆಸರುಳ್ಳ ಪುತ್ರನನ್ನು ಕೊಟ್ಟಿರುವರು ಎಂದು ಸಾಯಣರ ವ್ಯಾಖ್ಯಾನದಲ್ಲಿರುವುದು. ಹಿರಣ್ಯಹಸ್ತನೆಂದರೆ—**ಹಿರಣ್ಮಯೌ ಹಸ್ತೌ ಯಸ್ಮಿನ್ ಸಃ ಹಿರಣ್ಯಹಸ್ತಃ ಹಿರಣ್ಯಬಾಹುಃ ।** ಹಸ್ತಗಳಲ್ಲಿ ಸುವರ್ಣಮಯವಾದ ಆಭರಣಗಳನ್ನು ಹೊಂದಿರುವ ಕಾರಣ ಬಾಹುವು (ತೋಳು) ಹಿರಣ್ಯಹಸ್ತವೆನಿಸಿರುವುದು. ಹಿರಣ್ಯಮಯವಾದ ಹಸ್ತವುಳ್ಳ ಪುತ್ರನೆಂದು ಸ್ಕಂದಸ್ವಾಮಿಗಳ ವಿವರಣೆಯು.

**ವಧ್ರಿಮತ್ಯಾಃ**—ಎಂಬಲ್ಲಿ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಷಷ್ಠೀವಿಭಕ್ತಿಯು ಬಂದಿರುವುದು ಎಂದು ಸಾಯಣರು ವ್ಯಾಖ್ಯಾನಮಾಡಿರುತ್ತಾರೆ. ಸ್ಕಂದಸ್ವಾಮಿಗಳು **ವಧ್ರಿಮತ್ಯೈ ಅಧತ್ತಂ** ಎಂದು ಚತುರ್ಥೀ ವಿಭಕ್ತ್ಯಂತವಾಗಿಯೇ ಪದವನ್ನು ಮಾಡಿ ವ್ಯಾಖ್ಯಾನಮಾಡಿರುತ್ತಾರೆ. ಮತ್ತು ಹಿರಣ್ಯಹಸ್ತದಾನವೂ ಕೂಡ—

**ಶ್ರುತಂ ತಚ್ಛಾಸುರಿವ ವಧ್ರಿಮತ್ಯಾ ಹಿರಣ್ಯಹಸ್ತಮಶ್ವಿನಾವದತ್ತಂ ।**

(ಋ. ಸಂ. ೧-೧೧೬-೧೩)

ಎಂಬ ಋಕ್ಕಿನಲ್ಲಿ ಪ್ರತಿಪಾದಿತವಾಗಿರುತ್ತದೆ.

**ತ್ರಿಧಾ ವಿಕೃತ್ತಂ ಶ್ಯಾವಂ ಜೀವಸೇ ಉದೈರಯತಂ ।** ಅಸುರರು ಶ್ಯಾವನೆಂಬ ಋಷಿಯನ್ನು ಹಿಡಿದು ಕೊಂಡು ಅವನ ಶರೀರವನ್ನು ಮೂರು ತುಂಡಾಗಿ ಕತ್ತರಿಸಿದ ಕಾರಣ ಅವನನ್ನು ರಕ್ಷಿಸುವುದಕ್ಕಾಗಿ ಅಶ್ವಿನೀದೇವತೆಗಳು ಉದಾರವಾದ ಮನಸ್ಸಿನಿಂದ ಪ್ರಾಣದಾನಮಾಡುವ ಇಚ್ಛೆಯುಳ್ಳವರಾಗಿ ಅವನ ಶರೀರದ ಮೂರು ತುಂಡುಗಳನ್ನೂ ಸೇರಿಸಿ ಸರಿಮಾಡಿ ಅವನನ್ನು ಜೀವಂತನನ್ನಾಗಿ ಮಾಡಿ ಕಾಪಾಡಿದರು ಎಂಬ ಇತಿಹಾಸವು ಇಲ್ಲಿ ಉಕ್ತವಾಗಿರುತ್ತದೆ. ಸ್ಕಂದಸ್ವಾಮಿಗಳು—

**ಶ್ಯಾವಂ ಕುಷ್ಠಿತತ್ವಾತ್ ಶ್ಯಾವವರ್ಣಂ ಅಗ್ನೇಃ ಪುತ್ರಸ್ಯ ಘೋರಸ್ಯ ಜ್ಯೇಷ್ಠಪುತ್ರಂ ತ್ರಿಧಾ ತ್ರಿಭಿಃ ಪ್ರಕಾರೈಃ ಜಂಘಯೋರ್ಮಧ್ಯೇ ಶಿರಸಿ ಚ ತ್ರಿಭಿಃ ಪ್ರಕಾರೈಃ ವಿವಿಧಂ ಛಿನ್ನಂ ॥**

ಅಗ್ನಿಯ ಜ್ಯೇಷ್ಠಪುತ್ರನಾದ ಘೋರನೆಂಬವನ ಮಗನು ಕುಷ್ಠರೋಗದಿಂದ ವಿಕಾರವಾದ ರೂಪವನ್ನು ಹೊಂದಿರುವಾಗ ಅವನನ್ನು ಆರೋಗ್ಯವಂತನನ್ನಾಗಿ ಮಾಡಲು ಅಶ್ವಿನೀದೇವತೆಗಳು ಅವನ ಶರೀರವನ್ನು ಮೊಣಕಾಲು ಮತ್ತು ತಲೆ ಇವುಗಳಲ್ಲಿ ಅನೇಕ ವಿಧವಾಗಿ ಕತ್ತರಿಸಿ ಚಿಕಿತ್ಸೆಯನ್ನು ಮಾಡಿ ಅವನನ್ನು ರಕ್ಷಿಸಿದರು ಎಂದು ಅರ್ಥವನ್ನು ವಿವರಿಸಿ.

**ಯುವಂ ಶ್ಯಾವಾಯ ರುಶತೀಮದತ್ತಂ ಮಹಃ ಘೋರಸ್ಯಾಶ್ವಿನಾ ಕಣ್ವಾಯ ।**
**ಪ್ರವಾಚ್ಯಂ ತದ್ವೃಷಣಾ ಕೃತಂ ವಾಂ ಯನ್ನಾರ್ಷದಾಯ ಶ್ರವೋ ಅಧ್ಯಧತ್ತಮ್ ॥**

(ಋ. ಸಂ. ೧-೧೧೭-೮)

ಎಂಬ ಈ ಋಕ್ಕನ್ನೂ,

**ಯಾಭಿಃ ಶಚೀಭಿರ್ವೃಷಣಾ ಪರಾವೃಜಂ ಪ್ರಾಂಧಂ ಶ್ರೋಣಂ ಚಕ್ಷಸ ಏತವೇ ಕೃಥಃ ।**
**ಯಾಭಿರ್ವರ್ತಿಕಾಂ ಗ್ರಸಿತಾಮಮುಂಚತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೮)

ಎಂಬ ಈ ಋಕ್ಕನ್ನೂ ಉದಹರಿಸಿರುವರು. ಇವುಗಳಲ್ಲಿ ಅಶ್ವಿನೀದೇವತೆಗಳು ಮಾಡಿರುವ ಆಶ್ಚರ್ಯಕರವಾದ ಕರ್ಮಗಳು ಉಕ್ತವಾಗಿ ಅವರ ಪ್ರಭಾವವು ನಿರತಿಶಯವಾಗಿರುತ್ತದೆ ಎಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಹಿರಣ್ಯಹಸ್ತಮ್**—ಹಿರಣ್ಯಂ ಹಸ್ತೇ ಯಸ್ಯ ಸಃ ಹಿರಣ್ಯಹಸ್ತಃ. **ಬಹುವ್ರೀಹೌ ಪ್ರಕೃತ್ಯಾಪೂರ್ವ ಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ರರಾಣಾ**—ರಮು ಕ್ರೀಡಾಯಾಮ್. ಧಾತು. **ಲಟಃ ಶತೃಶಾನಚೌ**—(ಪಾ. ಸೂ. ೩-೨-೧೨೪) ಎಂಬುದ ರಿಂದ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ರರಮ್+ಆನ ಎಂದಿರುವಾಗ ವ್ಯತ್ಯಯದಿಂದ ಮಕಾರಕ್ಕೆ ಆತ್ವ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಅಥವಾ ಹಿಂದಿನಂತೆ, ರಾ ದಾನೇ ಧಾತು. ವ್ಯತ್ಯಯದಿಂದ ಶಾನಚ್. ಶ್ಲು ವಿಕರಣ. ಧಾತುವಿಗೆ ದ್ವಿತ್ವ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ ಬರುತ್ತದೆ.

**ವಧ್ರಿಮತ್ಯಾಃ**—ಚತುರ್ಥ್ಯರ್ಥ ತೋರುವಾಗ **ಬಹುಲಂ ಛಂದಸಿ** ಎಂಬುದರಿಂದ ಷಷ್ಠೀ ಬಂದಿದೆ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿಬಂದುದರಿಂದ **ಉದಾತ್ತಯಣೋಹಲ್ ಪೂರ್ವಾತ್** (ಪಾ. ಸೂ. ೬–೧–೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅದತ್ತಮ್**—ಡುದಾಞ್ ದಾನೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ತ್ರಿಧಾ—ಸಂಖ್ಯಾಯಾ ವಿಧಾರ್ಥೇ ಧಾ** (ಪಾ. ಸೂ. ೫–೩–೪೨) ಈ ಸೂತ್ರದಿಂದ ಪ್ರಕಾರಾರ್ಥದಲ್ಲಿ ಧಾ ಪ್ರತ್ಯಯ.

**ವಿಕಸ್ತಮ್**—ಕಸ ಗತೌ. ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩–೨–೧೦೨) ಎಂಬುದರಿಂದ ಕ್ತಪ್ರತ್ಯಯ. **ಗತಿರನಂತರಃ** ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಜೀವಸೇ**—ಜೀವ ಪ್ರಾಣಧಾರಣೇ. ಧಾತು. ತುಮುನರ್ಥ ತೋರುವಾಗ **ತುಮರ್ಥೇ ಸೇಸೇನಸೇ**— (ಪಾ. ಸೂ. ೩–೪–೯) ಎಂಬುದರಿಂದ ಅಸೇ ಪ್ರತ್ಯಯ. **ಕೃನ್ಮೇಜಂತಃ** ಎಂಬುದರಿಂದ ಏಜಂತವಾದ ಕೃದಂತವಾದುದರಿಂದ ಅವ್ಯಯವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ರೂಪವಾಗುತ್ತದೆ. ॥ ೨೪ ॥



॥ ಸಂಹಿತಾಪಾಠಃ ॥

ಏತಾನಿ ವಾಮಶ್ವಿನಾ ವೀರ್ಯಾಣಿ ಪ್ರ ಪೂರ್ವ್ಯಾಣ್ಯಾಯವೋಽವೋಚನ್ ।

ಬ್ರಹ್ಮ ಕೃಣ್ವಂತೋ ವೃಷಣಾ ಯುವಭ್ಯಾಂ ಸುವೀರಾಸೋ ವಿದಥಮಾ ವದೇಮ ॥ ೨೫ ॥

॥ ಪದಪಾಠಃ ॥

ಏತಾನಿ । ವಾಂ । ಅಶ್ವಿನಾ । ವೀರ್ಯಾಣಿ । ಪ್ರ । ಪೂರ್ವ್ಯಾಣಿ । ಆಯವಃ ।
ಅವೋಚನ್ ।

ಬ್ರಹ್ಮ । ಕೃಣ್ವಂತಃ । ವೃಷಣಾ । ಯುವಽಭ್ಯಾಂ । ಸುಽವೀರಾಸಃ । ವಿದಥಂ ।
ಆ । ವದೇಮ ॥ ೨೫ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ವಾಂ ಯುವಯೋಃ ಸಂಬಂಧೀನಿ ಪೂರ್ವ್ಯಾಣಿ ಪ್ರತ್ನಾನ್ಯೇತಾನೀದಾನೀಂ ಮಯೋಕ್ತಾನಿ ವೀರ್ಯಾಣಿ ವೀರಕರ್ಮಾಣ್ಯಾಯವೋ ಮನುಷ್ಯಾ ಮದೀಯಾಃ ಪಿತ್ರಾದಯಃ ಪ್ರಾವೋಚನ್ । ಉಕ್ತವಂತಃ । ವಯಂ ಚ ಹೇ ವೃಷಣಾ ಕಾಮಾಭಿವರ್ಷಕಾವಶ್ವಿನೌ ಯುವಾಭ್ಯಾಂ ಬ್ರಹ್ಮ ಮಂತ್ರಾತ್ಮಕಂ ಸ್ತೋತ್ರಂ ಕೃಣ್ವಂತಃ ಕುರ್ವಂತಃ ಸುವೀರಾಸಃ ಸುವೀರಾಃ ಶೋಭನೈರ್ವೀರೈಃ ಪುತ್ರಾದಿಭಿರುಪೇತಾಃ ಸಂತೋ ವಿದಥಂ ಯಜ್ಞಮಾವದೇಮ । ಆಭಿಮುಖ್ಯೇನ ಸ್ತುತೀರುಚ್ಚಾರಯಾಮ । ಯದ್ವಾ । ವಿದಥಂ ವೇದಯಂತಮತಿಥಿಂ ತದಪೇಕ್ಷಿತಪ್ರದಾನೇನಾ ವದೇಮ । ಆಭಿಮುಖ್ಯೇನ ಪ್ರಿಯ- ಪೂರ್ವಿಕಾಂ ವಾಚಮುಚ್ಚಾರಯಾಮ ॥ ಕೃಣ್ವಂತಃ । ಕೃವಿ ಹಿಂಸಾಕರಣಯೋಶ್ಚ । ಇದಿತ್ತ್ವಾನ್ನುಮ್ । ಲಟಃ ಶತೃ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಅಕಾರಾಂತಾದೇಶಶ್ಚ । ಅತೋ ಲೋಪೇ ಸತಿ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ । ಸುವೀರಾಸಃ । ಶೋಭನಾ ವೀರಾ ಯೇಷಾಂ ತೇ ತಥೋಕ್ತಾಃ । ಆಜ್ಜಸೇರಸುಕ್ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ವಿದಥಂ । ವಿದ ಜ್ಞಾನೇ । ರುವಿದಿಭ್ಯಾಂ ಕಿದಿತ್ಯಥಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರ । **ಪೂರ್ವ್ಯಾಣಿ**—ಪುರಾತನವಾದ । **ಏತಾನಿ**—ಈ (ನನ್ನಿಂದ ಉಕ್ತವಾದ) । **ವೀರ್ಯಾಣಿ**—ವೀರಕರ್ಮಗಳನ್ನು । **ಆಯವಃ**—(ನಮ್ಮ ಪಿತ್ರಾದಿಗಳು) ಮನುಷ್ಯರು । **ಪ್ರ ಅವೋಚನ್**—ವರ್ಣಿಸಿರುವರು । (**ವಯಂ ಚ**—ನಾವೂ ಕೂಡ) । **ಹೇ ವೃಷಣಾ**—ಕಮಾಭಿ ವರ್ಷಕರಾದ ಎಲೈ ಅಶ್ವಿನೀದೇವತೆಗಳೇ । **ಯುವಭ್ಯಾಂ**—ನಿಮ್ಮ । **ಬ್ರಹ್ಮ**—ಮಂತ್ರಾತ್ಮಕವಾದ ಸ್ತುತಿಯನ್ನು । **ಕೃಣ್ವಂತಃ**—ಮಾಡುವವರಾಗಿ । **ಸುವೀರಾಸಃ**—ವೀರರಾದ ಪುತ್ರಾದಿಯುಕ್ತರಾಗಿ । **ವಿದಥಂ**—ಯಜ್ಞವನ್ನು (ಯಜ್ಞದಲ್ಲಿ ಜ್ಞಾನಿಯಾದ ಅತಿಥಿಯನ್ನು) । **ಆ ವದೇಮ**—ಉದ್ದೇಶಿಸಿ (ಸ್ತುತಿವಾಕ್ಯಗಳನ್ನು) ಉಚ್ಚರಿಸೋಣ (ಉಪಚರಿಸಿ ಪ್ರಿಯವಾಕ್ಯಗಳನ್ನಾಡೋಣ)

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮಿಬ್ಬರ ಈ (ಪೂರ್ವೋಕ್ತವಾದ) ಸಾಹಸಕರ್ಮಗಳನ್ನು ನಮ್ಮ ಪೂರ್ವಿಕರು ವರ್ಣಿಸಿರುವರು, ; ಇಷ್ಟಾರ್ಥಪ್ರದರಾದ ಎಲೈ ನಾಸತ್ಯರೇ, ನಾವೂ ಕೂಡ ಮಂತ್ರರೂಪವಾದ ಸ್ತುತಿಯನ್ನು ಮಾಡಿ, ಉತ್ತಮ ಪುತ್ರರಿಂದ ಕೂಡಿ, ಯಜ್ಞಗಳಲ್ಲಿ ಈ ಸ್ತುತಿವಾಕ್ಯಗಳನ್ನು ಉಚ್ಚರಿಸೋಣ (ಜ್ಞಾನಿಗಳಾದ ಅತಿಥಿಗಳನ್ನು ಪಚರಿಸಿ, ಪ್ರಿಯವಾಕ್ಯಗಳನ್ನಾಡೋಣ)

English Translation.

These, your ancient exploits, Aswins, our forefathers have celebrated, and we offer adoration to you, showerers (of benefits), repeating your praises, accompanied by our dependants.

॥ ವಿಶೇಷವಿಷಯಗಳು ॥

**ಪೂರ್ವ್ಯಾಣಿ—ಪ್ರತ್ನಾನಿ ।** **ಪೂರ್ವ್ಯ** ಶಬ್ದವು ಆರು ಪುರಾಣನಾಮಗಳಲ್ಲಿ (ನಿ. ೩-೨೦) ಉಕ್ತವಾಗಿರುತ್ತದೆ. ಬಹಳ ಹಿಂದಿನಕಾಲದಲ್ಲಿ ನಡದಿರುವುದು ಎಂದು ಅರ್ಥ.

ಅಶ್ವಿನೀದೇವತೆಗಳು ಬಹಳ ಹಿಂದಿನಿಂದಲೂ ಆಚರಿಸಿರುವ ಕರ್ಮಗಳು ಅನೇಕವಾಗಿವೆ. ಅವುಗಳನ್ನು ನಮ್ಮ ಪೂರ್ವಿಕರಾದವರು ಬಹಳವಾಗಿ ಪ್ರಶಂಸೆಮಾಡುತ್ತಿದ್ದರು. ಇವುಗಳು ನಮಗೂ ಸ್ತುತ್ಯಗಳಾಗಿ ಇರುತ್ತವೆ. ಎಂದು ಇಲ್ಲಿ ವರ್ಣಿಸಿದೆ. ಅಶ್ವಿನೀದೇವತೆಗಳು ತಮ್ಮನ್ನು ಸ್ತುತಿಮಾಡುವವರಿಗೆ ಅವರ ಇಷ್ಟಗಳನ್ನು ನೆರವೇರಿಸಿ ಕೊಡುವವರು. ಆದ್ದರಿಂದ ನಾವುಗಳು ಅವರ ಸ್ತುತಿರೂಪವಾದ ಮಂತ್ರಗಳನ್ನು ಪಠಿಸುತ್ತಾ ಉತ್ತಮಗುಣಗಳಿಂದ ಕೂಡಿರುವ ಪುತ್ರಪೌತ್ರಾದಿಗಳಿಂದ ಯುಕ್ತರಾಗಿ ಅಶ್ವಿನೀದೇವತೆಗಳಿಗೋಸ್ಕರ ಅತಿಶಯವಾದ ಸ್ತುತಿಗಳನ್ನು ಉಚ್ಚರಿಸಿ ಅವರ ಅನುಗ್ರಹವನ್ನು ಹೊಂದಲು ಅರ್ಹರಾಗೋಣ ಎಂದು ಪ್ರಾರ್ಥಿಸಿದೆ.

**ಅಥವಾ ವಿದಥಂ ವೇದಯಂತಂ ಅತಿಥಿಂ ತದಪೇಕ್ಷಿತಪ್ರದಾನೇನ ಅವದೇಮ ಅಭಿಮುಖ್ಯೇನ ಪ್ರಿಯಪೂರ್ವಿಕಾಂ ವಾಚಮುಚ್ಚಾರಯಾಮ ।**

ಅಶ್ವಿನೀದೇವತೆಗಳ ಮಹಿಮೆಯನ್ನು ತಿಳಿದಿರುವ ಅತಿಥಿಗೆ ಅವನಿಗಿಷ್ಟವಾದ ವಸ್ತುಗಳನ್ನು ದಾನಮಾಡುವುದರಿಂದ ಅಥವಾ ಅವನ ಇಷ್ಟವನ್ನು ನೆರವೇರಿಸುವುದರಿಂದ ಅವನಿಗೆ ಹಿತವಾದ ಮಾತನ್ನು ಯಾವಾಗಲೂ ಹೇಳೋಣ ಎಂದು ಅಶ್ವಿನೀದೇವತೆಗಳನುಗ್ರಹವನ್ನು ಇಲ್ಲಿ ಆಶಂಸಿಸಿದೆ ಎಂದು ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅವೋಚನ್**— ವಚ ಪರಿಭಾಷಣೇ. ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ. **ಇತಶ್ಚ** ಎಂಬುದರಿಂದ ಇಕಾರಲೋಪ. **ಅಸ್ಯತಿವಕ್ತಿಖ್ಯಾತಿಭ್ಯೋಽಙ್** — (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. **ವಚ ಉಮ್** ಎಂಬುದರಿಂದ ಧಾತುವಿಗೆ ಉಮಾಗಮ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಕೃಣ್ವಂತಃ**—ಕೃವಿ ಹಿಂಸಾಕರಣಯೋಶ್ಚ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಡರ್ಥದಲ್ಲಿ ಶತೃಪ್ರತ್ಯಯ. **ಧಿನ್ವಿಕೃಣ್ವ್ಯೋರ ಚ** (ಪಾ. ಸೂ. ೩-೧-೮೦) ಎಂಬುದರಿಂದ ಉ ಪ್ರತ್ಯಯ. ಧಾತುವಿಗೆ ಅಕಾರ ಅಂತಾದೇಶ. **ಅತೋ ಲೋಪಃ** (ಪಾ. ಸೂ. ೬-೪-೪೮) ಸೂತ್ರದಿಂದ ಉ ನಿಮಿತ್ತವಾಗಿ ಅಕಾರಕ್ಕೆ ಲೋಪ. **ಅಚಃ ಪರಸ್ಮಿನ್ ಪೂರ್ವವಿಧೌ** ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ ಉ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ ಕೃಣ್ವತ್ ಶಬ್ದವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಜಸ್ ಬಂದಾಗ ಉಗಿತ್ತಾದುದರಿಂದ ನುಮಾಗಮ.

**ಯುವಭ್ಯಾಮ್—ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್** ಎಂಬಲ್ಲಿ ಲೋಕದಲ್ಲಿ ಮಾತ್ರ ಆತ್ವ ಹೇಳಿರುವುದರಿಂದ ಇಲ್ಲಿ ಆತ್ವ ಬರುವುದಿಲ್ಲ.

**ಸುವೀರಾಸಃ**—ಶೋಭನಾಃ ವೀರಾಃ ಯೇಷಾಂ ತೇ. ಸುವೀರಾಸಃ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. **ವೀರವೀರ್ಯೌ ಚ** (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ವಿದಥಮ್**—ವಿದ ಜ್ಞಾನೇ ಧಾತು. **ರುವಿದಿಭ್ಯಾಂ ಕಿತ್** ಎಂಬುದರಿಂದ ಇದಕ್ಕೆ ಅಥ ಪ್ರತ್ಯಯ. ಕಿತ್ವಾತಿದೇಶಮಾಡಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತಪದವಾಗುತ್ತದೆ.

**ವದೇಮ**—ವದ ವ್ಯಕ್ತಾಯಾಂ ವಾಚಿ. ವಿಧಿಲಿಙ್ ಉತ್ತಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨೫ ॥

ನೂರಹದಿನೇಳನೆಯ ಸೂಕ್ತ ಮುಗಿದುದು.



# ನೂರಹದಿನೆಂಟನೆಯ ಸೂಕ್ತವು

**ಆ ವಾಮಿತ್ಯೇಕಾದಶರ್ಚಂ ತೃತೀಯಂ ಸೂಕ್ತಂ ಕಕ್ಷೀವತ ಆರ್ಷಂ ತ್ರೈಷ್ಟುಭಮಾಶ್ವಿನಂ । ತಥಾ ಚಾನುಕ್ರಾಂತಂ । ಆ ವಾಮೇಕಾದಶೇತಿ ॥ ಪೂರ್ವಸೂಕ್ತಾಭ್ಯಾಂ ಸಹ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು— **ಆ ವಾಂ ರಥಃ** ಎಂಬ ಈ ಸೂಕ್ತವು ಹದಿನೇಳನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಕ್ಷೀವಾನ್ ಎಂಬುವನು ಋಷಿಯು. ಅಶ್ವಿನೀ ದೇವತೆಗಳು, ದೇವತೆಯು. ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಆ ವಾಮೇಕಾದಶ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳ ಪಠನಕ್ಕಾಗಿ ಹಿಂದಿನ ಸೂಕ್ತಗಳೊಡನೆ ಈ ಸೂಕ್ತದ ವಿನಿಯೋಗವೂ ಇರುವುದು.

## ಸೂಕ್ತ—೧೧೮

॥ ಮಂಡಲ—೧ ॥ ಅನುವಾಕ—೧೭ ॥ ಸೂಕ್ತ—೧೧೮ ॥
॥ ಅಷ್ಟಕ—೧ ॥ ಅಧ್ಯಾಯ ೮ ॥ ವರ್ಗ—೧೮, ೧೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
॥ ಋಷಿಃ— ಕಕ್ಷೀವಾನ್ ದೈರ್ಘತಮಸ ಔಶಿಜಃ ॥
॥ ದೇವತಾ—ಅಶ್ವಿನೌ ॥
॥ ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ವಾಂ ರಥೋ ಅಶ್ವಿನಾ ಶ್ಯೇನಪತ್ವಾ ಸುಮೃಳೀಕಃ ಸ್ವವಾಂ ಯಾತ್ವರ್ವಾಙ್ ।
ಯೋ ಮರ್ತ್ಯಸ್ಯ ಮನಸೋ ಜವೀಯಾನ್ತ್ರಿವಂಧುರೋ ವೃಷಣಾ ವಾತರಂಹಾಃ ॥ ೧ ॥

॥ ಪದಪಾಠಃ ॥

ಆ । ವಾಂ । ರಥಃ । ಅಶ್ವಿನಾ । ಶ್ಯೇನಽಪತ್ವಾ । ಸುಽಮೃಳೀಕಃ । ಸ್ವಽವಾನ್ ।
ಯಾತು । ಅರ್ವಾಙ್ ।

ಯಃ । ಮರ್ತ್ಯಸ್ಯ । ಮನಸಃ । ಜವೀಯಾನ್ । ತ್ರಿಽವಂಧುರಃ । ವೃಷಣಾ ।
ವಾತಽರಂಹಾಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ಸ್ವಭೂತೋ ರಥೋಽರ್ವಾಙಸ್ಮದಭಿಮುಖಮಾ ಯಾತು । ಆಗಚ್ಛತು । ಕೀದೃಶೋ ರಥಃ । ಶ್ಯೇನಪತ್ವಾ । ಶ್ಯೇನಾ ಇತ್ಯಶ್ವನಾಮ । ಶಂಸನೀಯಗಮನೈರಶ್ವೈಃ ಪತನ್ ಗಚ್ಛನ್ । ಯದ್ವಾ । ಶ್ಯೇನಃ ಪಕ್ಷೀ । ಸ ಏವ ಶೀಘ್ರಂ ಪತನ್ । ಸುಮೃಳೀಕಃ ಶೋಭನಸುಖಯುಕ್ತಃ ಸ್ವವಾನ್ ಧನವಾನ್ । ಹೇ ವೃಷಣೌ ಕಾಮಾನಾಂ ವರ್ಷಿತಾರಾವಶ್ವಿನೌ ಯೋ ಯುಷ್ಮದೀಯೋ ರಥೋ ಮರ್ತ್ಯಸ್ಯ ಮನುಷ್ಯಸ್ಯ ಮನಸೋ ಜವೀಯಾನತಿಶಯೇನ ವೇಗವಾನ್ । ತದ್ಯಥಾ ವೇಗೇನ ಕೃತ್ಸ್ನಂ ಜಗದ್ವ್ಯಾಪ್ನೋತಿ ತತೋಽಪ್ಯತಿಶಯೇನ ಕ್ಷಣಮಾತ್ರಾದೇವ ಸರ್ವಂ ಜಗತ್ಪರ್ಯಟತೀತ್ಯರ್ಥಃ । ತ್ರಿವಂಧುರಃ । ವಂಧುರಂ ವೇಷ್ಟಿತಂ ಸಾರಥೇಃ ಸ್ಥಾನಂ । ತ್ರಿಪ್ರಕಾರೇಣ ವಂಧುರೇಣ ಯುಕ್ತಃ ವಾತರಂಹಾ ವಾತಸ್ಯ ವಾಯೋ ರಂಹಾ ವೇಗ ಇವ ವೇಗೋ ಯಸ್ಯ ಸ ತಥೋಕ್ತಃ । ಅನೇನಾಪ್ರತಿಹತಗತಿತ್ವ-ಮುಚ್ಯತೇ । ಸ ರಥ ಇತಿ ಪೂರ್ವತ್ರಾನ್ವಯಃ ॥ ಶ್ಯೇನಪತ್ವಾ । ಪತ್ಲೃ ಗತೌ । ಅನ್ಯೇಭ್ಯೋಽಪಿ ದೃಶ್ಯಂತೆ ಇತಿ ವನಿಪ್ । ದಾಸೀಭಾರಾದಿಃ । ಯದ್ವಾ । ದೃಶಿಗ್ರಹಣಸ್ಯ ವಿಧ್ಯಂತರೋಪಸಂಗ್ರಹಾರ್ಥತ್ವಾದ್ಭಾವೇ ವನಿಪ್ । ತತೋ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಜವೀಯಾನ್ । ಜವೋಽಸ್ಯಾಸ್ತೀತಿ ಜವವಾನ್ । ಅತಿಶಯೇನ ಜವವಾನ್ । ಆತಿಶಾಯನಿಕ ಈಯಸುನ್ । ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ ॥

॥ ಪ್ರತಿಪದಾರ್ಥ ॥

**ಹೇ ವೃಷಣಾ**—ಕಾಮಾಭಿವರ್ಷಕರಾದ ಎಲೈ ಅಶ್ವಿನೀದೇವತೆಗಳೇ । **ಯಃ**—ಯಾವ ನಿಮ್ಮ ರಥವು । **ಮರ್ತ್ಯಸ್ಯ**—ಮನುಷ್ಯನ । **ಮನಸಃ**—ಮನಸ್ಸಿಗಿಂತಲೂ । **ಜವೀಯಾ**—ವೇಗಶಾಲಿಯಾದುದೋ । **ತ್ರಿವಂಧುರಃ**—ಮೂರು ವಿಧವಾದ ಸಾರಥಿಸ್ಥಾನವುಳ್ಳದ್ದೋ । **ವಾತರಂಹಾಃ**—ವಾಯುವಿನಂತೆ (ಅಪ್ರತಿಹತ) ಗತಿಯುಳ್ಳದ್ದೋ । **ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । (**ಸಃ**—ಆ) । **ವಾಂ**—ನಿಮ್ಮಿಬ್ಬರ । **ಶ್ಯೇನ-ಪತ್ವಾ**—ಉತ್ತಮಾಶ್ವಗಳಿಂದ ಎಳೆಯಲ್ಪಡುವುದೂ (ಪಕ್ಷಿಯಂತೆ ಗಮನವುಳ್ಳದ್ದೂ) । **ಸುಮೃಳೀಕಃ**—ಸುಖ ಯುಕ್ತವಾದುದೂ । **ಸ್ವವಾ**—ಧನಯುಕ್ತವಾದುದೂ ಆದ । **ರಥಃ**—ಆ ರಥವು । **ಅರ್ವಾಙ್**—(ನಮಗೆ) ಅಭಿಮುಖವಾಗಿ । **ಆ ಯಾತು**—ಬರಲಿ

॥ ಭಾವಾರ್ಥ ॥

ಕಾಮಾಭಿವರ್ಷಕರಾದ ಎಲೈ ಅಶ್ವಿನೀದೇವತೆಗಳೇ ಮನಸ್ಸಿನ ವೇಗಕ್ಕಿಂತಲೂ ವೇಗಶಾಲಿಯಾದುದೂ ವಾಯುವಿನಂತೆ (ಅಪ್ರತಿಹತ) ಗತಿಯುಳ್ಳದ್ದೂ, ಉತ್ತಮಾಶ್ವಯುಕ್ತವಾದುದೂ. (ಪಕ್ಷಿಯಂತೆ ಹಾರಿಹೋಗುವ) ಮೂರು ವಿಧವಾದ ಸಾರಥಿಸ್ಥಾನವುಳ್ಳದ್ದೂ ಆದ ನಿಮ್ಮ ರಥವು ಸುಖ ಮತ್ತು ಧನಯುಕ್ತವಾಗಿ ನಮಗೆ ಅಭಿಮುಖವಾಗಿ ಬರಲಿ.

## English Translation.

May your elegant and rich car, swift as a hawk, come, Ashwins, to our presence, for it is as quick as the mind of man, surmounted, showerers (of benefits), by three columns, and rapid as the wind.

॥ ವಿಶೇಷವಿಷಯಗಳು ॥

**ಶ್ಯೇನಪತ್ವಾ—ಶಂಸನೀಯಗಮನೈರಶ್ವೈಃ ಪತನ್ ಗಚ್ಛನ್ ಯದ್ವಾ ಶ್ಯೇನಃ ಪಕ್ಷೀ । ಸ ಇವ ಶೀಘ್ರಂ ಪತನ್** । ಶ್ಯೇನ ಶಬ್ದವು ಇಪ್ಪತ್ತಾರು ಅಶ್ವನಾಮಗಳಲ್ಲಿ (ನಿ. ೨-೨೭) ಉಕ್ತವಾಗಿರುತ್ತದೆ.

**ನೀಚಾಯಮಾನಂ ಜಸುರಿಂ ನ ಶ್ಯೇನಂ ಶ್ರವಶ್ಚಾಚ್ಛಾ ಪಶುಮಚ್ಚ ಯೂಥಮ್ ॥**

(ಋ. ಸಂ. ೪-೩೮-೫)

ಎಂಬ ಈ ಋಕ್ಕಿನಲ್ಲಿ ಶ್ಯೇನಶಬ್ದವು **ಶ್ಯೇನಃ ಶಂಸನೀಯಂ ಗಚ್ಛತಿ** (ನಿ. ೪-೨೪) ಬಹಳ ವೇಗವಾಗಿ ಸಂಚರಿಸುವ ಕುದುರೆಗಳಿಂದ ಹಕ್ಕಿಯ ಹಾಗೆ ಸಂಚರಿಸುವುದು. ಆದಕಾರಣ ಈ ರಥದ ಗಮನಕ್ರಮವು ಬಹಳ ಪ್ರಶಂಸನೀಯವಾಗಿರುವುದೆಂದು ಸಾಯಣರು ವ್ಯಾಖ್ಯಾನ ಮಾಡಿರುವರು.

**ಮರ್ತ್ಯಸ್ಯ ಮನಸೋ ಜವೀಯಾನ್—ಅತಿಶಯೇನ ವೇಗವಾನ್** । ಮನುಷ್ಯನ ಮನಸ್ಸು ಬಹಳ ವೇಗದಿಂದ ಪ್ರಪಂಚವೆಲ್ಲವನ್ನೂ ವ್ಯಾಪಿಸುವ ಹಾಗೆ ಅದಕ್ಕಿಂತಲೂ ಅತಿಶಯವಾದ ವೇಗದಿಂದ ಕೂಡಿ ಕ್ಷಣಕಾಲದಲ್ಲಿ ಲೋಕವೆಲ್ಲವನ್ನೂ ಸುತ್ತುವ ವೇಗದಿಂದ ಅಶ್ವಿನೀದೇವತೆಗಳ ರಥವು ಸಂಚರಿಸುವುದೆಂದು ಅಭಿಪ್ರಾಯವು.

**ವಾತರಂಹಾಃ—ವಾತಸ್ಯ ವಾಯೋಃ ರಂಹೋ ವೇಗ ಇವ ವೇಗೋ ಯಸ್ಯ**—ವಾಯುವಿನ ವೇಗದಂತೆ ಅತ್ಯಂತ ವೇಗವಾಗಿ ಈ ರಥವೂ ಸಂಚರಿಸುತ್ತಾ ಎಲ್ಲವನ್ನೂ ವ್ಯಾಪಿಸುವುದೆಂದು ಅರ್ಥವು.

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳ ರಥವು ಬಹಳ ವೇಗವಾಗಿ ಹಕ್ಕಿಗಳ ಹಾಗೆ ಸಂಚರಿಸತಕ್ಕ ಕುದುರೆಗಳಿಂದ ಯುಕ್ತವಾಗಿ ಮನೋವೇಗ, ಮತ್ತು ವಾಯುವೇಗದಿಂದ ಲೋಕವೆಲ್ಲವನ್ನೂ ಕ್ಷಣಮಾತ್ರದಲ್ಲಿ ಸಂಚರಿಸುವುದು ಎಂದು ರಥದ ವೇಗವೂ ವರ್ಣಿತವಾಗಿರುತ್ತದೆ.

**ತ್ರಿವಂಧುರಃ—ವಂಧುರಂ ವೇಷ್ಟಿತಂ ಸಾರಥೇಃ ಸ್ಥಾನಂ । ತ್ರಿಪ್ರಕಾರೇಣ ವಂಧುರೇಣ ಯುಕ್ತಃ** ಮೂರು ವಿಧವಾಗಿರುವ ಕಟ್ಟುಗಳಿಂದ ಕೂಡಿರುವ ಸಾರಥಿಯ ಸ್ಥಾನವುಳ್ಳದ್ದಾಗಿರುವುದು ಎಂದು ರಥದ ವರ್ಣನೆಯು. ಸ್ಕಂದಸ್ವಾಮಿಗಳು ತ್ರಿವಂಧುರಃ ತ್ರಿಸಾರಥಿಸ್ಥಾನಃ ಅಶ್ವಿನೀದೇವತೆಗಳ ರಥದಲ್ಲಿ ಸಾರಥಿಯ ಉಪವೇಶಸ್ಥಾನವು ಮೂರು ಇರುವುದು ಎಂದು ಅರ್ಥವನ್ನು ಮಾಡಿರುವರು.

**ಸುಮೃಳೀಕಃ— ಸಸುಖಃ** । ಬಹಳ ಸುಖಕರವಾದದ್ದೆಂದು ಅರ್ಥ. ನಿರುಕ್ತಕಾರರು—

**ಗಾಮಶ್ವಂ ಪೋಷಯಿತ್ವಾ ಸ ನೋ ಮೃಳಾತೀದೃಶೇ** ॥

(ಋ. ಸಂ. ೪-೫೭-೧)

**ಮಧುಶ್ಚುತಂ ಘೃತಮಿವ ಸುಪೂತಮೃತಸ್ಯ ನಃ ಪತಯೋ ಮೃಳಯಂತು** ॥

(ಋ ಸಂ. ೪-೫೭-೨)

ಎಂಬ ಈ ಋಕ್ಕುಗಳಲ್ಲಿ **ಮೃಳತಿರ್ದಾನಕರ್ಮಾ ಪೂಜಾಕರ್ಮಾ ವಾ । ಮೃಳಯತಿರುಪದಯಾಕರ್ಮಾ ಪೂಜಾಕರ್ಮಾ ವಾ** (ನಿ. ೧೦-೧೬) ಎಂದು ವ್ಯಾಖ್ಯಾನಮಾಡಿರುವುದರಿಂದ ಮೃಳಧಾತುವಿನಿಂದ ನಿಷ್ಪನ್ನವಾದ ಮೃಳೀಕಶಬ್ದಕ್ಕೆ ಪೂಜ್ಯವಾದ ಎಂದರೆ ಸುಖವನ್ನುಂಟುಮಾಡುವುದರಿಂದ ಪೂಜ್ಯವಾದ ಎಂದು ಅರ್ಥವಾಗುತ್ತದೆ. ಇಲ್ಲಿ **ಮೃಡ** ಸುಖನೇ ಎಂಬ ಧಾತುವಿನ ರೂಪವಾಗಿರುವುದರಿಂದ ಸುಖಕರವೆಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಶ್ಯೇನಪತ್ವಾ**—ಪತ್ಲೃ ಗತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. ಶ್ಯೇನಪತ್ವನ್ ಶಬ್ದವಾಗುತ್ತದೆ. ದಾಸೀಭಾರಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಅಥವಾ ಹಿಂದೆ ಹೇಳಿದ ಸೂತ್ರದಲ್ಲಿ ದೃಶಿಗ್ರಹಣವು ಸರ್ವವಿಶೇಷಣವ್ಯಾವೃತ್ತಿಗೋಸ್ಕರವಿರುವುದರಿಂದ ಭಾವಾರ್ಥದಲ್ಲಿ ವನಿಪ್ ಪ್ರತ್ಯಯ. ಆಮೇಲೆ ಬಹುವ್ರೀಹಿಸಮಾಸ ಮಾಡಿದಾಗ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುಮೃಳೀಕಃ— ನಞ್ ಸುಭ್ಯಾಮ್** (ಪಾ ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸ್ವವಾನ್—**ಸ್ವಂ ಧನಂ ಅಸ್ಯ ಅಸ್ತಿ ಎಂಬರ್ಥ ತೋರುವಾಗ **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಅಕಾರದ ಪರದಲ್ಲಿರುವುದರಿಂದ **ಮಾದುಪಧಾಯಾಶ್ಚ—**(ಪಾ. ಸೂ. ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ.

**ಯಾತು—** ಯಾ ಪ್ರಾಪಣೇ. ಧಾತು. ಲೋಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಜವೀಯಾನ್**—ಜವೋಽಸ್ಯಾಸ್ತೀತಿ ಜವವಾನ್. ಮತುಪ್ ಪ್ರತ್ಯಯ. ಅತಿಶಯೇನ ಜವವಾನ್ ಜವೀಯಾನ್. **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂದು ಅನುವೃತ್ತವಾಗುವಾಗ **ದ್ವಿವಚನವಿ**—(ಪಾ. ಸೂ. ೫-೩-೫೭) ಎಂಬುದರಿಂದ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. ಇದು ಪರವಾದಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ಮತುಪಿಗೆ ಲುಕ್. **ಟೇಃ** (ಪಾ. ಸೂ. ೬-೪-೧೫೫) ಎಂಬುದರಿಂದ ಟಿಗೆ (ಅ) ಲೋಪ. ಸುಪರವಾದಾಗ ಉಗಿತ್ತಾದುದರಿಂದ ನುಮಾಗಮ. **ಞ್ನಿತ್ಯಾದಿರ್ನಿತ್ಯಮ್** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಾತರಂಹಾಃ**—ವಾತಸ್ಯ ರಂಹ ಇವ ರಂಹೋ ಯಸ್ಯ ಸಃ ವಾತರಂಹಾಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ತ್ರಿವಂಧುರೇಣ ತ್ರಿವೃತಾ ರಥೇನ ತ್ರಿಚಕ್ರೇಣ ಸುವೃತಾ ಯಾತ-
ಮರ್ವಾಕ್ ।
ಪಿನ್ವತಂ ಗಾ ಜಿನ್ವತಮರ್ವತೋ ನೋ ವರ್ಧಯತಮಶ್ವಿನಾ
ವೀರಮಸ್ಮೇ ॥ ೨ ॥

॥ ಪದಪಾಠಃ ॥

**ತ್ರಿಽವಂಧುರೇಣ । ತ್ರಿಽವೃತಾ । ರಥೇನ । ತ್ರಿಽಚಕ್ರೇಣ । ಸುಽವೃತಾ । ಆ । ಯಾತಂ । ಅರ್ವಾಕ್ ।**

**ಪಿನ್ವತಂ । ಗಾಃ । ಜಿನ್ವತಂ । ಅರ್ವತಃ । ನಃ । ವರ್ಧಯತಂ । ಅಶ್ವಿನಾ । ವೀರಂ । ಅಸ್ಮೇ ಇತಿ ॥ ೨ ॥**

॥ ಸಾಯಣಭಾಷ್ಯಂ ॥

ತ್ರಿವಂಧುರೇಣ । ವಂಧುರಂ ಸಾರಥಿಸ್ಥಾನಂ । ತ್ರಿಪ್ರಕಾರವಂಧುರೋಪೇತೇನ ತ್ರಿವೃತಾ ತ್ರಿಧಾ ವರ್ತಮಾನೇನ ತ್ರಿಚಕ್ರೇಣ ಚಕ್ರತ್ರಯೋಪೇತೇನ ಸುವೃತಾ ಶೋಭನಂ ಗಚ್ಛತಾ ರಥೇನಾರ್ವಾಗಸ್ಮದಭಿಮುಖಮಾ ಯಾತಂ । ಆಗಚ್ಛತಂ । ಆಗತ್ಯ ಚಾಸ್ಮದೀಯಾ ಗಾಃ ಪಿನ್ವತಂ । ಪಯಸಾ ಪೂರಯತಂ । ನೋಽಸ್ಮಾಕಮರ್ವತೋಽಶ್ವಾನ್ ಜಿನ್ವತಂ । ಪ್ರೀಣಯತಂ । ಅಪಿ ಚ ಹೇ ಅಶ್ವಿನೌ ಅಸ್ಮೇ ಅಸ್ಮಾಕಂ ವೀರಂ ಪುತ್ರಾದಿಕಂ ವರ್ಧಯತಂ । ಪ್ರವೃದ್ಧಂ ಕುರುತಂ ॥ ತ್ರಿಚಕ್ರೇಣ । ತ್ರೀಣಿ ಚಕ್ರಾಣಿ ಯಸ್ಯ ಸ ತಥೋಕ್ತಃ । ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಂ । ಪಾ. ೬-೨-೧೯೯-೧ । ಇತ್ಯುತ್ತರಪದಾಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ತ್ರಿವಂಧುರೇಣ**—ಮೂರು ಸಾರಥಿಸ್ಥಾನವುಳ್ಳದ್ದೂ । **ತ್ರಿವೃತಾ**—ತ್ರಿಕೋಣಾಕಾರವಾದುದೂ । **ತ್ರಿಚಕ್ರೇಣ**—ಮೂರು ಚಕ್ರವುಳ್ಳದ್ದೂ । **ಸುವೃತಾ**—ಒಳ್ಳೆಯ ಗಮನವುಳ್ಳದ್ದೂ ಆದ । **ರಥೇನ**—ರಥದಿಂದ । **ಅರ್ವಾಕ್**—(ನಮಗೆ) ಅಭಿಮುಖವಾಗಿ । **ಆ ಯಾತಂ**—ಬನ್ನಿ । (ಬಂದು) **ಗಾಃ**—(ನಮ್ಮ) ಗೋವುಗಳನ್ನು । **ಪಿನ್ವತಂ**—(ಕ್ಷೀರದಿಂದ) ತುಂಬಿಸಿ । **ನಃ**—ನಮ್ಮ **ಅರ್ವತಃ**—ಅಶ್ವಗಳನ್ನು । **ಜಿನ್ವತಂ**—ಹುರಿದುಂಬಿಸಿ । (**ಅಪಿ ಚ**—ಮತ್ತೂ) । **ಅಸ್ಮೇ**—ನಮ್ಮ । **ವೀರಂ**—ಪುತ್ರಾದಿಗಳನ್ನು । **ವರ್ಧಯಂತ**—ಪ್ರವರ್ಧಿಸುವಂತೆ ಮಾಡಿ.

॥ ಭಾವಾರ್ಥ ॥

ಮೂರು ಸಾರಥಿಸ್ಥಾನಯುಕ್ತವಾದುದೂ ತ್ರಿಕೋಣಾಕಾರವಾದುದೂ, ಮೂರು ಚಕ್ರವುಳ್ಳದ್ದೂ ಒಳ್ಳೆಯ ಗತಿಯುಳ್ಳದ್ದೂ ಆದ (ನಿಮ್ಮ) ರಥದಲ್ಲಿ (ನಮಗೆ) ಅಭಿಮುಖವಾಗಿ ಬಂದು, ನಮ್ಮ ಗೋವುಗಳಲ್ಲಿ ಕ್ಷೀರವನ್ನೂ, ಅಶ್ವಗಳಲ್ಲಿ ಶಕ್ತಿಯನ್ನೂ ಪುತ್ರಾದಿಗಳ ಅಭಿವೃದ್ಧಿಯನ್ನೂ, ಅನುಗ್ರಹಿಸಿ.

## English Translation.

Come to us with your tri-columnar, triangular, three-wheeled, and well-constructed car; replenish our cows (with milk), give spirit to our horses, and augment, Aswins, our posterity.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳ ರಥವು ಮೂರು ಚಕ್ರಗಳುಳ್ಳದ್ದಾಗಿರುವುದು. ಸಾರಥಿಯು ಕೂತುಕೊಳ್ಳುವ ಸ್ಥಾನವು ಮೂರು ವಿಧವಾದ ಕಟ್ಟುಗಳುಳ್ಳದ್ದಾಗಿರುತ್ತದೆ. ವೇಗವಾಗಿ ಸಂಚರಿಸುವ ಈ ರಥದಲ್ಲಿ ಅಶ್ವಿನೀದೇವತೆಗಳು ನಮ್ಮ ಇಷ್ಟಗಳನ್ನು ಅನುಗ್ರಹಿಸುವುದಕ್ಕಾಗಿ ದಯಮಾಡಿಸಿ ನಮ್ಮ ಗೋವುಗಳಿಗೆ ಬಹಳ ಹಾಲು ಉಂಟಾಗುವಂತೆಯೂ,

ನಮ್ಮ ಕುದುರೆಗಳು ವೇಗವಾಗಿ ಸಂಚರಿಸುವಂತೆಯೂ ಮಾಡಿ ನಮಗೆ ಪುತ್ರಪೌತ್ರಾದಿಗಳನ್ನು ಅನುಗ್ರಹಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ವರ್ಣಿಸಿದೆ.

**ಅರ್ವತಃ—ಅಶ್ವಾನ್** | ಕುದುರೆಗಳೆಂದು ಅರ್ಥ. ಅರ್ವನ್ ಶಬ್ದವು ಅಶ್ವನಾಮಗಳಲ್ಲಿ (ನಿ. ೨–೨೭) ಪಠಿತವಾಗಿರುತ್ತದೆ. **ಅರ್ವಾ—ಈರಣವಾನ್** (ನಿ. ೧೦–೩೨) ಎಂದು ಅರ್ವನ್ ಶಬ್ದವು ವ್ಯಾಖ್ಯಾತವಾಗಿರುವಕಾರಣ ವೇಗವಾಗಿ ಸಂಚರಿಸುವುದು. ಎಂದು ಅರ್ಥವಾಗಿರುತ್ತದೆ. ಇಲ್ಲಿ ಪ್ರಕರಣಕ್ಕನುಗುಣವಾಗಿ ಕುದುರೆ ಎಂದು ಅರ್ಥ ಮಾಡಿದೆ.

**ತ್ರಿಚಕ್ರೇಣ—ತ್ರೀಣಿ ಚಕ್ರಾಣಿ ಯಸ್ಯ ಸಃ ಚಕ್ರತ್ರಯೋಪೇತೇನ** ಮೂರು | ಚಕ್ರಗಳು ಉಳ್ಳದ್ದಾದ ಮೂರು ಚಕ್ರಗಳಿಂದ ಕೂಡಿದ ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ತ್ರಿವಂಧುರೇಣ**—ತ್ರೀಣಿ ವಂಧುರಾಣಿ ಯಸ್ಯ ಸಃ ತ್ರಿವಂಧುರಃ ತೇನಃ. **ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಮ್** ಎಂಬ ವಚನದಿಂದ ಉತ್ತರಪದ ಅಂತೋದಾತ್ತ ಸ್ವರ ಬರುತ್ತದೆ. ಹೀಗೆಯೇ ಮುಂದೆ ತ್ರಿಚಕ್ರೇಣ ಎಂಬಲ್ಲಿಯೂ ಸ್ವರವನ್ನು ತಿಳಿಯಬೇಕು. ತ್ರೀಣಿ ಚಕ್ರಾಣಿ ಯಸ್ಯ ಸಃ ತ್ರಿಚಕ್ರಃ ತೇನ, ತ್ರಿಚಕ್ರೇಣ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪಿನ್ವತಮ್**—ಪಿವಿ ಸೇಚನೇ ಧಾತು. ಭ್ವಾದಿ. **ಇದಿತೋ ನುಮ್ ಧಾತೋಃ** (ಪಾ. ಸೂ. ೭–೧–೫೮) ಎಂಬುದರಿಂದ ಧಾತುವಿಗೆ ನುಮಾಗಮ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸಿಗೆ ತಮಾದೇಶ. ಶಪ್ ವಿಕರಣ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್—**(ಪಾ. ಸೂ. ೬–೧–೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ಜಿನ್ವತಮ್—**ಜಿವಿ ಪ್ರೀಣನೇ. ಧಾತು. ಹಿಂದಿನಂತೆ ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. **ಚಾದಿಲೋಪೇ ವಿಭಾಷಾ** (ಪಾ. ಸೂ. ೮–೧–೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಹಿಂದಿನಂತೆ ಧಾತುಸ್ವರ ಉಳಿಯುತ್ತದೆ.

**ಅರ್ವತಃ**—ಋ ಗತೌ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩–೨–೭೫) ಎಂಬುದರಿಂದ ವನಿಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಅರ್ವನ್** ಶಬ್ದವಾಗುತ್ತದೆ. ಇದಕ್ಕೆ ಶಸ್ ಪರವಾದಾಗ **ಅರ್ವಣಸ್ತೃಸಾವನಞಃ** (ಪಾ. ಸೂ. ೬–೪–೧೨೭) ಎಂಬುದರಿಂದ ತೃ ಅಂತಾದೇಶ. ವನಿಪ್ **ಪಿತ್ತಾ**ದುದರಿಂದ ಧಾತುಸ್ವರ ಉಳಿಯುತ್ತದೆ.

**ವರ್ಧಯತೇವಮ್**—ವೃಧು ವೃದ್ಧೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬರುತ್ತದೆ. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ.

**ಅಸ್ಮೇ**—ಅಸ್ಮದ್ ಶಬ್ದ. ಇದಕ್ಕೆ ಷಷ್ಠೀ ಬಹುವಚನಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಶೇ ಆದೇಶ. **ಶೇಷೇ ಲೋಪಃ** ಎಂಬುದರಿಂದ ಅದಿಗೆ ಲೋಪ. ॥ ೨ ॥



॥ ಸಂಹಿತಾಪಾಠಃ ॥

ಪ್ರವದ್ಯಾಮನಾ ಸುವೃತಾ ರಥೇನ ದಸ್ರಾವಿಮಂ ಶೃಣುತಂ ಶ್ಲೋಕಮದ್ರೇಃ ।
ಕಿಮಂಗ ವಾಂ ಪ್ರತ್ಯವರ್ತಿಂ ಗಮಿಷ್ಠಾಹುರ್ವಿಪ್ರಾಸೋ ಅಶ್ವಿನಾ ಪುರಾಜಾಃ ॥ ೩ ॥

॥ ಪದಪಾಠಃ ॥

ಪ್ರವತ್ಽಯಾಮನಾ । ಸುಽವೃತಾ । ರಥೇನ । ದಸ್ರೌ । ಇಮಂ । ಶೃಣುತಂ । ಶ್ಲೋಕಂ । ಅದ್ರೇಃ ।
ಕಿಂ । ಅಂಗ । ವಾಂ । ಪ್ರತಿ । ಅವರ್ತಿಂ । ಗಮಿಷ್ಠಾ । ಆಹುಃ । ವಿಪ್ರಾಸಃ । ಅಶ್ವಿನಾ । ಪುರಾಽಜಾಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ದಸ್ರೌ ದರ್ಶನೀಯೌವಶ್ವಿನೌ ಪ್ರವದ್ಯಾಮನಾ ಪ್ರಕೃಷ್ಟಗಮನೇನ ಶೀಘ್ರಗಾಮಿನಾ ಸುವೃತಾ ಶೋಭನವರ್ತನೇನ ರಥೇನಾಗತ್ಯಾದ್ರೇರಾದರಂ ಕುರ್ವತಃ ಸ್ತೋತುರಿಮಂ ಶ್ಲೋಕಂ ಸ್ತುತಿಲಕ್ಷಣಾಮಿಮಾಂ ವಾಚಂ ಶೃಣುತಂ। ಅಂಗಾಶ್ವಿನಾ ಹೇ ಅಶ್ವಿನೌ ಪುರಾಜಾಃ ಪೂರ್ವಜಾತಾಶ್ಚಿರಂತನಾ ವಿಪ್ರಾಸೋ

**ಮೇಧಾವಿನೋ ವಾಂ ಯುವಾಮವರ್ತಿಂ ಸ್ತೋತೄಣಾಂ ದಾರಿದ್ರ್ಯಂ ಪ್ರತಿ ತತ್ಪರಿಹರ್ತುಂ ಗಮಿಷ್ಠಾ ಗಂತೃತಮಾವಾಹುಃ । ಕಥಯಂತಿ । ಕಿಂಶಬ್ದಃ ಪ್ರದರ್ಶನಫಲಪ್ರಶ್ನೇ ವರ್ತತೇ । ಕಿಂ ನ ಕಥಯಂತಿ । ಕಥಯಂತ್ಯೇವ ಸರ್ವೇ । ತಥಾ ಸತ್ಯಾಗಂತವ್ಯಮಿತಿ ॥ ಪ್ರವದ್ಯಾಮನಾ । ಸ್ಯೋಽಪಸೃಷ್ಟೇ ಧಾತ್ವರ್ಥೇ ವರ್ತಮಾನಾತ್ಪ್ರಶಬ್ದಾದುಪಸರ್ಗಾಚ್ಛಂದಸಿ ಧಾತ್ವರ್ಥೇ । ಪಾ. ೫-೧-೧೧೮ । ಇತಿ ವತಿಃ । ಯಾ ಪ್ರಾಪಣೇ । ಆತೋ ಮನಿನ್ನಿತಿ ಬಹುಲವಚನಾದ್ಭಾವೇ ಮನಿನ್ । ತತೋ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅದ್ರೇಃ । ದೃಙ್ ಆದರೇ । ಅಙ್ಪೂರ್ವಾದಸ್ಮಾದೌಣಾದಿಕಃ ಕಿಪ್ರತ್ಯಯ ಆಙೋ ಹ್ರಸ್ವಶ್ಚ । ಗಮಿಷ್ಠಾ ಗಂತೃಶಬ್ದಾತ್ತುಶ್ಛಂದಸೀತೀಷ್ಠನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ಸುಪಾಂ ಸುಲುಗಿತಿ ವಿಭಕ್ತೇ- ರಾಕಾರಃ । ಆಹುಃ । ಪ್ರತ್ಯಯಸ್ವರಃ । ಪಾದಾದಿತ್ವಾನ್ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

**ಹೇ ದಸ್ರೌ**—ದರ್ಶನೀಯರಾದ ಎಲೈ ಅಶ್ವಿನೀ ದೇವತೆಗಳೇ । **ಪ್ರವದ್ಯಾಮನಾ**—ಶೀಘ್ರಗಾಮಿಯಾದ ಮತ್ತು । **ಸುವೃತಾ**—ಚೆನ್ನಾಗಿ ರಚಿತವಾಗಿರುವ । **ರಥೇನ**—ರಥದಿಂದ (ಬಂದು) । **ಅದ್ರೇಃ**—ಆದರ ಮಾಡುವ ಸ್ತೋತೃವಿನ । **ಇಮಂ ಶ್ಲೋಕಂ**—ಈ ಸ್ತುತಿರೂಪವಾದ ಶ್ಲೋಕವನ್ನು । **ಶೃಣುತಂ**—ಕೇಳಿ । **ಅಂಗ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪುರಾಜಾಃ**—ಪೂರ್ವಿಕರಾದ । **ವಿಪ್ರಾಸಃ**—ಜ್ಞಾನಿಗಳು । **ವಾಂ**—ನೀವಿಬ್ಬರು । **ಅವರ್ತಿಂ ಪ್ರತಿ**—(ಸ್ತೋತೃಗಳ) ದಾರಿದ್ರ್ಯವನ್ನು ಪರಿಹರಿಸುವುದಕ್ಕೆ । **ಗಮಿಷ್ಠಾ**—ಹೋಗುವವರಲ್ಲಿ ಶ್ರೇಷ್ಠರು (ಎಂದು) । **ಆಹುಃ ಕಿಂ**—ಹೇಳುವುದಿಲ್ಲವೇ ?

॥ ಭಾವಾರ್ಥ ॥

ಎಲೈ ದಸ್ರರೇ, ಶೀಘ್ರಗಾಮಿಯಾದ ಮತ್ತು ಚೆನ್ನಾಗಿ ರಚಿತವಾಗಿರುವ (ನಿಮ್ಮ) ರಥದಲ್ಲಿ (ಬಂದು) ಆದರದಿಂದ ಸ್ತುತಿಸುವವನ ಈ ಸ್ತುತಿವಾಕ್ಯವನ್ನು ಕೇಳಿ; ಎಲೈ ಅಶ್ವಿನೀದೇವತೆಗಳೇ ಸ್ತೋತೃಗಳ ದಾರಿದ್ರ್ಯ ಪರಿಹಾರಕ್ಕಾಗಿ ಹೋಗುವವರಲ್ಲಿ ನೀವು ಅಗ್ರಗಣ್ಯರೆಂದು ಪೂರ್ವಿಕರೂ ಜ್ಞಾನಿಗಳೂ ಆದವರು ಹೇಳಿಲ್ಲವೇ ?

## English Translation.

Dasras, (having come) with your quickmoving well-constructed car, hear this hymn, (recited by one) who) who reveres you; do not the ancient sages say that you are most prompt, Aswins, (to avert) poverty from the worshipper ?

॥ ವಿಶೇಷವಿಷಯಗಳು ॥

**ಪ್ರವದ್ಯಾಮನಾ—ಪ್ರಕೃಷ್ಟಗಮನೇನ ಶೀಘ್ರಗಾಮಿನಾ** । ವೇಗವಾಗಿ ಸಂಚರಿಸುವ ಎಂದು ರಥಕ್ಕೆ ವಿಶೇಷಣವಾಗಿ ಈ ಪದದ ಅರ್ಥವನ್ನು ಸಾಯಣರೂ ಬೇರೆಬೇರೆಯ ವಿಧದಿಂದ ಸ್ಕಂದಸ್ವಾಮಿಗಳೂ ಹೇಳಿರುತ್ತಾರೆ. **ಪ್ರವತೇ ಇತಿ ಗತಿಕರ್ಮಾ. ಯಾಂತಿ ದೇವತಾ ಯಸ್ಮಿನ್ ಸಃ ಯಾಮಾ ಯಜ್ಞಃ ಯಜ್ಞಾನಾಂ ಗಂತಾ**

**ಪ್ರವದ್ಯಾಮಾ** । ಎಂದು ಸ್ಕಂದಸ್ವಾಮಿಗಳ ವ್ಯಾಖ್ಯಾನ. ಯಾಮಾ ಶಬ್ದವು ಯಜ್ಞವಾಚಿಯಾಗಿರುವುದು. ದೇವತೆಗಳು (ವೇಗವಾಗಿ) ಜಾಗ್ರತೆಯಾಗಿ ಯಜ್ಞಕ್ಕೆ ಬರುವ ಹಾಗೆ ಇರುವ ಸಾಧನವೇ ರಥವಾಗಿರುವುದು. ಆದ್ದರಿಂದ ರಥಕ್ಕೆ ವಿಶೇಷಣವೆಂದು ಅರ್ಥ ಮಾಡಿರುತ್ತಾರೆ.

**ಶ್ಲೋಕಂ ಅದ್ರೇಃ—ಆದರಂ ಕುರ್ವತಃ ಸ್ತುತಿಲಕ್ಷಣಾಂ ವಾಚಂ** । ವಿಶ್ವಾಸದಿಂದ ಸ್ತುತಿಯನ್ನು ಮಾಡುವ ವಚನವನ್ನು ಎಂದು ಸಾಯಣರು ಅರ್ಥವನ್ನು ಹೇಳುವರು. ಸ್ಕಂದಸ್ವಾಮಿಗಳು **ಅದ್ರೇಃ—ಅಭಿಷವ ಗ್ರಾವ್ಣಃ** । **ಶ್ಲೋಕಂ ಶಬ್ದಂ.** ಸೋಮರಸವನ್ನು ಹಿಂಡುವ ಕಲ್ಲುಗಳ ಧ್ವನಿಯನ್ನು ಎಂದು ಅರ್ಥಮಾಡಿರುತ್ತಾರೆ.

**ವಿಪ್ರಾಸಃ—ಮೇಧಾವಿನಃ** । ಇಪ್ಪತ್ತುನಾಲ್ಕು ಮೇಧಾವಿ ನಾಮಗಳಲ್ಲಿ ವಿಪ್ರಶಬ್ದವು (ನಿ. ೩-೧೫) ಉಕ್ತವಾಗಿರುವುದರಿಂದ ಮೇಧಾವಿ ಎಂದು ಅರ್ಥ. ಮೇಧಾವಿಗಳಾದ ಪೂರ್ವಿಕರು. ಅಶ್ವಿನೀದೇವತೆಗಳು ಸುಖಕರವಾಗಿರುವ ವೇಗವುಳ್ಳ ರಥದಿಂದ ಯಜ್ಞಕ್ಕೆ ಬಂದು ಋತ್ವಿಕ್ಕುಗಳೂ ಯಜ್ಞಮಾಡುವ ಯಜಮಾನನೂ ಹೇಳುವ ಸ್ತುತಿಯನ್ನು ಕೇಳಿ ಅವರುಗಳ ದಾರಿದ್ರ್ಯವನ್ನು ಪರಿಹರಿಸುವದಕ್ಕಾಗಿ ಬೇಗನೆ ಬರುವರು ಎಂದು ಹೇಳಿರುವುದರಿಂದ ಅಶ್ವಿನೀ ದೇವತೆಗಳನ್ನು ಸ್ತುತಿಮಾಡಿ ಅವರ ಅನುಗ್ರಹಕ್ಕೆ ಪಾತ್ರರಾಗಿ ನಮ್ಮ ದಾರಿದ್ರ್ಯವನ್ನು ಕಳೆದುಕೊಳ್ಳೋಣವೆಂದು ವರ್ಣಿಸಿದೆ. ಸ್ಕಂದಸ್ವಾಮಿಗಳು ಈ ಋಕ್ಕಿನ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಆಕ್ಷೇಪ ಸಮಾಧಾನ ರೂಪವಾದ ಅರ್ಥವನ್ನು ವಿವರಿಸಿರುವರು. **ಪರೇಣಾರ್ಧರ್ಚೇನ ಉಕ್ತಮಾತ್ರೌ ಅನಾಗಚ್ಛಂತೌ ಕುಪಿತ ಇವಾಹ ಕಿಮಂಗ ಇತಿ.** ಪೂರ್ವಾರ್ಧದಲ್ಲಿ ಅಶ್ವಿನೀದೇವತೆಗಳು ಯಜ್ಞಮಾಡುವವರ ಸ್ತುತಿಗಳನ್ನು ಕೇಳಿ ಬರದಿರುವುದಕ್ಕಾಗಿ ಉತ್ತರಾರ್ಧದಿಂದ ಆಕ್ಷೇಪ ಮಾಡಿ **ನೈವ ಹಿ ಯುವಾಂ ಕ್ಷಿಪ್ರಮುಪಗಂತಾರೌ ಯಜ್ಞಾನಾಂ ಯಾವಸ್ಮದ್ಯಜ್ಞಮುಕ್ತಮಾತ್ರೇಣ ನಾಗಚ್ಛತ.** ನೀವುಗಳು ಯಜ್ಞಕ್ಕಾಗಿ ಬೇಗ ಬರುವವರಲ್ಲವು. ನೀವುಗಳು ಬಹಳ ಮೇಧಾವಿಗಳಾದ ಪೂರ್ವಿಕರಿಂದ ಪ್ರಶಸ್ಯರಾದವರು ನಮ್ಮ ಯಜ್ಞಕ್ಕಾಗಿ ಬರಲಿಲ್ಲವೆಂದು ಆಕ್ಷೇಪಮಾಡಿರುವುದು ವರ್ಣಿತವಾಗಿದೆ. ಶ್ಲೋಕಶಬ್ದವು ಐವತ್ತೇಳು ವಾಙ್ನಾಮಗಳಲ್ಲಿ (ನಿ. ೨-೨೩) ಉಕ್ತವಾಗಿದೆ. ಮತ್ತು ಶ್ಲೋಕಃ ಶೃಣೋತೇಃ (ನಿ. ೯-೧೧) ಎಂದು ನಿರುಕ್ತಕಾರರಿಂದ ವ್ಯಾಖ್ಯಾತವಾಗಿರುತ್ತದೆ. ಇದಕ್ಕೆ ಸ್ತುತಿರೂಪವಾದ ವಚನವೆಂದು ಅರ್ಥ ಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಪ್ರವದ್ಯಾಮನಾ**—ಇಲ್ಲಿ ಪ್ರ ಎಂಬುದು ಸು ಎಂಬ ಉಪಸರ್ಗದಿಂದ ಕೂಡಿದ ಧಾತ್ವರ್ಥವನ್ನು ಬೋಧಿಸುತ್ತದೆ. ಧಾತ್ವರ್ಥವುಳ್ಳ ಈ ಪ್ರ ಶಬ್ದದ ಮೇಲೆ **ಉಪಸರ್ಗಾಚ್ಛಂದಸಿ ಧಾತ್ವರ್ಥೇ** (ಪಾ. ಸೂ. ೫-೧-೧೧೮) ಎಂಬುದರಿಂದ ವತಿ ಪ್ರತ್ಯಯ. ಪ್ರವತ್. ಎಂದು ರೂಪವಾಗುತ್ತದೆ. ಯಾ ಪ್ರಾಪಣೇ. ಧಾತು. **ಆತೋ ಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ಬಹುಲವಚನವಿರುವುದರಿಂದ ಭಾವಾರ್ಥದಲ್ಲಿ ಮನಿನ್ ಪ್ರತ್ಯಯ. ಪ್ರವತ್ ಯಾಮ ಯಸ್ಯ ಸಃ ಪ್ರವದ್ಯಾಮಾ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬುದರಿಂದ ತೃತೀಯಾ ಏಕವಚನದಲ್ಲಿ ಆನಿನ ಅಕಾರಕ್ಕೆ ಲೋಪ ಬರುವುದಿಲ್ಲ.

**ದಸ್ರಾ**—ಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶೃಣುತಮ್**—ಶ್ರು ಶ್ರವಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ ಬಂದಾಗ **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ. ಶ್ನು ವಿಕರಣ. ವಿಕರಣಕ್ಕೂ ಪ್ರತ್ಯಯಕ್ಕೂ ಙಿದ್ವದ್ಭಾವವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅದ್ರೇಃ**—ದೃಙ್ ಆದರೇ. ಧಾತು. ಆಙ್ ಉಪಸರ್ಗ ಪೂರ್ವದಲ್ಲಿರುವಾಗ ಇದಕ್ಕೆ ಔಣಾದಿಕವಾದ ಕಿಪ್ರತ್ಯಯ. ಆಙಿಗೆ ಹ್ರಸ್ವಾದೇಶ. ಪ್ರತ್ಯಯದಲ್ಲಿ ಇಕಾರ ಉಳಿಯುವುದರಿಂದ ಅದನ್ನು ನಿಮಿತ್ತೀಕರಿಸಿ ಯಣಾದೇಶ. ಆದರವನ್ನು ಮಾಡುವವನು ಎಂದರ್ಥ. ಷಷ್ಠೀ ಏಕವಚನಾಂತರೂಪ.

**ಗಮಿಷ್ಠಾ**—ಗಮ್ಲೃ ಗತೌ ಧಾತು. ಇದಕ್ಕೆ ತೃಚ್ ಪ್ರತ್ಯಯಬಂದಾಗ ಗಂತೃ ಶಬ್ದವಾಗುತ್ತದೆ. ಇದಕ್ಕೆ ಅತಿಶಯಾರ್ಥ ತೋರುವಾಗ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃ ಎಂಬುದಕ್ಕೆ ಲೋಪ. ಗಮಿಷ್ಠ ಶಬ್ದವಾಗುತ್ತದೆ. ಇದಕ್ಕೆ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಆಹುಃ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಲಟ್ ಪ್ರಥಮಪುರುಷ ಬಹುವಚನ ಪರವಾದಾಗ **ಬ್ರುವಃ ಪಂಚಾನಾಮಾದಿತ ಆಹೋ ಬ್ರುವಃ** (ಪಾ. ಸೂ. ೩-೪-೮೪) ಎಂಬುದರಿಂದ ಝಿಗೆ ಉಸಾದೇಶ. ಧಾತುವಿಗೆ ಆಹಾದೇಶ. ಇಲ್ಲಿ ಹಕಾರೋತ್ತರಾಕಾರವು ಉಚ್ಚಾರಣಾರ್ಥವಾಗಿದೆ. ಪಾದಾದಿಯಲ್ಲಿರುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಪ್ರಾಸಃ**—ವಿಪ್ರ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸ್ಸಿಗೆ ಅಸುಕಾಗಮ.

**ಪುರಾಜಾಃ**—ಪುರಾ ಜಾತಾಃ ಪುರಾಜಾಃ. ಜನೀ ಪ್ರಾದುರ್ಭಾವೇ. ಧಾತು. **ಅನ್ಯೇಷ್ವಪಿ ದೃಶ್ಯತೇ** (ಪಾ. ಸೂ. ೩-೨-೧೦೧) ಎಂಬುದರಿಂದ ಪುರಾ ಎಂಬುದು ಉಪಪದವಾಗಿರುವಾಗ ಡಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪಃ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಆ ವಾಂ ಶ್ಯೇನಾಸೋ ಅಶ್ವಿನಾ ವಹಂತು ರಥೇ ಯುಕ್ತಾಸ ಆಶವಃ ಪತಂಗಾಃ ।

ಯೇ ಅಪ್ತುರೋ ದಿವ್ಯಾಸೋ ನ ಗೃಧ್ರಾ ಅಭಿ ಪ್ರಯೋ ನಾಸತ್ಯಾ ವಹಂತಿ ॥ ೪ ॥

॥ ಪದಪಾಠಃ ॥

ಆ । ವಾಂ । ಶ್ಯೇನಾಸಃ । ಅಶ್ವಿನಾ । ವಹಂತು । ರಥೇ । ಯುಕ್ತಾಸಃ । ಆಶವಃ । ಪತಂಗಾಃ ।

ಯೇ । ಅಪ್ ತುರಃ । ದಿವ್ಯಾಸಃ । ನ । ಗೃಧ್ರಾಃ । ಅಭಿ । ಪ್ರಯಃ । ನಾಸತ್ಯಾ । ವಹಂತಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ರಥೇ ಯುಕ್ತಾಸಃ ಸಾರಥಿನಾ ವಹನಪ್ರದೇಶೇ ಯೋಜಿತಾ ಆಶವೋ ವ್ಯಾಪ್ತಿಮಂತಃ ಪತಂಗಾಃ ಪತನಸಮರ್ಥಾಃ ಶ್ಯೇನಾಸಃ ಶಂಸನೀಯಗಮನಾ ಅಶ್ವಾ ವಾಂ ಯುವಾಮಾ ವಹಂತು ॥ ಅಸ್ಮತ್ಸಮೀಪಮಾನಯಂತು । ಯೇಽಶ್ವಾ ಅಪ್ತುರ ಅಪ ಇವ ತ್ವರೋಪೇತಾ ದಿವ್ಯಾಸೋ ನ ಗೃಧ್ರಾ ಅಂತರಿಕ್ಷೇ ವರ್ತಮಾನಾ ಗೃಧ್ರಾಖ್ಯಾಃ ಪಕ್ಷಿಣ ಇವ ಶೀಘ್ರಂ ಗಚ್ಛಂತೋ ಹೇ ನಾಸತ್ಯಾ ಯುವಾಂ ಪ್ರಯೋ ಹವಿರ್ಲಕ್ಷಣಮನ್ನಮಭಿಲಕ್ಷ್ಯ ವಹಂತಿ ಪ್ರಾಪಯಂತಿ । ತಾದೃಶಾ ಇತಿ ಪೂರ್ವತ್ರ ಸಂಬಂಧಃ ॥ ಅಪ್ತುರಃ । ತುರ ತ್ವರಣೇ । ಅಪ್ಸುಪಪದಾದಸ್ಮಾತ್ ಕ್ವಿಪ್ಚೇತಿ ಕ್ವಿಪ್ ॥

॥ ಪ್ರತಿಪದಾರ್ಥ ॥

**ನಾಸತ್ಯಾ**—ನಾಸತ್ಯರೇ । **ಯೇ**—ಯಾವ (ನಿಮ್ಮ ಅಶ್ವಗಳು) । **ಅಪ್ತುರಃ**—ನೀರಿನಂತೆ ತ್ವರೆಯುಳ್ಳವುಗಳಾಗಿ । **ದಿವ್ಯಾಸಃ**—ಅಂತರಿಕ್ಷದಲ್ಲಿರುವ । **ಗೃಧ್ರಾಃ ನ**—ಗೃಧ್ರಪಕ್ಷಿಗಳಂತೆ (ಶೀಘ್ರಗಾಮಿಗಳಾಗಿ) । **ಪ್ರಯಃ**—

ಹವಿಸ್ಸಿನ ಕಡೆಗೆ । (**ಯುವಾಂ**—ನಿಮ್ಮಿಬ್ಬರನ್ನು) । **ಅಭಿ ವಹಂತಿ**—ಕರೆದುಕೊಂಡು ಹೋಗುತ್ತವೆಯೋ । **ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । (**ತೇ**—ಆ) । **ರಥೇ ಯುಕ್ತಾಸಃ**—ರಥಕ್ಕೆ ಕಟ್ಟಲ್ಪಟ್ಟ । **ಆಶವಃ**—ವೇಗಗಾಮಿಗಳೂ । **ಪತಂಗಾಃ**—ನೆಗೆಯುತ್ತಿರುವುವೂ । **ಶ್ಯೇನಾಸಃ**—ಪಕ್ಷಿಗಳಂತೆ ಗತಿಯುಳ್ಳವೂ ಆದ (ಅಶ್ವಗಳು) । **ವಾಂ**—ನಿಮ್ಮಿಬ್ಬರನ್ನು । **ಆ ವಹಂತು**—(ನಮ್ಮ) ಸಮೀಪಕ್ಕೆ ಕರೆತರಲಿ.

॥ ಭಾವಾರ್ಥ ॥

ಎಲೈ ನಾಸತ್ಯರೇ, ಹರಿಯುವ ನೀರಿನಂತೆ ತ್ವರಾಯುಕ್ತವಾದವುಗಳೂ, ಅಂತರಿಕ್ಷದಲ್ಲಿ (ಹಾರಾಡುತ್ತಿರುವ) ಗೃಧ್ರಪಕ್ಷಿಗಳಂತೆ ಹವಿಸ್ಸಿನ ಕಡೆಗೆ ನಿಮ್ಮನ್ನು ಕರೆದುಕೊಂಡು ಹೋಗುವವೂ ನೆಗೆಯುತ್ತಿರುವವೂ, ಶೀಘ್ರಗಾಮಿಗಳೂ ಪಕ್ಷಿಯಂತೆ ಗಮನವುಳ್ಳವುಗಳೂ, ಆದ ನಿಮ್ಮ ಅಶ್ವಗಳು ರಥಕ್ಕೆ ಕಟ್ಟಲ್ಪಟ್ಟು ನಿಮ್ಮಿಬ್ಬರನ್ನೂ ನಮ್ಮ ಸಮೀಪಕ್ಕೆ ಕರೆತರಲಿ.

## English Translation

May your quick-moving, prancing steeds, rapid as hawks, yoked to your car, bear you, Aswins, (hither), who, quick as (falling) water, like vultnres flying through the air, convey you, Nasatyas, to the sacrifice.

॥ ವಿಶೇಷವಿಷಯಗಳು ॥

**ಪತಂಗಾಃ—ಪತನಸಮರ್ಥಾಃ** । ಪತಂಗ ಶಬ್ದವು ಅಶ್ವನಾಮಗಳಲ್ಲಿ (ನಿ. ೧-೧೪) ಉಕ್ತವಾಗಿರುತ್ತದೆ. ವೇಗವಾಗಿ ನಡೆಯುವವುಗಳು ಎಂದು ಸಾಯಣರೂ, ಅಶ್ವಗಳು ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುತ್ತಾರೆ.

**ಪ್ರಯಃ—ಹವಿರ್ಲಕ್ಷಣಮನ್ನಂ** । ಇಪ್ಪತ್ತೆಂಟು ಅನ್ನನಾಮಗಳಲ್ಲಿ ಪ್ರಯಃ ಎಂಬ ಶಬ್ದವು (ನಿ. ೩-೯) ಉಕ್ತವಾಗಿರುವುದರಿಂದ ಅನ್ನವೆಂದು ಅರ್ಥ. ಅಶ್ವಿನೀದೇವತೆಗಳು ಉತ್ತಮವಾದ ಸಾರಥಿಯೂ ಮತ್ತು ಕುದುರೆಗಳೂ ಉಳ್ಳ ರಥದಲ್ಲಿ ಕುಳಿತುಕೊಂಡವರಾಗಿ ಶ್ಯೇನಪಕ್ಷಿಗಳು ಬರುವಂತೆ ವೇಗವಾದ ಗಮನದಿಂದ ನಮ್ಮ ಯಜ್ಞಕ್ಕೆ ಬರಲಿ. ಇವರನ್ನು ಇವರ ರಥದ ಕುದುರೆಗಳು ನಮ್ಮ ಸಮೀಪಕ್ಕೆ ಕರೆದು ತರಲಿ ಎಂದು ಪ್ರಾರ್ಥಿಸಿದೆ.

**ಅಪ್ತುರಃ ದಿವ್ಯಾಸೋ ನ ಗೃಧ್ರಾಃ—ಆಪ ಇವ ತ್ವರೋಪೇತಾಃ । ಅನ್ತರಿಕ್ಷೇ ವರ್ತಮಾನಾಃ ಗೃಧ್ರಾಖ್ಯಾಃ ಪಕ್ಷಿಣ ಇವ ಶೀಘ್ರಂ ಗಚ್ಛಂತಃ** । ಅಶ್ವಿನೀದೇವತೆಗಳ ರಥದ ಕುದುರೆಗಳು ನೀರು ಪ್ರವಹಿಸುವ ವೇಗದಿಂದ ಓಡುವವು. ಮತ್ತು ಅಂತರಿಕ್ಷದಲ್ಲಿ ಹಾರುತ್ತಿರುವ (ಗೃಧ್ರ) (ಹದ್ದುಗಳ ಹಾಗೆ) ಗಿಡಗಗಳ ಹಾಗೆ ಬೇಗ ಸಂಚರಿಸುವುವು ಎಂದು ಸಾಯಣರೂ, **ಆಪೋ ಅಂತರಿಕ್ಷಂ ತತ್ರ ತ್ವರಿತಾರೌ, ತ್ವರಯಿತಾರೌ ವಾ ಮೇಘಸ್ಯ ಅಥವಾ ಆಪ ಉದಕಾನಿ ತತ್ರ ತ್ವರಿತಾರೌ** । ಆಪಃ ಎಂದರೆ ಅಂತರಿಕ್ಷವು ಅಂತರಿಕ್ಷದಲ್ಲಿ ಮೇಘವನ್ನು ವೃಷ್ಟಿಗಾಗಿ ತ್ವರೆಪಡಿಸುತ್ತಿರುವುವು. ಅಥವಾ ಉದಕಗಳನ್ನು ವೃಷ್ಟಿಗಾಗಿ ತ್ವರೆಪಡಿಸುತ್ತಿರುವುವು ಎಂದು ಸ್ಕಂದಸ್ವಾಮಿಗಳೂ ಅರ್ಥ ಮಾಡಿರುವರು.

ವೃಷ್ಟ್ಯುದಕಗಳನ್ನು ಕೊಡುವುದರ ಮೂಲಕ ಯಜ್ಞಗಳಿಗೆ ಅವಶ್ಯಕವಾದ ಹವಿಸ್ಸಿನ ರೂಪವಾದ ಅನ್ನವನ್ನು ಅಶ್ವಿನೀ ದೇವತೆಗಳು ಅನುಗ್ರಹಿಸಲಿ ಎಂದು ಪ್ರಾರ್ಥನೆಯು ಇಲ್ಲಿ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶ್ಯೇನಾಸಃ**—ಜಸ್ಸಿಗೆ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ. ಹೀಗೆಯೇ ಈ ಮಂತ್ರದಲ್ಲಿ ಇನ್ನೆರಡು ಶಬ್ದಗಳಲ್ಲಿಯೂ ಅಸುಕಾಗಮ ಬರುತ್ತದೆ.

**ವಹಂತು**—ವಹ ಪ್ರಾಪಣೇ. ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಆಶವಃ**—ಆಙ್ ಉಪಸರ್ಗ. ಅಶೂ ವ್ಯಾಪ್ತೌ. ಧಾತು. ಇದಕ್ಕೆ ಔಣಾದಿಕ ಉ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತೆ. ಪ್ರಥಮಾ ಬಹುವಚನಾಂತರೂಪ.

**ಪತಂಗಾಃ**—ಗಮ್ಲೃ ಗತೌ ಧಾತು. ಇದಕ್ಕೆ **ಗಮೇಃ ಸುಪಿಃ ವಾಚ್ಯ** ಎಂಬುದರಿಂದ ಖಚ್ ಪ್ರತ್ಯಯ. **ಖಚ್ಚ ಡಿದ್ವಾವಾಚ್ಯಃ** ಎಂಬುದರಿಂದ ಡಿತ್ವ ಅತಿದೇಶವಿರುವುದರಿಂದ ಧಾತುವಿನ ಟಿಗೆ ಲೋಪ. ಪೂರ್ವಕ್ಕೆ ಮುಮಾಗಮ.

**ಅಪ್ತುರಃ**—ತುರ ತ್ವರಣೇ. ಧಾತು. ಅಪ್ ಶಬ್ದ ಉಪಪದವಾಗಿರುವಾಗ ಇದಕ್ಕೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಅಪ್ತುರ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ. ॥ ೪ ॥



॥ ಸಂಹಿತಾಪಾಠಃ ॥

ಆ ವಾಂ ರಥಂ ಯುವತಿಸ್ತಿಷ್ಠದತ್ರ ಜುಷ್ಟ್ವೀ ನರಾ ದುಹಿತಾ ಸೂರ್ಯಸ್ಯ ।
ಪರಿ ವಾಮಶ್ವಾ ವಪುಷಃ ಪತಂಗಾ ವಯೋ ವಹನ್ತ್ವರುಷಾ ಅಭೀಕೇ ॥ ೫ ॥

॥ ಪದಪಾಠಃ ॥

ಆ । ವಾಂ । ರಥಂ । ಯುವತಿಃ । ತಿಷ್ಠತ್ । ಅತ್ರ । ಜುಷ್ಟ್ವೀ । ನರಾ । ದುಹಿತಾ । ಸೂರ್ಯಸ್ಯ ।

ಪರಿ । ವಾಂ । ಅಶ್ವಾಃ । ವಪುಷಃ । ಪತಂಗಾಃ । ವಯಃ । ವಹಂತು । ಅರುಷಾಃ । ಅಭೀಕೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ಯುವತಿಸ್ತರುಣೀ ಸೂರ್ಯಸ್ಯ ದುಹಿತಾ ಜುಷ್ಟ್ವೀ ಪ್ರೀತಾ ಸತೀ ವಾಂ ಯುವಯೋರತ್ರೇಮಂ ರಥಮಾ ತಿಷ್ಠತ್ । ಆರೂಢವತೀ । ತಯಾ ಸಹಿತೌ ವಾಂ ಯುವಾಮಶ್ವಾ ಅಭೀಕೇ ಗೃಹಸಮೀಪೇ ತಂ ರಥಂ ಪರಿ ವಹಂತು । ಪರಿಪ್ರಾಪಯಂತು । ಕೀದೃಶಾ ಅಶ್ವಾಃ । ವಪುಷಃ । ವಪುರಿತಿ ರೂಪಸ್ಯ ಶರೀರಸ್ಯ ವಾ ನಾಮಧೇಯಂ । ತದ್ವಂತಃ । ಛಾಂದಸೋ ಮತ್ವರ್ಥೀಯಸ್ಯ ಲೋಪಃ । ಪತಂಗಾ ಉತ್ಪತನಸಮರ್ಥಾಃ ವಯೋ ಗಚ್ಛಂತಃ ಅರುಷಾ ಅರೋಚಮಾನಾ ಹಿಂಸಕರಹಿತಾ ವಾ ॥ ಅತ್ರ । ಇತರಾಭ್ಯೋಽಪಿ ದೃಶ್ಯಂತೇ । ಪಾ. ೫-೩-೧೪ । ಇತಿ ದೃಶಿಗ್ರಹಣಾದ್ಭವದಾದ್ಯಯೋಗೇಽಪೀ-ದಂಶಬ್ದಾದ್ವಿಭಕ್ತ್ಯರ್ಥೇ ತ್ರಲ್ಪ್ರತ್ಯಯಃ । ಜುಷ್ಟ್ವೀ । ಜುಷೀ ಪ್ರೀತಿಸೇವನಯೋಃ । ಔಣಾದಿಕಃ ಕ್ತ್ವಪ್ರತ್ಯಯಃ । ವೋತೋ ಗುಣವಚನಾದಿತಿ ಙೀಷ್ ॥

॥ ಪ್ರತಿಪದಾರ್ಥ ॥

**ಹೇ ನರಾ**—ಎಲ್ಲೈ ನೇತೃಗಳಾದ ಅಶ್ವಿನೀದೇವತೆಗಳೇ । **ಯುವತಿಃ**—ತರುಣಿಯಾದ । **ಸೂರ್ಯಸ್ಯ ದುಹಿತಾ**—ಸೂರ್ಯಪುತ್ರಿಯು । **ಜುಷ್ಟ್ವೀ**—ಪ್ರೀತಳಾಗಿ । **ವಾಂ**—ನಿಮ್ಮ । **ಅತ್ರ ರಥಂ**—ಈ ರಥವನ್ನು । **ಆ ತಿಷ್ಠತ್**—ಹತ್ತಿದಳು (ಅವಳಿಂದ ಯುಕ್ತವಾಗಿ) । **ವಪುಷಃ**—(ಉತ್ತಮವಾದ) ಶರೀರವುಳ್ಳವುಗಳೂ । (ರೂಪವುಳ್ಳವುಗಳೂ) । **ಪತಂಗಾಃ**—ಹಾರುವ ಸಾಮರ್ಥ್ಯವುಳ್ಳವುಗಳೂ । **ವಯಃ**—ಗಮನಶೀಲಗಳೂ **ಅರುಷಃ**—ಕ್ರೋಧರಹಿತಗಳೂ (ಹಿಂಸಕ ರಹಿತಗಳೂ ಆದ) । **ವಾಂ**—ನಿಮ್ಮಿಬ್ಬರ । **ಅಶ್ವಾಃ**—ಅಶ್ವಗಳು ಅಭೀಕೇ—(ನಮ್ಮ) ಗೃಹಸಮೀಪಕ್ಕೆ । **ಪರಿ ವಹಂತು**—(ರಥವನ್ನು) ತರಲಿ.

॥ ಭಾವಾರ್ಥ ॥

ಅಶ್ವಿನೀದೇವತೆಗಳೇ, ತರುಣಿಯಾದ ಸೂರ್ಯಪುತ್ರಿಯು ಪ್ರೀತಳಾಗಿ ನಿಮ್ಮ ರಥವನ್ನೇರಿದಳು. (ಅವಳಿಂದ ಸಹಿತವಾಗಿ) ಒಳ್ಳೆಯರೂಪಿಗಳೂ, ಹಾರುವಸಾಮರ್ಥ್ಯವುಳ್ಳವುಗಳೂ, ಗಮನಶೀಲಗಳೂ, ಆದ ನಿಮ್ಮ ಅಶ್ವಗಳು ಹಿಂಸಕರಿಲ್ಲದೆ (ಬಾಧಾರಹಿತವಾಗಿ) (ನಿಮ್ಮ ರಥವನ್ನು) ನಮ್ಮ ಗೃಹಸಮೀಪಕ್ಕೆ ಕರೆತರಲಿ.

## English Translation.

Leaders (of sacrifice), the youthful daughter of Surya ascended, delighted, this yonr car; may :your strong-bodied prancing fleet, and shining horses, bring you near us.

॥ ವಿಶೇಷವಿಷಯಗಳು ॥

**ವಪುಷಃ—ವಪುರಿತಿ ರೂಪಸ್ಯ ಶರೀರಸ್ಯ ವಾ ನಾಮಧೇಯಂ ।** ತದ್ವಂತಃ । ವಪುಃ ಎಂಬ ಶಬ್ದವು ನೂರೊಂದು ಉದಕನಾಮಗಳಲ್ಲಿಯೂ (ನಿ. ೨-೨೪) ಹದಿನಾರು ರೂಪನಾಮಗಳಲ್ಲಿಯೂ (ನಿ. ೩-೧೩) ಉಕ್ತವಾಗಿರುತ್ತದೆ. ಶರೀರವುಳ್ಳವುಗಳು ಎಂದು ಅಶ್ವಗಳಿಗೆ ವಿಶೇಷಣವು.

**ಅರುಷಾಃ—ಆರೋಚಮಾನಾಃ ಹಿಂಸಕರಹಿತಾ ವಾ ।** ಅರುಷಶಬ್ದವು ಇಪ್ಪತ್ತಾರು ಅಶ್ವನಾಮಗಳಲ್ಲಿ (ನಿ. ೨-೨೭) ಪಠಿತವಾಗಿದೆ. ಸಾಯಣರು ಇದನ್ನು ಅಶ್ವಾಃ ಎಂಬ ಪದಕ್ಕೆ ವಿಶೇಷಣವನ್ನು ಮಾಡಿ ಬಹಳ ಕಾಂತಿಯುಳ್ಳವುಗಳು, ಯಾರಿಂದಲೂ ಹಿಂಸೆಗೆ ವಳಗಾಗದೆ ಇರುವವುಗಳು ಎಂದು ಅರ್ಥಮಾಡಿದಾರೆ.

**ಅಭೀಕೇ—ಗೃಹಸಮೀಪೇ ಪ್ರಸಿತ್ವೇ ಅಭೀಕೇ ಇತ್ಯಾಸನ್ನಸ್ಯ** (ನಿ. ೩-೨೦) ಎಂದು ನಿರಕ್ತದಲ್ಲಿ ಉಕ್ತವಾಗಿರುವುದರಿಂದ ಸಮೀಪವೆಂದು ಅರ್ಥ. ಅಶ್ವಿನೀದೇವತೆಗಳ ಕುದುರೆಗಳು—ಅತಿಶಯವಾದ ಶರೀರವನ್ನು ಹೊಂದಿ ಅವರ ರಥವನ್ನು ಅಂತರಿಕ್ಷಮಾರ್ಗದಲ್ಲಿ ಒಯ್ಯುತ್ತಾ ಅವರನ್ನು ಪ್ರೀತಿಯಿಂದ ಒಲಿಸಿ ಅವರ ರಥವನ್ನು ಹತ್ತಿರುವ ಸೂರ್ಯಪುತ್ರಿಯಾದ ಸೂರ್ಯಾದೇವಿಯೊಡನೆ ನಮ್ಮ ಗೃಹದಸಮೀಪಕ್ಕೆ ಕರೆತರಲಿ ಎಂದು ವರ್ಣಿಸಿದೆ. ಸ್ಕಂದಸ್ವಾಮಿಗಳು—

**ದುಹಿತಾ ಸೂರ್ಯಸ್ಯ ಸೂರ್ಯಾನಾಮ ಯುವತಿಃ ಪ್ರಾಪ್ತಯೌವ್ವನಾ ಯುವಯೋಃ ರಥಂ ಆಸ್ಥಿತವತೀ ಆಜೌ ಜಿತಾ ಆರೂಢೇತ್ಯರ್ಥಃ ।** ಸೂರ್ಯನ ಪುತ್ರಿಯಾದ ಸೂರ್ಯಾ ಎಂಬುವಳು ಯೌವ್ವನವತಿಯಾಗಿ ಯುದ್ಧದಲ್ಲಿ ಜಯಶೀಲರಾದ ಅಶ್ವಿನೀದೇವತೆಗಳನ್ನು ಮೆಚ್ಚಿ ಇವರ ರಥವನ್ನು ಹತ್ತಿದಳು ಎಂದು ಅರ್ಥಮಾಡಿ

**ಆ ವಾಂ ರಥಂ ದುಹಿತಾ ಸೂರ್ಯಸ್ಯ ಕಾರ್ಷ್ಮೇವಾತಿಷ್ಠದರ್ವತಾ ಜಯಂತೀ ।**
**ವಿಶ್ವೇ ದೇವಾ ಅನ್ವಮನ್ಯಂತ ಹೃದ್ಭಿಃ ಸಮು ಶ್ರಿಯಾ ನಾಸತ್ಯಾ ಸಚೇಥೇ ।**

(ಋ. ಸಂ. ೧-೧೧೬-೧೭)

ಎಂಬ ಈ ಋಕ್ಕನ್ನು ಉದಹರಿಸಿ ಅಭೀಕೇ ಎಂಬ ಪದಕ್ಕೆ **ಯಾಗಶಾಲೆ** ಎಂದು ಅರ್ಥವನ್ನು ವಿವರಿಸಿರುತ್ತಾರೆ. ಮತ್ತು **ಅಶ್ವಾಃ** ಎಂಬ ಪದಕ್ಕೆ ಅಶು ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಕಾರಣ ವ್ಯಾಪಿಸಿರುವವರು ಎಂದು ಅರ್ಥವನ್ನು ಹೇಳಿರುತ್ತಾರೆ.

|| ವ್ಯಾಕರಣಪ್ರಕ್ರಿಯಾ ||

**ಯುವತಿಃ**—ಯುವನ್ ಶಬ್ದ. ಸ್ತ್ರೀತ್ವ ವಿವಕ್ಷಾಮಾಡಿದಾಗ **ಯೂನಸ್ತಿಃ** (ಪಾ· ಸೂ. ೪-೧-೭೭) ಎಂಬುದರಿಂದ ತಿಪ್ರತ್ಯಯ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ತಿಷ್ಠತ್**—ಷ್ಠಾ ಗತಿನಿವೃತ್ತೌ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ಪಾಘ್ರಾಧ್ಮಾಸ್ಥಾ**—(ಪಾ· ಸೂ· ೭-೩-೭೮) ಎಂಬುದರಿಂದ ತಿಷ್ಠಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅತ್ರ**—ಇದಮ್ ಶಬ್ದ. **ಇತರಾಭ್ಯೋಽಪಿ ದೃಶ್ಯಂತೇ** (ಪಾ· ಸೂ· ೫-೩-೧೪) ಎಂಬಲ್ಲಿ ದೃಶಿಗ್ರಹಣ ಸಾಮರ್ಥ್ಯದಿಂದ ಭವದಾದಿ ಶಬ್ದಸಂಬಂಧವಿಲ್ಲದಿದ್ದರೂ ಈ ಶಬ್ದಕ್ಕೆ ದ್ವಿತೀಯಾರ್ಥದಲ್ಲಿ ತ್ರಲ್ ಪ್ರತ್ಯಯ ಬರುತ್ತದೆ. ಇದಮಿಗೆ ಅಶಾದೇಶ· ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ· ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಜುಷ್ಟ್ವೀ**—ಜುಷೀ ಪ್ರೀತಿಸೇವನಯೋಃ ಧಾತು. ಇದಕ್ಕೆ ಔಣಾದಿಕವಾದ ಕ್ತುಪ್ರತ್ಯಯ· **ಲಶಕ್ವತದ್ಧಿತೇ** ಎಂಬುದರಿಂದ ತಕಾರಕ್ಕೆ ಇತ್ ಸಂಜ್ಞಾ ಬರುವುದರಿಂದ ಲೋಪ. ಕಿತ್ತಾದುದರಿಂದ ಧಾತುವಿನ **ಲಘೂಪಧೆಗೆ** ಗುಣ ಬರುವುದಿಲ್ಲ. ಷ್ಟುತ್ವದಿಂದ ತಕಾರಕ್ಕೆ ಟಕಾರಾದೇಶ· ಗುಣವಾಚಕವಾದುದರಿಂದ ಸ್ತ್ರೀತ್ವ ವಿವಕ್ಷಾಮಾಡಿದಾಗ **ಓತೋ ಗುಣವಚನಾತ್** ಎಂಬುದರಿಂದ ಙೀಷ್ ಯಣಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಶ್ವಾಃ**—ಅಶೂ ವ್ಯಾಪ್ತೌ. ಧಾತು. **ಅಶುಪ್ರುಷಿ**—(ಉ. ಸೂ· ೧-೧೪೯) ಎಂಬುದರಿಂದ ಕ್ವನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ· ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. || ೫ ||



॥ ಸಂಹಿತಾಪಾಠಃ ॥

ಉದ್ವಂದನಮೈರತಂ ದಂಸನಾಭಿರುದ್ರೇಭಂ ದಸ್ರಾ ವೃಷಣಾ ಶಚೀಭಿಃ ।
ನಿಷ್ಟೌಗ್ರ್ಯಂ ಪಾರಯಥಃ ಸಮುದ್ರಾತ್ಪುನಶ್ಚ್ಯವಾನಂ ಚಕ್ರಥುರ್ಯುವಾನಂ ॥ ೬ ॥

॥ ಪದಪಾಠಃ ॥

ಉತ್ । ವಂದನಂ । ಐರತಂ । ದಂಸನಾಭಿಃ । ಉತ್ । ರೇಭಂ । ದಸ್ರಾ । ವೃಷಣಾ । ಶಚೀಭಿಃ ।
ನಿಃ । ತೌಗ್ರ್ಯಂ । ಪಾರಯಥಃ । ಸಮುದ್ರಾತ್ । ಪುನರಿತಿ । ಚ್ಯವಾನಂ । ಚಕ್ರಥುಃ । ಯುವಾನಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ವಂದನಮೇತತ್ಸಂಜ್ಞಮೃಷಿಂ ದಂಸನಾಭಿರಾತ್ಮೀಯೈಃ ಕರ್ಮಭಿಃ ಕೂಪಾದುದೈರತಂ । ಉದೈರಯತಂ । ಉದಗಮಯತಂ । ಹೇ ದಸ್ರಾ ದರ್ಶನೀಯೌ ವೃಷಣಾ ಕಾಮಾನಾಂ ವರ್ಷಿತಾರಾವಶ್ವಿನಾ ಶಚೀಭಿಃ ಕರ್ಮಭೀ ರೇಭಮೇತತ್ಸಂಜ್ಞಮೃಷಿಂ ದಶ ರಾತ್ರೀರ್ನವಾಹಾನಿ ಚ ಕೂಪೇ ನಿವಸಂತಂ ತಸ್ಮಾದುದೈರಯತಂ । ಉದತಾರಯತಂ । ತಥಾ ತೌಗ್ರ್ಯಂ ತುಗ್ರಸ್ಯ ಪುತ್ರಂ ಭುಜ್ಯುಂ ಸಮುದ್ರೇ ನಿಮಗ್ನಮಾತ್ಮೀಯಾಭಿರ್ನೌಭಿರಶ್ವೈಶ್ಚ ಸಮುದ್ರಾನ್ನಿಷ್ಪಾರಯಥಃ । ತೀರದೇಶಂ ಪ್ರಾಪಿತವಂತೌ । ತಥಾ ಚ್ಯವಾನಂ ಚ್ಯವನಮೃಷಿಂ ಜೀರ್ಣಂ ಪುನರ್ಯುವಾನಂ ಯೌವನೋಪೇತಂ ಚಕ್ರಥುಃ । ಕೃತವಂತೌ ॥ ಐರತಂ । ಈರ ಗತೌ ಕಂಪನೇ ಚ । ಣ್ಯಂತಾಲ್ಲಙಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ ॥

|| ಪ್ರತಿಪದಾರ್ಥ ||

**ದಸ್ರಾ**—ದರ್ಶನೀಯರೂ | **ವೃಷಣಾ**—ಕಾಮಾಭಿವರ್ಷಕರೂ ಆದ ಅಶ್ವಿನೀದೇವತೆಗಳೇ | **ವಂದನಂ**—ವಂದನ ಎಂಬ ಋಷಿಯನ್ನು | **ದಂಸನಾಭಿಃ**—(ನಿಮ್ಮ ಸಾಹಸ) ಕರ್ಮಗಳಿಂದ | **ಉತ್ ಐರತಂ**—(ಬಾವಿಯಿಂದ) ಎತ್ತಿದಿರಿ | **ಶಚೀಭಿಃ**—(ನಿಮ್ಮ) ಕರ್ಮಗಳಿಂದಲೇ | **ರೇಭಂ**—ರೇಭ ಋಷಿಯನ್ನೂ | (**ಉತ್ ಐರತಂ**—ಮೇಲಕ್ಕೆ ಎತ್ತಿದಿರಿ) | (**ತಥಾ**—ಹಾಗೆಯೇ) | **ತೌಗ್ರ್ಯಂ**—(ಸಮುದ್ರದಲ್ಲಿ ನಿಮಗ್ನನಾಗಿದ್ದ) ತುಗ್ರಪುತ್ರನಾದ ಭುಜ್ಯುವನ್ನು | **ಸಮುದ್ರಾತ್**—ಸಮುದ್ರದಿಂದ | **ನಿಃ ಪಾರಯಥಃ**—(ತೀರಕ್ಕೆ) ಸೇರಿಸಿದಿರಿ | **ಚ್ಯವಾನಂ**—(ಜರಾಯುಕ್ತನಾಗಿದ್ದ) ಚ್ಯವನನೆಂಬ ಋಷಿಯನ್ನು | **ಪುನಃ ಯುವಾನಂ**—ಪುನಃ ಯುವಕನನ್ನಾಗಿ | **ಚಕ್ರಥುಃ**—ಮಾಡಿದಿರಿ.

|| ಭಾವಾರ್ಥ ||

ಸ್ಫುರದ್ರೂಪಿಗಳೂ, ಕಾಮವರ್ಷಕರೂ ಆದ ಅಶ್ವಿನೀದೇವತೆಗಳೇ, ನೀವು ನಿಮ್ಮ ಸಾಮರ್ಥ್ಯದಿಂದ ವಂದನ ಋಷಿಯನ್ನೂ, ರೇಭನೆಂಬ ಋಷಿಯನ್ನೂ (ಬಾವಿಯಿಂದ) ಎತ್ತಿದಿರಿ; ತುಗ್ರಪುತ್ರನಾದ ಭುಜ್ಯುವನ್ನು ಸಮುದ್ರಮಧ್ಯದಿಂದ ದಡಕ್ಕೆ ಸೇರಿಸಿದಿರಿ; ಮತ್ತು ಜರಾಯುಕ್ತನಾಗಿದ್ದ ಚ್ಯವನನ್ನು ಪುನಃ ಯುವಕನನ್ನಾಗಿ ಮಾಡಿದಿರಿ.

English Translation.

By your deeds, Dasras, you raised up Vandana, and showerers (of benefits), Rebha; you bore the son of Tugra over the sea, and made Chyavana young.

|| ವಿಶೇಷವಿಷಯಗಳು ||

ಅಶ್ವಿನೀದೇವತೆಗಳು ವಂದನನೆಂಬ ಋಷಿಯನ್ನು ಬಾವಿಯಿಂದ ಮೇಲಕ್ಕೆ ಎತ್ತಿ ರಕ್ಷಿಸಿದರು. ರೇಭನೆಂಬ ಋಷಿಯನ್ನು ರಾಕ್ಷಸರು ಬಂಧಿಸಿ ಬಾವಿಯಲ್ಲಿ ಹಾಕಿ ಹತ್ತುರಾತ್ರಿಗಳವರಿಗೂ ಅವನು ಅಲ್ಲಿ ಇದ್ದ ಕಾರಣ ಅವನನ್ನು ತಾವೇ ಮೇಲಕ್ಕೆ ಎತ್ತಿ ಅವನಿಗೆ ಪ್ರಾಣದಾನಮಾಡಿದರು. ತುಗ್ರನ ಮಗನಾದ ಭುಜ್ಯುವೆಂಬವನು ಸಮುದ್ರದ ಮಧ್ಯದಲ್ಲಿ ನಾವೆಯು ಒಡೆದುಹೋದ ಕಾರಣ ನೀರಿನಲ್ಲಿ ಮುಳುಗುತ್ತಿರುವುದನ್ನು ನೋಡಿ ಅವನನ್ನೂ ಅವನ ಪರಿವಾರವೆಲ್ಲವನ್ನೂ ತಮ್ಮ ನಾವೆಯಿಂದಲೂ ಇತರ ಸಾಧನಗಳಿಂದಲೂ ದಡಕ್ಕೆ ತಂದು ಅವನ ಮನೆಯನ್ನು ಸೇರಿಸಿ ರಕ್ಷಿಸಿದರು. ಅತಿಶಯಿತವಾದ (ವೃದ್ಧಾಪ್ಯದಿಂದ ಜೀರ್ಣವಾದ) ಮುದುಕತನದಿಂದ ವಲೀಪಲಿತಗಳಿಂದ ಕೂಡಿದ ಶರೀರವನ್ನು ಹೊಂದಿ ಕಣ್ಣುಕಾಣಿಸದಿರುವ ಚ್ಯವನನೆಂಬ ಋಷಿಗೆ ಯೌವನವು ಉಂಟಾಗುವಂತೆ ಮಾಡಿ ಅವನನ್ನು ರಕ್ಷಿಸಿದರು. ಎಂದು ವಂದನ, ರೇಭ, ಭುಜ್ಯು, ಚ್ಯವನ ಇವರುಗಳನ್ನು ರಕ್ಷಿಸಿರುವ ನಾಲ್ಕು ಅದ್ಭುತಕಾರ್ಯಗಳು ಈ ಋಕ್ಕಿನಿಂದ ವರ್ಣಿತವಾಗಿರುತ್ತವೆ ಎಂದು ಸಾಯಣರು ವಿವರಿಸಿರುತ್ತಾರೆ. ಈ ವಿಷಯವು ಹಿಂದಿನ ಸೂಕ್ತಗಳಲ್ಲಿಯೂ ವರ್ಣಿತವಾಗಿವೆ.

**ಶಚೀಭಿಃ—ಆತ್ಮೀಯಾಭಿಃ ಕರ್ಮಭಿಃ ।** ಶಚೀಶಬ್ದವು ವಾಙ್ನಾಮಗಳಲ್ಲಿಯೂ (ನಿ. ೨-೨೩) ಕರ್ಮ ನಾಮಗಳಲ್ಲಿಯೂ (ನಿ. ೩-೨) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿರುತ್ತದೆ. ಸಾಯಣರು ಕರ್ಮಗಳಿಂದ ಎಂಬುದಾಗಿಯೂ ಸ್ಕಂದಸ್ವಾಮಿಗಳು **ಸ್ವಾಭಿಃ ಪ್ರಜ್ಞಾಭಿಃ ಕರ್ಮಭಿರ್ವಾ** ತಮ್ಮ ಬುದ್ಧಿಯಿಂದಲೂ ಅಥವಾ ಕರ್ಮಗಳಿಂದಲೂ ಎಂದೂ ಅರ್ಥಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ವಂದನಮ್**—ವದಿ ಅಭಿವಾದನಸ್ತುತ್ಯೋಃ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಧಾತು ಇದಿತ್ತಾದುದರಿಂದ ನುಮಾಗಮ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಐರತಮ್—**ಈರ ಗತೌ ಕಂಪನೇ ಚ. ಇಲ್ಲಿ ಅಂತರ್ಭಾವಿತಣ್ಯರ್ಥಕವಾಗಿದೆ. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ಅಥವಾ ಪ್ರಯೋಜಕವ್ಯಾಪಾರ ತೋರುವಾಗ ಣಿಚ್. ಣಿಜಂತದ ಮೇಲೆ ಹಿಂದಿನಂತೆ ಲಙ್ ರೂಪ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಶಪ್ಪಿಗೆ ಆರ್ಧ ಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ.

**ಪಾರಯಥಃ—**ಪಾರ ತೀರಸಮಾಪ್ತೌ ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಯುವಾನಮ್**—ಯು ಮಿಶ್ರಣಾಮಿಶ್ರಣಯೋಃ ಧಾತು. **ಕನಿನ್ ಯು ವೃಷಿ**—(ಉ. ಸೂ. ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯ. ಧಾತುವಿಗೆ ಉವಙಾದೇಶ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನ ಪರವಾದಾಗ **ಸರ್ವನಾಮಸ್ಥಾನೇಚಾಽಸಂಬುದ್ಧೌ** ಎಂಬುದರಿಂದ ಉಪಧಾದೀರ್ಘ. ॥ ೬ ॥



॥ ಸಂಹಿತಾಪಾಠಃ ॥

ಯುವಮತ್ರಯೇಽವನೀತಾಯ ತಪ್ತಮೂರ್ಜಮೋಮಾನಮ-
ಶ್ವಿನಾವಧತ್ತಂ ।
ಯುವಂ ಕಣ್ವಾಯಾಪಿರಿಪ್ತಾಯ ಚಕ್ಷುಃ ಪ್ರತ್ಯಧತ್ತಂ ಸುಷ್ಟುತಿಂ
ಜುಜುಷಾಣಾ ॥ ೭ ॥

॥ ಪದಪಾಠಃ ॥

ಯುವಂ । ಅತ್ರಯೇ । ಅವಽನೀತಾಯ । ತಪ್ತಂ । ಊರ್ಜಂ । ಓಮಾನಂ । ಅಶ್ವಿನೌ । ಅಧತ್ತಂ ।

ಯುವಂ । ಕಣ್ವಾಯ । ಅಪಿಽರಿಪ್ತಾಯ । ಚಕ್ಷುಃ । ಪ್ರತಿ । ಅಧತ್ತಂ । ಸುಽಸ್ತುತಿಂ । ಜುಜುಷಾಣಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಮವನೀತಾಯ ಶತದ್ವಾರೇ ಪೀಡಾಯಂತ್ರಗೃಹೇಽವಸ್ತಾನ್ನೀತಾಯಾತ್ರಯೇ ತಪ್ತಂ ಪೀಡಾರ್ಥಂ ಪ್ರಕ್ಷಿಪ್ತಂ ತುಷಾಗ್ನಿಂ ಶೀತೇನೋದಕೇನಾವಾರಯೇಥಾಂ । ಅಪಿ ಚಾಸ್ಮಾ ಅತ್ರಯ ಓಮಾನಂ ಸುಖಕರಮೂರ್ಜಂ ರಸವದನ್ನಮಧತ್ತಂ । ಪ್ರಾಯಚ್ಛತಂ । ತಥಾ ಸುಷ್ಟುತಿಂ ಶೋಭನಾಂ ಸ್ತುತಿಂ ಜುಜುಷಾಣಾ ಸೇವಮಾನೌ ಯುವಾಮಪಿರಿಪ್ತಾಯಾಸುರೈರ್ಬ್ರಾಹ್ಮಣ್ಯಪರೀಕ್ಷಾರ್ಥಮಿಹಾಸೀನಃ ಸನ್ ವ್ಯುಷ್ಟಾಮುಷಸಂ ಜಾನೀಹೀತ್ಯಂಧಕಾರವತಿ ಗೃಹೇ ಪ್ರವೇಶಿತಾಯ ಕಣ್ವಾಯರ್ಷಯೇ ಚಕ್ಷುರ್ವ್ಯುಷ್ಟಾಯಾ ಉಷಸಃ ಪ್ರಕಾಶಕಂ ವೀಣಾಶಬ್ದಂ ಪ್ರತ್ಯಧತ್ತಂ । ಕೃತವಂತೌ । ಯದ್ವಾ । ಅಪಿರಿಪ್ತಾಯಾಪಿಲಿಪ್ತಾಯ ಪಟಲೇನ ಪಿಹಿತದೃಷ್ಟಯ ಏವಂವಿಧಾಯ ಕಣ್ವಾಯ ಚಕ್ಷುರಿಂದ್ರಿಯಂ ಪ್ರತ್ಯಧತ್ತಂ । ಪ್ರತ್ಯಸ್ಥಾಪಯತಂ ॥ ಓಮಾನಂ । ಅವತೇರೌಣಾದಿಕೋ ಮನಿಃ । ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚ ಊಟ್ । ಗುಣಃ । ಅಪಿರಿಪ್ತಾಯ । ಲಿಪ ಉಪದೇಹೇ । ಅಸ್ಮಾತ್ಕರ್ಮಣಿ ನಿಷ್ಠಾ । ಕಪಿಲಕಾದಿತ್ವಾಲ್ಲತ್ವವಿಕಲ್ಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಜುಜುಷಾಣಾ । ಜುಷೀ ಪ್ರೀತಿಸೇವನಯೋಃ । ಛಾಂದಸೋ ಲಿಟ್ । ಲಿಟಃ ಕಾನಜ್ವಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ ॥

॥ ಪ್ರತಿಪದಾರ್ಥ ॥

(ಹೇ) **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರು । **ಅವನೀತಾಯ**—ಕೆಳಗೆ (ಪೀಡಾಗೃಹದಲ್ಲಿ) ಬೀಳಿಸಲ್ಪಟ್ಟಿದ್ದ । **ಅತ್ರಯೇ**—ಅತ್ರಿ ಎಂಬ ಋಷಿಗೆ । **ತಪ್ತಂ**—ತಾಪವುಂಟುಮಾಡುತ್ತಿದ್ದ ಅಗ್ನಿಯನ್ನು (ಪರಿಹರಿಸಿದಿರಿ) । **ಓಮಾನಂ**—ಸುಖಕರವಾದ । **ಊರ್ಜಂ**—ಸಾರವತ್ತಾದ ಅನ್ನವನ್ನು । **ಅಧತ್ತಂ**— ಕೊಟ್ಟಿರಿ । (**ತಥಾ**—ಹಾಗೆಯೇ) । **ಸುಷ್ಟುತಿಂ**—ಉತ್ತಮ ಸ್ತುತಿಯನ್ನು । **ಜುಜುಷಾಣಾ**—ಅಂಗೀಕರಿಸುವ (ನೀವು) । **ಅಪಿರಿಪ್ತಾಯ**—ಕತ್ತಲೆಮನೆಯಲ್ಲಿ ಹಾಕಲ್ಪಟ್ಟಿದ್ದ ಪೊರೆಯಿಂದ (ಮಂದ ದೃಷ್ಟಿಯಾಗಿದ್ದ) **ಕಣ್ವಾಯ**—ಕಣ್ವ ಎಂಬ ಋಷಿಗೆ । **ಚಕ್ಷುಃ**—ಪ್ರಕಾಶಕವಾದ ಚಕ್ಷುರಿಂದ್ರಿಯವನ್ನು । **ಪ್ರತ್ಯಧತ್ತಂ**—ಅನುಗ್ರಹಿಸಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪೀಡಾಗೃಹದಲ್ಲಿ ಬೀಳಿಸಲ್ಪಟ್ಟಿದ್ದ ಅತ್ರಿ ಎಂಬ ಋಷಿಗೆ ತಾಪವನ್ನುಂಟುಮಾಡುತ್ತಿದ್ದ ಅಗ್ನಿಯನ್ನು ನಿವಾರಿಸಿ, (ಅವನಿಗೆ) ಸುಖಕರವಾದ ಮತ್ತು ಸಾರವತ್ತಾದ ಅನ್ನವನ್ನು ಕೊಟ್ಟಿರಿ. (ಹಾಗೆಯೇ) ಉತ್ತಮವಾದ ಸ್ತುತಿಯಿಂದ ಸಂತುಷ್ಟರಾಗುವ (ನೀವು) ಕತ್ತಲೆಮನೆಯಲ್ಲಿ ಹಾಕಲ್ಪಟ್ಟಿದ್ದ (ಪೂರೆ ಒಂದು ಕಣ್ಣು ಕಾಣಿಸದೆ ಇದ್ದ) ಕಣ್ವಋಷಿಗೆ ಕಣ್ಣನ್ನು ಅನುಗ್ರಹಿಸಿದಿರಿ.

## English Translation.

You (gave relief) to the imprisoned Atri, (quenching the) scorching heat, and fed him with grateful food; solicitous of worthy praise, you gave sight to Kanwa, blinded (by darkness).

॥ ವಿಶೇಷವಿಷಯಗಳು ॥

**ಊರ್ಜಂ—ರಸವದನ್ನಂ** ಊರ್ಜಶಬ್ದವು ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ. ೨-೭) ಉಕ್ತವಾಗಿರುತ್ತದೆ.

**ಅವನೀತಾಯ—ಅವಸ್ತಾನ್ನೀತಾಯ** ಕೆಳಮುಖನಾಗಿ ಇಡಲ್ಪಟ್ಟ ಎಂದು ಅರ್ಥ. ಅತ್ರಿಋಷಿಯನ್ನು ಅಸುರರು ಹಿಡಿದುಕೊಂಡುಹೋಗಿ ಅನೇಕ ಬಾಗಲುಗಳುಳ್ಳ ಹಿಂಸೆಯನ್ನುಂಟುಮಾಡುವ ಯನ್ತ್ರದಂತಿರುವ ಮನೆಯಲ್ಲಿ ಕೆಳಮುಖನಾಗಿರುವಂತೆ ನಿರ್ಬಂಧದಲ್ಲಿಟ್ಟು ತುಷಾಗ್ನಿಯಿಂದ ಸುಟ್ಟರು. ಆಗ ಆ ಋಷಿಯು ಹಿಂಸೆಯನ್ನು ತಡೆಯಲಾರದೆ ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿದನು. ಅದನ್ನು ಕೇಳಿ ಅವರು ಆ ಋಷಿಯನ್ನು ಆ ಗೃಹದಿಂದ ತಪ್ಪಿಸಿ ಅವನಿಗೆ ಶೈತ್ಯೋಪಚಾರವನ್ನು ಮಾಡಿ ಸುಖಕರವಾದ ಅನ್ನೋದಕಗಳನ್ನು ಕೊಟ್ಟು ರಕ್ಷಿಸಿದರು. ಇದರಿಂದಲೇ **ಸುಷ್ಟುತಿಂ ಜುಜುಷಾಣಾ ಶೋಭನಾಂ ಸ್ತುತಿಂ ಸೇವಮಾನೌ**—ಅಶ್ವಿನೀದೇವತೆಗಳು ಉತ್ತಮವಾದ ಸ್ತುತಿಯಿಂದ ಬಹಳವಾಗಿ ಸ್ತುತಿಮಾಡಲ್ಪಡುವವರೆಂದು ವಿವೃತವಾಗಿದೆ.

**ಅಪಿರಿಪ್ತಾಯ—ಅಸುರೈಃ ಬ್ರಾಹ್ಮಣ್ಯಪರೀಕ್ಷಾರ್ಥಂ ಇಹಾಸೀನಸ್ತ್ವಂ ವ್ಯುಷ್ಟಾಮುಷಸಂ ಜಾನೀಹಿ ಇತಿ ಅಂಧಕಾರಗೃಹೇ ಪ್ರವೇಶಿತಾಯ ಕಣ್ವಾಯ ಋಷಯೇ। ಯದ್ವಾ ಅಪಿಲಿಪ್ತಾಯ ಪಿಹಿತದೃಷ್ಟಯೇ**—ಕಣ್ವಋಷಿಯನ್ನು ಅಸುರರು ಒಂದು ಕತ್ತಲೆಯ ಮನೆಯಲ್ಲಿರಿಸಿ ನೀನು ಬ್ರಾಹ್ಮಣನಾಗಿದ್ದರೆ ಉಷಃಕಾಲವಾದದ್ದನ್ನು ತಿಳಿದು ನಮಗೆ ಹೇಳು ಎಂದು ಕಣ್ಣು ಕಾಣಿಸದಂತೆ ಮಾಡಿದರು. ಮತ್ತು ಅವನ ಬ್ರಾಹ್ಮಣ್ಯವನ್ನು ಪರೀಕ್ಷಿಸಲು ಅವನನ್ನು ನಿರ್ಬಂಧದಲ್ಲಿ ಇರಿಸಿದರು. ಇದನ್ನು ತಿಳಿದು ಅಶ್ವಿನೀದೇವತೆಗಳು ಹೀಗೆ ನಿರ್ಬಂಧವನ್ನು ಅನುಭವಿಸುತ್ತಿರುವ ಕಣ್ವಋಷಿಯಿಂದ ಸ್ತುತರಾಗಿ ಅವನಿಗೆ—ಉಷಃಕಾಲವು ಪ್ರಾಪ್ತವಾದಾಗ ನಾವು ವೀಣೆಯನ್ನು ಬಾರಿಸುವೆವು. ಅದರ ಧ್ವನಿಯನ್ನು ಕೇಳಿ ನೀನು ಉಷಃಕಾಲದ ವಿಷಯವನ್ನು ಅಸುರರಿಗೆ ತಿಳಿಸು ಎಂದು ಕಣ್ವನಿಗೆ ಹೇಳಿ ಉಷಃಕಾಲ ಸೂಚಕವಾದ ವೀಣಾಧ್ವನಿಯನ್ನು ಮಾಡಿ ಅವನಿಗೆ ಕಣ್ಣು ಕಾಣಿಸುವಂತೆಯೂ ಮಾಡಿ ರಕ್ಷಿಸಿದರು.

ಎಂದು ಅತ್ರಿಋಷಿಯನ್ನೂ ಮತ್ತು ಕಣ್ವಋಷಿಯನ್ನೂ ರಕ್ಷಿಸಿದ ವಿಷಯವು ಈ ಋಕ್ಕಿನಿಂದ ಹೇಳಲ್ಪಟ್ಟಿರುತ್ತದೆ. ಈ ವಿಷಯವು ಹಿಂದಿನ ಸೂಕ್ತಗಳಲ್ಲಿಯೂ ಹೇಳಲ್ಪಟ್ಟಿರುವುದು.

**ಓಮಾನಂ**— **ಸುಖಕರಂ । ಅವ ರಕ್ಷಣೇ** ಎಂಬ ರಕ್ಷಣಾರ್ಥವಾದ ಅವ ಧಾತುವಿನಿಂದ **ಓಮಾನ** ಶಬ್ದವು ನಿಷ್ಪನ್ನವಾಗಿರುತ್ತದೆ ಎಂದು ಸಾಯಣರೂ ಸ್ಕಂದಸ್ವಾಮಿಗಳೂ ವ್ಯಾಖ್ಯಾನಮಾಡಿರುತ್ತಾರೆ. ನಿರುಕ್ತಕಾರರು—

**ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆಗತ। ದಾಶ್ವಾಂಸೋ ದಾಶುಷಃ ಸುತಂ ॥**

(ಋ. ಸಂ. ೧-೩-೭)

ಎಂಬ ಋಕ್ಕನ್ನು ಉದಹರಿಸಿ ಅವಿತಾರೋ ವಾ ಅವನೀಯಾ ವಾ ಎಂದು ವ್ಯಾಖ್ಯಾನಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅವನೀತಾಯ**— ಣೀಞ್ ಪ್ರಾಪಣೇ. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಅವ) ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ತಪ್ತಮ್**— ತಪ ಸಂತಾಪೇ. ಧಾತು. ಹಿಂದಿನಂತೆ ಕ್ತಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಓಮಾನಮ್**— ಅವ ರಕ್ಷಣೇ. ಧಾತು. ಇದಕ್ಕೆ ಔಣಾದಿಕವಾದ ಮನಿ ಪ್ರತ್ಯಯ. **ಜ್ವರತ್ವರ ಸ್ರಿವ್ಯವಿಮವಾಮ್**—(ಪಾ. ಸೂ. ೬-೪-೨೦) ಎಂಬುದರಿಂದ ಧಾತುವಿನ ವಕಾರಕ್ಕೂ ಉಪಧೆಗೂ ಊಠ್ ಬರುತ್ತದೆ. ಅದಕ್ಕೆ ಮನಿ ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. ಓಮನ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಮಕಾರೋತ್ತರಾಕಾರ ಉದಾತ್ತವಾಗುತ್ತದೆ. ದ್ವಿತೀಯಾ ಅಮ್ ಪರವಾದಾಗ **ಸರ್ವನಾಮಸ್ಥಾನೇ**— ಸೂತ್ರದಿಂದ ನಾಂತದ ಉಪಧೆಗೆ ದೀರ್ಘ ಬರುತ್ತದೆ.

**ಅಧತ್ತಮ್**— ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಅಪಿರಿಪ್ತಾಯ**— ಲಿಪ ಉಪದೇಹೇ. ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಕಿತ್ತಾದುದರಿಂದ **ಲಘೂಪಧಗುಣ** ಬರುವುದಿಲ್ಲ. ಕಾಪಿಲಕಾದಿಯಲ್ಲಿ ಸೇರಿರುವುದರಿಂದ ಲತ್ವವಿಕಲ್ಪ ಬರುತ್ತದೆ. ಗತಿಸಮಾಸವಾದಾಗ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಅಪಿ) ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸುಸ್ತುತಿಮ್**— ಷ್ಟುಞ್ ಸ್ತುತೌ. ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಜುಜುಷಾಣಾ**—ಜುಷೀ ಪ್ರೀತಿಸೇವನಯೋಃ ಧಾತು. ವರ್ತಮಾನಾರ್ಥ ತೋರುವಾಗ **ಛಂದಸಿ ಲುಙ್ ಲಙ್ ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್. ಆದಕ್ಕೆ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಚಾದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಅಟ್ ಕುಪ್ವಾಙ್**—ಸೂತ್ರದಿಂದ ಷಕಾರ ನಿಮಿತ್ತವಿರುವುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಇದಕ್ಕೆ ದ್ವಿವಚನ ಔಕಾರ ವಿಭಕ್ತಿಪರನಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಆದಕ್ಕೆ ಆಕಾರಾದೇಶ. ॥ ೭ ॥



॥ ಸಂಹಿತಾಪಾಠಃ ॥

ಯುವಂ ಧೇನುಂ ಶಯವೇ ನಾಧಿತಾಯಾಪಿನ್ವತಮಶ್ವಿನಾ
ಪೂರ್ವ್ಯಾಯ ।
ಅಮುಂಚತಂ ವರ್ತಿಕಾಮಂಹಸೋ ನಿಃ ಪ್ರತಿ ಜಂಘಾಂ ವಿಶ್ಪ-
ಲಾಯಾ ಅಧತ್ತಂ ॥ ೮ ॥

॥ ಪದಪಾಠಃ ॥

ಯುವಂ । ಧೇನುಂ । ಶಯವೇ । ನಾಧಿತಾಯ । ಅಪಿನ್ವತಂ । ಅಶ್ವಿನಾ ।
ಪೂರ್ವ್ಯಾಯ ।
ಅಮುಂಚತಂ । ವರ್ತಿಕಾಂ । ಅಂಹಸಃ । ನಿಃ । ಪ್ರತಿ । ಜಂಘಾಂ । ವಿಶ್ಪಲಾಯಾಃ ।
ಅಧತ್ತಂ ॥ ೮ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ಯುವಂ ಯುವಾಂ ಪೂರ್ವ್ಯಾಯ ಪುರಾತನಾಯ ನಾಧಿತಾಯ ಯಾಚಮಾನಾಯ ಶಯವ ಏತತ್ಸಂಜ್ಞಾಯರ್ಷಯೇ ಧೇನುಂ ನಿವೃತ್ತಪ್ರಸವಾಮದೋಗ್ಧ್ರೀಮಪಿನ್ವತಂ । ಪಯಸಾಸಿಂಚತಂ । ಸರ್ವದಾ ಪಯಸ್ವಿನೀಮಕುರುತಮಿತ್ಯರ್ಥಃ । ಅಪಿ ಚ ವರ್ತಿಕಾಂ ವೃಕೇಣ ಗ್ರಸ್ತಾಂ ಚಟಿಕಸದೃಶೀಂ ಶಕುನಿಮಂಹಸೋ ವೃಕಾಸ್ಯಲಕ್ಷಣಾತ್ಪಾಪಾನ್ನಿರಮುಂಚತಂ । ನಿರಮೋಚ-ಯತಂ । ಯದ್ವಾ । ಪುನಃಪುನರ್ವರ್ತತ ಇತಿ ವರ್ತಿಕೋಷಾಃ । ತಾಮಾದಿತ್ಯೇನಾಭಿಗ್ರಸ್ತಾಂ ಯುವಾ-ಮಮೋಚಯತಂ । ತಥಾ ವಿಶ್ಪಲಾಯೈ ಸಂಗ್ರಾಮೇ ಛಿನ್ನಜಂಘಾಯಾ ಅಗಸ್ತ್ಯಪುರೋಹಿತಸ್ಯ ಖೇಲಸ್ಯ ಸಂಬಂಧಿನ್ಯಾ ಏತತ್ಸಂಜ್ಞಾಯೈ ಸ್ತ್ರಿಯಾ ಆಯಸೀಂ ಜಂಘಾಂ ಪ್ರತ್ಯಧತ್ತಂ । ಪ್ರತ್ಯಸ್ಥಾಪ-ಯತಂ ಸಮಯೋಜಯತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಹೇ) **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರು । **ಪೂರ್ವ್ಯಾಯ**— ಪುರಾತನನಾದ । **ನಾಧಿತಾಯ**—ಪ್ರಾರ್ಥಿಸುತ್ತಿರುವ । **ಶಯವೇ**—ಶಯು ಎಂಬ ಋಷಿಗೋಸ್ಕರ । **ಧೇನುಂ**—(ಕರುಹಾಕದೇ ಇರುವ ಗೋವನ್ನು । **ಅಪಿನ್ವತಂ**—ಕ್ಷೀರಯುಕ್ತವನ್ನಾಗಿ ಮಾಡಿದಿರಿ । **ವರ್ತಿಕಾಂ**—ವೃಕಗೃಹೀತವಾದ ವರ್ತಿಕಾಪಕ್ಷಿಯನ್ನು । **ಅಂಹಸಃ**—ಪಾಪರೂಪವಾದ (ವೃಕದ ಬಾಯಿನಿಂದ) । **ನಿಃ ಅಮುಂಚತಂ**—ಬಿಡಿಸಿದಿರಿ । **ಅಥವಾ ವರ್ತಿಕಾಂ**— ಆವರ್ತಿಸುವ (**ಉಷೆಯನ್ನು**) । **ಅಂಹಸಃ**—ಆದಿತ್ಯನಿಂದ (ಗ್ರಸ್ತಳಾಗಿದ್ದವಳನ್ನು) । **ನಿಃ ಅಮುಂಚತಂ**—ಪ್ರತ್ಯೇಕಿಸಿದಿರಿ । (**ತಥಾ**—ಹಾಗೆಯೇ) । **ವಿಶ್ಪಲಾಯೈ**—(ಛಿನ್ನಾವಯವಳಾದ). ವಿಶ್ಪಲೆ ಎಂಬುವಳಿಗೆ । **ಜಂಘಾಂ**—(ಕಬ್ಬಿಣದಿಂದ ಮಾಡಿದ). ಮೊಣಕಾಲನ್ನು । **ಪ್ರತಿ ಅಧತ್ತಂ**—ಜೋಡಿಸಿದಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಪುರಾತನನಾದ (ನಿಮ್ಮನ್ನು) ಪ್ರಾರ್ಥಿಸಿದ, ಶಯುವಿಗೋಸ್ಕರ (ಅವನ) ಗೋವನ್ನು ಕ್ಷೀರಯುಕ್ತವನ್ನಾಗಿ ಮಾಡಿದಿರಿ, ವರ್ತಿಕಾಪಕ್ಷಿಯನ್ನು ವೃಕದ ಆಸ್ಯದಿಂದ ಬಿಡಿಸಿದಿರಿ (ಸೂರ್ಯನಿಂದ ಉಷೆಯನ್ನು ಪ್ರತ್ಯೇಕಿಸಿದಿರಿ) ಕಾಲು ಮುರಿದುಹೋಗಿದ್ದ ವಿಶ್ಪಲೆಗೆ (ಕಬ್ಬಿಣದ) ಮೊಣಕಾಲನ್ನು ಜೋಡಿಸಿದಿರಿ.

## English Translation.

You filled his cow with milk, Ashwins, for the ancient Sayu, when imploring (your aid) ; you liberated the quail from danger ; you gave a leg to Vispala.

॥ ವಿಶೇಷವಿಷಯಗಳು ॥

**ಶಯವೇ ಧೇನುಂ ಅಪಿನ್ವತಂ**—ಏತತ್ಸಂಜ್ಞಾಯ ಋಷಯೇ ನಿವೃತ್ತ ಪ್ರಸವಾಂ ಅದೋಗ್ಧ್ರೀಂ **ಪಯಸಾ ಅಸಿಂಚತಂ । ಸರ್ವದಾ ಪಯಸ್ವಿನೀಮಕುರುತಂ ।** ಶಯುಶಬ್ದಕ್ಕೆ ಶಯುವೆಂಬ ಋಷಿಯು ಎಂದು ಸಾಯಣರೂ **ಶಯವೇ ರಾಜ್ಞೇ**–ಶಯುವೆಂಬ ರಾಜನೆಂದು ಸ್ಕಂದಸ್ವಾಮಿಗಳು ವಿವರಿಸಿರುವರು. ಶಯು ಎಂಬುವನ ಹಸುವು ಬಹಳ ದುರ್ಬಲವಾಗಿ ಕರುವನ್ನು ಹಾಕದೆ ಹಾಲನ್ನು ಕರೆಯದೆ ಬಹಳ ಕೃಶವಾಗಿರುವುದನ್ನು ಅವನ ಪ್ರಾರ್ಥನೆಯಿಂದ ತಿಳಿದ ಅಶ್ವಿನೀದೇವತೆಗಳು ಆ ಹಸುವು ಯಾವಾಗಲೂ ಹಾಲು ಕೊಡುವ ಶಕ್ತಿಯಿಂದ ಕೂಡಿ ಇರುವಂತೆ ಮಾಡಿ ಆ ಶಯುವಿನ ಇಷ್ಟವನ್ನು ನೆರವೇರಿಸಿದರು, ಎಂದು ಇಲ್ಲಿ ವರ್ಣಿಸಿದೆ.

**ವರ್ತಿಕಾಂ ಅಂಹಸಃ ನಿರಮುಂಚತಂ ವೃಕೇಣ ಗ್ರಸ್ತಾಂ ಚಟಕಸದೃಶೀಂ ಶಕುನಿಂ ವೃಕಾಸ್ಯ-ಲಕ್ಷಣಾತ್ ಪಾಪಾತ್ ನಿರಮೋಚಯತಂ** (ಚಟಕ ಗುಬ್ಬಚ್ಚಿಯನ್ನು) ಒಂದು ವಿಧವಾದ ಸಣ್ಣ ಹಕ್ಕಿಯು ತೋಳನ ಬಾಯಿಗೆ ಸಿಕ್ಕಿ ಹಿಂಸೆಯನ್ನು ಅನುಭವಿಸುತ್ತಿರುವುದನ್ನು ನೋಡಿ ಅಶ್ವಿನೀದೇವತೆಗಳು ಅದನ್ನು ಬಿಡಿಸಿ ರಕ್ಷಿಸಿದರು. ಅಥವಾ ಪುನಃ ಪುನಃ ಪ್ರತಿದಿವಸದ ಪ್ರಾರಂಭದಲ್ಲಿಯೂ ಉಷಃಕಾಲವು ಬರುತ್ತಿರುವುದು. ಇದು ಆದಿತ್ಯನಿಂದ ಆಕ್ರಾಂತವಾಗಿರುವುದು. ಇದನ್ನು ಅಶ್ವಿನೀದೇವತೆಗಳು ಬಿಡಿಸಿ ರಕ್ಷಿಸಿದರು–ಎಂದರೆ, ಉಷಶ್ಶಬ್ದವು ಸ್ತ್ರೀಲಿಂಗವಾದ ಕಾರಣ ಒಬ್ಬ ಸ್ತ್ರೀ ಎಂತಲೂ, ಆದಿತ್ಯ ಶಬ್ದವು ಪುಲ್ಲಿಂಗವಾದ ಕಾರಣ ಒಬ್ಬ ಪುರುಷನೆಂತಲೂ ಅರ್ಥವು ತೋರುವುದು. ಇದರಿಂದ ಒಬ್ಬ ಪುರುಷನು ಕಾಮುಕನಾಗಿ ಬಲಾತ್ಕಾರದಿಂದ ಒಬ್ಬ ಸ್ತ್ರೀಯನ್ನು ಆಕ್ರಮಣ ಮಾಡಿದನೆಂದು ಅವಳನ್ನು ಬಿಡಿಸಿ ರಕ್ಷಿಸಿದರೆಂಬುವುದಾಗಿ ಕಾಮುಕ ವೃತ್ತಾಂತವೂ ವರ್ತಿಕಾ ವೃಕ ಶಬ್ದಗಳಿಂದ ಗಮ್ಯವಾಗಿ ಉಷಸ್ ಆದಿತ್ಯರ ವಿಷಯದಲ್ಲಿ ಅಪ್ರಸ್ತುತವಾಗಿ ವರ್ಣಿತವಾಗಿದೆ ಎಂದು ಎರಡು ವ್ಯಾಖ್ಯಾನದಲ್ಲಿಯೂ ವಿವೃತವಾಗಿರುವುದು.

**ವಿಶ್ಪಲಾಯಾಃ ಜಂಘಾಂ ಅಧತ್ತಂ-ಸಂಗ್ರಾಮೇ ಛಿನ್ನಜಂಘಾಯೈ ಸ್ತ್ರಿಯೈ ಆಯಸೀಂ ಜಂಘಾಂ ಪ್ರತ್ಯಧತ್ತಂ ಸಮಯೋಜಯತಂ** ಖೇಲನೆಂಬ ಒಬ್ಬ ರಾಜನು ಯುದ್ಧಮಾಡುತ್ತಿರುವಾಗ ಅವನ ಸಂಬಂಧಿಯಾದ ವಿಶ್ಪಲೆ ಎಂಬುವಳು ಯುದ್ಧರಂಗದಲ್ಲಿ ಕಾಲನ್ನು ಮುರಿದುಕೊಂಡಳು. ಆಗ ಖೇಲರಾಜನ ಪುರೋಹಿತನಾದ ಅಗಸ್ತ್ಯ ಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಈ ಸ್ತುತಿಯನ್ನು ಕೇಳಿ ಅವರು ವಿಶ್ಪಲಾ ಎಂಬ ಸ್ತ್ರೀಗೆ ಮುರಿದಿರುವ ಕಾಲಿಗೆ ಚಿಕಿತ್ಸೆಯನ್ನು ಮಾಡಿ ಕಬ್ಬಿಣದ ಸಲಾಕಿಯನ್ನು ಮೊಣಕಾಲಿಗೆ ಸೇರಿಸಿ ರಕ್ಷಿಸಿದರು ಎಂದು ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶಯವೇ**—ಶೀಙ್ ಸ್ವಪ್ನೇ. ಧಾತು. ಔಣಾದಿಕವಾದ ಉಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ, ಅಯಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ನಾಧಿತಾಯ**—ನಾಧೃ ಯಾಚ್ಞಾಯಾಂ. ಧಾತು. ಇದಕ್ಕೆ ವರ್ತಮಾನಾರ್ಥದಲ್ಲಿ ಕ್ತಪ್ರತ್ಯಯ. **ಆರ್ಧ-ಧಾತುಕಸ್ಯೇಡ್ವಲಾದೇಃ** (ಪಾ. ಸೂ. ೭-೨-೩೫) ಸೂತ್ರದಿಂದ ಇಡಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಅಪಿನ್ವತಮ್**—ಪಿವಿ ಸೇಚನೇ. ಧಾತು. ಭ್ವಾದಿ. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ಧಾತುವಿಗೆ ನುಮಾಗಮ. ಲಙ್ ಮಧ್ಯಮಪುರುಷ ದ್ವಿವಚನಕ್ಕೆ **ತಸ್‌ಥಸ್‌ಥಮಿಪಾಮ್**—ಸೂತ್ರದಿಂದ ತಮಾದೇಶ. ಶಪ್ ವಿಕರಣ. ಅಂಗಕ್ಕೆ ಅಡಾಗಮ. ಇದು ಉದಾತ್ತವಾಗಿರುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಅಮುಂಚತಮ್**—ಮುಚ್‌ಲೃ ಮೋಕ್ಷಣೇ. ಧಾತು. ತುದಾದಿ. ಲಙ್ ಮಧ್ಯಮಪುರುಷ ದ್ವಿವಚನಾಂತ ರೂಪ. **ಶೇಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ಶವಿಕರಣ ಪರವಾದಾಗ ಧಾತುವಿಗೆ ನುಮಾಗಮ. ಹಿಂದಿನಂತೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಯುವಂ ಶ್ವೇತಂ ಪೇದವ ಇಂದ್ರಜೂತಮಹಿಹನಮಶ್ವಿನಾದತ್ತ-
ಮಶ್ವಂ ।
ಜೋಹೂತ್ರಮರ್ಯೋ ಅಭಿಭೂತಿಮುಗ್ರಂ ಸಹಸ್ರಸಾಂ ವೃಷ-
ಣಂ ವೀಡ್ವಂಗಂ ॥ ೯ ॥

॥ ಪದಪಾಠಃ ॥

ಯುವಂ । ಶ್ವೇತಂ । ಪೇದವೇ । ಇಂದ್ರಽಜೂತಂ । ಅಹಿಽಹನಂ ಅಶ್ವಿನಾ ।
ಅದತ್ತಂ । ಅಶ್ವಂ ।
ಜೋಹೂತ್ರಂ । ಅರ್ಯಃ । ಅಭಿಽಭೂತಿಂ । ಉಗ್ರಂ । ಸಹಸ್ರಽಸಾಂ ।
ವೃಷಣಂ । ವೀಳುಽಅಂಗಂ ॥ ೯ ॥

|| ಸಾಯಣಭಾಷ್ಯಂ ||

**ಅಶ್ವಿನಾ ಹೇ ಅಶ್ವಿನೌ ಪೇದವೇ ಪೇದುನಾಮ್ನೇ ರಾಜ್ಞೇ ಯುವಂ ಯುವಾಂ ಶ್ವೇತವರ್ಣಂ ಕಂಚಿದಶ್ವಮದತ್ತಂ । ಪ್ರಾಯಚ್ಛತಂ । ಕೀದೃಶಂ । ಇಂದ್ರಜೂತಮಿಂದ್ರೇಣ ಯುವಾಭ್ಯಾಂ ಗಮಿತಂ । ಪತ್ತಮಿತ್ಯರ್ಥಃ । ಅಹಿಹನಂ ಶತ್ರೂಣಾಂ ಹಂತಾರಂ ಜೋಹೂತ್ರಮತಿಶಯೇನ ಸಂಗ್ರಾಮೇಷ್ವಾಹ್ವಾತಾರಂ ಅರ್ಯೋಽರೇಃ ಶತ್ರೋರಭಿಭೂತಿಮಭಿಭಾವುಕಂ ಉಗ್ರಮುದ್ಗೂರ್ಣಂ । ವೀರ್ಯವಂತಮಿತ್ಯರ್ಥಃ । ಸಹಸ್ರಸಾಂ ಸಹಸ್ರಸಂಖ್ಯಾಕಸ್ಯ ಧನಸ್ಯ ಸಂಭಕ್ತಾರಂ ದಾತಾರಂ ವಾ ವೃಷಣಂ ಸೇಕ್ತಾರಂ । ಯುವಾನಮಿತ್ಯರ್ಥಃ । ವೀಡ್ವಂಗಂ ದೃಢಾಂಗಂ ॥ ಇಂದ್ರಜೂತಂ । ಜು ಇತಿ ಸೌತ್ರೋ ಧಾತುರ್ಗತ್ಯರ್ಥಃ। ಅಸ್ಮಾದಂತರ್ಭಾವಿತಣ್ಯರ್ಥಾತ್ಕರ್ಮಣಿ ನಿಷ್ಠಾ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಜೋಹೂತ್ರಂ । ಹ್ವಯತೇರ್ಯಙ್ಲುಗಂತಾದೌಣಾದಿಕಸ್ತ್ರಪ್ ಪ್ರತ್ಯಯಃ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಅರ್ಯಃ । ಅರಿಶಬ್ದಾತ್ ಷಷ್ಠ್ಯೇಕವಚನೇ ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಸ್ಯ ವಿಕಲ್ಪಿತತ್ವಾದಭಾವೇ ಯಣಾದೇಶಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಅಭಿಭೂತಿಂ । ಅಭಿಭೂಯತೇಽನೇನೇತ್ಯಭಿಭೂತಿಃ । ಕರಣೇ ಕ್ತಿನ್ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಸಹಸ್ರಸಾಂ । ಸನೋತೇಃ ಸನತೇರ್ವಾ ಜನಸನಖನೇತಿ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ ॥**

|| ಪ್ರತಿಪದಾರ್ಥ ||

ಅಶ್ವಿನಾ—ಎಲೈ ಅಶ್ವಿನಿದೇವತೆಗಳೇ । **ಪೇದವೇ**—ಪೇದು ಎಂಬ ರಾಜನಿಗೆ । **ಯುವಂ**—ನೀವಿಬ್ಬರು **ಇಂದ್ರಜೂತಂ**— ಇಂದ್ರನಿಂದ (ನಿಮಗೆ) ದತ್ತವಾದುದೂ । **ಅಹಿಹನಂ**—ಶತ್ರುನಾಶಕವೂ । **ಜೋಹೂತ್ರಂ**— (ಯುದ್ಧದಲ್ಲಿ) ಗಟ್ಟಿಯಾಗಿ ಕೆನೆಯುವುದೂ । **ಅರ್ಯಃ**—ಶತ್ರುವಿಗೆ । **ಅಭಿಭೂತಿಂ**—ಅಪಜಯವನ್ನುಂಟು ಮಾಡುವುದೂ । **ಉಗ್ರಂ**—ವೀರ್ಯಯುಕ್ತವಾದುದೂ । **ಸಹಸ್ರಸಾಂ**—ಬಹುದ್ರವ್ಯ ಸಂಪಾದಕವಾದುದೂ । **ವೃಷಣಂ**—ಯೌವನಯುಕ್ತವಾದೂ । **ವೀಡ್ವಂಗಂ** —ದೃಢಾಂಗವಾದುದೂ । **ಶ್ವೇತಂ**—ಶ್ವೇತವರ್ಣವುಳ್ಳದ್ದೂ ಆದ **ಅಶ್ವಂ**—ಒಂದು ಕುದುರೆಯನ್ನು । **ಅದತ್ತಂ**—ಕೊಟ್ಟಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ನೀವು ಪೇದುವಿಗೆ (ನಿಮಗೆ) ಇಂದ್ರನಿಂದ ದತ್ತವಾದುದೂ, ಶತ್ರುನಾಶಕವೂ (ಯುದ್ಧದಲ್ಲಿ) ಗಟ್ಟಿಯಾಗಿ ಕೆನೆಯುವ (ಸ್ವಭಾವವುಳ್ಳ) ದೂ ಶತ್ರುವಿಗೆ ಅಪಜಯವನ್ನುಂಟುಮಾಡುವುದೂ, ವೀರ್ಯಯುಕ್ತವಾದುದೂ ದ್ರವ್ಯಸಂಪಾದಕವಾದುದೂ, ದೃಢಾಂಗವೂ ಆದ ಶ್ವೇತವರ್ಣದ ಅಶ್ವವನ್ನು ಕೊಟ್ಟಿರಿ.

English Translation.

You gave to Pedu, Aswins, the white and foe-trampling steed which you had received from Indra, loud-neighing (in battle), defying enemies, high-spirited, the acquirer of a thousand treasures, vigorous, and firm in body.

॥ ವಿಶೇಷವಿಷಯಗಳು ॥

**ಇಂದ್ರಜೂತಂ—ಇಂದ್ರೇಣ ಗಮಿತಂ ದತ್ತಂ** । ಇಂದ್ರನಿಂದ ಅಶ್ವಿನೀದೇವತೆಗಳಿಗೆ ದತ್ತವಾದದ್ದು ಎಂದು ಸಾಯಣರ ಅರ್ಥ. **ಇಂದ್ರಮಿವ ಗಂತಾರಂ ಶತ್ರೂನ್ಪ್ರತಿ.** ಇಂದ್ರನ ಹಾಗೆ ಶತ್ರುಗಳ ಸಂಗಡ ಯುದ್ಧಕ್ಕೆ ಹೋಗುವುದು ಎಂದು ಸ್ಕಂದಸ್ವಾಮಿಗಳ ಅರ್ಥವು.

**ಅಹಿಹನಂ—ಶತ್ರೂಣಾಂ ಹಂತಾರಂ** । ಶತ್ರುಗಳನ್ನು ನಾಶಪಡಿಸುವುದು ಎಂದು ಸಾಯಣರೂ, **ಶೌರ್ಯೋಪಲೇಪಾದಾಗಂ ತುರಪಿ ಶತ್ರೋರಹಿನಾಮ್ನೋ ವಾ ಅಸುರಸ್ಯ ಹಂತಾರಂ** ಬಹಳ ಬಲವುಳ್ಳವನು ಎಂಬ ಹೆಮ್ಮೆಯಿಂದ ಮೇಲೆ ಏರಿ ಬರುತ್ತಿರುವ ಶತ್ರುವನ್ನಾಗಲಿ ಅಥವಾ ಅಹಿ ಎಂಬ ಹೆಸರುಳ್ಳ ಅಸುರನನ್ನಾಗಲಿ ನಾಶಪಡಿಸುವುದು ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಹೇಳಿರುವರು.

ಪೇದು ಎಂಬ ರಾಜನು ಅಶ್ವಿನೀದೇವತೆಗಳನ್ನು ಸ್ತುತಿಮಾಡಿದನು. ಅವರು ರಾಜನ ಸ್ತುತಿಯನ್ನು ಕೇಳಿ ಸಂತುಷ್ಟರಾಗಿ ಅವನಿಗೆ ಒಂದು ಕುದುರೆಯನ್ನು ಉಚಿತವಾಗಿ ಅನುಗ್ರಹಮಾಡಿ ಕೊಟ್ಟರು. ಅದು ಬಿಳಿಯ ಬಣ್ಣವುಳ್ಳದ್ದಾಗಿ, ಯುದ್ಧಕಾಲದಲ್ಲಿ ಶತ್ರುಗಳನ್ನು ನಾಶಮಾಡುವ ಸಾಮರ್ಥ್ಯವುಳ್ಳದ್ದಾಗಿತ್ತು. ಇಂದ್ರನು ಅಶ್ವಿನೀದೇವತೆಗಳಿಗೆ ಇದನ್ನು ಹಿಂದೆ ಬಹುಮಾನವಾಗಿ ಕೊಟ್ಟಿದ್ದನು. ಅದು ಪ್ರತಿದಿನವೂ ಸಹಸ್ರ ಧನವನ್ನು ನಿಯತವಾಗಿ ಗೆಲ್ಲುವ ಸ್ವಭಾವವುಳ್ಳದ್ದೆಂದು ಕುದುರೆಯ ಉತ್ತಮತ್ವವು ವ್ಯಕ್ತವಾಗುವಂತೆ ವರ್ಣಿತವಾಗಿದೆ.

**ಸಹಸ್ರಸಾಂ—ಸಹಸ್ರಸಂಖ್ಯಾಕಸ್ಯ ಧನಸ್ಯ ಸಂಭಕ್ತಾರಂ ದಾತಾರಂ ವಾ** । ಈ ಕುದುರೆಯು ಸಾವಿರ ಸಂಖ್ಯೆಯುಳ್ಳ ದ್ರವ್ಯವನ್ನು ಗೆಲ್ಲುವುದು ಅಥವಾ ಕೊಡುವುದು ಎಂದು ಅರ್ಥ.

**ವೀಳ್ವಂಗಂ—ದೃಢಾಂಗಂ** ಶಕ್ತಿಯಿಂದ ಕೂಡಿ ಗಟ್ಟಿಯಾದ ಅವಯವವುಳ್ಳದ್ದು ಎಂದು ಅರ್ಥ. ನಿರುಕ್ತಕಾರರು—

**ವನಸ್ಪತೇ ವೀಳ್ವಂಗೋ ಹಿ ಭೂಯಾ ಅಸ್ಮತ್ಸಖಾ ಪ್ರತರಣಃ ಸುವೀರಃ ।**
**ಗೋಭಿಸ್ಸನ್ನದ್ಧೋ ಅಸಿ ವೀಳಯಸ್ವಾಸ್ಥಾತಾ ತೇ ಜಯತು ಜೇತ್ವಾನಿ ॥**

(ಋ. ಸ. ೬-೪೭-೨೬)

ಎಂದು ಉದಹರಿಸಿ **ವೀಳ್ವಂಗಃ ದೃಢಾಂಗಃ** (ನಿ. ೯-೧೨) ದೃಢಾಂಗವುಳ್ಳದ್ದೆಂಬ ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರಜೂತಮ್**—ಇಂದ್ರೇಣ ಜೂತಂ ಇಂದ್ರ ಜೂತಂ ಜು ಎಂಬುದು ಸೌತ್ರಧಾತು. ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇಲ್ಲಿ ಪ್ರಯೋಜಕವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾಗಿದೆ ಎಂದು ಸ್ವೀಕರಿಸ ಬೇಕು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ತೃತೀಯಾ ತತ್ಪುರುಷ ಸಮಾಸಮಾಡಿರುವುದರಿಂದ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಹಿಹನಮ್**—ಹನ ಹಿಂಸಾಗತ್ಯೋಃ ಧಾತು. ಕರ್ತರಿಯಲ್ಲಿ ಅಚ್ ಪ್ರತ್ಯಯ. ಚಿತ್ತಾದುದರಿಂದ ಧಾತು ಸ್ವರ ಉಳಿಯುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅದತ್ತಮ್**—ಡುದಾಞ್ ದಾನೇ. ಧಾತು. ಜುಹೋತ್ಯಾದಿ. ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಜೋಹೂತ್ರಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಅತಿಶಯಾರ್ಥ ತೋರುವಾಗ **ಧಾತೋರೇಕಾಚೋಹಲಾದೇಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ **ಯಙೋಽಚಿ ಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. ಯಙ್ ನಿಮಿತ್ತವಾಗಿ ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. **ಗುಣೋ ಯಙ್ಲುಕೋಃ** (ಪಾ. ಸೂ. ೭-೪-೮೨) ಸೂತ್ರದಿಂದ ಅಭ್ಯಾಸಕ್ಕೆ ಗುಣ. **ಕುಹೋಶ್ಚುಃ** ಎಂಬುದರಿಂದ ಚುತ್ವ, ಜಸ್ತ್ವ. **ಹಲಃ** (ಪಾ. ಸೂ. ೬-೪-೨) ಎಂಬುದರಿಂದ ಸಂಪ್ರಸಾರಣ ಉಕಾರಕ್ಕೆ ದೀರ್ಘ. ಇದಕ್ಕೆ ಔಣಾದಿಕವಾದ ತ್ರಪ್ ಪ್ರತ್ಯಯ. ಇದು ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅರ್ಯಃ**—ಅರಿ ಶಬ್ದ. ಇದಕ್ಕೆ ಷಷ್ಠೀ ಏಕವಚನ ಪರವಾದಾಗ **ಜಸಾದಿಷು ಛಂದಸಿ ವಾವಚನಮ್ ಪ್ರಾಙ್ಣೌಚಙ್ಯುಪಧಾಯಾಃ** ಎಂಬ ವಚನದಿಂದ **ಘೇರ್ಙಿತಿ** (ಪಾ. ಸೂ. ೭-೩-೧೧೧) ಎಂಬುದಕ್ಕೆ ವಿಕಲ್ಪ ವಿಧಾನ ಮಾಡಿರುವುದರಿಂದ ಇಲ್ಲಿ ಗುಣಬರುವುದಿಲ್ಲ. ಆಗ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪೂರ್ವದಲ್ಲಿ ವ್ಯಂಜನವಿದ್ದು ಅದರ ಪರದಲ್ಲಿ ಅನುದಾತ್ತವಾದ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಭಿಭೂತಿಮ್**—ಭೂ ಸತ್ತಾಯಾಂ ಧಾತು. ಅಭಿಭೂಯತೇ ಅನೇನ ಇತಿ ಅಭಿಭೂತಿಃ, ಕರಣಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ತಾದಿಯಾಗಿ ನಿತ್ತಾದ ಪ್ರತ್ಯಯವೇ ಅಂತ್ಯವಾಗಿ ಇರುವ ಪದವು ಪರವಾದುದರಿಂದ **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ.

**ಸಹಸ್ರಸಾಮ್**—ಷಣು ದಾನೇ, ಅಥವಾ ಷಣ ಸಂಭಕ್ತೌ. ಧಾತು. ಇದಕ್ಕೆ **ಜನಸನಖನ**—(ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. ಧಾತುವು ಅನುನಾಸಿಕಾಂತವಾದುದರಿಂದ **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ಆತ್ವ ಅಂತಾದೇಶವಾಗಿ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವೀಡ್ವಂಗಮ್**—ವೀಳೂನಿ ಅಂಗಾನಿ ಯಸ್ಯ ಸಃ ವೀಡ್ವಂಗಃ, ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಉಕಾರ ಉದಾತ್ತವಾದುದರಿಂದ ಅದರ ಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ತಾ ವಾಂ ನರಾ ಸ್ವವಸೇ ಸುಜಾತಾ ಹವಾಮಹೇ ಅಶ್ವಿನಾ ನಾಧಮಾನಾಃ ।
ಆ ನ ಉಪ ವಸುಮತಾ ರಥೇನ ಗಿರೋ ಜುಷಾಣಾ ಸುವಿತಾಯ ಯಾತಂ ॥ ೧೦ ॥

॥ ಪದಪಾಠಃ ॥

ತಾ । ವಾಂ । ನರಾ । ಸು । ಅವಸೇ । ಸುಽಜಾತಾ । ಹವಾಮಹೇ । ಅಶ್ವಿನಾ । ನಾಧಮಾನಾಃ ।
ಆ । ನಃ । ಉಪ । ವಸುಽಮತಾ । ರಥೇನ । ಗಿರಃ । ಜುಷಾಣಾ । ಸುವಿತಾಯ । ಯಾತಂ ॥ ೧೦ ॥

॥ ಸಾಯಣಭಾಷ್ಯಂ ॥

**ನರಾ ನೇತಾರೌ ಹೇ ಅಶ್ವಿನೌ ಸುಜಾತಾ ಶೋಭನಜನ್ಮಾನೌ ತಾ ವಾಂ ತೌ ಯುವಾಂ ನಾಧಮಾನಾ ಧನಂ ಯಾಚಮಾನಾ ವಯಂ ಸ್ತೋತಾರೋಽವಸೇ ರಕ್ಷಣಾರ್ಥಂ ಸು ಹವಾಮಹೇ । ಶೋಭನಮಾಹ್ವಯಾಮಹೇ । ಗಿರಃ ಸ್ತುತೀರ್ಜುಷಾಣಾ ಸೇವಮಾನೌ ಯುವಾಂ ವಸುಮತಾ ಧನಯುಕ್ತೇನ ರಥೇನ ನೋಽಸ್ಮಾನುಪಾ ಯಾತಂ । ಉಪಾಗಚ್ಛತಂ । ಕಿಮರ್ಥಂ । ಸುವಿತಾಯ ಸುಷ್ಠು ಪ್ರಾಪ್ತವ್ಯಾಯ ಧನಾಯ ಸುಖಾಯ ವಾ ॥ ಸುಜಾತಾ । ಶೋಭನಂ ಜಾತಂ ಜನ್ಮ ಯಯೋಸ್ತೌ ಸುಜಾತೌ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ನಾಧಮಾನಾಃ । ನಾಧೃ ಯಾಚ್ಞಾಯಾಂ। ಜುಷಾಣಾ । ಜುಷೀ ಪ್ರೀತಿಸೇವನಯೋಃ । ತಾಚ್ಛೀಲಿಕಶ್ಚಾನಶ್ । ತುದಾದಿತ್ವಾಚ್ಛಃ । ಪೂರ್ವವದ್ವಿಭಕ್ತೇರಾಕಾರಃ । ಸುವಿತಾಯ । ಸುಪೂರ್ವಾದೇತೇಃ ಕರ್ಮಣಿ ನಿಷ್ಠಾ । ತನ್ವಾದಿತ್ವಾದುವಙ್ । ಸೂಪಮಾನಾತ್ ಕ್ತ ಇತ್ಯುತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಸುಜಾತಾ**—ಶ್ರೇಷ್ಠವಾದ ಜನ್ಮವುಳ್ಳ । **ತಾ**—ಅಂಥ । **ವಾಂ**—ನಿಮ್ಮಿಬ್ಬರನ್ನು । **ನಾಧಮಾನಾಃ**—(ಧನವನ್ನು) ಬೇಡುತ್ತಿರುವ (ನಾವು) । **ಅವಸೇ**—ರಕ್ಷಣೆಗಾಗಿ । **ಸು ಹವಾಮಹೇ**—ಚೆನ್ನಾಗಿ (ಸ್ತುತಿಗಳ ಮೂಲಕ) ಕರೆಯುತ್ತೇವೆ । **ಗಿರಃ**—ಸ್ತುತಿವಾಕ್ಯಗಳನ್ನು । **ಜುಷಾಣಾ**—ಅಂಗೀಕರಿಸುವ (ನೀವಿಬ್ಬರು) । **ವಸುಮತಾ**—ಧನಯುಕ್ತವಾದ । **ರಥೇನ**—ರಥದಿಂದ । **ನಃ**—ನಮಗೆ । **ಸುವಿತಾಯ**—(ನಮಗೆ) ಹೆಚ್ಚಾದ ಧನವನ್ನು ಅಥವಾ ಸುಖವನ್ನು (ಕೊಡುವುದಕ್ಕೋಸ್ಕರ) । **ಉಪ ಆ ಯಾತಂ**—ನಮ್ಮ ಸಮೀಪಕ್ಕೆ ಬನ್ನಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಶ್ರೇಷ್ಠವಾದ ಜನ್ಮವುಳ್ಳ, (ಈವರೆಗೆ ಉಕ್ತವಾದ ಗುಣಯುಕ್ತರಾದ) ನಿಮ್ಮನ್ನು, ಧನಾರ್ಥಿಗಳಾದ ನಾವು ರಕ್ಷಣೆಗಾಗಿ ಕರೆಯುತ್ತೇವೆ. ಸ್ತುತಿವಾಕ್ಯಗಳಿಂದ ತುಷ್ಟರಾಗುವ ನೀವು, ಧನಯುಕ್ತವಾದ ರಥದಲ್ಲಿ ಬಂದು ನಮಗೆ ಸುಖವನ್ನುಂಟುಮಾಡಿ (ಧನವನ್ನು ಅನುಗ್ರಹಿಸಿ).

## English Translation.

Earnestly we call you, leaders (of the sacrifice), such (as you have been described), and who are well born, to our succour, soliciting, Aswins, wealth; contented with our laudations, come to us with your wealthy ear, to bring us felicity.

॥ ವಿಶೇಷವಿಷಯಗಳು ॥

**ಸುಜಾತಾ—ಶೋಭನಂ ಜಾತಂ ಜನ್ಮ ಯಯೋಸ್ತೌ ಸುಜಾತೌ । ಶೋಭನಜನ್ಮಾನೌ ।** ಮಂಗಳವನ್ನು ಇತರರಿಗೆ ಉಂಟುಮಾಡುವುದಕ್ಕಾಗಿಯೇ ಉತ್ಪನ್ನರಾದವರೆಂದು ಅರ್ಥ.

**ಸುವಿತಾಯ**— **ಸುಷ್ಠು ಪ್ರಾಪ್ತವ್ಯಾಯ ಧನಾಯ ಸುಖಾಯ ವಾ ।** ನಾವುಗಳು ಅವಶ್ಯವಾಗಿ ಹೊಂದ ಬೇಕಾಗಿರುವ ಧನಕ್ಕಾಗಲಿ ಅಥವಾ ಸುಖಕ್ಕಾಗಲಿ ಎಂದು ಅರ್ಥ. ಸ್ಕಂದಸ್ವಾಮಿಗಳು—**ಸುಗತಾಯ ಯಾಗ ಕರ್ಮಣೇ ಪ್ರಜಾಯೈ ವಾ ।** ಸುವಿತಾಯ ಎಂಬ ಪದಕ್ಕೆ. ಉತ್ತಮವಾದ ಗಮನಕ್ಕಾಗಿ, ಅಥವಾ ಯಾಗಕರ್ಮದಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ, ನಮಗೆ ಉತ್ತಮವಾದ ಸಂತಾನವನ್ನು ಅನುಗ್ರಹಿಸುವುದಕ್ಕಾಗಿ, ಎಂದು ಅರ್ಥ ವನ್ನು ಮಾಡಿರುವರು.

ಯಜ್ಞಮಾಡುವ ಯಜಮಾನರಾದ ನಾವು ಶುಭಕರವಾದ ಜನ್ಮವುಳ್ಳ ಅಶ್ವಿನೀದೇವತೆಗಳನ್ನು ಧನಪ್ರಾಪ್ತಿಗಾಗಿ ಸ್ತುತಿಮಾಡಿ ಬೇಡುತ್ತೇವೆ. ನಮ್ಮನ್ನು ರಕ್ಷಿಸುವುದಕ್ಕಾಗಿ ನಮ್ಮ ಸ್ತುತಿವಾಕ್ಯಗಳನ್ನು, ಕೇಳಿ ಅಶ್ವಿನೀದೇವತೆಗಳು ನಮಗೆ ಕೊಡುವ ಧನವನ್ನು ತಮ್ಮ ರಥದಲ್ಲಿ ತುಂಬಿಕೊಂಡು ನಮ್ಮ ಯಜ್ಞಕ್ಕೆ ಬಂದು ನಮಗೆ ಉತ್ತಮವಾದ ಗತಿ, ಧನ ಅಥವಾ ಸಂತತಿ ಇವುಗಳನ್ನು ನಮಗೆ ಕೊಡಲಿ ಎಂದು ಪ್ರಾರ್ಥನೆಯು ವರ್ಣಿತವಾಗಿರುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ತಾ**—ತದ್ ಶಬ್ದ. ಇದಕ್ಕೆ ದ್ವಿವಚನ ಔ ಪರವಾದಾಗ **ತ್ಯದಾದೀನಾಮಃ** (ಪಾ. ಸೂ. ೭–೨–೧೦೨) ಎಂಬುದರಿಂದ ದಕಾರಕ್ಕೆ ಅಕಾರಾದೇಶ. **ಅತೋಗುಣೇ** (ಪಾ ಸೂ. ೬–೧–೯೭) ಸೂತ್ರದಿಂದ ಪರರೂಪ. **ಸುಪಾಂ ಸುಲುಕ್**—(ಪಾ. ಸೂ. ೩–೧–೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಪೂರ್ವದೊಡನೆ ಏಕಾದೇಶ ಬಂದುದರಿಂದ ಉದಾತ್ತವಾಗುತ್ತದೆ.

**ಅವಸೇ**—ಅವ ರಕ್ಷಣೇ. ಧಾತು. **ಸರ್ವಧಾತುಭ್ಯ ಅಸುನ್** (ಉ. ಸೂ. ४–೬೨೮) ಎಂಬುದರಿಂದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸುಜಾತಾ**—ಶೋಭಂ ಜಾತಂ ಜನ್ಮ ಯಯೋಃಸ್ತೌ ಸುಜಾತೌ. ಜನೀ ಪ್ರಾದುರ್ಭಾವೇ. ಧಾತು. ಭಾವಾರ್ಥದಲ್ಲಿ ಕ್ತಪ್ರತ್ಯಯ. **ಜನಸನಖನಾಂ ಸನ್‌ಝಲೋಃ** (ಪಾ. ಸೂ. ೬–೪–೪೨) ಎಂಬುದರಿಂದ ಧಾತುವಿಗೆ ಆತ್ವ. ಜಾತ ಎಂದು ರೂಪವಾಗುತ್ತದೆ. ಇದಕ್ಕೆ ದ್ವಿವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೩–೧–೩೯) ಎಂಬುದರಿಂದ ಆಕಾರಾದೇಶ. ಸಮಾಸವಾದಾಗ **ನಞ್‌ಸುಭ್ಯಾಮ್** (ಪಾ. ಸೂ. ೬–೨–೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು, ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತ ಆತ್ಮನೇ ಪದಾನಾಮ್**—ಸೂತ್ರದಿಂದ ಅದರ ಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದ ರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಶಪ್ ನಿಮಿತ್ತವಾಗಿ ಅದಕ್ಕೆ ಗುಣ. ಅವಾದೇಶ. **ಅತೋ ದೀರ್ಘೋ ಯಞಿ** (ಪಾ. ಸೂ. ೭–೩–೧೦೧) ಎಂಬುದರಿಂದ ಅದಂತಾಂಗಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬–೧–೧೮೬) ಎಂಬುದ ರಿಂದ ಲಸಾರ್ವಧಾತುಕವು (ಮಹೇ) ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

**ನಾಥಮಾನಾಃ—**ನಾಧೃ ಯಾಚ್ಞಾಯಾಮ್. ಧಾತು. ಇದಕ್ಕೆ ಲಡರ್ಥದಲ್ಲಿ ಶಾನಚ್. ಪ್ರತ್ಯಯ ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಹಿಂದಿನಂತೆ ಅದುಪ ದೇಶದ ಪರದಲ್ಲಿ ಲಸಾರ್ವಧಾತುಕ (ಆನ) ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನಾಂತರೂಪ.

**ವಸುಮತಾ—**ವಸು ಅಸ್ಮಿನ್ ಅಸ್ತಿ ಇತಿ ವಸುಮಾನ್ ತೇನ ವಸುಮತಾ. **ತದಸ್ಯಾಸ್ತಿ—**(ಪಾ. ಸೂ. ೫-೨-೯೪) ಸೂತ್ರದಿಂದ ಮತುಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಗಿರಃ—**ಗೄ ನಿಗರಣೇ. ಧಾತು. ಇದಕ್ಕೆ ಕ್ವಿಪ್ ಪ್ರತ್ಯಯ. **ಋೂತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಇತ್ವ. ರಪರವಾಗಿ ಬರುತ್ತದೆ. ಗಿರ್ ಶಬ್ದವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಜುಷಾಣಾ—**ಜುಷೀ ಪ್ರೀತಿಸೇವನಯೋಃ ಧಾತು. ಇದಕ್ಕೆ **ತಾಚ್ಛೀಲ್ಯ ವಯೋವಚನೇಷು ಚಾನಶ್** (ಪಾ. ಸೂ. ೩-೨-೧೨೯) ಎಂಬುದರಿಂದ ತಚ್ಛೀಲಾರ್ಥ ತೋರುವಾಗ ಚಾನಶ್ ಪ್ರತ್ಯಯ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. ಲಸ್ಥಾನಿಕವಾಗದಿರುವುದರಿಂದ ಅನುದಾತ್ತಸ್ವರ ಬರುವುದಿಲ್ಲ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧॥೧೬೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್—** ಸೂತ್ರದಿಂದ ಔ ವಿಭಕ್ತಿಗೆ ಆಕಾರಾದೇಶ.

**ಸುವಿತಾಯ—**ಸು ಉಪಸರ್ಗ. ಇಣ್ ಗತೌ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ಇತ** ಎಂದು ರೂಪವಾಗುತ್ತದೆ. ಸು+ಇತ ಎಂದಿರುವಾಗ **ತನ್ವಾದೀನಾಮುಪಸಂಖ್ಯಾನಮ್** ಎಂಬ ವಚನದಿಂದ ಇದು ತನ್ವಾದಿಯಲ್ಲಿ ಸೇರಿರುವುದರಿಂದ ಉವಙಾದೇಶ ಬರುತ್ತದೆ. **ಸೂಪಮಾನಾತ್ ಕ್ತಃ** (ಪಾ. ಸೂ. ೬-೨-೧೪೫) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೦ ॥



॥ ಸಂಹಿತಾಪಾಠಃ ॥

ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।

ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ
ವ್ಯುಷ್ಟೌ ॥ ೧೧ ॥

॥ ಪದಪಾಠಃ ॥

ಆ । ಶ್ಯೇನಸ್ಯ । ಜವಸಾ । ನೂತನೇನ । ಅಸ್ಮೇ ಇತಿ । ಯಾತಂ । ನಾಸತ್ಯಾ ।
ಸಽಜೋಷಾಃ ।

ಹವೇ । ಹಿ । ವಾಂ । ಅಶ್ವಿನಾ । ರಾತಽಹವ್ಯಃ । ಶಶ್ವತ್ಽತಮಾಯಾಃ । ಉಷಸಃ ।
ವಿಽಉಷ್ಟೌ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾವಶ್ವಿನೌ ಸಜೋಷಾಃ ಸಜೋಷಸೌ ಸಮಾನಪ್ರೀತಿಯುಕ್ತೌ ಶ್ಯೇನಸ್ಯ ಶಂಸನೀಯಂ ಗಚ್ಛತೋಽಶ್ವಸ್ಯ ನೂತನೇನ ನವತರೇಣ ಪ್ರತ್ಯಗ್ರೇಣ ಜವಸಾ ವೇಗೇನ ಸಹಿತೌ ಯುವಾಮಸ್ಮೇ ಅಸ್ಮಾನಾ ಯಾತಂ । ಆಗಚ್ಛತಂ । ಅಶ್ವಿನಾ ಹೇ ಅಶ್ವಿನೌ ರಾತಹವ್ಯೋ ವಾಂ ಯುವಾಭ್ಯಾಂ ದಾತವ್ಯೇನ ಹವಿಷಾ ಯುಕ್ತಃ ಸನ್ ಶಶ್ವತ್ತಮಾಯಾಃ ಕಾಲಾತ್ಮಕತಯಾ ನಿತ್ಯಾಯಾ ಉಷಸೋ ವ್ಯುಷ್ಟೌ ವಿವಾಸನಸಮಯೇ ವಾಂ ಯುವಾಂ ಹವೇ । ಆಹ್ವಯಾಮಿ । ಹಿರ್ಹೇತೌ । ಹಿ ಯಸ್ಮಾದೇವಂ ತಸ್ಮಾದಾ ಯಾತಮಿತ್ಯರ್ಥಃ ॥ ಅಸ್ಮೇ । ಸುಪಾಂ ಸುಲುಗಿತಿ ಶಸಃ ಶೇಆದೇಶಃ । ಸಜೋಷಾಃ । ತೇನೈವ ದ್ವಿವಚನಸ್ಯ ಸುಆದೇಶಃ । ಹವೇ । ಹ್ವೇಞೋ ಲಡುತ್ತಮೈಕವಚನೇ ಬಹುಲಂ ಛಂದಸೀತಿ ಸಂಪ್ರಸಾರಣಂ । ಶಬ್ಗುಣಾವಾದೇಶಾಃ । ಶಶ್ವತ್ತಮಾಯಾಃ । ಉತ್ತಮಶಶ್ವತ್ತಮೌ ಸರ್ವತ್ರ । ಫಾ. ೬-೧-೧೬೦ । ಇತ್ಯುಂಛಾದಿಷು ಪಾಠಾದಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಹೇ) **ನಾಸತ್ಯಾ**—ಎಲೈ ನಾಸತ್ಯರೇ । **ಸಜೋಷಾಃ**—ಸಮಾನಪ್ರೀತಿಯುಳ್ಳವರೂ । **ಶ್ಯೇನಸ್ಯ**—ಶ್ಯೇನಪಕ್ಷಿಯಂತೆ ಗಮನವುಳ್ಳ ಅಶ್ವದ । **ನೂತನೇನ**—ನೂತನವಾದ । **ಜವಸಾ**—ವೇಗಯುಕ್ತರೂ ಆದ ನೀವು । **ಅಸ್ಮೇ**—ನಮ್ಮನ್ನು । **ಆ ಯಾತಂ**—ಉದ್ದೇಶಿಸಿ ಬನ್ನಿ । **ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳಿಗೆಗಳೇ ।

**ವಾಂ**— ನಿಮ್ಮಿಬ್ಬರಿಗೆ । **ರಾತಹವ್ಯಃ**—ಕೊಡಬೇಕಾದ ಹವಿಸ್ಸಿನಿಂದ ಯುಕ್ತನಾಗಿ । **ಶಶ್ವತ್ತಮಾಯಾ**—(ಕಾಲಾತ್ಮಕ ಳಾದುದರಿಂದ) ನಿತ್ಯಳಾದ । **ಉಷಸಃ**—ಉಷಸ್ಸಿನ । **ವ್ಯುಷ್ಟೌ**—ಉದಯಕಾಲದಲ್ಲಿ । **ಹವೇ**—(ನಿಮ್ಮನ್ನು) (ಸ್ತುತಿಸಿ) ಕರೆಯುತ್ತೇನೆ.

॥ ಭಾವಾರ್ಥ ॥

ಎಲೈ ನಾಸತ್ಯರೇ, ಶ್ಯೇನಪಕ್ಷಿಯಂತೆ ಉತ್ತಮ ಗತಿಯುಳ್ಳ ಮತ್ತು ನೂತನವಾದ ವೇಗವುಳ್ಳ ಅಶ್ವಗಳಿಂದ ಯುಕ್ತರಾಗಿ (ನೀವಿಬ್ಬರು) ನಮ್ಮನ್ನು ಉದ್ದೇಶಿಸಿ ಬನ್ನಿ ; ಎಲೈ ಅಶ್ವಿನೀದೇವತೆಗಳೇ, ನಿಮಗೆ ಕೊಡಬೇಕಾದ ಹವಿಸ್ಸಿನಿಂದ ಯುಕ್ತನಾಗಿ, ನಿತ್ಯವಾದ ಉಷಸ್ಸಿನ ಉದಯಕಾಲದಲ್ಲಿ (ನಿಮ್ಮನ್ನು) ಸ್ತುತಿಸುತ್ತೇನೆ.

## English Translation.

Come to us, auspicious Nasatyas, with the fresh velocity of a hawk: bearing an oblation, Invoke you, Aswins, at the rising of the ever constant dawn.

॥ ವಿಶೇಷವಿಷಯಗಳು ॥

**ಸಜೋಷಾಃ—ಸಮಾನಪ್ರೀತಿಯುಕ್ತೌ**—ಒಂದೇ ಸಮನಾದ ಪ್ರೀತಿಯುಳ್ಳವರು ಎಂದು ಅರ್ಥ. ಈ ಶಬ್ದವು ಬೇರೆಯ ಅರ್ಥದಲ್ಲಿಯೂ ಪ್ರಯುಕ್ತವಾಗಿದೆ.

**ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ ।**

(ಋ. ಸಂ. ೫-೫೭-೧)

ಎಂಬ ಋಕ್ಕಿನಲ್ಲಿ **ಸಜೋಷಸಃ ಪರಮೈಶ್ವರ್ಯೇಣ ನಿತ್ಯಮಾಸೇವಿತಾಃ । ಪೃಥಕ್ತ್ವಪಕ್ಷೇ ಸಹಪ್ರೀಯಮಾಣಾಃ ।** ಪರಮೈಶ್ವರ್ಯದಿಂದ ದಿನಂಪ್ರತಿಯಲ್ಲಿಯೂ ಸೇವಿಸಲ್ಪಡುವವರು ಅಥವಾ ಇಂದ್ರನೊಡನೆ ಸಂತೋಷದಿಂದ ಇರುವವರು ಎಂದು ಅರ್ಥವನ್ನು ನಿರುಕ್ತಕಾರರು (ನಿ. ೧೧-೧೬) ವಿವರಿಸಿ ಇರುವರು.

**ಆಜುಹ್ವಾನ ಈಡ್ಯೋ ವಂದ್ಯಶ್ಚಾಯಾಹ್ಯಗ್ನೇ ವಸುಭಿಸ್ಸಜೋಷಾಃ ।**

(ಋ. ಸಂ. ೧೦-೧೧೦-೩)

ಈ ಋಕ್ಕಿನಲ್ಲಿ **ವಸುಭಿಸ್ಸಜೋಷಾಃ ಸಹ ಜೋಷಣಃ ಸಮಾನಪ್ರೀತಿಃ** ಸಮನಾದ ಪ್ರೀತಿಯುಳ್ಳವರು ಎಂದು ನಿರುಕ್ತಕಾರರ (ನಿ. ೮-೮) ವಿವರಣೆ.

ಪ್ರಶಂಸನೀಯವಾದ ವೇಗದಿಂದ ಕೂಡಿರುವ ರಥದಿಂದ ನಮ್ಮ ಯಜ್ಞಕ್ಕಾಗಿ ಅಶ್ವಿನೀದೇವತೆಗಳು ಸಮನಾದ ಪ್ರೀತಿಯಿಂದ ಬರಲಿ ಎಂಬುದಾಗಿಯೂ, ಉಷಃಕಾಲವು ಕಳೆದ ನಂತರ ಹವಿರ್ಭಾಗದ ಸ್ವೀಕಾರಕ್ಕಾಗಿ ನಮ್ಮ ಯಜ್ಞದಲ್ಲಿ ಅವರನ್ನು ಆಹ್ವಾನ ಮಾಡುತ್ತೇನೆ ಎಂದೂ ಇಲ್ಲಿ ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜವಸಾ**—ಜು ಎಂಬುದು ಸೌತ್ರ ಧಾತು. ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಧಾತುವಿನ ಉಕಾರಕ್ಕೆ ಗುಣ, ಅವಾದೇಶ.

**ನೂತನೇನ—ನವಸ್ಯ ನೂ ಆದೇಶಃ ತ್ನಪ್ ತನಪ್ ಖಾಶ್ಚ ಪ್ರತ್ಯಯಾ ವಕ್ತವ್ಯಾಃ**—ಎಂಬ ವಚನದಿಂದ ನವ ಎಂಬುದಕ್ಕೆ ನೂ ಆದೇಶವೂ, ತನಪ್ ಪ್ರತ್ಯಯವೂ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಅಸ್ಮೇ**—ಅಸ್ಮದ್ ಶಬ್ದ. ಇದಕ್ಕೆ ಶಸ್ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಶೇ ಆದೇಶ. **ಶೇಷೇ ಲೋಪಃ** ಎಂಬುದರಿಂದ ಮಪರ್ಯಂತದ ಪರಕ್ಕೆ ಲೋಪ. **ಸಾವೇಕಾಚಃ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಜೋಷಾಃ**—ಜುಷೀ ಪ್ರೀತಿಸೇವನಯೋಃ ಧಾತು. ಸರ್ವಧಾತು ನಿಬಂಧನವಾದ ಅಸುನ್ ಪ್ರತ್ಯಯ. ಸಮಾನಂ ಜೋಷಃ ಯಯೋಸ್ತೌ ಸಜೋಷಸೌ. **ಸುಪಾಂ ಸುಲುಕ್**—ಎಂಬುದರಿಂದ ದ್ವಿವಚನಕ್ಕೆ ಸು ಆದೇಶ. ಅದಕ್ಕೆ ಪದಾಂತದಲ್ಲಿ ರುತ್ವ, ವಿಸರ್ಗ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ಹವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಇದಕ್ಕೆ ಲಡುತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಟಿತ ಆತ್ಮನೇ**—ಎಂಬುದರಿಂದ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಉಕಾರಕ್ಕೆ ಗುಣ ಅವಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ರಾತಹವ್ಯಃ**—ರಾ ಆದಾನೇ. ಧಾತು. ಕ್ತಪ್ರತ್ಯಯ. ಹೂಯತೇ ಇತಿ ಹವ್ಯಮ್. ಹು ದಾನಾದನಯೋಃ ಧಾತು. **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ಇದನ್ನು ನಿಮಿತ್ತೀಕರಿಸಿ ಧಾತುವಿನ ಉಕಾರಕ್ಕೆ ಗುಣ ಅವಾದೇಶ. ರಾತಂ ಹವ್ಯಂ ಯಸ್ಮಿನ್ ಸಃ ರಾತಹವ್ಯಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಶಶ್ವತ್ತಮಾಯಾಃ—ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ. ಸ್ತ್ರೀತ್ವದಲ್ಲಿ ಅದಂತ ನಿಬಂಧನವಾಗಿ ಟಾಪ್. **ಉತ್ತಮ ಶಶ್ವತ್ತಮೌ ಸರ್ವತ್ರ** (ಪಾ. ಸೂ. ೬-೧-೧೬೦.) ಎಂದು ಉಞ್ಛಾದಿಯಲ್ಲಿ ಪಾಠಮಾಡಿರುವುದರಿಂದ ತಮಪ್ ಪಿತ್ತಾದರೂ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ. ॥ ೧೧ ॥

ನೂರಹದಿನೆಂಟನೆಯ ಸೂಕ್ತ ಮುಗಿದುದು.



# ನೂರಹತ್ತೊಂಭತ್ತನೆಯ ಸೂಕ್ತವು

**ಆ ವಾಂ ರಥಮಿತಿ ದಶರ್ಚಂ ಚತುರ್ಥಂ ಸೂಕ್ತಂ ದೈರ್ಘತಮಸಸ್ಯ ಕಕ್ಷೀವತ ಆರ್ಷಂ ಜಾಗತಮಾಶ್ವಿನಂ । ತಥಾ ಚಾನುಕ್ರಾಂತಂ । ಆ ವಾಂ ರಥಂ ದಶ ಜಾಗತಮಿತಿ ॥ ಪ್ರಾತರನುವಾಕಾಶ್ವಿನೇ ಕ್ರತೌ ಜಾಗತೇ ಛಂದಸೀದಂ ಸೂಕ್ತಮಾಶ್ವಿನಶಸ್ತ್ರೇ ಚ । ತಥಾ ಚ ಸೂತ್ರಿತಂ । ಆ ವಾಂ ರಥಮಭೂದಿದಂ ಯೋ ವಾಂ ಪರಿಜ್ಮೇತಿ ತ್ರೀಣಿ । ಆ. ೪–೧೫ । ಇತಿ ॥**

ಅನುವಾದವು—**ಆ ವಾಂ ರಥಂ ಪುರುಮಾಯಂ** ಎಂಬ ಈ ಸೂಕ್ತವು ಹದಿನೇಳನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ದೀರ್ಘತಮಸ್ಸೆಂಬ ಋಷಿಯ ಪುತ್ರನಾದ ಕಕ್ಷೀವಾನ್ ಎಂಬುವನು ಋಷಿಯು. ಅಶ್ವಿನೀದೇವತೆಗಳು ದೇವತೆಯು. ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಆ ವಾಂ ರಥಂ ದಶ ಜಾಗತಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನ ಕ್ರತು ಸಂಬಂಧವಾದ ಜಗತೀಛಂದಸ್ಸಿನ ಋಕ್ಕುಗಳ ಪಠನಕ್ಕಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಆ ವಾಂ ರಥಮಭೂದಿದಂ ಯೋ ವಾಂ ಪರಿಜ್ಮೇತಿ ತ್ರೀಣಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಅ. ೪–೧೫)

## ಸೂಕ್ತ—೧೧೯

॥ ಮಂಡಲ—೧ ॥ ಅನುವಾಕ—೧೭ ॥ ಸೂಕ್ತ—೧೧೯ ॥
॥ ಅಷ್ಟಕ—೧ ॥ ಅಧ್ಯಾಯ ೮ ॥ ವರ್ಗ—೨೦, ೨೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ॥
॥ ದೇವತಾ—ಅಶ್ವಿನೌ ॥
॥ ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಆ ವಾಂ ರಥಂ ಪುರುಮಾಯಂ ಮನೋಜುವಂ ಜೀರಾಶ್ವಂ
ಯಜ್ಞಿಯಂ ಜೀವಸೇ ಹುವೇ ।
ಸಹಸ್ರಕೇತುಂ ವನಿನಂ ಶತದ್ವಸುಂ ಶ್ರುಷ್ಟೀವಾನಂ ವರಿವೋಧಾ-
ಮಭಿ ಪ್ರಯಃ ॥ ೧ ॥

॥ ಪದಪಾಠಃ ॥

ಆ । ವಾಂ । ರಥಂ । ಪುರುಽಮಾಯಂ । ಮನಃಽಜುವಂ । ಜೀರಽಅಶ್ವಂ । ಯಜ್ಞಿ-
ಯಂ । ಜೀವಸೇ । ಹುವೇ ।

ಸಹಸ್ರಽಕೇತುಂ । ವನಿನಂ । ಶತತ್ಽವಸುಂ । ಶ್ರುಷ್ಟೀಽವಾನಂ । ವರಿವಃಽಧಾಂ ।
ಅಭಿ । ಪ್ರಯಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ರಥಂ ಜೀವಸೇ ಜೀವನಾರ್ಥಂ ಪ್ರಯೋ ಹವಿರ್ಲಕ್ಷಣಮನ್ನ-ಮಭಿಲಕ್ಷ್ಯ ಹುವೇ । ಆಹ್ವಯಾಮಿ । ಕೀದೃಶಂ । ಪುರುಮಾಯಂ ಬಹುವಿಧಾಶ್ಚರ್ಯಂ ಬಹುವಿಧ-ಕರ್ಮಾಣಂ ವಾ ಮನೋಜುವಂ ಮನ ಇವ ಶೀಘ್ರಂ ಗಚ್ಛಂತಂ ಜೀರಾಶ್ವಂ ಜವವದಶ್ವೋಪೇತಂ ಯಜ್ಞಿಯಂ ಯಜ್ಞೇಷ್ವಾಹ್ವಾತುಮರ್ಹಂ ಸಹಸ್ರಕೇತುಂ ಅನೇಕಧ್ವಜಂ ಸಹಸ್ರಸ್ಯ ಧನಸ್ಯ ಕೇತಯಿ-ತಾರಂ ಜ್ಞಾಪಯಿತಾರಂ ವಾ ವನಿನಂ । ವನಮಿತ್ಯುದಕನಾಮ । ತದ್ವಂತಂ ಶತದ್ವಸುಂ ಶತಸಂಖ್ಯಾಕೈರ್ಧನೈರ್ಯುಕ್ತಂ ಶ್ರುಷ್ಟೀವಾನಂ। ಶ್ರುಷ್ಟೀತಿ ಕ್ಷಿಪ್ರನಾಮ । ಕ್ಷಿಪ್ರಂ ಸಂಭಜಮಾನಂ । ಯದ್ವಾ। ಸುಖವಂತಂ। ವರಿವೋಧಾಂ । ವರಿವ ಇತಿ ಧನನಾಮ । ವರಿವಸೋ ಧನಸ್ಯ ದಾತಾರಂ ॥ ಪುರುಮಾಯಂ । ಬಹುವ್ರೀಹೌ ತ್ರಿಚಕ್ರಾದಿತ್ವಾದಂತೋದಾತ್ತತ್ವಂ । ಯದ್ವಾ। ತತ್ಪೂರ್ವಾದರ್ಶಆದಿತ್ವಾದಚ್ । ಜೀರಾಶ್ವಂ । ಜು ಇತಿ ಗತ್ಯರ್ಥಃ ಸೌತ್ರೋ ಧಾತುಃ। ಜೋರೀ ಚ । ಉ. ೨-೨೩ । ಇತಿ ರಗೀಕಾರಾಂತಾದೇಶಶ್ಚ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯಜ್ಞಿಯಂ। ಯಜ್ಞರ್ತ್ವಿಗ್ಭ್ಯಾಂ ಘಖಞಾವಿತ್ಯರ್ಹಾರ್ಥೇ ಘಪ್ರತ್ಯಯಃ। ಹುವೇ । ಹ್ವೇಞೋ ಲಟಿ ಬಹುಲಂ ಛಂದಸೀತಿ ಸಂಪ್ರಸಾರಣಂ । ಲುಗಿತ್ಯನುವೃತ್ತೌ ಬಹುಲಂ ಛಂದಸೀತಿ ಶಪೋ ಲುಕ್ । ಉವಙ್ । ಶತದ್ವಸುಂ । ಶತವಸುಂ । ಛಾಂದಸಸ್ತಕಾರೋಪಜನಃ ॥

॥ ಪ್ರತಿಪದಾರ್ಥ ॥

(ಹೇ) ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । **ಪುರುಮಾಯಂ**—ಬಹುವಿಧಾಶ್ಚರ್ಯಕರವೂ (ಬಹುವಿಧ ಕರ್ಮಯುಕ್ತವೂ) । **ಮನೋಜುವಂ**—ಮನೋವೇಗವುಳ್ಳದ್ದೂ । **ಜೀರಾಶ್ವಂ**—ವೇಗಗಾಮಿಗಳಾದ ಅಶ್ವಯುಕ್ತವೂ । **ಯಜ್ಞಿಯಂ**—ಯಜ್ಞಗಳಲ್ಲಿ ಆಹ್ವಾನಾರ್ಹವೂ । **ಸಹಸ್ರಕೇತುಂ**—ಅನೇಕ ಧ್ವಜವುಳ್ಳದ್ದೂ, (ಬಹುಧನಜ್ಞಾಪಕವೂ) । **ವನಿನಂ**—ಉದಕಯುಕ್ತವೂ । **ಶತದ್ವಸುಂ**—ಅಪಾರ ದ್ರವ್ಯವುಳ್ಳದ್ದೂ । **ಶ್ರುಷ್ಟೀವಾನಂ**—ಸುಖಕರವೂ । **ವರಿವೋಧಾಂ**—ದ್ರವ್ಯದಾಯಕವೂ (ಆದ) । **ವಾಂ**—ನಿಮ್ಮಿಬ್ಬರ । **ರಥಂ**—

ರಥವನ್ನು । **ಜೀವಸೇ**—ಜೀವನಾರ್ಥವಾಗಿ । **ಪ್ರಯಃ**—(ಹವಿರ್ಲಕ್ಷಣವಾದ) ಅನ್ನವನ್ನು ಅರ್ಪಿಸುವುದಕ್ಕಾಗಿ । **ಆ ಹುವೇ**—ಆಹ್ವಾನಿಸುತ್ತೇನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಆಶ್ಚರ್ಯಕರವೂ, ಮನೋವೇಗವುಳ್ಳದ್ದೂ, ವೇಗಗಾಮಿಗಳಾದ ಅಶ್ವಯುಕ್ತವೂ, ಯಜ್ಞಗಳಲ್ಲಿ ಪೂಜಾರ್ಹವೂ, ಅನೇಕ ಧ್ವಜಯುಕ್ತವೂ, ಉದಕವನ್ನು (ಮಳೆಯನ್ನು) ತರುವುದೂ, ಅಪಾರ ದ್ರವ್ಯಯುಕ್ತವೂ, ಸುಖಾವಹವೂ, ದ್ರವ್ಯದಾಯಕವೂ ಆದ ನಿಮ್ಮ ರಥವನ್ನು ಹವಿರ್ಲಕ್ಷಣವಾದ ಅನ್ನವನ್ನು ಸ್ವೀಕರಿಸುವುದಕ್ಕೋಸ್ಕರ ಮತ್ತು (ನಮ್ಮ) ಜೀವನಾರ್ಥವಾಗಿ ಆಹ್ವಾನಿಸುತ್ತೇನೆ.

## English Translation.

Desiring food, I invoke, (Aswins), to support my life, your wonderful car, swift as thought, drawn by fleet horses, worthy of veneration, many-bannered, bringing rain, containing wealth, abundantly yielding delight, and conferring riches.

॥ ವಿಶೇಷವಿಷಯಗಳು ॥

**ಪುರುಮಾಯಂ**—ಎಂಬ ಪದಕ್ಕೆ ಸಾಯಣರು ಬಹಳ ಆಶ್ಚರ್ಯವುಳ್ಳದ್ದಾಗಿರುವುದು ಅಥವಾ ಬಹಳ ಕೆಲಸಗಳನ್ನು ಮಾಡಲು ಅನುಕೂಲವಾಗಿರುವುದು ಎಂದೂ, ಸ್ಕಂದಸ್ವಾಮಿಗಳು **ಬಹುಪ್ರಜ್ಞಂ**—ಅತಿಶಯವಾದ ಜ್ಞಾನವನ್ನು ಉಂಟುಮಾಡುವುದು ಎಂದೂ ಅರ್ಥಮಾಡಿರುವರು.

**ಜೀರಾಶ್ವಂ**—ಜೀರಶಬ್ದವು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ವೇಗವೆಂದು ಅರ್ಥ. ವೇಗವಾಗಿ ಸಂಚರಿಸುವ ಕುದುರೆಗಳುಳ್ಳದ್ದೆಂದು ಅರ್ಥವು.

**ವನಿನಂ— ಉದಕವನ್ತಂ** ವನಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುವುದರಿಂದ ವನಿನಂ ಎಂದರೆ ನೀರು ಉಳ್ಳದ್ದೆಂದು ಅರ್ಥ.

**ಶ್ರುಷ್ಟೀವಾನಂ—ಶ್ರುಷ್ಟೀತಿ ಕ್ಷಿಪ್ರನಾಮ** (ನಿ. ೬-೧೩) ಎಂದು ಯಾಸ್ಕರು ಅರ್ಥಮಾಡಿರುವುದರಿಂದಲೂ, **ಶ್ರುಷ್ಟೀವರೀಃ** ಎಂಬಲ್ಲಿ **ಸುಖವತ್ಯಃ** ಎಂದು (ನಿ. ೬-೨೨) ಅರ್ಥಮಾಡಿರುವುದರಿಂದಲೂ ಅಶ್ವಿನೀದೇವತೆಗಳ ರಥವು ವೇಗವಾಗಿ ಬಂದು ಸೇರುವುದು ಅಥವಾ ಸುಖವನ್ನು ಉಂಟುಮಾಡುವುದು ಎಂದಭಿಪ್ರಾಯವು.

**ವರಿವೋಧಾಂ—ವರಿವಃ** ಎಂಬ ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಧನವುಳ್ಳದ್ದು ಅಥವಾ ಧನವನ್ನು ಕೊಡತಕ್ಕದ್ದು ಎಂದು ಅರ್ಥವು.

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಆಹ್ವಾನವು ಪ್ರತಿಪಾದಿತವಾಗಿದೆ ಮತ್ತು ಅವರ ರಥದ ಸ್ವರೂಪ ವರ್ಣನೆಯು ಉಕ್ತವಾಗಿರುತ್ತದೆ. ಅಶ್ವಿನೀದೇವತೆಗಳ ರಥವು ಎಲ್ಲರಿಗೂ ಬಹಳ ಆಶ್ಚರ್ಯವನ್ನು ಉಂಟುಮಾಡುವು

ದಾಗಿರುವುದು. ಬಹಳ ಕಾರ್ಯಗಳನ್ನು ಸಾಧನೆಮಾಡಲು ತಕ್ಕದ್ದಾಗಿರುವುದು. ಮನೋವೇಗಕ್ಕಿಂತಲೂ ಹೆಚ್ಚಾದ ವೇಗದಿಂದ ಕೂಡಿರುವುದು. ವೇಗಶಾಲಿಗಳಾದ ಕುದುರೆಗಳನ್ನು ಕಟ್ಟಿದ್ದಾಗಿ ಇರುವುದು. ಸಾವಿರಧ್ವಜಗಳಿಂದಕೂಡಿ ಅತಿಶಯವಾದ ಧನವನ್ನು ಶೇಖರಿಸತಕ್ಕದ್ದಾಗಿರುವುದು. ವೃಷ್ಟಿಪ್ರದವಾಗಿಯೂ, ವೇಗವಾಗಿ ಸಂಚರಿಸಲು ಸಾಮರ್ಥ್ಯವುಳ್ಳದ್ದಾಗಿಯೂ (ಯಜ್ಞಮಾಡುವವರಿಗೆ) ಧನವನ್ನು ಕೊಡುವುದಾಗಿಯೂ ಇರುವುದು. ಇಂತಹ ರಥದಲ್ಲಿ ಕುಳಿತುಕೊಂಡು ಬರುವುದಕ್ಕಾಗಿ ಅಶ್ವಿನೀದೇವತೆಗಳ ರಥವು ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪುರುಮಾಯಮ್**—ಪುರು ಬಹುಧಾ ಮಾಯಾಃ ಯಸ್ಯ ಸಃ ಪುರುಮಾಯಃ ತಮ್. ತ್ರಿಚಕ್ರಾದಿಯಲ್ಲಿ ಸೇರಿರುವುದರಿಂದ **ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಂ** ಎಂಬ ವಚನದಿಂದ ಅಂತೋದಾತ್ತಸ್ವರ ಬರುತ್ತದೆ. ಅಥವಾ ಪುರುಮಾಯಾ ಅಸ್ಯ ಅಸ್ತಿ ಎಂದು ಅರ್ಥವಿವಕ್ಷೆಮಾಡಿದಾಗ **ಅರ್ಶ ಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಅಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಜೀರಾಶ್ವಮ್**—ಜು ಎಂಬುದು ಸೌತ್ರ ಧಾತು. ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ಜೋರೀ ಚ** (ಉ. ಸೂ. ೨-೧೮೧) ಎಂಬುದರಿಂದ ಇದಕ್ಕೆ ರಕ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿಗೆ ಈಕಾರಾಂತಾದೇಶ. ಜೀರಃ ಅಶ್ವಃ ಯಸ್ಯ ತಮ್. ಜೀರಾಶ್ವಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಯಜ್ಞಿಯಮ್**—ಯಜ್ಞಸ್ಯ ಅರ್ಹಃ ಯಜ್ಞಿಯಃ. ತಮ್. **ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ. ೫-೧-೭೧) ಎಂಬುದರಿಂದ ಅರ್ಹಾರ್ಥದಲ್ಲಿ ಘ ಪ್ರತ್ಯಯ. **ಆಯನೇಯೀನೀಯಿಯಃ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಪ್ರಕೃತಿಯ ಅಂತ್ಯಾಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಜೀವಸೇ**—ಜೀವ ಪ್ರಾಣಧಾರಣೇ. ಧಾತು. ತುಮನರ್ಥತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಅಸೇ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಎಂಬುದರಿಂದ ಇದಕ್ಕೆ ಅವ್ಯಯಸಂಜ್ಞಾ ಬರುವುದರಿಂದ **ಅವ್ಯಯಾದಾಪ್ ಸುಪಃ** (ಪಾ ಸೂ. ೨-೪-೮೨) ಎಂಬುದರಿಂದ ಇದಕ್ಕೆ ಬಂದ ಸುಪ್ಪಿಗೆ ಲುಕ್.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. **ಲಟ್** ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ ಬಂದಾಗ **ಟಿತ ಆತ್ಮನೇ ಪದಾನಾಂ**—ಎಂಬುದರಿಂದ ಅದಕ್ಕೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಲುಕ್. **ಅಚಿಶ್ನುಧಾತುಭ್ರುವಾಮ್**—(ಪಾ. ಸೂ. ೬-೪-೭೭) ಎಂಬುದರಿಂದ ಧಾತುವಿನ ಉಕಾರಕ್ಕೆ ಉವಙಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವನಿನಮ್**—ವನಮುದಕಮಸ್ಯಾಸ್ತಿ ಇತಿ ವನೀ. **ಅತ ಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶತದ್ವಸುಮ್**—ಶತಂ ವಸು ಯಸ್ಯ ಶತವಸುಃ ತಮ್. ಛಾಂದಸವಾಗಿ ತಕಾರಾಗಮ ಬರುತ್ತದೆ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವರಿವೋಧಾಮ್**—ವರಿವಸಃ ದಾತಾ. ವರಿವೋಧಾಃ ಡುಧಾಞ್ ಧಾರಣಪೋಷಣಯೋಃ ಧಾತು. ವಿಚ್ ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ಊರ್ಧ್ವಾ ಧೀತಿಃ ಪ್ರತ್ಯಸ್ಯ ಪ್ರಯಾಮನ್ಯಧಾಯಿ ಶಸ್ಮನ್ತ್ಸಮ-
ಯಂತ ಆ ದಿಶಃ ।
ಸ್ವದಾಮಿ ಘರ್ಮಂ ಪ್ರತಿ ಯನ್ತ್ಯೂತಯ ಆ ವಾಮೂರ್ಜಾನೀ
ರಥಮಶ್ವಿನಾರುಹತ್ ॥ ೨ ॥

॥ ಪದಪಾಠಃ ॥

ಊರ್ಧ್ವಾ । ಧೀತಿಃ । ಪ್ರತಿ । ಅಸ್ಯ । ಪ್ರಯಾಮನಿ । ಅಧಾಯಿ । ಶಸ್ಮನ್ ।
ಸಂ । ಅಯಂತೇ । ಆ । ದಿಶಃ ।
ಸ್ವದಾಮಿ । ಘರ್ಮಂ । ಪ್ರತಿ । ಯಂತಿ । ಊತಯಃ । ಆ । ವಾಂ । ಊರ್ಜಾನೀ ।
ರಥಂ । ಅಶ್ವಿನಾ । ಅರುಹತ್ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಯ ರಥಸ್ಯ ಪ್ರಯಾಮನಿ ಪ್ರಯಾಣೇ ಪ್ರಗಮನೇ ಸತಿ ಶಸ್ಮನ್ ಅಶ್ವಿನೋಃ ಶಂಸನೇ ಸ್ತವನೇ ಧೀತಿರಸ್ಮದೀಯಾ ಬುದ್ಧಿರೂರ್ಧ್ವೋನ್ಮುಖಾ ಪ್ರತ್ಯಧಾಯಿ । ಪ್ರತ್ಯಸ್ಥಾಯಿ । ತದನಂತರಂ ದಿಶೋ ದೇಷ್ಟವ್ಯಾಃ ಸ್ತುತಯೋಽಪಿ ಸಮಯಂತೇ। ಅಶ್ವಿಭ್ಯಾಂ ಸಂಗಚ್ಛಂತೇ। ಆಕಾರಃ ಸಮುಚ್ಚಯೇ । ಅಹಂ ಚ ಸ್ತೋತಾ ಘರ್ಮಂ ಮಹಾವೀರಸ್ಥಂ ಯದ್ವಾ ಕ್ಷರಣಶೀಲಮಾಜ್ಯಾದಿಕಂ ಹವಿಃ ಸ್ವದಾಮಿ। ಸ್ವಾದೂಕರೋಮಿ । ಊತಯೋಽವಿತಾರೋ ರಕ್ಷಕಾ ಋತ್ವಿಜಶ್ಚ ಪ್ರತಿ ಯಂತಿ । ಘರ್ಮಂ ಪ್ರತಿ ಗಚ್ಛಂತಿ ಸಂಸ್ಕಾರಾರ್ಥಂ । ಅಪಿ ಚ ಹೇ ಅಶ್ವಿನೌ ವಾಂ ಯುವಯೋ ರಥಮೂರ್ಜಾನೀ ಸೂರ್ಯಸ್ಯ ದುಹಿತಾರುಹತ್। ಆರೂಢವತೀ ॥ ಪ್ರಯಾಮನಿ। ಯಾ ಪ್ರಾಪಣೇ। ಆತೋ ಮನಿನ್ನಿತಿ ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾದ್ಭಾವೇ ಮನಿನ್ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಶಸ್ಮನ್। ಶಂಸು ಸ್ತುತೌ। ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್। ದೃಶಿಗ್ರಹಣಸ್ಯ ವಿಧ್ಯಂತರೋಪ-ಸಂಗ್ರಹಾರ್ಥತ್ವಾದುಪಧಾನಕಾರಲೋಪಃ। ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್। ಅಯಂತೇ। ಅಯ ಪಯ ಗತೌ। ಭೌವಾದಿಕೋಽನುದಾತ್ತೇತ್। ಊತಯಃ। ಕ್ತಿಚ್ಕ್ತೌ ಚ ಸಂಜ್ಞಾಯಾಮಿತ್ಯವತೇಃ ಕರ್ತರಿ ಕ್ತಿಚ್। ಜ್ವರತ್ವರೇತ್ಯಾದಿನಾ ವಕಾರೋಪಧಯೋರೂಟ್ । ಅರುಹತ್। ಕೃಮೃದೃರುಹಿಭ್ಯ ಇತಿ ಚ್ಲೇರಙಾದೇಶಃ ॥

॥ ಪ್ರತಿಪದಾರ್ಥ ॥

**ಅಸ್ಯ**—ಈ ರಥದ । **ಪ್ರಯಾಮನಿ**—ಚಲನವಾಗಲು । **ಧೀತಿಃ**—(ನಮ್ಮ) ಬುದ್ಧಿಯು । **ಶಸ್ಮನ್**—(ನಿಮ್ಮ) ಶಂಸನದಲ್ಲಿ । **ಊರ್ಧ್ವಾ**—ಉನ್ಮುಖವಾಗಿ ತತ್ಪರವಾಗಿ । **ಪ್ರತಿ ಅಧಾಯಿ**—ಇಡಲ್ಪಟ್ಟಿತು (ಮಾಡಲ್ಪಟ್ಟಿತು)। **ದಿಶಃ**—(ನಮ್ಮ) ಸ್ತುತಿಗಳೂ । **ಆ ಸಮಯಂತೇ**—(ನಿಮ್ಮನ್ನು) ಸೇರುತ್ತವೆ। (ನಾನೂ)। **ಘರ್ಮಂ**—ಆಜ್ಯಾದಿಹವಿಸ್ಸನ್ನು । **ಸ್ವದಾಮಿ**—ಸ್ವಾದುವನ್ನಾಗಿ (ಸಿಹಿಯಾಗಿ) ಮಾಡುತ್ತೇನೆ। **ಊತಯಃ**—ಯಜ್ಞರಕ್ಷಕರಾದ ಋತ್ವಿಜರೂ । **ಪ್ರತಿ ಯಂತಿ**—(ಆಜ್ಯವನ್ನು ಸಂಸ್ಕರಿಸುವುದಕ್ಕಾಗಿ) ಸಮೀಪಿಸುತ್ತಾರೆ। (**ಹೇ**) **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮ। **ರಥಂ**—ರಥವನ್ನು । **ಊರ್ಜಾನೀ**—(ಸೂರ್ಯ (ಪುತ್ರಿಯಾದ) ಊರ್ಜಾನಿಯು । **ಆ ಅರುಹತ್**—ಏರಿದಳು.

॥ ಭಾವಾರ್ಥ ॥

(ನಿಮ್ಮ) ಈ ರಥವು ಚಲಿಸಲು, ನಮ್ಮ ಬುದ್ಧಿಯು (ನಿಮ್ಮನ್ನು) ಸ್ತುತಿಸುವುದರಲ್ಲಿ ಮಗ್ನವಾಗುತ್ತದೆ; (ನಮ್ಮ) ಸ್ತುತಿಯೂ (ನಿಮ್ಮನ್ನು) ಸೇರುತ್ತದೆ; (ನಾನೂ) ಆಜ್ಯಾದಿಹವಿಸ್ಸನ್ನು ಹೆಚ್ಚುರುಚಿಕರವಾಗುವಂತೆ ಮಾಡುತ್ತೇನೆ. ಎಲೈ ಅಶ್ವಿನೀದೇವತೆಗಳೇ, ಯಜ್ಞರಕ್ಷಕರಾದ ಋತ್ವಿಜರೂ ಆಜ್ಯಸಂಸ್ಕಾರದಲ್ಲಿ ತೊಡಗುತ್ತಾರೆ; ಮತ್ತು ನಿಮ್ಮ ರಥವನ್ನು, ಊರ್ಜಾನಿಯೂ, (ಸೂರ್ಯಪುತ್ರಿಯು) ಏರುತ್ತಾಳೆ.

## English Translation.

Upon its moving, our minds have been raised on high in praise; our hymns reach (the Aswins). I sweeten the oblation: the assistants come nigh : Urjani, (the daughter of the sun), has ascended, Aświns, your car.

॥ ವಿಶೇಷವಿಷಯಗಳು ॥

**ಧೀತಿಃ—ಅಸ್ಮದೀಯಾ ಬುದ್ಧಿಃ** । ನಮ್ಮ ಬುದ್ಧಿಯು. ಎಂದು ಅರ್ಥ. ಧೀತಿ ಶಬ್ದವು ಸ್ತುತಿ ಮತ್ತು ಪ್ರಜ್ಞಾ ಎಂಬ ಎರಡು ಅರ್ಥಗಳಲ್ಲಿ ಪ್ರಯುಕ್ತವಾಗಿರುವುದು. ಉದಾಹರಣೆಗಾಗಿ—

**ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।**
**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀ ಮಾ ವಿವಾಸೇಮ ಧೀತಿಭಿಃ ॥**

(ಋ. ಸಂ. ೬-೬೧-೨)

ಎಂಬ ಋಕ್ಕಿನಲ್ಲಿ **ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ** (ನಿ. ೨-೨೪) ಎಂದು **ಧೀತಿ** ಶಬ್ದವು **ಸ್ತುತಿ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।**
**ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ॥**

(ಋ. ಸಂ. ೪-೨೩-೮)

ಇಲ್ಲಿ **ಋತಸ್ಯ ಧೀತಿಃ ಪ್ರಜ್ಞಾ** (ನಿ. ೧೦-೪೧) ಎಂದು ಧೀತಿಶಬ್ದವು ಪ್ರಜ್ಞಾ ಎಂಬ ಅರ್ಥಬೋಧಕವಾಗಿರುವುದು.

**ಘರ್ಮಂ—ಮಹಾವೀರಸ್ಥಂ. ಯದ್ವಾ ಕ್ಷರಣಶೀಲಾಜ್ಯಾದಿಕಂ** । **ಘರ್ಮ** ಶಬ್ದವು ಅಹರ್ನಾಮಗಳಲ್ಲಿಯೂ (ನಿ. ೨-೨೧) ಯಜ್ಞನಾಮಗಳಲ್ಲಿಯೂ (ನಿ. ೩-೧೯) ಉಕ್ತವಾಗಿರುವುದು. ಉದಾಹರಣೆಗಾಗಿ—

**ಗೌರಮೀಮೇದನು ವತ್ಸಂ ಮಿಷಂತಂ ಮೂರ್ಧಾನಂ ಹಿಂಙ್ಕೃಣೋನ್ಮಾತವಾ ಉ ।**
**ಸೃಕ್ವಾಣಂ ಘರ್ಮಮಭಿ ವಾವಶಾನಾ ಮಿಮಾತಿ ಮಾಯುಂ ಪಯತೇ ಪಯೋಭಿಃ ॥**

(ಋ. ಸಂ. ೧-೧೬೪-೨೮)

ಎಂಬ ಈ ಋಕ್ಕಿನಲ್ಲಿ **ಘರ್ಮ** ಶಬ್ದವು **ಘರ್ಮಧುಗಿತಿ ಯಾಜ್ಞಿಕಾಃ** ಎಂದು ವ್ಯಾಖ್ಯಾತವಾಗಿರುವುದು (ನಿ. ೧೧-೪೩) ರಸವೆಂದು ಅರ್ಥ.

**ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ ।**
**ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರ ವೋಚಂ ॥**

(ಋ. ಸಂ. ೧-೧೬೪-೨೬)

**ಘರ್ಮಧುಗಿತಿ ಯಾಜ್ಞಿಕಾಃ** (ನಿ. ೧೧-೪೩) ನಿರುಕ್ತವ್ಯಾಖ್ಯಾನದಲ್ಲಿ **ಯೋಽಯಂ ಅಭೀದ್ಧಃ ಘರ್ಮಃ ಮಧ್ಯಸ್ಥಾನೋ ವಿದ್ಯುದಾಖ್ಯಃ** ಎಂದು ಅರ್ಥಮಾಡಿರುವುದರಿಂದ ಘರ್ಮಶಬ್ದಕ್ಕೆ ಮಧ್ಯಸ್ಥಾನದಲ್ಲಿರುವ ವಿದ್ಯುತ್ ಎಂದು ಹೆಸರುಳ್ಳ ದೇವತೆಯು ಎಂದು ಅರ್ಥವಾಗುತ್ತದೆ.

ಅಶ್ವಿನೀದೇವತೆಗಳ ರಥವು ಹೊರಟಕೂಡಲೆ ಅವರನ್ನು ಸ್ತುತಿಮಾಡುವುದಕ್ಕಾಗಿ ಯಜ್ಞಮಾಡುವವರ ಬುದ್ಧಿಯು ಉದ್ಯುಕ್ತವಾಗುತ್ತದೆ. ಅನಂತರ ಅಶ್ವಿನೀದೇವತೆಗಳ ಸ್ತುತಿಯೂ ಸಿದ್ಧವಾಗುತ್ತದೆ. ಯಾಗಶಾಲೆಯಲ್ಲಿ ಅವರಿಗಾಗಿ ಆಜ್ಯವೇ ಮೊದಲಾದ ಹವಿಸ್ಸುಗಳು ಸಿದ್ಧವಾಗಿ ಋತ್ವಿಕ್ಕುಗಳಿಂದ ರಕ್ಷಿತವಾಗಿವೆ. ಮತ್ತು ಅವುಗಳು ಋತ್ವಿಕ್ಕುಗಳಿಂದ ಸಂಸ್ಕರಿಸಲ್ಪಡುತ್ತಿವೆ. ಅಶ್ವಿನೀದೇವತೆಗಳ ಸಂಗಡ ರಥದಲ್ಲಿ ಬರುವುದಕ್ಕಾಗಿ ಸೂರ್ಯಪುತ್ರಿಯಾದ ಸೂರ್ಯಾದೇವಿಯೂ ರಥಾರೂಢಳಾಗಿರುವಳು ಎಂದು ಅಶ್ವಿನೀದೇವತೆಗಳು ಯಜ್ಞಕ್ಕಾಗಿ ಬರುವ ಕ್ರಮವನ್ನು ವರ್ಣಿಸಿದೆ. ಸ್ಕಂದಸ್ವಾಮಿಗಳು—

**ಅರುಹತ್—ಆರೂಢಾ ಆಜೌ ಜಿತಾ ಸತೀ ಸೂರ್ಯಾ—ತದೇತತ್ ಪುರಸ್ತಾದಪ್ಯುಕ್ತಂ** । ದೇವತೆಗಳೊಡನೆ ಉಂಟಾದ ಪರಸ್ಪರ ಸ್ಪರ್ಧೆಯಲ್ಲಿ ಸೂರ್ಯಾದೇವಿಯು ನಿಮ್ಮಿಂದ ಜಿತಳಾಗಿ ನಿಮ್ಮ ರಥವನ್ನು ಹತ್ತಿದಳು ಎಂದು ಅರ್ಥಮಾಡಿ—ಈ ವಿಷಯವು ಹಿಂದೆ ಹೇಳಲ್ಪಟ್ಟಿರುವುದು ಎಂದು ಹೇಳಿ—

**ಆ ವಾಂ ರಥಂ ದುಹಿತಾ ಸೂರ್ಯಸ್ಯ ಕಾರ್ಷ್ಮೇವಾತಿಷ್ಠದರ್ವತಾ ಜಯಂತೀ ।**
**ವಿಶ್ವೇ ದೇವಾ ಅನ್ವಮನ್ಯಂತ ಹೃದ್ಭಿಃ ಸಮು ಶ್ರಿಯಾ ನಾಸತ್ಯಾ ಸಚೇಥೇ ॥**

(ಋ. ಸಂ. ೧-೧೧೬-೧೭)

ಎಂಬ ಈ ಋಕ್ಕನ್ನು ಉದಹರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಧೀತಿಃ**—ಧ್ಯೈ ಚಿಂತಾಯಾಂ ಧಾತು. **ಕ್ತಿಚ್ ಕ್ತೌ ಚ ಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ, ಪೂರ್ವರೂಪ. **ಹಲಃ** (ಪಾ. ಸೂ. ೬-೪-೨) ಎಂಬುದರಿಂದ ಸಂಪ್ರಸಾರಣಕ್ಕೆ ದೀರ್ಘ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಪ್ರಯಾಮನಿ**—ಯಾ ಪ್ರಾಪಣೇ. ಧಾತು. ಆದಂತವಾದುದರಿಂದ **ಆತೋ ಮನಿನ್ ಕ್ವನಿಪ್ ವನಿಪಶ್ಚ** (ಪಾ. ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯ. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಇದು ಭಾವಾರ್ಥದಲ್ಲಿ ಬರುತ್ತದೆ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಕೃದುತ್ತರಪದಪ್ರಕೃತಿಸ್ವರವು ಬಾಧಿತವಾಗಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಏಕವಚನ ಪರವಾದಾಗ **ವಿಭಾಷಾ ಙಿಶ್ಯೋಃ** (ಪಾ. ಸೂ. ೬-೪-೧೩೬) ಎಂಬುದರಿಂದ ವಿಕಲ್ಪವಾಗಿ ಅನಿನ ಅಕಾರಕ್ಕೆ ಲೋಪವೆಂದುದರಿಂದ ಇಲ್ಲಿ ಲೋಪ ಬರುವುದಿಲ್ಲ.

**ಅಧಾಯಿ**—ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ

**ಆತೋ ಯುಕ್ ಚಿಣ್ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣ್ಣಿನ ಪರದಲ್ಲಿರುವ ತಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಶಸ್ಮನ್**—ಶಂಸು ಸ್ತುತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ಈ ಸೂತ್ರದಲ್ಲಿ ದೃಶಿಗ್ರಹಣವು ಇತರ ಕಾರ್ಯಸಂಗ್ರಹಕ್ಕೋಸ್ಕರವಿರುವುದರಿಂದ ನಿಮಿತ್ತವಿಲ್ಲವಾದರೂ ಧಾತುವಿನ ಉಪಧಾ ನಕಾರಕ್ಕೆ ಲೋಪ. ಶಸ್ಮನ್ ಎಂದು ರೂಪವಾಗುತ್ತದೆ. ಇದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೩-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಅಯಂತೇ**—ಅಯ ಪಯ ಗತೌ. ಧಾತು. ಭ್ವಾದಿ. ಅನುದಾತ್ತೇತ್. **ಅನುದಾತ್ತಙಿತ ಆತ್ಮನೇಪದಮ್** (ಪಾ. ಸೂ. ೧-೩-೧೨) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಿಶಃ**—ದಿಶ ಅತಿಸರ್ಜನೇ ಧಾತು. **ಕ್ವಿಪ್ ಚ** (ಪಾ. ಸೂ. ೩-೩-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ.

**ಸ್ವದಾಮಿ**—ಷ್ವದ ಆಸ್ವಾದನೇ. ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಅಂತರ್ಭಾವಿತಣ್ಯರ್ಥಕವಾದ ಧಾತು. ಅಥವಾ ಣಿಚ್ ಬಂದಾಗ **ಛಂದಸ್ಯುಭಯಥಾ** ಎಂಬುದರಿಂದ ಶಪ್ಪಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಲಟ್ ಉತ್ತಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಊತಯಃ**—ಅವ ರಕ್ಷಣೇ. ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕರ್ತರಿಯಲ್ಲಿ ಕ್ತಿಚ್ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಜ್ವರತ್ವರಸ್ರಿವ್ಯವಿಮವಾಮ್**— (ಪಾ. ಸೂ. ೬-೪-೨೦) ಎಂಬುದರಿಂದ ಧಾತುವಿನ ಉಪಧೆಗೂ ವಕಾರಕ್ಕೂ ಒಟ್ಟಿಗೆ ಊಠ್ ಬರುತ್ತದೆ. **ಊತಿಃ** ಎಂದು ರೂಪವಾಗುತ್ತದೆ. **ಚಿತಃ** (ಪಾ. ಸೂ. ೬-೧-೧೬೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಅರುಹತ್**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಕೃಮೃದೃರುಹಿಭ್ಯಃ**—(ಪಾ. ಸೂ. ೩-೧-೫೯) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಅಙಾದೇಶ. ಇದು ಙಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೨ ‖



॥ ಸಂಹಿತಾಪಾಠಃ ॥

ಸಂ ಯನ್ಮಿಥಃ ಪಸ್ಪೃಧಾನಾಸೋ ಅಗ್ಮತ ಶುಭೇ ಮಖಾ
ಅಮಿತಾ ಜಾಯವೋ ರಣೇ ।
ಯುವೋರಹ ಪ್ರವಣೇ ಚೇಕಿತೇ ರಥೋ ಯದಶ್ವಿನಾ ವಹಥಃ
ಸೂರಿಮಾ ವರಂ ॥ ೩ ॥

॥ ಪದಪಾಠಃ ॥

ಸಂ । ಯತ್ । ಮಿಥಃ । ಪಸ್ಪೃಧಾನಾಸಃ । ಅಗ್ಮತ । ಶುಭೇ । ಮಖಾಃ ।
ಅಮಿತಾಃ । ಜಾಯವಃ । ರಣೇ ।
ಯುವೋಃ । ಅಹ । ಪ್ರವಣೇ । ಚೇಕಿತೇ । ರಥಃ । ಯತ್ । ಅಶ್ವಿನಾ । ವಹಥಃ ।
ಸೂರಿಂ । ಆ । ವರಂ ॥ ೩ ॥

॥ ಸಾಯಣಭಾಷ್ಯಂ ॥

ಮಖಾ ಮಖವಂತೋ ಯಜ್ಞೋಪೇತಾ ಅಮಿತಾ ಅಪರಿಮಿತಾ ಜಾಯವೋ ಜಯಶೀಲಾ ಮನುಷ್ಯಾ ರಣೇ ಸಂಗ್ರಾಮೇ ಶುಭೇ ಶೋಭನಾಯ ಧನಾಯ ತದರ್ಥಂ ಮಿಥಃ ಪಸ್ಪೃಧಾನಾಸೋಽನ್ಯೋನ್ಯಂ ಸ್ಪರ್ಧಮಾನಾ ಯದ್ಯದಾ ಸಮಗ್ಮತ ಸಂಗಚ್ಛಂತೇ ತದಾನೀಂ ಹೇ ಅಶ್ವಿನಾ ಅಶ್ವಿನೌ ಯುವೋರಹ ಯುವೋರೇವ ರಥಃ ಪ್ರವಣೇ ಪ್ರಕರ್ಷೇಣ ಸಂಭಜನೀಯೇ ಭೂತಲೇ ಚೇಕಿತೇ । ಜ್ಞಾಯತೇ । ದೇವೇಷು ಮಧ್ಯೇ ಯುವಾಮೇವ ರಕ್ಷಣಾರ್ಥಂ ಶೀಘ್ರಂ ರಥೇನಾಗಚ್ಛಥ ಇತ್ಯರ್ಥಃ । ಯದ್ಯೇನ ರಥೇನ ಸೂರಿಂ ಸ್ತೋತಾರಂ ಪ್ರತಿ ವರಂ ಶ್ರೇಷ್ಠಂ ಧನಮಾವಹಥಃ ಪ್ರಾಪಯಥಃ । ಸ ರಥ ಇತ್ಯರ್ಥಃ ॥ ಪಸ್ಪೃಧಾನಾಸಃ । ಸ್ಪರ್ಧ ಸಂಘರ್ಷೇ । ಛಾಂದಸೋ ಲಿಟ್ । ತಸ್ಯ ಲಿಟಃ ಕಾನಜಾದೇಶಃ । ಛಾಂದಸಂ ರೇಫಸ್ಯ ಸಂಪ್ರಸಾರಣಮಕಾರಲೋಪಶ್ಚ । ಅಗ್ಮತ । ಗಮೇಶ್ಛಾಂದಸೋ ಲಙ್ । ಸಮೋ

ಗಮ್ಯೃಚ್ಛೀತ್ಯಾದಿನಾತ್ಮನೇಪದಂ । ಬಹುಲಂ ಛಂದಸೀತಿ ಶಪೋ ಲುಕ್ । ಋುಸ್ಯಾದಾದೇಶಃ । ಗಮ-ಹನೇತ್ಯುಪಧಾಲೋಪಃ । ಮಖಾಃ । ಮಖೋ ಯಜ್ಞಃ । ಅರ್ಶಆದಿತ್ವಾದಚ್ । ಜಾಯವಃ । ಜಿ ಜಯೇ । ಕೃವಾಪಾಜೀತ್ಯಾದಿನೋಣ್ । ಚೇಕಿತೇ । ಕಿತ ಜ್ಞಾನೇ । ಅಸ್ಮಾದ್ವ್ಯಜಂತಾಚ್ಛಾಂದಸೋ ವರ್ತಮಾನೇ ಲಿಟ್ । ಅತೋಲೋಪಯಲೋಪೌ । ಯತ್ । ಸುಪಾಂ ಸುಲುಗಿತಿ ತೃತೀಯಾಯಾ ಲುಕ್ ॥

॥ ಪ್ರತಿಪದಾರ್ಥ ॥

(ಹೇ) **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮಖಾಃ**—ಯಜ್ಞಯುಕ್ತರೂ (ಯಾಗಕರ್ತೃಗಳೂ) । **ಅಮಿತಾಃ**—ಅನೇಕರೂ ಆದ । **ಜಾಯವಃ**—ಜಯಶೀಲರಾದ ಮನುಷ್ಯರು । **ರಣೇ**—ಸಂಗ್ರಾಮದಲ್ಲಿ । **ಶುಭೇ**—ಶುಭಾವಹವಾದ ಧನಕ್ಕೋಸ್ಕರ । **ಮಿಥಃ ಪಸ್ಪೃಧಾನಾಸಃ**—ಪರಸ್ಪರ ಸ್ಪರ್ಧಿಸುವವರಾಗಿ । **ಯತ್**—ಯಾವಾಗ । **ಸಂ ಅಗ್ಮತ**—ಸೇರುತ್ತಾರೋ,(ಆಗ) । ಮತ್ತು **ಯತ್**—ಯಾವ ರಥದಿಂದ ನೀವು । **ಸೂರಿಂ**—ಸ್ತೋತೃವನ್ನುದ್ದೇಶಿಸಿ । **ವರಂ**—ಶ್ರೇಷ್ಠವಾದ ಧನವನ್ನು । **ಆ ವಹಥಃ**—ತೆಗೆದುಕೊಂಡು ಬರುತ್ತೀರೋ । (**ಸಃ**—ಅ) । **ಯುವೋಃ ಅಹ**—ನಿಮ್ಮದೇ ಆದ । **ರಥಃ**—ರಥವು । **ಪ್ರವಣೇ**—ಭೂತಲದಲ್ಲ । **ಚೇಕಿತೇ**—ಜ್ಞಾತವಾಗುತ್ತದೆ. (ಎಲ್ಲರಿಂದಲೂ ನೋಡಲ್ಪಡುತ್ತದೆ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಸ್ತೋತೃವಿಗಾಗಿ ಯಾವ ರಥದಲ್ಲಿ ಧನವನ್ನು ತೆಗೆದುಕೊಂಡು ಬರುತ್ತೀರೋ, ಆ ರಥವನ್ನೇ ಯಾಗಕರ್ತೃಗಳೂ, ಜಯಶೀಲರೂ ಆದ ಅನೇಕ ಮನುಷ್ಯರು, ಯುದ್ಧದಲ್ಲಿ ಶುಭಾವಹವಾದ ಧನಕ್ಕೋಸ್ಕರ ಪರಸ್ಪರ ಸ್ಪರ್ಧಿಸುವಾಗ ನಿರೀಕ್ಷಿಸುತ್ತಾರೆ (ನಿಮ್ಮ ರಥವೇ ಎಲ್ಲರಿಗಿಂತ ಮುಂಚೆ ಅವರ ದೃಷ್ಟಿಗೆ ಗೋಚರವಾಗುತ್ತದೆ).

English Translation.

When devout and unnumbered (men), victorious in battle, mutually contending for wealth, come together, your car, Aswins, is perceived on its downward course, in which you bear excellent (treasure) to the worshipper,

॥ ವಿಶೇಷವಿಷಯಗಳು ॥

ಅಸಂಖ್ಯಾತರಾದವರೂ ಜಯವನ್ನು ಯಾವಾಗಲೂ ನಿಯತವಾಗಿ ಹೊಂದುವ ಸ್ವಭಾವವುಳ್ಳವರೂ ಯಜ್ಞಶೀಲರೂ ಆದ ಜನರು ಧನಕ್ಕಾಗಿ ಅನ್ಯೋನ್ಯವಾಗಿ ಸ್ಪರ್ಧೆಮಾಡುತ್ತಾ ಯುದ್ಧವನ್ನು ಮಾಡುತ್ತಿರುವ ಕಾಲದಲ್ಲಿ ಅವರವರಿಗೆ ವಿಪತ್ತುಗಳು ಉಂಟಾದಾಗ ರಕ್ಷಿಸಲು ಇತರ ಎಲ್ಲಾ ದೇವತೆಗಳಿಗಿಂತಲೂ ವೇಗವಾಗಿ ಮೊದಲು ಅಶ್ವಿನೀದೇವತೆಗಳಾದ ನೀವುಗಳು ಸಿದ್ಧರಾಗಿ ಬರುತ್ತೀರಿ. ನೀವು ರಥಾರೂಢರಾಗಿಯೇ ಬರುವ ಕಾರಣ ನಿಮ್ಮ ರಥವು

ನಿಮ್ಮನ್ನು ಸ್ತುತಿ ಮಾಡುವವರಿಗೆ ಚೆನ್ನಾಗಿ ಕಾಣಿಸುತ್ತದೆ. ಮತ್ತು ಅವರ ರಥದ ಪ್ರಭಾವವು ಈ ಋಕ್ಕಿನಲ್ಲಿ ವರ್ಣಿತವಾಗಿದೆ.

**ಮಖಾಃ—ಮಖವಂತಃ ಯಜ್ಞೋಪೇತಾಃ** ಯಜ್ಞಗಳನ್ನು ಮಾಡತಕ್ಕವರು. ಮಖಶಬ್ದವು ಹದಿನೈದು ಯಜ್ಞನಾಮಗಳಲ್ಲಿ (ನಿ. ೩-೧೯) ಉಕ್ತವಾಗಿರುತ್ತದೆ.

**ಯೋ ಸಹಾಂಸಿ ಸಹಸಾ ಸಹಂತೇ ರೇಜತೇ ಅಗ್ನೇ ಪೃಥಿವೀ ಮಖೇಭ್ಯಃ ।**

(ಋ. ಸಂ. ೬-೬೬-೯)

ಈ ಋಕ್ಕಿನಲ್ಲಿ ಮಖ ಶಬ್ದಕ್ಕೆ ಮರುದ್ದೇವತೆಗಳೆಂದು ಅರ್ಥವು ಉಕ್ತವಾಗಿದೆ.

**ಶುಭೇ—ಶುಭಶಬ್ದವು** ನೂರೊಂದು **ಉದಕ** ನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುವುದರಿಂದ ಉದಕವೆಂದು ಅರ್ಥ. ಶೋಭನಾಯ ಧನಾಯ—ಮಂಗಳಕರವಾದ ಕಾರ್ಯಕ್ಕಾಗಿ ಅಥವಾ ಧನಕ್ಕಾಗಿ ಎಂದು ಸಾಯಣರೂ, ಉದಕಕ್ಕಾಗಿ ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುವರು. ಇದಲ್ಲದೆ ಸ್ಕದಸ್ವಾಮಿಗಳು ಅರ್ಥವನ್ನು ಬೇರೆಯ ವಿಧವಾಗಿ ಹೇಳಿರುತ್ತಾರೆ—**ಅಮಿತಾಃ—ಅಪರಿಮಿತಾಃ ಅಥವಾ ಬಲೇನಾಪರಿಮಿತಾಃ ಮಹಾಬಲಾಃ । ಜಾಯವಃ ಜಯಶೀಲಾಃ । ರಣೇ ಸಂಗ್ರಾಮೇ ಮಿಥಃ ಪಸ್ಪೃಧಮಾನಾಸಃ ಯೋದ್ಧಾರಃ ನಾಶ್ವಾಃ । ಶುಭೇ ಶೋಭಾರ್ಥಂ, ಜಯಾರ್ಥಂ, ಮಖಾ ಜಾಯವಶ್ಚ ಅಮಿತಾಃ ।** ಅಮಿತ ಶಬ್ದಕ್ಕೆ ಬಹಳ ವೆಂದೂ, ಶಕ್ತಿ ಅಥವಾ ಬಲದಿಂದ ಅಧಿಕರಾದ ಯುದ್ಧ ಮಾಡುವ ಸೈನಿಕರು ಜಯಶೀಲರಾಗುವುದಕ್ಕಾಗಿ ಅನ್ಯೋನ್ಯವಾಗಿ ಸ್ಪರ್ಧೆಯಿಂದ ಯುದ್ಧ ಮಾಡುವ ಯುದ್ಧದಲ್ಲಿ ಜಯವನ್ನು ಉಂಟುಮಾಡುವುದಕ್ಕಾಗಿ ನಿಮ್ಮ ರಥವು ಉಪಸ್ಥಿತವಾಗಿರುತ್ತದೆ, ಎಂದು ಅರ್ಥವನ್ನು ವಿವರಿಸಿರುವರು.

**ಪ್ರವಣೇ ಚೇಕಿತೇ**—ಎಂಬಲ್ಲಿ ಸಾಯಣರು **ಪ್ರಕರ್ಷೇಣ ಸಂಭಜನೀಯೇ ಭೂತಲೇ ರಥಃ ಜ್ಞಾಯತೇ, ದೇವೇಷು ಮಧ್ಯೇ ಯುವಾಮೇವ ರಕ್ಷಣಾರ್ಥಂ ಶೀಘ್ರಂ ರಥೇನಾಗಚ್ಛಥಃ ।** ಅತಿಶಯವಾಗಿ ಸಂಚರಿಸುವ ನಿಮ್ಮ ರಥವು ಭೂಮಿಯಮೇಲೆಯೇ ಇರುವುದೆಂದು ತಿಳಿಯಲ್ಪಡುತ್ತದೆ. ಇತರ ದೇವತೆಗಳಿಗಿಂತಲೂ ನೀವೇ ನಮ್ಮ ರಕ್ಷಣೆಗಾಗಿ ರಥದಿಂದ ಶೀಘ್ರವಾಗಿ ಬರುತ್ತೀರಿ ಎಂದು ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳು—

**ಪ್ರವಣೇ—ನಿಮ್ನದೇಶೇ । ಚೇಕಿತೇ ಜ್ಞಾಯತೇ ಲಕ್ಷ್ಯತೇ । ಅಶ್ವಾ ಹ್ಯುಚ್ಚಾ ರಥೋ ನೀಚಃ ।**
**ಉಚ್ಚತ್ವಾದಶ್ವಾನಾಂ ತೇಭ್ಯೋ ನೀಚೋ ರಥೋ ದೃಶ್ಯತ ಇತ್ಯರ್ಥಃ ॥**

ಪ್ರವಣ ಶಬ್ದವು ಇಳಿಜಾರಾದ ಭೂಮಿ ಎಂದು ಅರ್ಥಬೋಧಕವಾಗಿರುವುದು. ಕುದುರೆಗಳು ಎತ್ತರವಾಗಿರುವುದರಿಂದ ರಥವು (ತಗ್ಗಾಗಿ) ಇಳಿಜಾರಾಗಿ ಇರುವಕಾರಣ ನಿಮ್ಮ ರಥವನ್ನು ಗುರುತಿಸಬಹುದೆಂದು ವಿವರಿಸಿರುತ್ತಾರೆ.

**ಸೂರಿಂ—ಸ್ತೋತಾರಂ—ಸೋತೃನಾಮಗಳಲ್ಲಿ ಸ್ತೂರಿ** ಶಬ್ದವು (ನಿ. ೩-೧೯) ಉಕ್ತವಾಗಿರುತ್ತದೆ. ಸ್ತೋತ್ರ ಮಾಡುವವನೆಂದು ಅರ್ಥ.

**ವರಂ—ಶ್ರೇಷ್ಠ ಧನಂ** । ಉತ್ತಮವಾದ ಧನವೆಂದು ಸಾಯಣರ ವ್ಯಾಖ್ಯಾನ. **ವರಣೀಯಂ ಧನಂ** ಎಂದು ಸ್ಕಂದಸ್ವಾಮಿಗಳ ಅರ್ಥ. **ವರೋ ವರಯಿತವ್ಯೋ ಭವತಿ** (ನಿ. ೧-೭) ಅಭಿಲಷಣೀಯವಾದದ್ದು, ಎಲ್ಲರಿಗೂ ಬೇಕಾದದ್ದು ಎಂದು ಯಾಸ್ಕರು ವರಶಬ್ದದ ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಪಸ್ಪೃಧಾನಾಸಃ**—ಸ್ಪರ್ಧ ಸಂಘರ್ಷೇ ಧಾತು. ಭ್ವಾದಿ. ವರ್ತಮಾನಾರ್ಥತೋರುವಾಗ **ಛಂದಸಿ ಲುಙ್‌ಲಙ್ ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್. **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಚಾದೇಶ. ಲಿಟ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಶರ್ಪೂರ್ವಾಃ ಖಯಃ** (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ಪಕಾರಕ್ಕೆ ಶೇಷ. ಛಾಂದಸವಾಗಿ ಧಾತುವಿನ ರೇಫಕ್ಕೆ ಸಂಪ್ರಸಾರಣವೂ ಅಕಾರಲೋಪವೂ ಬರುತ್ತದೆ. ಪಸ್ಪೃಧಾನ ಎಂದು ರೂಪವಾಗುತ್ತದೆ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತವೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಜಸ್ಸಿಗೆ ಅಸುಕಾಗಮ.

**ಅಗ್ಮತೆ**—ಗಮ್ಲೃ ಗತೌ. ಧಾತು. ವರ್ತಮಾನಾರ್ಥದಲ್ಲಿ ಹಿಂದಿನಂತೆ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್. ಸಮ್ ಉಪಸರ್ಗ ಸಂಬಂಧವಿರುವುದರಿಂದ **ಸಮೋಗಮ್ಯೃಚ್ಛಿಭ್ಯಾಮ್** (ಪಾ. ಸೂ. ೧-೩-೨೯) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಪ್ರಥಮಪುರುಷ ಬಹುವಚನದಲ್ಲಿ ಝಪ್ರತ್ಯಯ ಬಂದಾಗ **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಲುಕ್ ಬರುವುದರಿಂದ ಅನಕಾರದ ಪರದಲ್ಲಿ ಬಂದಂತಾಗುವುದರಿಂದ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಅತಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ **ಗಮಹನಜನ**—(ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ಅಂಗಕ್ಕೆ ಅಡಾಗಮ. ಯತ್ ಎಂಬುದರ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತನಿಷೇಧ ಬರುವುದರಿಂದ ಆದ್ಯುದಾತ್ತವಾಗುತ್ತದೆ.

**ಶುಭೇ**—ಶುಭ ದೀಪ್ತೌ. ಧಾತು. **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಚತುರ್ಥೀ ಏಕ ವಚನಾಂತರೂಪ. **ಸಾವೇಕಾಚಸ್ತೃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಖಾಃ**—ಮಖಃ ಯಜ್ಞಃ ಮಖಾಃ ಯೇಷಾಂ ಸಂತಿ ಎಂದು ಮತ್ವರ್ಥವಿವಕ್ಷಾ ಮಾಡಿದಾಗ **ಅರ್ಶ ಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಅಚ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಪ್ರಾತಿಪದಿಕದ ಅಂತ್ಯಾಕಾರಕ್ಕೆ ಲೋಪ. ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಅಮಿತಾಃ**—ನ ಮಿತಾಃ ಅಮಿತಾಃ **ತತ್ಪುರುಷೇತುಲ್ಯಾ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಜಾಯವಃ**—ಜಿ ಜಯೇ. ಧಾತು. **ಕೃವಾಪಾಜಿ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** (ಪಾ. ಸೂ. ೭-೨-೧೧೫) ಎಂಬುದರಿಂದ ಇಕಾರಕ್ಕೆ ವೃದ್ಧಿ. ಆಯಾದೇಶ. ಜಾಯು ಶಬ್ದವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

**ಯುವೋಃ**—ಯುಷ್ಮದ್ ಶಬ್ದ. ಷಷ್ಠೀ ದ್ವಿವಚನಪರವಾದಾಗ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬುದರಿಂದ **ಓಸಿ ಚ** ಎಂಬುದರಿಂದ ಏತ್ವ. ಬರುವುದಿಲ್ಲ. ಛಾಂದಸವಾಗಿ ಪರರೂಪ.

**ಚೇಕಿತೇ**—ಕಿತ ಜ್ಞಾನೇ. ಧಾತು. **ಧಾತೋರೇಕಾಚೋಹಲಾ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. ವರ್ತಮಾನಾರ್ಥತೋರುವಾಗ **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಯಙಂತದ ಮೇಲೆ ಲಿಟ್. ಯಙ್ ಙಿತ್ತಾದುದರಿಂದ ಆತ್ಮನೇಪದಿ ಪ್ರತ್ಯಯ ಬರುತ್ತದೆ. **ಲಿಟ್ಚ** (ಪಾ. ಸೂ. ೩-೪-೧೧೫) ಸೂತ್ರದಿಂದ ಲಿಡಾದೇಶ, ತಿಙಿಗೆ ಆರ್ಧಧಾತುಕಸಂಜ್ಞೆ ಬರುತ್ತದೆ. **ಸನ್ಯಙೋಃ** ಎಂಬುದರಿಂದ ಯಙಂತದ ಏಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ ಶೇಷ ಬಂದಾಗ **ಗುಣೋ ಯಙ್ ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಚುತ್ವ. ಚೇಕಿತ್ಯ ಎಂಬುದರ ಮೇಲೆ ಲಿಟ್ ಪ್ರಥಮಪುರುಷ ಏಕವಚನದಲ್ಲಿ **ಲಿಟಸ್ತಝ-ಯೋರೇಶಿರೇಚ್** (ಪಾ. ಸೂ. ೩-೪-೮೧) ಎಂಬುದರಿಂದ ಏಶಾದೇಶ. **ಅನಭ್ಯಾಸಸ್ಯ** ಎಂದು ಲಿಟ್ಟಿನಲ್ಲಿ ದ್ವಿತ್ವ ವಿಷಯದಲ್ಲಿ ನಿಷೇಧಮಾಡಿರುವುದರಿಂದ ಪುನಃ ದ್ವಿತ್ವ ಬರುವುದಿಲ್ಲ. ಲಿಣ್ನಿಮಿತ್ತವಾಗಿ **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಯಙಿನ ಅಕಾರಕ್ಕೆ ಲೋಪ. **ಯಸ್ಯ ಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಕಾರಕ್ಕೆ ಲೋಪ. ಚೇಕಿತೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಯತ್**—ಇದಕ್ಕೆ ತೃತೀಯಾ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ವಹಥಃ**—ವಹ ಪ್ರಾಪಣೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಯುವಂ ಭುಜ್ಯುಂ ಭುರಮಾಣಂ ವಿಭಿರ್ಗತಂ ಸ್ವಯುಕ್ತಿಭಿರ್ನಿ-
ವಹಂತಾ ಪಿತೃಭ್ಯ ಆ ।

ಯಾಸಿಷ್ಟಂ ವರ್ತಿರ್ವೃಷಣಾ ವಿಜೇನ್ಯಂ೧ದಿವೋದಾಸಾಯ ಮಹಿ

ಚೇತಿ ವಾಮವಃ ॥ ೪ ॥

॥ ಪದಪಾಠಃ ॥

ಯುವಂ । ಭುಜ್ಯುಂ । ಭುರಮಾಣಂ । ವಿಽಭಿಃ । ಗತಂ । ಸ್ವಯುಕ್ತಿಽಭಿಃ ।

ನಿಽವಹಂತಾ । ಪಿತೃಽಭ್ಯಃ । ಆ ।

ಯಾಸಿಷ್ಟಂ । ವರ್ತಿಃ । ವೃಷಣಾ । ವಿಽಜೇನ್ಯಂ । ದಿವಃಽದಾಸಾಯ । ಮಹಿ ।

ಚೇತಿ । ವಾಂ । ಅವಃ ॥ ೪ ॥

॥ ಸಾಯಣಭಾಷ್ಯಂ ॥

ವೃಷಣಾ ಕಾಮಾನಾಂ ವರ಼್ಿತಾರೌ ಹೇ ಅಶ್ವಿನೌ ಯುವಂ ಯುವಾಂ ಭುರಮಾಣಂ ವಿಭಿರಶ್ವೈರ್ಭ್ರಿಯಮಾಣಂ ಗತಂ ಸಮುದ್ರೇ ನಿಮಗ್ನಂ ಭುಜ್ಯುಂ ತುಗ್ರಪುತ್ರಂ ಸ್ವಯುಕ್ತಿಭಿಃ ಸ್ವಯಮೇವ ಯುಜ್ಯಮಾನೈರಶ್ವೈರ್ನೌವಿಶೇಷೈಶ್ಚ ನಿವಹಂತಾ ನಿತರಾಂ ವಹಂತೌ ಪಿತೃಭ್ಯ ಆ । ಆಙ್ ಮರ್ಯಾದಾಯಾಂ । ಯತ್ರ ಪಿತರಸ್ತುಗ್ರಾದಯ ಆಸತೇ ತಾವತ್ಪರ್ಯಂತಮಿತ್ಯರ್ಥಃ । ವಿಜೇನ್ಯಮಿತಿ ದೂರಸ್ಥಂ ಬ್ರುವತೇ । ದೂರೇ ವರ್ತಮಾನಂ ವರ್ತಿಸ್ತುಗ್ರಸ್ಯ ಗೃಹಂ ಪ್ರತಿ ಯಾಸಿಷ್ಟಂ । ಅಗಚ್ಛತಂ । ಅಪಿ ಚ ದಿವೋದಾಸಾಯ ರಾಜ್ಞೇ ಕೃತಂ ಯುವಯೋಃ ಸಂಬಂಧ್ಯವೋ ರಕ್ಷಣಂ ಶಂಬರಹನನರೂಪಂ ಮಹಿ ಮಹದ್ಗಂಭೀರಂ ಚೇತಿ । ಅಸ್ಮಾಭಿರ್ಜ್ಞಾಯತೇ ॥ ಭುರಮಾಣಂ । ಡುಭೃಞ್ ಧಾರಣಪೋಷಣಯೋಃ । ಕರ್ಮಣಿ ಲಟಃ ಶಾನಚ್ । ವ್ಯತ್ಯಯೇನ ಶಃ । ಬಹುಲಂ ಛಂದಸೀತ್ಯುತ್ವಂ । ಪಿತೃಭ್ಯ ಆ । ಮರ್ಯಾದಾಯಾಮಾಙಃ ಕರ್ಮಪ್ರವಚನೀಯಸಂಜ್ಞಾ । ಪಾ. ೧-೪-೮೯ । ಪಂಚಮ್ಯಪಾಙ್ಪರಿಭಿಃ । ಪಾ. ೨-೩-೧೦ । ಇತಿ ಪಂಚಮೀ । ಯಾಸಿಷ್ಟಂ ಯಾ ಪ್ರಾಪಣೇ । ಯಮರಮನಮಾತಾಂ ಸಕ್ಚ । ಪಾ. ೭-೨-೭೩ । ಇತಿ ಸಗಾಗಮಃ । ಸಿಚ ಇಡಾಗಮಃ । ವಿಜೇನ್ಯಂ । ವಿಜನೋ ದೂರದೇಶಃ । ತತ್ರ ಭವಂ ವಿಜೇನ್ಯಂ । ಭವೇ ಛಂದಸೀತಿ ಯತ್ । ತಿತ್ಸ್ವರಿತ ಇತಿ ಸ್ವರಿತತ್ವಂ ॥

॥ ಪದಪಾಠಃ ॥

ವೃಷಣಾ—ಅಭೀಷ್ಟದಾಯಕರಾದ ಎಲೈ ಅಶ್ವಿನೀದೇವತೆಗಳೇ । ಯುವಂ—ನೀವಿಬ್ಬರು । ವಿಭಿಃ—ಗಮನಶೀಲಗಳಾದ (ಅಶ್ವಗಳಿಂದ) । ಭುರಮಾಣಂ—ವಹಿಸಲ್ಪಡುತ್ತಿದ್ದ । ಗತಂ—(ಸಮುದ್ರದಲ್ಲಿ) ಮುಳುಗಿದ್ದ ।

**ಭುಜ್ಯುಂ**—(ತುಗ್ರಪುತ್ರನಾದ) ಭುಜ್ಯುವನ್ನು । **ಸ್ವಯುಕ್ತಿಭಿಃ**—ರಥಕ್ಕೆ ತನುಗೆ ತಾವೇ ಕಟ್ಟಿಕೊಳ್ಳುವ (ನಿಮ್ಮ) (ಅಶ್ವಗಳಿಂದ ಮತ್ತು ನಾವೆಗಳಿಂದ) । **ನಿವಹಂತಾ**—ಕರೆದುಕೊಂಡು । **ಪಿತೃಭ್ಯಃ ಆ**—(ಅವನ) ತಂದೆಯ ಸಂಬಂಧವಾದ । **ವಿಜೇನ್ಯಂ**—(ಬಹು) ದೂರದಲ್ಲಿದ್ದ । **ವರ್ತಿಃ**—(ತುಗ್ರನ) ಮನೆಗೆ । **ಯಾಸಿಷ್ಟಂ**—ಹೋದಿರಿ । **(ಅಪಿ ಚ**—ಮತ್ತು) । **ದಿವೋದಾಸಾಯ**—ದಿವೋದಾಸನೆಂಬ ರಾಜನಿಗೆ । **ವಾಂ**—ನಿಮ್ಮ ಸಂಬಂಧವಾದ (ನಿಮ್ಮಿಂದ ದತ್ತವಾದ) । **ಅವಃ**—(ಶಂಬರಹನನರೂಪವಾದ) ರಕ್ಷಣೆಯು । **ಮಹಿ**—ಮಹತ್ತಾದುದು । **ಚೇತಿ**—(ಎಂಬುದಾಗಿ ನಮ್ಮಿಂದ) ತಿಳಿಯಲ್ಪಟ್ಟಿದೆ.

॥ ಭಾವಾರ್ಥ ॥

ಅಭೀಷ್ಟದಾಯಕರಾದ ಅಶ್ವಿನೀದೇವತೆಗಳೇ, ಸ್ವಕೀಯಾಶ್ವಗಳೊಡನೆ ಸಮುದ್ರದಲ್ಲಿ ಮಗ್ನನಾಗಿದ್ದ ತುಗ್ರಪುತ್ರನಾದ ಭುಜ್ಯುವನ್ನು ತಾವಾಗಿಯೇ ರಥಕ್ಕೆ ಹೂಡಿಸಿಕೊಳ್ಳುವ ಸಾಮರ್ಥ್ಯವುಳ್ಳ (ನಿಮ್ಮ ಕುದುರೆಗಳಿಂದ) (ಮತ್ತು ನಾವೆಗಳಿಂದ) ಅವನ ತಂದೆಯಾದ ತುಗ್ರನ ಮನೆಗೆ ಕರೆದುಕೊಂಡು ಹೋದಿರಿ ಮತ್ತು ದಿವೋದಾಸ ರಾಜನಿಗೆ ನೀವು ಕೊಟ್ಟ ರಕ್ಷಣೆ (ಎಂಬ ಈ ಕರ್ಮಗಳು) ಮಹತ್ತರವಾದುವು ಎಂದು ನಾವು ತಿಳಿದಿದ್ದೇವೆ.

## English Translation

You brought back to his ancestors Bhujyu, who, borne by his own steeds, had perished, (but that you rescued him) with your self-harnessed horses, and went, showerers (of benefits), to his distant dwelling; and great was the succour which it is known you rendered to Divodasa.

॥ ವಿಶೇಷವಿಷಯಗಳು ॥

ತುಗ್ರರಾಜನು ದ್ವೀಪಾಂತರದಲ್ಲಿ ಸೇರಿಕೊಂಡು ತನಗೆ ತೊಂದರೆಯನ್ನು ಕೊಡುತ್ತಿದ್ದ ಶತ್ರುಗಳನ್ನು ನಾಶಮಾಡಲು ಉದ್ಯುಕ್ತನಾಗಿ ತನ್ನ ಮಗನಾದ ಭುಜ್ಯುವಿನೊಡನೆ ಸೇನೆಯನ್ನು ಕಳುಹಿಸಿದನು. ಭುಜ್ಯುವು ಸಮುದ್ರದ ಮಧ್ಯದಲ್ಲಿ ನಾವೆಯಿಂದ ಸೇನಾಸಮೇತನಾಗಿ ಹೋಗುತ್ತಿರುವಾಗ ಹಡಗು ಒಡೆದುಹೋದ ಕಾರಣ ನೀರಿನಲ್ಲಿ ಮುಳುಗಿ ಹೋಗುತ್ತಿದ್ದನು ಆಗ ಅಶ್ವಿನೀದೇವತೆಗಳು ಅವನು ಸ್ಮರಿಸಿದ ಅಥವಾ ಸ್ತುತಿಮಾಡಿದ ಸ್ತುತಿಯನ್ನು ಕೇಳಿ ಜಾಗ್ರತೆಯಾಗಿ ನಾವೆಗಳನ್ನೂ ಕುದುರೆಗಳನ್ನೂ ತಂದು ತಾವೇ ಸ್ವಂತವಾಗಿ ಭುಜ್ಯುವನ್ನೂ ಅವನ ಸೇನೆಯವರನ್ನೂ ದಡಕ್ಕೆ ತಂದು ಅಲ್ಲಿಂದ ಅವನ ತಂದೆಯಾದ ತುಗ್ರರಾಜನ ಮನೆಗೆ ಕರೆದುಕೊಂಡು ಬಂದು ರಕ್ಷಿಸಿದರು ಎಂಬ ಅಶ್ವಿನೀದೇವತೆಗಳ ಮಹಿಮೆಯೂ, ಮತ್ತು ದಿವೋದಾಸನೆಂಬ ರಾಜನು ಯಜ್ಞವನ್ನು ಮಾಡಲು ಉಪಕ್ರಮಿಸಿದಾಗ ಶಂಬರನೆಂಬ ರಾಕ್ಷಸನಿಂದ ಅವನ ಯಜ್ಞವು ನಷ್ಟವಾಗಿ ಅವನಿಗೂ ಅಪಾಯವು ಉಂಟಾಗುವುದನ್ನು ತಿಳಿದು ಅಶ್ವಿನೀದೇವತೆಗಳು ಶಂಬರಾಸುರನನ್ನು ಕೊಂದು ದಿವೋದಾಸರಾಜನನ್ನು ರಕ್ಷಿಸಿರುವರು ಎಂಬ ಅವರ ಪ್ರಭಾವವೂ ಈ ಋಕ್ಕಿನಲ್ಲಿ ವರ್ಣಿತವಾಗಿದೆ.

ಸ್ಕಂದಸ್ವಾಮಿಗಳ ವ್ಯಾಖ್ಯಾನದಲ್ಲಿಯೂ—ಸಾಯಣರ ವ್ಯಾಖ್ಯಾನದಲ್ಲಿಯೂ ತಾತ್ಪರ್ಯವು ಒಂದೇ ವಿಧವಾಗಿದ್ದರೂ ಕೆಲವು ಪದಗಳ ಅರ್ಥವು ವ್ಯತ್ಯಾಸವಾಗಿ ಇರುತ್ತದೆ. **ಪಿತೃಭ್ಯಃ ಆ** ಎಂಬ ಪದಕ್ಕೆ ಸಾಯಣರು **ಯತ್ರ**

**ಪಿತರಃ ತುಗ್ರಾದಯಃ ಆಸತೇ ತಾವತ್ಪರ್ಯಂತಂ ।** ಪಿತೃಗಳಾದ ತುಗ್ರನೇ ಮೊದಲಾದವರು ಇರುವ ಪ್ರದೇಶದ ವರಿಗೂ ಎಂದು ಅರ್ಥವನ್ನು ಹೇಳುವರು. ಸ್ಕಂದಸ್ವಾಮಿಗಳು **ಪಿತ್ರ್ಯಾಣಾಮರ್ಥಾಯ— ಪಿತ್ರ್ಯಾಣಾಮಸ್ಯ ಸ್ವರ್ಗಾದ ಪ್ರಚ್ಯುತಿಹೇತೋಃ ಪ್ರಜಾಸಂತಾನಾದೇರವಿಚ್ಛೇದಾರ್ಥಂ** ಇವನ ಪಿತೃಗಳು ಸ್ವರ್ಗದಿಂದ ಕೆಳಕ್ಕೆ ಬೀಳದಿರುವಂತೆ ಪ್ರಜೆಗಳೂ ಸಂತತಿಯೂ ಸಂತತವಾಗಿ ಉಂಟಾಗುವುದಕ್ಕಾಗಿ ಎಂದು ವ್ಯಾಖ್ಯಾನಮಾಡಿರುವರು.

ವಿಭಿಃ— **ಅಶ್ವೈಃ ।** ಕುದುರೆಗಳಿಂದ ಎಂದು ಸಾಯಣರ ವ್ಯಾಖ್ಯಾನ. **ಪಕ್ಷಿಸದೃಶೈಃ ಅಶ್ವೈಃ**—ಪಕ್ಷಿಗಳಿಗೆ ಸಮನಾಗಿ ವೇಗಶಾಲಿಗಳಾದ ಕುದುರೆಗಳಿಂದು ಸ್ಕಂದಸ್ವಾಮಿಗಳ ವಿವರಣೆ.

**ಭುರಮಾಣಂ—ಭ್ರಿಯಮಾಣಂ ।** ಅಶ್ವಗಳಿಂದ ವಹಿಸಲ್ಪಡುವವನೆಂದು ಸಾಯಣರೂ, **ಭುರತಿರ್ಗ್ರಸನಾರ್ಥಃ ಗ್ರಸ್ಯಮಾನಂ ಮತ್ಸ್ಯೈರ್ಮಕರೈಶ್ಚ ।** ಭುರ ಧಾತುವಿಗೆ ನುಂಗುವುದು ಎಂದು ಅರ್ಥವಾಗುವುದರಿಂದ ಮತ್ಸ್ಯ ಮತ್ತು ಮೊಸಳೆ ಇವುಗಳಿಂದ ನುಂಗಲ್ಪಡುತ್ತಿರುವವನೆಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುವರು.

**ವರ್ತಿಃ**—ಗೃಹಂ ಪ್ರತಿ ವರ್ತನ್ಯಾ ಮಾರ್ಗೇಣ । ಗೃಹವೆಂದು ಸಾಯಣರ ಅರ್ಥ. ದಾರಿ ಎಂದು ಸ್ಕಂದಸ್ವಾಮಿಗಳು ವರ್ತಿಶಬ್ದಕ್ಕೆ ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಭುರಮಾಣಮ್**—ಡುಭೃಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩–೧–೮೫) ಎಂಬುದರಿಂದ ಶ್ಲುವಿಗೆ ಬದಲಾಗಿ ಶವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. **ಉರಣ್ರಪರಃ** ಎಂಬ ಪರಿಭಾಷೆಯಿಂದ ರಪರವಾಗಿ ಬರುತ್ತದೆ. **ಆನೇಮುಕ್** (ಪಾ. ಸೂ. ೭–೨–೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಭುರಮಾಣ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬–೧–೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಶ ವಿಕರಣಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಗತಮ್**—ಗಮ್ಲೃ ಗತೌ ಧಾತು. ಇದಕ್ಕೆ ಕ್ತ ಪ್ರತ್ಯಯ ಪರವಾದಾಗ **ಅನುದಾತ್ತೋಪದೇಶವನತಿ**—(ಪಾ. ಸೂ. ೬–೪–೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ನಿವಹಂತಾ**—ನಿ ಉಪಸರ್ಗ. ವಹ ಪ್ರಾಪಣೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿ ಸ್ವರ ಬರುತ್ತದೆ. ದ್ವಿವಚನ ಔಕಾರವಿಭಕ್ತಿಗೆ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ.

**ಪಿತೃಭ್ಯಃ ಆ**—ಆಙ್ ಉಪಸರ್ಗ. **ಆಙ್ಮರ್ಯಾದಾವಚನೇ**— (ಪಾ. ಸೂ. ೧–೪–೮೯) ಎಂಬುದರಿಂದ ಮರ್ಯಾದಾರ್ಥದಲ್ಲಿ (ಅದನ್ನು ಬಿಟ್ಟು ಅವಧಿ ಹೇಳುವಲ್ಲಿ ಮರ್ಯಾದಾ ಎಂದು ಹೆಸರು.) ಇದಕ್ಕೆ ಕರ್ಮ

ಪ್ರವಚನೀಯಸಂಜ್ಞಾ ಬರುವುದರಿಂದ **ಪಂಚಮ್ಯಪಾಙ್ಪರಿಭಿಃ**—(ಪಾ. ಸೂ. ೨-೩-೧೦) ಎಂಬುದರಿಂದ ಅದರ ಸಂಬಂಧವಿರುವ ಪಿತೃ ಶಬ್ದಕ್ಕೆ ಪಂಚಮೀ ವಿಭಕ್ತಿ ಬರುತ್ತದೆ.

**ಯೊಸಿಷ್ಟಮ್**—ಯಾ ಪ್ರಾಪಣೇ ಧಾತು. ಲುಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್ಥಸ್ಥಮಿಪಾಂ**—ಎಂಬುದರಿಂದ ತಮಾದೇಶ. **ಯಮರಮನಮಾತಾಂ ಸಕ್ಚ**— (ಪಾ. ಸೂ. ೭-೨-೭೩) ಎಂಬುದರಿಂದ ಧಾತುವಿಗೆ ಸಕಾಗಮ, ಲುಙಿನಲ್ಲಿ ಚ್ಲಿಗೆ ಬಂದ ಸಿಚ್ಚಿಗೆ ಇಡಾಗಮ. **ಆದೇಶಪ್ರತ್ಯಯಯೋಃ**—ಎಂಬುದರಿಂದ ಸಿಚ್ಚಿನ ಸಕಾರಕ್ಕೆ ಷತ್ವ. ತನ್ನಿಮಿತ್ತವಾಗಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯಾಸಿಷ್ಟಮ್ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಜೇನ್ಯಮ್**—ವಿಜನವೆಂದರೆ ದೂರದೇಶ. ವಿಜನೇ ಭವಮ್ ವಿಜೇನ್ಯಮ್. **ಭವೇ ಛಂದಸಿ** (ಪಾ. ಸೂ ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಛಾಂದಸವಾಗಿ ಏತ್ವ ಬರುತ್ತದೆ. ಪ್ರತ್ಯಯ ತಿತ್ತಾದುದರಿಂದ **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ದಿವೋದಾಸಾಯ—ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಮ್** (ಪಾ. ಸೂ. ೬-೨-೯೧-೧) ಎಂಬುದರಿಂದ ಪೂರ್ವಪದಾದ್ಯುದಾತ್ತಸ್ವರ ಬರುತ್ತದೆ. || ೪ ||



|| ಸಂಹಿತಾಪಾಠಃ ||

ಯುವೋರಶ್ವಿನಾ ವಪುಷೇ ಯುವಾಯುಜಂ ರಥಂ ವಾಣೀ ಯೇಮತುರಸ್ಯ ಶರ್ಧ್ಯಂ ।

ಆ ವಾಂ ಪತಿತ್ವಂ ಸಖ್ಯಾಯ ಜಗ್ಮುಷೀ ಯೋಷಾವೃಣೀತ ಜೇನ್ಯಾ ಯುವಾಂ ಪತೀ || ೫ ||

॥ ಪದಪಾಠಃ ॥

ಯುವೋಃ । ಅಶ್ವಿನಾ । ವಪುಷೇ । ಯುವಾऽಯುಜಂ । ರಥಂ । ವಾಣೀ ಇತಿ ।
ಯೇಮತುಃ । ಅಸ್ಯ । ಶರ್ಧ್ಯಂ ।
ಆ । ವಾಂ । ಪತಿऽತ್ವಂ । ಸಖ್ಯಾಯ । ಜಗ್ಮುಷೀ । ಯೋಷಾ । ಅವೃಣೀತ ।
ಜೇನ್ಯಾ । ಯುವಾಂ । ಪತೀ ಇತಿ ॥ ೫ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ಯುವೋರ್ಯುವಯೋರ್ವಾಣೀ ವನನೀಯೌ ಪ್ರಶಸ್ಯಾವಶ್ವೌ ಯುವಾಯುಜಂ ಯುವಾಭ್ಯಾಂ ಯುಜ್ಯಮಾನಂ ರಥಮಾಜಿಧಾವನಸಮಯೇऽಸ್ಯ ರಥಸ್ಯ ಯಚ್ಛರ್ಧ್ಯಂ ಪ್ರಾಪ್ಯಮಾದಿತ್ಯಾಖ್ಯಮವಧಿಭೂತಂ ಲಕ್ಷ್ಯಂ ವಪುಷೇ ಶೋಭಾರ್ಥಂ ತದ್ಯೇಮತುಃ । ಸರ್ವೇಭ್ಯೋ ದೇವೇಭ್ಯಃ ಪೂರ್ವಂ ಪ್ರಾಪಯಾಮಾಸತುಃ । ತದನಂತರಂ ಚಾ ಜಗ್ಮುಷ್ಯಾಗತವತೀ ಜೇನ್ಯಾಜಿಧಾವನೇನ ಜೀಯಮಾನಾ ಯೋಷಾ ಸೂರ್ಯಾ ಸಖ್ಯಾಯ ಸಖಿತ್ವಾಯ ಯುವಾಂ ಯುವಯೋಃ ಪತಿತ್ವಮವೃಣೀತ । ಕಥಮಿತಿ । ಮಮ ಯುವಾಮೇವ ಪತೀ ಭರ್ತಾರಾವಿತಿ ॥ ಯುವೋಃ । ಷಷ್ಠೀದ್ವಿವಚನೇ ಯೋऽಚೀತಿ ಯತ್ವಸ್ಯ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದಭಾವೇ ಶೇಷೇ ಲೋಪ ಇತಿ ದಕಾರಲೋಪಃ । ಅತೋ ಗುಣ ಇತಿ ಪರರೂಪತ್ವಂ । ಯುವಾಯುಜಂ । ಯುವಾವೌ ದ್ವಿವಚನ ಇತಿ ದ್ವ್ಯರ್ಥಾಭಿಧಾಯಕಸ್ಯ ಯುಷ್ಮಚ್ಛಬ್ದಸ್ಯಾವಿಭಕ್ತಾವಪಿ ವ್ಯತ್ಯಯೇನ ಯುವಾದೇಶಃ । ಶರ್ಧ್ಯಂ । ಶೃಧು ಪ್ರಸಹನೇ । ಅಸ್ಮಾಣ್ಣ್ಯಂತಾದಚೋ ಯದಿತಿ ಯತ್ । ಯತೋऽನಾವ ಇತ್ಯಾದ್ಯುದಾತ್ತತ್ವಂ । ಜಗ್ಮುಷೀ । ಗಮೇರ್ಲಿಟಃ ಕ್ವಸುಃ । ಉಗಿತಶ್ಚೇತಿ ಙೀಪ್ । ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಗಮಹನೇತ್ಯುಪಧಾಲೋಪಃ । ಜೇನ್ಯಾ । ಜಿ ಜಯೇ । ಔಣಾದಿಕ ಏನ್ಯಪ್ರತ್ಯಯಷ್ಟಿಲೋಪಶ್ಚ ॥

॥ ಪ್ರತಿಪದಾರ್ಥ ॥

**ಹೇ ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವೋಃ**—ನಿಮ್ಮ । **ವಾಣೀ**—ಪ್ರಶಸ್ಯವಾದ (ಅಶ್ವಗಳು) । **ಯುವಾಯುಜಂ**—ನಿಮ್ಮಿಂದ ಹೂಡಲ್ಪಟ್ಟ । **ರಥಂ**— ರಥವನ್ನು । **ಅಸ್ಯ**—ಈ ರಥದ । **ಶರ್ಧ್ಯಂ**—(ಪಂದ್ಯದಲ್ಲಿ) ಲಕ್ಷ್ಯವನ್ನು (ಆದಿತ್ಯನನ್ನು) । **ವಪುಷೇ**—ಕೀರ್ತಿಗೋಸ್ಕರ (ಕೀರ್ತಿಗಳಿಸುವುದಕ್ಕೋಸ್ಕರ) । **ಯೇಮತುಃ**—(ಎಲ್ಲರಿಗಿಂತ ಮೊದಲು) ಸೇರಿದವು (ಅನಂತರ) । **ಆ ಜಗ್ಮುಷೀ**—ಬಂದ । **ಜೇನ್ಯಾ**—(ಪಂದ್ಯದಲ್ಲಿ)

ಪಣವಾಗಿದ್ದ । ಯೋಷಾ—ಸೂರ್ಯಪುತ್ರಿಯು । ಸಖ್ಯಾಯ—ಸ್ನೇಹಕ್ಕೋಸ್ಕರ । ಯುವಾಂ—ನೀವಿಬ್ಬರೂ । ಪತೀ ಇತಿ—(ನನಗೆ) ಪತಿಗಳೆಂದು । ವಾಂ—ನಿಮ್ಮಿಬ್ಬರ । ಪತಿತ್ವಂ—ಪತಿತ್ವವನ್ನು (ಸ್ವಾಮಿತ್ವವನ್ನು) ಅವೃಣೀತ—ವರಿಸಿದಳು (ಒಪ್ಪಿಕೊಂಡಳು).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಪ್ರಶಸ್ಯನಾದ ಅಶ್ವಗಳು, ನಿಮ್ಮಿಂದ ಹೂಡಲ್ಪಟ್ಟ ರಥವನ್ನು, (ಪಂದ್ಯದಲ್ಲಿ) ಲಕ್ಷ್ಯವಾಗಿದ್ದ (ಆದಿತ್ಯನನ್ನು ಎಲ್ಲರಿಗಿಂತಲೂ ಮೊದಲು) ಸೇರಿಸಿ ಕೀರ್ತಿಗಳಿಸಿದವು ; ಅನಂತರ ಪಣರೂಪಳಾಗಿದ್ದ ಸೂರ್ಯಪುತ್ರಿಯು (ನಿಮ್ಮ ಮೇಲಿನ ವಿಶ್ವಾಸಕ್ಕಾಗಿ) ನೀವೇ (ನನ್ನ) ಪತಿಗಳೆಂದು ನಿಮ್ಮನ್ನು ವರಿಸಿದಳು.

## English Translation.

Aswins, your admirable (horses) bore the car which you had harnessed, (first) to the goal, for the sake of honour, and the damsel, who was the prize, came, through affection, to you, and acknowledged your (husbandship), saying " You are (my) lords".

॥ ವಿಶೇಷವಿಷಯಗಳು ॥

ಸೂರ್ಯಪುತ್ರಿಯಾದ ಸೂರ್ಯಾ ಎಂಬುವಳ ಸ್ವಯಂವರದಲ್ಲಿ ನಿಮ್ಮ ರಥವು ಇತರ ದೇವತೆಗಳೆಲ್ಲರ ರಥಕ್ಕಿಂತಲೂ ವೇಗವಾಗಿ ಸಂಚರಿಸುವಂತೆ ನೀವು ಕುದುರೆಗಳನ್ನು ನಿಮ್ಮ ರಥಕ್ಕೆ ಸೇರಿಸಿದ ಕ್ಷಣದಲ್ಲಿಯೇ ದೇವತೆಗಳೊಡನೆ ಕ್ಲೃಪ್ತವಾಗಿದ್ದ ಪಣವನ್ನು ಗೆಲ್ಲುವುದಕ್ಕಾಗಿ ಹೊರಟ ನಿಮ್ಮ ರಥವು ಆದಿತ್ಯರೂಪವಾದ ಲಕ್ಷ್ಯವನ್ನು ಸೇರಿತು. ಇತರ ದೇವತೆಗಳೆಲ್ಲರಿಗಿಂತಲೂ ಮೊದಲು ಲಕ್ಷ್ಯವನ್ನು ತಲಪಿದಕಾರಣ ಸೂರ್ಯಾದೇವಿಯು ನಿಮ್ಮ ಶಕ್ತಿಗೆ ಮೆಚ್ಚಿ, ನಿಮ್ಮ ರಥಕ್ಕೆ ತಾನಾಗಿಯೇ ಬಂದು ಸೇರಿದಳು ಎಂದು ಅಶ್ವಿನೀದೇವತೆಗಳ ರಥದ ಮತ್ತು ಅವರ ಪ್ರಭಾವವೂ ವಿವೃತವಾಗಿರುವುದು. ದೇವತೆಗಳಲ್ಲಿಯೇ ಪರಸ್ಪರವಾಗಿ ಉತ್ಕರ್ಷವನ್ನು ಕಂಡುಹಿಡಿಯಲು ವಿವಾದವು ಉಂಟಾದಾಗ ಈ ಅಶ್ವಿನೀದೇವತೆಗಳ ಪ್ರಭಾವವು ಅತ್ಯಧಿಕವಾದುದೆಂದು ಪೂರ್ವದಲ್ಲಿಯೇ (ನಿಷ್ಕೃಷ್ಟ) ನಿಶ್ಚಿತವಾಗಿರುವುದೂ ಕೂಡ ಇಲ್ಲಿ ವರ್ಣಿತವಾಗಿದೆ.

**ವಾಣೀ—ವನನೀಯೌ ಪ್ರಶಸ್ಯೌ ಅಶ್ವೌ** । ಶ್ಲಾಘಿಸಲು ಅರ್ಹವಾದ ಕುದುರೆಗಳು ಎಂದು ಸಾಯಣರು ಅರ್ಥಮಾಡಿರುವರು. ವಾಙ್ನಾಮಗಳಲ್ಲಿ (ನಿ. ೨–೨೩) ಉಕ್ತವಾಗಿರುವುದರಿಂದ ವಾಕ್ಕೆಂದು ಅರ್ಥ.

**ಸುಗಾನ್ ಪಥೋ ಅಕೃಣೋನ್ನಿರಜೇ ಗಾಃ ಪ್ರಾವನ್ ವಾಣೀಃ ಪುರುಹೂತಂ ಧಮಂತೀಃ ।**

(ಋ. ಸಂ. ೩–೩೦–೧೦)

**ವಾಣೀಃ ಆಪಃ, ವಹನಾತ್ ವಾಣೀಃ, ವದನಾತ್ ವಾಚಃ ವಾಣೀಃ** । (ನಿ. ೬–೩) ಎಂದು ಯಾಸ್ಕರು ವ್ಯಾಖ್ಯಾನಮಾಡಿರುವುದರಿಂದ ವಾಣೀ ಎಂದರೆ ಉದಕಗಳು, (ಮಾತುಗಳು) ವಾಕ್ಕುಗಳು ಎಂದು ಅರ್ಥವನ್ನು

ನಿರುಕ್ತಕಾರರು ವಿವರಿಸುತ್ತಾರೆ. ಸ್ಕಂದಸ್ವಾಮಿಗಳು— ವಾಣೀ ಶಬ್ದವು **ಅಪಠಿತಮಪಿ ಇದಂ ದ್ಯಾವಾಪೃಥಿವೀ ನಾಮಧೇಯಂ** ದ್ಯಾವಾಪೃಥಿವೀನಾಮಗಳಲ್ಲಿ ಈ ಶಬ್ದವು ಉಕ್ತವಾಗದಿದ್ದರೂ ದ್ಯಾವಾಪೃಥಿವಿಗಳೆಂದು ಅರ್ಥವನ್ನು ಇಲ್ಲಿ ಹೇಳಿರುತ್ತದೆ ಎಂದು ಅರ್ಥವನ್ನು ವಿವರಿಸಿರುತ್ತಾರೆ.

**ಶರ್ಧ್ಯ—ಶರ್ಧಃ ಇತಿ ಬಲನಾಮ ।** ಶರ್ಧ್ಯ ಶಬ್ದವು ಬಲನಾಮಗಳಲ್ಲಿ ಉಕ್ತವಾಗಿರುವುದರಿಂದ (ನಿ. ೩-೯) ಬಲವೆಂದು ಅರ್ಥ.

ಸ್ಕಂದಸ್ವಾಮಿಗಳು ಇಲ್ಲಿ ಒಂದು ಇತಿಹಾಸವನ್ನು ಹೇಳಿರುವರು—

**ಅತ್ರೇತಿಹಾಸಮಾಚಕ್ಷತೇ—ಅಶ್ವಿನೌ ಕಾಷ್ಠಮಯೇನ ದುರ್ಬಲೇನ ರಥೇನ ಗಚ್ಛಂತೌ ದೃಷ್ಟ್ವಾ ವೃತ್ರೋ ಅಪಜಹಾಸ । ತಚ್ಛ್ರುತ್ವಾ ಅಮರ್ಷೇಣ ದ್ಯಾವಾಪೃಥಿವ್ಯೌ ತಂ ರಥಂ ಸುವರ್ಣಖಚಿತಂ ಬಲವಂತಂ ಚಕ್ರತುರಿತಿ ।**

ಅಶ್ವಿನೀದೇವತೆಗಳು (ಮರದಿಂದ) ಕಟ್ಟಿಗೆಯಿಂದ ಮಾಡಿದ ಬಲವಿಲ್ಲದ ರಥದಿಂದ ಪ್ರಯಾಣಮಾಡುತ್ತಿರುವುದನ್ನು ನೋಡಿ ವೃತ್ರಾಸುರನು ಅಪಹಾಸ್ಯಮಾಡಿದನು. ಅದನ್ನು ಕೇಳಿ ದ್ಯಾವಾಪೃಥಿವಿಗಳು ಆ ರಥವನ್ನು ಸುವರ್ಣಖಚಿತವಾದದ್ದನ್ನಾಗಿಯೂ, ಬಹಳ ಶಕ್ತಿಯುಳ್ಳದ್ದನ್ನಾಗಿಯೂ ಮಾಡಿದರು. **ವಾಣೀ ರಥಂ ಯೋಮಥುರಸ್ಯ ಶರ್ಧ್ಯಂ** ದ್ಯಾವಾಪೃಥಿವಿಗಳು ಅಶ್ವಿನೀದೇವತೆಗಳ ರಥವನ್ನು ಶಕ್ತಿಯುಳ್ಳದ್ದನ್ನಾಗಿ ಮಾಡಿದರು ಎಂದು ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಯುವೋಃ**—ಯುಷ್ಮದ್ ಶಬ್ದ. ಇದಕ್ಕೆ ಷಷ್ಠೀ ದ್ವಿವಚನ ಪರವಾದಾಗ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ**—ಎಂಬ ವಚನಾನುಸಾರವಾಗಿ **ಯೋಽಚಿ** (ಪಾ. ಸೂ. ೭-೨-೮೯) ಎಂಬುದರಿಂದ ಯಾದೇಶವು ಅಜಾದಿಪರವಾದರೂ ಬರುವುದಿಲ್ಲ. **ಯುವಾವೌ ದ್ವಿವಚನೇ** (ಪಾ. ಸೂ. ೭-೨-೯೨) ಎಂಬುದರಿಂದ ಮಪರ್ಯಂತಕ್ಕೆ ಯುವಾದೇಶ. ಪರರೂಪ ಬಂದಾಗ **ಶೇಷೇ ಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ದಕಾರಕ್ಕೆ ಲೋಪ. ಅಕಾರಕ್ಕೆ ಗುಣ (ಓಕಾರ) ಪರವಾದುದರಿಂದ **ಅತೋ ಗುಣೇ** (ಪಾ. ಸೂ. ೬-೧-೯೭) ಎಂಬುದರಿಂದ ಪರರೂಪ. ಸಕಾರಕ್ಕೆ ರುತ್ವ ವಿಸರ್ಗ. ಯುವೋಃ ಎಂದು ರೂಪವಾಗುತ್ತದೆ.

**ಯುವಾಯುಜಮ್**— ಯುಜ್ಯತೇ ಇತಿ ಯುಕ್. ಯುಜಿರ್ ಯೋಗೇ ಧಾತು. ಕ್ವಿಪ್ ಪ್ರತ್ಯಯ. ಯುವಾಭ್ಯಾಂ ಯುಜ್ಯತೇ ಇತಿ ಯುವಾಯುಕ್. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಇಲ್ಲಿ ಯುಷ್ಮಚ್ಛಬ್ದವು ವಿಭಕ್ತಿಪರವಾಗಿರದಿದ್ದರೂ ದ್ವ್ಯರ್ಥಾಭಿಧಾಯಕವಾಗಿರುವುದರಿಂದ ಅದರ ಮಪರ್ಯಂತಕ್ಕೆ ಯುವಾದೇಶ ಬರುತ್ತದೆ, **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಯೇಮತುಃ**—ಯಮ ಉಪರಮೇ ಧಾತು. ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ ಕಿತ್ವಾದೇಶವಿರುವುದರಿಂದ **ಅತ ಏಕಹಲ್ಮಧ್ಯೇ**—(ಪಾ. ಸೂ. ೬–೪–೧೨೦) ಎಂಬುದರಿಂದ ಧಾತುವಿಗೆ ಏತ್ವಾಭ್ಯಾಸಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶರ್ಧ್ಯಂ**—ಶೃಧು ಪ್ರಸಹನೇ ಧಾತು. ಇದಕ್ಕೆ **ಹೇತುಮತಿ ಚ** (ಪಾ. ಸೂ. ೩–೧–೨೬) ಎಂಬುದರಿಂದ ಣಿಚ್. ಅಜಂತವಾದುದರಿಂದ **ಅಚೋ ಯತ್** (ಪಾ. ಸೂ. ೩–೧–೯೭) ಎಂಬುದರಿಂದ ಇದಕ್ಕೆ ಯತ್ ಪ್ರತ್ಯಯ. ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಣೇರನಿಟಿ** (ಪಾ. ಸೂ. ೬–೪–೫೧) ಎಂಬುದರಿಂದ ಯತ್ ನಿಮಿತ್ತವಾಗಿ ಣಿಚ್ಚಿಗೆ ಲೋಪ. **ಯತೋಽನಾವಃ** (ಪಾ. ಸೂ. ೬–೧–೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಖ್ಯಾಯ**—ಸಖ್ಯುರ್ಭಾವಃ ಸಖ್ಯಮ್. **ಸಖ್ಯುರ್ಯಃ** (ಪಾ. ಸೂ. ೫–೧–೧೨೬) ಎಂಬುದರಿಂದ ಯಪ್ರತ್ಯಯ. **ಯಸ್ಯೇತಿ ಚ** (ಪಾ. ಸೂ. ೬–೪–೧೪೮) ಸೂತ್ರದಿಂದ ಇಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಜಗ್ಮುಷೀ**—ಗಮ್ಲೃ ಗತೌ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩–೨–೧೦೭) ಎಂಬುದರಿಂದ ಕ್ವಸು ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಚುತ್ವ. **ಗಮಹನಜನ**–(ಪಾ. ಸೂ. ೬–೪–೯೮) ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ಲೋಪ. ಇದಕ್ಕೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಉಗಿತಶ್ಚ** (ಪಾ. ಸೂ. ೪–೧–೬) ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬–೪–೧೩೧) ಎಂಬುದರಿಂದ ವಸುವಿನ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಅವೃಣೀತ**—ವೃಞ್ ವರಣೇ. ಧಾತು. ಕ್ರ್ಯಾದಿ. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಜೇನ್ಯಾ**—ಜಿ ಜಯೇ, ಧಾತು. ಇದಕ್ಕೆ ಉಣಾದಿಸಿದ್ಧವಾದ ಏನ್ಯ ಪ್ರತ್ಯಯ, ತತ್ಸಂನಿಯೋಗದಿಂದ ಧಾತುವಿನ ಟಿಗೆ ಲೋಪ. ಜೇನ್ಯ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಏಕಾರ ಉದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತವನ್ನು ನಿಮಿತ್ತೀಕರಿಸಿ ಟಾಪ್ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಯುವಂ ರೇಭಂ ಪರಿಷೂತೇರುರುಷ್ಯಥೋ ಹಿಮೇನ ಘರ್ಮಂ
ಪರಿತಪ್ತಮತ್ರಯೇ ।
ಯುವಂ ಶಯೋರವಸಂ ಪಿಪ್ಯಥುರ್ಗವಿ ಪ್ರ ದೀರ್ಘೇಣ ವಂದ-
ನಸ್ತಾರ್ಯಾಯುಷಾ ॥ ೬ ॥

॥ ಪದಪಾಠಃ ॥

ಯುವಂ । ರೇಭಂ । ಪರಿಽಸೂತೇಃ । ಉರುಷ್ಯಥಃ । ಹಿಮೇನ । ಘರ್ಮಂ ।
ಪರಿಽತಪ್ತಂ । ಅತ್ರಯೇ ।
ಯುವಂ । ಶಯೋಃ । ಅವಸಂ । ಪಿಪ್ಯಥುಃ । ಗವಿ । ಪ್ರ । ದೀರ್ಘೇಣ । ವಂದನಃ ।
ತಾರಿ । ಆಯುಷಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಂ ಯುವಾಂ ರೇಭಮೃಷಿಂ ಪರಿಷೂತೇಃ ಪರಿತಃ ಪ್ರೇರಕಾದುಪದ್ರವಾತ್ಕೋಪಪತನಾದ್ವೋರುಷ್ಯಥಃ । ರಕ್ಷಥಃ । ಉರುಷ್ಯತೀ ರಕ್ಷಾಕರ್ಮೇತಿ ಯಾಸ್ಕಃ । ನಿ. ೫–೨೩ । ತಥಾತ್ರಯಋಷಯೇ ಪರಿತಪ್ತಂ ಪರಿತಸ್ತ್ರಪ್ತಂ ಘರ್ಮಮಸುರೈಃ ಪೀಡಾರ್ಥಂ ಪ್ರಕ್ಷಿಪ್ತಂ ದೀಪ್ಯಮಾನಂ ತುಷಾಗ್ನಿಂ ಹಿಮೇನ ಶೀತೇನೋದಕೇನಾವಾರಯೇಥಾಂ । ಯದ್ವಾ । ಹವಿಷಾಮತ್ರಯೇ ಭಕ್ಷಯಿತ್ರೇಽಗ್ನಯೇ ಪರಿತಪ್ತಂ ಸೂರ್ಯಕಿರಣೈಃ ಸಂತಪ್ತಂ ಘರ್ಮಂ । ಅಹರ್ನಾಮೈತತ್ । ಅಹರ್ಹಿಮೇನ ವೃಷ್ಟ್ಯುದಕೇನ ಹವಿಃಸಂಪಾದಕವ್ರೀಹ್ಯಾದ್ಯುತ್ಪತ್ತ್ಯರ್ಥಮವಾರಯೇಥಾಂ । ಅಪಿ ಚ ಶಯೋರೇತತ್ಸಂಜ್ಞಸ್ಯರ್ಷೇರ್ಗವಿ ನಿವೃತ್ತಪ್ರಸವಾಯಾಂ ಧೇನಾವವಸಂ ರಕ್ಷಕಂ ಪಯೋ ಯುವಂ ಯುವಾಂ ಪಿಪ್ಯಥುಃ । ಪ್ರವರ್ಧಿತವಂತೌ । ತಥಾ ಜೀರ್ಣಾಂಗೋ ವಂದನ ಋಷಿರ್ದೀರ್ಘೇಣಾಯುಷಾ ಪ್ರ ತಾರಿ । ಯುವಾಭ್ಯಾಂ ಪ್ರವರ್ಧಿತಃ ।

ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥ ಅವಸಂ । ಅವತೇರೌಣಾದಿಕೋsಸಚ್ । ಪಿಪ್ಯಥುಃ । ಪ್ಯಾಯಿಪಾ ವೃದ್ಧೌ । ವ್ಯತ್ಯಯೇನ ಪರಸ್ಮೈಪದಂ । ಲಿಡ್ಯಙೋಃ ಶ್ಚ । ಪಾ. ೬-೧-೨೯ । ಇತಿ ಪೀಭಾವಃ ॥

॥ ಪ್ರತಿಪದಾರ್ಥ ॥

**(ಹೇ) ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವಿಬ್ಬರೂ । **ರೇಭಂ**—ರೇಭಋಷಿಯನ್ನು । **ಪರಿಷೂತೇಃ**—ಉಪದ್ರವದಿಂದ । **ಉರುಷ್ಯಥಃ**—ರಕ್ಷಿಸಿದಿರಿ । **ಅತ್ರಯೇ**—ಅತ್ರಿಋಷಿಗೆ (ಹವಿರ್ಭಕ್ಷಕನಾದ ಅಗ್ನಿಗಾಗಿ) । **ಪರಿತಪ್ತಂ**—ತಾಪಕರವಾದ । **ಘರ್ಮಂ**—ಅಗ್ನಿಯನ್ನು (ಹವಿಸ್ಸಿಗೆ ಆಧಾರವಾದ ವ್ರೀಹ್ಯಾದಿಗಳಿಗೆ ಅಹಿತವಾದ ಸೂರ್ಯನ ತಾಪವನ್ನು) । **ಹಿಮೇನ**—ಶೀತೋದಕದಿಂದ (ವೃಷ್ಟ್ಯುದಕದಿಂದ) (ಪರಿಹರಿಸಿದಿರಿ) । (ಮತ್ತು) **ಶಯೋಃ**—ಶಯುನಾಮಕ ಋಷಿಯ । **ಗವಿ**—ಗೊಡ್ಡುಹಸುವಿನಲ್ಲಿ । **ಅವಸಂ**—ರಕ್ಷಕವಾದ (ಕ್ಷೀರವನ್ನು) । **ಯುವಂ**—ನೀವಿಬ್ಬರು । **ಪಿಪ್ಯಥುಃ**—ವೃದ್ಧಿಯಾಗುವಂತೆ ಮಾಡಿದಿರಿ । **(ತಥಾ**—ಹಾಗೆಯೇ) । **ವಂದನಃ**—(ಜೀರ್ಣಾಂಗನಾದ) ವಂದನ ಋಷಿಯು । **ದೀರ್ಘೇಣ ಆಯುಷಾ**—ದೀರ್ಘಾಯುಸ್ಸಿನಿಂದ । **ಪ್ರ ತಾರಿ**—(ನಿಮ್ಮಿಂದ) ಪ್ರವರ್ಧಿತನಾದನು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ರೇಭಋಷಿಗೆ (ಬಂದಿದ್ದ) ಆಪತ್ತನ್ನು ಪರಿಹರಿಸಿದಿರಿ, ಅತ್ರಿಗೆ ತಾಪಕರವಾದ ಅಗ್ನಿಯನ್ನು ಶೀತೋದಕದಿಂದ ನಿವಾರಿಸಿದಿರಿ, (ಹವಿರ್ಭಕ್ಷಕನಾದ ಅಗ್ನಿಗೋಸ್ಕರ, ವ್ರೀಹ್ಯಾದಿನಾಶಕವಾದ ಸೂರ್ಯನ ತಾಪವನ್ನು ವೃಷ್ಟ್ಯುದಕದಿಂದ ನಿವಾರಿಸಿದಿರಿ); ಶಯುವಿನ ಗೋವಿಗೆ ಕ್ಷೀರದಾನ ಮಾಡಿದಿರಿ; ಹಾಗೆಯೇ (ಜೀರ್ಣಾಂಗನಾದ) ವಂದನ ಋಷಿಗೆ ಧೀರ್ಘಾಯುಸ್ಸನ್ನು ಅನುಗ್ರಹಿಸಿದಿರಿ.

English Translation.

You preserved Rebha from the violence around him ; you quenched with snow, for Atri, the scorching heat ; you generated milk in the cow of Sayu ; and (by you) was Vandana endowed with prolonged life.

॥ ವಿಶೇಷವಿಷಯಗಳು ॥

**ಯುವಂ ರೇಭಂ ಪರಿಷೂತೇರುರುಷ್ಯಥಃ—ಯುವಾಂ ರೇಭಂ ಋಷಿಂ ಪರಿತಃ ಪ್ರೇರಕಾದುಪದ್ರವಾತ್ ಕೂಪಪತನಾದ್ವಾ ರಕ್ಷಥಃ । ಉರುಷ್ಯತೀ ರಕ್ಷಾಕರ್ಮಾ** (ನಿ. ೫–೨೩) **ಉರುಷ್ಯತಿ** ಶಬ್ದವು ರಕ್ಷಣೆ ಮಾಡುವುದು ಎಂಬ ಅರ್ಥದಲ್ಲಿ ಉಕ್ತವಾಗಿರುವುದರಿಂದ ಅಶ್ವಿನೀದೇವತೆಗಳು ರೇಭಋಷಿಯನ್ನು ಅವನಿಗೆ ಒದಗಿದ್ದ ಅಪಾಯದಿಂದ ಅಥವಾ ಬಾವಿಯಲ್ಲಿ ಅಸರರು ಅವನನ್ನು ಕಟ್ಟಿಹಾಕಿ ಮುಳುಗಿಸಿದ್ದ ತೊಂದರೆಯಿಂದ ರಕ್ಷಿಸಿದರು ಎಂದು ಅರ್ಥ. ಅತ್ರಿಋಷಿಯನ್ನು ಹಿಡಿದು ಅವನನ್ನು ತುಷಾಗ್ನಿಯಲ್ಲಿ ಅಸುರರು ಹಾಕಿದಾಗ ಅಶ್ವಿನೀದೇವತೆಗಳು ಅವನ ಸ್ತುತಿಯನ್ನು ಕೇಳಿ ಹಿತಕರವಾದ ಮತ್ತು ತಂಪಾದ ನೀರಿನಿಂದ ಬೆಂಕಿಯನ್ನು

ಆರಿಸಿ ಅವನನ್ನು ರಕ್ಷಿಸಿದರು ಎಂದು ಒಂದು ವಿಧವಾದ ಅರ್ಥವನ್ನು ಸಾಯಣರು ಹೇಳಿರುವುದಲ್ಲದೆ, ಅತ್ರಿ ಶಬ್ದಕ್ಕೆ ಹವಿಸ್ಸುಗಳನ್ನು ಭಕ್ಷಿಸುವ ಅಗ್ನಿ ಎಂದೂ, ಈ ಅಗ್ನಿಗೆ (ಸೂರ್ಯಕಿರಣಗಳ ತಾಪದಿಂದ ವ್ರೀಹ್ಯಾದ್ಯುತ್ಪತ್ತಿಯು ಯಾವುದೂ ಆಗದಿರುವುದರಿಂದ) ಉಂಟಾಗಿರುವ ತಾಪವನ್ನು ವೃಷ್ಟ್ಯುದಕಗಳ ಮೂಲಕವಾಗಿ ಪರಿಹರಿಸಿದರು ಎಂದು ಇನ್ನೊಂದು ಅರ್ಥವನ್ನು ವಿವರಿಸಿರುವರು. ಸ್ಕಂದಸ್ವಾಮಿಗಳು ಅತ್ರಿಋಷಿಯನ್ನು ರಕ್ಷಿಸಿದ ವೃತ್ತಾಂತವನ್ನು ಮಾತ್ರ ವಿವರಿಸಿ—

**ಹಿಮೇನಾಗ್ನಿಂ ಘ್ರಂಸಮವಾರಯೇಥಾಂ ಪಿತುಮತೀಮೂರ್ಜಮಸ್ಮಾ ಅಧತ್ತಂ ।**
**ಋಬೀಸೇ ಅತ್ರಿಮಶ್ವಿನಾವನೀತಮುನ್ನಿನ್ಯಥುಃ ಸರ್ವಗಣಂ ಸ್ವಸ್ತಿ ॥**

(ಋ. ಸಂ. ೧-೧೧೬-೮)

ಈ ಋಕ್ಕನ್ನು ಉದಹರಿಸಿರುವರು.

ಶಯುವೆಂಬ ಋಷಿಯ ಮುದಿಯಾದ ಮತ್ತು ಸಾಯುವ ಸ್ಥಿತಿಯಲ್ಲಿದ್ದ ಗೋವನ್ನು ಯೌವನಾವಸ್ಥೆಗೆ ಪರಿವರ್ತಿಸಿ ಹಾಲು ಕೊಡುವಹಾಗೆ ಮಾಡಿರುವರು ಎಂದು ವರ್ಣಿಸಿದೆ. ಮತ್ತು ವಂದನಋಷಿಯನ್ನು ಬಾವಿಯಿಂದ ಮೇಲಕ್ಕೆ ಎತ್ತಿ ಅವನಿಗೆ ಶಕ್ತಿಯು ಉಂಟಾಗುವಂತೆ ಮಾಡಿ ರಕ್ಷಿಸಿದರು ಎಂದು ಅಶ್ವಿನೀದೇವತೆಗಳ ಪ್ರಭಾವವೂ ವರ್ಣಿತವಾಗಿದೆ.

**ಘರ್ಮಂ—ದೀಪ್ತಂ** ಎಂದು ಸ್ಕಂದಸ್ವಾಮಿಗಳ ವಿವರಣೆ. **ಘರ್ಮ** ಶಬ್ದವು ಹನ್ನೆರಡು ಅಹರ್ನಾಮಗಳಲ್ಲಿ (ನಿ. ೩-೨೧) ಉಕ್ತವಾಗಿರುತ್ತದೆ. ಹದಿನೈದು ಯಜ್ಞನಾಮಗಳಲ್ಲಿಯೂ (ನಿ. ೩-೧೯) ಉಕ್ತವಾಗಿರುತ್ತದೆ.

**ಅವಸಂ—ರಕ್ಷಕಂ ।** ರಕ್ಷಣೆಯನ್ನು ಮಾಡುವ ಸಾಮಗ್ರಿ ಎಂದು ಸಾಯಣರ ವ್ಯಾಖ್ಯಾನ. ಸ್ಕಂದಸ್ವಾಮಿಗಳು—ಅವಸ ಶಬ್ದವು ಪಥ್ಯೋದನವಾಚಿಯಾಗಿರುತ್ತದೆ. ಶಯುಋಷಿಯ ಪಥ್ಯೋದನವು ಪಯೋರೂಪವಾಗಿರುವುದು. ಎಂದು ಅರ್ಥಮಾಡಿರುವರು. ಮತ್ತು ಯಾಸ್ಕರು—ಅವಸ ಶಬ್ದದ ಅರ್ಥವನ್ನು ನಿರ್ವಚನೆಮಾಡುವಾಗ—

**ಮಯೋಭೂರ್ವಾತೋ ಅಭಿ ವಾತೂಸ್ರಾ ಊರ್ಜಸ್ವತೀರೋಷಧೀರಾ ರಿಶಂತಾಂ ।**
**ಪೀವಸ್ವತೀರ್ಜೀವಧನ್ಯಾಃ ಪಿಬಂತ್ವವಸಾಯ ಪದ್ವತೇ ರುದ್ರ ಮೃಳ ॥**

(ಋ. ಸಂ. ೧೦-೧೬೯-೧)

**ಯೋನಿಷ್ಟ ಇಂದ್ರ ನಿಷದೇ ಅಕಾರಿ ತಮಾ ನಿ ಷೀದ ಸ್ವಾನೋ ನಾರ್ವಾ ।**
**ವಿಮುಚ್ಯಾ ವಯೋ ವಸಾಯಾಶ್ವಾನ್ ದೋಷಾ ವಸ್ತೋರ್ವಹೀಯಸಃ ಪ್ರಪಿತ್ವೇ ॥**

(ಋ. ಸಂ. ೧-೧೦೪-೧)

ಎಂದು ಎರಡು ಋಕ್ಕುಗಳನ್ನು ಉದಹರಿಸಿ **ಅವಸಾಯ ಪದ್ವತೇ ರುದ್ರ ಮೃಳ ಇತಿ ಪದ್ವದವಸಂ ಗಾವಃ ಪಥ್ಯದನಂ । ಅವತೇರ್ಗತ್ಯರ್ಥಸ್ಯಾಸೌ ನಾಮಕರಣಃ । ತಸ್ಮಾನ್ನಾವಗೃಹ್ಣಂತಿ ಅವಸಾಯಾಶ್ವಾನ್ ಇತಿ ಸ್ಯತಿರುಪಸೃಷ್ಟೋ ವಿಮೋಚನೇ ತಸ್ಮಾದವಗೃಹ್ಣಂತಿ ।** (ನಿ. ೧-೧೭) ಎಂದು ವ್ಯಾಖ್ಯಾನಮಾಡಿರುವರು. ಅವಸ ಶಬ್ದವು ಗೋವಿನ ದಾರಿಯ ಆಹಾರವಾಚಕವಾಗಿರುವುದು. ಎಂದು ಅರ್ಥಮಾಡಿರುವರು. ಗತ್ಯರ್ಥವುಳ್ಳ

ಅವತಿ ಧಾತುವಿನ ಮೇಲೆ ಪ್ರತ್ಯಯವು ಬಂದು ಅವಸಾಯ ಎಂದು ರೂಪವಾಗಿರುತ್ತದೆ. **ಅವಸಾಯ ಪದ್ವತೇ ರುದ್ರ ಮೃಳ** ಎಂಬಲ್ಲಿ **ಪಥ್ಯದನಾಯ ಸುಖೋ ಭವ** ಎಂದು **ಅವಸ** ಶಬ್ದಕ್ಕೆ **ಪಥ್ಯದನ** (ದಾರಿಯ ಬುತ್ತಿ) ಎಂದು ಅರ್ಥಮಾಡಿರುವರು. **ಅವಸಾಯೋಶ್ವಾನ್** ಎಂಬಲ್ಲಿಯೂ ಕೂಡ **ರಶ್ಮಿಭ್ಯೋ ವಿಯೋಜ್ಯ ಲಬ್ಧೋದಕಯವಸಾನ್ ಕೃತ್ವಾ** ಎಂದು ಅರ್ಥವನ್ನು ಮಾಡಿರುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ಪರಿಷೂತೇಃ**—ಷೂಙ್ ಪ್ರಾಣಿಗರ್ಭವಿಮೋಚನೇ. ಧಾತು. ಇದಕ್ಕೆ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ತಾದಿಯಾಗಿ ನಿತ್ತಾದುದರಿಂದ **ತಾದೌ ಚ ನಿತಿ**—(ಪಾ. ಸೂ. ೬-೨-೫೦) ಎಂಬುದರಿಂದ ಕೃತ್ ಸ್ವರಕ್ಕೆ ಅಪವಾದವಾಗಿ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ.

**ಉರುಷ್ಯಥಃ**—ಉರುಷ್ಯ ಧಾತುವು ಧಾತುಪಾಠ ಪಠಿತವಾಗದಿದ್ದರೂ ಆಕೃತಿಗಣದಿಂದ ಸಿದ್ಧವಾಗುತ್ತದೆ. ರಕ್ಷಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪರಿತಪ್ತಮ್**—ತಪ ಸಂತಾಪೇ. ಧಾತು. **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಅವಸಮ್**—ಅವ ರಕ್ಷಣೇ. ಧಾತು. ಇದಕ್ಕೆ ಔಣಾದಿಕವಾದ ಅಸಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪಿಪ್ಯಥುಃ**—ಪ್ಯಾಯಿಾ ವೃದ್ಧೌ. ಧಾತು. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಇದಕ್ಕೆ ಲಿಟ್ ಮಧ್ಯಮಪುರುಷ ದ್ವಿವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಅಥುಸಾದೇಶ **ಲಿಟ್ಯಙೋಶ್ಚ** (ಪಾ. ಸೂ. ೬-೧-೨೯) ಎಂಬುದರಿಂದ ಲಿಟ್ ಪರವಾದಾಗ ಧಾತುವಿಗೆ ಪೀ ಭಾವ. ಅದಕ್ಕೆ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ** ಎಂಬುದರಿಂದ ಹ್ರಸ್ವ. **ಏರನೇಕಾಚೋ**—(ಪಾ. ಸೂ. ೬-೪-೮೨) ಎಂಬುದರಿಂದ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ತಾರಿ**—ತೄ ಪ್ಲವನತರಣಯೋಃ ಧಾತು. ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣ್. ಣಿತ್ತಾದುದರಿಂದ ತನ್ನಿಮಿತ್ತವಾಗಿ **ಅಚೋಞ್ಣಿತಿ** ಎಂಬುದರಿಂದ ಧಾತು ಋಕಾರಕ್ಕೆ ವೃದ್ಧಿ ರಪರವಾಗಿ ಬರುತ್ತದೆ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದ ತ ಪ್ರತ್ಯಯಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥



॥ ಸಂಹಿತಾಪಾಠಃ ॥

ಯುವಂ ವಂದನಂ ನಿರ್ಋತಂ ಜರಣ್ಯಯಾ ರಥಂ ನ ದಸ್ರಾ ಕರಣಾ ಸಮಿನ್ವಥಃ ।
ಕ್ಷೇತ್ರಾದಾ ವಿಪ್ರಂ ಜನಥೋ ವಿಪನ್ಯಯಾ ಪ್ರ ವಾಮತ್ರ ವಿಧತೇ ದಂಸನಾ ಭುವತ್ ॥ ೭ ॥

॥ ಪದಪಾಠಃ ॥

ಯುವಂ । ವಂದನಂ । ನಿಃಋತಂ । ಜರಣ್ಯಯಾ । ರಥಂ । ನ । ದಸ್ರಾ ಕರಣಾ । ಸಂ । ಇನ್ವಥಃ ।
ಕ್ಷೇತ್ರಾತ್ । ಆ । ವಿಪ್ರಂ । ಜನಥಃ । ವಿಪನ್ಯಯಾ । ಪ್ರ । ವಾಂ । ಅತ್ರ । ವಿಧತೇ । ದಂಸನಾ । ಭುವತ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ದಸ್ರಾವಶ್ವಿನೌ ಯುವಂ ಯುವಾಂ ಜರಣ್ಯಯಾ ಜರಯಾ ನಿರ್ಋತಂ ನಿಃಶೇಷೇಣ ಪ್ರಾಪ್ತಂ ವಂದನಮೃಷಿಂ ಕರಣಾ ಕರ್ಮಣಾಂ ಕರ್ತಾರೌ ಶಿಲ್ಪಕುಶಲೌ ಯುವಾಂ ಸಮಿನ್ವಥಃ । ಸಮಧತ್ತಂ । ಪುನರ್ಯುವಾನಮಕುರುತಂ । ತತ್ರ ದೃಷ್ಟಾಂತಃ । ರಥಂ ನ । ಯಥಾ ಕಶ್ಚಿಚ್ಛಿಲ್ಪೀ ಜೀರ್ಣಂ ರಥಂ ಪುನರಪ್ಯಭಿನವಂ ಕರೋತಿ ತದ್ವತ್ । ಅಪಿ ಚ ವಿಪನ್ಯಯಾ ಸ್ತುತ್ಯಾ ಗರ್ಭಸ್ಥೇನ ವಾಮದೇವೇನ ಸ್ತುತೌ ಸಂತೌ ಕ್ಷೇತ್ರಾದಾ । ಆಕಾರಃ ಸಮುಚ್ಚಯೇ । ಮಾತುರುದರಲಕ್ಷಣಾಜ್ಜನ್ಮಸ್ಥಾನಾದ್ವಿಪ್ರಂ ಮೇಧಾವಿನಂ ತಮೃಷಿಂ ಜನಥಃ । ಜನಯಥಶ್ಚ । ತಥಾ ವಾಂ ಯುವಯೋರ್ದಂಸನಾ ರಕ್ಷಣಾತ್ಮಕಂ ಕರ್ಮಾತ್ರಾಸ್ಮೈ ವಿಧತೇ ಪರಿಚರತೇ ಯಜಮಾನಾಯ ಪ್ರ ಭುವತ್ । ಪ್ರಭವತು । ರಕ್ಷಿತುಂ ಸಮರ್ಥಂ ಭವತು ॥ ನಿರ್ಋತಂ । ಋ ಗತೌ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಜರಣ್ಯಯಾ । ಜರಣಕ್ರಿಯಾರ್ಹಾ ಜರಣ್ಯಾ । ಅಂತ್ಯಾವಸ್ಥಾ ಛಂದಸಿ ಚೇತಿ ಯಃ । ಕರಣಾ ।

**ಕರೋತೇರನ್ಯೇಭ್ಯೋಽಪಿ ದೃಶ್ಯತೇ । ಪಾ. ೩-೩-೧೩೦ । ಇತಿ ಯುಚ್ । ಇನ್ವಥಃ । ಇವಿ ವ್ಯಾಪ್ತೌ । ಇದಿತ್ವಾನ್ನುಮ್ । ಭೌವಾದಿಕಃ । ಜನಥಃ । ಜನೀ ಪ್ರಾದುರ್ಭಾವೇ । ಣಿಚ್ಯುಪಧಾವೃದ್ಧಿಃ । ಜನೀಜ್ರೂಷ್ಕ್ನಸುರಂಜ ಇತಿ ಮಿತ್ತ್ವಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ವಿಪನ್ಯಯಾ । ಪನ ಸ್ತುತೌ । ಅಘ್ನ್ಯಾದಯಶ್ಚೇತಿ ಭಾವೇ ಯತ್ । ವ್ಯತ್ಯಯೇನಾಂತೋದಾತ್ತತ್ವಂ । ವಿಧತೇ । ವಿಧ ವಿಧಾನೇ । ತೌದಾದಿಕಃ । ಲಟಃ ಶತೃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಭುವತ್ । ಭವತೇರ್ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ದಸ್ರಾ**—ಎಲೈ ದಸ್ರರೇ (ಅಶ್ವಿನೀದೇವತೆಗಳೇ) । **ಯುವಂ**— ನೀವಿಬ್ಬರು । **ಜರಣ್ಯಯಾ**—ಜರೆಯಿಂದ (ಮುಪ್ಪಿನಿಂದ) । **ನಿಋತಂ**—ಸಂಪೂರ್ಣನಾಗಿ ವ್ಯಾಪ್ತನಾಗಿದ್ದ । **ವಂದನಂ**—ವಂದನಋಷಿಯನ್ನು । **ಕರಣಾ**—ಕರ್ಮಕುಶಲರಾದ ನೀವು । **ರಥಂ ನ**—(ಶಿಲ್ಪಿಯುಜೀರ್ಣ) ರಥವನ್ನು (ಸರಿಪಡಿಸುವಂತೆ) । **ಸಂ ಇನ್ವಥಃ**—(ಪುನರ್ಯುವಕನನ್ನಾಗಿ) ಮಾಡಿದಿರಿ । **ವಿಪನ್ಯಯಾ**—(ಗರ್ಭಸ್ಥನಾದ ವಾಮದೇವನ ಸ್ತುತಿಯಿಂದ) (ಸ್ತುತರಾಗಿ) । **ಕ್ಷೇತ್ರಾತ್ ಆ**—(**ಮಾ**ತೃವಿನ ಉದರದಿಂದ) ಜನ್ಮಸ್ಥಳದಿಂದ । **ವಿಪ್ರಂ**—ಮೇಧಾವಿಯಾದ ಆ ಋಷಿಯನ್ನು । **ಜನಥಃ**—ಜನಿಸುವಂತೆ ಮಾಡಿದಿರಿ । (**ತಥಾ**—ಹಾಗೆಯೇ) । **ವಾಂ**—ನಿಮ್ಮ । **ದಂಸನಾ**—ರಕ್ಷಣಾರೂಪವಾದ ಕರ್ಮವು । **ಅತ್ರ**—ಈ । **ವಿಧತೇ**—(ನಿಮ್ಮನ್ನು) ಪರಿಚರಿಸುವ (ಯಜಮಾನನಿಗೆ) । **ಪ್ರ ಭುವತ್**—(ರಕ್ಷಿಸುವ) ಸಾಮರ್ಥ್ಯಯುಕ್ತವಾಗಲಿ.

॥ ಭಾವಾರ್ಥ ॥

ಎಲೈ ದಸ್ರರೇ, (ಅಶ್ವಿನೀದೇವತೆಗಳೇ) ಜರಾವೃತನಾದ ವಂದನಋಷಿಗೆ ಕುಶಲರಾದ ನೀವು, ಶಿಲ್ಪಿಯು (ಜೀರ್ಣವಾದ) ರಥವನ್ನು (ಸರಿಪಡಿಸುವಂತೆ) ಯೌವನವನ್ನು ಕೊಟ್ಟಿರಿ; (ಗರ್ಭಸ್ಥನಾದ ವಾಮದೇವನಿಂದ) ಸ್ತುತರಾಗಿ ಆ ಋಷಿಯನ್ನು ತಾಯಿಯ ಉದರದಿಂದ ಜನಿಸುವಂತೆ ಮಾಡಿದಿರಿ; (ಅದೇರೀತಿ) ನಿಮ್ಮ ರಕ್ಷಣಾ ಕಾರ್ಯವು (ನಿಮ್ಮನ್ನು) ಪರಿಚರಿಸುತ್ತಿರುವ ಈ ಯಜಮಾನನನ್ನು (ರಕ್ಷಿಸಲು) ಸಮರ್ಥವಾಗಲಿ.

## English Translation.

Skilful Dasras, you restored Vandana, when debilitated by old age, as a (wheelwright repairs a worn-out) car ; (moved) by his praises, you brought forth the sage (Vamadeva) from the womb : may your (glorious) deeds be (displayed) for him who in this place offers you worship.

॥ ವಿಶೇಷವಿಷಯಗಳು ॥

**ಜರಣ್ಯಯಾ—ಜರಣಕ್ರಿಯೊರ್ಹಾ ಜರಣ್ಯಾ** । ಮುದುಕತನವೆಂದು ಅರ್ಥ.

**ರಥಂ ನ— ಯಥಾ ಕಶ್ಚಿತ್ ಶಿಲ್ಪೀ ಜೀರ್ಣಂ ರಥಂ ಪುನರಪ್ಯಭಿನವಂ ಕರೋತಿ ತದ್ವತ್** । ಶಿಲ್ಪಿಯು ಹಳೆಯದಾಗಿ ಮುರಿದುಹೋಗುವಂತೆ ಇರುವ ರಥವನ್ನು ತನ್ನ ಜಾಣತನದಿಂದ ಹೊಸದು ಮಾಡುವಹಾಗೆ ಅಶ್ವಿನೀದೇವತೆಗಳು ಮುದುಕನಾದ ವಂದನ ಋಷಿಯ ಶರೀರವನ್ನು ಯೌವನಸ್ಥನ ಶರೀರದಂತೆ ಮಾಡಿ ವಂದನ ಋಷಿಯನ್ನು ರಕ್ಷಿಸಿದರು ಎಂದು ವರ್ಣಿಸಿದೆ.

**ಕ್ಷೇತ್ರಾತ್ ವಿಪ್ರಂ ವಿಪನ್ಯಯಾ ಅ ಜನಥಃ—ವಾಮದೇವೇನ ಸ್ತುತೌ ಮಾತುರುದರಲಕ್ಷಣಾತ್ ಜನ್ಮಸ್ಥಾನಾತ್ ಮೇಧಾವಿನಂ ತಮೃಷಿಂ ಜನಯಥಶ್ಚ** । ವಾಮದೇವ ಋಷಿಯು ಗರ್ಭಸ್ಥನಾಗಿ ತನ್ನ ತಾಯಿಯ ಉದರದಿಂದ ಹೊರಗಡೆಗೆ ಬರಲು ತಿಳಿಯದೆ ಇರುವಾಗ ಅಶ್ವಿನೀದೇವತೆಗಳನ್ನು ಸ್ತುತಿಮಾಡಿ ಅವರ ಅನುಗ್ರಹದಿಂದ ಗರ್ಭದಿಂದ ಹೊರಗೆ ಬಂದನು, ಎಂದು ಅಶ್ವಿನೀದೇವತೆಗಳು ವಾಮದೇವ ಋಷಿಯನ್ನು ರಕ್ಷಿಸಿದ ಇತಿಹಾಸವು ಇಲ್ಲಿ ಉಕ್ತವಾಗಿದೆ., ಸ್ಕಂದಸ್ವಾಮಿಗಳು—

> **ಕಶ್ಚಿದೃಷಿಃ ಮೃತಭಾರ್ಯೋ ವೃದ್ಧಶ್ಚ ಪುತ್ರಕಾಮೋ ಅಶ್ವಿನೌ ತುಷ್ಟಾವ । ತಸ್ಯಾಶ್ವಿನಾವಯೋನಿಜಂ ಕ್ಷೇತ್ರಾತ್ ಪುತ್ರಂ ಜನಯಾಂಚಕ್ರತುರಿತಿ । ತದೇತದಿಹೋಚ್ಯತೇ । ಕ್ಷೇತ್ರಾತ್ ಕೃಷ್ಯಾ ಭೂಮಿಃ ಕ್ಷೇತ್ರಮುಚ್ಯತೇ । ತತಃ ವಿಪ್ರಂ ಮೇಧಾವಿನಂ ಆಜನಥಃ ಜನಿತವಂತೌ ।**

ಒಬ್ಬ ಋಷಿಗೆ ಹೆಂಡತಿಯು ಮೃತಳಾಗಿದ್ದ ಕಾರಣ ಹೆಂಡತಿಯೇ ಇರಲಿಲ್ಲ. ಅವನೂ ಬಹಳ ಮುದುಕನಾಗಿದ್ದನು. ಆದರೆ ತನಗೆ ಒಬ್ಬ ಮಗನಾಗಬೇಕೆಂಬ ಆಸೆಯೂ ಇತ್ತು, ಇದಕ್ಕಾಗಿ ಅವನು ಅಶ್ವಿನೀದೇವತೆಗಳನ್ನು ಕುರಿತು ಸ್ತೋತ್ರ ಮಾಡಿದನು. ಅವರು ಅಯೋನಿಜನಾದ ಪುತ್ರನನ್ನು ಅವನಿಗೆ ಉಂಟುಮಾಡಿ ಕೊಟ್ಟರು ಎಂದು ಇತಿಹಾಸವನ್ನು ವಿವರಿಸಿರುವರು.

> **ವಿಪ್ರಂ—ಮೇಧಾವಿನಂ** । ಮೇಧಾವಿನಾಮಗಳಲ್ಲಿ ವಿಪ್ರಶಬ್ದವು ಉಕ್ತವಾಗಿರುತ್ತದೆ. (ನಿ. ೩-೧೫)
> **ಯೋ ಅನಿಧ್ಮೋ ದೀದಯದಪ್ಸ್ವ೧ ನ್ತರ್ಯಂ ವಿಪ್ರಾಸ ಈಳತೇ ಅಧ್ವರೇಷು** ॥
> (ಋ.ಸಂ. ೧೦-೩೦-೪)

ಈ ಋಕ್ಕಿನಲ್ಲಿಯೂ **ವಿಪ್ರ** ಶಬ್ದವು **ಮೇಧಾವಿ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

**ದಂಸನಾ—**ರಕ್ಷಣಾತ್ಮಕಂ **ಕರ್ಮ.** ವಾಮದೇವ ಋಷಿಯನ್ನು ಅವನ ತಾಯಿಯ ಗರ್ಭದಿಂದ ಹೊರಗೆ ಬರುವಂತೆ ಮಾಡಿ ರಕ್ಷಿಸಿದ ಕಾರ್ಯವೆಂದು ಸಾಯಣರೂ, **ದಂಸನಾ ದರ್ಶನೀಯಾ ಪ್ರವೃತ್ತಿರ್ಯುವಯೋರೇಷಾ ಕ್ಷೇತ್ರಜನನಲಕ್ಷಣಾ ಸ್ತುತಿಭಿಃ ಪರಿಚರಿತುಃ ತಸ್ಯ ಋಷೇರರ್ಥಾಯ ದರ್ಶನೀಯಾ** । ಕ್ಷೇತ್ರದಲ್ಲಿ ಋಷಿಯ ಇಚ್ಛಾನುಸಾರವಾಗಿ ಪುತ್ರನನ್ನು ಉತ್ಪಾದನೆ ಮಾಡಿಕೊಟ್ಟ ಕಾರಣ ಸ್ತುತಿಗಳಿಂದ ಸೇವಿಸಿದ ಋಷಿಗೆ ಹಿತವಾದಂತೆ ನಿಮ್ಮ ಕಾರ್ಯಗಳು ಎಲ್ಲರಿಗೂ ಆಶ್ಚರ್ಯಕರವಾಗಿರುತ್ತವೆ ಎಂದು ಸ್ಕಂದಸ್ವಾಮಿಗಳ ವ್ಯಾಖ್ಯಾನ. **ಯುವಾಂ**

**ಮುಕ್ತ್ವಾ**—ಅಶ್ವಿನೀದೇವತೆಗಳನ್ನು ಬಿಟ್ಟು ಇತರ ಯಾವ ದೇವತೆಯೂ ಈ ಪ್ರಕಾರವಾದಪ್ರವೃತ್ತಿಯನ್ನು ಹೊಂದಿಲ್ಲವೆಂದೂ ಆದ್ದರಿಂದ ಈ ಅಶ್ವಿನೀದೇವತೆಗಳ ದಯೆಯು ಸ್ತುತಿಮಾಡುವ ಆಶ್ರಿತರ ವಿಷಯದಲ್ಲಿ ಅಪಾರವಾಗಿರುವುದು ಎಂದೂ ತಿಳಿಯುವುದಾಗಿ ಇರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ನಿರ್ಋತೇವ್**—ಋ ಗತೌ. ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩–೨–೧೦೨) ಎಂಬುದರಿಂದ ಕ್ತಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. **ಗತಿರನಂತರಃ** (ಪಾ. ಸೂ. ೬–೨–೪೯) ಎಂಬುದರಿಂದ ಕೃತ್‌ಸ್ವರಕ್ಕೆ ಬಾಧಕವಾಗಿ ಗತಿಗೆ (ನಿರ್) ಪ್ರಕೃತಿಸ್ವರ ಬರುತ್ತದೆ.

**ಜರಣ್ಯಯಾ**—ಜ್ಯಾಷ್ ವಯೋಹಾನೌ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. ಜರಣ ಎಂದು ರೂಪವಾಗುತ್ತದೆ. ಜರಣಕ್ರಿಯಾಹರ್ಾ ಜರಣ್ಯಾ. **ಅಂತ್ಯಾವಸ್ಥಾಚ್ಛಂದಸಿ ಚ** ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಪೂರ್ವದ ಅಕಾರಕ್ಕೆ ಲೋಪ. ಸ್ತ್ರೀತ್ವದಲ್ಲಿ ಟಾಪ್. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಕರಣಾ**—ಡುಕೃಞ್ ಕರಣೇ. ಧಾತು. **ಅನ್ಯೇಭ್ಯೋಽಪಿ ದೃಶ್ಯತೇ** (ಪಾ. ಸೂ. ೩–೩–೧೩೦) ಎಂಬುದರಿಂದ ಕರ್ತರಿಯಲ್ಲಿ ಯುಚ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭–೧–೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬–೧–೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್** ಎಂಬುದರಿಂದ ಅದಕ್ಕೆ ಆಕಾರಾದೇಶ.

**ಇನ್ವಥಃ**—ಇವಿ ವ್ಯಾಪ್ತೌ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭–೧–೫೮) ಎಂಬುದರಿಂದ ಧಾತುವಿಗೆ ನುಮಾಗಮ. ಲಟ್‌ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜನಥಃ**—ಜನೀ ಪ್ರಾದುರ್ಭಾವೇ. ಧಾತು. ಇದಕ್ಕೆ **ಹೇತುಮತಿ ಚ** (ಪಾ. ಸೂ. ೩–೧–೨೬) ಎಂಬುದರಿಂದ ಣಿಚ್, **ಅತ ಉಪಧಾಯಾಃ** ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ. **ಜನೀಜ್ೄಷ್ಕ್ನಸುರಂಜೋಽಮಾಂತಾಶ್ಚ** ಎಂಬುದರಿಂದ ಇದಕ್ಕೆ ಮಿತ್ ಸಂಜ್ಞಾ ಬರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬–೪–೯೨) ಎಂಬುದರಿಂದ ಉಪಧಾಹ್ರಸ್ವ ಬರುತ್ತದೆ. ಣಿಜಂತದ ಮೇಲೆ ಲಟ್ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. ಶಪ್ ವಿಕರಣ. **ಛಂದಸ್ಯುಭಯಥಾ** (ಪಾ. ಸೂ. ೩–೪–೧೧೭) ಎಂಬುದರಿಂದ ಶಪ್ಪಿಗೆ ಆರ್ಧಧಾತುಕಸಂಜ್ಞೆ ಬರುವುದರಿಂದ **ಣೇರನಿಟಿ** (ಪಾ. ಸೂ. ೬–೪–೫೧) ಎಂಬುದರಿಂದ ಣಿಚ್ಚಿಗೆ ತನ್ನಿಮಿತ್ತವಾಗಿ ಲೋಪ ಬರುತ್ತದೆ. **ಜನಥಃ** ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ವಿಪನ್ಯಯಾ**—ಪನ ಸ್ತುತೌ. ಧಾತು. **ಅಘ್ನ್ಯಾದಯಶ್ಚ** (ಉ. ಸೂ. ೪-೫೫೧) ಎಂಬುದರಿಂದ ಭಾವಾರ್ಥದಲ್ಲಿ ಯತ್ ಪ್ರತ್ಯಯ. **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾದರೆ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್. ತೃತೀಯಾ ಏಕವಚನಾಂತರೂಪ.

**ವಿಧತೇ**—ವಿಧ ವಿಧಾನೇ. ಧಾತು. ತುದಾದಿ. ಇದಕ್ಕೆ **ಲಡರ್ಥ**ದಲ್ಲಿ ಶತ್ರಾದೇಶ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶವಿಕರಣ. ಇದು ಙಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಚತುರ್ಥೀ ಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭುವತ್**—ಭೂ ಸತ್ತಾಯಾಂ ಧಾತು. ಇದಕ್ಕೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಲುಕ್. **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ ಪ್ರತಿಷೇಧ ಬರುವುದರಿಂದ **ಅಚಿಶ್ನುಧಾತು-ಭ್ರುವಾಮ್**—ಎಂಬುದರಿಂದ ಉವಙಾದೇಶ. ತಿಙಂತನಿಘಾತಸ್ವರ ಬರುತ್ತದೆ. || ೭ ||



|| ಸಂಹಿತಾಪಾಠಃ ||

ಅಗಚ್ಛತಂ ಕೃಪಮಾಣಂ ಪರಾವತಿ ಪಿತುಃ ಸ್ವಸ್ಯ ತ್ಯಜಸಾ ನಿಬಾಧಿತಂ ।
ಸ್ವರ್ವತೀರಿತ ಊತೀರ್ಯುವೋರಹ ಚಿತ್ರಾ ಅಭೀಕೇ ಅಭವನ್ನಭಿಷ್ಟಯಃ ॥ ೮ ॥

॥ ಪದಪಾಠಃ ॥

ಅಗಚ್ಛತಂ । ಕೃಪಮಾಣಂ । ಪರಾಽವತಿ । ಪಿತುಃ । ಸ್ವಸ್ಯ । ತ್ಯಜಸಾ । ನಿಽಬಾಧಿತಂ ।

ಸ್ವಃಽವತೀಃ । ಇತಃ । ಊತೀಃ । ಯುವೋಃ । ಅಹ । ಚಿತ್ರಾಃ । ಅಭೀಕೇ । ಅಭವನ್ । ಅಭಿಷ್ಟಯಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಪರಾವತಿ. ದೂರದೇಶೇ ಸಮುದ್ರಮಧ್ಯೇ ಸ್ವಸ್ಯ ಪಿತುಸ್ತುಗ್ರಸ್ಯ ತ್ಯಜಸಾ ತ್ಯಾಗೇನ ನಿಬಾಧಿತಂ ಪೀಡಿತಂ ಭುಜ್ಯುಂ ಕೃಪಮಾಣಂ ಯುವಾಂ ಸ್ತುವಂತಮಗಚ್ಛತಂ । ಯುವಾಂ ರಕ್ಷಣಾರ್ಥಂ ಗತವಂತೌ । ಯಸ್ಮಾದೇವಂ ತಸ್ಮಾದ್ಧೇ ಅಶ್ವಿನೌ ಸ್ವರ್ವತೀಃ ಸ್ವರ್ವತ್ಯಃ ಶೋಭನಗಮನ-ಯುಕ್ತಾ ಇತ ಇತೋಮುಖಾಶ್ಚಿತ್ರಾಶ್ಚಾಯನೀಯಾ ಯುವೋರಹ ಯುವಯೋರೇವೋತೀರೂತಯೋ ರಕ್ಷಾ ಅಭೀಕೇ ಸಮೀಪೇಽಭಿಷ್ಟಯಃ ಸರ್ವೈಃ ಪ್ರಾಣಿಭಿರಭ್ಯೇಷಣೀಯಾ ಅಭವನ್ । ಭವಂತಿ ॥ ಕೃಪಮಾಣಂ । ಕೃಪತಿಃ ಸ್ತುತಿಕರ್ಮಾ । ಅಯಂ ಚ ತುದಾದಿರ್ದ್ರಷ್ಟವ್ಯಃ । ಸ್ವರ್ವತೀಃ । ಸುಪೂರ್ವಾ-ದರ್ತೇರ್ಭಾವೇ ವಿಚ್ । ತತೋ ಮತುಪ್ । ಛಂದಸೀರ ಇತಿ ಮತುಪೋ ವತ್ವಂ । ಅಭಿಷ್ಟಯಃ । ಇಷು ಇಚ್ಛಾಯಾಂ । ಭಾವೇ ಕ್ತಿನ್ । ಶಕಂಧ್ವಾದಿತ್ವಾತ್ಪರರೂಪತ್ವಂ ॥

॥ ಪ್ರತಿಪದಾರ್ಥ ॥

(**ಹೇ ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಪರಾವತಿ**—ದೂರದೇಶದಲ್ಲಿ (ಸಮುದ್ರಮಧ್ಯದಲ್ಲಿ) **ಸ್ವಸ್ಯ ಪಿತುಃ**—ತನ್ನ ತಂದೆಯ (ತುಗ್ರನ) । **ತ್ಯಜಸಾ**—ತ್ಯಾಗದಿಂದ । **ನಿಬಾಧಿತಂ**—ಪೀಡಿತನಾದ । **ಕೃಪ-ಮಾಣಂ**—ನಿಮ್ಮನ್ನು ಸ್ತುತಿಸಿದ (ಭುಜ್ಯುವನ್ನು) । **ಅಗಚ್ಛತಂ**—(ರಕ್ಷಿಸಲು) ಹೊರಟಿರಿ (ಆದುದರಿಂದ) । (**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಸ್ವರ್ವತೀಃ**—ಶುಭಕರವಾದ ಗಮನಯುಕ್ತವಾದವುಗಳೂ । **ಇತಃ**—ಈ ಕಡೆ (ನಮ್ಮ ಕಡೆ) ಮುಖವುಳ್ಳವುಗಳೂ । **ಚಿತ್ರಾಃ**—ಆಶ್ಚರ್ಯಕರವಾದವುಗಳೂ ಮತ್ತು । **ಯುವೋಃ ಅಹ**—ನಿಮ್ಮದೇ ಆದ । **ಊತೀಃ**—ರಕ್ಷಣಾಕರ್ಮಗಳು । **ಅಭೀಕೇ**—ಸಮೀಪದಲ್ಲಿ । **ಅಭಿಷ್ಟಯಃ**—(ಸರ್ವಪ್ರಾಣಿಗಳಿಂದ) ಅಪೇಕ್ಷಣೀಯಗಳು । **ಅಭವನ್**—ಆಗಿರುತ್ತವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ದೂರದೇಶದಲ್ಲಿ (ಸಮುದ್ರಮಧ್ಯದಲ್ಲಿ) ತನ್ನ ತಂದೆಯಿಂದ ತ್ಯಜಿಸಲ್ಪಟ್ಟು, (ಅಗಲಿ) ದುಃಖಪಡುತ್ತಿದ್ದ ಭುಜ್ಯುವು (ನಿಮ್ಮನ್ನು) ಸ್ತುತಿಸಲು (ಅವನನ್ನು ರಕ್ಷಿಸಲು) ಹೊರಟಿರಿ. ಆದುದರಿಂದ (ಸರ್ವಪ್ರಾಣಿಗಳೂ) ಶುಭಗಮನರಾದ ನಿಮ್ಮ ಆಶ್ಚರ್ಯಕರವಾದ ರಕ್ಷಣೆಯು (ಸರ್ವದಾ) ಸಮೀಪದಲ್ಲಿ (ಸುಲಭವಾಗಿ) ಸಿಗುವಂತಿರಲೆಂದು ಬಯಸುತ್ತಾರೆ.

## English Translation.

You repaired to him who, afflicted by the abandonment of his own father, praised you from afar : hence your prompt and wonderful succours have been wished to be at hand (by all).

॥ ವಿಶೇಷವಿಷಯಗಳು ॥

ಭುಜ್ಯುವೆಂಬವನು ತನ್ನ ತಂದೆಯಿಂದ ಶತ್ರುನಿಗ್ರಹಕ್ಕಾಗಿ ಆಜ್ಞಪ್ತನಾಗಿ ಪ್ರಯಾಣಮಾಡುತ್ತಿರುವಾಗ ಸಮುದ್ರಮಧ್ಯದಲ್ಲಿ ಅನಾಥನಾಗಿ ವಿಪದ್ಗ್ರಸ್ತನಾಗಿರುವುದನ್ನು ಅಶ್ವಿನೀದೇವತೆಗಳು ತಿಳಿದು ಅವನನ್ನು ದಯೆಯಿಂದ ರಕ್ಷಿಸುವುದಕ್ಕಾಗಿ ಬಂದಿರುವರು ಎಂದೂ ಇತರ ಎಲ್ಲಾ ಪ್ರಾಣಿಗಳ ರಕ್ಷಣೆಯೂ ಈ ಅಶ್ವಿನೀದೇವತೆಗಳ ದಯೆಯಿಂದಲೇ ಆಗುತ್ತದೆಯಾದ್ದರಿಂದ ಎಲ್ಲರಿಗೂ ಅವರ ಕೃಪೆಯು ಅಭಿಲಷಣೀಯವಾಗಿರುವುದೆಂದೂ ವರ್ಣಿತವಾಗಿದೆ. ಈ ಋಕ್ಕಿನ ಪೂರ್ವಾರ್ಧವನ್ನು ವ್ಯಾಖ್ಯಾನಮಾಡುವುದರಲ್ಲಿ ಸಾಯಣರು ಪದಗಳನ್ನು ತುಗ್ರಪುತ್ರನಾದ ಭುಜ್ಯುವಿನ ರಕ್ಷಣೆಪರವಾಗಿ ಮಾತ್ರ ಅನ್ವಯವನ್ನು ಮಾಡಿರುತ್ತಾರೆ. ಸ್ಕಂದಸ್ವಾಮಿಗಳು **ಅಗಚ್ಛತಂ ಚಕ್ಷುಃಪ್ರದಾನಾರ್ಥಂ ಗತವಂತೌ ಯುವಾಂ ಕೃಪಮಾಣಂ ಸ್ತುವಂತಂ ಋಜ್ರಾಶ್ವಂ ಪ್ರತಿ**—ಅಶ್ವಿನೀದೇವತೆಗಳು ಕಣ್ಣನ್ನು ಕಳೆದುಕೊಂಡು ಸ್ತುತಿಮಾಡುತ್ತಿರುವ ಋಜ್ರಾಶ್ವನೆಂಬವನಿಗೆ ಕಣ್ಣುಗಳನ್ನು ಕೊಡುವುದಕ್ಕಾಗಿ ಪ್ರಯಾಣಮಾಡಿದ್ದ ನೀವುಗಳು ಎಂದು ಋಜ್ರಾಶ್ವನ ರಕ್ಷಣೆಯನ್ನೂ ವಿವರಿಸಿರುವರು. ಇದಕ್ಕನುಸಾರವಾಗಿ ಇವರಿಬ್ಬರೂ ಆಯಾಯ ಪದಗಳಿಗೆ ಅರ್ಥವನ್ನು ಬೇರೆ ಬೇರೆಯಾಗಿ ಹೇಳಿರುತ್ತಾರೆ.

**ತ್ಯಜಸಾ—ತ್ಯಾಗೇನ ಬಾಧಿತಂ ಪೀಡಿತಂ,** ತಂದೆಯು ತ್ಯಾಗಮಾಡಿದ ಕಾರಣ ದುಃಖದಿಂದ ಇರುವವನೆಂದು ಭುಜ್ಯುವಿನ ಪರವಾಗಿ ಸಾಯಣರೂ. **ಪಿತುಃ ಸ್ವಸ್ಯ ತ್ಯಜಸಾ ನಿಬಾಧಿತಂ—ಆತ್ಮೀಯಸ್ಯ ಪಿತುಃ ಕೋಪೇನ ಶಾಪಜನಿತಾಂಧ್ಯೇನ ಪೀಡಿತಂ** ತನ್ನ ತಂದೆಯು ಕೋಪದಿಂದ ಶಾಪಗ್ರಸ್ತನಾಗಿ ಅದರಿಂದ ಉಂಟಾದ ಕುರುಡತನದಿಂದ ತೊಂದರೆಪಡುತ್ತಿದ್ದ ಋಜ್ರಾಶ್ವನೆಂದು ಸ್ಕಂದಸ್ವಾಮಿಗಳು ವಿವರಿಸಿದ್ದಾರೆ.

**ಚಿತ್ರಂ—ಚಾಯನೀಯಂ** ಪೂಜ್ಯವಾಗಿರುವುದೆಂದು ಅರ್ಥ. ಚಿತ್ರಶಬ್ದದ ಅರ್ಥವನ್ನು ವಿವರಿಸುವಾಗ ಯಾಸ್ಕರು—**ಚಿತ್ರಂ ಚಾಯನೀಯಂ ಮಂಹನೀಯಂ** (ನಿ. ೧೨-೭) ಎಂದು ಒಂದು ಉದಾಹರಣೆಯಲ್ಲಿಯೂ, **ಚಿತ್ರಂ ದೇವಾನಾಂ** ಎಂಬ ಇನ್ನೊಂದು ಉದಾಹರಣೆಯಲ್ಲಿ **ಚಾಯನೀಯಂ** ಎಂದೂ ಅರ್ಥವನ್ನು ವಿವರಿಸಿರುತ್ತಾರೆ.

**ಊತೀಃ–ಊತಯಃ ರಕ್ಷಾಃ** । ರಕ್ಷಣೆಗಳು ಎಂದು ಸಾಯಣರೂ **ಯಜ್ಞಾನ್ ಪ್ರತಿ ಗತಯಃ** ಯಜ್ಞಗಳನ್ನು ಕುರಿತು ಪ್ರಯಾಣಗಳು ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುವರು.

**ಅಭೀಕೇ— ಸಮೀಪೇ** । ಹತ್ತಿರ ಎಂದು ಸಾಯಣರ ವಿವರಣೆ. ಸ್ಕಂದಸ್ವಾಮಿಗಳು ಈ ಋಕ್ಕಿನ ಉತ್ತರಾರ್ಧದ ಅರ್ಥವನ್ನು ವಿವರಿಸುವಾಗ **ಚಿತ್ರಾ ಅಭವನ್ನಭೀಕೇ ಅಭಿಷ್ಟಯಃ** ಎಂಬ ವಾಕ್ಯಕ್ಕೆ—

> **ಸರ್ವೈಃ ಪರಿಚಾರಕೈಸ್ಸಹ ಇತಃ ಸ್ಥಾನಾತ್ ಯಜ್ಞಾನ್ ಪ್ರತ್ಯಾಸನ್ನೇ ಯೋಗಕಾಲೇ ಯುವಾಂ ಗಚ್ಛತಃ ತತ್ರ ಚಾಭೀಜ್ಯೇಥೇ । ಅಥವಾ ಅಭೀಕ ಇತಿ ಸಂಗ್ರಾಮನಾಮ ಸರ್ವೈಸ್ಸ್ವೈರ್ಯೋಧೃಭಿಸ್ಸಹ ಗಚ್ಛಥೋ ಯುವಾಂ ಸಂಗ್ರಾಮೇ ಗತ್ವಾ ಚಾಭಿಗಚ್ಛಥಃ ಶತ್ರೂನಿತ್ಯರ್ಥಃ** ।

ನೀವು ನಿಮ್ಮ ಪರಿವಾರದೊಡನೆ ಈ ಪ್ರದೇಶದಿಂದ ಯಜ್ಞಕ್ಕೆ ಬಂದು ಅಲ್ಲಿ (ಪೂಜೆಯನ್ನು ಸ್ವೀಕರಿಸಿ) ಯಜ್ಞಾರ್ಹರಾಗಿರುತ್ತೀರಿ. (ಯಜ್ಞದಲ್ಲಿ ಹೋಮಾದಿಗಳಿಂದ ಸೇವೆಯನ್ನು ಸ್ವೀಕರಿಸುತ್ತೀರಿ) ಅಥವಾ ನಿಮ್ಮ ಯೋಧೃಜನಗಳೊಡನೆ (ಶೂರರಾದ ಸೈನಿಕರೊಡನೆ) ಯುದ್ಧಭೂಮಿಗೆ ಯುದ್ಧಮಾಡಲು ಹೋಗಿ ಶತ್ರುಗಳಿಗೆ ಎದುರಾಗಿ ಯುದ್ಧಮಾಡುತ್ತೀರಿ ಎಂದು ಅರ್ಥವನ್ನು ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅಗಚ್ಛತಮ್**—ಗಮ್ಲೃ ಗತೌ. ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. ಶಪ್ ವಿಕರಣ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛಕಾರ ಅಂತಾದೇಶ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಕೃಪಮಾಣಮ್**—ಕೃಪ ಧಾತುವು ಸ್ತುತಿಕ್ರಿಯಾದಲ್ಲಿ ಪ್ರಯುಕ್ತವಾಗಿದೆ. ಇದು ತುದಾದಿಯಲ್ಲಿ ಪಠಿತವಾಗಿದೆಯೆಂದು ಊಹಿಸಬೇಕು. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶವಿಕರಣ. ಇದು ಙಿತ್ತಾದುದರಿಂದ ಲಘೂಪಧೆಗೆ ಗುಣ ಬರುವುದಿಲ್ಲ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ.

**ತ್ಯಜಸಾ**—ತ್ಯಜ ಹಾನೌ ಧಾತು. ಇದಕ್ಕೆ ಸರ್ವಧಾತುನಿಬಂಧನವಾಗಿ ಬರುವ ಅಸುನ್ ಪ್ರತ್ಯಯ. ಇದು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ನಿಬಾಧಿತಮ್**—ಬಾಧೃ ವಿಲೋಡನೇ. ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ನಿ) ಪ್ರಕೃತಿಸ್ವರ ಬರುತ್ತದೆ.

**ಸ್ವರ್ವತೀಃ**—ಸು ಉಪಸರ್ಗ. ಋ ಗತೌ ಧಾತು. ಇದಕ್ಕೆ **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಭಾವಾರ್ಥದಲ್ಲಿ ವಿಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ

ಬರುತ್ತದೆ. ಸ್ವರ್ ಅಸ್ಯ ಅಸ್ತಿ ಎಂದರ್ಥ ವಿವಕ್ಷಾಮಾಡಿದಾಗ **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. **ಛಂದಸೀರಃ** (ಪಾ. ಸೂ. ೮–೨–೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸ್ತ್ರೀತ್ವದಲ್ಲಿ ಉಗಿತ್ತಾದುದರಿಂದ **ಉಗಿತಶ್ಚ** (ಪಾ. ಸೂ. ೪–೧–೬) ಎಂಬುದರಿಂದ ಙೀಪ್.

**ಊತೀಃ**—ಅವ ರಕ್ಷಣೇ. ಧಾತು. ಭಾವಾರ್ಥದಲ್ಲಿ **ಕ್ತಿಚ್‌ಕ್ತೌ ಚ ಸಂಜ್ಞಾಯಾಮ್** (ಪಾ. ಸೂ. ೩–೩–೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. **ಜ್ವರತ್ವರಸ್ರಿವ್ಯವಿಮು**—(ಪಾ. ಸೂ. ೬–೪–೨೦) ಎಂಬುದರಿಂದ ಧಾತುವಿನ ಉಪಧೆಗೂ ವಕಾರಕ್ಕೂ ಊಠಾದೇಶ. ಊತಿ ಎಂದು ರೂಪವಾಗುತ್ತದೆ. ಅಂತೋದಾತ್ತವಾಗುತ್ತದೆ.

**ಅಭಿಷ್ಟಯೇಃ**—ಅಭಿ ಉಪಸರ್ಗ. ಇಷು ಇಚ್ಛಾಯಾಮ್. ಧಾತು. ತುದಾದಿ. ಇದಕ್ಕೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩–೩–೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಟಕಾರಾದೇಶ. ಅಭಿ+ಇಷ್ಟಿ ಎಂದಿರುವಾಗ ಶಕಂಧ್ವಾದಿಯಲ್ಲಿ ಸೇರಿರುವುದರಿಂದ **ಶಕಂಧ್ವಾದಿಷು ಪರರೂಪಂ ವಾಚ್ಯಮ್** ಎಂಬುದರಿಂದ ಪರರೂಪ. ಪ್ರಥಮಾ ಬಹುವಚನಾಂತರೂಪ. ॥ ೮ ॥

॥ ಸಂಹಿತಾಪಾಠಃ ॥

ಉತ ಸ್ಯಾ ವಾಂ ಮಧುಮನ್ಮಕ್ಷಿಕಾರಪನ್ಮದೇ ಸೋಮಸ್ಯೌಶಿಜೋ ಹುವನ್ಯತಿ ।
ಯುವಂ ದಧೀಚೋ ಮನ ಆ ವಿವಾಸಥೋಽಥಾ ಶಿರಃ ಪ್ರತಿ ವಾಮಶ್ವ್ಯಂ ವದತ್ ॥ ೯ ॥

॥ ಪದಪಾಠಃ ॥

ಉತ । ಸ್ಯಾ । ವಾಂ । ಮಧುಽಮತ್ । ಮಕ್ಷಿಕಾ । ಅರಪತ್ । ಮದೇ । ಸೋಮ-
ಸ್ಯ । ಔಶಿಜಃ । ಹುವನ್ಯತಿ ।

ಯುವಂ । ದಧೀಚಃ । ಮನಃ । ಆ । ವಿವಾಸಥಃ । ಅಥ । ಶಿರಃ । ಪ್ರತಿ । ವಾಂ ।
ಅಶ್ವ್ಯಂ । ವದತ್ ॥ ೯ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಅಶ್ವಿನೌ ಮಧುಮನ್ಮಧುಮಂತೌ ವಾಂ ಯುವಾಂ ಸ್ಯಾ ಸಾ ಮಕ್ಷಿಕಾ ಸರಘಾ ಮಧುಕಾಮಾ ಸತ್ಯೈರಪತ್ । ಅಸ್ತೌತ್ । ತಥೌಶಿಜ ಉಶಿಜಃ ಪುತ್ರಃ ಕಕ್ಷೀವಾನ್ ಸೋಮಸ್ಯ ಪಾನೇನ ಯುವಯೋರ್ಮದೇ ಹರ್ಷೇ ನಿಮಿತ್ತಭೂತೇ ಸತಿ ಹುವನ್ಯತಿ ; ಯುವಾಮಾಹ್ವಯತಿ । ಯುವಂ ಯುವಾಂ ಚ ತಸ್ಯೈ ಮಕ್ಷಿಕಾಯೈ ಮಧು ದಾತುಂ ಮಧುವಿದ್ಯಾರ್ಥಿನೌ ಸಂತೌ ದಧೀಚ ಆಥರ್ವಣಸ್ಯ ಋಷೇರ್ಮನಶ್ಚಿತ್ತಂ ಶುಶ್ರೂಷಯಾ ಆ ವಿವಾಸಥಃ । ಪರ್ಯಚರತಂ । ಅಥಾನಂತರಂ ತಸ್ಮಿನ್ಪ್ರೀತೇ ಸತ್ಯಶ್ವ್ಯಂ ಯುವಾಭ್ಯಾಂ ಪ್ರತಿಹಿತಮಶ್ವಸ್ಯ ಸಂಬಂಧಿ ಯಚ್ಛಿರಸ್ತದ್ವಾಂ ಯುವಾಂ ಪ್ರತಿ ಮಧುವಿದ್ಯಾಮುವದತ್ । ಸ ಋಷಿರಾಶ್ವೇನ ಶಿರಸೋಽಪದಿಷ್ಟವಾನಿತ್ಯರ್ಥಃ ॥ ಮಧುಮತ್ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಅರಪತ್ । ರಪ ಲಪ ವ್ಯಕ್ತಾಯಾಂ ವಾಚಿ । ಮದೇ । ಮದೀ ಹರ್ಷೇ । ಮದೋಽನುಪಸರ್ಗ ಇತಿ ಭಾವೇಽಪ್ । ಹುವನ್ಯತಿ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಲ್ಯುಟ್ಚೇತಿ ಭಾವೇ ಲ್ಯುಟ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ಹವನಮಾತ್ಮನ ಇಚ್ಛತಿ । ಸುಪ ಆತ್ಮನಃ ಕ್ಯಚ್ । ಅಂತ್ಯಲೋಪಶ್ಛಾಂದಸಃ । ವರ್ಣವ್ಯಾಪತ್ತ್ಯೋತ್ವಂ । ಅಶ್ವ್ಯಂ । ಅಶ್ವೇ ಭವಮಶ್ವ್ಯಂ । ಭವೇ ಛಂದಸೀತಿ ಯತ್ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । (**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಮಧುಮತ್**—ಮಧುಯುಕ್ತರಾದ । **ವಾಂ**—ನಿಮ್ಮಿಬ್ಬರನ್ನು । **ಸ್ಯಾ ಮಕ್ಷಿಕಾ**—ಆ ದುಂಬಿಯು । **ಅರಪತ್**—ಸ್ತುತಿಸಿತು । **ಔಶಿಜಃ**—ಉಶಿಜ ಎಂಬುವಳ ಪುತ್ರನಾದ ಕಕ್ಷೀವಂತ ಎಂಬುವನು । **ಸೋಮಸ್ಯ**—ಸೋಮರಸದ (ಪಾನದಿಂದ) ।**ಮದೇ**—(ನಿಮಗೆ) ಹರ್ಷವಾಗಲು । **ಹುವನ್ಯತಿ**—(ನಿಮ್ಮನ್ನು) ಕರೆಯುತ್ತಾನೆ । **ಯುವಂ**—ನೀವಿಬ್ಬರು (ದುಂಬಿಗೆ ಮಧುವನ್ನು ಕೊಡಲು, ಅಥವಾ ಮಧುವಿದ್ಯೆಯನ್ನು ಕಲಿಯುವುದಕ್ಕೋಸ್ಕರ) । **ದಧೀಚಃ**—ಆಥರ್ವಣ

ಋಷಿಯ । **ಮನಃ**—ಮನಸ್ಸನ್ನು । **ಆ ವಿವಾಸಥಃ**—ಪರಿಚರಿಸಿದಿರಿ (ಸಂತೋಷಪಡಿಸಿದಿರಿ) । **ಅಥ**—ಅನಂತರ (ಅವನು ಪ್ರೀತನಾದ ಮೇಲೆ) । **ಆಶ್ವ್ಯಂ**—ಅಶ್ವಸಂಬಂಧವಾದ । **ಶಿರಃ**—(ಆ ದಧ್ಯಂಚನಿಗೆ ನಿಮ್ಮಿಂದ ಕೊಡಲ್ಪಟ್ಟ) ಶಿರಸ್ಸು । **ವಾಂ ಪ್ರತಿ**—ನಿಮಗೆ । **ವದತ್**—(ಮಧುವಿದ್ಯೆಯನ್ನು) ಹೇಳಿತು (ಉಪದೇಶಿಸಿತು).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮಧುಯುಕ್ತರಾದ ನಿಮ್ಮಿಬ್ಬರನ್ನು (ಮಧುವಿಗಾಗಿ) ದುಂಬಿಯು ಸ್ತುತಿಸಿತು; ಉಶಿಜಪುತ್ರನಾದ ಕಕ್ಷೀವಂತನು (ನೀವು) ಸೋಮರಸಪಾನದಿಂದ ಹೃಷ್ಟರಾಗಬೇಕೆಂದು (ನಿಮ್ಮನ್ನು) ಆಹ್ವಾನಿಸುತ್ತಾನೆ; (ದುಂಬಿಗೆ ಮಧುವನ್ನು ಕೊಡಲು) ಆಥರ್ವಣ (ದಧೀಚಿ) ಋಷಿಯ ಮನಃಪ್ರಸಾದವನ್ನು ಸಂಪಾದಿಸಿದ ಮೇಲೆ (ನೀವು ಕೊಟ್ಟ) ಅಶ್ವಸಂಬಂಧಿ ಶಿರಸ್ಸಿನಿಂದ, ಆತನು ನಿಮಗೆ (ಮಧುವಿದ್ಯೆಯನ್ನು) ಉಪದೇಶಿಸಿದನು.

## English Translation.

That honey-seeking bee also murmured your praise ; the son of Usij invokes you to the exhilaration of the Soma Juice : you conciliated the mind of Dadhyanch, so that, provided with the head of a horse, he taught you (the mystic science).

॥ ವಿಶೇಷವಿಷಯಗಳು ॥

**ಮಕ್ಷಿಕಾ ಮಧುಮತ್ ಅರಪತ್—ಸರಘಾ** ಎಂದು ಪ್ರಸಿದ್ಧವಾದ ಜೇನು ನೊಣಗಳಿಗೆ ಅನಾವೃಷ್ಟಿಯಿಂದ ಪುಷ್ಪಗಳು ಸಿಕ್ಕದೆ ಮಧುವು ಅತ್ಯವಶ್ಯಕವಾಗಿರುವಾಗ ಅವುಗಳು ಅಶ್ವಿನೀದೇವತೆಗಳನ್ನು ಸ್ತುತಿಮಾಡಿ ಮಧು (ಜೇನು ತುಪ್ಪ)ವನ್ನು ಹೊಂದಿದವು ಎಂದು ಇತಿಹಾಸವು ಇಲ್ಲಿ ಸಾಯಣರ ವ್ಯಾಖ್ಯಾನದಲ್ಲಿ ಸೂಚಿತವಾಗಿರುತ್ತದೆ. ಸ್ಕಂದಸ್ವಾಮಿಗಳು ಸ್ಪಷ್ಟವಾಗಿ—

**ಅತ್ರಾಪೀತಿಹಾಸಮಾಚಕ್ಷತೇ । ಸರಘಾನಾಮ ಮಧುಕರ್ಯಃ ।ಮಕ್ಷಿಕಾಃ ತಾಃ ಕಸ್ಯಾಂ ಚಿದನಾವೃಷ್ಟ್ಯಾಂ ಶುಷ್ಕಾಸು ಸರ್ವಪುಷ್ಪಜಾತಿಷು ಕ್ಷುಧಾ ಬಾಧ್ಯಮಾನಾಃ ಮಧ್ವರ್ಥಿನ್ಯೋಽಶ್ವಿನಾವಾಜುಹುವುಃ । ತಾಭ್ಯ ಉಪಗಮ್ಯ ಅಶ್ವಿನೌ ಮಧು ದದತುಃ ತೇನ್ ತಾಃ ಪಪುರಿತಿ।**

ಈ ಅರ್ಥವನ್ನು ವಿವರಿಸಿ—

**ಮಧು ಪ್ರಿಯಂ ಭರಥೋ ಯತ್ಸರಡ್ಭ್ಯಸ್ತಾಭಿರೂ ಷು ಊತಿಭಿರಶ್ವಿನಾ ಗತಮ್ ।**

(ಋ. ಸಂ. ೧-೧೧೨-೨೧)

ಎಂಬ ಈ ಋಕ್ಕನ್ನು ಉದಹರಿಸಿರುವರು ಮತ್ತು—

**ಅಥವಾ ಮಕ್ಷಿಕಾಶಬ್ದೇನಾತ್ರ ಕುತಶ್ಚಿತ್ ಮಕ್ಷಿಕಾಸಾದೃಶ್ಯಾತ್ ದಧೀಚೋ ಉಚ್ಯತೇ। ಸಾ ಯುವಾಭ್ಯಾಂ ಮಧುಶಬ್ದಸಂಯುಕ್ತಂ ಪರಂ ಬ್ರಹ್ಮ ವ್ಯಕ್ತಮುಕ್ತವತೀ ।**

ಮಕ್ಷಿಕಾ ಶಬ್ದಕ್ಕೆ ಯಾವುದೋ ಒಂದು ಧರ್ಮನಿಮಿತ್ತವಾದ ಸಾದೃಶ್ಯವನ್ನು ನಿಮಿತ್ತಮಾಡಿಕೊಂಡು ದಧೀಚಃ ಎಂದು ಅರ್ಥವನ್ನು ಉಲ್ಲೇಖಮಾಡಿ, ಆ ದಧೀಚಶಬ್ದಬೋಧ್ಯವಾದ ಮಕ್ಷಿಕೆಯು ನಿಮಗೆ ಮಧುವಿದ್ಯಾಪ್ರತಿಪಾದ್ಯವಾದ ಪರಬ್ರಹ್ಮವನ್ನು ಉಪದೇಶಮಾಡಿರುವುದು ಎಂದು ಅರ್ಥವನ್ನು ಹೇಳಿರುತ್ತಾರೆ. ಈ ಅರ್ಥವು ಅಷ್ಟು ಸಮಂಜಸವಾಗಿಲ್ಲ.

**ಔಶಿಜಃ ಹುವನ್ಯತಿ—ಉಶಿಜಃ ಪುತ್ರಃ ಕಕ್ಷೀವಾನ್ ಯುವಾಮಾಹ್ವಯತಿ** । ಉಶಿಜಪುತ್ರನಾದ ಕಕ್ಷೀವಂತನೆಂಬ ಋಷಿಯು ಸೋಮರಸವನ್ನು ಅರ್ಪಿಸಿ ನಿಮಗೆ ಸಂತೋಷವನ್ನು ಉಂಟುಮಾಡುವುದಕ್ಕಾಗಿ ನಿಮ್ಮನ್ನು ಆಹ್ವಾನಮಾಡುತ್ತಾನೆ ಎಂದು ಸಾಯಣರ ಅರ್ಥವಿವರಣೆ. ಸ್ಕಂದಸ್ವಾಮಿಗಳು ಔಶಿಜಪದದ ಅರ್ಥವನ್ನು ವಿವರಿಸುವಾಗ

**ಔಶಿಜಃ ಉಶಿಜೋ ಅಪತ್ಯಭೂತಃ ಕಕ್ಷೀವಾನ್ । ತಂ ಉಶಿಜಃ ಪ್ರಪೌತ್ರಂ ಪೌರಾಣಿಕಾಃ ಸ್ಮರಂತಿ ।**

ತಥಾ ಚ

**ಉಶಿಜೋ ಬ್ರಹ್ಮದುಕ್ಥಶ್ಚ ಋಷಿರ್ದೀರ್ಘತಮಾಸ್ತಥಾ ।**
**ಕಕ್ಷೀವಾಂಶ್ಚ ತ್ರಯಸ್ತ್ರಿಂಶತ್ ಸ್ಮೃತಾ ಹ್ಯಂಗಿರಸಾಂ ವರಾಃ ॥ ಇತಿ ।**

**ಸಃ ಅಹಂ ಉಶಿಜಃ ಪ್ರಪೌತ್ರಃ ಕಕ್ಷೀವಾನಾಹ್ವಯಾಮೀತ್ಯರ್ಥಃ । ಆತ್ಮನ ಏವಾಯಂ ಪರೋಕ್ಷರೂಪೇಣ ನಿರ್ದೇಶಃ ।**

ಉಶಿಜಋಷಿಯ ವಂಶದಲ್ಲಿ ಉತ್ಪನ್ನನಾದ ಕಕ್ಷೀವಂತನೆಂಬುವನು ಉಶಿಜನೆಂಬವನಿಗೆ (ಪ್ರಪೌತ್ರ) ಮರಿಮಗನಾಗಿರುವನೆಂದೂ, ಉಶಿಜ, ಬ್ರಹ್ಮದುಕ್ಥ, ದೀರ್ಘತಮಋಷಿ, ಕಕ್ಷೀವಂತ, ಎಂಬ ಇವರೇ ಮೊದಲಾದವರು ಮೂವತ್ತುಮೂರು ಜನರು ಅಂಗಿರಾಋಷಿಯ ವಂಶದವರಲ್ಲಿ ಶ್ರೇಷ್ಠರಾದವರೆಂದು ಪುರಾಣಪ್ರಸಿದ್ಧರಾಗಿರುವುದು. ಇಲ್ಲಿ ಕಕ್ಷಿವಾನ್ ಎಂಬವನು ಎಂದು ಪರೋಕ್ಷರೂಪದಿಂದ ಇರುವಂತೆ ಪ್ರಥಮಪುರುಷದಿಂದ ನಿರ್ದೇಶ ಮಾಡಿರುತ್ತದೆ ಎಂದು ಅರ್ಥವನ್ನು ಹೇಳಿರುವರು. ಮತ್ತು,

**ಅಥವಾ ಉಶಿಜಃ ಪುತ್ರಃ ಔಶಿಜಃ ದೀರ್ಘಶ್ರವಾಃ ಸಃ ಯುವಾಂ ಆಹೂತವಾನ್** । ಅಥವಾ ಉಶಿಕ್ ಎಂಬ ಸ್ತ್ರೀಯ ಮಗನು ಔಶಿಜನು. ಅವನೇ ದೀರ್ಘಶ್ರವನೆಂಬವನು. ಅವನು ನಿಮ್ಮನ್ನು ಯಜ್ಞದಲ್ಲಿ ಸೋಮರಸವನ್ನು ಪಾನಮಾಡಿ ಸಂತೋಷವಾಗಿರಲು ಆಹ್ವಾನಮಾಡುವನು ಎಂದು ಬೇರೆಯ ವಿಧವಾಗಿ ಅರ್ಥವನ್ನು ವಿವರಿಸಿ.

**ಯಾಭಿಸ್ಸುದಾನೂ ಔಶಿಜಾಯ ವಣಿಜೇ ದೀರ್ಘಶ್ರವಸೇ ಮಧೂ ಕೋಶೋ ಅಕ್ಷರತ್ ।**
**ಕಕ್ಷೀವಂತಂ ಸ್ತೋತಾರಂ ಯಾಭಿರಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**
(ಋ. ಸಂ. ೧ ೧೧೨-೧೧)

ಎಂಬ ಈ ಋಕ್ಕನ್ನು ಉದಾಹರಿಸಿರುವರು.

**ದಧೀಚಃ ಮನಃ ಆವಿವಾಸಥಃ**—ಅಶ್ವಿನೀದೇವತೆಗಳು ಜೇನುನೊಣಗಳಿಗೆ ಮಧುವನ್ನು ಕೊಡುವುದಕ್ಕಾಗಿಯೂ, ತಮಗೆ ಮಧುವಿದ್ಯೆಯು ಬೇಕಾಗಿರುವುದರಿಂದಲೂ ದಧೀಚಿಋಷಿಯನ್ನು ಶುಶ್ರೂಷೆ ಮಾಡುವುದರ ಮೂಲಕವಾಗಿ ಅವನ ಮನಸ್ಸನ್ನು ತೃಪ್ತಿಪಡಿಸಿದರೆಂದು ವರ್ಣಿಸಿದೆ.

**ಆಶ್ವ್ಯಂ ಶಿರಃ ಅವದತ್—ಯುವಾಭ್ಯಾಂ ಪ್ರತಿಹಿತಂ ಅಶ್ವಸ್ಯ ಸಂಬಂಧಿ ಯತ್ ಶಿರಃ ತತ್ ಮಧು ವಿದ್ಯಾಂ ಯುವಾಂ ಅವದತ್** । ಅಶ್ವಿನೀದೇವತೆಗಳು ದಧೀಚಿಋಷಿಯ ತಲೆಗೆ ಬದಲಾಗಿ ಕುದುರೆಯ ತಲೆಯನ್ನು ಸೇರಿಸಿದ ಕಾರಣ ಆ ಅಶ್ವಶಿರಸ್ಸಿನಿಂದ ಆ ಋಷಿಯು ಇವರಿಗೆ ಮಧುವಿದ್ಯೆಯನ್ನು ಉಪದೇಶಮಾಡಿರುವನೆಂದು ಇಬ್ಬರೂ ವಿವರಿಸಿರುವರು. ಸ್ಕಂದಸ್ವಾಮಿಗಳು—

**ಅಶ್ವಸ್ಯಾವಯವಭೂತೇನ ಮಧ್ವಾಖ್ಯಂ ಪರಂ ಬ್ರಹ್ಮ ಉಕ್ತವಾನ್** । ಅಶ್ವದ (ಕುದುರೆಯ) ಅವಯವವಾದ ಶಿರಸ್ಸಿನಿಂದ ಮಧುವಿದ್ಯಾಪ್ರತಿಪಾದ್ಯವಾದ ಪರಬ್ರಹ್ಮಸ್ವರೂಪವನ್ನು ಉಪದೇಶಮಾಡಿರುವನೆಂದು ಅರ್ಥಮಾಡಿ—

**ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ** ॥
(ಋ.ಸಂ. ೧-೧೧೬-೧೨)

ಎಂಬ ಋಕ್ಕನ್ನು ಉದಾಹರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ಯಾ**—ತ್ಯದ್‌ಶಬ್ದ. ಪ್ರಥಮಾ ಸು ಪರವಾದಾಗ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ಪೂರ್ವಕ್ಕೆ ಅತ್ವ. ಪರರೂಪ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್. **ತದೋಃ ಸಾವನಂತ್ಯಯೋಃ** (ಪಾ. ಸೂ. ೭-೧-೧೦೬) ಎಂಬುದರಿಂದ ತಕಾರಕ್ಕೆ ಸಕಾರಾದೇಶ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಪರದಲ್ಲಿರುವ ಸುವಿಗೆ ಲೋಪ.

**ಮಧುಮತ್**—ಮಧು ಅನಯೋಃ ಅಸ್ತಿ ಇತಿ ಮಧುಮಂತೌ **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಇದಕ್ಕೆ ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಅರಪತ್**—**ರಪ** ಲಪ ವ್ಯಕ್ತಾಯಾಂ ವಾಚಿ ಧಾತು. ಲಙ್‌ಪ್ರಥಮಪುರುಷ ಏಕವಚನಾಂತರೂಪ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮದೇ**—ಮದೀ ಹರ್ಷೇ. ಧಾತು. **ಮದೋಽನುಪಸರ್ಗೇ** (ಪಾ. ಸೂ. ೩-೩-೬೭) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಇದು ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಸಪ್ತಮೀ ಏಕವಚನಾಂತ ರೂಪ.

**ಔಶಿಜಃ**—ಉಶಿಜಃ ಅಪತ್ಯಂ ಪುಮಾನ್ ಔಶಿಜಃ. **ತಸ್ಯಾಪತ್ಯಮ್** (ಪಾ. ಸೂ. ೪-೧-೯೨) ಎಂಬುದರಿಂದ ಅಣ್‌ಪ್ರತ್ಯಯ. **ತದ್ಧಿತೇಷ್ವಚಾ**—(ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಹುವನ್ಯತಿ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ **ಲ್ಯುಟ್ ಚ** (ಪಾ. ಸೂ. ೩-೩-೧೧೫) ಎಂಬುದರಿಂದ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. **ಅಚಿಶ್ನುಧಾತುಭ್ರುವಾಂ**—ಸೂತ್ರದಿಂದ ಉವಙಾದೇಶ ಹುವನಮಾತ್ಮನಃ ಇಚ್ಛತಿ ಹುವನ್ಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. ಛಾಂದಸವಾಗಿ ಅಂತ್ಯ (ಅಕಾರ) ಲೋಪ ಬರುತ್ತದೆ. ಅಥವಾ ಸಂಪ್ರಸಾರಣಕ್ಕೆ ಗುಣ ಅವಾದೇಶ ಬಂದಾಗ ಹವನ್ಯತಿ ಎಂದಾಗ ವರ್ಣವ್ಯತ್ಯಯದಿಂದ ಅಕಾರಕ್ಕೆ ಉವಙಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಧೀಚಃ**—ದಧಿ ಉಪಪದವಾಗಿರುವಾಗ **ಅಂಚು ಗತಿಪೂಜನಯೋಃ** ಧಾತುವಿಗೆ **ಋತ್ವಿಕ್‌ದಧೃಕ್**– ಸೂತ್ರದಿಂದ ಕ್ವಿನ್ ಪ್ರತ್ಯಯ. **ಅನಿದಿತಾಂ**—ಸೂತ್ರದಿಂದ ಉಪಧಾನಕಾರಲೋಪ. ಷಷ್ಠೀ ಏಕವಚನ ಪರವಾದಾಗ **ಅಚಃ** ಎಂಬುದರಿಂದ ಭಸಂಜ್ಞಾ ಇರುವುದರಿಂದ ಅಕಾರಕ್ಕೆ ಲೋಪ. **ಚೌ** ಎಂಬುದರಿಂದ ಅಕಾರಕ್ಕೆ ಲೋಪ ಬಂದ ಅಂಚು ಧಾತು ಪರವಾದುದರಿಂದ ಪೂರ್ವಪದಕ್ಕೆ ದೀರ್ಘ. **ಚೌ** (ಪಾ. ಸೂ. ೬-೧-೨೨೨) ಎಂಬುದರಿಂದ ಪೂರ್ವಪದಕ್ಕೆ ಅಂತೋದಾತ್ತಸ್ವರಪ್ರಾಪ್ತವಾದರೆ **ಅಂಚೇಶ್ಛಂದಸ್ಯುಪಸಂಖ್ಯಾನಮ್** (ಪಾ. ಸೂ. ೬-೧-೧೭೦. ಎಂಬುದರಿಂದ ಪರದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿವಾಸಥಃ**—ವಿವಾಸಧಾತುವು ಪರಿಚರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ನಿಘಾತಸ್ವರ ಬರುತ್ತದೆ.

**ಅಥ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಶ್ವ್ಯಮ್—ಅಶ್ವೇ ಭವಂ ಅಶ್ವ್ಯಂ । ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಪೂರ್ವದ ಅಕಾರಕ್ಕೆ ಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವದತ್**—ವದ ವ್ಯಕ್ತಾಯಾಂ ವಾಚಿ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೧-೨೧೩) ಎಂಬುದರಿಂದ ಅಡಾಗಮ ಬರುವುದಿಲ್ಲ. ನಿಘಾತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಯುವಂ ಪೇದವೇ ಪುರುವಾರಮಶ್ವಿನಾ ಸ್ಪೃಧಾಂ ಶ್ವೇತಂ ತರು-
ತಾರಂ ದುವಸ್ಯಥಃ ।
ಶರ್ಯೈರಭಿದ್ಯುಂ ಪೃತನಾಸು ದುಷ್ಟರಂ ಚರ್ಕೃತ್ಯಮಿಂದ್ರಮಿ-
ವ ಚರ್ಷಣೀಸಹಂ ॥ ೧೦ ॥

॥ ಪದಪಾಠಃ ॥

ಯುವಂ । ಪೇದವೇ । ಪುರುಽವಾರಂ । ಅಶ್ವಿನಾ । ಸ್ಪೃಧಾಂ । ಶ್ವೇತಂ । ತರು-
ತಾರಂ । ದುವಸ್ಯಥಃ ।
ಶರ್ಯೈಃ । ಅಭಿಽದ್ಯುಂ । ಪೃತನಾಸು । ದುಸ್ತರಂ । ಚರ್ಕೃತ್ಯಂ । ಇಂದ್ರಂಽಇವ ।
ಚರ್ಷಣಿಽಸಹಂ ॥ ೧೦ ॥

॥ ಸಾಯಣಭಾಷ್ಯಂ ॥

ಅಶ್ವಿನಾ ಹೇ ಅಶ್ವಿನೌ ಪೇದವೇ ಪೇದುನಾಮ್ನೇ ರಾಜ್ಞೇ ಪುರುವಾರಂ ಬಹುಭಿರ್ವರಣೀಯಂ ಸ್ಪೃಧಾಂ ಸಂಗ್ರಾಮೇ ಸ್ಪರ್ಧಮಾನಾನಾಂ ಶತ್ರೂಣಾಂ ತರುತಾರಂ ತಾರಕಂ ಶ್ವೇತಂ ಶುಭ್ರವರ್ಣಮಿಂದ್ರಾಲ್ಲಬ್ಧಮಶ್ವಂ ಯುವಂ ಯುವಾಂ ದುವಸ್ಯಥಃ । ದತ್ತವಂತೌ । ಪುನರಪಿ ಕೀದೃಶಂ । ಶರ್ಯೈಃ । ಶೀರ್ಯಂತೇ ಇತಿ ಶರ್ಯಾ ಯೋದ್ಧಾರಃ । ತೈಃ ಪೃತನಾಸು ಸಂಗಾಮೇಷು ದುಸ್ತರಂ ತರೀತುಮಶಕ್ಯಂ ಅಭಿದ್ಯುಮಭಿಗತದೀಪ್ತಿಂ ಚರ್ಕೃತ್ಯಂ ಸರ್ವೇಷು ಕಾರ್ಯೇಷು ಪುನಃಪುನಃ ಪ್ರಯೋಜ್ಯಂ ಇಂದ್ರಮಿವ ಚರ್ಷಣೀಸಹಂ ಇಂದ್ರೋ ಯಥಾ ಶತ್ರೂನಭಿಭವತಿ ಏವಂ ಶತ್ರುಜನಾನಾಮಭಿಭವಿತಾರಮಿತ್ಯರ್ಥಃ ॥ ಸ್ಪೃಧಾಂ । ಸ್ಪರ್ಧ ಸಂಘರ್ಷೇ । ಕ್ವಿಪ್ಚೇತಿ ಕ್ವಿಪ್ । ಚಶಬ್ದೇನ ದೃಶಿಗ್ರಹಣಾನುಕರ್ಷಣಾತ್ತಸ್ಯ ಚ ವಿಧ್ಯಂತರೋಪಸಂಗ್ರಹಾರ್ಥತ್ವಾದಕಾರಸ್ಯ ಲೋಪೋ ರೇಫಸ್ಯ ಚ ಸಂಪ್ರಸಾರಣಂ । ಸಾವೇಕಾಚ ಇತಿ

**ವಿಭಕ್ತೇರುದಾತ್ತತ್ವಂ । ತರುತಾರಂ । ತೄ ಪ್ಲವನತರಣಯೋಃ । ಅಸ್ಮಾತ್ತೃಚಿ ಗ್ರಸಿತಸ್ಕಭಿತಸ್ತಭಿತೇತ್ಯಾದೌ ನಿಪಾತನಾದ್ರೂಪಸಿದ್ಧಿಃ । ಚರ್ಕೃತ್ಯಂ । ಕರೋತೇರ್ಯಙ್‌ಲುಗಂತಾದ್ವಿಭಾಷಾ ಕೃವೃಷೋರಿತಿ ಕ್ಯಪ್ । ತತಸ್ತುಕ್ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪೇದವೇ**—ಪೇದುವೆಂಬ ರಾಜನಿಗೆ । **ಪುರುವಾರಂ**—ಬಹುಜನರಿಂದ ಅಪೇಕ್ಷಣೀಯವಾದ । **ಸ್ಪೃಧಾಂ**—(ಯುದ್ಧದಲ್ಲಿ) ಸ್ಪರ್ಧಿಸುವ ಶತ್ರುಗಳ । **ತರುತಾರಂ**—ತಾರಕವೂ (ಜಯಿಸುವುದೂ) । **ಶರ್ಯೈಃ**—ಯೋಧರಿಂದ । **ಪೃತನಾಸು**—ಸಂಗ್ರಾಮಗಳಲ್ಲಿ । **ದುಸ್ತರಂ**—ಅಜೇಯವೂ । **ಅಭಿದ್ಯುಂ**—ಕಾಂತಿಯುಕ್ತವೂ । **ಚರ್ಕೃತ್ಯಂ**—(ಸರ್ವಕಾರ್ಯಗಳಲ್ಲೂ) ಪುನಃ ಪುನಃ ಯೋಜ್ಯವೂ । **ಇಂದ್ರಮಿವ** ಇಂದ್ರನಂತೆ । **ಚರ್ಷಣೀಸಹಂ**—ಶತ್ರುಗಳಿಗೆ ಅಪಜಯವನ್ನುಂಟುಮಾಡುವುದೂ ಆದ । **ಶ್ವೇತಂ ಅಶ್ವಂ**—ಒಂದು ಶ್ವೇತಾಶ್ವವನ್ನು । **ಯುವಂ**—ನೀವಿಬ್ಬರು । **ದುವಸ್ಯಥಃ**—ಕೊಟ್ಟಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಪೇದುವಿಗೆ, ಬಹುಜನರಿಗೆ ಇಷ್ಟವೂ ಶತ್ರುತಾರಕವೂ, ಸಂಗ್ರಾಮಗಳಲ್ಲಿ ಶತ್ರುಗಳಿಂದ ಅಜೇಯವೂ, (ಸರ್ವಕಾರ್ಯಗಳಲ್ಲೂ) ಪುನಃ ಪುನಃ ಪ್ರಯೋಜ್ಯವೂ, ಇಂದ್ರನಂತೆ ಶತ್ರುಗಳಿಗೆ ಅಪಜಯಕಾರಕವೂ, ತೇಜೋವಿಶಿಷ್ಟವೂ ಆದ, ಶ್ವೇತವರ್ಣದ ಒಂದು ಅಶ್ವವನ್ನು ಕೊಟ್ಟಿರಿ.

## English Translation.

Aswins, you gave to Pedu the white (horse) desired by many, the breaker-through of combatants, shining, unconquerable by foes in battle, fit for every work; like Indra, the conquerer of men.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳು ಪೇದು ಎಂಬ ರಾಜನಿಗೆ ಇಂದ್ರನು ತಮಗೆ ಪಾರಿತೋಷಕವಾಗಿ ಕೊಟ್ಟಿದ್ದ ಒಂದು ಬಿಳಿಯ ಕುದುರೆಯನ್ನು ಕೊಟ್ಟಿರುವರು ಎಂದು ವರ್ಣಿಸಿದೆ.

**ಪುರುವಾರಂ—ಬಹುಭಿರ್ವರಣೀಯಂ** । ಬಹಳ ಜನರು ಅಪೇಕ್ಷೆ ಮಾಡತಕ್ಕದ್ದಾದ ಎಂದು ಸಾಯಣರೂ, ಸ್ಕಂದಸ್ವಾಮಿಗಳು ಸಾಯಣರು ಹೇಳಿದ ಅರ್ಥವನ್ನು ವಿವರಿಸಿ **ಶತ್ರೂಣಾಂ ವಾರಯಿತಾರಂ** ಶತ್ರುಗಳನ್ನು ನಿಗ್ರಹ ಮಾಡಿ ಅವರಿಂದ ರಕ್ಷಿಸುವ ಎಂದೂ ಅರ್ಥಮಾಡಿರುವರು.

**ಸ್ಪೃಧಾಂ ತರುತಾರಂ—ಸಂಗ್ರಾಮಾಣಾಂ ನಿಸ್ತರಿತಾರಂ** ಯುದ್ಧಗಳಲ್ಲಿ ಜಯವನ್ನು ಉಂಟುಮಾಡುವ ಎಂದು ಸ್ಕಂದಸ್ವಾಮಿಗಳ ವಿವರಣೆ, ಸಂಗ್ರಾಮನಾಮಗಳಲ್ಲಿ ಸ್ಪೃಧಾಶಬ್ದವು (ನಿ. ೩–೯) ಉಕ್ತವಾಗಿರುವುದರಿಂದ ಸ್ಪೃಧ ಎಂದರೆ ಯುದ್ಧವು—ಎಂದು ನಿರುಕ್ತಕಾರರು ವಿವರಿಸಿದಾರೆ, **ಸಂಗ್ರಾಮೇ ಸ್ಪರ್ಧಮಾನಾನಾಂ ಶತ್ರೂಣಾಂ**

**ತಾರಕಂ**—ಯುದ್ಧವು ಒದಗಿದಾಗ ಯುದ್ಧದಲ್ಲಿ ಶತ್ರುಗಳು ತಾವು ಜಯಿಸಬೇಕೆಂದು ಪ್ರಯತ್ನಪಡುವರು. ಅದಕ್ಕೆ ಅವಕಾಶವನ್ನು ಕೊಡದಂತೆ ಅವರನ್ನು ಹಿಮ್ಮೆಟ್ಟಿಸಿ ರಕ್ಷಿಸುವುದು ಎಂದು ಸಾಯಣರು ಅರ್ಥಮಾಡಿರುವರು.

**ದುಸ್ತರಂ—ತರಿತುಮಶಕ್ಯಂ** । ಅಶ್ವಿನೀದೇವತೆಗಳು ಕೊಟ್ಟಿರುವ ಕುದುರೆಯು ಯಾರಿಂದಲೂ ಮೀರಲು ಅಶಕ್ಯವಾಗಿರುವುದು ಎಂದು ಸಾಯಣರು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು—**ಅವತಿರಿತೀತಿ ವಧಕರ್ಮಸು ಪಾಠಾತ್ ತಿರತಿರ್ಹನನಾರ್ಥಃ ತಸ್ಯೇದಂ ರೂಪಂ ದುರ್ಹಣಂ** ಅವತಿರತಿ ಎಂದು ವಧಕರ್ಮಗಳಲ್ಲಿ ಪಾಠ ಮಾಡಿರುವುದರಿಂದ ದುಸ್ತರವೆಂದರೆ ಕೊಲ್ಲಲು ಆಗದಿರುವುದು ಎಂದು ಅರ್ಥವನ್ನು ಹೇಳಿರುವರು.

**ಚರ್ಕೃತ್ಯಂ—ಸರ್ವೇಷು ಕಾರ್ಯೇಷು ಪುನಃ ಪುನಃ ಪ್ರಯೋಜ್ಯಂ** । ಅಶ್ವಿನೀದೇವತೆಗಳು ಅನುಗ್ರಹಿಸಿ ಕೊಟ್ಟಿರುವ ಅಶ್ವವು ಎಲ್ಲಾ ಕಾರ್ಯಗಳಲ್ಲಿಯೂ ಆಗಾಗ್ಗೆ ಉಪಯೋಗಿಸಲು ಅರ್ಹವಾಗಿರುವುದೆಂದು ಸಾಯಣರ ವ್ಯಾಖ್ಯಾನ. **ಇದಮಪಿ ಚ ಕೃಂತೇರ್ವಧಕರ್ಮಣೋ ರೂಪಂ ಅತ್ಯರ್ಥಂ ಹಂತಾರಂ** । ಕೃಂತ ಧಾತುವಿನ ರೂಪವಾಗಿರುವ ಚರ್ಕೃತ್ಯಂ ಎಂಬುವುದಕ್ಕೆ ಕೊಲ್ಲುವುದು ಎಂದು ಅರ್ಥ. ಶತ್ರುಗಳನ್ನು ಬಹಳಮಟ್ಟಿಗೆ ನಾಶಮಾಡುವುದು ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುತ್ತಾರೆ.

**ಚರ್ಷಣೀಸಹಂ—ಇಂದ್ರೋ ಯಥಾ ಶತ್ರೂನಭಿಭವತಿ ಏವಂ ಶತ್ರುಜನಾನಭಿಭವಿತಾರಂ** । **ಚರ್ಷಣಿ** ಶಬ್ದವು ಇಪ್ಪತ್ತೈದು ಮನುಷ್ಯನಾಮಗಳಲ್ಲಿ (ನಿ. ೩-೭) ಉಕ್ತವಾಗಿರುತ್ತದೆ. ಪೇದುರಾಜನಿಗೆ ಕೊಟ್ಟಿರುವ ಅಶ್ವವು ಇಂದ್ರನು ಶತ್ರುಗಳನ್ನು ತಿರಸ್ಕರಿಸುವ ಹಾಗೆ ಶತ್ರುಜನರನ್ನು ತಿರಸ್ಕಾರಮಾಡುತ್ತಿತ್ತು ಎಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಸ್ಪೃಧಾಮ್**—ಸ್ಪರ್ಧ ಸಂಘರ್ಷೇ, ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಈ ಸೂತ್ರದಲ್ಲಿ ಚಕಾರವು ಹಿಂದಿನ ಸೂತ್ರದಿಂದ ದೃಶಿಗ್ರಹಣವನ್ನು ಅನುಕರ್ಷಣಮಾಡುವುದರಿಂದ ಅದು ಇತರ ಕಾರ್ಯಗಳನ್ನು ಸಂಗ್ರಹಿಸುವುದಕ್ಕೋಸ್ಕರ ಪಠಿತವಾಗಿರುವುದರಿಂದ ಧಾತುವಿನ ಅಕಾರಕ್ಕೆ ಲೋಪವೂ ಧಾತುವಿನ ರೇಫಕ್ಕೆ ಸಂಪ್ರಸಾರಣವೂ ಬರುತ್ತದೆ. ಸ್ಪೃಧ್ ಶಬ್ದವಾಗುತ್ತದೆ. ಷಷ್ಠೀ ಬಹುವಚನಾಂತರೂಪ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶ್ವೇತಮ್**—ಶ್ವಿತಾ ವರ್ಣೇ. ಧಾತು. ಪಚಾದಿ ಆಕೃತಿಗಣವಾದುದರಿಂದ **ನಂದಿಗ್ರಹ ಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ **ಅಚ್** ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅಂತೋದಾತ್ತಸ್ವರ ಬರುತ್ತದೆ.

**ತರುತಾರಮ್**—ತೄ ಪ್ಲವನ ತರಣಯೋಃ. ಧಾತು. ಇದಕ್ಕೆ ತೃಚ್ ಪ್ರತ್ಯಯ ಬಂದಾಗ **ಗ್ರಸಿತಸ್ಕಭಿತಸ್ತಭಿತ**—(ಪಾ. ಸೂ. ೭-೨-೩೪) ಎಂಬಲ್ಲಿ ನಿಪಾತಿತವಾದುದರಿಂದ ಇಷ್ಟರೂಪ ಸಿದ್ಧಿಯಾಗುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದ್ಯುವಸ್ಯಥಃ**—ದುವಸ್ ಸಂದೀಪನೇ. ಧಾತು ಕಂಡ್ವಾದಿ. ಇಲ್ಲಿ ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಪ್ರತ್ಯಯ. ಲಟ್ ಮಧ್ಯಮ ಪುರುಷ ದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶರ್ಯೈಃ**—ಶೄ ಹಿಂಸಾಯಾಂ. ಧಾತು. ಶೀರ್ಯಂತೇ ಇತಿ ಶರ್ಯಾಃ. **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. **ಯತೋಽನಾವಃ** (ಪಾ ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದುಸ್ತರಮ್**—ತೄ ಪ್ಲವನತರಣಯೋಃ. ಧಾತು. ತರೀತುಮಶಕ್ಯಮ್ ದುಸ್ತರಮ್. **ಈಷದುಃಸುಷು ಕೃ**—(ಪಾ. ಸೂ. ೩-೩-೧೨೬) ಎಂಬುದರಿಂದ ಕೃಚ್ಛ್ರಾರ್ಥದಲ್ಲಿ ಖಲ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಚರ್ಕೃತ್ಯಮ್**—ಡುಕೃಞ್ ಕರಣೇ. ಧಾತು. ಇದಕ್ಕೆ ಪೌನಃಪುನ್ಯಾರ್ಥದಲ್ಲಿ **ಧಾತೋರೇಕಾಚೋ-ಹಲಾದೇಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಪ್ರತ್ಯಯ. **ಯಙೋಽಚಿ ಚ** ಸೂತ್ರದಿಂದ ಅದಕ್ಕೆ ಲುಕ್. **ಸನ್ಯಙೋಃ** (ಪಾ. ಸೂ. ೬-೧-೯) ಸೂತ್ರದಿಂದ ಧಾತುವಿಗೆ ದ್ವಿತ್ವ. **ಗುಣೋ ಯಙ್‌ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ರಪರವಾಗಿ ಬರುತ್ತದೆ. ಯಙ್‌ಲುಗಂತದ ಮೇಲೆ **ವಿಭಾಷಾ ಕೃವೃಷೋಃ** ಎಂಬುದರಿಂದ ಕ್ಯಪ್ ಪ್ರತ್ಯಯ. ಪಿತ್ತಾದುದರಿಂದ **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ‖ ೧೦ ‖

ನೂರಹತ್ತೊಂಭತ್ತನೆಯ ಸೂಕ್ತ ಮುಗಿದುದು.

## ನೂರ ಇಪ್ಪತ್ತನೆಯ ಸೂಕ್ತವು

**ಕಾ ರಾಧದಿತಿ ದ್ವಾದಶರ್ಚಂ ಪಂಚಮಂ ಸೂಕ್ತಂ। ಅತ್ರಾನುಕ್ರಮ್ಯತೇ। ಕಾ ರಾಧದ್ದ್ವಾದಶಾಂತ್ಯಾ ದುಃಸ್ವಪ್ನನಾಶನ್ಯಾದ್ಯಾ ಗಾಯತ್ರೀ ದ್ವಿತೀಯಾ ಕಕುಪ್ ತೃತೀಯಾಚತುರ್ಥ್ಯೌ ಕಾವಿರಾಣ್ನಷ್ಟರೂಪ್ಯೌ ಪಂಚಮೀ ತನುಶಿರಾ ಷಷ್ಠ್ಯುಷ್ಣಿಗ್ವಿಷ್ಟಾರಬೃಹತೀ ಕೃತಿರ್ವಿರಾಟ್ ತಿಸ್ರೋ ಗಾಯತ್ರ್ಯ ಇತಿ। ಅಸ್ಯಾಯಮರ್ಥಃ। ಅನುವೃತ್ತೇರೌಶಿಜೋ ದೈರ್ಘತಮಸಃ ಕಕ್ಷೀವಾನೃಷಿಃ। ಆದ್ಯಾ ಗಾಯತ್ರೀ। ವಿದ್ವಾಂಸಾವಿತ್ಯೇಷಾ ಕಕುಪ್ ಮಧ್ಯಮಪಾದಸ್ಯ ದ್ವಾದಶಾಕ್ಷರತ್ವಾತ್। ಮಧ್ಯಮಶ್ಚೇತ್ಕಕುಪ್। ಅನು. ೫-೩। ಇತಿ ಹಿ ತಲ್ಲಕ್ಷಣಂ। ತೃತೀಯಾ ತಾ ವಿದ್ವಾಂಸೇತ್ಯೇಷಾ ಕಾವಿರಾಟ್। ನವಕಯೋರ್ಮಧ್ಯೇ ಜಾಗತಃ ಕಾವಿರಾಟ್। ಅನು. ೬-೫। ಇತ್ಯುಕ್ತಲಕ್ಷಣೋಪೇತತ್ವಾತ್। ಚತುರ್ಥೀ ವಿ ಪೃಚ್ಛಾಮೀತ್ಯೇಷಾ**

**ನಷ್ಟರೂಪೀ । ನವವೈರಾಜತ್ರಯೋದಶೈರ್ನಷ್ಟರೂಪೀ । ಅನು. ೬-೬ । ಇತ್ಯುಕ್ತಲಕ್ಷಣೋಪೇತತ್ವಾತ್ । ಪ್ರ ಯಾ ಘೋಷ ಇತ್ಯೇಷಾ ಪಂಚಮೀ ತನುಶಿರಾ । ಏಕಾದಶಿನೋಃ ಪರಃ ಷಟ್ಕಸ್ತನುಶಿರಾ । ಅನು. ೫-೫ । ಇತ್ಯುಕ್ತಲಕ್ಷಣೋಪೇತತ್ವಾತ್ । ಶ್ರುತಂ ಗಾಯತ್ರಮಿತ್ಯೇಷಾ ಷಷ್ಠೀ ಯದ್ಯಪಿ ಪಾದಸಂಖ್ಯಯೋಷ್ಣಿಙ್ನ ಭವತಿ ತಥಾಪ್ಯಕ್ಷರಸಂಖ್ಯಯೋಷ್ಣಿಕ್ । ಯುವಂ ಹೀತಿ ಸಪ್ತಮೀ ವಿಷ್ಟಾರಬೃಹತೀ । ಅಷ್ಟಿನೋರ್ಮಧ್ಯೇ ದಶಕೌ ವಿಷ್ಟಾರಬೃಹತೀ । ಅನು. ೭-೫ । ಇತಿ ತಲ್ಲಕ್ಷಣೋಪೇತತ್ವಾತ್ । ಮಾ ಕಸ್ಮಾ ಇತ್ಯಷ್ಟಮೀ ಕೃತಿಃ । ಜಾಗತಾವಷ್ಟಕಶ್ಚ ಕೃತಿಃ । ಅನು. ೬-೩ । ಇತ್ಯುಕ್ತಲಕ್ಷಣಸದ್ಭಾವಾತ್ । ದುಹೀಯನ್ನಿತಿ ನವಮೀ ವಿರಾಟ್ । ದಶಮ್ಯಾದ್ಯಾಸ್ತಿಸ್ರೋ ಗಾಯತ್ರ್ಯಃ । ಅಶ್ವಿನಂ :ವೈ ಇತಿ ವೈಶಬ್ದಪ್ರಯೋಗಾತ್ತುಹ್ಯಾದಿಪರಿಭಾಷಯೇದಮಪಿ ಸೂಕ್ತಮಾಶ್ವಿನಂ । ಅಥ ಸ್ವಪ್ನಸ್ಯೇತ್ಯಂತ್ಯಯಾ ದುಃಸ್ವಪ್ನನಾಶನಂ ಪ್ರತಿಪಾದ್ಯತೇ । ಅತೋ ಯಾ ತೇನೋಚ್ಯತೇ ಸಾ ದೇವತಾ । ಅನು. ೨-೫ । ಇತಿ ನ್ಯಾಯೇನ ತದೇವ ದೇವತಾ ॥ ಸೂಕ್ತವಿನಿಯೋಗೋ ಲೈಂಗಿಕಃ । ಘರ್ಮಾಭಿಷ್ಟವ ಆದಿತೋ ನವರ್ಚೋ ವಿನಿಯುಕ್ತಾಃ। ಸೂತ್ರ್ಯತೇ ಹಿ । ಕಾ ರಾಧದ್ಧೋತ್ರಾಶ್ವಿನಾ ವಾಮಿತಿ ನವಾ ಭಾತ್ಯಗ್ನಿಃ । ಅ. ೪-೬ । ಇತಿ ॥ ಕಾ ರಾಧದ್ಧೋತ್ರಾಶ್ವಿನಾ ವಾಮಿತಿ ನವ ವಿಚ್ಛಂದಸಃ। ಐ. ಬ್ರಾ. ೧-೨೧ । ಇತ್ಯಾದಿಕಂ ಬ್ರಾಹ್ಮಣಮನುಸಂಧೇಯಂ ॥**

**ಅನುವಾದವು—ಕಾ ರಾಧತ್** ಎಂಬ ಈ ಸೂಕ್ತವು ಹದಿನೇಳನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಕಾ ರಾಧದ್ದ್ವಾದಶಾಂತ್ಯಾ ದುಃಸ್ವಪ್ನನಾಶನ್ಯಾದ್ಯಾ ಗಾಯತ್ರೀ ದ್ವಿತೀಯಾ ಕಕುಪ್ ತೃತೀಯಾ ಚತುರ್ಥ್ಯೌ ಕಾವಿರಾಣ್ನಷ್ಟರೂಪ್ಯೌ ಪಂಚಮೀ ತನುಶಿರಾ ಷಷ್ಠ್ಯಕ್ಷರೈರುಷ್ಣಿಗ್ವಿಷ್ಟಾರಬೃಹತೀ ಕೃತಿರ್ವಿರಾಟ್ ತಿಸ್ರೋ ಗಾಯತ್ರ್ಯ ಇತಿ ।** ಎಂದು ಹೇಳಿರುವುದು. ಇದರ ಅರ್ಥವು—ಹಿಂದಿನ ಸೂಕ್ತಗಳಂತೆಯೇ ಈ ಸೂಕ್ತಕ್ಕೂ ಕಕ್ಷೀವಾನ್ ದೈರ್ಘತಮಸ ಔಶಿಜಃ ಎಂಬುವನೇ ಋಷಿಯು. ಈ ಸೂಕ್ತದ ಮೊದಲನೆಯ ಋಕ್ಕು ಗಾಯತ್ರೀಛಂದಸ್ಕವು. **ವಿದ್ವಾಂಸೌ** ಎಂಬ ಎರಡನೆಯ ಋಕ್ಕು ಕಕುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ (ಅನು. ೫-೩) **ಮಧ್ಯಮಶ್ಚೇತ್ಕಕುಪ್** ಎಂದು ಈ ಛಂದಸ್ಸಿನ ಲಕ್ಷಣವನ್ನು ಹೇಳಿರುವುದರಿಂದ ಮಧ್ಯಮಪಾದಕ್ಕೆ (ಎರಡನೆಯ ಪಾದಕ್ಕೆ) ಹನ್ನೆರಡು ಅಕ್ಷರಗಳಿರುವುದರಿಂದ ಈ ಛಂದಸ್ಸಿಗೆ ಕಕುಪ್ ಎಂದು ಹೆಸರು. **ತಾ ವಿದ್ವಾಂಸಾ** ಎಂಬ ಮೂರನೆಯ ಋಕ್ಕು ಕಾವಿರಾಟ್ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ—**ನವಕಯೋರ್ಮಧ್ಯೇ ಜಾಗತಃ ಕಾವಿರಾಟ್** (ಅನು. ೬-೫) ಒಂಭತ್ತು ಅಕ್ಷರಗಳಿರುವ ಒಂದು ಮತ್ತು ಮೂರನೆಯ ಪಾದಗಳ ಮಧ್ಯದಲ್ಲಿರುವ ಎರಡನೆಯ ಪಾದವು ಜಗತೀಛಂದಸ್ಕವಾಗಿ (ಹನ್ನೆರಡು ಅಕ್ಷರಗಳ ಪಾದವುಳ್ಳದ್ದಾಗಿ) ಇರುವುದರಿಂದ ಈ ಛಂದಸ್ಸಿಗೆ ಕಾವಿರಾಟ್ ಎಂದು ಲಕ್ಷಣವನ್ನು ಹೇಳಿರುವುದು. **ವಿ ಪೃಚ್ಛಾಮಿ** ಎಂಬ ನಾಲ್ಕನೆಯ ಋಕ್ಕು ನಷ್ಟರೂಪೀ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ—**ನವವೈರಾಜತ್ರಯೋದಶೈರ್ನಷ್ಟರೂಪೀ** (ಅನು. ೬-೬) ಎಂದರೆ ಒಂಭತ್ತು ಅಕ್ಷರಗಳಿರುವ ಮೊದಲನೆಯ ಪಾದ, ಹತ್ತು ಅಕ್ಷರಗಳ ಪಾದವಾದ ವಿರಾಟ್ ಎಂಬ ಎರಡನೆಯ ಪಾದ ಮತ್ತು ಹದಿಮೂರು ಅಕ್ಷರಗಳಿರುವ ಮೂರನೆಯ ಪಾದ ಇವುಗಳಿಂದ ಕೂಡಿರುವ ಈ ಛಂದಸ್ಸಿಗೆ ನಷ್ಟರೂಪೀ ಎಂದು ಹೆಸರು ಎಂದು ಅನುಕ್ರಮಣಿಕೆಯಲ್ಲಿ ಹೇಳಿರು

ವುದು. **ಪ್ರ ಯೋ ಘೋಷೇ** ಎಂಬ ಐದನೆಯ ಋಕ್ಕು ತನುಶಿರಾ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ—**ಏಕಾದಶಿನೋಃ ಪರಃ ಷಟ್ಕಸ್ತನುಶಿರಾ** (ಅನು ೫–೫) ಹನ್ನೊಂದು ಅಕ್ಷರಗಳ ಎರಡು ಪಾದಗಳೂ, ಆರು ಅಕ್ಷರದ ಮೂರನೆಯ ಪಾದವೂ ಉಳ್ಳ ಛಂದಸ್ಸಿಗೆ ತನುಶಿರಾ ಎಂಬುದಾಗಿ ಹೇಳಿರುವುದು. **ಶ್ರುತಂ ಗಾಯತ್ರಂ** ಎಂಬ ಆರನೆಯ ಋಕ್ಕು ಪಾದಸಂಖ್ಯೆಯಪ್ರಕಾರ ಉಷ್ಣಿಕ್ ಛಂದಸ್ಸಾಗದಿದ್ದರೂ ಅಕ್ಷರಸಂಖ್ಯೆಯಪ್ರಕಾರ ಉಷ್ಣಿಕ್ ಛಂದಸ್ಸಾಗಿರುವುದು. **ಯುವಂ ಹ** ಎಂಬ ಏಳನೆಯ ಋಕ್ಕು ವಿಷ್ಟಾರಬೃಹತೀ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ—**ಅಷ್ಟಿನೋರ್ಮಧ್ಯೇ ದಶಕೌ ವಿಷ್ಟಾರಬೃಹತೀ** (ಅನು. ೭–೫) ಎಂದರೆ ಮೊದಲನೆಯ ಮತ್ತು ಕೊನೆಯ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಮಧ್ಯದಲ್ಲಿರುವ ಎಂದರೆ ಎರಡು ಮತ್ತು ಮೂರನೆಯ ಪಾದಗಳಲ್ಲಿ ಹತ್ತು ಹತ್ತು ಅಕ್ಷರಗಳೂ ಉಳ್ಳ ಛಂದಸ್ಸಿಗೆ ವಿಷ್ಟಾರಬೃಹತೀ ಎಂದು ಲಕ್ಷಣವು ಉಕ್ತವಾಗಿರುವುದು. **ಮಾ ಕಸ್ಮೈ** ಎಂಬ ಎಂಟನೆಯ ಋಕ್ಕು ಕೃತಿಃ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ—**ಜಾಗತಾವಷ್ಟಕಶ್ಚ ಕೃತಿಃ** (ಅನು. ೬–೩) ಎಂದರೆ ಮೊದಲಿನ ಎರಡು ಪಾದಗಳು ಜಗತೀಛಂದಸ್ಕಗಳಾಗಿಯೂ (ಹನ್ನೆರಡು ಅಕ್ಷರಗಳ ಪಾದಗಳು) ಕೊನೆಯ ಪಾದವು ಎಂಟು ಅಕ್ಷರಗಳುಳ್ಳದ್ದಾಗಿಯೂ ಇರುವ ಛಂದಸ್ಸಿಗೆ ಕೃತಿಯೆಂದು ಹೆಸರು ಎಂದು ಲಕ್ಷಣವು ಉಕ್ತವಾಗಿರುವುದು. **ದುಹೀಯನ್** ಎಂಬ ಒಂಭತ್ತನೆಯ ಋಕ್ಕು ವಿರಾಟ್‌ಛಂದಸ್ಕವು. ಎಂದರೆ ಈ ಛಂದಸ್ಸಿನ ಋಕ್ಕುಗಳಲ್ಲಿ ಪ್ರತಿಪಾದಕ್ಕೆ (ಮೂರು ಪಾದಗಳು) ಹನ್ನೊಂದು ಅಕ್ಷರಗಳಿರುವವು. ಹತ್ತರಿಂದ ಹನ್ನೆರಡರವರೆಗಿನ ಮೂರು ಋಕ್ಕುಗಳು ಗಾಯತ್ರೀಛಂದಸ್ಸಿನವು. (ಈ ಎಲ್ಲಾ ಛಂದಸ್ಸುಗಳ ಲಕ್ಷಣಗಳನ್ನು ನಾವು ಉದಾಹರಣೆಸಹಿತವಾಗಿ ಋ. ಸಂ ಮೊದಲನೆಯ ಭಾಗದ 221–231 ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.) ಅನುಕ್ರಮಣಿಕೆಯಲ್ಲಿ **ಆಶ್ವಿನಂ ತ್ವೈ** ಎಂದು ತ್ವೈಶಬ್ದಪ್ರಯೋಗವಿರುವುದರಿಂದ ಈ ಸೂಕ್ತಕ್ಕೆ ಅಶ್ವಿನೀದೇವತೆಗಳು ದೇವತೆಯು. **ಅಥ ಸ್ವಪ್ನಸ್ಯ** ಎಂಬ ಕೊನೆಯ ಋಕ್ಕಿಗೆ ದುಃಸ್ವಪ್ನನಾಶನಂ ಎನ್ನುವುದೇ ದೇವತೆಯೆಂದು ಹೇಳಲ್ಪಡುವುದು. ಅನುಕ್ರಮಣಿಕೆಯಲ್ಲಿ—**ಅತೋ ಯಾ ತೇನೋಚ್ಯತೇ ಸಾ ದೇವತಾ** । (ಅನು. ೨–೫) ಎಂದರೆ ಋಕ್ಕಿನಲ್ಲಿ ಪ್ರತಿಪಾದಿತವಾದ (ಹೇಳಿರುವ) ವಿಷಯವೇ ಆ ಋಕ್ಕಿಗೆ ದೇವತೆಯೆಂದು ಹೇಳಲ್ಪಡುವುದು ಎಂದು ವಚನವಿರುವುದರಿಂದ ಈ ಕೊನೆಯ ಋಕ್ಕಿನಲ್ಲಿ ಹೇಳಿರುವ ದುಃಸ್ವಪ್ನನಾಶನವೇ ಈ ಋಕ್ಕಿಗೆ ದೇವತೆಯಾಗಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಘರ್ಮಾಭಿಷ್ಟವವೆಂಬ ಕರ್ಮದಲ್ಲಿ ಈ ಸೂಕ್ತದ ಮೊದಲಿನ ಒಂಭತ್ತು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಕಾ ರಾಧದ್ಧೋತ್ರಾಶ್ವಿನಾ ವಾಮಿತಿ ನವಾ ಭಾತ್ಯಗ್ನಿಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪–೬) ಈ ವಿಷಯದಲ್ಲಿ **ಕಾ ರಾಧದ್ಧೋತ್ರಾಶ್ವಿನಾ ವಾಮಿತಿ ನವ ವಿಚ್ಛಂದಸಃ** । (ಐ. ಬ್ರಾ. ೧–೨೧) ಎಂಬ ಐತರೇಯಬ್ರಾಹ್ಮಣವಾಕ್ಯವೂ ಇದನ್ನು ಸಮರ್ಥಿಸುವುದು.

## ಸೂಕ್ತ—೧೨೦

|| ಮಂಡಲ—೧ || ಅನುವಾಕ—೧೭ || ಸೂಕ್ತ—೧೨೦ ||

|| ಅಷ್ಟಕ—೧ || ಅಧ್ಯಾಯ ೮ || ವರ್ಗ—೨೨, ೨೩ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ||

|| ಋಷಿಃ — ಕಕ್ಷೀವಾನ್ ದೈರ್ಘತಮಸ ಔಶಿಜಃ ||

|| ದೇವತಾ—೧-೧೧ ಅಶ್ವಿನೌ | ೧೨—ದುಃಸ್ವಪ್ನನಾಶನಂ ||

|| ಛಂದಃ—೧. ಗಾಯತ್ರೀ | ೨. ಕಕುಪ್ | ೩. ಕಾವಿರಾಟ್ || ೪. ನಷ್ಟರೂಪೀ | ೫. ತನುಶಿರಾ | ೬. (ಅಕ್ಷರೈಃ) ಉಷ್ಣಿಕ್ || ೭. ವಿಷ್ಟಾರಬೃಹತೀ | ೮. ಕೃತಿಃ | ೯. ವಿರಾಟ್ || ೧೦-೧೨. ಗಾಯತ್ರೀ ||

|| ಸಂಹಿತಾಪಾಠಃ ||

ಕಾ ರಾಧದ್ಧೋತ್ರಾಶ್ವಿನಾ ವಾಂ ಕೋ ವಾಂ ಜೋಷ ಉಭಯೋಃ |
ಕಥಾ ವಿಧಾತ್ಯಪ್ರಚೇತಾಃ || ೧ ||

|| ಪದಪಾಠಃ ||

ಕಾ | ರಾಧತ್ | ಹೋತ್ರಾ | ಅಶ್ವಿನಾ | ವಾಂ | ಕಃ | ವಾಂ | ಜೋಷೇ | ಉಭಯೋಃ |
ಕಥಾ | ವಿಧಾತಿ | ಅಪ್ರಚೇತಾಃ || ೧ ||

|| ಸಾಯಣಭಾಷ್ಯಂ ||

ಅಶ್ವಿನಾ ಹೇ ಅಶ್ವಿನೌ ವಾಂ ಯುವಾಂ ಕಾ ಹೋತ್ರಾ | ವಾಙ್ನಾಮೈತತ್ | ಕೀದೃಶೀ ಸ್ತುತಿಲಕ್ಷಣಾ ವಾಗ್ರಾಧತ್ | ಆರಾಧಯತಿ | ಪ್ರೀತೌ ಕರೋತಿ | ಯುವಯೋರ್ಮಾಹಾತ್ಮ್ಯಾನುರೂಪಾ ಸ್ತುತಿರ್ನಾಸ್ತೀತ್ಯರ್ಥಃ | ಕಿಂಚ ವಾಂ ಯುವಯೋರುಭಯೋರ್ಜೋಷೇ ಜೋಷಣೇ ಸೇವನೇ ಪ್ರೀಣನೇ ವಾ ಸಮರ್ಥಃ ಕಃ ಸ್ತೋತಾ ವಿದ್ಯತೇ | ಯುಷ್ಮದ್ಗುಣಾಭಿಜ್ಞಃ ಕಶ್ಚಿದಪಿ ನಾಸ್ತೀತ್ಯರ್ಥಃ |

**ಅಪ್ರಚೇತಾ ಯುವಯೋರ್ಮಾಹಾತ್ಮ್ಯಮಜಾನಂಶ್ಚ ಕಥಾ ಕೇನ ಪ್ರಕಾರೇಣ ವಿಧಾತಿ । ಯುವಾಂ ಪರಿಚರತಿ । ಯುಷ್ಮದ್ವಿಷಯಂ ಪರಿಚರಣಮಪಿ ನ ಕರ್ತುಂ ಶಕ್ಯಮಿತ್ಯರ್ಥಃ ॥ ರಾಧತ್ । ರಾಧ ಸಾಧ ಸಂಸಿದ್ಧೌ । ಲೇಟ್ಯಡಾಗಮಃ । ಜೋಷೇ । ಜುಷೀ ಪ್ರೀತಿಸೇವನಯೋಃ । ಭಾವೇ ಘಞ್ । ಞಿತ್ವಾದಾದ್ಯುದಾತ್ತತ್ವಂ । ಕಥಾ । ಥಾ ಹೇತೌ ಚ ಛಂದಸೀತಿ ಕಿಂಶಬ್ದಾತ್ಪ್ರಕಾರವಚನೇ ಥಾ-ಪ್ರತ್ಯಯಃ । ಕಿಮಃ ಕ ಇತಿ ಕಾದೇಶಃ । ವಿಧಾತಿ । ವಿಧ ವಿಧಾನೇ । ತೌದಾದಿಕಃ । ಲೇಟ್ಯಾಡಾಗಮಃ । ಅಪ್ರಚೇತಾಃ । ಪ್ರಕೃಷ್ಟಂ ಚೇತೋ ಯಸ್ಯಾಸೌ ಪ್ರಚೇತಾಃ । ನಞ್ಸಮಾಸೇಽವ್ಯಯಪೂರ್ವಪದ ಪ್ರಕೃತಿಸ್ವರತ್ವಂ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮಿಬ್ಬರನ್ನು । **ಕಾ ಹೋತ್ರಾ**—ಯಾವ ಸ್ತುತಿ ವಾಕ್ಯವು । **ರಾಧತ್**—ಆರಾಧಿಸುತ್ತದೆ? (ಪ್ರೀತಿಜನಕವಾಗುತ್ತದೆ?) । **ವಾಂ ಉಭಯೋಃ**—ನಿಮ್ಮಿಬ್ಬರ **ಜೋಷೇ**—ಸೇವೆಯಲ್ಲಿ (ಸಮರ್ಥನಾಗುವವನು) । **ಕಃ**—ಯಾರು? । **ಅಪ್ರಚೇತಾಃ**—ನಿಮ್ಮ (ಮಾಹಾತ್ಮೆಯನ್ನು) ತಿಳಿಯದವನು । **ಕಥಾ**—ಹೇಗೆ ತಾನೇ । **ವಿಧಾತಿ**—(ನಿಮ್ಮನ್ನು) ಪರಿಚರಿಸುತ್ತಾನೆ?

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ತುಷ್ಟಿಪಡಿಸುವ ಸ್ತುತಿವಾಕ್ಯವಾವುದು? (ನಿಮ್ಮ ಮಹಾತ್ಮೆಗೆ ಅನುರೂಪವಾದ ಸ್ತುತಿವಾಕ್ಯವೇ ಇಲ್ಲ) ನಿಮ್ಮನ್ನು ತೃಪ್ತಿಪಡಿಸುವ ಸಾಮರ್ಥ್ಯವುಳ್ಳವನು ಯಾರು? ನಿಮ್ಮ (ಮಾಹಾತ್ಮ್ಯೆಯನ್ನು) ತಿಳಿಯದವನು (ನಿಮ್ಮನ್ನು) ತೃಪ್ತಿಪಡಿಸುವುದು ತಾನೆ ಹೇಗೆ? (ನಿಮ್ಮ ಪರಿಚರಣವೂ ಮಸ್ಸಾಧ್ಯವಾದುದು)

## English Translation.

What praise may propitiate you, Aswins? who may give satisfaction to you both? how may any ignorant (man) pay fitting homage?

॥ ವಿಶೇಷವಿಷಯಗಳು ॥

**ಕಾ ಹೋತಾ—ವಾಙ್ನಾಮೈತತ್ ಕೀದೃಶೀ ಸ್ತುತಿಲಕ್ಷಣಾ ವಾಕ್ ।** ಹೋತ್ರಾ ಎಂಬ ಶಬ್ದವು ಐವತ್ತೇಳು ವಾಙ್ನಾಮಗಳಲ್ಲಿ (ನಿ. ೨-೨೩) ಉಕ್ತವಾಗಿದೆ. "**ವಾಂ ಹೋತ್ರಾ ಕಾ**" ನಿಮ್ಮ ಸ್ತುತಿಯು ಯಾವುದು ಎಂದು ಪ್ರಶ್ನೆ ಮಾಡುವುದರಿಂದ ವಾಕ್ಕುಗಳು ಬಹಳವಾಗಿದ್ದರೂ ಅಶ್ವಿನೀದೇವತೆಗಳ ಗುಣಗಳನ್ನೂ ಮಹಿಮೆಯನ್ನೂ ವ್ಯಕ್ತಗೊಳಿಸುವ ವಾಕ್ಕುಗಳು ಸರಿಯಾಗಿ ಇಲ್ಲದಿರುವ ಕಾರಣ ನಿಮ್ಮನ್ನು ಸ್ತುತಿಮಾಡುವುದು ಅಶಕ್ಯವೆಂದು ತಿಳಿಯುತ್ತದೆ. ಇದರಿಂದ ಅಶ್ವಿನೀದೇವತೆಗಳ ಗುಣಗಳ ಮಹಿಮೆಯೂ ವಾಗಗೋಚರವಾಗಿದೆ ಎಂದು ವರ್ಣಿಸಿದೆ. ಸ್ತುತಿ ಎಂಬುವುದು ಸಾರ್ಥಕವಾಗಿರುವ ಶಬ್ದಗಳಿಂದ ಅವರವರ ಗುಣಾದಿಗಳನ್ನು ಪ್ರಕಾಶವಾಗುವಂತೆ ಹೇಳುವುದಾದ್ದರಿಂದ

ನಿಮ್ಮ ಮಾಹಾತ್ಮ್ಯವನ್ನೂ ಎಲ್ಲವನ್ನೂ ಸಂಪೂರ್ಣವಾಗಿ ಬೋಧಿಸುವ ಶಬ್ದವೇಇಲ್ಲವೆ ಸ್ತುತಿಯನ್ನು ಮಾಡುವುದೂ ಅಸಂಭಾವಿತವಾಗಿರುವುದು ಎಂಬ ಅರ್ಥವು ಇಲ್ಲಿ ವರ್ಣಿತವಾಗಿರುವುದು. ಇದರಿಂದ ಅವರ ಮಹಿಮೆಯು ವರ್ಣನಾತೀತವಾಗಿರುವುದೆಂದು ವಿವೃತವಾಗಿದೆ.

ಈ ವಾಕ್ಯದಂತೆಯೇ **ಕಾ ವಾಂ ಜೋಷ ಉಭಯೋಃ** ಎಂಬ ವಾಕ್ಯದಿಂದ ಸ್ತುತಿ ಮಾಡುವವನು ಇದ್ದರೂ ನಿಮ್ಮ ಗುಣಗಳೆಲ್ಲವನ್ನು ತಿಳಿದುಕೊಂಡು ನಿಮ್ಮ ಮನಸ್ಸಿಗೆ ಹಿತವಾಗಿ ಸಂತೋಷವುಂಟಾಗುವ ಹಾಗೆ ಸ್ತುತಿ ಮಾಡುವವನು ಯಾರು ಎಂಬ ಪ್ರಶ್ನೆಯಿಂದ ಅಂತಹ ಮನುಷ್ಯನು ಇಲ್ಲವೆಂದು ನಿಶ್ಚಯವಾಗುವ ಕಾರಣ ಆ ಮೂಲಕವಾಗಿ ನಿಮ್ಮ ಅನುಗ್ರಹವನ್ನು ಪಡೆಯುವುದೂ ಅಸಂಭಾವಿತವೆಂದು ವರ್ಣಿಸಿದೆ. ಇದರಿಂದ **ಯುವಯೋರ್ಮಾಹಾತ್ಮ್ಯಾನುರೂಪಾ ಸ್ತುತಿರ್ನಾಸ್ತಿ**, ನಿಮ್ಮ ಮಹಿಮೆಯನ್ನು ವ್ಯಕ್ತಗೊಳಿಸುವ ಸ್ತುತಿಯು ಇಲ್ಲದಿರುವಂತೆ **ಯುಷ್ಮದ್ಗುಣಾಭಿಜ್ಞಃ ಕಶ್ಚಿದಪಿ ನಾಸ್ತಿ** ನಿಮ್ಮ ಗುಣಗಳನ್ನು ಚೆನ್ನಾಗಿ ತಿಳಿದು ಇರುವವನು ಯಾವನೂ ಇಲ್ಲವು ಎಂದೂ ವ್ಯಕ್ತವಾಗುತ್ತದೆ.

**ಕಥಾ—ಕೇನ ಪ್ರಕಾರೇಣ,** ಯಾವ ರೀತಿಯಿಂದ ಎಂದು ಅರ್ಥ.

**ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿವೇದ ।**
**ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿ ವರ್ತೇತೇ ಅಹನೀ ಚಕ್ರಿಯೇವ ॥**
(ಋ.ಸಂ. ೧–೧೮೫–೧)

ಎಂಬ ಋಕ್ಕಿನಲ್ಲಿ ಕಥಾ ಎಂಬ ಪದಕ್ಕೆ ಕಥಂ ಎಂದು ನಿರುಕ್ತಕಾರರು ವ್ಯಾಖ್ಯಾನ (ನಿ. ೩–೨೨) ಮಾಡಿರುತ್ತಾರೆ.

**ಅಪ್ರಚೇತಾಃ— ಯುವಯೋರ್ಮಾಹಾತ್ಮ್ಯಮಜಾನನ್.** । ಪ್ರಚೇತಸ್ ಎಂಬ ಪದವು—

**ಆ ಜಂಘಂತಿ ಸಾನ್ವೇಷಾಂ ಜಘನಾँ ಉಪ ಜಿಘ್ನತೇ ।**
**ಅಶ್ವಾಜನಿ ಪ್ರಚೇತಸೋಽಶ್ವಾನ್ತ್ಸಮತ್ಸು ಚೋದಯ ॥** (ಋ. ಸಂ. ೬–೭೫–೧೩)

ಎಂಬ ಋಕ್ಕಿನಲ್ಲಿ **ಪ್ರಚೇತಸಃ ಪ್ರವೃದ್ಧಚೇತಸಃ** ಅಭಿವೃದ್ಧಿ ಹೊಂದಿದ ಜ್ಞಾನವುಳ್ಳವರು ಎಂದು (ನಿ. ೯–೨೦) ಅರ್ಥಬೋಧಕವಾಗಿರುವುದರಿಂದ-ಅನಭಿಜ್ಞರು ಅಂದರೆ ತಿಳಿಯದವರು ಅಪ್ರಚೇತಸರೆಂದು ಅರ್ಥವಾಗುವುದು. ಅಶ್ವಿನೀದೇವತೆಗಳ ಮಹಿಮೆಯನ್ನು ತಿಳಿಯದಿರುವವರು ಅವರ ಸೇವೆಯನ್ನು ಯಾವ ರೀತಿಯಿಂದ ಆಚರಿಸುವರು ಎಂಬ ಪ್ರಶ್ನೆಯಿಂದ ಹಿಂದಿನ ವಾಕ್ಯದಂತೆಯೇ ಅಶ್ವಿನೀದೇವತೆಗಳ ಪರಿಚರಣವು ಅಶಕ್ಯವಾದದ್ದು ಎಂಬುವದಾಗಿ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ರಾಧತ್**—ರಾಧ ಸಾಧ ಸಂಸಿದ್ಧೌ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪರ**—(ಪಾ. ಸೂ. ೩–೪–೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩–೪–೯೪) ಎಂಬುದರಿಂದ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜೋಷೇ**—ಜುಷೀ ಪ್ರೀತಿಸೇವನಯೋಃ ಧಾತು. ಇದಕ್ಕೆ ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಜೋಷ ಎಂದು ರೂಪವಾಗುತ್ತದೆ. ಪ್ರತ್ಯಯ ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ.

**ಕಥಾ**—ಕಿಮ್ ಶಬ್ದ. **ಥಾ ಹೇತೌ ಚ ಛಂದಸಿ** (ಪಾ. ಸೂ. ೫-೩-೨೬) ಎಂಬುದರಿಂದ ಪ್ರಕಾರ ವಚನದಲ್ಲಿ ಥಾ ಪ್ರತ್ಯಯ. **ಪ್ರಾಗ್ದಿಶೋ ವಿಭಕ್ತಿಃ** (ಪಾ. ಸೂ. ೫-೩-೧) ಎಂಬುದರಿಂದ ಇದಕ್ಕೆ ವಿಭಕ್ತಿಸಂಜ್ಞೆ ಬರುವುದರಿಂದ **ಕಿಮಃ ಕಃ** (ಪಾ. ಸೂ. ೭-೨-೧೦೩) ಎಂಬುದರಿಂದ ಕಿಮ್ ಶಬ್ದಕ್ಕೆ ಕಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಧಾತಿ**—ವಿಧ ವಿಧಾನೇ. ಧಾತು. ತುದಾದಿ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಸೂತ್ರದಿಂದ ಶ ವಿಕರಣ. **ಸಾರ್ವಧಾತುಕಮಪಿತ್** ಸೂತ್ರದಿಂದ ಇದಕ್ಕೆ ಙಿತ್ವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ಅಪ್ರಚೇತಾಃ**—ಪ್ರಕೃಷ್ಟಂ ಚೇತೋ ಯಸ್ಯ ಅಸೌ ಪ್ರಚೇತಾಃ. ಚಿತೀ ಸಂಜ್ಞಾನೇ ಧಾತು. ಔಣಾದಿಕ್‌ವಾದ ಅಸುನ್ ಪ್ರತ್ಯಯ. ನ ಪ್ರಚೇತಾಃ ಅಪ್ರಚೇತಾಃ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ವಿದ್ವಾಂಸಾವಿದ್ದುರಃ ಪೃಚ್ಛೇದವಿದ್ವಾನಿತ್ಥಾಪರೋ ಅಚೇತಾಃ ।
ನೂ ಚಿನ್ನು ಮರ್ತೇ ಅಕ್ರೌ ॥ ೨ ॥

॥ ಪದಪಾಠಃ ॥

ವಿದ್ವಾಂಸೌ । ಇತ್ । ದುರಃ । ಪೃಚ್ಛೇತ್ । ಅವಿದ್ವಾನ್ । ಇತ್ಥಾ । ಅಪರಃ । ಅಚೇತಾಃ ।
ನು । ಚಿತ್ । ನು । ಮರ್ತೇ । ಅಕ್ರೌ ॥ ೨ ॥

॥ ಸಾಯಣಭಾಷ್ಯಂ ॥

ಇತ್ಥೇತ್ಥಮನೇನ ಪೂರ್ವೋಕ್ತಪ್ರಕಾರೇಣಾವಿದ್ವಾನಜ್ಞಃ ಸ್ತೋತಾ ವಿದ್ವಾಂಸಾವಿತ್ ಸರ್ವಜ್ಞಾ-ವಶ್ವಿನಾವೇವ ಧುರೋ ದ್ವಾರಾಣಿ ಸ್ತುತಿಪರಿಚರಣಯೋರುಪಾಯಭೂತಾನ್ಮಾರ್ಗಾನ್ಪೃಚ್ಛೇತ್ । ಪ್ರಷ್ಟುಮರ್ಹತಿ । ಅಪರೋಽಶ್ವಿಭ್ಯಾಮನ್ಯಃ ಸರ್ವೋಽಪ್ಯಚೇತಾಃ । ಚೇತಸಾ ಜ್ಞಾನೇನ ರಹಿತಃ । ತಸ್ಮಾದಶ್ವಿನಾವೇವ ಪೃಚ್ಛೇದಿತ್ಯರ್ಥಃ । ತಾ ಚಾಕ್ರಾ ಶತ್ರುಭಿರನಾಕ್ರಾಂತಾವಶ್ವಿನೌ ನೂ ಚಿತ್ ಕ್ಷಿಪ್ರಮೇವ ಮರ್ತೇ ಮನುಷ್ಯೇ ಸ್ತೋತರಿ ಭಕ್ತಾನುಗ್ರಾಹಕತಯಾ ಸನಿಂ ಧತ್ತ ಇತಿ ವಾಕ್ಯಶೇಷಃ ॥ ಇತ್ಥಾ । ಥಾ ಹೇತೌ ಚ ಛಂದಸೀತಿ ಥಾಪ್ರತ್ಯಯಃ । ಇದಮ ಇಶ್ । ಏತೇತೌ ರಥೋಃ । ಪಾ. ೫-೩-೪ । ಇತೀದ್ಭಾವಃ । ಯದಿ ಥಾ ಹೇತೌ ಚೇತ್ಯತ್ರೇದಂಶಬ್ದಸ್ಯ ನಾನುವೃತ್ತಿಸ್ತದಾನೀಮಿದ-ಮಸ್ಥಮುಃ । ಏತದಂತಾತ್ಪರಸ್ಯಾ ವಿಭಕ್ತೇರ್ವ್ಯತ್ಯಯೇನ ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ಅಕ್ರಾ । ಕ್ರಮು ಪಾದವಿಕ್ಷೇಪೇ । ಅಸ್ಮಾನ್ನಞ್ಯುಪಪದೇ ಕೃತ್ಯಲ್ಯುಟೋ ಬಹುಲಮಿತಿ ಬಹುಲವಚ-ನಾತ್ಕರ್ಮಣ್ಯಪಿ ಜನಸನಖನಕ್ರಮಗಮೋ ವಿಡಿತಿ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಇತ್ಥಾ**—ಈ ಪ್ರಕಾರವಾಗಿ । **ಅವಿದ್ವಾನ್**—(ಸ್ತುತಿ ವಿಧಾನವನ್ನು) ತಿಳಿಯದವನು । **ವಿದ್ವಾಂಸಾ ಇತ್**—ಸರ್ವಜ್ಞರಾದ (ಅಶ್ವಿನೀದೇವತೆಗಳನ್ನು) ಅವರನ್ನೇ । **ದುರಃ**—(ಸ್ತುತಿ ಪರಿಚರಣ) ಮಾರ್ಗಗಳನ್ನು । **ಪೃಚ್ಛೇತ್**—ಕೇಳಬೇಕು । **ಅಪರಃ**—(ಅಶ್ವಿನೀದೇವತೆಗಳಲ್ಲದೆ) ಇತರರು (ಎಲ್ಲರೂ) । **ಅಚೇತಾಃ**—ಅಜ್ಞಾನಿಗಳು । **ಅಕ್ರಾ**—(ಶತ್ರುಗಳಿಂದ) ಅನಾಕ್ರಾಂತರಾದ (ಅಜೇಯರಾದ) ಅವರಿಬ್ಬರು । **ನೂ ಚಿತ್**—ಕ್ಷಿಪ್ರವಾಗಿಯೇ । **ಮರ್ತೇ**—(ಸ್ತೋತೃವಾದ) ಮನುಷ್ಯನಲ್ಲಿ । **ನು**—(ಅನುಗ್ರಾಹಕರಾಗುವ)ರಷ್ಟೆ.

॥ ಭಾವಾರ್ಥ ॥

(ಹಿಂದೆ ಹೇಳಿದ) ಪ್ರಕಾರವಾಗಿ (ಸ್ತುತ್ಯಾದಿಗಳನ್ನು) ಅರಿಯದವರು ಜ್ಞಾನಿಗಳಾದ ಅಶ್ವಿನೀದೇವತೆಗಳನ್ನೇ (ಸ್ತುತಿಪರಿಚರಣ) ವಿಧಾನಗಳನ್ನು ಕೇಳಿ ತಿಳಿಯಬೇಕು ಅವರಿಬ್ಬರ ಹೊರತು ಮಿಕ್ಕವರೆಲ್ಲರೂ ಅಜ್ಞಾನಿಗಳು; ಶತ್ರುಗಳಿಗೆ ಅಜೇಯರಾದ ಅಶ್ವಿನೀದೇವತೆಗಳು (ತಮ್ಮನ್ನು) ಸ್ತುತಿಸುವವರನ್ನು ಕ್ಷಿಪ್ರವಾಗಿಯೇ ಅನುಗ್ರಹಿಸುತ್ತಾರೆ.

## English Translation.

Thus may an ignorant man inquire the means of worshipping the all-wise, for every (one) other (then the Aswins) is unknowing; they, the unconquered, quickly (show favour) to the man (who worships them).

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವನ್ನು ಸಾಯಣರು ಒಂದು ವಿಧವಾಗಿಯೂ ಸ್ಕಂದಸ್ವಾಮಿಗಳು ಇನ್ನೊಂದು ವಿಧವಾಗಿಯೂ ವಿವರಿಸಿರುತ್ತಾರೆ. ಅಶ್ವಿನೀದೇವತೆಗಳ ಮಹಿಮೆಯು ಮನೋವಾಗಗೋಚರವಾಗಿರುವದರಿಂದ ಇವರನ್ನು ಸ್ತೋತ್ರಮಾಡಲು ಇಚ್ಛೆಯುಳ್ಳವನು ಈ ವಿಷಯದಲ್ಲಿ ಅಜ್ಞನಾಗಿ, ಇವರನ್ನು ಸೇವಿಸುವ ಉಪಾಯಗಳನ್ನು ಸರ್ವಜ್ಞರಾಗಿರುವ ಈ ದೇವತೆಗಳನ್ನೇ ಪ್ರಶ್ನೆಮಾಡುವನು. ಇವರಿಗಿಂತಲೂ ಸರ್ವಜ್ಞರು ಬೇರೆ ಯಾರೂ ಇಲ್ಲದಿರುವುದರಿಂದ ಅಜ್ಞನಾದವನ ವಿಷಯದಲ್ಲಿ ಇವರು ಅನುಗ್ರಹವನ್ನು ಮಾಡುವರು ಎಂದು ಸಾಯಣರ ವಿವರಣೆ.

ಸ್ಕಂದಸ್ವಾಮಿಗಳ ವ್ಯಾಖ್ಯಾನದಲ್ಲಿ ಅರ್ಥವು ಇಷ್ಟು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅವರು ಮುಂದಿನ ಋಕ್ಕಿನೊಡನೆ ಈ ಋಕ್ಕಿನ ಅರ್ಥವನ್ನು ಸಮನ್ವಯಮಾಡಿ ವಿವರಿಸಿ ಎರಡು ಋಕ್ಕುಗಳಿಗೂ ಏಕವಾಕ್ಯ (ಒಂದೇ ವಾಕ್ಯ)ದ ಕ್ರಮದಿಂದ ಅರ್ಥವನ್ನು ಹೇಳುವರು.

**ಪರಸ್ಯಾಮೃಚಿ ತಚ್ಛಬ್ದಶ್ರುತೇರ್ಯಚ್ಛಬ್ದೋ ಅಧ್ಯಾಹರ್ತವ್ಯಃ । ತಥಾಚ ಏಕವಾಕ್ಯತಾ ಯೌ ವಿದ್ವಾಂಸೌ ಜಾನಂತೌ । ಸ್ತೋತಾ ಧೀರಃ ಸ್ತುತೇಃ ದ್ವಾರಾಣಿ ಉಪಾಯಾಃ ಸರ್ವಂ ಪೃಚ್ಛತಿ । ಅವಿದ್ವಾನಿತ್ಥಾ ಸತ್ಯಮೇವಾಜಾನನ್ । ಅಶಾತ್ಯೇನ ಅಪರಃ ನ್ಯೂನಶಕ್ತಿಃ ಜ್ಞಾತುಮಸಮರ್ಥಃ ಸ್ವಯಂ । ಪುರಾಣಾವೇವ ಮರ್ತೇ ಅಕ್ರೌ ವಶೀಕರ್ತಾರೌ ।**

ಎಂದು ಪದಗಳಿಗೆ ಅನ್ವಯವನ್ನು ಹೇಳಿರುವರು. ನು, ಇತ್ ಎಂಬಪದಗಳು ಪದಪೂರಣಗಳಾಗಿರುತ್ತವೆ. **ಇತ್ಥಾ** ಎಂಬ ಶಬ್ದವು ಆರು ಸತ್ಯನಾಮಗಳಲ್ಲಿ (ನಿ. ೩–೧೩) ಉಕ್ತವಾಗಿರುವುದರಿಂದ ಸತ್ಯವೆಂದು ಅರ್ಥವನ್ನು ಬೋಧಿಸುವುದು. ಮುಂದಿನ ಋಕ್ಕಿನಲ್ಲಿರುವ ತಚ್ಛಬ್ದದ ಸಂಗಡ ಅನ್ವಯವನ್ನು ಹೇಳುವ ಕಾರಣ ಯಚ್ಛಬ್ದವನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ಇದರಿಂದ ವಿದ್ವಾಂಸರಾದವರು ಎಲ್ಲವನ್ನೂ ತಿಳಿದು ಇರುವರು. ಸ್ತುತಿ ಮಾಡಲು ಅಪೇಕ್ಷಿಸುವವನು ಸ್ತುತಿ ಮಾಡುವ ಉಪಾಯಗಳನ್ನು ತಿಳಿಯುವುದಕ್ಕಾಗಿ ಪ್ರಶ್ನೆ ಮಾಡುವನು. ದಡ್ಡನು (ಏನನ್ನೂ ತಿಳಿಯದಿರುವವನು) ಸತ್ಯಾಸತ್ಯ ವಿವೇಚನೆ ಇಲ್ಲದೆ ಯಥಾಶ್ರುತಗ್ರಾಹಿಯಾಗಿ ಮೋಸವನ್ನೂ ತಿಳಿಯದವನಾಗಿರುವನು. ಮತ್ತು ಉಪದೇಶ ಮಾಡಿದ್ದನ್ನು ಸರಿಯಾಗಿ ತಿಳಿಯಲಾರದವನಾಗಿರುವನು. ಆದ್ದರಿಂದ ವಿದ್ವಾವಿದ್ವದುಭಯಸಾಮಾನ್ಯಕ್ಕೂ ಅನುಗ್ರಹಮಾಡುವವರಾದವರು ಪರಿಶೇಷನ್ಯಾಯದಿಂದ ಅಶ್ವಿನೀದೇವತೆಗಳಾಗಿರುವರು. ಇವರು ಅನುಗ್ರಹಮಾಡಿ ರಕ್ಷಿಸುವರು. ಆದ್ದರಿಂದಲೇ ಮರ್ತೇ ಅಕ್ರೌ ಮನುಷ್ಯರ ವಿಷಯದಲ್ಲಿ ವಶಮಾಡಿಕೊಳ್ಳುವವರು ಎಂದು ವರ್ಣಿಸಿದೆ ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುತ್ತಾರೆ.

ಅಕ್ರೌ—**ಶತ್ರುಭಿಃ ಅನಾಕ್ರಾಂತೌ** ಶತ್ರುಗಳಿಂದ ಆಕ್ರಮಿಸಲ್ಪಡದಿರುವವರು ಎಂದು ಸಾಯಣರ ವಿವರಣೆ. **ಆಙ್‌ಪೂರ್ವಸ್ಯ ಕ್ರಮೇರಿದಂ ಛಾಂದಸಂ ರೂಪಂ । ಆಕ್ರಮಿತಾರೌ ವಶೀಕರ್ತಾರೌ ।** ಆಙ್ ಎಂಬ ಉಪಸರ್ಗದೊಡನೆ ಇರುವ ಕ್ರಮು ಧಾತುವಿನಿಂದ ಆಕ್ರಮಣ ಎಂದು ರೂಪವಾಗಿ ವೇದದಲ್ಲಿ ಅಕ್ರವೆಂದು ರೂಪವಾಗಿರುತ್ತದೆ ಎಂದು ಸ್ಕಂದಸ್ವಾಮಿಗಳು ವರ್ಣಿಸಿರುವರು. ಯಾಸ್ಕರು—**ಅಕ್ರಃ—ಅಕ್ರ ಆಕ್ರಮಣಾತ್** (ನಿ. ೬–೧೭) ಆಕ್ರಮಣಮಾಡು ಎಂದು ಅರ್ಥವನ್ನು ಬೋಧಿಸುವುದರಿಂದ ಅಕ್ರ ಎಂದು ರೂಪವಾಗುತ್ತದೆ ಎಂದು ವ್ಯಾಖ್ಯಾನಮಾಡಿ—

**ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ ದಿದೃಕ್ಷೇಯಃ ಸೂನವೇ ಭಾಋಜೀಕಃ ।**
**ಉದುಸ್ರಿಯಾ ಜನಿತಾ ಯೋ ಜಜಾನಾಪಾಂ ಗರ್ಭೋ ನೃತಮೋ ಯಹ್ವೋ ಅಗ್ನಿಃ ॥**

(ಋ.ಸಂ. ೨-೧-೧೨)

ಈ ಋಕ್ಕನ್ನು ಉದಹರಿಸಿರುವರು. **ದುರ್ಗಾಚಾರ್ಯ**ರು (ನಿರುಕ್ತವ್ಯಾಖ್ಯಾಕಾರರು) **ಆಕ್ರಮ್ಯತೆ ಇತಿ ಅಕ್ರಃ ಪ್ರಾಕಾರಃ** ಎಂದು ವ್ಯಾಖ್ಯಾನಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ವಿದ್ವಾಂಸೌ**—ವಿದ ಜ್ಞಾನೇ. ಧಾತು. ಇದಕ್ಕೆ ಲಟ್ ಬಂದಾಗ **ವಿದೇಃ ಶತುರ್ವಸುಃ** (ಪಾ. ಸೂ. ೭-೧-೩೬) ಎಂಬುದರಿಂದ ಅದಕ್ಕೆ ಶತೃ ಬಂದಾಗ ವಸು ಪ್ರತ್ಯಯ. ವಿದ್ವಸ್ ಶಬ್ದವಾಗುತ್ತದೆ. ಇದಕ್ಕೆ ದ್ವಿವಚನ ಪರವಾದಾಗ **ಅತ್ವಸಂತಸ್ಯ**—ಎಂಬುದರಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ಅದಕ್ಕೆ ಅನುಸ್ವಾರ.

**ಇತ್ಥಾ**—ಇದಮ್ ಶಬ್ದ. **ಥಾ ಹೇತೌ ಚ ಛಂದಸಿ** (ಪಾ. ಸೂ. ೫-೩-೨೬) ಎಂಬುದರಿಂದ ಪ್ರಕಾರಾರ್ಥದಲ್ಲಿ ಥಾ ಪ್ರತ್ಯಯ. ಇದು ಪರವಾದಾಗ **ಇದಮ ಇಶ್** (ಪಾ. ಸೂ. ೫-೩-೩) ಎಂಬುದರಿಂದ ಪ್ರಕೃತಿಗೆ ಇಶಾದೇಶ ಪ್ರಾಪ್ತವಾದಾಗ ಅದಕ್ಕೆ ಅಪವಾದವಾಗಿ **ಏತೇತೌ ರಥೋಃ** (ಪಾ. ಸೂ. ೫-೩-೪) ಎಂಬುದರಿಂದ ಇದ್ಭಾವ ಬರುತ್ತದೆ. **ಥಾ ಹೇತೌ ಚ ಛಂದಸಿ** ಸೂತ್ರದಲ್ಲಿ ಇದಮ್ ಶಬ್ದವು ಅನುವೃತ್ತವಾಗುವುದಿಲ್ಲವೆಂದರೆ ಆಗ **ಇದಮಸ್ಥಮುಃ** (ಪಾ. ಸೂ. ೫-೩-೨೪) ಎಂಬುದರಿಂದ ಪ್ರಕಾರಾರ್ಥದಲ್ಲಿ ಥಮು ಪ್ರತ್ಯಯ. ಅವ್ಯಯಸಂಜ್ಞಾ ಇದ್ದರೂ ವ್ಯತ್ಯಯದಿಂದ ಪರದ ವಿಭಕ್ತಿಗೆ **ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ಡಾದೇಶ. ಡಿತ್ವ ಸಾಮರ್ಥ್ಯದಿಂದ ಟಿಗೆ ಲೋಪ. ಇತ್ಥಾ ಎಂದು ರೂಪವಾಗುತ್ತದೆ.

**ನೂ**—**ಋಚಿ ತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ನು ಶಬ್ದಕ್ಕೆ ದೀರ್ಘ.

**ಅಕ್ರಾ**—ಕ್ರಮು ಪಾದವಿಕ್ಷೇಪೇ. ಧಾತು. ಇದಕ್ಕೆ ನಞ್ ಉಪಪದವಾಗಿರುವಾಗ **ಜನಸನಖನಕ್ರಮಗಮೋ ವಿಟ್** (ಪಾ. ಸೂ. ೩-೨-೬೭) ಎಂಬುದರಿಂದ ವಿಟ್ ಪ್ರತ್ಯಯ. **ಕೃತ್ಯಲ್ಯುಟೋ ಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲ ವಚನವಿರುವುದರಿಂದ ಇದು ಕರ್ಮಣ್ಯರ್ಥದಲ್ಲಿ ಬರುತ್ತದೆ. **ವಿಡ್ವನೋರನುನಾಸಿಕಸ್ಯಾತ್** (ಪಾ. ಸೂ. ೬-೪-೪೧) ಎಂಬುದರಿಂದ ವಿಟ್‌ಪರವಾದಾಗ ಧಾತುವಿಗೆ ಆತ್ವ. ನಞ್‌ಸಮಾಸವಾದಾಗ **ತತ್ಪುರುಷೇತುಲ್ಯಾ** - (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ದ್ವಿವಚನಾಂತರೂಪ. ॥ ೨ ॥



॥ ಸಂಹಿತಾಪಾಠಃ ॥

ತಾ ವಿದ್ವಾಂಸಾ ಹವಾಮಹೇ ವಾಂ ತಾ ನೋ ವಿದ್ವಾಂಸಾ ಮನ್ಮ ವೋಚೇತಮದ್ಯ ।

ಪ್ರಾರ್ಚದ್ದಯಮಾನೋ ಯುವಾಕುಃ ॥ ೩ ॥

॥ ಪದಪಾಠಃ ॥

ತಾ । ವಿದ್ವಾಂಸಾ । ಹವಾಮಹೇ । ವಾಂ । ತಾ । ನಃ । ವಿದ್ವಾಂಸಾ । ಮನ್ಮ । ವೋಚೇತಂ । ಅದ್ಯ ।

ಪ್ರ । ಆರ್ಚತ್ । ದಯಮಾನಃ । ಯುವಾಕುಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಿದ್ವಾಂಸಾ ಸರ್ವಜ್ಞೌ ತಾ ವಾಂ ತೌ ಯುವಾಂ ಹವಾಮಹೇ । ಆಹ್ವಯಾಮಹೇ । ತಾವಾಹೂತೌ ವಿದ್ವಾಂಸಾಭಿಜ್ಞೌ ಯುವಾಂ ನೋಽಸ್ಮಭ್ಯಂ ಮನ್ಮ ಮನನೀಯಂ ಜ್ಞಾತವ್ಯಂ ಸ್ತೋತ್ರಮದ್ಯಾಸ್ಮಿನ್ಕಾಲೇ ವೋ ಚೇತಂ । ಬ್ರುವಾಣೌ ಭೂಯಾಸ್ತಂ । ಸ ಚಾಹಂ ಯುವಾಕುರ್ಯುವಾಂ ಕಾಮಯಮಾನಃ ಸ್ತುತ್ಯಾ ಸಂಯೋಜಯನ್ವಾ ದಯಮಾನೋ ಯುವಾಭ್ಯಾಂ ಹವಿಃ ಪ್ರಯಚ್ಛನ್ ಪ್ರಾರ್ಚತ್ । ಪ್ರಾರ್ಚಂ । ಪ್ರಕರ್ಷೇಣ ಸ್ತೌಮಿ ॥ ತಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ವೋಚೇತಂ । ಬ್ರೂಞ್ ವ್ಯಕ್ತಾಯಾಂ ವಾಚಿ । ಬ್ರುವೋ ವಚಿಃ । ಲಿಙ್ಯಾಶಿಷ್ಯಙ್ । ವಚ ಉಮಿತ್ಯುಮಾಗಮಃ । ಆರ್ಚತ್ । ಅರ್ಚ ಪೂಜಾಯಾಂ । ಭೌವಾದಿಕಃ । ತಿಙಾಂ ತಿಙೋ ಭವಂತೀತಿ ತಿಪಸ್ತಿಬಾದೇಶಃ । ದಯಮಾನಃ । ದಯ ದಾನಗತಿರಕ್ಷಣಹಿಂಸಾದಾನೇಷು । ಶಪಃ ಪಿತ್ತ್ವಾದನುದಾತ್ತತ್ವಂ । ಶಾನಚೋ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಯುವಾಕುಃ । ಯುವಾಂ ಕಾಮಯತ ಇತಿ ಯುವಾಕುಃ । ಮಿತದ್ರ್ವಾದಿಭ್ಯ ಉಪಸಂಖ್ಯಾನಂ । ಪಾ. ೩-೨-೧೮೦-೧ । ಇತಿ ಡುಪ್ರತ್ಯಯಃ । ಅವಿಭಕ್ತಾವಪಿ ವ್ಯತ್ಯಯೇನ ಯುವಾವೌ ದ್ವಿವಚನ ಇತಿ ಯುವಾದೇಶ ಆತ್ವಂ ಚ । ಯದ್ವಾ । ಯು ಮಿಶ್ರಣೇ । ಔಣಾದಿಕಃ ಕಾಕುಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ವಿದ್ವಾಂಸಾ**—ಸರ್ವಜ್ಞರಾದ । **ತಾ ವಾಂ**—ಆ ನಿಮ್ಮಿಬ್ಬರನ್ನು । **ಹವಾಮಹೇ**—ಆಹ್ವಾನಿಸುತ್ತೇವೆ । **ವಿದ್ವಾಂಸಾ**—(ಆಹೂತರಾಗಿ) ಅಭಿಜ್ಞರಾದ (ನೀವು) । **ನಃ**—ನಮಗೆ । **ಮನ್ಮ**—ಜ್ಞಾತವ್ಯವಾದ ಸ್ತೋತ್ರವನ್ನು । **ಅದ್ಯ**—ಈಗ । **ವ್ರೋಚೇತಂ**—ಹೇಳುವವರಾಗಬೇಕು; (ನಾನೂ) । **ಯುವಾಕುಃ**—ನಿಮ್ಮನ್ನು ಅಪೇಕ್ಷಿಸುವವನೂ ಮತ್ತು । **ದಯಮಾನಃ**—(ನಿಮಗೆ ಹವಿರಾದಿಗಳನ್ನು) ಅರ್ಪಿಸುವವನೂ ಆಗಿ । **ಪ್ರ ಅರ್ಚತ್**—ಹೆಚ್ಚಾಗಿ ಪೂಜಿಸುತ್ತೇನೆ.

॥ ಭಾವಾರ್ಥ ॥

ಸರ್ವಜ್ಞರಾದ ನಿಮ್ಮನ್ನು ನಾವು (ಸ್ತುತಿಗಳಿಂದ) ಕರೆಯುತ್ತೇವೆ; ಅಭಿಜ್ಞರಾದ ನೀವು (ನಮ್ಮಿಂದ ಕರೆಯಲ್ಪಟ್ಟು) ನಮಗೆ ಜ್ಞಾತವ್ಯವಾದ ಸ್ತುತಿಗಳನ್ನು ಈಗಲೇ ತಿಳಿಸಿ; (ನಾವೂ) ನಿಮ್ಮ (ಅನುಗ್ರಹಾ) ಕಾಂಕ್ಷಿಗಳಾಗಿ, (ಹವಿರಾದಿಗಳನ್ನು) ಅರ್ಪಿಸಿ, (ನಿಮ್ಮನ್ನು) ಪೂಜಿಸುತ್ತೇವೆ.

## English Translation

we invoke you who know all things; may you, who are omniscient, declare to us to-day the praise that is acceptable; desirous of your presence, I reverence you, offering (oblations).

॥ ವಿಶೇಷವಿಷಯಗಳು ॥

**ಯುವಾಕುಃ—ಯುವಾಂ ಕಾಮಯತೆ ಇತಿ ಯುವಾಕುಃ** । ನಿಮ್ಮನ್ನು ಅಪೇಕ್ಷಿಸುವವನೆಂದು ಅರ್ಥ. ಯುಷ್ಮತ್ಕಾಮಃ—ಎಂದು ಸ್ಕಂದಸ್ವಾಮಿಗಳು ಯುವಾಕು ಶಬ್ದಕ್ಕೆ ಅರ್ಥವನ್ನು ವಿವರಿಸಿರುವರು.

**ಮನ್ಮ—ಮನನೀಯಂ ಜ್ಞಾತವ್ಯಂ ಸ್ತೋತ್ರಮ್.** ಮನ್ಮ ಶಬ್ದಕ್ಕೆ ತಿಳಿಯಬೇಕಾದದ್ದು, ಅಥವಾ ಮನನಮಾಡಬೇಕಾದದ್ದು, ಸ್ತೋತ್ರವೆಂದು ಸಾಯಣರು ಅರ್ಥಮಾಡಿರುವರು. ಯಾಸ್ಕರು

**ಉಪ ಪ್ರಾಗಾತ್ಸುಮನ್ಮೇಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ** ॥

(ಋ. ಸಂ. ೧-೧೬೨-೭)

ಎಂಬ ಋಕ್ಕನ್ನು ಉದಹರಿಸಿರುವರು. **ಮನ್ಮ ಮನನೀಯಮರ್ಥಜಾತಂ** ಎಂದು ವೃತ್ತಿಕಾರರು ವ್ಯಾಖ್ಯಾನಮಾಡಿರುತ್ತಾರೆ. ಇದೇ ಅರ್ಥದಲ್ಲಿ ಈ ಪದವು ಬೇರೆಬೇರೆ ಕಡೆಗಳಲ್ಲಿ ಪ್ರಯುಕ್ತವಾಗಿದೆ.

**ತಮೂ ಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ** ॥

(ಋ. ಸಂ. ೮-೪೧-೨; ನಿ. ೧೦-೫)

**ಪ್ರ ತೆದ್ನೋಚೇಯಂ ಭನ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ ॥**　　(ಋ. ಸಂ. ೧-೧೨೯-೬)

ಇಲ್ಲಿ **ಮನ್ಮ** ಶಬ್ದಕ್ಕೆ **ಮನನಾನಿ ಪ್ರಜ್ಞಾನಾನಿ** ಎಂದು ಅರ್ಥವನ್ನು ವಿವರಿಸಿರುತ್ತಾರೆ.

ಸರ್ವಜ್ಞರಾದ ಅಶ್ವಿನೀ ದೇವತೆಗಳನ್ನು ಕರೆದು ಅವರು ಪ್ರೇರಿಸುವ ಬುದ್ಧಿಗೆ ಗೋಚರವಾಗುವ ಸ್ತುತಿಗಳಿಂದ ಅವರನ್ನು ಸ್ತುತಿಮಾಡುವೆವು ಎಂದು ವರ್ಣಿಸಿದೆ. ಅಶ್ವಿನೀದೇವತೆಗಳನ್ನು ಸ್ತುತಿಮಾಡಲು ಇಚ್ಛೆಯುಳ್ಳವನಾದ ಮಂತ್ರದ್ರಷ್ಟೃವು ಅವರನ್ನು ಮಂತ್ರದಿಂದ ಆಹ್ವಾನಮಾಡಿ ಸ್ತುತಿಸಿ ಹವಿಸ್ಸನ್ನು ಹೋಮಮಾಡಿ ಪುನಃ ಸ್ತುತಿಗಳಿಂದ ಅವರನ್ನು ಸಂತೋಷಪಡಿಸುವನು ಎಂದೂ ವಿವರಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ತಾ**—ತದ್ ಶಬ್ದ. ಇದಕ್ಕೆ ದ್ವಿವಚನ ಪರವಾದಾಗ **ತ್ಯದಾದೀನಾಮಃ** (ಪಾ. ಸೂ. ೭-೨-೧೦೨) ಎಂಬುದರಿಂದ ಅತ್ವ. **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಲಟ್ ಉತ್ತಮಪುರುಷ ಬಹುವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವಿದ್ವಾಂಸಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಮನ್ಮ**—ಮನ ಜ್ಞಾನೇ. ಧಾತು. **ಅನ್ಯೇಭ್ಯೋऽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕದಲ್ಲಿ ಅಮಿಗೆ **ಸ್ವಮೋರ್ನಪುಂಸಕಾತ್** ಎಂಬುದರಿಂದ ಅದಕ್ಕೆ ಲುಕ್ ಬಂದಾಗ ನಲೋಪ.

**ವೋಚೇತಮ್—**ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಆಶೀರ್ಲಿಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚ್ಯಾದೇಶ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದರಿಂದ ಅಙ್. ವ್ಯತ್ಯಯದಿಂದ ಯಾಸುಟಿಗೆ ಇಯಾದೇಶ. **ಲೋಪೋವ್ಯೋರ್ವಲಿ** ಸೂತ್ರದಿಂದ ಯಲೋಪ. **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಉಮಾಗಮ. ಗುಣ. ವೋಚೇತಂ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರ್ಚತ್—**ಅರ್ಚ ಪೂಜಾಯಾಂ ಧಾತು. ಭ್ವಾದಿ. **ತಿಙಾಂ ತಿಙೋ ಭವಂತಿ** ಎಂಬ ವಚನದಿಂದ ಲಙ್ ಉತ್ತಮಪುರುಷ ಏಕವಚನಕ್ಕೆ ತಿಬಾದೇಶ. **ಇತಶ್ಚ** ಸೂತ್ರದಿಂದ ಇಕಾರಲೋಪ. ಶಪ್ ವಿಕರಣ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ದಯಮಾನಃ**—ದಯ ದಾನಗತಿರಕ್ಷಣಹಿಂಸಾದಾನೇಷು. ಧಾತು. ಭ್ವಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ.

ಶಪ್ ಪಿತ್ತಾದುದರಿಂದ ಅನುದಾತ್ತ. ಆದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಶಾನಚ್) **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಯುವಾಕುಃ**— ಯುವಾಂ ಕಾಮಯತೇ ಇತಿ ಯುವಾಕುಃ. **ಮಿತದ್ರ್ವಾದಿಭ್ಯ ಉಪಸಂಖ್ಯಾನಮ್** (ಪಾ. ಸೂ. ३-२-೧೮೦-೧) ಎಂಬುದರಿಂದ ಡುಪ್ರತ್ಯಯ. ಕಮ್+ಉ ಎಂದಿರುವಾಗ ಡಿತ್ವ ಸಾಮರ್ಥ್ಯದಿಂದ ಟಿಲೋಪ. ವಿಭಕ್ತಿಪರವಾಗದಿದ್ದರೂ ವ್ಯತ್ಯಯದಿಂದ **ಯುವಾವೌ ದ್ವಿವಚನೇ** (ಪಾ. ಸೂ. ೭-೨-೯೨) ಎಂಬುದರಿಂದ ಮಪರ್ಯಂತಕ್ಕೆ ಯುವಾದೇಶ ಮತ್ತು ಆತ್ವ. ಅಥವಾ ಯು ಮಿಶ್ರಣಾ ಮಿಶ್ರಣಯೋಃ ಧಾತು. ಇದಕ್ಕೆ ಔಣಾದಿಕವಾದ ಕಾಕು ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಉವಙಾದೇಶ. ಆಕಾರಕ್ಕೆ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಉದಾತ್ತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ವಿ ಪೃಚ್ಛಾಮಿ ಪಾಕ್ಯಾ೩ ನ ದೇವಾನ್ವಷಟ್ಕೃತಸ್ಯಾದ್ಭುತಸ್ಯ ದಸ್ರಾ ।
ಪಾತಂ ಚ ಸಹ್ಯಸೋ ಯುವಂ ಚ ರಭ್ಯಸೋ ನಃ ॥ ೪ ॥

॥ ಪದಪಾಠಃ ॥

ವಿ । ಪೃಚ್ಛಾಮಿ । ಪಾಕ್ಯಾ । ನ । ದೇವಾನ್ । ವಷಟ್ऽಕೃತಸ್ಯ । ಅದ್ಭುತಸ್ಯ । ದಸ್ರಾ ।
ಪಾತಂ । ಚ । ಸಹ್ಯಸಃ । ಯುವಂ । ಚ । ರಭ್ಯಸಃ । ನಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ವಿ ಪೃಚ್ಛಾಮಿ । ವಿಶೇಷೇಣ ಪ್ರಷ್ಟುಮಿಚ್ಛಾಮಿ । ಪಾಕ್ಯಾ ನ ಪಕ್ತವ್ಯಪ್ರಜ್ಞಾನ್ ಸ್ವಪರಿಪಕ್ವಮತೀನನ್ಯಾನ್ದೇವಾನ್ನ ಪೃಚ್ಛಾಮಿ । ಕಿಂತು ಯುವಾಮೇವ ಸರ್ವಜ್ಞೌ ಪೃಚ್ಛಾಮೀತ್ಯರ್ಥಃ । ಹೇ ದಸ್ರಾ ದರ್ಶನೀಯೌ ತೌ ಯುವಾಂ ವಷಟ್ಕೃತಸ್ಯ ವಷಟ್ಕಾರೇಣಾಗ್ನೌ ಹುತಸ್ಯಾದ್ಭುತಸ್ಯಾಶ್ಚರ್ಯಭೂತಸ್ಯ ಮಹತಃ ಸಹ್ಯಸೋऽತಿಶಯೇನ ಬಲವತೋ ಬಲೋತ್ಪಾದಕಸ್ಯ

**ಸೋಮಸ್ಯ ಸ್ವಾಂಶಲಕ್ಷಣಮೇಕದೇಶಂ ಪಾತಂ ಚ । ನೋಽಸ್ಮಾಂಶ್ಚ ರಭ್ಯಸೋಽತಿಶಯೇನ ರಭಸ್ವಿನಃ ಪ್ರೌಢೋದ್ಯಮಾನ್ಕುರುತಂ ॥ ಪಾಕ್ಯಾ । ಪಚೇರ್ಯುರ್ಹಲೋಣ್ಯ್ಯತ್ । ಚಜೋಃ ಕು ಘಿಣ್ಣ್ಯತೋರಿತಿ ಕುತ್ವಂ । ತಿತ್ಸ್ವರಃ । ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ವಷಟ್ಕೃತಸ್ಯ । ವಷಟ್ ಶಬ್ದ-ಸ್ಯೋರ್ಯಾದಿತ್ವೇನ ಗತಿತ್ವಾದ್ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪಾತಂ । ಪಾ ಪಾನೇ । ಬಹುಲಂ ಛಂದಸೀತಿ ಶಪೋ ಲುಕ್ । ಸಹ್ಯಸಃ । ಸಹತೇಽಭಿಭವತ್ಯನೇನೇತಿ ಸಹೋ ಬಲಂ । ಅಸುನ್ । ತದಸ್ಯಾಸ್ತೀತಿ ಸಹಸ್ವೀ । ಮತ್ವರ್ಥೀಯೋ ವಿನಿಃ । ತತ ಆತಿಶಾಯನಿಕ ಈಯಸುನ್ । ವಿನ್ಮತೋರ್ಲುಕ್ । ಛಾಂದಸ ಈಕಾರಲೋಪಃ । ರಭ್ಯಸಃ । ರಭ ರಾಭಸ್ಯೇ । ರಾಭಸ್ಯಂ ಕಾರ್ಯೋಪಕ್ರಮಃ । ಪೂರ್ವವತ್ಪ್ರಕ್ರಿಯೋನ್ನೇಯಾ ॥**

॥ ಪ್ರತಿಪದಾರ್ಥ ॥

(**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । (**ಯುವಾಂ**—ಸರ್ವಜ್ಞರಾದ ನಿಮ್ಮನ್ನೇ) । **ವಿ ಪೃಚ್ಛಾಮಿ**—ಹೆಚ್ಚಾಗಿ ಪ್ರಶ್ನಿಸಲಿಚ್ಛಿಸುತ್ತೇನೆ; । **ಪಾಕ್ಯಾ**—ಪಕ್ವವಾಗಬೇಕಾದ ಜ್ಞಾನವುಳ್ಳ । **ದೇವಾನ್**—(ಇತರ) ದೇವತೆಗಳನ್ನು । **ನ (ಪೃಚ್ಛಾಮಿ)**—ಪ್ರಶ್ನಿಸುವುದಿಲ್ಲ; । (ಹೇ) **ದಸ್ರಾ**—ಎಲೈ ದರ್ಶನೀಯರಾದ ಅಶ್ವಿನೀದೇವತೆಗಳೇ । **ವಷಟ್ಕೃತಸ್ಯ**—ವಷಟ್ಕಾರಪೂರ್ವಕವಾಗಿ (ಅಗ್ನಿಯಲ್ಲಿ) ಹುತವಾದವೂ । **ಅದ್ಭುತಸ್ಯ**—ಆಶ್ಚರ್ಯಭೂತವಾದವೂ । **ಸಹ್ಯಸಃ**—ಬಲಕಾರಕವೂ ಆದ (ಸೋಮರಸದ ನಿಮ್ಮ ಭಾಗವನ್ನು) । **ಪಾತಂ ಚ**—ಪಾನಮಾಡಿ । **ನಃ ಚ**—ನಮ್ಮನ್ನೂ । **ರಭ್ಯಸಃ**—ರಭಸವುಳ್ಳವರನ್ನಾಗಿ (ಪ್ರೌಢೋದ್ಯಮಿಗಳನ್ನಾಗಿಮಾಡಿ).

॥ ಭಾವಾರ್ಥ ॥

ಎಲೈ ದಸ್ರರೇ, (ಸರ್ವಜ್ಞರಾದ ನಿಮ್ಮನ್ನೇ) ಹೆಚ್ಚಾಗಿ ಪ್ರಶ್ನಿಸುತ್ತೇನೆ; ಅಪಕ್ವಜ್ಞಾನಿಗಳಾದ (ಇತರ) ದೇವತೆಗಳನ್ನು ಪ್ರಶ್ನಿಸುವುದಿಲ್ಲ; (ನೀವು) ವಷಟ್ಕಾರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಿದುದೂ ಆಶ್ಚರ್ಯಕರವೂ, ಬಲಕಾರಕವೂ ಆದ (ಸೋಮರಸದ ನಿಮ್ಮ ಭಾಗವನ್ನು) ಪಾನಮಾಡಿ, ನಮ್ಮನ್ನು ಶ್ರೇಷ್ಠವಾದ ಉದ್ಯಮಗಳಲ್ಲಿ (ತೊಡಗುವಂತೆ) ಮಾಡಿ.

## English Translation.

I invite not the gods immature (in wisdom), but you, Dasaras; drink of the wonderful and strength-giving burnt-offering, and make us vigorous.

॥ ವಿಶೇಷವಿಷಯಗಳು ॥

**ಪಾಕ್ಯಾ ನ ದೇವಾನ್ ನ ಪೃಚ್ಛಾಮಿ । ನ ಪಕ್ತವ್ಯಪ್ರಜ್ಞಾನ್ ಸ್ವಪರಿಪಕ್ವಮತೀನ್ ಅನ್ಯಾನ್ ದೇವಾನ್ ನ ಪೃಚ್ಛಾಮಿ ಕಿಂತು ಯುವಾಮೇವ ಪೃಚ್ಛಾಮಿ ಸರ್ವಜ್ಞಾ ।** **ಪಾಕ** ಶಬ್ದವು ಎಂಟು ಪ್ರಶಸ್ಯನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುತ್ತದೆ. ಜ್ಞಾನವಂತರೂ ಬುದ್ಧಿವಂತರೂ ಆದ ಅಶ್ವಿನೀದೇವತೆಗಳನ್ನು ನಮ್ಮ ಬುದ್ಧಿಯಲ್ಲಿ ಅತಿಶಯವಾಗಿ ಜ್ಞಾನವು ಉಂಟಾಗುವಂತೆಯೂ ನಾವುಗಳು ಇವರನ್ನು ಸ್ತೋತ್ರ ಮಾಡುವಂತೆಯೂ

ಇವರ ಅನುಗ್ರಹವು ನಮಗೆ ಉಂಟಾಗುವುದಕ್ಕಾಗಿ ಕೇಳಿಕೊಳ್ಳುತ್ತೇನೆ. ಇವರಿಗಿಂತ ಬುದ್ಧಿಯಲ್ಲಿ ಕಡಿಮೆ ಯಾಗಿರುವ ಇತರ ದೇವತೆಗಳಿಂದ ನಮಗೆ (ವಿವಕ್ಷಿತ) ಬೇಕಾದ ಫಲವು ದೊರಕದಿರುವ ಕಾರಣ ಅವರನ್ನು ಕೇಳುವುದಿಲ್ಲ ಎಂದು ಅರ್ಥ.

ಈ ಋಕ್ಕಿನಲ್ಲಿ ಜ್ಞಾನದಲ್ಲಿ ಹೆಚ್ಚಾದ ತಿಳುವಳಿಕೆಯಿಂದ ಸರ್ವಜ್ಞರೆನಿಸಿಕೊಂಡಿರುವ ಅಶ್ವಿನೀದೇವತೆಗಳನ್ನು, ಅಗ್ನಿಯಲ್ಲಿ ವಷಟ್ಕಾರಪೂರ್ವಕ ಹೋಮಮಾಡಿರುವ ಮಹತ್ತಾದ ಮತ್ತು ಪುಷ್ಟಿಕರವಾದ ಹವಿಸ್ಸನ್ನು ಸ್ವೀಕರಿಸಿ ಸೋಮರಸವನ್ನು ಪಾನಮಾಡಿ ನಮಗೆ ಅವರನ್ನು ಸ್ತುತಿ ಮಾಡುವ ಜ್ಞಾನವು ಅಭಿವೃದ್ಧಿಯಾಗುವಂತೆಯೂ ಮತ್ತು ನಮ್ಮ ಬುದ್ಧಿಯು ಅತಿಶಯವಾಗಿ ಇರುವಂತೆಯೂ, ಇತರ ದೇವತೆಗಳು ಇವರಿಗಿಂತ ನ್ಯೂನ ಶಕ್ತಿಯುಳ್ಳವರಾಗಿರುವು ದರಿಂದ ಅವರ ವಿಷಯದಲ್ಲಿ ಪ್ರವರ್ತಿಸದಿರುವಂತೆಯೂ, ಇವರ ಅನುಗ್ರಹವು ಉಂಟಾಗಲೆಂದು ವರ್ಣಿಸಿದೆ.

**ಅದ್ಭುತಸ್ಯ ಆಶ್ಚರ್ಯಭೂತಸ್ಯ ಮಹತಃ ।** **ಅದ್ಭುತ** ಶಬ್ದವು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುತ್ತದೆ. ವಷಟ್ಕಾರವನ್ನು ಉಚ್ಚರಿಸಿ ಅಗ್ನಿಯಲ್ಲಿ ಹೋಮ ಮಾಡಿರುವ ವಸ್ತುವಿನ ಮಹತ್ವವನ್ನು ಈ ಪದದಿಂದ ವರ್ಣಿಸಿದೆ.

**ಸಹ್ಯಸಃ—ಸಹತೇ ಅಭಿಭವತ್ಯನೇನೇತಿ ಸಹಃ ಬಲಂ ತದಸ್ಯಾಸ್ತೀತಿ ಸಹಸ್ವೀ,।** ಇತರರನ್ನು ತಿರಸ್ಕಾರ ಮಾಡುವುದಕ್ಕೆ ಅನುಕೂಲವಾಗುವಂತೆ ಇರುವ ಬಲವು ಸಹಃ ಎಂಬ ಶಬ್ದದಿಂದ ಉಕ್ತವಾಗಿರುತ್ತದೆ. ಆ ಪ್ರಕಾರವಾದ ಬಲವನ್ನು ಹೊಂದಿರುವವನು ಸಹಸ್ವಿಯೆನಿಸುವನು. ಅದರಲ್ಲಿಯೂ ಅತಿಶಯವನ್ನು ಹೊಂದಿರುವವನು ಸಹಸ್ಯ ಎಂಬ ಶಬ್ದದಿಂದ ಹೇಳಲ್ಪಡುವನು ಎಂದು ಅರ್ಥ.

**ರಭ್ಯಸಃ—ಅತಿಶಯೇನ ರಭಸ್ವಿನಃ ಪ್ರೌಢೋದ್ಯಮಾನ್ ।** ರಭಸಶಬ್ದವು ಮಹನ್ನಾಮಗಳಲ್ಲಿ (ನಿ-೩-೧೩) ಉಕ್ತವಾಗಿದೆ. ನಮಗೆ ಸ್ವಭಾವದಿಂದ ಇರುವ ವೇಗ ಮತ್ತು ಬಲ ಇವುಗಳಲ್ಲಿ ಮಹತ್ತ್ವವು ಉಂಟಾಗಲಿ ಎಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ. ರಭ್ಯಸ ಶಬ್ದಕ್ಕೆ ಇತರರಿಗಿಂತ ಮಿಗಿಲಾಗಿರುವ ಮಹತ್ತ್ವವು ಎಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಪೃಚ್ಛಾಮಿ**—ಪೃಚ್ಛ ಜ್ಞೀಪ್ಸಾಯಾಂ ವಾಚಿ. ಧಾತು. ಲಟ್ ಉತ್ತಮಪುರುಷ ಏಕವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪಾಕ್ಯಾ**—ಡುಪಚಷ್ ಪಾಕೇ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಚಜೋಃ ಕು ಘಿಣ್ಣ್ಯತೋಃ** (ಉ. ಸೂ. ೭-೩-೫೨) ಎಂಬುದರಿಂದ ಚಕಾರಕ್ಕೆ ಕುತ್ವ. ಪ್ರತ್ಯಯ ತಿತ್ತಾದುದರಿಂದ **ತಿತ್ ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ದ್ವಿತೀಯಾ ಬಹುವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೩-೧-೩೬) ಎಂಬುದರಿಂದ ಅದಕ್ಕೆ ಡಾದೇಶ. ಪಾಕ್ಯಾ ಎಂದು ರೂಪವಾಗುತ್ತದೆ.

**ವಷಟ್ಕೃತಸ್ಯ**—ಡುಕೃಞ್ ಕರಣೇ. ಧಾತು. ಕ್ತಪ್ರತ್ಯಯ. ವಷಟ್ ಎಂಬುದು ಊರ್ಯಾದಿಯಲ್ಲಿ ಸೇರಿರುವುದರಿಂದ **ಊರ್ಯಾದಿಚ್ವಿಡಾಚಶ್ಚ**—(ಪಾ. ಸೂ. ೧-೪-೬೧) ಎಂಬುದರಿಂದ ಗತಿ ಸಂಜ್ಞಾ ಬರುವುದರಿಂದ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಅದಕ್ಕೆ ಪ್ರಕೃತಿಸ್ವರ ಬರುತ್ತದೆ. ಆದ್ಯುದಾತ್ತವಾಗುತ್ತದೆ.

**ಪಾತಮ್**—ಪಾ ಪಾನೇ. ಧಾತು. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಲುಕ್ ಬರುವುದರಿಂದ ಪಿಬಾದೇಶ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಹ್ಯಸಃ**—ಸಹತೇ ಅಭಿಭವತಿ ಅನೇನ ಇತಿ ಸಹಃ ಬಲಮ್. ಷಹ ಮರ್ಷಣೇ. ಧಾತು. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ಸಹಃ ಅಸ್ಯ ಅಸ್ತಿ ಇತಿ ಸಹಸ್ವೀ. **ಅಸ್ಮಾಯಾ ಮೇಧಾ ಸ್ರಜೋವಿನಿಃ** (ಪಾ. ಸೂ. ೫-೨-೧೨೧) ಎಂಬುದರಿಂದ ಮತ್ವರ್ಥದಲ್ಲಿ ವಿನ್ ಪ್ರತ್ಯಯ. ಅತಿಶಯೇನ ಸಹಸ್ವೀ ಎಂದು ಅರ್ಥ ವಿವಕ್ಷಾ ಮಾಡಿದಾಗ **ದ್ವಿವಚನವಿಭ**—(ಪಾ. ಸೂ. ೫-೩-೫೭) ಎಂಬುದರಿಂದ ಈಯಸುನ್ ಪ್ರತ್ಯಯ. **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ಈಯಸುನ್ ಪರವಾದಾಗ ವಿನಿಗೆ ಲೋಪ. ಛಾಂದಸವಾಗಿ ಈಕಾರಲೋಪ.

**ರಭ್ಯಸಃ**—ರಭ ರಾಭಸ್ಯೇ. ಧಾತು. ರಾಭಸ್ಯಂ ಕಾರ್ಯೋಪಕ್ರಮಃ (ಕಾರ್ಯಾರಂಭ) ಹಿಂದಿನಂತೆಯೇ ಅಸುನ್ ಪ್ರತ್ಯಯ. ಛಾಂದಸವಾಗಿ ಆದಿವೃದ್ಧಿ. ಮತ್ವರ್ಥದ ವಿನಿಗೆ ಲೋಪ. ಟಿಲೋಪ. ಈಯಸುನಿನ ಈಕಾರಕ್ಕೆ ಲೋಪ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಪ್ರ ಯಾ ಘೋಷೇ ಭೃಗವಾಣೇ ನ ಶೋಭೇ ಯಯಾ ವಾಚಾ

ಯಜತಿ ಪಜ್ರಿಯೋ ವಾಂ ।

ಪ್ರೈಷಯುರ್ನ ವಿದ್ವಾನ್ ॥ ೫ ॥

॥ ಪದಪಾಠಃ ॥

ಪ್ರ । ಯಾ । ಘೋಷೇ । ಭೃಗವಾಣೇ । ನ । ಶೋಭೇ । ಯಯಾ । ವಾಚಾ ।
ಯಜತಿ । ಪಜ್ರಿಯಃ । ವಾಂ ।
ಪ್ರ । ಇಷಯುಃ । ನ । ವಿದ್ವಾನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಪ್ರ ಭವತಿ ಸಮರ್ಥಾ ಭವತಿ ಸಾ ವಾಕ್ ಯಾ ವಾಗ್ಯುಷ್ಮತ್ಸ್ತುತಿರೂಪಾ ಘೋಷೇ ಘೋಷಾಖ್ಯಾಯಾಃ ಪುತ್ರೇ ಸುಹಸ್ತ್ಯಾಖ್ಯ ಋಷೌ ಭೃಗವಾಣೇ ನ ಭೃಗೌ ಚ ಶೋಭೇ ಶೋಭತೇ । ಯಯಾ ಚ ಸ್ತುತಿಲಕ್ಷಣಯಾ ವಾಚಾ ಪಜ್ರಿಯಃ । ಪಜ್ರಾ ಅಂಗಿರಸಃ । ತೇಷಾಂ ಕುಲೋತ್ಪನ್ನಃ ಕಕ್ಷೀವಾನ್ವಾಂ ಯುವಾಂ ಯಜತಿ ಪೂಜಯತಿ ಸ್ತೌತಿ । ಸಾಪಿ ಶೋಭತ ಇತ್ಯರ್ಥಃ । ಇಷಯುರ್ನ ಇಷಮನ್ನಮಾತ್ಮನಃ ಕಾಮಯಮಾನಶ್ಚ ವಿದ್ವಾನ್ ಸ್ತುತ್ಯಭಿಜ್ಞಃ ಕಕ್ಷೀವಾನೃಷಿಃ ಪ್ರ ಭವತು । ಯುಷ್ಮದನುಗ್ರಹಾತ್ಸಂಪೂರ್ಣಕಾಮೋ ಭವತ್ವಿತ್ಯರ್ಥಃ ॥ ಘೋಷೇ । ಘೋಷಾ ನಾಮ ಕಾಚಿದ್ಬ್ರಹ್ಮವಾದಿನೀ ಕಕ್ಷೀವತಃ ಪುತ್ರೀ । ಅತ್ರೋಪಚಾರಾತ್ತದ್ವಾಚಕಂ ಪ್ರಾತಿಪದಿಕಂ ಪುತ್ರೇ ವರ್ತತೇ । ಭೃಗವಾಣೇ । ಚಿರಂತನೋ ಭೃಗುರಿವಾಚರತಿ । ಸರ್ವಪ್ರಾತಿಪದಿಕೇಭ್ಯ ಇತಿ ಕ್ವಿಪ್ । ಧಾತುಸಂಜ್ಞಾಯಾಂ ವ್ಯತ್ಯಯೇನ ಲಟಃ ಶಾನಚ್ । ಶಬಾದಿ । ಆಗಮಾನುಶಾಸನಸ್ಯಾನಿತ್ಯತ್ವಾನ್ಮುಗಭಾವಃ । ವೃಷಾದಿಃ । ಶೋಭೇ । ಶುಭ ದೀಪ್ತೌ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಇಷಯುಃ । ಇಷ ಗತೌ । ಇಷ್ಯತಿ ಗಚ್ಛತೀತೀಷಮನ್ನಂ । ಇಗುಪಧಲಕ್ಷಣಃ ಕಃ । ಯದ್ವಾ । ಇಷು ಇಚ್ಛಾಯಾಂ । ಇಷ್ಯತೇ ಸರ್ವೈಃ ಪ್ರಾಣಿಭಿರಿತೀಷಮನ್ನಂ । ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ । ಪ್ರಶಬ್ದೇನ ಸಂಹಿತಾಯಾಂ ಪ್ರಾದೂಹೋಢೋಢ್ಯೇಷೈಷ್ಯೇಷು ವೃದ್ಧಿರ್ವಕ್ತವ್ಯಾ । ಪಾ. ೬-೧-೮೯-೪ । ಇತಿ ವೃದ್ಧಿಃ ॥

॥ ಪ್ರತಿಪದಾರ್ಥ ॥

**ಯಾ**—(ನಿಮ್ಮ ಸ್ತುತಿರೂಪವಾದ) ಯಾವ ವಾಕ್ಯವು । **ಘೋಷೇ**—ಘೋಷಾ ಎಂಬುವಳ ಪುತ್ರನಾದ ಸುಹಸ್ತ್ಯ ಎಂಬುವನಲ್ಲಿಯೂ । **ಭೃಗವಾಣೇ ನ**—ಭೃಗು ಎಂಬುವನಲ್ಲಿಯೂ । **ಶೋಭೇ**—ಶೋಭಿಸುತ್ತದೆಯೋ । (**ಸಾ**—ಆ ವಾಕ್ಯವು) । **ಪ್ರ (ಭವತಿ)**—ಸಮರ್ಥವಾಗಿದೆ । **ಯಯಾ**—ಯಾವ (ಸ್ತುತಿ ರೂಪವಾದ । **ವಾಚಾ**—ವಾಕ್ಯದಿಂದ । **ಪಜ್ರಿಯಃ**—ಪಜ್ರವಂಶೋತ್ಪನ್ನನಾದ (ಕಕ್ಷೀವಂತನು) । **ವಾಂ**—ನಿಮ್ಮನ್ನು । **ಯಜತಿ**—ಪೂಜಿಸುತ್ತಾನೋ । (**ಸಾ ಪ್ರ**—ಅದೂ ಶೋಭಿಸುತ್ತದೆ) । **ಇಷಯುಃ**—ಅನ್ನವನ್ನು ಅಪೇಕ್ಷಿಸುವ । **ವಿದ್ವಾನ್ ನ**—ಸ್ತುತಿಯನ್ನು ತಿಳಿದಿರುವ ಕಕ್ಷಿವಂತನೂ । **ಪ್ರ (ಭವತು)**—ಸಂಪೂರ್ಣ ಕಾಮನಾಗಲಿ.

॥ ಭಾವಾರ್ಥ ॥

ಘೋಷಾ ಎಂಬ ಸ್ತ್ರೀಯ ಪುತ್ರನೂ, ಭೃಗುವೂ, ಪಜ್ರವಂಶೀಯನಾದ ಕಕ್ಷೀವಂತನೂ ಉಪಯೋಗಿಸಿದ ಸ್ತುತಿವಾಕ್ಯಗಳು ಪ್ರಭಾವಯುಕ್ತವಾಗಿವೆ. ಅನ್ನಾಪೇಕ್ಷಿಯೂ, ಸ್ತುತ್ಯಭಿಜ್ಞನೂ ಆದ ಕಕ್ಷೀವಂತನು (ನಿಮ್ಮನುಗ್ರಹದಿಂದ) ಇಷ್ಟಸಿದ್ಧಿಯನ್ನು ಪಡೆಯಲಿ.

## English Translation.

(Powerful is) the hymn that was repeated by the son of Ghosha, and by Bhrigu, and with which hymn the Angirasas adore you; may the sage (Kakshsivat), desirous (of food), obtain it abundantly.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವನ್ನು ವಿವರಿಸುವುದರಲ್ಲಿ ಸಾಯಣರೂ, ಸ್ಕಂದಸ್ವಾಮಿಗಳೂ ಸ್ವಲ್ಪಮಟ್ಟಿಗೆ ಬೇರೆ ಅಭಿಪ್ರಾಯವನ್ನು ಹೊಂದಿ ಇರುವರು. ಸಾಯಣರು **ಘೋಷೇ** ಎಂಬ ಪದದ ಅರ್ಥವನ್ನು ವಿವರಿಸುವಾಗ

**ಘೋಷೇ— ಘೋಷಾ ನಾಮ ಕಾಚಿತ್ ಬ್ರಹ್ಮವಾದಿನೀ ಕಕ್ಷೀವತಃ ಪುತ್ರೀ ಅತ್ರೋಪಚಾರಾತ್ತದ್ವಾಚಕಂ ಪ್ರಾತಿಪದಿಕಂ ಪುತ್ರೇ ವರ್ತತೇ। ಘೋಷಾಖ್ಯಾಯಾಃ ಪುತ್ರೇ ಸುಹಸ್ತ್ಯಾಖ್ಯೇ ಋಷೌ।**

ಕಕ್ಷೀವಾನ್ ಎಂದು ಹೆಸರುಳ್ಳ ಒಬ್ಬ ಋಷಿಯ ಮಗಳಾದ **ಘೋಷಾ** ಎಂಬುವಳು ಆತ್ಮಜ್ಞಾನಿಯಾದ ಸ್ತ್ರೀಯು. ಇವಳ ಮಗನು ಸುಹಸ್ತ್ಯನೆಂಬ ಹೆಸರಿನಿಂದ ಪ್ರಸಿದ್ಧನು. ಇವನನ್ನು ಘೋಷಾ ಎಂಬ ಪದದಿಂದಲೇ ಇಲ್ಲಿ ಹೇಳಿದೆ. ಇದು ಜನ್ಯಜನಕಗಳಿಗೆ ಅಭೇದೋಪಚಾರವನ್ನು ಅಂಗೀಕರಿಸಿ ಉಕ್ತವಾಗಿರುವ ಔಪಚಾರಿಕ ಪ್ರಯೋಗವಾಗಿರುತ್ತದೆ ಎಂದು ವರ್ಣಿಸಿರುವರು. ಸ್ಕಂದಸ್ವಾಮಿಗಳು—**ಘೋಷ್ಯಮಾಣತ್ವಾತ್ ಘೋಷಃ ಸ್ತೋಮಃ** ಉಚ್ಚವಾದ ಸ್ವರದಿಂದ ಹೇಳಲ್ಪಡುವ ಕಾರಣ ಘೋಷವೆಂದರೆ ಸ್ತುತಿ ಎಂದು ಅರ್ಥವನ್ನು ಹೇಳಿರುವರು.

**ಭೃಗವಾಣೇ—ಚಿರಂತನೋ ಭೃಗುರಿವಾಚರತಿ।** ಭೃಗುವಿನಹಾಗೆ ಆಚರಿಸುವವನು ಎಂದು ಅರ್ಥವನ್ನು ಸಾಯಣರು ಹೇಳಿ **ನ** ಎಂಬುವದಕ್ಕೆ ಸಮುಚ್ಚಯಾರ್ಥವನ್ನೂ ಅಂಗೀಕರಿಸಿ **ಭೃಗವಾಣೇ ನ ಶೋಭೇ—ಭೃಗೌ ಚ ಶೋಭತೇ** ಭೃಗುಋಷಿಯ ವಿಷಯದಲ್ಲಿಯೂ ಪ್ರಕಾಶಿಸುತ್ತದೆ ಎಂದು ಅರ್ಥಮಾಡಿರುವರು. **ಭೃಗವಾಣೇ ನ ಶೋಭೇ** ಎಂಬಲ್ಲಿ ನ ಎಂಬುವುದು ಉಪಮಾವಾಚಕವಾಗಿರುವುದು. **ಭೃಗವಾಣಶಬ್ದಃ ಭೃಗೋಃ ಪರ್ಯಾಯಃ ಷಷ್ಠ್ಯರ್ಥೇ ಚ ಸಪ್ತಮೀ। ಭೃಗೋರಿವ। ಪ್ರ ಶೋಭೇ ಪ್ರಕರ್ಷೇಣ ಶೋಭತೇ।** ಭೃಗವಾಣಶಬ್ದವು ಭೃಗುಪರ್ಯಾಯವಾಗಿರುವುದರಿಂದ ಭೃಗುಋಷಿ ಎಂಬ ಅರ್ಥವನ್ನು ಬೋಧಿಸುವುದು. ಭೃಗುಋಷಿಯ ಹಾಗೆ ಅತಿಶಯವಾಗಿ ಪ್ರಕಾಶಿಸುವುದು ಎಂದು ಅರ್ಥ.

**ಪಜ್ರಿಯಃ**—ಸ್ಕಂದಸ್ವಾಮಿಗಳು—**ಪ್ರಕರ್ಷೇಣ ಯಜತಿ। ಪಾಜಃ ಹವಿರ್ಲಕ್ಷಣಮನ್ನಂ ತದ್ವಾನ್ ಪಜ್ರಿಯಃ ಅಥವಾ ಪಜ್ರಾ ಅಂಗಿರಸಃ ತೇಷಾಮಪತ್ಯಭೂತಃ ಪಜ್ರಿಯಃ ಕಕ್ಷೀವಾನ್ ಆತ್ಮನ ಏವಾಯಂ**

**ಪರೋಕ್ಷರೂಪೇಣ ಪ್ರಥಮಪುರುಷೇಣ ನಿರ್ದೇಶಃ।** ಯಾಸ್ಕರು ಪಾಜಃ ಎಂಬ ಪದವು ಬಲನಾಮಗಳಲ್ಲಿ (ನಿ.೩-೯) ಉಕ್ತವಾಗಿ, **ಪಾಜಃ ಪಾಲನಾತ್** (ನಿ. ೬-೧೨) ಎಂದು ವ್ಯಾಖ್ಯಾನಮಾಡಿ ಪಾಜ ಶಬ್ದಕ್ಕೆ ಬಲವೆಂದು ಅರ್ಥ ಮಾಡಿರುವರು. ಬಲವು ಉಂಟಾಗಲು ಅನ್ನವು ಕಾರಣವಾದ್ದರಿಂದ ಕಾರ್ಯಕಾರಣಗಳಿಗೆ ಉಪಚಾರವನ್ನು ಅಂಗೀಕರಿಸಿ ಸ್ಕಂದಸ್ವಾಮಿಗಳು ಪಾಜ ಶಬ್ದಕ್ಕೆ ಅನ್ನವೆಂದು ಅರ್ಥವನ್ನು ವಿವರಿಸಿ, ಹವಿಸ್ಸಿನ ರೂಪವಾದ ಅನ್ನವನ್ನು ಅರ್ಪಿಸುವವನು ಪಜ್ರಿಯನು ಎಂದು ಒಂದು ವಿಧವಾದ ಅರ್ಥವನ್ನು ವಿವರಿಸಿರುವರು. ಮತ್ತು ಅಥವಾ ಪಜ್ರಾ ಎಂದರೆ ಅಂಗಿರಾ ಋಷಿಗಳು. ಅವರ ವಂಶದಲ್ಲಿ ಹುಟ್ಟಿದವನು ಪಜ್ರಿಯನಾಗುವನು. (ಇಲ್ಲಿ) **ಈ** ಋಕ್ಕಿನಲ್ಲಿ ಪರೋಕ್ಷವಾಗಿ ಪ್ರಥಮಪುರುಷದಿಂದ ನಿರ್ದೇಶಮಾಡಲ್ಪಟ್ಟ ಕಕ್ಷೀವಂತನೇ ಅಂಗಿರಾ ಋಷಿಗಳ ವಂಶದಲ್ಲಿ ಉತ್ಪನ್ನನಾಗಿ ಪಜ್ರಿಯನೆನಿಸಿರುವನು ಎಂದು ಅರ್ಥವನ್ನು ವಿವರಿಸಿರುವರು.

ಘೋಷಾ ಎಂಬ ಸ್ತ್ರೀಯ ಪುತ್ರನಾದ ಸುಹಸ್ತ್ಯಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಮಾಡಿರುವ ವಾಕ್ಕುಗಳು ಪ್ರಕಾಶಿಸುತ್ತಿರುವಂತೆಯೇ ಕಕ್ಷೀವಂತನೂ ಸ್ತುತಿಸಿರುವ ವಾಕ್ಕುಗಳು ಪ್ರಕಾಶಿಸುತ್ತಿರುವವು. ಸ್ತುತಿ ಮಾಡುವುದರಲ್ಲಿ ನಿಪುಣನಾದ ಕಕ್ಷೀವಂತನು ಅನ್ನಾದಿಗಳನ್ನು ಅಪೇಕ್ಷಿಸುವವನಾಗಿ ಅಶ್ವಿನೀದೇವತೆಗಳ ಅನುಗ್ರಹವನ್ನು ಹೊಂದಲು ಸ್ತುತಿಸಿ ಹವಿಸ್ಸನ್ನು ಅರ್ಪಿಸುವುದರಿಂದ ಅವನ ಅಭಿಲಾಷೆಯು ನೆರವೇರಲು ಅಶ್ವಿನೀದೇವತೆಗಳ ಅನುಗ್ರಹವು ಉಂಟಾಗಲಿ ಎಂದು ವರ್ಣಿಸಿದೆ.

**ಇಷಯುರ್ನ—ಅನ್ನಕಾಮ ಇವ ಕಶ್ಚಿತ್ ಯುಷ್ಮನ್ಮಾಹಾತ್ಮ್ಯಂ ವಾ ಯಷ್ಟಂ ವಾ ಜಾನನ್ ।** ಅನ್ನಾದಿಗಳನ್ನು ಹೊಂದಲು ಇಚ್ಛೆಯುಳ್ಳವನು ಅಶ್ವಿನೀದೇವತೆಗಳ ಮಹಿಮೆಯನ್ನು ತಿಳಿದು ಅಥವಾ ಅವರ ಉದ್ದೇಶವಾಗಿ ಯಾಗವನ್ನು ಆಚರಿಸುವ ಹಾಗೆ ಎಂದು ಈ ವಿಷಯದಲ್ಲಿಯೂ ಉಪಮಾನವನ್ನು ಹೇಳಿ ವಾಕ್ಯಾರ್ಥವನ್ನು ಸ್ಕಂದಸ್ವಾಮಿಗಳು ವಿವರಿಸಿರುವದರಿಂದ ಇಲ್ಲಿ ಎರಡು ವಾಕ್ಯಗಳಿಂದ ಎರಡು ಉಪಮೆಗಳು ವಾಚ್ಯವೆಂದು ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಘೋಷೇ**—ಘೋಷಾ ಎಂಬುದು ಕಕ್ಷೀವಂತನ ಮಗಳ ಹೆಸರು. ಇವಳೊಬ್ಬ ಬ್ರಹ್ಮವಾದಿನಿಹೆಂಗಸು. ಇಲ್ಲಿ ಔಪಚಾರಿಕವಾದ ಪ್ರಯೋಗವಾದುದರಿಂದ ಅದನ್ನು ಹೇಳುವ ನಾಮಪದವು ಪುತ್ರನಲ್ಲಿ ಪ್ರಯುಕ್ತವಾಗಿದೆ.

**ಭೃಗವಾಣೇ**—ಚಿರಂತನಃ ಭೃಗುರಿವಾಚರತಿ ಭೃಗ್ವತಿ. **ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾ ವಕ್ತವ್ಯಃ** ಎಂಬ ವಚನದಿಂದ ಕ್ವಿಪ್. ಇದು ಸನಾದಿಯಲ್ಲಿ ಸೇರಿರುವುದರಿಂದ **ಸನ್ಯಾದ್ಯಂತಾಧಾತವಃ** ಸೂತ್ರದಿಂದ ಧಾತು ಸಂಜ್ಞಾ ಬರುತ್ತದೆ. ಲಡರ್ಥದಲ್ಲಿ ವ್ಯತ್ಯಯದಿಂದ ಶಾನಚ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಪೂರ್ವದ ಉಕಾರಕ್ಕೆ ಗುಣ. ಅವಾದೇಶ. **ಆಗಮಾನುಶಾಸನಮನಿತ್ಯಮ್** ಎಂಬ ವಚನದಿಂದ ಅದಂತಾಂಗಕ್ಕೆ ಮುಕಾಗಮ ಬರುವುದಿಲ್ಲ. ಋಕಾರ ನಿಮಿತ್ತವಿರುವುದರಿಂದ ನಕಾರಕ್ಕೆ ಣತ್ವ. ಚಿತ್ ಸ್ವರಪ್ರಾಪ್ತವಾದರೆ ವೃಷಾದಿಯಲ್ಲಿ ಪಠಿತವಾದುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶೋಭೇ**—ಶುಭ-ದೀಪ್ತೌ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ ಆತ್ಮನೇಪದಾನಾಂ**—ಸೂತ್ರದಿಂದ ಟಿಗೆ ಏತ್ವ. ಶಪ್ ವಿಕರಣ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧ

ಗುಣ. **ಲೋಪಸ್ತ ಆತ್ಮನೇ ಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುತ್ತದೆ. **ಲಸಾರ್ವಧಾತುಕ** ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ವಾಚಾ—ಸಾವೇಕಾಚಃ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಇಷಯುಃ**—ಇಷ ಗತೌ. ಧಾತು. ಇಷ್ಯತಿ ಗಚ್ಛತಿ ಇತಿ ಇಷಮನ್ನಮ್. ಧಾತುವು ಇಗುಪಧವಾಗಿರುವುದರಿಂದ **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಅಥವಾ ಇಷು ಇಚ್ಛಾಯಾಮ್. ಧಾತು. **ಇಷ್ಯತೇ ಸರ್ವೈಃ** ಪ್ರಾಣಿಭಿರಿತಿ ಇಷಮನ್ನಮ್ (ಎಲ್ಲಾ ಪ್ರಾಣಿಗಳಿಂದ ಅಪೇಕ್ಷಿಸಲ್ಪಡುವುದು ಅನ್ನ) ವ್ಯತ್ಯಯದಿಂದ ಕರ್ಮಣಿ ಅರ್ಥದಲ್ಲಿ ಕರ್ತೃಪ್ರತ್ಯಯ. ಇಷಂ ಆತ್ಮನ ಇಚ್ಛತಿ ಇಷಯತಿ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ನಚ್ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಈತ್ವಾದಿಗಳು ಬರುವುದಿಲ್ಲ. ಕ್ಯಜಂತದಮೇಲೆ ಕರ್ತರಿಯಲ್ಲಿ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. **ಅತೋ ಲೋಪಃ** ಸೂತ್ರದಿಂದ ಕ್ಯಚ್ಚಿನ ಅಕಾರಕ್ಕೆ ಲೋಪ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರ+ಇಷಯು ಎಂದಿರುವಾಗ ಸಂಹಿತಾದಲ್ಲಿ **ಪ್ರಾದೂಹೋಢೋಢ್ಯೇಷೈಷ್ಯೇಷು ವೃದ್ಧಿರ್ವಕ್ತವ್ಯಾ** (ಪಾ. ಸೂ. ೬-೧-೮೯-೪) ಎಂಬುದರಿಂದ ವೃದ್ಧಿ ಬರುತ್ತದೆ.



॥ ಸಂಹಿತಾಪಾಠಃ ॥

ಶ್ರುತಂ ಗಾಯತ್ರಂ ತಕವಾನಸ್ಯಾಹಂ ಚಿದ್ಧಿ ರಿರೇಭಾಶ್ವಿನಾ ವಾಂ ।
ಆಕ್ಷೀ ಶುಭಸ್ಪತೀ ದನ್ ॥ ೬ ॥

॥ ಪದಪಾಠಃ ॥

ಶ್ರುತಂ । ಗಾಯತ್ರಂ । ತಕವಾನಸ್ಯ । ಅಹಂ । ಚಿತ್ । ಹಿ । ರಿರೇಭ । ಅಶ್ವಿನಾ । ವಾಂ ।
ಆ । ಅಕ್ಷೀ ಇತಿ । ಶುಭಃ । ಪತೀ ಇತಿ । ದನ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾವಶ್ವಿನೌ ಗಾಯತ್ರಂ ಗಾತವ್ಯಂ ಗಾಯತ್ರೀಯುಕ್ತಂ ಗಾಯತ್ರಸಾಮ್ನಾ ನಿಷ್ಪಾದ್ಯಂ ವಾ ಸ್ತೋತ್ರಂ ತಕವಾನಸ್ಯ ಸ್ಖಲದ್ಗತೇರಂಧಸ್ಯ ಋಜ್ರಾಶ್ವಸ್ಯ ಸಂಬಂಧಿ ಶ್ರುತಂ । ಅಶೃಣುತಂ। ಅಹಂ ಚಿದಹಮಿವ ವಾಂ ಯುವಾಂ ಸ ಹಿ ರಿರೇಭ । ಸ್ತುತವಾನ್ । ಕಿಂ ಕುರ್ವನ್ ಹೇ ಶುಭಸ್ಪತೀ ಶೋಭನಸ್ಯ ಕರ್ಮಣಃ ಪಾಲಯಿತಾರೌ ಜಲಸ್ಯ ವಾ ಸ್ವಾಮಿನೌ ಅಕ್ಷೀ ಯುವಾಭ್ಯಾಂ ದತ್ತೇ ಚಕ್ಷುಷೀ ಅ ದನ್ ಅದದಾನಃ । ತಸ್ಮಾ ಇವ ಮಹ್ಯಮಪ್ಯಭಿಮತಫಲಂ ಪ್ರಯಚ್ಛತಮಿತಿ ಭಾವಃ ॥ ಶ್ರುತಂ । ಶ್ರು ಶ್ರವಣೇ । ಲಙ್ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತಕವಾನಸ್ಯ । ತಕ ಗತೌ । ಅತ್ರ ಗತಿಸಾಮಾನ್ಯವಾಚಿನಾ ತದ್ವಿಶೇಷೋ ಮಂದಗತಿರ್ಲಕ್ಷ್ಯತೇ । ಔಣಾದಿಕ ಉಪ್ರತ್ಯಯಃ । ಭೃಗವಾಣ ಇತಿವತ್ ಪ್ರಕ್ರಿಯೋನ್ನೇಯಾ । ರಿರೇಭ । ರೇಭೃ ಶಬ್ದೇ । ಅಕ್ಷೀ । ಈ ಚ ದ್ವಿವಚನ ಇತ್ಯಕ್ಷಿಶಬ್ದಸ್ಯ ಈಕಾರಾಂತಾದೇಶಃ । ಸ ಚೋದಾತ್ತಃ । ಶುಭಸ್ಪತೀ । ಸುಬಾಮಂತ್ರಿತೇ ಪರಾಂಗವತ್ಸ್ವರ ಇತಿ ಷಷ್ಠ್ಯಂತಸ್ಯ ಪರಾಂಗವದ್ಭಾವಾತ್ಪದದ್ವಯಸಮುದಾಯಸ್ಯಾಷ್ಟಮಿಕಾಮಂತ್ರಿತಾನುದಾತ್ತತ್ವಂ । ದನ್ । ಅಙ್ ಪೂರ್ವಾದ್ದದಾತೇರಾಙಿ ದೋಽನಾಸ್ಯವಿಹರಣೇ । ಪಾ. ೧-೩-೨೦ । ಇತ್ಯಾತ್ಮನೇಪದಂ । ವ್ಯತ್ಯಯೇನ ಶತೃ । ಜುಹೋತ್ಯಾದಿತ್ವಾತ್ ಶ್ಲುಃ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮಿತಿ ವಚನಾದ್ದ್ವಿರ್ವಚನಾಭಾವಃ । ಛಂದಸ್ಯುಭಯಥೇತ್ಯುಭಯಥಾಶ್ರಯಣಾತ್ ಶತುಃ ಸಾರ್ವಧಾತುಕತ್ವೇನ ಙಿತ್ತ್ವಂ । ಆರ್ಧಧಾತುಕತ್ವಾದಾತೋ ಲೋಪ ಇಟಿ ಚೇತ್ಯಾಕಾರಲೋಪಃ ॥

॥ ಪ್ರತಿಪದಾರ್ಥ ॥

(**ಹೇ**) **ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ । **ಗಾಯತ್ರಂ**—ಗಾಯತ್ರೀಛಂದೋಯುಕ್ತವಾದ (ಗಾನಯೋಗ್ಯವಾದ) । **ತಕವಾಸಸ್ಯ**—(ಅಂಧನಾದುದರಿಂದ) ಎಡವುತ್ತಿರುವ (ಋಜ್ರಾಶ್ವನ ಸ್ತುತಿಯನ್ನು) । **ಶ್ರುತಂ**—ಕೇಳಿದಿರಿ । **ಅಹಂ ಚಿತ್**—ನನ್ನ ಹಾಗೆ । **ವಾಂ**—ನಿಮ್ಮಿಬ್ಬರನ್ನೂ । **ಶುಭಸ್ಪತೀ**—ಶುಭಕರ್ಮಗಳುಳ್ಳ (ಜಲಾಧಿಪತಿಗಳಾದ) ಎಲೈ ಅಶ್ವಿನೀದೇವತೆಗಳೇ । **ಆ ಅಕ್ಷೀ**—(ನಿಮ್ಮಿಂದ ಕೊಡಲ್ಪಟ್ಟ) ಕಣ್ಣುಗಳನ್ನು । **ಆ ದನ್**—ಪಡೆದವನಾಗಿ । (**ಸಃ**—ಆ ಋಜ್ರಾಶ್ವನು) । **ರಿರೇಭ ಹಿ**—ಸ್ತುತಿಸಿದನಷ್ಟೇ.

॥ ಭಾವಾರ್ಥ ॥

ಶುಭಕರವಾದ ಕರ್ಮಗಳುಳ್ಳ ಎಲೈ ಅಶ್ವಿನೀದೇವತೆಗಳೇ, (ಅಂಧನಾಗಿ) ಎಡುವುತ್ತಿರುವ ಋಜ್ರಾಶ್ವನ ಗಾಯತ್ರೀಛಂದೋಯುಕ್ತವಾದ ಸ್ತುತಿಯನ್ನು ಕೇಳಿದಿರಿ. (ನೀವು ಕೊಟ್ಟ) ಕಣ್ಣುಗಳನ್ನು ಪಡೆದು, ನಿಮ್ಮನ್ನು ನನ್ನಂತೆಯೇ ಸ್ತುತಿಸಿದನಷ್ಟೇ? (ಆದುದರಿಂದ ಅವನನ್ನನುಗ್ರಹಿಸಿದಂತೆ ನನ್ನನ್ನೂ ಅನುಗ್ರಹಿಸಿ)

## English Translation.

Hear the song of the stumbling (blind man), for verily, Aswins, I gorify you, recovering my eyes (through you), who are protectors of good works.

॥ ವಿಶೇಷವಿಷಯಗಳು ॥

**ತಕವಾನಸ್ಯ—ಸ್ಖಲದ್ಗತೇಃ ಅಂಧಸ್ಯ ಋಜ್ರಾಶ್ವಸ್ಯ ಸಂಬಂಧಿ, । ಅತ್ರ ಗತಿಸಾಮಾನ್ಯವಾಚಿನಾ ತದ್ವಿಶೇಷಃ ಮಂದಗತಿರ್ಲಕ್ಷ್ಯತೇ ।** ಸರಿಯಾಗಿ ನಡೆಯಲು ಆಗದೆ ತಪ್ಪು ಹೆಜ್ಜೆಹಾಕುವ ನಡಿಗೆಯುಳ್ಳವನಾಗಿ ಕಣ್ಣು ಕಾಣಿಸದೆ ಇರುವ (ಋಜ್ರಾಶ್ವನಿಗೆ) ಎಂದು ಅರ್ಥ. ತಕ ಧಾತುವು ಗಮನಾರ್ಥವುಳ್ಳದ್ದಾಗಿ ಇರುತ್ತದೆ ಇಲ್ಲಿ ಗಮನದಲ್ಲಿ (ತಪ್ಪುವಿಕೆ) ನಿಧಾನವು ಉಕ್ತವಾಗಿ ಇರುತ್ತದೆ.

**ಗಾಯತ್ರಂ—ಗಾತವ್ಯಂ ಗಾಯತ್ರೀತ್ಯುಕ್ತಂ । ಗಾಯತ್ರಸಾಮ್ನಾ ನಿಷ್ಪಾದ್ಯಂ ವಾ ಸ್ತೋತ್ರಂ ।** ಗಾನಮಾಡಲು ಅರ್ಹವಾದದ್ದು ಗಾಯತ್ರ ಎಂದೂ ಅಥವಾ ಗಾಯತ್ರ ಎಂಬ ಸಾಮಪ್ರಭೇದದಿಂದ ಗಾನಮಾಡಲು ಅರ್ಹವಾದದ್ದು ಗಾಯತ್ರವೆನಿಸಿಕೊಂಡಿರುವುದು ಇದು ಸೋತ್ರವು ಎಂದೂ ಸಾಯಣರ ವಿವರಣೆ. ಸ್ಕಂದಸ್ವಾಮಿಗಳು **ಗಾಯತೀತ್ಯರ್ಚನಕರ್ಮಸು** (ನಿ. ೩–೧೪) **ಪಾಠಾತ್ ಅರ್ಚತಿಕರ್ಮಾಯಂ । ಗೀಯತೇ ಅನೇನೇತಿ ಗಾಯತ್ರಂ ಸ್ತೋತ್ರಂ ।** ಗಾಯತಿ ಎಂದು ಅರ್ಚತಿಕರ್ಮಪದಗಳಲ್ಲಿ ಪಾಠಮಾಡಿರುವುದರಿಂದಲೂ, **ಗಾಯತ್ರಂ ಗಾಯತೇಃ ಸ್ತುತಿಕರ್ಮಣಃ** (ನಿ. ೧–೮) ಎಂದು ಗಾಯತ್ರಶಬ್ದಾರ್ಥನಿರ್ವಚನವು ಇರುವುದರಿಂದಲೂ, ಗಾಯತ್ರ ಶಬ್ದವು ಸ್ತೋತ್ರವಾಚಿಯಾಗಿರುತ್ತದೆ, ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುವರು.

**ಶುಭಸ್ಪತೀ—ಶೋಭನಸ್ಯ ಕರ್ಮಣಃ ಪಾಲಯಿತಾರೌ । ಜಲಸ್ಯ ವಾ ಸ್ವಾಮಿನೌ ।** ಮಂಗಳಕರವಾದ ಕರ್ಮಗಳು ನಡೆಯುವಂತೆ ರಕ್ಷಿಸುವವರು, ಅಥವಾ ನೀರುಗಳಿಗೆ ಯಜಮಾನರೂ ಆಗಿರುವವರು ಎಂದು ಅರ್ಥ. ಶುಭಶಬ್ದವು ಉದಕನಾಮಗಳಲ್ಲಿ (ನಿ. ೨–೨೪) ಉಕ್ತವಾಗಿರುವುದರಿಂದ **ಶುಭಸ್ಪತೀ** ಎಂದರೆ **ವೃಷ್ಟ್ಯುದಕ ಲಕ್ಷಣಸ್ಯಾಪಿ ಪತೀ** ಮಳೆಯು ಬೀಳುವ ಉದಕಗಳಿಗೂ ಅಧಿಪತಿಗಳೆಂದು ಸ್ಕಂದಸ್ವಾಮಿಗಳು ಅರ್ಥವನ್ನು ಹೇಳಿರುವರು.

ಕಣ್ಣುಗಳನ್ನು ಕಳೆದುಕೊಂಡ ಋಜ್ರಾಶ್ವನಿಗೆ ಅಶ್ವಿನೀದೇವತೆಗಳು ಕಣ್ಣುಗಳು ಮೊದಲಿನಂತೆಯೇ ಬರುವ ಹಾಗೆ ಅನುಗ್ರಹಿಸಿದ ಕಾರಣ ಅವನು ಅಶ್ವಿನೀದೇವತೆಗಳನ್ನು ಸ್ತುತಿಸಿದನು. ಮಂಗಳವನ್ನು ಉಂಟುಮಾಡುವವರಾದ ಅಶ್ವಿನೀದೇವತೆಗಳು ಮಂತ್ರದ್ರಷ್ಟೃವಾದ ಋಷಿಯು ಸ್ತುತಿಯನ್ನು ಕೇಳಿ ಅವನ ಇಷ್ಟಾರ್ಥಗಳನ್ನು ನೆರವೇರಿಸಲಿ ಎಂದು ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಶ್ರುತಮ್**—ಶ್ರು ಶ್ರವಣೇ. ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್ ಥಸ್ ಥಮಿಪಾಂ—** ಎಂಬುದರಿಂದ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಇದಕ್ಕೆ ಙಿತ್ವಾದೇಶವಿರುವುದರಿಂದ ಧಾತುವಿನ ಉಕಾರಕ್ಕೆ ಗುಣ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತಕವಾನಸ್ಯ**—ತಕ ಗತೌ ಧಾತು. ಗತಿ ಸಾಮಾನ್ಯವಾಚಿಯಾದರೂ ಇಲ್ಲಿ ಗತಿ ವಿಶೇಷವಾದ ಮಂದಗತಿಯು ತೋರುತ್ತದೆ. ಇದಕ್ಕೆ ಔಣಾದಿಕವಾದ ಉಪ್ರತ್ಯಯ. ಭೃಗುವಾಣ ಎಂಬಲ್ಲಿ ಹೇಳಿದಂತೆಯೇ ಇಲ್ಲಿಯೂ ಆಚಾರಾರ್ಥ ದಲ್ಲಿ ಕ್ವಿಪ್ ಪ್ರತ್ಯಯ. ಧಾತುಸಂಜ್ಞಾ ಬರುವುದರಿಂದ ವ್ಯತ್ಯಯದಿಂದ ಲಟ್ಟಿಗೆ ಶಾನಚ್ ಆದೇಶ. ವೃಷಾದಿಯು ಆಕೃತಿ ಗಣವಾದುದರಿಂದ **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಿರೇಭ**—ರೇಭೃ ಶಬ್ದೇ. ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಹಿ ಯೋಗವಿರುವುದರಿಂದ ನಿಘಾತಸ್ವರಕ್ಕೆ **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಷೇಧ ಬರುತ್ತದೆ. ಣಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುವುದರಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ಅಕ್ಷೀ**—ಇದಕ್ಕೆ ದ್ವಿವಚನ ಪರವಾದಾಗ **ಈ ಚ ದ್ವಿವಚನೇ** (ಪಾ. ಸೂ. ೭-೧-೭೭) ಎಂಬುದರಿಂದ ಈಕಾರ ಅಂತಾದೇಶವಾಗಿ ಬರುತ್ತದೆ. ಅದು ಉದಾತ್ತವಾಗುತ್ತದೆ.

**ಶುಭಸ್ಪತೀ**—**ಸುಬಾಮಂತ್ರಿತೇ ಪರಾಂಗವತ್ ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ಷಷ್ಠ್ಯಂತವು ಪರಾಮಂತ್ರಿತಕ್ಕೆ ಅವಯವವಾಗುವುದರಿಂದ **ಆಮಂತ್ರಿತಸ್ಯ ಚ** (ಪಾ. ಸೂ ೮-೧-೧೯) ಎಂಬುದರಿಂದ ಪದದ್ವಯ ಸಮುದಾಯಕ್ಕೆ ನಿಘಾತಸ್ವರ ಬರುತ್ತದೆ.

**ದನ್**—ಡುದಾಞ್ ದಾನೇ. ಧಾತು. ಇದಕ್ಕೆ ಆಙ್ ಪೂರ್ವವಾಗಿರುವಾಗ **ಆಙೋ ದೋಽನಾಸ್ಯ ವಿಹರಣೇ** (ಪಾ. ಸೂ. ೧-೩-೨೦) ಎಂಬುದರಿಂದ ಆತ್ಮನೇಪದಿಯಾಗುತ್ತದೆ. **ವ್ಯತ್ಯಯೋ ಬಹುಲಂ** ಎಂಬುದ ರಿಂದ ಲಡರ್ಥ ತೋರುವಾಗ ಶತೃ ಪ್ರತ್ಯಯ. ಜುಹೋತ್ಯಾದಿಯಾದುದರಿಂದ ಶ್ಲು ವಿಕರಣ. **ದ್ವಿರ್ವಚನ ಪ್ರಕರಣೇ ಛಂದಸಿ ವೇತಿವಕ್ತವ್ಯಮ್** ಎಂಬ ವಚನದಿಂದ ಇಲ್ಲಿ **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ ಬರುವುದಿಲ್ಲ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಇರುವುದರಿಂದ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವವಿರುವುದರಿಂದಲೂ, ಆರ್ಧಧಾತುಕಸಂಜ್ಞೆ ಇರುವುದರಿಂದ **ಆತೋಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ದತ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ ಉಗಿತ್ತಾದುದರಿಂದ ನುಮಾಗಮ. **ಹಲ್ ಙ್ಯಾಭ್ಯೋ**—ಸೂತ್ರದಿಂದ ಸುಲೋಪ. ಸಂಯೋಗಾಂತ ಲೋಪದಿಂದ ತಕಾರಲೋಪ. ಇದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ ॥ ೬ ॥



॥ ಸಂಹಿತಾಪಾಠಃ ॥

ಯುವಂ ಹ್ಯಾಸ್ತಂ ಮಹೋ ರನ್ಯುವಂ ವಾ ಯನ್ನಿರತತಂಸತಂ।
ತಾ ನೋ ವಸೂ ಸುಗೋಪಾ ಸ್ಯಾತಂ ಪಾತಂ ನೋ ವೃಕಾ-
ದಘಾಯೋಃ ॥ ೭ ॥

॥ ಪದಪಾಠಃ ॥

ಯುವಂ । ಹಿ । ಆಸ್ತಂ । ಮಹಃ । ರನ್ । ಯುವಂ । ವಾ । ಯತ್ । ನಿಃಽಅತತಂ-
ಸತಂ ।
ತಾ । ನಃ । ವಸೂ ಇತಿ । ಸುಽಗೋಪಾ । ಸ್ಯಾತಂ । ಪಾತಂ । ನಃ । ವೃಕಾತ್ ।
ಅಘಽಯೋಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಮಹೋ ಮಹತೋ ಧನಸ್ಯ ರನ್ ರಾತಾರೌ ದಾತಾರೌ ಯುವಂ ಯುವಾಂ ಕಂಚನಾಸ್ತಂ ।........ನಿರತತಂಸತಂ । ಧನಾನಿ ನಿರಗಮಯತಂ । ರಕ್ಷಕೌ ವಿನಾಶಕಾವಪಿ ಯುವಮೇವೇತ್ಯರ್ಥಃ । ಹೇ ವಸೂ ವಾಸಯಿತಾರಾವಶ್ವಿನೌ ತಾ ತಾದೃಶೌ ಯುವಾಂ ನೋಽಸ್ಮಾಕಂ ಸುಗೋಪಾ ಸುಷ್ಠು ಗೋಪಾಯಿತಾರೌ ರಕ್ಷಿತಾರೌ ಸ್ಯಾತಂ । ಭವತಂ । ಅಪಿ ಚ ನೋಽಸ್ಮಾನಘಾಯೋರಘಂ ಪಾಪಫಲಮಸ್ಮಾಕಮಿಚ್ಛತೋ ವೃಕಾತ್ಸ್ತೇನಾತ್ಪಾತಂ । ರಕ್ಷತಂ ॥ ಮಹಃ । ಮಹತಃ । ಛಾಂಸೋಽಚ್ಛಬ್ದಲೋಪಃ । ರನ್ । ರನ್ನಿತಿವತ್ಪ್ರಕ್ರಿಯೋನ್ನೇಯಾ । ವ್ಯತ್ಯಯೇನೈಕವಚನಂ । ನಿರತತಂಸತಂ । ತಸಿ ಅಲಂಕಾರೇ । ಅಸ್ಮಾಣ್ಣ್ಯಂತಾಲ್ಲುಙಿ ಣಿಶ್ರಿದ್ರುಸ್ರುಭ್ಯ ಇತಿ ಚ್ಲೇಶ್ಚಙ್ ದ್ವಿರ್ವಚನಾದಿ ಚ । ಗರುಸಂಜ್ಞಾಯಾ ಲಘುಸಂಜ್ಞಾಯಾ ಬಾಧಿತತ್ವಾತ್ಸನ್ವದ್ಭಾವಾಭಾವಃ । ಸುಗೋಪಾ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಅಘಾಯೋಃ । ಅಘಂ ಪರೇಷಾಮಿಚ್ಛತಿ । ಛಂದಸಿ ಪರೇಚ್ಛಾಯಾಮಿತಿ ಕ್ಯಚ್ । ಅಶ್ವಾಘಸ್ಯಾದಿತ್ಯಾತ್ವಂ । ಕ್ಯಾಚ್ಛಂದಸೀತ್ಯುಪ್ರತ್ಯಯಃ ॥

॥ ಪ್ರತಿಪದಾರ್ಥ ॥

(**ಅಶ್ವಿನೌ**—ಎಲೈ ಅಶ್ವಿನೀದೇವತೆಗಳೇ) । **ಯುವಂ**—ನೀವಿಬ್ಬರು । **ಮಹಃ**—ಹೆಚ್ಚಾದ ಧನವನ್ನು **ರನ್**—ಕೊಡುವವರು । **ಆಸ್ತಂ**—ಆಗಿದ್ದೀರಿ । **ಯುವಂ**—ನೀವಿಬ್ಬರು । **ನಿರತತಂಸತಂ**—(ಧನವು) ನಷ್ಟವಾಗುವಂತೆಯೂ ಮಾಡಿದ್ದೀರಿ । (**ಹೇ**) **ವಸೂ**—ವಸತಿಯನ್ನು ಕೊಡುವ । **ತಾ**—ಅಂತಹ ನೀವು । **ನಃ**—ನಮಗೆ । **ಸುಗೋಪಾ**—ಒಳ್ಳೆಯ ರಕ್ಷಕರು । **ಸ್ಯಾತಂ**—ಆಗಿ । (ಮತ್ತು) **ನಃ**—ನಮ್ಮನ್ನು **ಅಘಾಯೋಃ**—(ನಮಗೆ) ಪಾಪ ಫಲವಾಗಬೇಕೆಂದು ಅಪೇಕ್ಷಿಸುವ । **ವೃಕಾತ್**—ಕಳ್ಳನಿಂದ । **ಪಾತಂ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಹೆಚ್ಚಾದ ಧನವನ್ನು ಕೊಡುವವರೂ ನೀವೇ ; ನಾಶಮಾಡುವವರೂ ನೀವೇ ; ಗೃಹ ದಾನ ಮಾಡುವ ನೀವು ನಮಗೆ ಒಳ್ಳೆಯ ರಕ್ಷಕರಾಗಿ ಮತ್ತು ನಮ್ಮನ್ನು ಹಿಂಸಕರಾದ ಕಳ್ಳನಿಂದ ರಕ್ಷಿಸಿ.

## English Translation

You have been givers of great riches; you have again caused them to disappear; do you, who are donors of dwellings, become our preservers ; protect us from the felonious robber.

॥ ವಿಶೇಷವಿಷಯಗಳು ॥

**ಮಹಃ—ಮಹತೋ ಧನಸ್ಯ** । ಮಹಃ ಎಂಬ ಪದವು ಉದಕ ನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುತ್ತದೆ. ಧನವೆಂದು ಅರ್ಥ.

ಸ್ಕಂದಸ್ವಾಮಿಗಳು—**ನಿರತತಂಸತಂ—ತಸು ಉಪಕ್ಷಯೇ ಇತ್ಯಸ್ಯ ಇದಂ ರೂಪಂ ನ ತನೋತೇಃ ಲ್ಸ್ವಾನಾಮತ್ಯರ್ಥಮುಪಕ್ಷಯಿತಾರೌ । ಯುಸ್ಮೈ ದೇಯಂ ಧನಂ ತಸ್ಮೈ ಚ ಧನಂ ಧತ್ತಂ ಯ ಉಪಕ್ಷಯಿತವ್ಯಸ್ತಮುಪಕ್ಷಯಥ ಇತ್ಯರ್ಥಃ** । **ನಿಃ** ಎಂಬ ಉಪಸರ್ಗದಿಂದ ಕೂಡಿರುವ **ತಸು ಉಪಕ್ಷಯೇ** ಎಂಬ ಧಾತುವಿನಿಂದ **ನಿರತತಂಸತಂ** ಎಂದು ರೂಪವಾಗುತ್ತದೆ, ನಾಶಪಡಿಸುವುದು ಎಂದು ಅರ್ಥ. ಅಶ್ವಿನೀದೇವತೆಗಳು ಧನವನ್ನು ಅನುಗ್ರಹಿಸಿ ಕೊಡಬೇಕಾದವನಿಗೆ ಕೊಡುವರು. ನಿಗ್ರಹಮಾಡಬೇಕಾದವನಿಗೆ ಅವನ ಧನವನ್ನು ನಾಶಪಡಿಸುವರು. ಆದ್ದರಿಂದ ಇವರು ನಿಗ್ರಹಾನುಗ್ರಹಸಮರ್ಥರು ಎಂದು ಅರ್ಥ ಮಾಡಿರುವರು.

**ವಸೂ—ವಾಸಯಿತಾರಾವಶ್ವಿನೌ** । ಅಶ್ವಿನಿದೇವತೆಗಳು ಸುಖವಾಗಿರುವಂತೆ ಇರಿಸುವರು ಎಂದು ಸಾಯಣರೂ, **ಪ್ರಶಸ್ಯೌ ವಸುಮಂತೌ ವಾ** ಶ್ಲಾಘನೆಗೆ ಅರ್ಹರೂ ಅಥವಾ ಧನವಂತರೂ ಆಗಿರುವರು ಎಂದು ಸ್ಕಂದಸ್ವಾಮಿಗಳೂ ವಿವರಿಸಿರುವರು.

**ವೃಕಾತ್—ಸ್ತೇನಾತ್** ಕಳ್ಳನ ದೆಸೆಯಿಂದ ಎಂದು ಸಾಯಣರ ವಿವರಣೆ. ವೃಕಶಬ್ದವು—ವಜ್ರಾಯುಧ ವೆಂಬ ಅರ್ಥವನ್ನು ಬೋಧಿಸುವುದು (ನಿ. ೩-೧೧) ವಜ್ರಾಯುಧದ ನಾಮಗಳಲ್ಲಿಯೂ ಸ್ತೇನನಾಮ

ಗಳಲ್ಲಿಯೂ (ನಿ. ೩–೧೯) ಉಕ್ತವಾಗಿದೆ. **ವೃಕಶ್ಚಂದ್ರಮಾ ಭವತಿ** (ನಿ. ೫–೨೧) ಎಂದುಉಕ್ತವಾಗಿರುವುದರಿಂದ ವೃಕ ಶಬ್ದಕ್ಕೆ ಚಂದ್ರನೆಂದೂ, **ವೃಕೋ ಲಾಂಗಲಂ ಭವತಿ ವಿಕರ್ತನಾತ್** (ನಿ. ೬–೨೬) ಎಂಬ ವಿವರಣೆಯಿಂದ ನೇಗಿಲು ಎಂದೂ, ಅರ್ಥವಾಗುತ್ತದೆ. ವೃಕಶಬ್ದಕ್ಕೆ ಕಳ್ಳ, ವಜ್ರಾಯುಧ, ಚಂದ್ರ ನೇಗಿಲು ಎಂಬ ಅರ್ಥಗಳು ಆಗುವುವು. ಎಂದು ಯಾಸ್ಕರು ಹೇಳುವರು. ಸ್ಕಂದಸ್ವಾಮಿಗಳು—ಈ ಅರ್ಥಗಳ ಜೊತೆಗೆ **ಭಕ್ಷಿತುಮಿಚ್ಛತಃ ಪ್ರಾಣಿವಿಶೇಷಾತ್ ಅಥವಾ ಆದಾತುಃ ಪಾಪಕಾಮಾತ್** ತಿನ್ನಲು ಅಪೇಕ್ಷಿಸುವ ಪ್ರಾಣಿ (ತೋಳ) ಎಂದೂ, ಅಥವಾ ನಮ್ಮ ಹತ್ತಿರ ಇರುವುದನ್ನು ತೆಗೆದುಕೊಳ್ಳುವವನು ಎಂದೂ ಅರ್ಥವನ್ನು ಹೇಳಿರುವರು. ನಿಗ್ರಹಾನುಗ್ರಹವನ್ನು ಆಚರಿಸುವ ಅಶ್ವಿನೀದೇವತೆಗಳು ನಮ್ಮನ್ನು ರಕ್ಷಿಸಲಿ. ನಮ್ಮ ಧನವನ್ನು ಅಪಹರಿಸುವವರೂ, ನಮ್ಮನ್ನು ಹಿಂಸೆಪಡಿಸುವವರೂ, ಆದವರಿಂದ ನಮಗೆ ರಕ್ಷಣೆಯು ಉಂಟಾಗಲಿ ಎಂದು ಅಶ್ವಿನೀದೇವತೆಗಳನ್ನು ಈ ಋಕ್ಕಿನಲ್ಲಿ ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಆಸ್ತಮ್**—ಅಸ ಭುವಿ ಧಾತು. ಲಙ್ ಮಧ್ಯಮಪುರುಷ ದ್ವಿವಚನ ರೂಪ. **ಹಿಚ** (ಪಾ. ಸೂ. ೮–೧–೩೪) ಎಂಬುದರಿಂದ ಪ್ರತಿಷೇಧ ಬರುತ್ತದೆ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಮಹಃ**—ಮಹತ್ ಶಬ್ದ. ಷಷ್ಠೀ ಏಕವಚನದಲ್ಲಿ ಮಹತಃ ಎಂದು ರೂಪವಾದಾಗ ಛಾಂದಸವಾಗಿ ಅತಿಗೆ ಲೋಪ ಬರುತ್ತದೆ. ಅಥವಾ ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಷಷ್ಠೀ ಏಕವಚನದಲ್ಲಿ ಮಹಃ ಎಂದು ರೂಪವಾಗುತ್ತದೆ.

**ರನ್**—ರಾ ಆದಾನೇ· ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಶಪಿಗೆ **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨–೪–೭೨) ಎಂಬುದರಿಂದ ಲುಕ್. **ಸಾರ್ವಧಾತುಕಮಪಿತ್** ಸೂತ್ರದಿಂದ ಶತೃವಿಗೆ ಙ್ತ್ವವಿರುವುದರಿಂದಲೂ **ಛಂದಸ್ಯುಭಯಥಾ** (ಪಾ. ಸೂ. ೩–೪–೧೧೭) ಎಂಬುದರಿಂದ ಆರ್ಧಧಾತುಕಸಂಜ್ಞೆ ಇರುವುದರಿಂದಲೂ **ಆತೋಲೋಪ ಇಟಿ ಚ** (ಪಾ. ಸೂ. ೬–೪–೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರಥಮಾ ಸು ಪರವಾದಾಗ ನುಮಾಗಮ. ಸುಲೋಪ, ಸಂಯೋಗಾಂತಲೋಪ. ಪ್ರತ್ಯಯಸ್ವರದಿಂದ ಉದಾತ್ತವಾಗುತ್ತದೆ. **ವ್ಯತ್ಯಯೋ ಬಹುಲಮ್** ಎಂಬುದರಿಂದ ದ್ವಿವಚನಕ್ಕೆ ಏಕವಚನ ಪ್ರತ್ಯಯ ಬಂದಿದೆ.

**ನಿರತತಂಸತಮ್**—ತಸಿ ಅಲಂಕಾರೇ. ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. ಣಿಜಂತದ ಮೇಲೆ ಲುಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩–೧–೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬–೧–೧೧). ಎಂಬುದರಿಂದ ಧಾತುವಿಗೆ ದ್ವಿತ್ವ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ಅಭ್ಯಾಸಕ್ಕೆ ಆದಿಹಲ್ ಶೇಷ. ನುಮಾಗಮ ಬಂದುದರಿಂದ ಗುರುಸಂಜ್ಞೆಯಿಂದ ಲಘು ಸಂಜ್ಞೆಗೆ ಬಾಧ ಬಂದುದರಿಂದ **ಸನ್ವಲ್ಲಘುನಿ**—(ಪಾ. ಸೂ. ೩–೪–೯೩) ಸೂತ್ರದಿಂದ ಸನ್ವದ್ಭಾವ ಬರುವುದಿಲ್ಲ. ಆದುದರಿಂದ ಅಭ್ಯಾಸಕ್ಕೆ ಇತ್ವಾದಿಗಳು ಬರುವುದಿಲ್ಲ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ **ನಿಪಾತೈರ್ಯದ್ಯ**—(ಪಾ. ಸೂ. ೮–೧–೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ.

ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ಉದಾತ್ತವುಳ್ಳ ತಿಙಂತ ಪರವಾದುದರಿಂದ **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ನಿರ್) ನಿಘಾತಸ್ವರ ಬರುತ್ತದೆ.

**ತಾ—ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ.

**ಸುಗೋಪಾ**—ಗುಪೂ ರಕ್ಷಣೇ. ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ಅಚ್**ಪ್ರತ್ಯಯ. **ಪುಗಂತ-ಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ. ಅಂತೋದಾತ್ತಸ್ವರ ಬರುತ್ತದೆ.

**ಸ್ಯಾತಮ್**—ಅಸ ಭುವಿ. ಧಾತು. ವಿಧಿಲಿಙ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಶ್ನಸೋರ-ಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಪಾತಮ್**—ಪಾ ರಕ್ಷಣೇ. ಧಾತು. ಅದಾದಿ. ಲೋಟ್ ಮಧ್ಯಮಪುರುಷ ದ್ವಿವಚನಾಂತರೂಪ. **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬಲ್ಲಿ **ಅತಿಙಃ** ಎಂದು ಪ್ರತಿಷೇಧ ಮಾಡಿರುವುದರಿಂದ ಇದು ತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಘಾಯೋಃ**—ಅಘಂ ಪರೇಷಾಮಿಚ್ಛತಿ ಎಂದು ಅರ್ಥವಿವಕ್ಷಾ ಮಾಡಿದಾಗ **ಛಂದಸಿ ಪರೇಚ್ಛಾಯಾ-ಮಪಿ** ಎಂಬ ವಚನದಿಂದ ಪರೇಚ್ಛಾ ತೋರುವಾಗಲೂ **ಕ್ಯಚ್** ಪ್ರತ್ಯಯ ಬರುತ್ತದೆ. **ಅಶ್ವಾಘಸ್ಯಾತ್** (ಪಾ. ಸೂ. ೭-೪-೩೭) ಎಂಬುದರಿಂದ ಕ್ಯಚ್ ಪರವಾದಾಗ ಆತ್ವ. ಅಘಾಯ ಎಂಬ ಕ್ಯಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. **ಕ್ಯಾಚ್ಛಂದಸಿ** (ಪಾ. ಸೂ. ೭-೨-೧೭೦) ಎಂಬುದರಿಂದ ಇದರ ಮೇಲೆ ಉಪ್ರತ್ಯಯ. **ಅತೋಲೋಪಃ** (ಪಾ. ಸೂ. ೬-೪-೪೮) ಸೂತ್ರದಿಂದ ಕ್ಯಚ್ಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪಂಚಮೀ ಏಕವಚನಾಂತರೂಪ. || ೭ ||



|| ಸಂಹಿತಾಪಾಠಃ ||

ಮಾ ಕಸ್ಮೈ ಧಾತಮಭ್ಯಮಿತ್ರಿಣೇ ನೋ ಮಾಕುತ್ರಾ ನೋ ಗೃಹೇಭ್ಯೋ ಧೇನವೋ ಗುಃ ।
ಸ್ತನಾಭುಜೋ ಅಶಿಶ್ವೀಃ || ೮ ||

॥ ಪದಪಾಠಃ ॥

ಮಾ । ಕಸ್ಮೈ । ಧಾತಂ । ಅಭಿ । ಅಮಿತ್ರಿಣೇ । ನಃ । ಮಾ । ಅಕುತ್ರ । ನಃ ।
ಗೃಹೇಭ್ಯಃ । ಧೇನವಃ । ಗುಃ ।
ಸ್ತನಽಭುಜಃ । ಅಶಿಶ್ವೀಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಅಮಿತ್ರಿಣೇ । ಅಮಿತ್ರಂ ಮಿತ್ರರಾಹಿತ್ಯಂ । ತದ್ವತೇ ಕಸ್ಮೈ ಚಿದಪಿ ಶತ್ರವೇ ನೋಽಸ್ಮಾನ್ಮಾಭಿ ಧಾತಂ । ಆಭಿಮುಖ್ಯೇನ ಮಾ ಸ್ಥಾಪಯತಂ । ಅಪಿ ಚ ನೋಽಸ್ಮಾಕಂ ಗೃಹೇಭ್ಯಃ ಸಕಾಶಾತ್ಸ್ತನಾಭುಜಃ ಸ್ತನೈರ್ವತ್ಸಾನ್ಮನುಷ್ಯಾಂಶ್ಚ ಪಾಲಯಂತ್ಯೋ ಧೇನವೋ ಗಾವೋಽಶಿಶ್ವೀಃ ಶಿಶುನಾ ವತ್ಸೇನ ವಿರಹಿತಾ ಅಸ್ಮದೀಯೇ ಗೃಹೇಽಶಯಾನಾ ವಾ ಸತ್ಯೋಽಕುತ್ರ ಚಿದಸ್ಮಾಭಿರಗಮ್ಯೇ ಪ್ರದೇಶೇ ಮಾ ಗುಃ । ಮಾ ಗಚ್ಛಂತು ॥ ಧಾತಂ । ಧಾಞೋ ಮಾಙಿ ಲುಙಿ ಗಾತಿಸ್ಥೇತಿ ಸಿಚೋ ಲುಕ್ । ನ ಮಾಙ್ಯೋಗ ಇತ್ಯಡಭಾವಃ । ಅಕುತ್ರ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಗುಃ । ಇಣ್ ಗತೌ । ಇಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ । ಆತ ಇತಿ ಝೇರ್ಜುಸ್ । ಸ್ತನಾಭುಜಃ । ಭುಜ ಪಾಲನಾಭ್ಯವಹಾರಯೋಃ । ಸ್ತನೈರ್ಭುಂಜಂತಿ ಪಾಲಯಂತೀತಿ ಸ್ತನಾಭುಜಃ । ಕ್ವಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕೋ ದೀರ್ಘಃ । ಅಶಿಶ್ವೀಃ । ಸಖ್ಯಶಿಶ್ವೀತಿ ಭಾಷಾಯಾಂ । ಪಾ. ೪-೧-೬೨ । ಇತಿ ಛಂದಸ್ಯಪಿ ವ್ಯತ್ಯಯೇನ ನಿಪಾತನಂ ದ್ರಷ್ಟವ್ಯಂ । ಯದ್ವಾ । ಶಿಶುರಸ್ಯಾಸ್ತೀತಿ ಶಿಶ್ವೀ । ಛಂದಸೀವನಿಪಾವಿತಿ ಮತ್ವರ್ಥೀಯ ಈಕಾರಃ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಅಥವಾ । ಶೀಙ್ ಸ್ವಪ್ನೇ । ಉತ್ಸರ್ಗಶ್ಛಂದಸೀತಿ ಕಿಪ್ರತ್ಯಯಃ । ದ್ವಿರ್ವಚನಹ್ರಸ್ವತ್ವೇ । ಏರನೇಕಾಚ ಇತಿ ಯಣ್ । ಛಾಂದಸೋ ವಕಾರಃ । ಪೂರ್ವವತ್ಸಮಾಸಸ್ವರೌ ॥

॥ ಪ್ರತಿಪದಾರ್ಥ ॥

(ಅಶ್ವಿನೌ—ಎಲೈ ಅಶ್ವಿನೀದೇವತೆಗಳೇ) । **ಅಮಿತ್ರಿಣೇ**—(ನಮಗೆ) ಶತ್ರುವಾದ । —**ಕಸ್ಮೈ** ಯಾರಿಗೂ । **ನಃ**—ನಮ್ಮನ್ನು । **ಮಾ ಅಭಿಧಾತಂ**—ಒಪ್ಪಿಸಬೇಡಿ । **ಸ್ತನಭುಜಃ**—(ತಮ್ಮ) ಸ್ತನಗಳಿಂದ (ಕರುಗಳನ್ನೂ ಮತ್ತು ಮನುಷ್ಯರನ್ನೂ ಪಾಲಿಸುವ) । **ಧೇನವಃ**—ಗೋವುಗಳು । **ಅಶಿಶ್ವೀಃ**—ಕರುಗಳಿಂದ ಪ್ರತ್ಯೇಕಿಸಲ್ಪಟ್ಟು (ನಮ್ಮ ಮನೆಗಳಲ್ಲಿ ಮಲಗದೇ) । **ಅಕುತ್ರ**—(ನಮಗೆ ಅಗಮ್ಯವಾದ) ಯಾವ ಪ್ರದೇಶಕ್ಕೂ । **ನಃ**—ನಮ್ಮ । **ಗೃಹೇಭ್ಯಃ**—ಮನೆಗಳಿಂದ ಹೊರಗೆ । **ಮಾ ಗುಃ**—ಹೋಗದಿರಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, (ನಮ್ಮ) ಶತ್ರುಗಳಿಗೆ ನಮ್ಮನ್ನು ಒಪ್ಪಿಸಬೇಡಿ ; ನಮ್ಮನ್ನು ಕ್ಷೀರದಿಂದ ಪೋಷಿಸುವ ನಮ್ಮ ಗೋವುಗಳು ತಮ್ಮ ಕರುಗಳನ್ನು ಬಿಟ್ಟು ಎಲ್ಲಿಯೂ ಹೋಗದಂತಿರಲಿ.

## English Translation.

Deliver us not, Aswins, to our enemies ; never may our cows, who nourish us with their udders, stray from our houses, separated from their calves.

॥ ವಿಶೇಷವಿಷಯಗಳು ॥

**ಸ್ತನಾಭುಜಃ—ಸ್ತನ್ಯೈಃ ವತ್ಸಾನ್ ಮನುಷ್ಯಾಂಶ್ಚ ಪಾಲಯಂತ್ಯಃ** । ಮೊಲೆಗಳಿಂದ ಕರುಗಳನ್ನೂ ಮನುಷ್ಯರನ್ನೂ ಹಾಲು ಕೊಡುವುದರಿಂದ ರಕ್ಷಿಸುವವುಗಳು (ಗೋವುಗಳು) ಎಂದು ಅರ್ಥವನ್ನು ಸಾಯಣರೂ, **ಸ್ತನಾಃ ಭುಜ್ಯಂತೇ ಯಾಸಾಂ ತಾಃ ಸ್ತನಾಭುಜಃ** ಯಾವ ಪ್ರಾಣಿಗಳ ಸ್ತನಗಳು ಕರುಗಳಿಂದ ಭುಂಜಿಸಲ್ಪಡುತ್ತವೆಯೋ ಅಂತಹ ಗೋವುಗಳೆಂದು ಸ್ಕಂದಸ್ವಾಮಿಗಳೂ ವರ್ಣಿಸಿರುವರು.

ಸಾಯಣರು ಹೇಳಿರುವುದಕ್ಕಿಂತಲೂ ಸ್ವಲ್ಪ ವ್ಯತ್ಯಾಸವಾದ ಅರ್ಥವನ್ನು ಸ್ಕಂದಸ್ವಾಮಿಗಳು ವಿವರಿಸಿರುತ್ತಾರೆ.

**ದ್ವಿತೀಯಪಾದೇ ಧೇನೂನಾಮುಪಾದಾನಾತ್ ತತ್ಸಾನ್ನಿಧ್ಯಾತ್ ಧೇನೂರ್ವಾ । ಧನಂ ವಾ ಮಾ ಕಸ್ಮೈ ಚಿತ್ ಅಭ್ಯಮಿತ್ರಿಣೇ ಅಮಿತ್ರಾಯ ದತ್ತಂ ॥**

ಈ ಋಕ್ಕಿನ ಎರಡನೆಯ ಪಾದದಲ್ಲಿ ಧೇನುಗಳು ಎಂದು ಹೇಳಿರುವುದರಿಂದ ನಮ್ಮನ್ನೂ ಮತ್ತು,

**ಅಸ್ಮಾಕಂ ಸಂಬಂಧಿಭ್ಯೋ ಗೃಹೇಭ್ಯೋ ಯುವಾಭ್ಯಾಂ ದತ್ತಾ ಧೇನವಃ ಮುಹ್ಯಂತೇ ಯಾಃ ಗಾವಃ ತಾಃ ॥**

ನೀವು ನಮಗೆ ಅನುಗ್ರಹಮಾಡಿ ಕೊಟ್ಟಿರುವ, ಹಾಲನ್ನು ಕರೆಯುತ್ತಿರುವ ( ಹಸು ) ಗೋವುಗಳನ್ನೂ ನಮ್ಮ ಶತ್ರುಗಳಿಗೆ ಎದುರಾಗದೆ ಇರುವಂತೆ ರಕ್ಷಿಸಿರಿ ಎಂದು ಪ್ರಾರ್ಥನೆಯು ಇಲ್ಲಿ ವರ್ಣಿತವಾಗಿದೆ ಮತ್ತು ನಮ್ಮ ಧನವು ಶತ್ರಗಳಿಗೆ ಸಿಕ್ಕದಿರುವಂತೆಯೂ, ಗೋವುಗಳು ತಮ್ಮ ಕರುಗಳೊಡನೆ ಹಾಲನ್ನು ಹಿಂಡುನವುಗಳಾಗಿ ಎಲ್ಲಿಗೂ ಹೋಗದೆ ನಮ್ಮ ಮನೆಯಲ್ಲಿ ಸಂತತವಾಗಿ ಇರಬೇಕೆಂದೂ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ.

**ಅಕುತ್ರ—ಅಸ್ಮಾಭಿರಗಮ್ಯೇ ಪ್ರದೇಶೇ** । ನಾವು ತಿಳಿಯದಿರುವ ಪ್ರದೇಶವೆಂದು ಸಾಯಣರೂ, **ಯನ್ನ ಜ್ಞಾಯತೇ ಕಿಂತದಿತಿ ತದಕಿಂ ಚೋರಸ್ಥಾನಂ । ತತ್ರ ಅಕುತ್ರ । ಅಜ್ಞೇಯೇ ಚೋರಸ್ಥಾನೇ ।** ತಿಳಿಯಲ್ಪಡದಿರುವ ಪ್ರದೇಶವು ಅಕುತ್ರ ಎಂಬ ಶಬ್ದಾರ್ಥವಾಗಿ ದುರ್ಜ್ಞೇಯವಾದ ಚೋರಸ್ಥಾನವೆನಿಸಿರುತ್ತದೆ ಎಂದು ಸ್ಕಂದಸ್ವಾಮಿಗಳು ವಿವರಿಸಿ ಇರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಧಾತೇವಮ್**—ಡುಧಾಞ್ ಧಾರಣಪೋಷಣಯೋಃ ಧಾತು. ಲುಙ್ ಮಧ್ಯಮಪುರುಷ ದ್ವಿವಚದಲ್ಲಿ ತವಮಾದೇಶ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾಭೂಭ್ಯಃ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಮಾಙ್ ಸಂಬಂಧವಿರುವುದರಿಂದ **ನ ಮಾಙ್ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂ ದ ಅಡಾಗಮ ನಿಷೇಧ ಬರುತ್ತದೆ.

**ಅಮಿತ್ರಿಣೇ**—ನ ವಿದ್ಯತೇ ಮಿತ್ರಂ ಯಸ್ಯ ಅಮಿತ್ರಃ ಅಮಿತ್ರಃ ಅಸ್ಯ ಅಸ್ತಿ ಇತಿ ಅಮಿತ್ರೀ. ತಸ್ಮೈ ಅಮಿತ್ರಿಣೇ. **ಅತಇನಿಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ.

**ಅಕುತ್ರ**—**ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಗುಃ**—ಇಣ್ ಗತೌ. ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಇಣೋ-ಗಾ ಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಲುಙ್‌ನಿಮಿತ್ತವಾಗಿ ಗಾದೇಶ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲುಕ್ **ಆತಃ** (ಪಾ. ಸೂ. ೩-೪-೧೧೦) ಎಂಬುದರಿಂದ ಸಿಚ್ ಲುಕ್ಕಾಗಿ ಆದಂತದ ಪರದಲ್ಲಿ ಬಂದುದರಿಂದ ಝಿಗೆ ಜುಸಾದೇಶ. **ಉಸ್ಯ-ಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. **ನ ಮಾಙ್ಯೋಗೇ** ಎಂಬುದರಿಂದ ಅಡಾಗಮ ನಿಷೇಧ. ತಿಙಂತನಿಘಾತಸ್ವರ ಬರುತ್ತದೆ.

**ಸ್ತನಾಭುಜಃ**—ಭುಜ ಪಾಲನಾಭ್ಯವಹಾರಯೋಃ ಧಾತು. ಸ್ತನ್ಯೈಃ ಭುಜಂತಿ ಪಾಲಯಂತಿ ಇತಿ ಸ್ತನಾ-ಭುಜಃ (ಸ್ತನ್ಯಪಾನದಿಂದ ರಕ್ಷಿಸುವವುಗಳು ಎಂದರ್ಥ) **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ ಬರುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಅಶಿಶ್ವೀಃ**—**ಸಖ್ಯಶಿಶ್ವೀತಿ ಭಾಷಾಯಾಮ್** (ಪಾ. ಸೂ. ೪-೧-೬೨) ಎಂಬಲ್ಲಿ ಲೋಕದಲ್ಲಿ ಎಂದು ವಿಧಿಸಿದರೂ ವ್ಯತ್ಯಯದಿಂದ ಛಂದಸ್ಸಿನಲ್ಲಿಯೂ ನಿಪಾತನವನ್ನು ಅಂಗೀಕರಿಸಬೇಕು. ಅಥವಾ ಶಿಶುಃ ಅಸ್ಯ ಅಸ್ತಿ—ಇತಿ ಶಿಶ್ವೀ. **ಛಂದಸೀವನಿಪೌ** (ಪಾ. ಸೂ. ೫-೨-೧೨೨-೩) ಎಂಬುದರಿಂದ ಮತ್ವರ್ಥದಲ್ಲಿ ಈಕಾರ ಪ್ರತ್ಯಯ. ನ ಶಿಶ್ವೀ ಅಶಿಶ್ವೀ. ನಞ್‌ಸಮಾಸವಾದಾಗ **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಇದಕ್ಕೆ ಜಸ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘ.

ಅಥವಾ ಶೀಙ್ ಸ್ವಪ್ನೇ. ಧಾತು. **ಉತ್ಸರ್ಗಶ್ಛಂದಸಿ** (ಪಾ. ಸೂ. ೩-೨-೧೭೧-೧) ಎಂಬುದರಿಂದ ಕಿ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಹ್ರಸ್ವಃ** ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ. **ಏರನೇಕಾಚೋಽಸಂಯೋಗಪೂರ್ವಸ್ಯ** (ಪಾ. ಸೂ. ೬-೪-೮೨) ಎಂಬುದರಿಂದ ಯಣಾದೇಶ. ಛಾಂದಸವಾಗಿ ಅದಕ್ಕೆ ವತ್ವ. ಹಿಂದಿನಂತೆ ನಞ್‌ಸಮಾಸವಾದಾಗ ನಞ್‌ಸ್ವರ ಬರುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ದುಹೀಯನ್ಮಿತ್ರಧಿತಯೇ ಯುವಾಕು ರಾಯೇ ಚ ನೋ ಮಿಮೀತಂ ವಾಜವತ್ಯೈ ।

ಇಷೇ ಚ ನೋ ಮಿಮೀತಂ ಧೇನುಮತ್ಯೈ ॥ ೯ ॥

॥ ಪದಪಾಠಃ ॥

ದುಹೀಯನ್ । ಮಿತ್ರಽಧಿತಯೇ । ಯುವಾಕು । ರಾಯೇ । ಚ । ನಃ ।

ಮಿಮೀತಂ । ವಾಜಽವತ್ಯೈ ।

ಇಷೇ । ಚ । ನಃ । ಮಿಮೀತಂ । ಧೇನುಽಮತ್ಯೈ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಕು ಯುವಾಂ ಕಾಮಯಮಾನಾಃ ಸ್ತುತಿಭಿರ್ಮಿಶ್ರಯಿತಾರಃ ಸಂಯೋಜಯಿತಾರೋ ವಾ ಸ್ತೋತಾರೋ ಮಿತ್ರಧಿತಯೇ ಮಿತ್ರಾಣಾಂ ಬಂಧುಜನಾನಾಂ ಧಾರಣಾರ್ಥಂ ದುಹೀಯನ್ । ಯುಷ್ಮತ್ಸಕಾಶಾದ್ಧನಾನಿ ದುಹಂತಿ ಪ್ರಾಪ್ನುವಂತಿ । ಅತೋ ನೋಽಸ್ಮಾನಪಿ ವಾಜವತ್ಯೈ ವಾಜಯುಕ್ತಾಯ ಚ ರಾಯೇ ಧನಾಯ ಮಿಮೀತಂ । ಕುರುತಂ । ತಥಾ ಧೇನುಮತ್ಯೈ ಧೇನುಭಿರ್ಯುಕ್ತಾಯೇಷೇಽನ್ನಾಯ ಚ ನೋಽಸ್ಮಾನ್ಮಿಮೀತಂ । ಕುರುತಂ । ಅಸ್ಮಭ್ಯಂ ಸ್ತೋತೃಭ್ಯೋ ಬಲಯುಕ್ತಂ ಧನಂ ಗೋಯುಕ್ತಮನ್ನಂ ಚ ಪ್ರಯಚ್ಛತಮಿತ್ಯರ್ಥಃ ॥ ದುಹೀಯನ್ । ದುಹ ಪ್ರಪೂರಣೇ ।

**ದುಹಿರ್ದೋಹಃ । ಇಗುಪಧಾತ್ಕಿತ್ । ಉ. ೪–೧೧೯ । ಇತಿ ಭಾವ ಇಪ್ರತ್ಯಯಃ । ದುಹಿಮಾತ್ಮನ ಇಚ್ಛತಿ ದುಹೀಯತಿ । ಸುಪ ಆತ್ಮನಃ ಕ್ಯಚ್ । ದುಹೀಯತೇರ್ಲೇಟ್ಯಡಾಗಮಃ । ಇತಶ್ಚ ಲೋಪಃ ಇತೀಕಾರಲೋಪಃ । ಯದ್ವಾ । ದುಹೇರ್ಲಿಙಿ ಝಸ್ಯ ರನ್ । ಪಾ. ೩–೪–೧೦೫ । ಇತಿ ವ್ಯತ್ಯಯೇನ ರನಾದೇಶಾಭಾವೇ ರೂಪಮೇತತ್ । ಛಾಂದಸೋಽಂತ್ಯಲೋಪಃ । ಯದ್ವಾ । ರನಾದೇಶೇ ಕೃತೇ ಛಾಂದಸೋ ರೇಫಸ್ಯ ಯಕಾರಃ । ಅತ ಏವ ವೃತ್ತಿಕೃತ್ಯನವಧಾರಣಾನ್ನಾವಗೃಹ್ಣಂತಿ । ಯುವಾಕು । ಸುಪಾಂ ಸುಲುಗಿತಿ ಜಸೋ ಲುಕ್ । ಮಿಮಿಾತಂ । ಮಾಙ್ ಮಾನೇ ಶಬ್ದೇ ಚ । ಜೌಹೋತ್ಯಾದಿಕಃ । ವ್ಯತ್ಯಯೇನ ಪರಸ್ಮೈಪದಂ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಚವಾಯೋಗೇ ಪ್ರಥಮೇತಿ ನಿಘಾತ ಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) । **ಯುವಾಕು**—ನಿಮ್ಮನ್ನಪೇಕ್ಷಿಸುವವರು (ಸ್ತುತಿಸುವವರು) । **ಮಿತ್ರಧಿತಯೇ**—(ತಮ್ಮ) ಮಿತ್ರರನ್ನು ಪೋಷಿಸುವುದಕ್ಕೆ । **ದುಹೀಯನ್**—(ನಿಮ್ಮಿಂದ ಧನಾದಿಗಳನ್ನು) ಪಡೆಯುತ್ತಾರೆ; । (**ಅತಃ**—ಆದುದರಿಂದ) । **ನಃ**—ನಮ್ಮನ್ನು । **ವಾಜವತ್ಯೈ**—ಬಲಯುಕ್ತವಾದ । **ರಾಯೇ ಚ**—ಧನಕ್ಕೆ । **ಮಿಮಿಾತಂ**—(ಅರ್ಹರನ್ನಾಗಿ) ಮಾಡಿ; । (**ತಥಾ**—ಹಾಗೆಯೇ) । **ಧೇನುಮತ್ಯೈ**—ಧೇನುಯುಕ್ತವಾದ । **ಇಷೇ ಚ**—ಅನ್ನಕ್ಕೋಸ್ಕರಲೂ । **ನಃ**—ನಮಗೆ । **ಮಿಮಿಾತಂ**—(ಅನುಗ್ರಹ) ಮಾಡಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಸ್ತುತಿಸುವವರು (ನಿಮ್ಮಿಂದ ತಮ್ಮ) ಮಿತ್ರರ ಪೋಷಣೆಗೆ (ಧನಾದಿಗಳನ್ನು) ಪಡೆಯುತ್ತಾರೆ; (ಅದೇರೀತಿ) ನಮಗೂ, ಬಲ, ಧನ, ಧೇನುಗಳು, ಅನ್ನ (ಮುಂತಾದುವನ್ನು) ಅನುಗ್ರಹಿಸಿ.

English Translation.

Those who adore you obtain (wealth) for the support of their friends; direct us to opulence, bestowing food; direct us to food, associ-atted with cows.

॥ ವಿಶೇಷವಿಷಯಗಳು ॥

**ಯುವಾಕು—ಯುವಾಂ ಕಾಮಯಮಾನಾಃ ಸ್ತುತಿಭಿರ್ಯೋಜಯಿತಾರೋ ವಾ ಸ್ತೋತಾರಃ** ಅಶ್ವಿನೀದೇವತೆಗಳನ್ನು ರಕ್ಷಣೆಗಾಗಿ ಅಪೇಕ್ಷಿಸಿ ಕರೆಯುತ್ತೇವೆ, ಅಥವಾ ಸ್ತುತಿಮಾಡುತ್ತೇವೆ, ಅಥವಾ ಸ್ತುತಿಗಳಿಂದ ಒಲಿಸಿಕೊಳ್ಳುತ್ತೇವೆ ಎಂದು ಅಪೇಕ್ಷಿಸುವವರು, ಒಲಿಸಿಕೊಳ್ಳುವವರು, ಅಥವಾ ಸ್ತುತಿಮಾಡುವವರು ಎಂದು ಅರ್ಥವಾಗುತ್ತದೆ ಎಂದು ಸಾಯಣರ ವ್ಯಾಖ್ಯಾನ.

**ಯು ಮಿಶ್ರಣೇ ಮಿಶ್ರಣೀಯಂ ಪಯಃ ಪಾನಾರ್ಹಮಿತ್ಯರ್ಥಃ । ಯುಷ್ಮತ್ಕಾಮಂ ವಾಂ ಯುವಾಕು । ಯುವಯೋರ್ಯೋಗ್ಯಮಿತ್ಯರ್ಥಃ ॥**

ಸ್ಕಂದಸ್ವಾಮಿಗಳು—ಮಿಶ್ರಣಾರ್ಥವಾದ ಯು ಧಾತುವಿನಿಂದ ಯುವಾಕು ಎಂಬ ಶಬ್ದರೂಪವು ನಿಷ್ಪನ್ನವಾಗಿರುತ್ತದೆ. (ಪಾನಮಾಡಲು) ಕುಡಿಯಲು ಅರ್ಹವಾದ ಹಾಲು ಅಥವಾ ನೀರು ಎಂದು ಅರ್ಥವು. ಅಥವಾ ಅಶ್ವಿನೀದೇವತೆಗಳನ್ನು ರಕ್ಷಣೆಗಾಗಿ ಅಪೇಕ್ಷಿಸುವವನು ಎಂದರೆ ಅಶ್ವಿನೀದೇವತೆಗಳಿಂದ ರಕ್ಷಣೆಗೆ ಅರ್ಹನಾದವನು ಎಂಬ ಅರ್ಥವನ್ನೂ ವಿವರಿಸಿರುತ್ತಾರೆ.

**ಮಿತ್ರಧಿತಯೇ—ಮಿತ್ರಾಣಾಂ ಬಂಧುಜನಾನಾಂ ಧಾರಣಾರ್ಥಂ ।** ಸ್ನೇಹಿತರನ್ನೂ ಬಂಧುಜನರನ್ನೂ ರಕ್ಷಿಸುವುದಕ್ಕಾಗಿ ಎಂದು ಸಾಯಣರ ವಿವರಣೆ.

**ಧೇಟ್ ಪಾನೇ ಇತ್ಯಸ್ಯ ದಧಾತೇರ್ವಾ ದಾನಾರ್ಥಸ್ಯ ಇದಂ ರೂಪಂ । ಮಿತ್ರಾಣಾಂ ಪಾನಾರ್ಥಂ ಮಿತ್ರೇಭ್ಯೋ ವಾ ದಾನಾರ್ಥಂ ।**

ಧೀತಿ ಎಂಬ ಪದವು ಪಾನ ಎಂಬ ಅರ್ಥವುಳ್ಳ ಧೇಟ್ ಧಾತುವಿನಿಂದಲಾಗಲಿ, ದಾನ ಎಂಬ ಅರ್ಥವುಳ್ಳ ದಧ ಧಾತುವಿನಿಂದಲಾಗಲಿ ನಿಷ್ಪನ್ನವಾಗಿರುವುದು. ಸ್ನೇಹಿತರ (ಇತರರ) ಪಾನಕ್ಕಾಗಿಯೂ, ಸ್ನೇಹಿತರಿಗೆ ದಾನಮಾಡುವುದಕ್ಕಾಗಿಯೂ ಎಂದು ಅರ್ಥವನ್ನು ಸ್ಕಂದಸ್ವಾಮಿಗಳು ವಿವರಿಸಿರುತ್ತಾರೆ.

ಅಶ್ವಿನೀದೇವತೆಗಳನ್ನು ಸ್ತುತಿಮಾಡಿ ಬಂಧುಗಳನ್ನೂ ಮಿತ್ರರನ್ನೂ ರಕ್ಷಿಸುವುದಕ್ಕಾಗಿ ಧನವನ್ನೂ, ಅನ್ನವನ್ನೂ, ಬಲವನ್ನೂ ಹೊಂದುವುದರಿಂದ ಅವರನ್ನು ಸ್ತುತಿಮಾಡುವ ನಮಗೆ ಅನ್ನ, ಧನ, ಬಲ ಮತ್ತು ಗೋರೂಪವಾದ ಧನ ಇವುಗಳನ್ನು ಅವರು ಅನುಗ್ರಹಿಸಲಿ ಎಂದು ಪ್ರಾರ್ಥನೆಯು ವರ್ಣಿತವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ದುಹೀಯನ್**—ದುಹ ಪ್ರಪೂರಣೇ. ಧಾತು. ದುಹಿಃ ದೋಹಃ **ಇಗುಪಧಾತ್ ಕಿತ್** (ಉ. ಸೂ. ೪-೫೫೯) ಎಂಬುದರಿಂದ ಭಾವಾರ್ಥದಲ್ಲಿ ಇಪ್ರತ್ಯಯ. ಇದಕ್ಕೆ ಕಿತ್ವಾತಿದೇಶವಿರುವುದರಿಂದ ಧಾತುವಿಗೆ ಲಘೂಪಧೆಗೆ ಗುಣ ಬರುವುದಿಲ್ಲ. ದುಹಿಂ ಆತ್ಮನ ಇಚ್ಛತಿ ಎಂದು ಅರ್ಥ ವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ದುಹಿ ಎಂಬುದರಮೇಲೆ ಕ್ಯಚ್ ಪ್ರತ್ಯಯ. ವ್ಯತ್ಯಯದಿಂದ ಪೂರ್ವಕ್ಕೆ ದೀರ್ಘ. **ಸನಾದ್ಯಂತಾಧಾತವಃ** ಎಂಬುದರಿಂದ ದುಹೀಯ ಎಂಬುದಕ್ಕೆ ಧಾತುಸಂಜ್ಞಾ. ಇದಕ್ಕೆ ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಂತಃ** ಎಂಬುದರಿಂದ ಇದಕ್ಕೆ ಅಂತಾದೇಶ. **ಇತಶ್ಚ ಲೋಪಃ ಪರ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಅತೋ ಗುಣೇ** ಸೂತ್ರದಿಂದ ಪರರೂಪ. ಅಥವಾ ದುಹ ಧಾತುವಿಗೆ ಲಿಙ್ ಪ್ರಥಮಪುರುಷ ಬಹುವಚನದಲ್ಲಿ ವ್ಯತ್ಯಯದಿಂದ **ಝುಸ್ಯರನ್** (ಪಾ. ಸೂ. ೩-೪-೧೦೫) ಎಂಬುದರಿಂದ ರನ್ನಾದೇಶ ಬರುವುದಿಲ್ಲ. ಆಗ ಛಾಂದಸವಾಗಿ ಅಂತ್ಯಲೋಪ ಬರುತ್ತದೆ. ಅಥವಾ ಝಿಗೆ ರನಾದೇಶ ಬಂದಾಗ ವ್ಯತ್ಯಯದಿಂದ ರೇಫಕ್ಕೆ ಯಕಾರಾದೇಶ. ಈ

ಬಹುವಿಧವಾದ ವ್ಯುತ್ಪತ್ತಿಯು ಅನವಧಾರಣೆಯಿಂದಲೇ ಅವಗ್ರಹವು ಪದಕಾಲದಲ್ಲಿ ಮಾಡಲಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯುವಾಕು**—ಯುವಾಂ ಕಾಮಯಂತೇ ಇತಿ ಯುವಾಕವಃ ಕಮು ಕಾಂತೌ ಧಾತು. **ಮಿತದ್ರ್ವಾದಿಭ್ಯ ಉಪಸಂಖ್ಯಾನಮ್** (ಪಾ. ಸೂ. ೩-೨-೧೮೦-೧) ಎಂಬುದರಿಂದ ಡು ಪ್ರತ್ಯಯ. ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ವಿಭಕ್ತಿ ಪರವಾಗದಿದ್ದರೂ ವ್ಯತ್ಯಯದಿಂದ ಯುಷ್ಮದಿನ ಮಪರ್ಯಂತಕ್ಕೆ ಯುವಾದೇಶ. ಆದಿಗೆ ಆತ್ವ. ಅಥವಾ ಯು ಮಿಶ್ರಣಾಮಿಶ್ರಣಯೋಃ ಧಾತು. ಔಣಾದಿಕ ಕಾಕು ಪ್ರತ್ಯಯ. ಉವಙಾದೇಶ. ಇದಕ್ಕೆ ಜಸ್‌ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೩-೧-೩೯) ಎಂಬುದರಿಂದ ಅದಕ್ಕೆ ಲುಕ್.

**ರಾಯೇ**—ರೈ ಶಬ್ದ. ಚತುರ್ಥೀ ಏಕವಚನ ಪರವಾದಾಗ ಆಯಾದೇಶ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮಿಮೀತಮ್**—ಮಾಙ್ ಮಾನೇ ಶಬ್ದೇ ಚ ಧಾತು. ಜುಹೋತ್ಯಾದಿ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೋಟ್‌ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ. ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ಧಾತುವಿನ ಆಕಾರಕ್ಕೆ ಈತ್ವ. **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಇಷೇ**—**ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೯ ॥



॥ ಸಂಹಿತಾಪಾಠಃ ॥

ಅಶ್ವಿನೋರಸನಂ ರಥಮನಶ್ವಂ ವಾಜಿನೀವತೋಃ ।
ತೇನಾಹಂ ಭೂರಿ ಚಾಕನ ॥ ೧೦ ॥

॥ ಪದಪಾಠಃ ॥

ಅಶ್ವಿನೋಃ । ಅಸನಂ । ರಥಂ । ಅನಶ್ವಂ । ವಾಜಿನೀಽವತೋಃ ।
ತೇನ । ಅಹಂ । ಭೂರಿ । ಚಾಕನ ॥ ೧೦ ॥

॥ ಸಾಯಣಭಾಷ್ಯಂ ॥

**ವಾಜಿನೀವತೋಃ । ವಾಜೋಽನ್ನಂ ಬಲಂ ವಾ । ತದ್ವತ್ಕ್ರಿಯಾವತೋರಶ್ವಿನೋರನಶ್ವಮಶ್ವ-ರಹಿತಮಶ್ವರಾಹಿತ್ಯೇಽಪಿ ಸಾಮರ್ಥ್ಯಾತಿಶಯೇನ ಗಚ್ಛಂತಂ ರಥಮಸನಂ । ಅಹಂ ಸ್ತೋತಾ ಸಮ-ಭಜಂ । ತೇನ ಚ ರಥೇನ ಭೂರಿ ಪ್ರಭೂತಂ ಶ್ರೇಯಶ್ಚಾಕನ । ಕಾಮಯೇ ॥ ಅಸನಂ । ವನ ಷಣ ಸಂಭಕ್ತೌ । ಲಙ್ । ಚಾಕನ । ಕನ ದೀಪ್ತಿಕಾಂತಿಗತಿಷು । ಛಾಂದಸೋ ಲಿಟ್ । ಣಲುತ್ತಮೋ ವಾ । ಪಾ. ೭-೧-೯೧ । ಇತಿ ಣಿತ್ತ್ವಸ್ಯ ವಿಕಲ್ಪನಾದ್ವೃದ್ಧ್ಯಭಾವಃ । ತುಜಾದಿತ್ವಾದಭ್ಯಾಸದೀರ್ಘತ್ವಂ ॥**

॥ ಪ್ರತಿಪದಾರ್ಥ ॥

**ವಾಜಿನೀವತೋಃ**—ಬಲ (ಅನ್ನ) ಕಾರಕವಾದ ಕರ್ಮವುಳ್ಳ । **ಅಶ್ವಿನೋಃ**—ಅಶ್ವಿನೀದೇವತೆಗಳ । **ಅನಶ್ವಂ**—ಅಶ್ವವಿಲ್ಲದೇ (ಗಮನಸಮರ್ಥವಾದ) । **ರಥಂ**—ರಥವನ್ನು । **ಅಹಂ**—ನಾನು । **ಅಸನಂ**—ಸ್ತುತಿಸಿದೆನು । **ತೇನ**—ಆ ರಥದಿಂದ । **ಭೂರಿ**—ಹೆಚ್ಚಾದ (ಶ್ರೇಯಸ್ಸನ್ನು) । **ಚಾಕನ**—(ಅಪೇಕ್ಷಿಸುತ್ತೇನೆ) ಪ್ರಾರ್ಥಿಸುತ್ತೇನೆ.

॥ ಭಾವಾರ್ಥ ॥

ಬಲ (ಅನ್ನ) ಕಾರಕವಾದ ಕರ್ಮಗಳುಳ್ಳ ಅಶ್ವಿನೀದೇವತೆಗಳ ರಥವು ಅಶ್ವಗಳಿಲ್ಲದೆ ಹಾಗೆಯೇ ಹೋಗುವ ಸಾಮರ್ಥ್ಯವುಳ್ಳದ್ದು. ಅಂತಹ ರಥವನ್ನು ನಾನು ಸ್ತುತಿಸಿ, ಅದರಿಂದ ಹೆಚ್ಚಾದ ಶ್ರೇಯಸ್ಸನ್ನು ಪಡೆಯಲಿಚ್ಛಿಸುತ್ತೇನೆ.

English Translation.

I have obtained, without horses, the car of the food-bestowing Aswins, and expect (to gain) by it much (wealth).

॥ ವಿಶೇಷವಿಷಯಗಳು ॥

**ವಾಜಿನೀವತೋಃ—ವಾಜಃ ಅನ್ನಂ ಬಲಂ ವಾ ತದ್ವತೋಃ** । ವಾಜ ಶಬ್ದಕ್ಕೆ ಅನ್ನ ಅಥವಾ ಬಲ ಎಂದು ಅರ್ಥವಾಗುತ್ತದೆ. ಅಶ್ವಿನೀದೇವತೆಗಳು ಇವುಗಳನ್ನು ಅನುಗ್ರಹಿಸುವವರಾದ ಕಾರಣ (ಈ ಶಬ್ದಕ್ಕೆ ಅಭಿಧೇಯ ರಾಗಿರುವರು. ವಾಜಿನೀವತೋ: ಎಂದರೆ ಅನ್ನ ಬಲ ಇವುಗಳನ್ನು ಹೊಂದಿರುವವರೆಂದು ಸಾಯಣರು ಅರ್ಥ ಮಾಡಿರುತ್ತಾರೆ. ಸ್ಕಂದಸ್ವಾಮಿಗಳು—

**ವಾಜೋ ಬಲಂ ತದ್ವತೀ ಸೇನಾ ವಾಜಿನೀ । ಅನ್ನಂ ವಾ ಹವಿರ್ಲಕ್ಷಣಂ ವಾಜಂ । ತದ್ವತೀ । ಸತ್ರಾಹೀನಾದಿಯಾಗಸಂತತಿವಾರ್ಜಿನೀ । ತದ್ವತೋಃ । ಬಲವತೋರನ್ನವತೋರ್ವಾ ॥**

ವಾಜ ಶಬ್ದಕ್ಕೆ ಬಲ ಎಂದೂ ಬಲವುಳ್ಳ ಸೇನೆಯು ವಾಜಿನೀ ಎಂದೂ ಅಥವಾ ಹವಿಸ್ಸಿನ ರೂಪವಾದ ಅನ್ನವು ವಾಜವೆಂದೂ ಪ್ರಸಿದ್ಧವಾಗಿರುವುದು. ಹವಿಸ್ಸಿನ ರೂಪವಾದ ಅನ್ನವನ್ನು ಬಹಳವಾಗಿ ಹೊಂದಿರುವ ಸತ್ರಯಾಗ, ಅಹೀನ ರೂಪವಾದ ಕ್ರತುಗಳು ಇವೇ ಮೊದಲಾದ ಯಜ್ಞಗಳಿಗೆ ವಾಜಿನೀ ಎಂದು ಹೆಸರು ಇರುವುದು. ಆದ್ದರಿಂದ ಅಶ್ವಿನೀ ದೇವತೆಗಳು ಬಲವನ್ನೂ ಹವಿಸ್ಸಿನ ರೂಪದಿಂದ ಇರುವ ಅನ್ನವನ್ನೂ ಹೊಂದಿ ಇರುವರು ಎಂದು ಅರ್ಥ ಮಾಡುವರು.

ವಾಜಿನೀವತಿ ಎಂಬ ಶಬ್ದವನ್ನು ಯಾಸ್ಕರು (ನಿ. ೨-೧೯) ಉಷಃ ಪರ್ಯಾಯ ಪದಗಳಲ್ಲಿ ಹೇಳಿರುವರು.

**ಉಷಸ್ತಚ್ಚಿತ್ರಮಾ ಭರಾಸ್ಮಭ್ಯಂ ವಾಜಿನೀವತಿ ।**

(ಋ. ಸಂ. ೧-೯೨-೧೩)

**ಪಾವಕಾನಸ್ಸರಸ್ವತೀ ವಾಜೇಭಿರ್ವಾಜಿನೀವತಿ । ಯಜ್ಞಂ ವಷ್ಟು ಧಿಯಾವಸುಃ ॥**

(ಋ. ಸಂ. ೧-೩-೧೦)

ಎಂಬಲ್ಲಿ ವಾಜ ಶಬ್ದಕ್ಕೆ ಅನ್ನವೆಂದೂ ವಾಜಿನೀವತೀ ಎಂಬ ಶಬ್ದಕ್ಕೆ ಅನ್ನವತೀ ಎಂದು ಅರ್ಥವನ್ನು ವಿವರಿಸಿರುವರು.

ಅಶ್ವಿನೀದೇವತೆಗಳ ರಥಕ್ಕೆ ಅಶ್ವಗಳು ಇಲ್ಲದಿದ್ದಾಗ್ಯೂ ತನ್ನ ಶಕ್ತಿಯಿಂದ ಬಹಳ ವೇಗವಾಗಿ ಸಂಚರಿಸ ಬಲ್ಲದ್ದೂ ಅನ್ನ ಮತ್ತು ಬಲ ಇವುಗಳನ್ನು ಕೊಡುವ ಸಾಮರ್ಥ್ಯವುಳ್ಳದ್ದೂ ಆಗಿರುವ ಕಾರಣ ಅವರ ರಥವನ್ನೂ ಮಂತ್ರದ್ರಷ್ಟವಾದ ಋಷಿಯು ಸ್ತೋತ್ರಮಾಡಿ ಅವರ ಅನುಗ್ರಹವನ್ನು ಪ್ರಾರ್ಥಿಸುವೆನೆಂದು ಇಲ್ಲಿ ವರ್ಣಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಸನಮ್**—ವನ **ಷಣ** ಸಂಭಕ್ತೌ ಧಾತು. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದ ರಿಂದ ಧಾತ್ವಾದಿಗೆ ಸತ್ವ. ಲಙ್ ಉತ್ತಮಪುರುಷ ಏಕವಚನದಲ್ಲಿ **ಅಮಾ**ದೇಶ. ಶಪ್ ವಿಕರಣ. ಪರರೂಪ. ಅಂಗಕ್ಕೆ ಅಡಾಗಮ **ಅತಿ**ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅನಶ್ವಮ್**—ನ ವಿದ್ಯತೇ ಅಶ್ವಃ ಯಸ್ಯ ಸಃ ಅನಶ್ವಃ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವಾಜಿನೀವತೋಃ**—ವಾಜನೀ ಬಲಕ್ರಿಯಾ ಅನಯೋಃ ಅಸ್ತಿ ಇತಿ ವಾಜಿನೀವಂತೌ ತಯೋಃ **ತದಸ್ಯಾಸ್ತ್ಯಸ್ಮಿ**—ಸೂತ್ರದಿಂದ ಮತುಪ್ ಪ್ರತ್ಯಯ **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಚಾಕನ**—ಕನ ದೀಪ್ತಿಕಾಂತಿಗತಿಷು ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಿಟ್. ಉತ್ತಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಸೂತ್ರದಿಂದ ಮಿಪಿಗೆ ಣಲಾದೇಶ. ತನ್ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ಶೇಷ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಕುಹೋಶ್ಚುಃ** ಎಂಬುದರಿಂದ ಚುತ್ವ. **ಣಮುತ್ತಮೋವಾ** (ಪಾ. ಸೂ. ೭-೧-೯೧) ಎಂಬುದರಿಂದ ಪ್ರತ್ಯಯಕ್ಕೆ ಣಿತ್ವ. ವಿಕಲ್ಪ ವಾಗಿ ಹೇಳಿರುವುದರಿಂದ ಧಾತುವಿನ ಉಪಧೆಗೆ ಅದನ್ನು ನಿಮಿತ್ತೀಕರಿಸಿ **ಅತ ಉಪಧಾಯಾಃ** (ಪಾ. ಸೂ. ೭ ೨-೧೧೬) ಎಂಬುದರಿಂದ ವೃದ್ಧಿ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ಅಯಂ ಸಮಹ ಮಾ ತನೂಹ್ಯಾತೇ ಜನಾ ಅನು ।
ಸೋಮಪೇಯಂ ಸುಖೋ ರಥಃ ॥ ೧೧ ॥

॥ ಪದಪಾಠಃ ॥

ಅಯಂ । ಸಮಹ । ಮಾ । ತನು । ಊಹ್ಯಾತೇ । ಜನಾನ್ । ಅನು ।
ಸೋಮಽಪೇಯಂ । ಸುಽಖಃ । ರಥಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಸಮಹ ಧನೇನ ಸಹಿತ ಹೇ ರಥ ಅಯಂ ಪುರೋವರ್ತೀ ತ್ವಂ ಮಾ ಮಾಂ ತನು । ವಿಸ್ತಾರಯ । ಪುತ್ರಪೌತ್ರಧನಾದಿಭಿಃ ಸಮೃದ್ಧಂ ಕುರು । ಯದ್ವಾ । ಅಯಮಯಮಾನಂ ತ್ವಾಂ ಪ್ರಾಪ್ನುವಂತಂ ಮಾಮಿತಿ ಯೋಜ್ಯಂ । ಸ ಚ ಸುಖಃ ಶೋಭನಾವಕಾಶಃ ಸುಖಹೇತುರ್ವಾ ರಥೋ ಜನಾನನು ಸ್ತೋತೃಜನೇಷು ಸೋಮಪೇಯಂ ಸೋಮಪಾನಂ ಪ್ರತ್ಯೂಹ್ಯಾತೇ । ಉಹ್ಯತೇ । ಅಶ್ವಿಭ್ಯಾಂ ನೀಯತೇ । ಅತೋಽಶ್ವಿಭ್ಯಾಂ ಯದ್ದೀಯತೇ ತತ್ಸರ್ವಂ ರಥ ಏವ ದದಾದ್ವಿತಿ ರಥಂ ಸಂಬೋಧ್ಯ ಪ್ರಾರ್ಥನಾ ॥ ಅಯಂ । ಇದೋಽಯ್ ಪುಂಸಿ । ಪಾ. ೭-೨-೧೧೧ । ಯದ್ವಾ । ಅಯ ಪಯ ಗತೌ । ಪಚಾದ್ಯಚ್ । ಸಮಹ । ಮಘಮಿತಿ ಧನನಾಮ । ಮಘೇನ ಸಹ ವರ್ತತೆ ಇತಿ ಸಮಘಃ । ಛಾಂದಸೋ ವರ್ಣವಿಕಾರಃ । ಯದ್ವಾ । ಮಹ ಪೂಜಾಯಾಂ । ಮಹಯತಿ ಪೂಜಯತೀತಿ ಮಹೋ ಧನಂ । ಪಚಾದ್ಯಚ್ । ಊಹ್ಯಾತೇ । ವಹ ಪ್ರಾಪಣೇ । ಕರ್ಮಣಿ ಲೇಟ್ಯಾಡಾಗಮಃ । ಯಜಾದಿತ್ವಾತ್ಸಂಪ್ರಸಾರಣಂ । ತಸ್ಯ ಛಾಂದಸೋ ದೀರ್ಘಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಯಕ ಏವ ಸ್ವರಃಶಿಷ್ಯತೇ । ಸೋಮಪೇಯಂ । ಪಾ ಪಾನೇ । ಅಚೋ ಯದಿತಿ ಭಾವೇ ಯತ್ । ಈದ್ಯತೀತಿ ಈಕಾರಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**(ಹೇ) ಸಮಹ**—ಎಲೈ ಧನಯುಕ್ತವಾದ ರಥವೇ । **ಅಯಂ**—(ನಿನ್ನನ್ನುದ್ದೇಶಿಸಿ ಬರುತ್ತಿರುವ) ಮುಂದೆ ಇರುವ ನೀನು । **ಮಾ**—ನನ್ನನ್ನು । **ತನು**—(ಪುತ್ರಾದಿಗಳಿಂದ) ವಿಸ್ತೃತನನ್ನಾಗಿ (ಸಮೃದ್ಧನನ್ನಾಗಿ) ಮಾಡು ; **ಸುಖಃ**—ಸುಖಕರವಾದ । **ರಥಃ**—ರಥವು । **ಜನಾನ್ ಅನು**—ಸ್ತೋತೃಜನಗಳ ಸಮೀಪಕ್ಕೆ । **ಸೋಮಪೇಯಂ**—ಸೋಮಪಾನಕ್ಕಾಗಿ । **ಊಹ್ಯಾತೇ**—(ಅಶ್ವಿನೀದೇವತೆಗಳಿಂದ) ತರಲ್ಪಡುತ್ತದೆ.

॥ ಭಾವಾರ್ಥ ॥

ಎಲೈ ಧನಯುಕ್ತವಾದ ರಥವೇ, ನಿನ್ನನ್ನುದ್ದೇಶಿಸಿ ಬರುವ ನನ್ನನ್ನು ಪುತ್ರ ಮತ್ತು ಧನಾದಿಯುಕ್ತನನ್ನಾಗಿ ಮಾಡು; ಸುಖಾವಹವಾದ ಆ ರಥವು ಸ್ತೋತೃಸಮಿಾಪಕ್ಕೆ ಸೋಮಪಾನಕ್ಕಾಗಿ (ಅಶ್ವಿನೀದೇವತೆಗಳಿಂದ) ತರಲ್ಪಡುತ್ತದೆ. (ಆದುದರಿಂದ ಅಶ್ವಿನೀದೇವತೆಗಳಿಂದ ದತ್ತವಾದುದೆಲ್ಲವೂ ರಥದಿಂದಲೇ ದತ್ತವೆಂಬ ಭಾವನೆ. ಆದುದರಿಂದಲೇ ರಥವನ್ನುದ್ದೇಶಿಸಿ ಪ್ರಾರ್ಥನೆ).

## English Translation.

This (is he who has obtained you), wealthbearing (car): augment (my prosperity); may the delightful car bear the Soma beverage of men (to the Aswins).

॥ ವಿಶೇಷವಿಷಯಗಳು ॥

ಮಂತ್ರದ್ರಷ್ಟೃವಾದ ಋಷಿಯು ಸೋಮಪಾನಕ್ಕಾಗಿ ಯಜ್ಞಗಳಿಗೆ ಬರುವ ಅಶ್ವಿನೀದೇವತೆಗಳ ರಥವು ಅವರ ಸಾನ್ನಿಧ್ಯವನ್ನು ಬಹಳವಾಗಿ ಹೊಂದಿ ಪ್ರಭಾವಶಾಲಿಯಾಗಿರುವಕಾರಣ ರಥವನ್ನೇ ಸ್ತುತಿಸಿ ತನ್ನ ಇಷ್ಟಾರ್ಥಗಳನ್ನು ಹೊಂದಲು ಪ್ರಾರ್ಥಿಸಿರುವುದು ಇಲ್ಲಿ ವರ್ಣಿಸಿದೆ.

**ಸಮುಹ—ಮಹಯತಿ ಪೂಜಯತೀತಿ ಮಹೋ ಧನಂ । ಮಘಮಿತಿ ಧನನಾಮ ಮಘೇನ ಸಹ ವರ್ತತೆ ಇತಿ ಸಮುಘಃ ಛಾಂದಸೋ ವರ್ಣವಿಕಾರಃ ।**

ಮಘ ಶಬ್ದವು ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೨-೧೦) ಉಕ್ತವಾಗಿರುವ ಕಾರಣ ಧನವೆಂದು ಅರ್ಥ. ಮಘ ಮತ್ತು ಮಹ ಎಂಬ ಶಬ್ದಗಳಿಗೆ ವೈದಿಕಪ್ರಯೋಗದಿಂದ ಅರ್ಥವು ಒಂದೇ ಆಗಿ ಹಕಾರವು ಮಾತ್ರ ಘಕಾರಕ್ಕೆ ಬದಲಾಗಿ ಬಂದಿರುವುದೆಂದು ಉಕ್ತವಾಗಿದೆ. ಮತ್ತು ಪೂಜಾರ್ಥಕವಾದ ಮಹ ಧಾತುವಿನಿಂದ ನಿಷ್ಪನ್ನವಾದ ಮಹ ಶಬ್ದಕ್ಕೆ ಪೂಜ್ಯವಾದದ್ದು ಎಂಬ ಅರ್ಥವು ಉಂಟಾಗುವ ಕಾರಣ ಧನವೆಂದು ಅರ್ಥವಾಗುವುದು. ಈ ವ್ಯುತ್ಪತ್ತಿಯಿಂದ ಸಮುಹ ಶಬ್ದಕ್ಕೆ ಧನದಿಂದ ಕೂಡಿರುವುದು ಎಂದು ಅರ್ಥವನ್ನು ಸಾಯಣರು ಹೇಳಿರುವರು. ಸ್ಕಂದಸ್ವಾಮಿಗಳು.

**ಹೇ ಸಮುಹ—ಮಹಃ ಉತ್ಸವಃ ಪೂಜಾ ವಾ ಸಹಿತೋ ಮಹೇನ ಸಮುಹಃ ನಿತ್ಯೋತ್ಸವಯುಕ್ತೌ ಪೂಜ್ಯೌವಾ । ವ್ಯತ್ಯಯೇನ ಚಾತ್ರ ಏಕವಚನಂ । ಸಮುಹೌ ಪೂಜ್ಯೌ ಚೇತ್ಯರ್ಥಃ ॥**

ಮಹ ಶಬ್ದವು ಉತ್ಸವ ಅಥವಾ ಪೂಜಾವಾಚಿಯಾಗಿರುವುದು, ಉತ್ಸವ ಅಥವಾ ಪೂಜಾದಿಗಳಿಂದ ಯಾವಾಗಲೂ ಪ್ರಕಾಶಿಸುತ್ತಿರುವುದು ಸಮುಹವಾಗಿರುವುದು. ಈ ಶಬ್ದವು ಅಶ್ವಿನೀದೇವತೆಗಳಿಗೆ ವಿಶೇಷಣವಾಗಿರುವುದರಿಂದ ದ್ವಿವಚನವಾಗಿ ಇರಬೇಕು. ವೇದದ ಪ್ರಯೋಗವಾಗಿರುವ ಕಾರಣ ಅದಕ್ಕೆ ಬದಲಾಗಿ ಏಕವಚನವು ಬಂದಿರುತ್ತದೆಯಾಗಿ ಸಮುಹೌ ಎಂಬುವದಕ್ಕೆ ಬದಲಾಗಿ ಸಮುಹ ಎಂದು ಅಶ್ವಿನೀದೇವತೆಗಳನ್ನು ಸಂಬೋಧನೆ ಮಾಡಿರುವ ಅರ್ಥವನ್ನು ವಿವರಿಸಿರುತ್ತಾರೆ.

**ಊಹ್ಯಾತೇ— ಉಹ್ಯತೇ ಅಶ್ವಿಭ್ಯಾಂ ನೀಯತೇ ।** ಅಶ್ವಿನೀದೇವತೆಗಳಿಂದ ವಹಿಸಲ್ಪಡುತ್ತದೆ. ಸ್ತೋತ್ರ ಮಾಡುವ ಜನಗಳು ಸೋಮಪಾನಕ್ಕಾಗಿ ಯಜ್ಞಗಳಲ್ಲಿ ಅಶ್ವಿನೀದೇವತೆಗಳನ್ನು ಆಹ್ವಾನಮಾಡುವುದರಿಂದಲೂ ಅವರು ರಥವನ್ನು ಏರಿ ಬರುವುದರಿಂದಲೂ ಅಥವಾ ಶತ್ರುಗಳ ನಿಗ್ರಹಕ್ಕಾಗಿಯೂ ಸ್ತೋತೃಗಳ ಅನುಗ್ರಹಕ್ಕಾಗಿಯೂ ರಥವು ಅಶ್ವಿನೀದೇವತೆಗಳಿಂದ ವಹಿಸಲ್ಪಡುವುದೆಂದು ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅಯಮ್**— ಇದಮ್ ಶಬ್ದ. ಸು ಪರವಾದಾಗ **ಇದೋಽಯ್ ಪುಂಸಿ** (ಪಾ. ಸೂ ೭-೨-೧೧೧) ಎಂಬ ದ ರಿಂದ ಇದಿಗೆ ಇಯಾದೇಶ. **ಹಲ್‌ಙ್ಯಾಭ್ಯೋ**— ಸೂತ್ರದಿಂದ ಸುವಿಗೆ ಲೋಪ. ಅಥವಾ ಅಯ ಪಯ ಗತೌ ಧಾತು. **ನಂದಿಗ್ರಹ ಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಎಂಬುದರಿಂದ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ.

**ಸಮಹ**— ಮಘಂ ಎಂಬುದು ಧನದ ಹೆಸರು. ಮಘೇನ ಸಹ ವರ್ತತ ಇತಿ ಸಮಘಃ. ಛಾಂದಸವಾಗಿ ವರ್ಣವಿಕಾರ (ಘಕಾರಕ್ಕೆ ಹಕಾರಾದೇಶ) ಬಂದಿದೆ. ಅಥವಾ ಮಹ ಪೂಜಾಯಾಂ ಧಾತು. ಮಹಯತಿ ಪೂಜಯತಿ ಇತಿ ಮಹಃ ಧನಂ. (ಪೂಜೆಗೆ ಕಾರಣವಾದುದು) ಹಿಂದಿನಂತೆ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಮಹೇನ ಸಹ ವರ್ತತೇ ಇತಿ ಸಮಹಃ ಸಂಬುದ್ಧಿಯಲ್ಲಿ ಆಮಂತ್ರಿತಸಂಜ್ಞೆ ಬರುವುದರಿಂದ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ;

**ತನು**— ತನು ವಿಸ್ತಾರೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಊಹ್ಯಾತೇ**— ವಹ ಪ್ರಾಪಣೇ. ಧಾತು. ಕರ್ಮಣಿಯಲ್ಲಿ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಟಿತ ಆತ್ಮನೇ**— ಸೂತ್ರದಿಂದ ಟಿಗೆ ಏತ್ವ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಯಜಾದಿಯಲ್ಲಿ ಸೇರಿರುವುದರಿಂದ ಯಕ್ ಕಿತ್ತಾದ ಪ್ರತ್ಯಯವು ಇದಕ್ಕೆ ಪರವಾದುದರಿಂದ **ವಚಿ ಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. ಛಾಂದಸವಾಗಿ ಅದಕ್ಕೆ ದೀರ್ಘ ಬರುತ್ತದೆ. ಆದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇ**— (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಯಕ್ ಸ್ವರ ಉಳಿಯುತ್ತದೆ.

**ಸೋಮಪೇಯಮ್**— ಪಾ ಪಾನೇ. ಧಾತು. **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ಇದು ಪರವಾದಾಗ **ಈದ್ಯತಿ** (ಪಾ. ಸೂ. ೬-೪-೬೫) ಎಂಬುದರಿಂದ ಧಾತುವಿನ ಆಕಾರಕ್ಕೆ ಈತ್ವ. ಯತ್ತನ್ನು ನಿಮಿತ್ತೀಕರಿಸಿ ಗುಣ. ಪೇಯ ಎಂದು ರೂಪವಾಗುತ್ತದೆ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಖಃ**— ಶೋಭನಂ ಖಂ (ಅವಕಾಶ) ಯಸ್ಯ ಸಃ ಸುಖಃ. **ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರ ಪದಾಂತೋದಾತ್ತಸ್ವರ ಬರುತ್ತದೆ. ॥ ೧೧ ॥

॥ ಸಂಹಿತಾಪಾಠಃ ॥

ಅಧ ಸ್ವಪ್ನಸ್ಯ ನಿರ್ವಿದೇಽಭುಂಜತಶ್ಚ ರೇವತಃ ।

ಉಭಾ ತಾ ಬಸ್ರಿ ನಶ್ಯತಃ ॥ ೧೭ ॥

॥ ಪದಪಾಠಃ ॥

ಅಧ । ಸ್ವಪ್ನಸ್ಯ । ನಿಃ । ವಿದೇ । ಅಭುಂಜತಃ । ಚ । ರೇವತಃ ।

ಉಭಾ । ತಾ । ಬಸ್ರಿ । ನಶ್ಯತಃ । ೧೭ ॥

॥ ಸಾಯಣಭಾಷ್ಯಂ ॥

**ಅಥೇದಾನೀಂ ಪ್ರಭಾತಸಮಯೇ ಸ್ವಪ್ನಸ್ಯ ಸ್ವಪ್ನಂ ಪ್ರತಿ ನಿರ್ವಿದೇ । ನಿರ್ವಿಣ್ಣೋಽಸ್ಮಿ । ತಥಾ ಭುಂಜತಃ ಪರಾನರಕ್ಷತೋ ಧನವತಶ್ಚ ಪುರುಷಸ್ಯ ಏವಂಭೂತಂ ಪುರುಷಂ ಪ್ರತ್ಯಪಿ ನಿರ್ವಿಣ್ಣೋಽಸ್ಮಿ । ಯತಸ್ತಾವುಭೌ ಬಸ್ರಿ ಕ್ಷಿಪ್ರಂ ನಶ್ಯತಃ ನಾಶಂ ಪ್ರಾಪ್ನುತಃ । ಸ್ವಪ್ನದೃಷ್ಟಃ ಪದಾರ್ಥಃ ಪ್ರಾತರ್ನೋಪಲಭ್ಯತೇ ಕದರ್ಯಸ್ಯೇವ ಧನಮಭುಕ್ತಮದತ್ತಂ ಸತ್ ಕ್ಷಿಪ್ರಮೇವ ನಶ್ಯತಿ । ತದುಭಯವಿಷಯೋ ನಿರ್ವೇದೋ ಮಾಂ ಬಾಧತ ಇತ್ಯರ್ಥಃ । ಅತ್ರ ಸ್ವಪ್ನಮಾತ್ರಸ್ಯಾಸತ್ತ್ವಪ್ರತಿಪಾದನೇನ ದುಃಸ್ವಪ್ನಸ್ಯಾಪ್ಯಸದ್ಭಾವಃ ಪ್ರತಿಪಾದಿತಃ । ಅತ ಏಷಾ ದುಃಸ್ವಪ್ನನಾಶನೀತಿ ಯುಜ್ಯತೇ ॥ ಸ್ವಪ್ನಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ವಿದೇ । ವಿದ್ಲೃ ಲಾಭೇ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ರೇವತಃ । ರಯಿಶಬ್ದಾನ್ಮತುಪ್ । ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ । ಛಂದಸೀರ ಇತಿ ಮತುಪೋ ವತ್ವಂ । ರೇಶಬ್ದಾಚ್ಚ ಮತುಪ ಉದಾತ್ತತ್ವಮಿತಿ ತಸ್ಯೋದಾತ್ತತ್ವಂ । ಉಭಾ ತಾ ಉಭಯತ್ರ ಸುಪಾಂ ಸುಪಾಂ ಸುಲುಗಿತ್ಯಾಕಾರಃ ॥**

॥ ಪ್ರತಿಪದಾರ್ಥ ॥

ಅಧ—ಈಗ (ಪ್ರಭಾತ ಸಮಯದಲ್ಲಿ) । **ಸ್ವಪ್ನಸ್ಯ**—ಸ್ವಪ್ನ ವಿಷಯದಲ್ಲಿ । **ನಿರ್ವಿದೇ**—ನಿರ್ವಿಣ್ಣನಾಗಿದ್ದೇನೆ । (**ತಥಾ**—ಹಾಗೆಯೇ) । **ಅಭುಂಜತಃ**—ಇತರರಿಗೆ ಉಪಕಾರಮಾಡದ । **ರೇವತಃ ಚ**—ಧನಿಕನ (ವಿಷಯದಲ್ಲಿ) । **ನಿರ್ವಿದೇ**—(ನಿರ್ವಿಣ್ಣನಾಗಿದ್ದೇನೆ) । **ತಾ ಉಭಾ**—(ಸ್ವಪ್ನ ಮತ್ತು ಸ್ವಾರ್ಥಿಯಾದ ಧನಿಕ ಎಂಬಿಬ್ಬರೂ । ಬಸ್ರಿ—ಬೇಗನೆ । **ನಶ್ಯತಃ**—ನಾಶಹೊಂದುತ್ತಾರೆ.

॥ ಭಾವಾರ್ಥ ॥

ಈಗ ಸ್ವಪ್ನವೂ ಮತ್ತು ಸ್ವಾರ್ಥಿಯಾದ ಧನಿಕನ ಧನವೂ ಕ್ಷಿಪ್ರವಾಗಿ ನಷ್ಟವಾಗುವವು ಆವೆರಡರ ವಿಷಯದಲ್ಲಿಯೂ ನಿರ್ವಿಣ್ಣನಾಗಿದ್ದೇನೆ.

## English Translation.

Now am I disdainful of sleep, and of the rich man who benefits not others, for both (the morinng sleep and the selfish rich man) quickly perish.

॥ ವಿಶೇಷವಿಷಯಗಳು ॥

ಈಗ (ಪ್ರಭಾತ ಸಮಯದಲ್ಲಿ) ಸ್ವಪ್ನವಿಷಯದಲ್ಲಿ ನಿರ್ವಿಣ್ಣನಾಗಿದ್ದೇನೆ ; ಹಾಗೆಯೇ ಪರೋಪಕಾರಿಯಲ್ಲದ ಧನಿಕನ ವಿಷಯದಲ್ಲಿಯೂ ನಿರ್ವಿಣ್ಣನಾಗಿದ್ದೇನೆ, ದುಸ್ಸ್ವಪ್ನ ಮತ್ತು ಸ್ವಾರ್ಥಿಯಾದ ಧನಿಕ ಇವರಿಬ್ಬರೂ ಬೇಗ ನಾಶ ಹೊಂದಲಿ ಎಂದು ಮುಖ್ಯಾಭಿಪ್ರಾಯ.

ಮಂತ್ರದ್ರಷ್ಟೃವಿನ ನಿರ್ವೇದಭಾವವು ಇಲ್ಲಿ ವರ್ಣಿತವಾಗಿರುವುದು. ನೀಚನಾದ ಮನುಷ್ಯನು ಧನವನ್ನು ಸಂಪಾದಿಸಿ ತಾನೂ ಸುಖವನ್ನು ಅನುಭವಿಸದೆ, ಇತರರನ್ನೂ ರಕ್ಷಿಸದೆ ಇರುವನು. ಇದರಂತೆ, ದುಸ್ಸ್ವಪ್ನವೂ ಕೂಡ ದರ್ಶನಮಾತ್ರದಿಂದ ಯೋಚನೆಗೆ ಆಸ್ಪದವಾಗಿರುತ್ತದೆ. ಧನವು ನೀಚಸಂಪಾದಿತವಾಗಿ ಭೋಗದಾನಗಳಿಲ್ಲದೆ ನಾಶವಾಗುವಂತೆ ದುಸ್ಸ್ವಪ್ನವೂ ಆ ಕಾಲದಲ್ಲಿ ಮಾತ್ರ ತೋರುವುದಾಗಿ (ಅನಂತರ) ಆ ಕ್ಷಣದಲ್ಲಿಯೇ ಕಾಣಿಸದಿರುವುದು. ಸ್ವಪ್ನವೆಂಬುವುದೇ ಅಸತ್ಪದಾರ್ಥವಾಗಿರುವಾಗ ಅದರಲ್ಲಿಯೂ ದುಸ್ವಪ್ನವೆಂಬುವುದು ಅಸತ್ಪದಾರ್ಥವು ಎಂದು ಧನದ ನಿದರ್ಶನದಿಂದ ಇಲ್ಲಿ ಉಕ್ತವಾಗಿರುತ್ತದೆ. ಮತ್ತು ಈ ಋಕ್ಕನ್ನು ಪಠನಮಾತ್ರದಿಂದ ದುಸ್ಸ್ವಪ್ನ ನಾಶವಾಗುವುದೆಂದು ಪರಿಗಣಿಸಿರುವರು ಎಂದು ಸಾಯಣರು ವ್ಯಾಖ್ಯಾನ ಮಾಡಿರುತ್ತಾರೆ. ಸ್ಕಂದಸ್ವಾಮಿಗಳು.

**ಉತ್ತಮಾ ಸ್ವಪ್ನನಾಶಿನೀ । ಪಂಚಾನಾಮಾಶ್ವಿನಾನಾಂ ಸೂಕ್ತಾನಾಂ ಉತ್ತಮಾ ಯಾ ಋಕ್ ಏಷಾ ಸ್ವಪ್ನನಾಶನಾರ್ಥಾ । ಸ್ವಪ್ನಶಬ್ದೇನಾತ್ರ ಯಃ ಶಯಿತುಃ ದುಃಸ್ವಪ್ನ ಇಷ್ಯತೇ ಸ ಉಚ್ಯತೇ ನ ಸ್ವಪ್ನಮಾತ್ರಂ । ದ್ವಿತೀಯಾರ್ಥೇ ಷಷ್ಠೀ । ದುಸ್ಸ್ವಪ್ನಂ ನಿರ್ವಿದೇ । ವಿದ ಸತ್ತಾಯಾಂ ಇತ್ಯಸ್ಯ ರೂಪಂ ನಿರ್ವೇದಯಾಮಿ ನಿಸ್ಸತ್ತಾಂ ಕರೋಮಿ ನಾಶಯಾಮೀತ್ಯರ್ಥಃ॥**

ಅಶ್ವಿನೀದೇವತೆಗಳ ಪ್ರಭಾವ (ಮಹಿಮೆಯನ್ನು) ವನ್ನು ಹೇಳುವ ಈ ಐದು ಸೂಕ್ತಗಳಲ್ಲಿ ಈ ಮಂತ್ರವು ದುಸ್ಸ್ವಪ್ನವನ್ನು ನಾಶಮಾಡುವ ಶಕ್ತಿಯುಳ್ಳದ್ದಾಗಿರುವುದರಿಂದ ದುಃಸ್ವಪ್ನನಾಶಿನೀ ಎಂದು ಪ್ರಸಿದ್ಧವಾಗಿ ಇರುತ್ತದೆ. ನಿದ್ದೆ ಮಾಡುವವನಿಗೆ ಆಗುವ ಸ್ವಪ್ನಗಳೆಲ್ಲವನ್ನೂ ಇದು ನಾಶಮಾಡುವುದಿಲ್ಲ. ಆದರೆ ದುಸ್ಸ್ವಪ್ನವನ್ನು ಮಾತ್ರವೇ ನಾಶಮಾಡುತ್ತದೆ. ದುಸ್ಸ್ವಪ್ನವೆಂಬುವುದು ಸತ್ತೆಯನ್ನು (ಸ್ಥಿತಿಯನ್ನು) ಹೊಂದಿರುವ ವಸ್ತುಗಳ ಹಾಗೆ ಸತ್ತೆಯನ್ನು ಹೊಂದಿರುವುದಿಲ್ಲವೆಂದೂ ಇದರಿಂದಲೇ ಇದು ನಾಶವಾಗುವುವೆಂದೂ ವರ್ಣಿಸಿರುವರು. ಮತ್ತು ಈ ವಿಷಯದಲ್ಲಿ ಈ ಮಂತ್ರದಲ್ಲಿಯೇ ಉಕ್ತವಾಗಿರುವ ದೃಷ್ಟಾಂತವಾಕ್ಯದ ಅರ್ಥವನ್ನು ವಿವರಿಸಿರುವರು.



# ನೂರ ಇಪ್ಪತ್ತೊಂದನೆಯ ಸೂಕ್ತವು

**ಅಷ್ಟಾದಶೇಽನುವಾಕೇ ಷಟ್ ಸೂಕ್ತಾನಿ । ತತ್ರ ಕದಿತ್ಥೇತಿ ಪಂಚದಶರ್ಚಂ ಪ್ರಥಮಂ ಸೂಕ್ತಂ। ಅತ್ರಾನುಕ್ರಮ್ಯತೇ । ಕದಿತ್ಥಾ ಪಂಚೋನಾ ವೈಶ್ವದೇವಂ ವೇತಿ । ಅನುವರ್ತಮಾನಃ ಕಕ್ಷೀವಾನೃಷಿಃ । ಅನಾದೇಶಪರಿಭಾಷಯಾ ತ್ರಿಷ್ಟುಪ್ । ವಿಶ್ವೇ ದೇವಾ ಇಂದ್ರೋ ವಾ ದೇವತಾ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಕದಿತ್ಥಾ** ಎಂಬ ಈ ಸೂಕ್ತದಿಂದ ಪ್ರಥಮ ಮಂಡಲದ ಹದಿನೆಂಟನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಆರು (೧೨೧-೧೨೬) ಸೂಕ್ತಗಳಿರುವುವು. ಅವುಗಳಲ್ಲಿ **ಕದಿತ್ಥಾ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಕದಿತ್ಥಾ ಪಂಚೋನಾ ವೈಶ್ವದೇವಂ** ವಾ ಎಂದು ಹೇಳಿರುವುದು. ಹಿಂದಿನ ಸೂಕ್ತಗಳಂತೆಯೇ ಈ ಸೂಕ್ತಕ್ಕೂ ಕಕ್ಷೀವಾನ್ ಎಂಬುವನು ಋಷಿಯು. ತ್ರಿಷ್ಟುಪ್ ಛಂದಸ್ಸು. ವಿಶ್ವೇದೇವತೆಗಳು ಅಥವಾ ಇಂದ್ರನು ದೇವತೆಯು. ವಿನಿಯೋಗವು ಲೈಂಗಿಕವು.



॥ ಓಂ ॥

**ಸೂಕ್ತ—೧೨೧**

॥ ಮಂಡಲ—೧ ॥ ಅನುವಾಕ—೧೮ ॥ ಸೂಕ್ತ—೧೨೧ ॥

॥ ಅಷ್ಟಕ—೧ ॥ ಅಧ್ಯಾಯ—೮ ॥ ವರ್ಗ—೨೪, ೨೫, ೨೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೧೫ ॥

॥ ಋಷಿಃ—ಕಕ್ಷೀವಾನ್ ದೈರ್ಘತಮಸ ಔಶಿಜಃ ॥

॥ ದೇವತಾ—ವಿಶ್ವೇದೇವಾಃ ಇಂದ್ರೋ ವಾ ॥

॥ ಛಂದಃ—ತ್ರಿಷ್ಟುಪ್

ಸಂಹಿತಾಪಾಠಃ

ಕದಿ॒ತ್ಥಾ ನೄಁಃ ಪಾತ್ರಂ᳚ ದೇವಯ॒ತಾಂ ಶ್ರವ॒ದ್ಗಿರೋ॒ ಅಂಗಿ॑ರಸಾಂ ತುರ॒ಣ್ಯನ್ ।

ಪ್ರ ಯದಾನಡ್ವಿಶ ಆ ಹರ್ಮ್ಯಸ್ಯೋರು ಕ್ರಂಸತೇ ಅಧ್ವರೇ ಯ-
ಜತ್ರಃ ॥ ೧ ॥

॥ ಪದಪಾಠಃ ॥

ಕತ್ । ಇತ್ಥಾ । ನೄನ್ । ಪಾತ್ರಂ । ದೇವಽಯತಾಂ । ಶ್ರವತ್ । ಗಿರಃ । ಅಂಗಿ-
ರಸಾಂ । ತುರಣ್ಯನ್ ।

ಪ್ರ । ಯತ್ । ಆನಟ್ । ವಿಶಃ । ಆ । ಹರ್ಮ್ಯಸ್ಯ । ಉರು । ಕ್ರಂಸತೇ । ಅಧ್ವ-
ರೇ । ಯಜತ್ರಃ ॥ ೧ ॥

ಸಾಯಣಭಾಷ್ಯಂ

ನೄಃ ಪಾತ್ರಂ ನೄನ್ಪಾತಾ ನೃಣಾಂ ಸ್ತೋತೄಣಾಂ ನೇತೄಣಾಂ ಪುರುಷಾಣಾಂ ರಕ್ಷಣಶೀಲ ಇಂದ್ರಸ್ತುರಣ್ಯನ್ ಗೋರೂಪಧನಂ ಪ್ರೇರಯನ್ ದೇವಯತಾಂ ದೇವಂ ದ್ಯೋತಮಾನಂ ದಾನಾದಿಗುಣಯುಕ್ತಂ ವೇಂದ್ರಮಾತ್ಮನ ಇಚ್ಛತಾಮಂಗಿರಸಾಮೃಷೀಣಾಮಸ್ಮಾಕಮಿತ್ಥೇತ್ಥಂ ಪ್ರಯುಜ್ಯಮಾನಾ ಗಿರಃ ಸ್ತುತೀಃ ಕತ್ ಕದಾ ಕಸ್ಮಿನ್ಕಾಲೇ ಶ್ರವತ್ । ಶೃಣುಯಾತ್ । ಯದ್ಯದಾ ಸ ಇಂದ್ರೋ ಹರ್ಮ್ಯಸ್ಯ ಹರ್ಮ್ಯೋಪಲಕ್ಷಿತೇನ ಗೃಹೇಣ ಯುಕ್ತಸ್ಯ ಯಜಮಾನಸ್ಯ ಸಂಬಂಧಿನೋ ವಿಶ ಋತ್ವಿಗ್ಲಕ್ಷಣಾನ್ಮನುಷ್ಯಾನಾ ಆಭಿಮುಖ್ಯೇನ ಪ್ರಾನಟ್ ಪ್ರಾಪ್ನೋತಿ ತದಾನೀಮಧ್ವರೇಽಸ್ಮದೀಯೇ ಯಜ್ಞೇ ಯಜತ್ರೋ ಯಷ್ಟವ್ಯಃ ಸನ್ನುರು ಬಹುಲಂ ಕ್ರಂಸತೇ । ಕ್ರಮತೇ । ಸ್ವಯಮೇವೋತ್ಸಹತ ಇತ್ಯರ್ಥಃ ॥ ಕತ್ । ಕದಾ । ಅಂತ್ಯಲೋಪಶ್ಛಾಂದಸಃ । ನೄಃ ಪಾತ್ರಂ । ನೄನ್ಪೇ । ಪಾ. ೮-೩-೧೦ । ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವೇತ್ಯೃಕಾರಃ ಸಾನುನಾಸಿಕಃ । ಪಾತ್ರಂ । ಪಾ ರಕ್ಷಣೇ । ತಾಚ್ಛೀಲಿಕಸ್ತೃನ್ । ವ್ಯತ್ಯಯೇನ ಸೋರಮಾದೇಶಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವೇ ಯಣ್ । ದೇವಯತಾಂ । ಸುಪ ಆತ್ಮನಃ ಕ್ಯಚ್ । ತತೋ ಲಟಃ ಶತೃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಶ್ರವತ್ । ಶ್ರು ಶ್ರವಣೇ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತುರಣ್ಯನ್ । ತುರಣ ತ್ವರಾಯಾಂ । ಕಂಡ್ವಾದಿಃ । ಆನಟ್ । ಅಶ್ನೋತೇರ್ಲಙಿ ವ್ಯತ್ಯಯೇನ ಪರಸ್ಮೈಪದಂ । ಶ್ನಾ ಪ್ರಾಪ್ತೇ ವ್ಯತ್ಯಯೇನ ಶ್ನಮ್ವಿಕರಣಃ । ವ್ರಶ್ಚಾದಿಷತ್ವೇ ಜಶ್ತ್ವಂ । ಆಡಾಗಮಃ । ಹರ್ಮ್ಯಸ್ಯ । ಹರ್ಮ್ಯಶಬ್ದಾದರ್ಶಆದಿತ್ವಾದಚ್ । ಕ್ರಂಸತೇ । ಕ್ರಮು ಪಾದವಿಕ್ಷೇಪೇ । ವೃತ್ತಿಸರ್ಗತಾಯನೇಷು ಕ್ರಮಃ । ಪಾ. ೧-೩-೩೮ । ಇತ್ಯಾತ್ಮನೇಪದಂ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಯಜತ್ರಃ । ಅಮಿನಕ್ಷೀತ್ಯಾದಿನಾ ಯಜೇರತ್ರನ್ಪ್ರತ್ಯಯಃ ॥

ಪ್ರತಿಪದಾರ್ಥ

**ನೄನ್**— ಮನುಷ್ಯರನ್ನು (ಮನುಷ್ಯರ ಸ್ತುತಿಗಳನ್ನು) | **ಪಾತ್ರಂ**-- ರಕ್ಷಿಸುವವನೂ | **ತುರಣ್ಯನ್**— ಗೋರೂಪಧನ ಪ್ರೇರಕನೂ (ಆದ ಇಂದ್ರನು) | **ದೇವಯತಾಂ**— ಪ್ರಕಾಶಯುಕ್ತನಾದ ಅಥವಾ ದಾನಾದಿ ಗುಣ ಯುಕ್ತನಾದ (ಇಂದ್ರನನ್ನು) ಇಚ್ಛಿಸುವ | **ಅಂಗಿರಸಾಂ**—ಅಂಗಿರಸ ಋಷಿಗಳಾದ (ನಮ್ಮ) | **ಇತ್ಥಾ**--ಈ ರೀತಿ (ಪ್ರಯುಕ್ತವಾದ) | ಗಿರಃ—ಸ್ತುತಿವಾಕ್ಯಗಳನ್ನು | **ಕತ್**—ಯಾವಾಗ | **ಶ್ರವತ್**—ಕೇಳಿಯಾನು ? **ಯತ್**— ಯಾವಾಗ (ಇಂದ್ರನು) | **ಹರ್ಮ್ಯಸ್ಯ**--ಗೃಹಯುಕ್ತನಾದ (ಯಜಮಾನ ಸಂಬಂಧಿಗಳಾದ) | ವಿಶಃ—ಋತ್ವಿಗ್ರೂಪರಾದ ಮನುಷ್ಯರನ್ನು | **ಆ**—ಅಭಿಮುಖವಾಗಿ | **ಪ್ರ ಆನಟ್**—ಪ್ರಾಪ್ತನಾಗುತ್ತಾನೋ (ಆಗ)| **ಅಧ್ವರೇ**— (ನಮ್ಮ) ಯಾಗದಲ್ಲಿ | **ಯಜತ್ರಃ**— ಪೂಜ್ಯನಾಗಿ | **ಉರು**— ಹೆಚ್ಚಾಗಿ | **ಕ್ರಂಸತೇ**— ಆಕ್ರಮಿಸುತ್ತಾನೆ (ಉತ್ಸಾಹಯುಕ್ತನಾಗುತ್ತಾನೆ) ||

ಭಾವಾರ್ಥ

ಮನೆಯ ಯಜಮಾನನ (ಸಂಬಂಧಿಗಳಾದ) ಋತ್ವಿಜರಿಗಭಿಮುಖವಾಗಿ ಯಾಗದಲ್ಲಿ ಪೂಜ್ಯನಾಗಿ ಬಂದಾಗ, ಇಂದ್ರನು ಬಹಳ ಉತ್ಸಾಹಶಾಲಿಯಾಗುತ್ತಾನೆ, (ಆದುದರಿಂದ) ಮನುಷ್ಯರಿಗೆ ರಕ್ಷಕನೂ, ಗವಾದಿಧನಪ್ರೇರಕನೂ (ದಾತೃವೂ) ಆದ ಇಂದ್ರನು ಆತನನ್ನು ಅಪೇಕ್ಷಿಸುವ ಅಂಗಿರಸರಾದ ನಮ್ಮ ಈರೀತಿ (ಮುಂದೆ ಬರುವ) ಪ್ರಯುಕ್ತವಾದ ಸ್ತುತಿವಾಕ್ಯಗಳನ್ನು ಯಾವಾಗ ಕೇಳುತ್ತಾನೆ ? (ಸ್ತುತಿವಾಕ್ಯಗಳನ್ನು ಕೇಳಲಿ).

English Translation

When will Indra, the protector of men and granter of riches, listen to the praises thus (recited.) of the Angirasas, who are devoted to the gods ? When he perceives the ministers of the master of the mansion, and is to be the object of worship in the sacrifice, the greatly exults.

ವಿಶೇಷವಿಷಯಗಳು

**ಕತ್—ಕದಾ |** ಯಾವಾಗ ಎಂದು ಅರ್ಥ.

**ಪಾತ್ರಂ-ಪಾ ರಕ್ಷಣೇ** ಎಂಬ ರಕ್ಷಣಾರ್ಥಕವಾದ ಪಾ ಧಾತುವಿನಿಂದ ನಿಷ್ಪನ್ನವಾದ ಪಾತ್ರಶಬ್ದಕ್ಕೆ ರಕ್ಷಣ ಮಾಡುವವನು ಎಂದು ಅರ್ಥ.

**ದೇವಯತಾಂ— ದೇವಂ ದ್ಯೋತಮಾನಂ ದಾನಾದಿಗುಣಯುಕ್ತಂ ವಾ ಇಂದ್ರಂ ಆತ್ಮನ ಇಚ್ಛತಾಂ |** ಪ್ರಕಾಶಿಸುತ್ತಿರುವ ಅಥವಾ ದಾನಮಾಡುವುದೇ ಮೊದಲಾದ ಗುಣಗಳಿಂದ ಕೂಡಿರುವ ಇಂದ್ರನನ್ನು ರಕ್ಷಣೆಗಾಗಿ ಅಪೇಕ್ಷಿಸುವವರ ಎಂದು ಅರ್ಥ.

ಸಾಯಣರು ಅಂಗಿರಾರುಷಿಗಳ ಗೋವುಗಳು ಅಪಹೃತವಾಗಿರುವಾಗ ಇಂದ್ರನನ್ನು ಅವರು ರಕ್ಷಣೆಗಾಗಿ ಆಹ್ವಾನಮಾಡಿದರೆಂದೂ ಅವನು ಅವರ ಸ್ತುತಿಯನ್ನು ಕೇಳಿ ಗೋವುಗಳನ್ನು ಅಪಹರಿಸಿದ ರಾಕ್ಷಸರನ್ನು ನಿಗ್ರಹಮಾಡಿ

ಅವರ ಗೋವುಗಳನ್ನು ಅವರಿಗೆ ತಂದುಕೊಟ್ಟನೆಂದೂ ಇತಿಹಾಸವು **ನೄಃ ಪಾತ್ರಂ ದೇವಯತಾಂ ಅಂಗಿರಸಾಂ ತುರಣ್ಯನ್** ರಕ್ಷಣೆಗಾಗಿ ದೇವತೆಯನ್ನು ಅಪೇಕ್ಷಿಸುವ ಅಂಗಿರಾರುಷಿಗಳ ಗೋರೂಪವಾದ ಧನವನ್ನು ಪ್ರೇರಿಸುವವನು ಎಂಬ ಪದಗಳಿಂದ ವ್ಯಕ್ತವಾಗುವುದೆಂದು ಸೂಚಿಸಿರುವರು. ಸ್ಕಂದಸ್ವಾಮಿಗಳು—

> ಕದ್ಧ ನೂನಂ ಕಧಪ್ರಿಯಃ ಪಿತಾ ಪುತ್ರಂ ನ ಹಸ್ತಯೋಃ ।
> (ಋ. ಸಂ. ೧-೩೮-೧)

ಎಂಬ ಋಕ್ಕಿನಲ್ಲಿ ಉಕ್ತವಾಗಿರುವಂತೆ ಕತ್ ಎಂಬ ಶಬ್ದವು ಕದಾ ಯಾವಾಗ ಎಂಬ ಅರ್ಥವನ್ನು ಬೋಧಿಸುವುದು. **ನೄನ್** ಎಂಬುದಕ್ಕೆ **ಮನುಷ್ಯಾಣಾಂ ಅಸ್ಮಾಕಂ** ಮನುಷ್ಯರಾದ ನಮಗೆ ಎಂದೂ, **ಪಾತ್ರಂ—ಗ್ರಹಚಮಸಾದಿ** ಯಜ್ಞದಲ್ಲಿ ಹವಿಸ್ಸನ್ನು ಹೋಮಮಾಡಲು ಸಾಧನವಾದ ಗ್ರಹ, ಚಮಸವೆಂಬ ಹೆಸರಿನಿಂದ ಪ್ರಸಿದ್ಧವಾದ ಪಾತ್ರೆಗಳೆಂದೂ, **ದೇವಯತಾಂ ದೇವಕಾಮಾನಾಂ ಅಂಗಿರಸಾಂ । ಪಿತೃಶಬ್ದಸ್ಯಾಯಂ ಸೋಽಯಮಿತ್ಯಭಿಸಂಬಂಧಾದಪತ್ಯೇ ಪ್ರಯೋಗಃ ಅಂಗಿರಸೋ ಅಪತ್ಯಭೂತಾನಾಂ** ಯಾಗದಲ್ಲಿ ಬಂದು ಹವಿಸ್ಸನ್ನು ಸ್ವೀಕರಿಸಲು ಉದ್ದೇಶಪಟ್ಟು ಆಹ್ವಾನಮಾಡುವ, ಅಂಗಿರಾಋಷಿಗಳ ವಂಶದಲ್ಲಿ ಉತ್ಪನ್ನರಾದ ಋಷಿಗಳ **ಗಿರಃ ಸ್ತುತಿಲಕ್ಷಣಾ ವಾಚಃ ಶ್ರವತ್** ಸ್ತುತಿರೂಪವಾದ ವಚನಗಳನ್ನು ಕೇಳುವನು ಮತ್ತು **ತುರಣ್ಯನ್** ತ್ವರೆಯುಳ್ಳವನಾಗಿ **ಪಿಬೇತ್** ಸೋಮರಸವನ್ನು ಪಾನಮಾಡುವನು. ಎಂದು ಅರ್ಥವನ್ನು ಹೇಳಿರುವರು. ಇದೇರೀತಿಯಾಗಿ ಇವರಿಬ್ಬರ ವ್ಯಾಖ್ಯಾನದಲ್ಲಿ ವ್ಯತ್ಯಾಸವು ಇರುತ್ತದೆ. (ಮತ್ತು)

**ಹರ್ಮ್ಯಸ್ಯ— ಹರತೇರಿದಂ ರೂಪಂ ಹರ್ತುಃ ಶತ್ರುಧನಾನಾಮಿಂದ್ರಸ್ಯ ಉರು ಕ್ರಂಸತೇ ಬಹು ಕರೋತಿ.** ಶತ್ರುಧನವನ್ನು ಅಪಹರಿಸುವ ಇಂದ್ರನನ್ನು ಯಜ್ಞಮಾಡುವ ಯಜಮಾನನು ಬಹಳವಿಧವಾಗಿ ಯಜ್ಞದಲ್ಲಿ ಆಹ್ವಾನಮಾಡಿ ಸ್ತುತಿಮಾಡುವನು ಎಂದೂ, ಅಥವಾ **ಹರ್ಮ್ಯಮಿತಿ ಗೃಹನಾಮ ಯಜ್ಞಗೃಹೇ ಯೋ ಅಧ್ವರಃ ತಸ್ಮಿನ್ ಬಹು ಕ್ರಾಮತೀಂದ್ರಃ** ಯಾಗಶಾಲೆಯಲ್ಲಿ ನಡೆಯುವ ಯಜ್ಞದಲ್ಲಿ ಇಂದ್ರನು ಅನೇಕಸಾರಿ ಬರುವನೆಂದು ಅರ್ಥವನ್ನು ಸ್ಕಂದಸ್ವಾಮಿಗಳು ವಿವರಿಸಿರುವರು. ಸಾಯಣರು **ಉರು ಕ್ರಂಸತೆ ಬಹುಲಂ ಕ್ರಮತೇ ಸ್ವಯಮೇವ ಉತ್ಸಹತೇ** ಇಂದ್ರನು ಯಾಗದ ವಿಷಯದಲ್ಲಿ ಯತ್ನವನಾಗಿ ಯಜ್ಞಶಾಲೆಗೆ ಬರಲು ಬಹಳ ಉತ್ಸಾಹವುಳ್ಳವನಾಗಿರುವನು ಎಂದು ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಕತ್—**ಕದಾ ಎಂದು ರೂಪವಾದಾಗ ಛಾಂದಸವಾಗಿ ಅಂತ್ಯ ಆಕಾರಕ್ಕೆ ಲೋಪ ಬರುತ್ತದೆ.

**ನೄಁಃ ಪಾತ್ರಮ್—**ನೄನ್+ಪಾತ್ರಂ ಎಂದಿರುವಾಗ **ನೄನ್ ಪೇ—**(ಪಾ.ಸೂ.೮-೩-೧೦) ಎಂಬುದರಿಂದ ಸಂಹಿತಾದಲ್ಲಿ ಪಕಾರಪರವಾಗಿರುವುದರಿಂದ ನಕಾರಕ್ಕೆ ರುತ್ವ ಬರುತ್ತದೆ. **ಅತ್ರಾನುನಾಸಿಕಃ ಪೂರ್ವಸ್ಯ ತು ವಾ** (ಪಾ. ಸೂ. ೮-೩-೨) ಎಂಬುದರಿಂದ ಪೂರ್ವದಲ್ಲಿರುವ ಋಕಾರವು ಅನುನಾಸಿಕವಾಗುತ್ತದೆ. **ಕುಪ್ವೋಃಕಃಪೌಚ—**ಎಂಬುದರಿಂದ ವಿಸರ್ಗ.

**ಪಾತ್ರೈಮ್**—ಪಾ ರಕ್ಷಣೇ. ಧಾತು. **ತಾಚ್ಛೀಲ್ಯವಯೋವಚನೇಷು**—ತಾಚ್ಛೀಲ್ಯಾರ್ಥದಲ್ಲಿ ತೃನ್ ಪ್ರತ್ಯಯ. ಪಾತೃ ಶಬ್ದವಾಗುತ್ತದೆ ವ್ಯತ್ಯಯದಿಂದ ಸುವಿಗೆ ಅಮಾದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ**—ಎಂಬ ಪರಿಭಾಷೆಯಿಂದ ಗುಣವು ಬಾರದಿರುವಾಗ ಯಣಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದೇವಯತಾಮ್**—ದೇವಂ ಆತ್ಮನಃ ಇಚ್ಛಂತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** ( ಪಾ. ಸೂ. ೩-೧-೮ ) ಎಂಬುದರಿಂದ ದೇವಶಬ್ದದ ಮೇಲೆ ಕ್ಯಚ್. ದೇವಯಂತಿ ಎಂದು ರೂಪವಾಗುತ್ತದೆ. **ನ ಛಂದಸ್ಯಪುತ್ರಸ್ಯ**—(ಪಾ. ಸೂ. ೭-೪-೩೫) ಎಂಬುದರಿಂದ ಈತ್ವಾದಿಗಳು ಬರುವುದಿಲ್ಲ. ದೇವಯ ಎಂಬ ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ ದೇವಯತ್ ಶಬ್ದವಾಗುತ್ತದೆ. ಷಷ್ಠೀ ಬಹುವಚನದಲ್ಲಿ ದೇವಯತಾಮ್ ಎಂದು ರೂಪವಾಗುತ್ತದೆ. ನುಮ್‌ರಹಿತವಾದ ಶತೃಪ್ರತ್ಯಯದ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩)ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಶ್ರವತ್**—ಶ್ರು ಶ್ರವಣೇ. ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತುರಣ್ಯನ್**—ತುರಣ ತ್ವರಾಯಾಂ ಧಾತು. ಕಂಡ್ವಾದಿ. **ಕಂಡ್ವಾದಿಭ್ಯೋಯಕ್**—(ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಪ್ರತ್ಯಯ. ಲಡರ್ಥದಲ್ಲಿ ಶತೃಪ್ರತ್ಯಯ. ಪ್ರಥಮಾಏಕವಚನಾಂತರೂಪ. ಯಕ್‌ಸ್ವರ ಉಳಿಯುತ್ತದೆ.

**ಆನಟ್** - ಅಶೂ ವ್ಯಾಪ್ತೌ. ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಙ್-ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ**—ಸೂತ್ರದಿಂದ ಅದರ ಇಕಾರಲೋಪ. ವ್ಯತ್ಯಯದಿಂದ ಶ್ನುವಿಕರಣಕ್ಕೆ ಬದಲಾಗಿ ಶ್ನಮ್‌ವಿಕರಣ ಬರುತ್ತದೆ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ **ಹಲ್‌ಙ್ಯಾಭ್ಯೋ**—ಸೂತ್ರದಿಂದ ತಿಪಿಗೆ ಲೋಪ. **ವ್ರಶ್ಚ ಭ್ರಸ್ಜ**—ಸೂತ್ರದಿಂದ ಧಾತುವಿನ ಶಕಾರಕ್ಕೆ ಷತ್ವ. **ಝಲಾಂ ಜಶೋಂತೇ**—ಎಂಬುದರಿಂದ ಷಕಾರಕ್ಕೆ ಜಶ್ತ್ವದಿಂದ ಡಕಾರಾದೇಶ. **ವಾವಸಾನೇ**—ಸೂತ್ರದಿಂದ ಅದಕ್ಕೆ ಟಕಾರಾದೇಶ. **ಆಡಜಾದೀನಾಮ್**—(ಪಾ. ಸೂ. ೬-೪-೭೨) ಎಂಬುದರಿಂದ ಅಂಗಕ್ಕೆ ಆಡಾಗಮ. ಆನಟ್ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಹರ್ಮ್ಯಸ್ಯ**—ಹರ್ಮ್ಯಂ ಅಸ್ಯ ಅಸ್ತಿ ಇತಿ ಹರ್ಮ್ಯಃ **ಅರ್ಶ ಆದಿಭ್ಯೋಽಚ್**—(ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ.

**ಕ್ರಂಸತೇ**--ಕ್ರಮು ಪಾದವಿಕ್ಷೇಪೇ. ಧಾತು. **ವೃತ್ತಿಸರ್ಗತಾಯನೇಷು ಕ್ರಮಃ**—(ಪಾ. ಸೂ. ೧-೩-೩೮) ಎಂಬುದರಿಂದ ಇಲ್ಲಿ ಉತ್ಸಾಹಾರ್ಥ ತೋರುವುದರಿಂದ ಆತ್ಮನೇಪದಿಯಾಗುತ್ತದೆ. ಲೇಟ್ ಪ್ರಥಮ ಪುರುಷಏಕವಚನದಲ್ಲಿ **ಲೇಟೋऽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ**—(ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ನಶ್ಚಾಪದಾಂತಸ್ಯಝಲಿ** ಎಂಬುದರಿಂದ ಮಕಾರಕ್ಕೆ ಅನುಸ್ವಾರ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜತ್ರಃ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಅಮಿನಕ್ಷಿ**—(ಉ. ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥



ಸಂಹಿತಾಪಾಠಃ

ಸ್ತಂಭೀದ್ಧ ದ್ಯಾಂ ಸ ಧರುಣಂ ಪ್ರುಷಾಯದೃಭುರ್ವಾಜಾಯ

ದ್ರವಿಣಂ ನರೋ ಗೋಃ ।

ಅನು ಸ್ವಜಾಂ ಮಹಿಷಶ್ಚಕ್ಷತ ವ್ರಾಂ ಮೇನಾಮಶ್ವಸ್ಯ ಪರಿ

ಮಾತರಂ ಗೋಃ ॥ ೨ ॥

ಪದಪಾಠಃ

ಸ್ತಂಭೀತ್ । ಹ । ದ್ಯಾಂ । ಸಃ । ಧರುಣಂ । ಪ್ರುಷಾಯತ್ । ಋಭುಃ । ವಾಜಾಯ । ದ್ರವಿಣಂ । ನರಃ । ಗೋಃ ।

ಅನು । ಸ್ವಜಾಂ । ಮಹಿಷಃ । ಚಕ್ಷತ । ವ್ರಾಂ । ಮೇನಾಂ । ಅಶ್ವಸ್ಯ । ಪರಿ । ಮಾತರಂ । ಗೋಃ ॥ ೨ ॥

|| ಸಾಯಣಭಾಷ್ಯಂ ||

ಸ ಇಂದ್ರೋ ದ್ಯಾಂ ದ್ಯುಲೋಕಂ ಸ್ತಂಭೀದ್ಧ | ಸ್ತಭ್ನಾತಿ ಖಲು | ತಥಾ ಗೋಃ ಪಣಿಭಿರಪಹೃತಸ್ಯ ಗೋಸಮೂಹಸ್ಯ ವಜ್ರಸ್ಯೋದಕಸ್ಯ ಕಿರಣಸಮೂಹಸ್ಯ ವಾ ನರೋ ನೇತಾ | ಸ ಇಂದ್ರ ಋಭುಃ ಸೂರ್ಯಾತ್ಮನೋರುವಿಸ್ತೀರ್ಣಂ ಭಾಸಮಾನಃ ಸನ್ ದ್ರವಿಣಂ ಸರ್ವೈಃ ಪ್ರಾಣಿಭಿರಭಿದ್ರವಣೀಯಂ ಧರುಣಂ | ಉದಕನಾಮೈತತ್ | ಸರ್ವಸ್ಯ ಧಾರಕಂ ವೃಷ್ಟ್ಯುದಕಂ ವಾಜಾಯಾನ್ನಾರ್ಥಂ ಬಲಾರ್ಥಂ ವಾ ಪೃಷಾಯತ್ | ಪೃಷ್ಣಾತಿ | ಸಿಂಚತಿ | ಪ್ರವರ್ಷತೀತ್ಯರ್ಥಃ | ಅಪಿ ಚ ಮಹಿಷಃ | ಮಹನ್ನಾಮೈತತ್ | ಮಹಾನ್ಸೂರ್ಯರೂಪೀಂದ್ರಃ ಸ್ವಜಾಂ ಸ್ವಸಕಾಶಾದುತ್ಪನ್ನಾಂ ವ್ರಾಂ | ವೃಣೋತಿ ತಮಸಾ ಸರ್ವಮಾಚ್ಛಾದಯತೀತಿ ವ್ರಾ ರಾತ್ರಿಃ | ಯದ್ವಾ | ಪ್ರಕಾಶೇನ ವೃಣೋತೀತಿ ವ್ರಾ ಉಷಾಃ | ತಾಮನು ಚಕ್ಷತ | ಚಷ್ಟಿಃ ಪಶ್ಯತಿಕರ್ಮಾ | ಅನುಪಶ್ಚಾತ್ಪಶ್ಯತಿ ಪ್ರಕಾಶತೇ | ಸ್ವಯಂ ಪ್ರಾಥಪ್ರಕಾಶೋಽಪಿ ಸ್ವಗತ್ಯಾ ನಿಷ್ಪಾದಿತಾಯಾ ರಾತ್ರೇರುಷಸಶ್ಚ ಪಶ್ಚಾದುದೇತೀತ್ಯರ್ಥಃ | ಅಪಿ ಚೇದಮಪರಮಾಶ್ಚರ್ಯಂ ಯದಯಮಶ್ವಸ್ಯ ಮೇನಾಂ | ಸ್ತ್ರೀನಾಮೈತತ್ | ಸ್ತ್ರಿಯಂ ವಡವಾಂ ಗೋರ್ಮಾತರಂ ಜನನೀಂ | ಪರಿವ್ಯೈಪರೀತ್ಯೇ | ವಿಪರೀತಮಕರೋತ್ | ಕದಾಚಿದಿಂದ್ರೋ ಲೀಲಯಾಽಶ್ವಾಯಾಂ ಗಾಮುತ್ಪಾದಯಾಮಾಸ | ತದತ್ರ ಪ್ರತಿಪಾದ್ಯತೇ ಮಂತ್ರಾಂತರೇ ಚೇಂದ್ರವಾಕ್ಯರೂಪ ಏತದ್ವಿಸ್ಪಷ್ಟಮವಗಮ್ಯತೇ || ಧರುಣಂ | ಧಾರೇರ್ಣಿಲುಕ್ಚೇತ್ಯುನಪ್ರತ್ಯಯಃ | ಪೃಷಾಯತ್ | ಪೃಷ ಪ್ಲುಷ ಸ್ನೇಹನಸೇಚನಪೂರಣೇಷು | ಕ್ರ್ಯಾದಿಕಃ | ಲೇಟ್ಯಡಾಗಮಃ ಛಂದಸಿ ಶಾಯಜಪೀತ್ಯಹಾವಪಿ ಶ್ನಾಪ್ರತ್ಯಯಸ್ಯ ಶಾಯಜಾದೇಶಃ | ನರಃ | ನೃ ನಯೇ | ಬಹುಲವಚನಾದ್ವ್ಯಾದೋರಬಿತಿ ಕರ್ತರ್ಯಪ್ | ಚಕ್ಷತ | ಚಕ್ಷಿಙ್ ವ್ಯಕ್ತಾಯಾಂ ವಾಚಿ | ಛಾಂದಸೋ ಲಙ್ | ಬಹುಲಂ ಛಂದಸೀತಿ ಶಪೋ ಲುಗಭಾವಃ ||

ಪ್ರತಿಪದಾರ್ಥ

**ಸಃ**—ಇಂದ್ರನು | **ದ್ಯಾಂ**—ದ್ಯುಲೋಕವನ್ನು | **ಸ್ತಂಭೀತ್ ಹ**—ನಿಲ್ಲಿಸಿರುವನಷ್ಟೇ | **ಗೋಃ**—ಗೋವುಗಳ (ಉದಕದ, ಕಿರಣಗಳ) | **ನರಃ**—ನೇತೃವಾದ (ಇಂದ್ರನು) | **ಋಭುಃ**—(ಸೂರ್ಯರೂಪನಾಗಿ) ವಿಸ್ತಾರವಾದ ಪ್ರದೇಶದಲ್ಲಿ ಪ್ರಕಾಶಮಾನನಾಗಿ | **ದ್ರವಿಣಂ**—ದ್ರವರೂಪವಾದ | **ಧರುಣಂ**—ಸರ್ವಾಧಾರವಾದ (ವೃಷ್ಟ್ಯುದಕವನ್ನು | **ವಾಜಾಯ**—ಆಹಾರಕ್ಕೋಸ್ಕರ, ಬಲಕ್ಕೋಸ್ಕರ | **ಪೃಷಾಯತ್**—ಪುಷ್ಟೀಕರಿಸಿದನು (ಚುಮುಕಿಸಿದನು) | (**ಅಪಿಚ**—ಮತ್ತೂ) | **ಮಹಿಷಃ**—ಮಹಾಮಹಿಮನಾದ (ಸೂರ್ಯರೂಪಿಯಾದ ಇಂದ್ರನು) | **ಸ್ವಜಾಂ**—ತನ್ನಿಂದಲೇ ಉತ್ಪನ್ನವಾದ | **ವ್ರಾಮ್**—ಆವರಕವಾದ (ರಾತ್ರಿಯನ್ನು ಅಥವಾ ಉಷಸ್ಸನ್ನು) | **ಅನು ಚಕ್ಷತ**—ಅನುಸರಿಸಿ ಪ್ರಕಾಶಿಸುತ್ತಾನೆ | **ಅಶ್ವಸ್ಯ ಮೇನಾಂ**—ಹೆಣ್ಣುಕುದುರೆಯನ್ನು | **ಗೋಃ ಮಾತರಂ**—ಗೋವಿನ ಮಾತೆಯನ್ನಾಗಿ | **ಪರಿ(ಚಕ್ಷತ)**— (ಸ್ವಭಾವಕ್ಕೆ ವಿರುದ್ಧವಾಗಿ) ಮಾಡಿದನು ||

|| ಭಾವಾರ್ಥ ||

ಇಂದ್ರನು ಅಂತರಿಕ್ಷಲೋಕವನ್ನು ನಿಲ್ಲುವಂತೆ ಮಾಡಿದ್ದಾನೆ ; ಗೋವುಗಳಿಗೆ (ನೀರಿಗೆ, ಕಿರಣಗಳಿಗೆ) ಯಜಮಾನನಾದ ಇಂದ್ರನು (ಸೂರ್ಯರೂಪನಾಗಿ) ಅತ್ಯಂತ ಪ್ರಕಾಶಯುಕ್ತನಾಗಿ, ದ್ರವರೂಪವಾದ ಮತ್ತು ಸರ್ವಕ್ಕೂ

ಆಧಾರಭೂತವಾದ ವೃಷ್ಟ್ಯುದಕವನ್ನು ಸುರಿಸಿದನು; ಮಹಾನುಹಿಮನಾದ (ಸೂರ್ಯರೂಪನಾದ ಆತನು) ತನ್ನಿಂದಲೇ ಉತ್ಪನ್ನವಾದ ರಾತ್ರಿ ಯಾದಮೇಲೆ (ಉಷಸ್ಸನ್ನು ಅನುಸರಿಸಿ) ಪ್ರಕಾಶಿಸುತ್ತಾನೆ; ಇಂದ್ರನು (ತನ್ನ ಮಹಿಮೆಯಿಂದ ಪ್ರಕೃತಿ ವಿರುದ್ಧವಾಗಿ) ಹೆಣ್ಣುಕದುರೆಯೊಂದು ಗೋವನ್ನು ಪ್ರಸವಿಸುವಂತೆ ಮಾಡಿದನು.

## Englih Translation

He verily upholds the heaven; he, the brilliant, the leader of the (stolen) herd, pours forth the flowing (water) for the sake of food: the mighty Indra manifests himself after his own daughter, (the dawn); he made the female of horse unnaturally the mother of the cow.

॥ ವಿಶೇಷವಿಷಯಗಳು ॥

**ಗೋಃ—ಪಣಿಭಿರಪಹೃತಸ್ಯ ಗೋಸಮೂಹಸ್ಯ ವಜ್ರಸ್ಯ ಉದಕಸ್ಯ ಕಿರಣಸಮೂಹಸ್ಯ ವಾ। ನರಃ ನೇತಾ ಇಂದ್ರಃ।** ಗೌಃ ಗ್ಮಾ ಎಂಬ ಇಪ್ಪತ್ತೊಂದು ಪೃಥಿವೀನಾಮಗಳಲ್ಲಿ (ನಿ ೨-೫) ಉಕ್ತವಾಗಿರುವುದರಿಂದ ಪೃಥಿವೀ ಎಂದೂ,

**ಯೇನ ಗೌರಭಿಪ್ರವೃತ್ತಾ ಮಿಮಾತಿ ಮಾಯುಂ। ಶಬ್ದಂ ಕರೋತಿ ಮಾಯುಮಿವಾದಿತ್ಯ-**
ಮಿತಿ। ವಾಗೇಷಾ ಮಾಧ್ಯಮಿಕಾ ಧ್ವಂಸನೇ ಮೇಘೇ ಅಧಿಶ್ರಿತಾ ॥

(ನಿ. ೨-೮) ಎಂದು ನಿರುಕ್ತವಚನವಿರುವುದರಿಂದ **ವಾಕ್ಕೆಂಬುದಾಗಿಯೂ**, ಸಾಧಾರಣ ನಾಮಗಳಲ್ಲಿ (ನಿ ೨-೧೩) ಉಕ್ತವಾಗಿರುವುದರಿಂದ, **ದ್ಯೌಃ ಆದಿತ್ಯ** ಎಂದೂ ರಶ್ಮಿಪರ್ಯಾಯದಲ್ಲಿ (ನಿ. ೨-೧೫) ಉಕ್ತವಾಗಿರುವುದರಿಂದ **ರಶ್ಮಿ** ಎಂದೂ, **ವಾಙ್ನಾಮಗಳಲ್ಲಿ** (ನಿ. ೨-೨೩) ಪಠಿತವಾಗಿರುವುದರಿಂದ **ವಾಕ್ಕೆಂದೂ, ಸ್ತೋತೃ**ನಾಮಗಳಲ್ಲಿ (ನಿ. ೩-೧೯) ಉಕ್ತವಾಗಿರುವುದರಿಂದ **ಸ್ತೋತೃ** ಎಂದೂ, ಗೋ ಶಬ್ದಕ್ಕೆ ಅನೇಕಾರ್ಥಗಳಿರುವುದರಿಂದ ಇಂದ್ರನು ಅಂಗಿರಾಋಷಿಗಳ ಅಸುರರಿಂದ ಅಪಹೃತವಾದ ಗೋವುಗಳನ್ನು ತಂದುಕೊಟ್ಟನೆಂದೂ ವಜ್ರಾಯುಧವನ್ನು ಸರಿಯಾಗಿ ಉಪಯೋಗಿಸುವವನೆಂದೂ, ವೃಷ್ಟ್ಯುದಕಗಳನ್ನು ಪೃಥಿವಿಗೆ ಬರುವಂತೆ ಮಾಡುವವನೆಂದೂ, ಕಿರಣ ಸಮೂಹಗಳುಳ್ಳವನೆಂದೂ ವರ್ಣಿಸಿದೆ.

**ಋಭ್ವಃ—ಸೂರ್ಯಾತ್ಮನಾ ವಿಸ್ತೀರ್ಣಂ ಭಾಸಮಾನಃ।** ಸೂರ್ಯನ ರೂಪದಿಂದ ಇರುವವನಾಗಿ ಬಹಳವಾಗಿ ಪ್ರಕಾಶಿಸುವವನು ಎಂದು ಅರ್ಥ. ಯಾಸ್ಕರು—**ಋಭವಃ। ಉರು ಭಾಂತೀತಿವಾ, ಋತೇನ ಭಾಂತೀತಿ ವಾ, ಋತೇನ ಭವಂತೀತಿ ವಾ** ಎಂದು ವ್ಯಾಖ್ಯಾನಮಾಡಿ, ಬಹಳವಾಗಿ ಪ್ರಕಾಶಿಸುವವರು—ಅಥವಾ ಸತ್ಯದಿಂದಅತಿಶಯವಾಗಿ ಇರುವವರು, ಅಥವಾ ಸತ್ಯವಾಗಿ ಸತ್ವರೂಪದಿಂದ ಇರುವವರು ಎಂದು ವಿವರಿಸಿ,

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ।**
**ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ॥**
(ಋ. ಸಂ. ೧-೧೧೦-೪)

ಎಂಬ ಋಕ್ಕನ್ನು ಉದಹರಿಸಿರುವರು. ಮತ್ತು **ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ** (ನಿ. ೧೧-೧೬) ಸೂರ್ಯ ಕಿರಣಗಳಿಗೂ ಋಭುಗಳೆಂದು ಹೆಸರು ಇರುತ್ತದೆ ಎಂದು ಋಭು ಶಬ್ದದ ಅರ್ಥವನ್ನು ವಿವರಿಸಿರುತ್ತಾರೆ.

**ಧರುಣಂ—ಸರ್ವಸ್ಯ ಧಾರಕಂ ವೃಷ್ಟ್ಯುದಕಂ ।** ಧರುಣ ಶಬ್ದವು ನೂರೊಂದು ಉದಕನಾಮಗಳ ಮಧ್ಯದಲ್ಲಿ (ನಿ. ೨-೨೪) ಉಕ್ತವಾಗಿರುವುದರಿಂದ ಉದಕವೆಂದು ಅರ್ಥ—ಇಂದ್ರನು ಎಲ್ಲವನ್ನೂ ರಕ್ಷಿಸುವ (ವೃಷ್ಟ್ಯು ದಕ) ಮಳೆಯ ನೀರನ್ನು ಅನ್ನಕ್ಕಾಗಿಯೂ, ಬಲವು ಹೆಚ್ಚುವುದಕ್ಕಾಗಿಯೂ ವೃಷ್ಟಿಯರೂಪದಿಂದ ಲೋಕಕ್ಕೆ ಕೊಡುವನೆಂದು ಅರ್ಥ.

**ಮಹಿಷಃ—ಮಹನ್ನಾಮೈತತ್ । ಮಹಾನ್ ಸೂರ್ಯರೂಪೀ ಇಂದ್ರಃ ।** ಮಹಿಷ ಶಬ್ದವು ಮಹನ್ನಾಮ ಗಳಲ್ಲಿ (ನಿ. ೩-೧೯) ಉಕ್ತವಾಗಿರುತ್ತದೆ.

> **ಸ್ವಜಾಂ ವ್ರಾಂ ಅನು ಚಕ್ಷತ—ಸ್ವಸಕಾಶಾದುತ್ಪನ್ನಾಂ ವೃಣೋತಿ ತಮಸಾ ಸರ್ವಮಾಚ್ಛಾದಯ-ತೀತಿ ವ್ರಾ ರಾತ್ರಿಃ । ಯದ್ವಾ ಪ್ರಕಾಶೇನ ವೃಣೋತೀತಿ ವ್ರಾ ಉಷಾಃ ತಾಂ । ಅನು ಪಶ್ಚಾತ್ ಪಶ್ಯತಿ ಪ್ರಕಾಶತೇ । ಸ್ವಯಂ ಪ್ರೌಢಪ್ರಕಾಶೋಽಪಿ ಸ್ವಗತ್ಯಾ ನಿಷ್ಪಾದಿತಾಯಾ ರಾತ್ರೇರುಷಸಶ್ಚ ಪಶ್ಚಾದುದೇತೀತ್ಯರ್ಥಃ ।**

ಸೂರ್ಯರೂಪದಿಂದಲೇ ಇರುವವನಾದ ಕಾರಣ ಇಂದ್ರನು, ತನ್ನ (ಗತಿವಿಶೇಷ) ಗಮನದಿಂದ ಉಂಟಾಗಿರುವ ಕತ್ತಲೆಯಿಂದಲೇ ಎಲ್ಲವನ್ನೂ ಮುಚ್ಚುತ್ತಿರುವ ರಾತ್ರಿಯನ್ನು ಅನುಸರಿಸಿ ಪ್ರಕಾಶಿಸುತ್ತಿರುವನು ಎಂದರೆ ರಾತ್ರಿಯು ಆಗುವುದಕ್ಕೆ ಅನುಕೂಲವಾಗುವಂತೆ ಪ್ರಕಾಶಿಸುವನು. ಅಥವಾ ತನ್ನ ಪ್ರಕಾಶದಿಂದ ಎಲ್ಲವನ್ನೂ ಅಭಿಲಷಣೀಯವಾಗಿರುವಂತೆ ಮಾಡುವುದರಿಂದ ವ್ರಾ ಶಬ್ದಕ್ಕೆ ಉಷಃಕಾಲವೆಂದು ಅರ್ಥ. ಸೂರ್ಯನು ತನ್ನ ಪ್ರಕಾಶವು ಅತ್ಯಧಿಕವಾಗಿರುವುದರಿಂದ ಉಷಃಕಾಲದ ಪ್ರಕಾಶವನ್ನು ಅನುಸರಿಸಿ ತಾನು ಉದಯವನ್ನು ಹೊಂದುವನು. ತನ್ನಿಂದ ಉತ್ಪನ್ನವಾದದ್ದನ್ನು ರಕ್ಷಿಸುತ್ತಾ ತಾನು ಹಿಂಬಾಲಿಸುವುದು ಲೋಕರೂಢಿಯಾಗಿರುವುದು. ಆದ್ದರಿಂದ ಸೂರ್ಯನು ಉಷಃಕಾಲವನ್ನು ಅನುಸರಿಸಿ ತಾನು ಉದಯವನ್ನು ಹೊಂದುವನು. ತನ್ನ ಗತಿಯಿಂದ ಉಂಟಾದ ಕಾರಣ ಸ್ವಜಾಂ ಎಂದು ಉಷಸ್ಸು ಪ್ರಸಿದ್ಧವಾಯಿತು. ಆದ್ದರಿಂದ ಸೂರ್ಯನು ಉಷಃಕಾಲವನ್ನು ಅನುಸರಿಸಿ (ಉಷೋದಯವಾದ ನಂತರ) ಉದಿತನಾಗುವನೆಂದು ಸಾಯಣರು ವಿವರಿಸಿರುವರು.

**ಸ್ಕಂದಸ್ವಾಮಿಗಳು—ಸ್ವಜಾಂ ಅನು ಚಕ್ಷತ । ಸ್ವತ ಏವ ಪ್ರಜಾಪತೇಃ ಯಾ ಜಾತಾ ಸಾ ಸ್ವಜಾಂ ತಾಂ ಮಹಾನ್ ಇಂದ್ರಃ ಆನುಪೂರ್ವೇಣ ಸರ್ವತಃ ಪಶ್ಯತಿ ।** ಮಹತ್ವದಿಂದ ಪೂರ್ಣನಾದ ಇಂದ್ರನು ಪ್ರಜಾ ಪತಿಯಾದ ಬ್ರಹ್ಮನಿಂದ ತಾನಾಗಿ ಉತ್ಪನ್ನಳಾದ (ಓರ್ವ ಸ್ತ್ರೀಯನ್ನು) ಸ್ತ್ರೀಯ ವಿಷಯವನ್ನು ಸಂಪೂರ್ಣ ವಾಗಿ ತಿಳಿಯುವನು . ಎಂದು ಅರ್ಥವನ್ನು ವಿವರಿಸಿರುವರು.

**ಅಶ್ವಸ್ಯ ಮೇನಾಂ ವಡವಾಂ ಗೋಮಾತರಂ ಅಕರೋತ್ । ಕದಾಚಿತ್ ಇಂದ್ರೋ ಲೀಲಯಾ ಅಶ್ವಾಯಾಂ ಗಾಮುತ್ಪಾದಯಾಮಾಸ । ತದತ್ರ ಪ್ರತಿಪಾದ್ಯತೇ ಮಂತ್ರಾಂತರೇ ಚ ಇಂದ್ರವಾಕ್ಯರೂಪೇ ಏತತ್ ವಿಸ್ಪಷ್ಟಮುಪಗಮ್ಯತೇ ।** ಇಂದ್ರನಿಗೆ (ವಿನೋದವನ್ನು) ಆಶ್ಚರ್ಯಕರವಾದ ಕಾರ್ಯವನ್ನು ಆಚರಿಸಬೇಕೆಂದು ಇಚ್ಛೆಯು ಉಂಟಾದಾಗ ಹೆಣ್ಣು ಕುದುರೆಯಿಂದ ಗೋವು ಉತ್ಪನ್ನವಾಗುವಂತೆ ಮಾಡಿದನು ಎಂದು ಇಂದ್ರನು ಮಾಡಿದ ಆಶ್ಚರ್ಯಕರವಾದ ಕೆಲಸವು ಇಲ್ಲಿ ಉಕ್ತವಾಗಿರುತ್ತದೆ. ಇಂದ್ರನು ಹೇಳಿರುವ ವಾಕ್ಯರೂಪವಾದ ಮಂತ್ರದಲ್ಲಿ ಈ ವಿಷಯವು ಸ್ಪಷ್ಟವಾಗಿ ಹೇಳಲ್ಪಡುತ್ತದೆ ಎಂದು ಸಾಯಣರು ಹೇಳಿರುವರು.

ಸ್ಕಂದಸ್ವಾಮಿಗಳು—**ವ್ರಾಂ ವರಣೀಯಾಂ ಮೇನಾಂ ಸ್ತ್ರಿಯಂ ಭಾರ್ಯಾಂ ಅಶ್ವಸ್ಯ ವ್ಯಾಪ್ತುಃ ಪ್ರಜಾಪತೇಃ ಮಾತರಂ ಮಾತೃಭೂತಾಂ ಗನ್ತೃತ್ವಾದಿಂದ್ರೋತ್ರ ಗೌರುಚ್ಯತೇ ಆತ್ಮನ ಏವೇತ್ಯರ್ಥಃ** ಪ್ರಜಾಪತಿಯಾದ ಬ್ರಹ್ಮನ ಭಾರ್ಯೆಯನ್ನು ಗೋಶಬ್ದವಾಚ್ಯಳಾದ ತನ್ನ ತಾಯಿಯನ್ನಾಗಿ ತಿಳಿದನು ಎಂದು ವಿವರಿಸಿ ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಿರುವರು.

> **ಅಥವಾ ವ್ರಾ ಇತಿ ರಾತ್ರಿನಾಮ । ಉಕ್ತಂ ಹಿ ಶಾಕಪೂಣಿನಾ । ವ್ರಾ ಇತಿ ರಾತ್ರಿರಪ್ಯುಚ್ಯತೆ ಇತಿ । ಸ್ವಜಾ ಚಾಸೌ ಸ್ವಯಮೇವ ಜಾಯಮಾನತ್ವಾತ್ । ಸ್ವಯಂ ಜನಯಿತ್ರೀಂ ಮಹಾನಿಂದ್ರೋ ಜಾನಾತಿ ರಾತ್ರಿಂ ನಾಮ ಸ್ತ್ರಿಯಮಶ್ವಸ್ಯ ಮಾತರಂ । ಅಶ್ವಗ್ರಹಣಮತ್ರೋಪಲಕ್ಷಣಂ ಪ್ರಾಣಿಮಾತ್ರಸ್ಯ ಅಶ್ವಾದೇಃ । ಸಮ್ಯಗಾಹಾರಪರಿಣಾಮಾದಿಕರಣೇನ ಮಾತೃಭೂತಾಂ ಗೋರುಷಸಶ್ಚ ।**

ಶಾಕಪೂಣಿ ಎಂಬ ಋಷಿಯು--ವ್ರಾ ಎಂಬ ಶಬ್ದವು ರಾತ್ರಿಬೋಧಕವಾಗಿರುತ್ತದೆ ಎಂದು ಹೇಳಿರುವುದರಿಂದ ವ್ರಾ ಶಬ್ದಕ್ಕೆ ರಾತ್ರಿ ಎಂದು ಅರ್ಥವು. ರಾತ್ರಿಯು ತಾನಾಗಿ ಉತ್ಪನ್ನವಾಗುವುದು ಎಂದೂ, ಅಶ್ವವೇ ಮೊದಲಾದ ಎಲ್ಲಾ ಪ್ರಾಣಿಗಳಿಗೂ, ಆಹಾರ ಪರಿಣಾಮಾದಿಗಳಿಂದ ರಕ್ಷಿಸುವ ಕಾರಣ (ಮಾತೃ) ತಾಯಿಯಾಗಿ ಇರುವುದೆಂದೂ, ತಿಳಿದಿರುವನು. ಮತ್ತು (ತನ್ನಕಾಲದ ಕೊನೆಯಲ್ಲಿ) ರಾತ್ರಿಯ ಅಪರಭಾಗದಲ್ಲಿ ಬರುವ ಉಷಸ್ಸಿಗೆ ಜನನಿಯಾಗಿ ಇರುವುದೆಂದೂ ತಿಳಿದಿರುವನು ಎಂದು ವರ್ಣಿಸಿದೆ.

ಇಂದ್ರನು ಅಂತರಿಕ್ಷಲೋಕವನ್ನು ಸ್ಥಿರವಾಗಿರುವಂತೆ ನಿಲ್ಲಿಸಿರುವುದೂ, ಅಸುರರು ಅಪಹರಿಸಿದ್ದ ಅಂಗಿರಸ್ಸುಗಳ ಗೋವುಗಳನ್ನು. ಅಸುರರನ್ನು ನಾಶಮಾಡಿ ಅವರಿಗೆ ಕೊಟ್ಟಿರುವುದೂ, ಸೂರ್ಯರೂಪದಿಂದಲೇ ತಾನು ಇರುತ್ತಾ, ಪ್ರಾಣಿಗಳಿಗೆ ಅತ್ಯವಶ್ಯಕವಾದ ಅನ್ನ ಮತ್ತು ಬಲ ಇವುಗಳನ್ನು ಉಂಟುಮಾಡುವ ವೃಷ್ಟಿಯನ್ನು ಉಂಟುಮಾಡುವುದೂ, ರಾತ್ರಿಯು ಮತ್ತು ಹಗಲು ಎಂಬ ಎರಡು ವಿಧವಾದ ವ್ಯವಹಾರಕ್ಕೆ ಅನುಕೂಲವಾಗಿರುವಂತೆ ಕಾಲವನ್ನು ವ್ಯವಸ್ಥೆಗೊಳಿಸಿ ಅದರಲ್ಲಿ ಪ್ರಕಾಶಾತ್ಮಕವಾದ (ದಿನದ) ಹಗಲಿನಲ್ಲಿ ತಾನು ಸೂರ್ಯರೂಪದಿಂದ ಬೆಳಗುತ್ತಾ, ರಾತ್ರಿಯ ಕತ್ತಲೆಯನ್ನು ನಾಶಪಡಿಸಿರುವುದೂ, ಮತ್ತು ರಾತ್ರಿಯನ್ನು ಅನುಸರಿಸಿ ತಾನು ಉದಯಾಸ್ತಗಳನ್ನು ಹೊಂದಿರುವುದೂ ಎಂಬ ಇವುಗಳೆಲ್ಲವೂ, ಅವನ ಅಸಾಧಾರಣವಾದ ಲೋಕರಕ್ಷಣೆಗೆ ಮಾತ್ರವೇ ಉಪಯುಕ್ತವಾದ ಕಾರ್ಯಗಳಾಗಿ ಇರುತ್ತವೆ ಎಂದು ವರ್ಣಿಸಿದೆ.

ವ್ಯಾಕರಣಪ್ರಕ್ರಿಯಾ

**ಧರುಣಮ್**—ಧೃಞ್ ಅವಸ್ಥಾನೇ. ಧಾತು. ಣ್ಯಂತದ ಮೇಲೆ **ಧಾರೇರ್ಣಿಲುಕ್ ಚ**—ಎಂಬುದರಿಂದ ಉನ ಪ್ರತ್ಯಯ. ರೇಫದ ಪರದಲ್ಲಿ ನಕಾರ ಬಂದುದರಿಂದ **ಅಟ್‌ಕುಪ್ವಾಙ್**—ಸೂತ್ರದಿಂದ ಣತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಪ್ರುಷಾಯೇತ್**—**ಪ್ರುಷ** ಪ್ಲುಷ ಸ್ನೇಹನಸೇಚನಪೂರಣೇಷು ಧಾತು ಕ್ರ್ಯಾದಿ. ಲೇಟ್ ಪ್ರಥಮ ಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ ಪರ**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಕ್ಕೆ ಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಸೂತ್ರದಿಂದ ಅದಕ್ಕೆ ಅಡಾಗಮ. **ಛಂದಸಿ ಶಾಯಜಪಿ**—(ಪಾ. ಸೂ. ೩-೧-೮೪) ಎಂಬುದರಿಂದ ಹಿ ಪರದಲ್ಲಿ ಇಲ್ಲದಿದ್ದರೂ ಶ್ನಾವಿಕರಣ ಬಂದಾಗ ಅದಕ್ಕೆ ಶಾಯಜಾದೇಶ. ಪ್ರುಷಾಯತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ **ತಿಙ್ಙತಿಙಃ**—ಎಂಬುದರಿಂದ ನಿಘಾತಸ್ವರ ಬರುತ್ತದೆ.

**ನರಃ**—ನೃ ನಯೇ. ಧಾತು. **ಋದೋರಪ್**—ಎಂಬುದರಿಂದ **ಅಪ್** ಪ್ರತ್ಯಯ. ಬಹುಲವಚನ ಸಾಮರ್ಥ್ಯದಿಂದ ಇದು ಕರ್ತರಿಯಲ್ಲಿ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಋಕಾರಕ್ಕೆ ಗುಣ ರಪರವಾಗಿ ಬರುತ್ತದೆ. ಪ್ರತ್ಯಯಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸ್ವಜಾಮ್**—ಸ್ವಸ್ಮಾತ್ ಜಾತಾ ಸ್ವಜಾ. ತಾಮ್. ಜನೀ ಪ್ರಾದುರ್ಭಾವೇ. ಧಾತು. ಡಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಚಕ್ಷತೆ**—ಚಕ್ಷಿಙ್ ವ್ಯಕ್ತಾಯಾಂ ವಾಚಿ. ಧಾತು. ಅದಾದಿ. **ಛಂದಸಿ ಲುಙ್‌ಲಙ್‌ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಧಾತುಗಳಿಗೆ ಅನೇಕಾರ್ಥ ಸ್ವೀಕೃತವಾದುದರಿಂದ ಇಲ್ಲಿ ಪ್ರೇಕ್ಷಣಾರ್ಥದಲ್ಲಿ ಪ್ರಯುಕ್ತವಾಗಿದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥

ಸಂಹಿತಾಪಾಠಃ

ನಕ್ಷದ್ಧವಮರುಣೀಃ ಪೂರ್ವ್ಯಂ ರಾಟ್ ತುರೋ ವಿಶಾಮಂಗಿರಸಾಮನು ದ್ಯೂನ್ ।

ತಕ್ಷದ್ವಜ್ರಂ ನಿಯುತಂ ತಸ್ತಂಭದ್ದ್ಯಾಂ ಚತುಷ್ಪದೇ ನರ್ಯಾಯ ದ್ವಿಪಾದೇ ॥ ೨ ॥

ಪದಪಾಠಃ

ನಕ್ಷತ್ । ಹವಂ । ಅರುಣೀಃ । ಪೂರ್ವ್ಯಂ । ರಾಟ್ । ತುರಃ । ವಿಶಾಂ । ಅಂಗಿರಸಾಂ । ಅನು । ದ್ಯೂನ್ ।

ತಕ್ಷತ್ । ವಜ್ರಂ । ನಿऽಯುತಂ । ತಸ್ತಂಭತ್ । ದ್ಯಾಂ । ಚತುಃऽಪದೇ । ನರ್ಯಾಯ । ದ್ವಿऽಪಾದೇ ॥ ೨ ॥

ಸಾಯಣಭಾಷ್ಯಂ

ಅರುಣೀರರುಣವರ್ಣಾ ಆರೋಚಮಾನಾ ವೋಷಸೋ ರಾಟ್ ರಾಜಯನ್ಪ್ರಕಾಶಯನ್ಸೂರ್ಯಾತ್ಮೇಂದ್ರಃ ಪೂರ್ವ್ಯಂ ಪೂರ್ವೈರ್ಋಷಿಭಿಃ ಪ್ರಯುಕ್ತಂ ಹವಮಿದಾನೀಮಸ್ಮಾಭಿಃ ಕ್ರಿಯಮಾಣಮಾಹ್ವಾನಂ ನಕ್ಷತ್ । ನಕ್ಷತು । ಶೃಣೋತು । ಕೀದೃಶಃ । ಅನು ದ್ಯೂನ್ ಅನುದಿವಸಂ ವಿಶಾಂ ಮನುಷ್ಯಾಣಾಮಂಗಿರಸಾಮೃಷೀಣಾಂ ಸ್ತೋತೄಣಾಂ ತುರೋ ಧನಸ್ಯ ಪ್ರೇರಯಿತಾ । ಅಪಿ ಚ ಸ ಇಂದ್ರೋ ವಜ್ರಂ ಸ್ವಕೀಯಮಾಯುಧಂ ನಿಯುತಂ ಹಂತವ್ಯೇನ ಸಹ ನಿತರಾಂ ಯುಕ್ತಂ ತಕ್ಷತ್ । ಅಕರೋತ್ । ತಥಾ ದ್ಯಾಂ ದ್ಯುಲೋಕಂ ತಸ್ತಂಭತ್ । ಅಸ್ತಂಭಯತ್ । ಯಥಾಧೋ ನ ಪತತಿ ತಥಾಕರೋದಿತ್ಯರ್ಥಃ। ಕಿಮರ್ಥಂ । ನರ್ಯಾಯ ನೃಭ್ಯೋ ಹಿತಾಯ ಚತುಷ್ಪದೇ ಗವಾಶ್ವಾದಯೇ ದ್ವಿಪಾದೇ ಮನುಷ್ಯಾಯ ಚ । ಏತದುಭಯಾರ್ಥಮಿತ್ಯರ್ಥಃ ॥ ನಕ್ಷತ್ । ನಕ್ಷ ಗತೌ । ಲೇಟ್ಯಡಾಗಮಃ । ಪೂರ್ವ್ಯಂ । ಪೂರ್ವೈಃ ಕೃತಮಿನಯೌ ಚ । ಪಾ. ೪-೪-೧೩೩ । ಇತಿ ಯಪ್ರತ್ಯಯಃ । ರಾಟ್ । ರಾಜೃ ದೀಪ್ತೌ । ಅಸ್ಮಾದಂತರ್ಭಾವಿತಣ್ಯರ್ಥಾತ್ ಕ್ವಿಪ್ । ತುರಃ । ತುರ ತ್ವರಣೇ । ಇಗುಪಧಲಕ್ಷಣಃ ಕಃ । ತಕ್ಷತ್ । ತಕ್ಷೂ ತ್ವಕ್ಷೂ ತನೂಕರಣೇ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ತಸ್ತಂಭತ್ । ಷ್ಟಭಿ ಸ್ಕಭಿ ಗತಿಪ್ರತಿಬಂಧೇ । ಅಸ್ಮಾಣ್ಣ್ಯಂತಾಲ್ಲುಙಿ ಚಙಿ ರೂಪಂ । ಚಙ್ಯನ್ಯತರಸ್ಯಾಮಿತ್ಯುಪೋತ್ತಮಸ್ಯೋದಾತ್ತತ್ವಂ । ಪೂರ್ವಪದಸ್ಯಾಸಮಾನವಾಕ್ಯಸ್ಥತ್ವಾನ್ನಿಘಾತಾಭಾವಃ । ಚತುಷ್ಪದೇ । ಚತ್ವಾರಃ ಪಾದಾ ಅಸ್ಯ । ಸಂಖ್ಯಾಸುಪೂರ್ವಸ್ಯೇತಿ ಪಾದಶಬ್ದಸ್ಯಾಂತ್ಯಲೋಪಃ ಸಮಾಸಾಂತಃ । ಚತುರ್ಥ್ಯೇಕವಚನೇ ಭಸಂಜ್ಞಾಯಾಂ

**ಪಾದಃ ಪದಿತಿ ಪದ್ಭಾವಃ । ದ್ವಿಪಾದೇ । ಪೂರ್ವವತ್ಸ್ವರಃ ಕ್ರಿಯಾ । ಅಯಂ ತು ವಿಶೇಷಃ । ಅಯಸ್ಮಯಾದಿ ತ್ವೇನ ಪದತ್ವಾದ್ಭಸಂಜ್ಞಾಯಾ ಅಭಾವೇ ಪದ್ಭಾವಾಭಾವಃ । ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು ಬಹುವ್ರೀಹಾ- ವಿತ್ಯುತ್ತರಪದಾಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅರುಣೀಃ**—ಅರುಣವರ್ಣವಾದ (ಉಷಸ್ಸುಗಳನ್ನು) । **ರಾಟ್**—ಪ್ರಕಾಶಿಸುವಂತೆಮಾಡುವ ಸೂರ್ಯರೂಪಿ ಯಾದ ಇಂದ್ರನು । **ಪೂರ್ವ್ಯಂ**—ಪೂರ್ವೀಕರಾದ ಋಷಿಗಳಿಂದ ಪ್ರಯುಕ್ತವಾದ । **ಹವಂ**— (ಈಗ ನಮ್ಮಿಂದ ಪ್ರಯು ಜ್ಯಮಾನವಾದ) ಆಹ್ವಾನವನ್ನು । **ಅನು ದ್ಯೂನ್**—ಪ್ರತಿ ದಿವಸವೂ । **ಅಂಗಿರಸಾಂ**—ಅಂಗಿರಸರ (ವಂಶೋತ್ಪನ್ನ ರಾದ) । **ವಿಶಾಂ**—ಪುರುಷರಿಗೆ (ಸ್ತೋತೃಗಳಿಗೆ) । **ತುರಃ**—ಐಶ್ವರ್ಯದಾಯಕನಾಗಿ । **ಚಕ್ಷತ್**—ಶ್ರವಣಮಾಡಲಿ । (**ಅಪಿ ಚ**—ಮತ್ತು) । **ವಜ್ರಂ**—ವಜ್ರಾಯುಧವನ್ನು । **ನಿಯುತಂ**—(ತೀಕ್ಷ್ಣವಾದುದನ್ನಾಗಿ)ವಧ್ಯಪುರುಷನೊಡನೆ ಸರ್ವದಾ ಯುಕ್ತವನ್ನಾಗಿ । **ತಕ್ಷತ್**—ಮಾಡಿದನು । (**ತಥಾ**—ಹಾಗೆಯೇ) । **ನರ್ಯಾಯ**—ಮನುಷ್ಯರ ಸುಖ ಕ್ಕೋಸ್ಕರ । **ಚತುಷ್ಪದೇ**—ಚತುಷ್ಪಾದ ಜಂತುಗಳಿಗೂ । **ದ್ವಿಪಾದೇ**—ದ್ವಿಪಾದ ಪ್ರಾಣಿಗಳಿಗೂ (ಅವುಗಳ ಸುಖ ಕ್ಕೋಸ್ಕರ) । **ದ್ಯಾಂ**—ಅಂತರಿಕ್ಷವನ್ನು । **ತಸ್ತಂಭತ್**—(ಬೀಳದಂತೆ) ತಡೆದು ನಿಲ್ಲಿಸಿದನು.

ಭಾವಾರ್ಥ

ಅರುಣವರ್ಣದ ಉಷಸ್ಸಿಗೆ ಪ್ರಕಾಶಕೊಡುವ (ಸೂರ್ಯರೂಪಿಯಾದ) ಮತ್ತು ಅಂಗಿರಸರಿಗೆ ಐಶ್ವರ್ಯದಾಯಕ ನಾದ ಇಂದ್ರನು ಪೂರ್ವೀಕ ಋಷಿಗಳಿಂದ ಪ್ರಯುಕ್ತವಾದುದೂ ಈಗ ನಮ್ಮಿಂದ ಮಾಡಲ್ಪಡುವುದೂ ಆದ ಆಹ್ವಾನ ವನ್ನು ಮನ್ನಿಸಲಿ. ಅವನು ತನ್ನ ವಜ್ರಾಯುಧವನ್ನು ವಧ್ಯಪುರುಷನೊಡನೆ ಸರ್ವದಾಯುಕ್ತವನ್ನಾಗಿ(ತೀಕ್ಷ್ಣವನ್ನಾಗಿ) ಮಾಡಿರುತ್ತಾನೆ. ಮನುಷ್ಯರು ಮತ್ತು ಇತರ ದ್ವಿಪಾದ ಚತುಷ್ಪಾದ ಜಂತುಗಳ ಸುಖಕೋಸ್ಕರ ಅಂತರಿಕ್ಷಲೋಕ ವನ್ನು (ಬೀಳದಂತೆ) ಸ್ಥಿರವಾಗಿ ನಿಲ್ಲಿಸುತ್ತಾನೆ.

English Translation

May he, illuminating the purple (dawn), listen to the invocation (addressed to him) of old, daily bestowing wealth upon the race of Angiras: he has sharpned his fatel shaft; he has supported the heaven for the good of men, of quadrupeds, and bipeds.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವನ್ನು (ಹೇಳುವುದರಲ್ಲಿ) ವಿವರಿಸುವುದರಲ್ಲಿ ಸಾಯಣರೂ ಸ್ಕಂದಸ್ವಾಮಿಗಳೂ ಪದಗಳ (ಅನ್ವಯವನ್ನು) ಸಂಬಂಧವನ್ನು ಬೇರೆ ಬೇರೆಯಾಗಿ ಮಾಡಿರುವರು.

ರಾಟ್ ಎಂಬ ಪದಕ್ಕೆ-ರಾಜಯನ್ ಪ್ರಕಾಶಯನ್ ಸೂರ್ಯಾತ್ಮಾ ಇಂದ್ರಃ । ಇಂದ್ರನು ಅರುಣವರ್ಣವುಳ್ಳ ಉಷಃಕಾಲವನ್ನು ಸೂರ್ಯರೂಪದಿಂದ ಪ್ರಕಾಶಿಸುವಂತೆ ಮಾಡುವನು. **ಹವಂ ಚಕ್ಷತ್** । **ಅಸ್ಮಾಭಿಃ ಕ್ರಿಯಮಾಣಂ**

**ಆಹ್ವಾನಂ ನಕ್ಷತು ಶೃಣೋತು** | ನಾವುಗಳು ಮಾಡುವ ಯಜ್ಞಕ್ಕಾಗಿ ಇಂದ್ರನು ಬರಲಿ ಎಂದು ಕರೆಯುವದನ್ನು ಇಂದ್ರನುಕೇಳಲಿ, ಎಂದು ಸಾಯಣರು ಅರ್ಥವನ್ನು ವರ್ಣಿಸಿರುವರು ಮತ್ತು **ಅನು ದ್ಯೂನ್ ತುರಃ ಧನಸ್ಯ ಪ್ರೇರಯಿತಾ|** ಪ್ರತಿದಿನವೂ ಧನವನ್ನು ಅಧಿಕವಾಗುವಂತೆ ಪ್ರೇರಿಸುವನು ಎಂದೂ ವಿವರಿಸಿರುವರು. ಸ್ಕಂದಸ್ವಾಮಿಗಳು—

**ದೃಷ್ಟಸ್ತೃಷ್ಟ ನಕ್ಷ ಗತೌ** ಎಂದು ನಕ್ಷಧಾತುವು ಗತ್ಯರ್ಥಕವಾದ ಕಾರಣ ಯಜ್ಞಮಾಡುವ ಯಜಮಾನರ ಕರೆಯನ್ನು ಕೇಳಿ ಯಜ್ಞಗಳಿಗೆ ಹೋಗುತ್ತಾನೆ. **ಅರುಣೀಃ ಪೂರ್ವ್ಯಂ ರಾಜತೇ|** **ಉಷಸಿ ಉದಿತಮಾತ್ರಾಯಾಂ ರಾಜತೇ** ಉಷಸ್ಸು ಉದಯವಾದಕೂಡಲೆ ಸೂರ್ಯರೂಪದಿಂದ ಪ್ರಕಾಶಿಸುತ್ತಾನೆ. **ತುರಃ** ಎಂಬ ಪದಕ್ಕೆ **ತುರ್ವಿತಾ ತ್ವರಿತಾ ವಾ ಶತ್ರೂಣಾಂ** ಶತ್ರುಗಳನ್ನು (ತ್ವರೆಮಾಡುವವನು) ಯುದ್ಧಮಾಡಲು ಜಾಗ್ರತೆಪಡಿಸುವನು ಎಂದು ಅರ್ಥಮಾಡಿರುವರು. **ಅನು ದ್ಯೂನ್** ಎಂಬ ಪದಗಳಿಗೆ **ಅಹಾನ್ಯಹಾನಿ** ಎಂದು ಅರ್ಥಮಾಡಿ **ವಜ್ರಂ ಅನು ದ್ಯೂನ್ ತಕ್ಷತಿ** ವಜ್ರಾಯುಧವನ್ನು ಪ್ರತಿ ದಿವಸವೂ ಸಂಸ್ಕರಿಸುವನು ಎಂದೂ **ನಿಯುತಂ ಶತ್ರುಶರೀರೇಷು ಪ್ರವೇಷ್ಟಾರಂ** ಶತ್ರುಶರೀರದಲ್ಲಿ (ಪ್ರವೇಶಿಸತಕ್ಕದ್ದನ್ನಾಗಿ) ಶತ್ರು ಶರೀರದಲ್ಲಿ ವೇಗವಾಗಿ ಪ್ರವೇಶಿಸುವಷ್ಟು ಹರಿತವಾಗಿರುವಂತೆ ಮಾಡುತ್ತಿರುವನು ಎಂದು ಅರ್ಥಮಾಡಿರುತ್ತಾರೆ.

**ನರ್ಯಾಯ—ನೃಭ್ಯೋ ಹಿತಾಯ | ನರೇಷು ಭವಂ ನರ್ಯಂ |** ಮನುಷ್ಯರ ಹಿತಕ್ಕಾಗಿ ಎಂದು ಅರ್ಥ. ಯಾಸ್ಕರು—

**ವಿಮ್ಯನ್ನ ಯಾ ಪತಂತೀ ದವಿದ್ಯೋದ್ಭರಂತೀ ಮೇ ಅಪ್ಯಾ ಕಾಮ್ಯಾನಿ |**
**ಜನಿಷ್ಟೋ ಅಪೋ ನರ್ಯಃ ಸುಜಾತಃ ಪ್ರೋರ್ವಶೀ ತಿರತ ದೀರ್ಘಮಾಯುಃ ||**
(ಋ ಸಂ. ೧೦-೯೫-೧೦)

**ನರ್ಯೋ ಮನುಷ್ಯೋ ನೃಭ್ಯೋ ಹಿತೋ ನರಾಪತ್ಯಮಿತಿ ವಾ |** ಈ ಋಕ್ಕಿನಲ್ಲಿ ನರ್ಯ ಎಂದರೆ ಮನುಷ್ಯ ಅಥವಾ ಮನುಷ್ಯನಿಗೆ ಹಿತವಾದ ಅನ್ನ ಐಶ್ವರ್ಯ. ಇವುಗಳನ್ನು ಅತಿಶಯವಾಗಿ ಉಂಟುಮಾಡಿಕೊಡುವುದು ಎಂದೂ ಇತಿಹಾಸಪರವಾದ ಅರ್ಥದಲ್ಲಿ ಮನುಷ್ಯನಿಂದ ಉತ್ಪನ್ನನಾದವನೆಂದೂ ಅರ್ಥವನ್ನು ವಿವರಿಸಿರುತ್ತಾರೆ.

### ವ್ಯಾಕರಣಪ್ರಕ್ರಿಯಾ

**ನಕ್ಷತ್**—ನಕ್ಷ ಗತೌ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು**—(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಪೂರ್ವ್ಯಮ್**—ಪೂರ್ವೈಃ ಕೃತಂ ಪೂರ್ವ್ಯಮ್. **ಪೂರ್ವೈಃಕೃತಮಿನಯೌ ಚ**—(ಪಾ.ಸೂ. ೪-೪-೧೩೩) ಎಂಬುದರಿಂದ ಯಪ್ರತ್ಯಯ. **ಯಸ್ಯೇತಿ ಚ**—ಸೂತ್ರದಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಾಟ್**—ರಾಜೃ ದೀಪ್ತೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ವ್ರಶ್ಚಭ್ರಸ್ಜ**—(ಪಾ. ಸೂ. ೮-೨-೩೬) ಎಂಬುದರಿಂದ ಪಾದಾಂತದಲ್ಲಿ ಷತ್ವ. ಜಶ್ತ್ವ, ಚರ್ತ್ವ.

**ತುರಃ**—ತುರ ತ್ವರಣೇ. ಧಾತು. ಇಗುಪಧವಾದುದರಿಂದ **ಇಗುಪಧಜ್ಞಾ ಪ್ರೀಕಿರಃ ಕಃ**—(ಪಾ. ಸೂ. ೩-೧-೧೩೫) ಎಂಬುದರಿಂದ ಕಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಶಾಮ್**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀ**—(ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ತಕ್ಷತ್**—**ತಕ್ಷೂ** ತ್ವಕ್ಷೂ ತನೂಕರಣೇ. ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತಸ್ತಂಭತ್**— ಸ್ತಭಿ ಸ್ಕಭಿ ಗತಿಪ್ರತಿಬಂಧೇ. ಧಾತು. ಪ್ರಯೋಜಕ ವ್ಯಾಪಾರ ತೋರುವುದರಿಂದ **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ**—(ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಶರ್ಪೂರ್ವಾಃ ಖಯಃ** (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ತಕಾರಕ್ಕೆ ಶೇಷ. **ಣೇರನಿಟಿ**—(ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ**—ಎಂಬುದರಿಂದ ಅಡಾಗಮ ಬರುವುದಿಲ್ಲ. **ಚಙ್ಯನ್ಯತರಸ್ಯಾಮ್**—(ಪಾ. ಸೂ. ೬-೧-೨೧೮) ಎಂಬುದರಿಂದ ಉಪೋತ್ತಮಕ್ಕೆ ಉದಾತ್ತಸ್ವರ ಬರುತ್ತದೆ. ಪೂರ್ವಪದವು ವಾಕ್ಯಾಂತರಕ್ಕೆ ಸೇರಿರುವುದರಿಂದ ಸಮಾನವಾಕ್ಯದಲ್ಲಿ ಇಲ್ಲದಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಚತುಷ್ಪದೇ**—ಚತ್ವಾರಃ ಪಾದಾಃ ಅಸ್ಯ ಚತುಷ್ಪಾತ್. **ಸಂಖ್ಯಾಸುಪೂರ್ವಸ್ಯ**—(ಪಾ. ಸೂ. ೫-೪-೧೪೦) ಎಂಬುದರಿಂದ ಪಾದಶಬ್ದಕ್ಕೆ ಅಂತ್ಯಲೋಪವು ಸಮಾಸಾಂತವಾಗಿ ಬರುತ್ತದೆ. ಚತುರ್ಥೀಏಕವಚನ (ಙೇ) ಪರವಾದಾಗ ಭಸಂಜ್ಞಾ ಬರುವುದರಿಂದ **ಪಾದಃಪತ್**—(ಪಾ. ಸೂ. ೬-೪-೧೩೦) ಎಂಬುದರಿಂದ ಪಾದ್ ಎಂಬುದಕ್ಕೆ ಪದ್ ಎಂಬ ಆದೇಶ ಬರುತ್ತದೆ.

**ನರ್ಯಾಯ**—ನರಾಯ ಹಿತಮ್ ನರ್ಯಂ. ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ**—ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದ್ವಿಪಾದೇ**—ದ್ವೌ ಪಾದೌ ಯಸ್ಯ ದ್ವಿಪಾತ್. ಹಿಂದಿನಂತೆ ಅಂತ್ಯಲೋಪವು ಸಮಾಸಾಂತವಾಗಿ ಬರುತ್ತದೆ. ಇದಕ್ಕೆ ಚತುರ್ಥಿಯಲ್ಲಿ, ಪದ್ ಭಾವವು ಬರುವುದಿಲ್ಲ. ಇದು ಅಯಸ್ಮಯಾದಿಯಲ್ಲಿ ಸೇರಿರುವುದರಿಂದ ಭಸಂಜ್ಞೆಗೆ ಅಪವಾದವಾಗಿ ಪದಸಂಜ್ಞಾ ಬರುತ್ತದೆ. **ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು ಬಹುವ್ರೀಹೌ**—(ಪಾ. ಸೂ. ೬-೨-೧೯೭) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಅಸ್ಯ ಮದೇ ಸ್ವರ್ಯಂ ದಾ ಋತಾಯಾಪೀವೃತಮುಸ್ರಿಯಾ-
ಣಾಮನೀಕಂ ।
ಯದ್ಧ ಪ್ರಸರ್ಗೇ ತ್ರಿಕಕುಮ್ನಿವರ್ತದಪ ದ್ರುಹೋ ಮಾನು
ಷಸ್ಯ ದುರೋ ವಃ ॥ ೪ ॥

॥ ಪದಪಾಠಃ ॥

ಅಸ್ಯ । ಮದೇ । ಸ್ವರ್ಯಂ । ದಾಃ । ಋತಾಯ । ಅಪಿऽವೃತಂ । ಉಸ್ರಿಯಾಣಾಂ ।
ಅನೀಕಂ ।
ಯತ್ । ಹ । ಪ್ರऽಸರ್ಗೇ । ತ್ರಿऽಕಕುಪ್ । ನಿऽವರ್ತತ್ । ಅಪ । ದ್ರುಹಃ ।
ಮಾನುಷಸ್ಯ । ದುರಃ । ವರಿತಿ ವಃ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ಅಸ್ಯ ಸೋಮಸ್ಯ ಪಾನೇನ ಮದೇ ಹರ್ಷೇ ಸತ್ಯೈ ಋತಾಯ ।ಯಜ್ಞಾರ್ಥಂ ಸ್ವರ್ಯಂ ಸ್ತುತ್ಯಮಪೀವೃತಂ ಪಣಿಭಿರ್ಗುಹಾಸು ನಿಗೂಢಮುಸ್ರಿಯಾಣಾಂ ಗವಾಮನೀಕಂ ಸಂಘಂ ದಾಃ । ಅಂಗಿ-

ರೋಭ್ಯೋ ದತ್ತವಾನಸಿ । ಉತ್ತರಾರ್ಧಃ ಪರೋಕ್ಷಕೃತಃ । ಯದ್ಧ ಯದಾ ಖಲು ಪ್ರಸರ್ಗೇ ಯುದ್ಧೇ ತ್ರಿಕಕುಪ್ ತ್ರಿಷು ಲೋಕೇಷೂಚ್ಛ್ರಿತ ಇಂದ್ರೋ ನಿವರ್ತತ್ ನಿತರಾಂ ವರ್ತೇತ ತದಾನೀಂ ಸ ಇಂದ್ರೋ ದ್ರುಹೋ ದ್ರೋಗ್ಧುರ್ಮಾನುಷಸ್ಯ ಮನೋಃ ಸಂಬಂಧಿನೋಽಸುರಸ್ಯ ಪಣೇಃ ಸಂಬಂಧೀನಿ ದುರೋ ದ್ವಾರಾಣಿ ಗವಾಮನಿರ್ಗಮನಾಯ ಪಿಹಿತಾನ್ಯಪ ವಃ । ಅಪವೃಣೋತಿ । ಉದ್ಘಾಟಯತಿ ॥ ಸ್ವರ್ಯಂ । ಸ್ವೃ ಶಬ್ದೋಪತಾಪಯೋಃ । ಋಹಲೋರ್ಣ್ಯತ್ । ಸಂಜ್ಞಾಪೂರ್ವಕಸ್ಯ ನಿಧೇರನಿತ್ಯತ್ವಾದ್ವೃದ್ಧ್ಯಭಾವಃ । ಅಪೀವೃತಂ । ಅಪಿಪೂರ್ವಾದ್ವೃಣೋತೇಃ ಕರ್ಮಣಿ ನಿಷ್ಠಾ । ನಿಪಾತಸ್ಯ ಚೇತಿ ಪೂರ್ವಪದಸ್ಯ ದೀರ್ಘಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪ್ರಸರ್ಗೇ । ಪ್ರಕರ್ಷೇಣ ಸೃಜ್ಯಂತೇ ವಿಮುಚ್ಯಂತೇಽಸ್ಮಿನ್ನಿಷವ ಇತಿ ಪ್ರಸರ್ಗಃ । ಅಧಿಕರಣೇ ಘಞ್ । ಕೃದುತ್ತರಪದಪ್ರಕೃತಿಸ್ವರತ್ವಂ । ಛಾಂದಸಸ್ಥಾಘಾದಿಸ್ವರಾಭಾವಃ । ನಿವರ್ತತ್ । ವೃತು ವರ್ತನೇ । ಲೇಟ್ಯಡಾಗಮಃ । ವ್ಯತ್ಯಯೇನ ಪರಸ್ಮೈಪದಂ । ವಃ ವೃಞ್ ವರಣೇ । ಛಾಂದಸೇ ಲುಙಃ ಮಂತ್ರೇ ಘಸೇತಿ ಚ್ಲೇರ್ಲುಕ್ । ಗುಣೇ ಹಲ್ಙ್ಯಾದಿಲೋಪಃ ॥

ಪ್ರತಿಪದಾರ್ಥ

**(ಹೇ) ಇಂದ್ರ**—ಎಲೈ ಇಂದ್ರನೇ । **ಅಸ್ಯ**—ಈ ಸೋಮದ (ಪಾನದಿಂದ) । **ಮದೇ**—ಸಂತೋಷವುಂಟಾಗಲು । **ಸ್ವರ್ಯಂ**—ಸ್ತುತ್ಯವಾದ । **ಅಪೀವೃತಂ** - (ಪಣಿನಾಮಕ ಅಸುರನಿಂದ) ನಿಗೂಢವಾಗಿದ್ದ । **ಉಸ್ರಿಯಾಣಾಂ**—ಗೋವುಗಳ । **ಅನೀಕಂ**—ಮಂದೆಯನ್ನು । **ಋತಾಯ**—ಯಜ್ಞಕರ್ಮಗಳಿಗಾಗಿ । **ದಾಃ**—(ಅಂಗಿರಸರಿಗೆ) ದಾನಮಾಡಿದೆ । **ಯತ್ ಹ**—ಯಾವಾಗ । **ಪ್ರಸರ್ಗೇ**—ಯುದ್ಧದಲ್ಲಿ । **ತ್ರಿಕಕುಪ್**—ಮೂರು ಲೋಕಗಳಲ್ಲಿಯೂ ಉಚ್ಛ್ರಿತನಾಗಿ (ಇಂದ್ರನು) । **ನಿವರ್ತತ್**—ಇದ್ದನೋ । **ತದಾ**—ಆಗ (ಇಂದ್ರನು) । **ದ್ರುಹಃ**—ದ್ರೋಹಮಾಡುವ । **ಮಾನುಷಸ್ಯ**—ಮನುಸಂಬಂಧಿಯಾದ (ಪಣಿನಾಮಕ ಅಸುರನ) । **ದುರಃ**—(ಗೋವುಗಳಿಗೆ ಅಡ್ಡಿಯಾಗಿರುವ) ಬಾಗಿಲುಗಳನ್ನು । **ಅಪ ವಃ**—ಒಡೆದು ತೆಗೆಯುತ್ತಾನೆ ।

॥ ಭಾವಾರ್ಥ ॥

ಎಲೈ ಇಂದ್ರನೇ, (ಈ ಸೋಮದ ಪಾನದಿಂದ ತುಷ್ಟನಾಗಿ, (ಪಣಿನಾಮಕ ಅಸುರನಿಂದ) ಮುಚ್ಚಿಡಲ್ಪಟ್ಟಿದ್ದ, ಶ್ರೇಷ್ಠವಾದ ಗೋವುಗಳ ಮಂದೆಯನ್ನೂ, (ಅಂಗಿರಸರ) ಯಾಗಕ್ಕೋಸ್ಕರ (ಬಿಡುಗಡೆ ಮಾಡಿ)ಕೊಟ್ಟೆ-(ಇಂದ್ರನು) ಯುದ್ಧದಲ್ಲಿ ಮೂರುಲೋಕಗಳಲ್ಲಿಯೂ ಅದ್ವಿತೀಯನಾಗಿದ್ದು, ದ್ರೋಹಿಯಾದ ಮನುಸಂಬಂಧಿಯಾದ (ಪಣಿನಾಮಕ ಅಸುರನ ಗೋವುಗಳಿಗೆ ನಿರ್ಬಂಧಕವಾದ) ಬಾಗಿಲುಗಳನ್ನು ಒಡೆಯುತ್ತಾನೆ.

English Translation

In the exhilaration of this Soma juice, you have restored the celebrated herd of cattle, hidden (in the cave ), for the sake of sacrifice, ( to the Angirasas ) : when, Indra, the threefold crest engages in combat, he opens the doors of the tyrannical descendants of Manu ;

ವಿಶೇಷವಿಷಯಗಳು

**ಋತಾಯ—ಯಜ್ಞಾರ್ಥಂ** । **ಋತ** ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಉಕ್ತವಾಗಿರುತ್ತದೆ.

**ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾ ಅಪಿ ಗುರ್ಋತಂ ನಃ ।**

(ಋ. ಸಂ. ೭-೨೧-೫)

**ಸತ್ಯಂ ವಾ ಯಜ್ಞಂ ವಾ** ಎಂದು (ನಿ. ೪-೧೯) ವಿವರಿಸಿರುವುದರಿಂದ ಋತ ಶಬ್ದವು ಇಲ್ಲಿ ಯಜ್ಞ ಎಂಬ ಅರ್ಥವನ್ನು ಬೋಧಿಸುವುದು.

**ಉಸ್ರಿಯಾಣಾಂ—ಗವಾಂ**। ಉಸ್ರಿಯಾ ಪದವು ಒಂಭತ್ತು ಗೋನಾಮಗಳಲ್ಲಿ (ನಿ. ೩-೯) ಪಠಿತವಾಗಿದೆ.

**ಉತ ವಾಂ ವಿಕ್ಷು ಮದ್ಯಾಸ್ವಂಧೋ ಗಾವ ಆಪಶ್ಚ ಪೀಪಯಂತ ದೇವೀಃ ।**
**ಉತೋ ನೋ ಅಸ್ಯ ಪೂರ್ವ್ಯಃ ಪತಿರ್ದನ್ವೀತಂ ಪಾತಂ ಪಯಸ ಉಸ್ರಿಯಾಯಾಃ ॥**

(ಋ. ಸಂ. ೧-೧೫೩-೪)

**ಉಸ್ರಿಯೇತಿ ಗೋನಾಮ । ಉಸ್ರಾವಿಣೋ ಅಸ್ಯಾಂ ಭೋಗಾಃ । ಉಸ್ರೇತಿ ಚ** । ಉಸ್ರಿಯಾ ಎಂಬ ಪದವು ಗೋವಾಚಕವಾಗಿರುವುದೆಂದೂ (ನಿ. ೪-೧೯) ವಿವರಿಸಲ್ಪಟ್ಟಿರುತ್ತದೆ.

ತ್ರಿಕಕುಪ್—ತ್ರಿಷು ಲೋಕೇಷು ಉಚ್ಛ್ರಿತಃ—ಮೂರು ಲೋಕಗಳಲ್ಲಿಯೂ ಇಂದ್ರನು ಶ್ರೇಷ್ಠನ ಎಂದು ಸಾಯಣರು ಮಾಡಿರುವ ವ್ಯಾಖ್ಯಾನಕ್ಕೆ ಆಭಿಜನಂ ಶೌರ್ಯಂ ಯಶಃ ಉತ್ತಮವಾದ ಕುಲದಲ್ಲಿ (ಉತ್ಪತ್ತಿ) ಪರಾಕ್ರಮನ್ನು ಹೊಂದಿರುವಿಕೆ, ಕೀರ್ತಿಯುಳ್ಳವನಾಗಿರುವುದು ಎಂದು ಶ್ರೇಷ್ಠನಾಗಿರುವುದರ ಕಾರಣವನ್ನು ಸ್ಕಂದಸ್ವಾಮಿಗಳು ವಿವರಿಸಿರುವರು

ದ್ರುಹಃ ಮನುಷಸ್ಯ ದುರಃ ಅಪ ವಃ—ಎಂಬ ಈ ವಾಕ್ಯಕ್ಕೆ ಸಾಯಣರೂ ಸ್ಕಂದಸ್ವಾಮಿಗಳೂ ಬೇರೆಯ ವಿಧವಾಗಿ ವ್ಯಾಖ್ಯಾನವನ್ನು ಮಾಡಿರುವರು. ಮನುಷ್ಯರಿಗೆ ದ್ರೋಹಮಾಡುವ ಅಸುರನಾದ ಪಣಿ ಎಂಬವನು ಗೋವುಗಳನ್ನು ಇತರರು ಯಾರೂ ಕಾಣದಂತೆ ಬಚ್ಚಿಟ್ಟಿದ್ದ ಪ್ರದೇಶಗಳನ್ನು ಕಂಡುಹಿಡಿದು ಅವುಗಳನ್ನು ರಕ್ಷಿಸಿ ಅವರವರಿಗೆ ಕೊಟ್ಟನು ಎಂದು ಸಾಯಣರು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು—

**ದ್ರುಹಃ ದ್ರೋಗ್ಧುರ್ಮೇಘಸ್ಯ ಮನುಷ್ಯಜಾತಸ್ಯ ಸರ್ವಸ್ಯ । ಮೇಘೋ ಹ್ಯುದಕಂ ನಿರುಂಧನ್ ಸರ್ವಂ ಮನುಷ್ಯಜಾತಂ ದ್ರೋಗ್ಧಿ । ತಸ್ಯ ದುರಃ ದ್ವಾರಾಣಿ ಉದಕನಿರ್ಗಮನದ್ವಾರಾಣಿ ಅಪಾವೃಣೋತಿ ॥**

ಎಂದು ಹೇಳಿರುವರು. ಎಂದರೆ ಮೇಘವು ಮನುಷ್ಯರೆಲ್ಲರಿಗೂ ದ್ರೋಹಮಾಡುವ ಉದ್ದೇಶದಿಂದ ನೀರೆಲ್ಲವನ್ನೂ ತಡೆದು ಮಳೆಯನ್ನು ಹುಯ್ಯದಿರುವುದು. ಇಂದ್ರನು ಈ ಮೇಘಗಳ ದ್ರೋಹ ಬುದ್ಧಿಯನ್ನು ನಾಶಪಡಿಸಿ ವೃಷ್ಟಿಯು ಆಗುವುದಕ್ಕಾಗಿ ನೀರುಗಳು ಮೇಘಗಳಿಂದ ಬರುವಂತೆ (ಮಾಡುವನು) ನೀರು ಬರುವ ದಾರಿಗಳನ್ನು ತೆರದು ಬಿಡುವನು ಎಂದು ವರ್ಣಿಸಿರುವರು. ಸಾಯಣರು ಈ ಋಕ್ಕಿನ ಉತ್ತರಾರ್ಧವು ಪರೋಕ್ಷಕೃತವೆಂದು ವಿವರಿಸಿರುವರು. ಪ್ರಸರ್ಗ ಶಬ್ದವನ್ನು ಯುದ್ಧಕಾಲವಾಚಿ ಎಂಬರ್ಥದಲ್ಲಿ ಪ್ರಯುಕ್ತವೆಂದು ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು

**ಪ್ರಸರ್ಗ** ಶಬ್ದವು **ಪ್ರಸೃಜ್ಯತೆ ಯಸ್ಮಿನ್ ಸ ಪ್ರಸರ್ಗೋ ದಾನಕಾಲಃ** ಅತಿಶಯವಾಗಿ ದಾನಮಾಡುವ ಕಾಲವೆಂದು ಅರ್ಥಮಾಡಿ **ದಾನಾರ್ಥಂ ಯುಷ್ಮನಭಿಮುಖೋ ಭವತಿ** ಇಂದ್ರನು ದಾನಮಾಡುವ ಕಾಲದಲ್ಲಿ ದಾನಮಾಡುವವನಿಗೆ ಅಭಿಮುಖವಾಗಿ (ಸಿದ್ಧನಾಗಿ) ಬರುವನು ಎಂದು ವರ್ಣಿಸಿರುವರು.

ವ್ಯಾಕರಣಪ್ರಕ್ರಿಯಾ

**ಮದೇ**—ಮದ ತೃಪ್ತಿಯೋಗೇ ಧಾತು. **ಮದೋಽನುಪಸರ್ಗೇ**—(ಪಾ. ಸೂ. ೩-೩-೬೭) ಎಂಬುದರಿಂದ ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಪ್ತಮೀ ಏಕವಚನಾಂತರೂಪ.

**ಸ್ವರ್ಯಮ್**—ಸ್ವೃ ಶಬ್ದೋಪತಾಪಯೋಃ ಧಾತು. **ಋಹಲೋರ್ಣ್ಯತ್**—(ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಸಂಜ್ಞಾಪೂರ್ವಕೋವಿಧಿರನಿತ್ಯಃ**—(ಪರಿ. ೯೫) ಎಂಬ ವಚನದಿಂದ ಪ್ರತ್ಯಯ ಣಿತ್ತಾದರೂ ಅದನ್ನು ನಿಮಿತ್ತೀಕರಿಸಿ ವೃದ್ಧಿ ಬರುವುದಿಲ್ಲ. **ಸಾರ್ವಧಾತುಕಾರ್ಧಧಾತುಕಯೋಃ**—(ಪಾ. ಸೂ. ೭-೩-೮೪) ಎಂಬುದರಿಂದ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. **ತಿತ್‌ಸ್ವರಿತಮ್**—(ಪಾ. ಸೂ. ೬-೧-೧೮೫) ಎಂಬುದರಿಂದ ಪ್ರತ್ಯಯ ತಿತ್ತಾದುದರಿಂದ ಸ್ವರಿತಸ್ವರ ಬರುತ್ತದೆ.

**ದಾಃ**—ಡುದಾಞ್ ದಾನೇ. ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಇತಶ್ಚ—ಸೂತ್ರದಿಂದ ಇಕಾರಲೋಪ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘುಪಾಭೂ**-(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ನಿಘಾತಸ್ವರ ಬರುತ್ತದೆ.

**ಅಪೀವೃತಮ್**—ಅಪಿ ಎಂಬುದು ಉಪಸರ್ಗ. ವೃಞ್‌ವರಣೇ ಧಾತು. ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. ಇದು ಕಿತ್ತಾದುದರಿಂದ ಗುಣ ಬರುವುದಿಲ್ಲ. **ನಿಪಾತಸ್ಯ ಚ**—(ಪಾ. ಸೂ. ೬-೩-೧೩೬) ಎಂಬುದರಿಂದ ಪೂರ್ವದಲ್ಲಿರುವ ಅಪಿಗೆ ದೀರ್ಘ ಬರುತ್ತದೆ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಸಮಾಸವಾದಾಗ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಪ್ರಸರ್ಗೇ**—ಪ್ರಕರ್ಷೇಣ ಸೃಜ್ಯಂತೇ ವಿಮುಚ್ಯಂತೇ ಅಸ್ಮಿನ್ ಇಷವಃ ಇತಿ ಪ್ರಸರ್ಗಃ. ಪ್ರ ಉಪಸರ್ಗ ಸೃಜ ವಿಸರ್ಗೇ. ಧಾತು. ಅಧಿಕರಣಾರ್ಥದಲ್ಲಿ ಘಞ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬರುತ್ತದೆ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ, ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ **ಗತಿಕಾರಕೋ**—(ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. **ಥಾಥಘಞ್**—(ಪಾ. ಸೂ. ೬-೨-೧೪೪) ಎಂಬುದರಿಂದ ಬರಬೇಕಾದ ಸ್ವರವು ಛಾಂದಸವಾಗಿ ಇಲ್ಲಿ ಬರುವುದಿಲ್ಲ.

**ನಿವರ್ತತ್**—ವೃತು ವರ್ತನೇ ಧಾತು. **ವ್ಯತ್ಯಯೋಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋ-**

(ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**—(ಪಾ ಸೂ. ೩-೪-೯೪) ಅಡಾಗಮ ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಋಕಾರಕ್ಕೆ ಗುಣ. ರಪರವಾಗಿ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ವಃ—ವೃಞ್ ವರಣೇ. ಧಾತು. ವರ್ತಮಾನಾರ್ಥ ತೋರುವಾಗ **ಛಂದಸಿ ಲುಙ್ ಲಙ್ ಲಿಟಃ**—(ಪಾ. ಸೂ. ೩-೪-೬) ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ**—ಸೂತ್ರದಿಂದ ಇಕಾರಲೋಪ. **ಮಂತ್ರೇ ಘಸಹ್ವರಣ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ಪ್ರತ್ಯಯವನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಹಲಂತದ ಪರದಲ್ಲಿ ಅಪೃಕ್ತವಾದ ತಿಪಿಗೆ **ಹಲ್ ಙ್ಯಾಭ್ಯೋ**—ಸೂತ್ರದಿಂದ ಲೋಪ. ರೇಫಕ್ಕೆ ವಿಸರ್ಗ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

———— :O: ————

**ಸಂಹಿತಾಪಾಠಃ**

ತುಭ್ಯಂ ಪಯೋ ಯತ್ಪಿತರಾವನೀತಾಂ ರಾಧಃ ಸುರೇತಸ್ತುರಣೇ ಭುರಣ್ಯೂ ।
ಶುಚಿ ಯತ್ತೇ ರೇಕ್ಣ ಆಯಜಂತ ಸಬರ್ದುಘಾಯಾಃ ಪಯ ಉಸ್ರಿಯಾಯಾಃ ॥ ೫ ॥

**ಪದಪಾಠಃ**

ತುಭ್ಯಂ । ಪಯಃ । ಯತ್ । ಪಿತರೌ । ಅನೀತಾಂ । ರಾಧಃ । ಸುಽರೇತಃ । ತುರಣೇ । ಭುರಣ್ಯೂ ಇತಿ ।
ಶುಚಿ । ಯತ್ । ತೇ । ರೇಕ್ಣಃ । ಆ । ಅಯಜಂತ । ಸಬಃಽದುಘಾಯಾಃ । ಪಯಃ । ಉಸ್ರಿಯಾಯಾಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತುರಣೇ ಕ್ಷಿಪ್ರಕಾರಿಣೇ ತುಭ್ಯಂ ಭುರಣ್ಯೂ ಕೃತ್ಸ್ನಂ ಜಗತ್ಪೋಷಯಂತ್ಯೌ ಪಿತರಾವುತ್ಪಾದಯಂತ್ಯೌ ದ್ಯಾವಾಪೃಥಿವ್ಯೌ ಯದ್ಯದಾ ಪಯಃ ಸಾಂನಾಯ್ಯಲಕ್ಷಣಂ ಹವಿರನೀತಾಂ ಗೋಷ್ವನಯತಾಂ । ನ್ಯಧಿಷಾತಾಮಿತ್ಯರ್ಥಃ । ಕೀದೃಶಂ ಪಯಃ । ರಾಧೋ ರಾಧಕಂ ಸಮೃದ್ಧಿಕರಂ ಸುರೇತಃ ಶೋಭನರೇತಸ್ಕಂ । ಕೃತ್ಸ್ನಜಗದುತ್ಪಾದನಶಕ್ತಮಿತ್ಯರ್ಥಃ । ಹವಿಷಃ ಸಕಾಶಾದ್ಧಿ ಜಗದುತ್ಪದ್ಯತೇ । ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ । ಮನು. ೩-೭೬ । ಇತಿ । ಯದ್ಯದಾ ಚ ದ್ಯಾವಾಪೃಥಿವೀಭ್ಯಾಂ ಗೋಷ್ವಾನೀತಂ ಶುಚಿ ಶುದ್ಧಂ ಸಬರ್ದುಘಾಯಾಃ ಕ್ಷೀರಸ್ಯ ದೋಗ್ಧ್ರ್ಯಾ ಉಸ್ರಿಯಾಯಾ ಗೋಃ ಪಯೋ ರೇಕ್ಣಃ । ಧನನಾಮೈತತ್ । ಧನವದತಿಪ್ರಿಯಂ । ಯದ್ವಾ । ಅತಿರಿಕ್ತಂ ಪ್ರವೃದ್ಧಂ । ಏವಂವಿಧಂ ಹವಿಸ್ತುಭ್ಯಮಾಯಜಂತ । ಅಭಿಮುಖ್ಯೇನ ಯಜಮಾನಾಃ ಪ್ರಾಯಚ್ಛನ್ । ತದಾನೀಂ ದ್ರುಹೋ ಮಾನುಷಸ್ಯ ದ್ವಾರಾಣ್ಯಪವೃಣೋತೀತಿ ಪೂರ್ವಯಾ ಸಂಬಂಧಃ । ಅನೀತಾಂ । ಣೀಞ್ ಪ್ರಾಪಣೇ । ಲಙಿ ಬಹುಲಂ ಛಂದಸೀತಿ ಶಪೋ ಲುಕ್। ಸುರೇತಃ । ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ । ತುರಣೇ । ತುರಣ ತ್ವರಾಯಾಂ । ಕಂಡ್ವಾದಿಃ । ಕ್ವಿಷ್ಟೇತಿ ಕ್ವಿಪ್ । ಆತೋಲೋಪಯಲೋಪೌ । ಭುರಣ್ಯೂ । ಭುರಣ ಧಾರಣಪೋಷಣಯೋಃ । ಅಯಮಪಿ ಕಂಡ್ವಾದಿಃ । ಔಣಾದಿಕ ಉಪ್ರತ್ಯಯಃ ॥

ಪ್ರತಿಪದಾರ್ಥ

(ಹೇ, ಇಂದ್ರ— ಎಲೈ ಇಂದ್ರನೇ । ತುರಣೇ— ಕ್ಷಿಪ್ರವಾಗಿ ಕೆಲಸಗಳನ್ನು ಮಾಡುವ । ತುಭ್ಯಂ— ನಿನಗೆ । **ಭುರಣ್ಯೂ**—(ಜಗತ್ತನ್ನು) ಪೋಷಿಸುವ । **ಪಿತರೌ**— ಜನಕರಾದ (ದ್ಯಾವಾಪೃಥಿವಿಗಳು) । **ಯತ್**— ಯಾವಾಗ । **ರಾಧಃ**— ಸಮೃದ್ಧಿಕರವಾದ । **ಸುರೇತಃ**—(ಜಗದುತ್ಪಾದಕವಾದ) ರೇತಸ್ಸುಳ್ಳ । **ಪಯಃ**—(ಸಾನ್ನಾಯ್ಯ ರೂಪವಾದ) ಹವಿಸ್ಸನ್ನು । **ಅನೀತಾಂ**— ತಂದುಕೊಟ್ಟರೋ । **ಯತ್**— ಯಾವಾಗ । **ಸಬರ್ದುಘಾಯಾಃ**— ಹಾಲನ್ನು ಕರೆಯುವ । **ಉಸ್ರಿಯಾಯಾಃ**— ಗೋವಿನ । **ಶುಚಿ**—(ದ್ಯಾವಾಪೃಥಿವಿಗಳಿಂದ ಗೋವುಗಳಲ್ಲಿ ನಿಹಿತವಾದ) ಶುದ್ಧವಾದ । **ರೇಕ್ಣಃ**— ಧನದಂತೆ (ಅತಿಪ್ರಿಯವಾದ, ಹೆಚ್ಚಾದ) । **ಪಯಃ**— ಕ್ಷೀರರೂಪವಾದ (ಹವಿಸ್ಸನ್ನು) । **ತೇ**— ನಿನಗೆ । **ಆ ಅಯಜಂತ**— (ಯಜಮಾನರು) ಅರ್ಪಿಸಿ ಪೂಜಿಸಿದರೋ (ಆಗ ನೀನು ಪಣಿಯಗುಹಾ ದ್ವಾರಗಳನ್ನು ಭೇದಿಸುತ್ತೀಯೆ).

ಭಾವಾರ್ಥ

ಎಲೈ ಇಂದ್ರನೇ, ಕ್ಷಿಪ್ರವಾಗಿ ಕೆಲಸಮಾಡುವ ನಿನಗೆ ಜಗತ್ಪೋಷಕರೂ, ಉತ್ಪಾದಕರೂ ಆದ ದ್ಯಾವಾಪೃಥಿವಿಗಳು, ಸಮೃದ್ಧಿಕರವಾದ ಮತ್ತು (ಜಗದುತ್ಪಾದಕ) ರೇತೋಯುಕ್ತವಾದ (ಸಾನ್ನಾಯ್ಯರೂಪವಾದ) ಹವಿಸ್ಸನ್ನು ತಂದುಕೊಟ್ಟಾಗ ಮತ್ತು (ಯಾಗಕರ್ತೃಗಳಾದ ಯಜಮಾನರು) ಶುದ್ಧವಾದ ಕ್ಷೀರವನ್ನು ಕರೆಯುವ ಗೋಸಂಬಂಧವಾದ ಹವಿಸ್ಸನ್ನು ಹೆಚ್ಚಾಗಿ ಅರ್ಪಿಸಿದಾಗ, (ನೀನು ಪಣಿನಾಮಕ ರಾಕ್ಷಸನ, ಗೋವುಗಳಿಗೆ ಬಂಧಕವಾದ ಬಾಗಿಲುಗಳನ್ನು ಒಡೆದು ತೆಗೆದೆ).

## English Translation

When your parents, ( heaven and earth ), the protectors ( of the world ), brought the nutritious and invigorating oblation to you who are quick in act, and when they offered you the pure and precious milk of the milch-cow.

ವಿಶೇಷ ವಿಷಯಗಳು

ಸಾಯಣರು ಈ ಋಕ್ಕಿನಲ್ಲಿ ವಿವರಿಸಿರುವ ಅರ್ಥಕ್ಕಿಂತಲೂ ಬೇರೆ ವಿಧವಾದ ಅರ್ಥವನ್ನು ಸ್ಕಂದಸ್ವಾಮಿಗಳು ವರ್ಣಿಸಿರುವರು.

**ಭುರಣ್ಯಾ—ಕೃತ್ಸ್ನಂ ಜಗತ್ ಪೋಷಯನ್ತ್ಯೌ** । ಭುರಣ್ಯು ಶಬ್ದವು ಇಪ್ಪತ್ತಾರು ಕ್ಷಿಪ್ರನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದು ಎಂದು ನಿರುಕ್ತವಾಕ್ಯವಿದ್ದರೂ ಜಗತ್ತೆಲ್ಲವನ್ನೂ ಪೋಷಿಸುವವರು ಎಂದು ಸಾಯಣರ ವಿವರಣೆ.

ಕ್ಷಿಪ್ರಕಾರಿಯಾದ ಇಂದ್ರನಿಗೆ ಜಗತ್ತೆಲ್ಲಕ್ಕೂ ಉತ್ಪಾದಕರೂ ಮತ್ತು ಪೋಷಕರೂ ಆಗಿರುವ ದ್ಯಾವಾಪೃಥಿವಿಗಳು ಇಂದ್ರನಿಗೆ ಜಗತ್ತೆಲ್ಲವನ್ನೂ ಉತ್ಪಾದನೆ ಮಾಡಲು ಮುಖ್ಯಸಾಧನವಾದ ಶಕ್ತಿಯನ್ನು ಉಂಟುಮಾಡುವ ಸಾನ್ನಾಯ್ಯವೆಂದು ಪ್ರಸಿದ್ಧವಾದ ಹವಿಸ್ಸನ್ನು ಗೋವುಗಳು ಉಂಟುಮಾಡಿಕೊಡುವಂತೆ ಮಾಡಿರುವರು. ಗೋವುಗಳ ಕ್ಷೀರಾದಿಗಳಿಂದ ಉತ್ಪನ್ನವಾದ ಕ್ಷೀರ, ಮತ್ತು ಆಜ್ಯವೆಂಬ ರೂಪದಲ್ಲಿರುವ ಹವಿಸ್ಸು ಜಗತ್ತಿನ ಉತ್ಪತ್ತಿಸಾಧಕವೆಂದು,

**ಅಗ್ನೌ ಪ್ರಾಸ್ತಾಹುತಿಸ್ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥**
(ಮನುಸ್ಮೃತಿ. ೩-೭೬)

ಮನುಸ್ಮೃತಿಯಲ್ಲಿ ಉಕ್ತವಾಗಿರುತ್ತದೆ. (ಅಗ್ನಿಯಲ್ಲಿ ಅರ್ಪಿಸಿದ ಆಹುತಿಯು ಆದಿತ್ಯನಲ್ಲಿ ಸೇರುವುದು. ಆದಿತ್ಯನಿಂದ ವೃಷ್ಟಿಯೂ, ವೃಷ್ಟಿಯಿಂದ ಅನ್ನವೂ ಅನ್ನದಿಂದ ಪ್ರಜೆಗಳೂ ಉತ್ಪನ್ನರಾಗುವರು. ಎಂದು ಅರ್ಥ) ಈ ಪ್ರಕಾರವಾದ ಹವಿಸ್ಸೆಂಬುವುದು ಗೋವಿನಿಂದ ಉತ್ಪನ್ನವಾಗಿ ದೇವತೆಗಳಿಗೆ ಧನದಂತೆ ಅತಿಪ್ರಿಯವಾಗಿರುವುದು. ಯಜ್ಞಮಾಡುವ ಯಜಮಾನರು ಅರ್ಪಿಸಿದ ಹವಿಸ್ಸನ್ನು ಇಂದ್ರನು ಸ್ವೀಕರಿಸಿ ಮನುಷ್ಯರಿಗೆ ದ್ರೋಹಮಾಡುವವರನ್ನು ನಿಗ್ರಹಮಾಡಿ ರಕ್ಷಿಸುವನು ಎಂದು ಸಾಯಣರು ಅರ್ಥವನ್ನು ವರ್ಣಿಸಿರುವರು.

ಸ್ಕಂದಸ್ವಾಮಿಗಳು—ನಿರುಕ್ತಕಾರರಿಂದ ಪಯಶ್ಶಬ್ದವು (ಅನೇಕಾರ್ಥವುಳ್ಳದ್ದೆಂದು ಉಕ್ತವಾಗಿರುವುದರಿಂದ) ರಾತ್ರಿನಾಮಗಳಲ್ಲಿಯೂ (ನಿ. ೨-೧೮) ಉದಕನಾಮಗಳಲ್ಲಿಯೂ (ನಿ. ೨-೨೪) ಅನ್ನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿ ಇರುವುದು. ರೇತಶ್ಶಬ್ದವು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುವುದು.

**ಭುರಣ್ಯೌ ಕ್ಷಿಪ್ರೇ ಪಿತರೌ ಸರ್ವಸ್ಯ ಪಿತೃಭೂತೇ ದ್ಯಾವಾಪೃಥಿವ್ಯೌ ಸರ್ವಸ್ಯ ಧನಭೂತಂ ಸುರೇತಃ ಪಯಃ ಶೋಭನಮುದಕಂ ತ್ವರಣಾಯ ತುರ್ವಿತ್ರೇ ವಾ ಶತ್ರೂಣಾಂ ತುಭ್ಯಂ ಆ ಯಜಂತ ಅಭಿಮುಖ್ಯೇನ ದತ್ತವಂತಃ । ಪಯ ಇತ್ಯನೇನ ಚೋದಕತ್ವಮುಕ್ತಂ । ಸುರೇತ ಇತ್ಯನೇನ ತು ತಸ್ಯ ಶೋಭನತ್ವಮುಚ್ಯತ ಇತಿ ನಾಸ್ತಿ ಪೌನರುಕ್ತ್ಯಮ್ ।**

ಬಹಳ ಶೀಘ್ರವಾಗಿ ಕೆಲಸವನ್ನು ಮಾಡುತ್ತಿರುವ, ಎಲ್ಲವನ್ನೂ ತಂದೆಯು ರಕ್ಷಿಸುವಂತೆ ಉತ್ಪನ್ನಮಾಡಿ ರಕ್ಷಿಸುವ ದ್ಯಾವಾಪೃಥಿವಿಗಳು ಉತ್ತಮವಾದ ಉದಕವನ್ನು ಶತ್ರುಗಳನ್ನು ಯುದ್ಧಕ್ಕಾಗಿ ತ್ವರೆಪಡಿಸುವ ಇಂದ್ರನಿಗೆ ಹವಿಸ್ಸಿನ ರೂಪದಿಂದ ಅರ್ಪಿಸುವರು. ಸುರೇತಃ ಎಂಬ ಶಬ್ದದಿಂದಲೂ ಪಯಃ ಎಂಬ ಶಬ್ದದಿಂದಲೂ ಉದಕವೇ ಉಕ್ತವಾಗಿದ್ದರೂ ಸು ಎಂದರೆ ಶೋಭನ ಎಂಬ ವಿಶೇಷಣವನ್ನು ಇಲ್ಲಿ ಹೇಳಿರುವುದರಿಂದ ಪುನರುಕ್ತದೋಷವು ಉಂಟಾಗಲು ಅವಕಾಶವಿಲ್ಲವು. ಈ ಪ್ರಕಾರದಿಂದ ಇರುವ ಹವಿಸ್ಸಿನ ರೂಪವಾದ ಇದು **ಶುಚಿ—ಶುದ್ಧಂ ಶೇ ರೇಕ್ಣಃ ಧನಭೂತಂ** ಶುದ್ಧವಾಗಿರುವುದು. ಮತ್ತು ದೇವತೆಗಳಿಗೆ ಧನರೂಪದಿಂದ ಇರುವುದು. ಮತ್ತು.

**ಪ್ರಜಾಪತಿಪ್ರಭೃತಯಃ ಸರ್ವೇ ದೇವಾಃ ಸಬರ್ದುಘಾಯಾಃ ಅಮೃತಮಯದೋಗ್ಧ್ರ್ಯಾಃ ಉಸ್ರಿಯಾಯಾಃ ಗೋಃ ಕ್ಷೀರಂ ತುಭ್ಯಂ ತವ ಪಾನಾರ್ಥಂ ದತ್ತವಂತಃ ।**

ಪ್ರಜಾಪತಿಯೇ ಮೊದಲಾದ ದೇವತೆಗಳೆಲ್ಲರೂ ಅಮೃತಮಯವಾದ ಹಾಲನ್ನು ಹಿಂಡುವ ಗೋವಿನ ಕ್ಷೀರವನ್ನು ಇಂದ್ರನ ಪಾನಕ್ಕಾಗಿ ಅರ್ಪಿಸುವರೆಂದು ವ್ಯಾಖ್ಯಾನಮಾಡಿರುವರು. ಮತ್ತು—

ಅಥವಾ ಏವಮನ್ಯಥಾ ಅಸ್ಯಾ ಋಚೋ ಅರ್ಥಯೋಜನಾ । ತುಭ್ಯಂ ಪಯ ಇತ್ಯತ್ರ ದಧಿ ಉಚ್ಯತೇ । ಪಿತರಾವಪಿ ಸ್ವೇಷಾಂ ಅಪತ್ಯಾನಾಂ ಪಿತೃತ್ವಾತ್ ಪಾಲಯಿತೃತ್ವಾದ್ವಾ ದಂಪತೀ ಯಜಮಾನೌ ದರ್ಶಪೂರ್ಣಮಾಸಯೋರ್ಯದ್ದಧಿ ಯಜಮಾನೌ ವೇದಿಂ ಪ್ರತಿ ನಯೇತ ತತ್ತ್ವಾರ್ಥಾಯ । ಯಚ್ಚ ಧನಂ ಪುರೋಡಾಶಾಖ್ಯಂ ಶೋಭನಂ ಪ್ರಣೀತಾಲಕ್ಷಣಂ ಸಂಸ್ಕಾರಕಮುದಕಂ ಯಸ್ಯ ತತ್ ಸುರೇತಃ ಯಚ್ಚ ತೇ ತುಭ್ಯ ಮಾಯಜಂತ। ಮರ್ಯಾದಯಾ ದದತ್ಯೃತ್ವಿಜಃ ಪಯಃ ಉಸ್ರಿಯಾಯಾಃ ತದಪಿ ತವೈವಾರ್ಥಾಯ ।

ಅಥವಾ ಎಂಬುದಾಗಿ ಈ ಋಕ್ಕಿಗೆ ಇನ್ನೊಂದು ವಿಧವಾದ ಅರ್ಥವನ್ನು ವಿವರಿಸಿರುವರು. ತುಭ್ಯಂ ಪಯಃ ಎಂಬಲ್ಲಿ ಪಯಶ್ಶಬ್ದಕ್ಕೆ ದಧಿ (ಮೊಸರು) ಎಂದು ಅರ್ಥವು. ಪಿತೃಶಬ್ದದಿಂದ ಮಕ್ಕಳನ್ನು ಉತ್ಪನ್ನಮಾಡಿ ರಕ್ಷಣೆಮಾಡುವ ದಂಪತಿಗಳು ಉಕ್ತರಾಗಿರುವರು. ಇವರು ಯಜ್ಞವನ್ನು ಮಾಡುವ ಯಜಮಾನರಾಗಿ ದರ್ಶಪೂರ್ಣಮಾಸಯಾಗದಲ್ಲಿ ಯಜ್ಞವೇದಿಯಲ್ಲಿರುವ ಅಗ್ನಿಯಲ್ಲಿ ಇಂದ್ರನಿಗಾಗಿಯೇ (ದಧಿ) ಮೊಸರನ್ನು ಹೋಮಮಾಡುವರು. ಪುರೋಡಾಶವೆಂದು ಹೆಸರುಳ್ಳ ಹವಿಸ್ಸನ್ನು ದೇವತೆಗಳಿಗೆ ಧನದಂತೆ ಪ್ರೀತಿಪಾತ್ರವೆಂದು ತಿಳಿದು ಇಂದ್ರನಿಗಾಗಿಯೇ ಹೋಮಮಾಡುವರು. ಇದರಂತೆಯೇ ಪ್ರಣೀತಾ ಎಂಬ ಪಾತ್ರೆಗಳಿಂದ ಸಂಸ್ಕಾರ ಮಾಡಲ್ಪಟ್ಟಿರುವ ಸುರೇತಶ್ಶಬ್ದವಾಚವಾದ ಉದಕವನ್ನು ಋತ್ವಿಕ್ ಜನಗಳು (ನಿನಗಾಗಿ) ಇಂದ್ರನಿಗಾಗಿಯೇ ಅರ್ಪಿಸುವರು. ಗೌರವದಿಂದ ಅಮೃತಮಯವಾಗಿರುವ ಗೋಕ್ಷೀರವನ್ನು ಅಗ್ನಿಯಲ್ಲಿ ಇಂದ್ರನಿಗಾಗಿಯೇ ಹೋಮಮಾಡುವರು ಎಂದು ವಿವರಿಸಿರು

ವರು. ಇಂದ್ರನೂ ಇದನ್ನು ಪರಿಗ್ರಹಿಸಿ ಶಿಷ್ಟರನ್ನು ಬಾಧೆಮಾಡುವ ಅಸುರರೇ ಮೊದಲಾದವರನ್ನು ನಿಗ್ರಹ ಮಾಡುವನು ಎಂದೂ, ಅಸುರರು ಅಪಹರಿಸುವ ಮತ್ತು ಅವರು ಬಚ್ಚಿಟ್ಟಿರುವ ದುರ್ಗಮವಾದ ಧನದ ಪ್ರದೇಶಗಳನ್ನು ಇಂದ್ರನು ಕಂಡುಹಿಡಿದು ಅವರನ್ನು ನಾಶಪಡಿಸುವನು ಎಂದು ಇಲ್ಲಿ ವರ್ಣಿಸಿದೆ ಎಂದು ವ್ಯಾಖ್ಯಾನಮಾಡಿರುವರು.

### ವ್ಯಾಕರಣಪ್ರಕ್ರಿಯಾ

**ಅನೀತಾಮ್**—ಣೀಞ್ ಪ್ರಾಪಣೇ. ಧಾತು. ಲಙ್ ಪ್ರಥಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥಮಿಪಾಂ**—ಎಂಬುದರಿಂದ ತಾಮಾದೇಶ. **ಬಹುಲಂ ಛಂದಸಿ**—ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್**—ಸೂತ್ರದಿಂದ ಪ್ರತ್ಯಯಕ್ಕೆ ಙಿತ್ವ ಬರುವುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸುರೇತಃ**—ಶೋಭನಂ ರೇತಃ ಯಸ್ಯ. **ಸೋರ್ಮನಸೀ ಅಲೋಮೋಷಸೀ**–(ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ತುರಣೇ**—ತುರಣ ತ್ವರಾಯಾಂ ಧಾತು. ಕಂಡ್ವಾದಿ. **ಕ್ವಿಪ್ ಚ**—(ಪಾ. ಸೂ. ೩–೨-೭೬) ಎಂಬುದರಿಂದ ಇದಕ್ಕೆ ಕ್ವಿಪ್. **ಕಂಡ್ವಾದಿಭ್ಯೋ ಯಕ್**—(ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಬಂದಾಗ **ಅತೋಲೋಪಃ**—(ಪಾ. ಸೂ. ೬–೪–೪೮) ಎಂಬುದರಿಂದ ಅದರ ಅಕಾರಕ್ಕೆ ಲೋಪ. **ಯಸ್ಯಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಕಾರಕ್ಕೆ ಲೋಪ. **ಧಾತೋಃ** (ಪಾ. ಸೂ. ೬-೧-೧೬೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಭುರಣ್ಯುಃ**—ಭುರಣ ಧಾರಣಪೋಷಣಯೋಃ ಧಾತು. ಇದೂ ಕಂಡ್ವಾದಿಯಲ್ಲಿ ಪಠಿತವಾಗಿದೆ. ಇದಕ್ಕೆ ಔಣಾದಿಕವಾದ ಉ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾದ್ವಿವಚನಾಂತರೂಪ.

**ಅಯಜಂತ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಲಙ್ ಪ್ರಥಮಪುರುಷಬಹುವಚನದಲ್ಲಿ ಝ ಪ್ರತ್ಯಯ. ಅದಕ್ಕೆ ಅಂತಾದೇಶ. ಶಪ್ ವಿಕರಣ. ಅಂಗಕ್ಕೆ ಅಡಾಗಮ. ಯತ್ ಎಂದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ಅಧ ಪ್ರ ಜಜ್ಞೇ ತರಣಿರ್ಮಮತ್ತು ಪ್ರರೋಚ್ಯಸ್ಯಾ ಉಷಸೋ
ನ ಸೂರಃ ।
ಇಂದುರ್ಯೇಭಿರಾಷ್ಟ ಸ್ವೇದುಹವ್ಯೈಃ ಸ್ರುವೇಣ ಸಿಂಚಞ್ಜರಣಾ-
ಭಿ ಧಾಮ ॥ ೬ ॥

ಪದಪಾಠಃ

ಅಧ । ಪ್ರ । ಜಜ್ಞೇ । ತರಣಿಃ । ಮಮತ್ತು । ಪ್ರ । ರೋಚಿ । ಅಸ್ಯಾಃ । ಉಷಸಃ ।
ನ । ಸೂರಃ ।
ಇಂದುಃ । ಯೇಭಿಃ । ಆಷ್ಟ । ಸ್ವಽಇದುಹವ್ಯೈಃ । ಸ್ರುವೇಣ । ಸಿಂಚನ್ । ಜರ-
ಣಾ । ಅಭಿ । ಧಾಮ ॥ ೬ ॥

ಸಾಯಣಭಾಷ್ಯಂ

ಅಥೇದಾನೀಮಯಮಿಂದ್ರಃ ಸ್ತುತಿಭಿಃ ಪ್ರೀಯಮಾಣಃ ಸನ್ ಪ್ರ ಜಜ್ಞೇ । ಪ್ರಕರ್ಷೇಣ ಪ್ರಾದುರ್ಬಭೂವ । ಸ ತರಣಿಃ ಶತ್ರೂಣಾಂ ತಾರಕೋಽಸ್ಮಾನ್ಮಮತ್ತು । ಮಾದಯತು । ಸ ಚ ಪ್ರ ರೋಚಿ ಪ್ರಕೃಷ್ಟಂ ರೋಚತೇ । ತತ್ರ ದೃಷ್ಟಾಂತಃ । ಅಸ್ಯಾ ಅಸ್ಮಾಭಿರ್ದೃಶ್ಯಮಾನಾಯಾ ಉಷಸಃ ಸಮೀಪೇ ವರ್ತಮಾನಃ ಸೂರೋ ನ ಸೂರ್ಯ ಇವ । ಜರಣಾ ಜರಣೀಯಃ ಸ್ತೋತವ್ಯ ಇಂದುಃ ಸೋಮೋ ಧಾಮಾಹವನೀಯಲಕ್ಷಣಂ ಸ್ಥಾನಮಭಿಲಕ್ಷ್ಯ ಸ್ರುವೇಣ ಸಿಂಚನ್ ಸಿಚ್ಯಮಾನಃ ಸನ್ ಸ್ವೇದುಹವ್ಯೈಃ ಸ್ವಭೂತಸಮೃದ್ಧಹವಿಷ್ಕೈರ್ಯೇಭಿರ್ಯೈರಸ್ಮಾಭಿರಾಷ್ಟ ಆಶಿತ ಆಸೀತ್ । ತಾನಸ್ಮಾನ್ಮಾದಯತ್ವಿತ್ಯರ್ಥಃ । ಜಜ್ಞೇ । ಜನೀ ಪ್ರಾದುರ್ಭಾವೇ । ಲಿಟಿ ಗಮಹನೇತ್ಯುಪಧಾಲೋಪಃ । ಮಮತ್ತು । ಮದೀ ಹರ್ಷೇ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ರೋಚಿ । ರುಚ ದೀಪ್ತೌ । ಛಾಂದಸೋ ವರ್ತಮಾನೇ ಲುಙ್ । ವ್ಯತ್ಯಯೇನ ಚ್ಲೇಶ್ಚಿಣಾದೇಶಃ । ಆಷ್ಟ । ಅಶ ಭೋಜನೇ । ಕರ್ಮಣಿ ಲಙ' ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವ್ರಶ್ಚಾದಿಷತ್ವೇ ಷ್ಟುತ್ವಂ । ಆಡಾಗಮಃ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ।

ಸ್ವೇದುಹವ್ಯೈಃ । ಇದಿ ಪರಮೈಶ್ವರ್ಯೇ । ಔಣಾದಿಕ ಉಪ್ರತ್ಯಯಃ । ಅನಿತ್ಯಮಾಗಮಶಾಸನಮಿತಿ ನುಮಭಾವಃ । ಇದೂನಿ ಪ್ರಭೂತಾನಿ ಚ ತಾನಿ ಹವ್ಯಾನಿ ಸ್ವಭೂತಾನಿ ಚ ಹವ್ಯಾನಿ ಯೇಷಾಂ । ಯದ್ವಾ । ಞಿಇಂಧೀ ದೀಪ್ತೌ । ಸ್ವಾಯತ್ತಾನೀಂದೂನೀದ್ಧಾನಿ ಹವ್ಯಾನಿ ಯೇಷಾಂ । ಅಥವಾ । ಸ್ವಭೂತಮಿದಂ ಪುರೋವರ್ತಿ ಹವ್ಯಂ ಹವಿರ್ಯೇಷಾಂ ತೇ ತಥೋಕ್ತಾಃ । ಪೃಷೋದರಾದಿತ್ವಾದಭಿಮತರೂಪಸಿದ್ಧಿಃ । ಸಿಂಚನ್ । ಷಿಚಿರ್ ಕ್ಷರಣೇ । ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ । ಶೇ ಮುಚಾದೀನಾಮಿತಿ ನುಮ್ । ಜರಣಾ । ಜರತಿಃ ಸ್ತುತಿಕರ್ಮಾ । ಅಸ್ಮಾತ್ಕರ್ಮಣಿ ಲ್ಯುಟ್ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ವ್ಯತ್ಯಯೇನ ಲಿತ್ಸ್ವರಾಭಾವಃ ॥

ಪ್ರತಿಪದಾರ್ಥ

ಅಧ—ಈಗ (ಸ್ತುತಿಗಳಿಂದ ಪ್ರೀತನಾಗಿ ಇಂದ್ರನು) । ಪ್ರ ಜಜ್ಞೇ—ಪ್ರಾದುರ್ಭವಿಸಿದನು । ಜರಣಾ—ಸ್ತುತ್ಯವಾದ (ಶ್ರೇಷ್ಠವಾದ) । ಇಂದುಃ—ಸೋಮರಸವು । ಧಾಮ ಅಭಿ—ಆಹವನೀಯ ಸ್ಥಾನದಲ್ಲಿ । ಸ್ರುವೇಣ-ಸ್ರುವದಿಂದ । ಸಿಂಚನ್—ಚುಮುಕಿಸಲ್ಪಟ್ಟು । ಸ್ವೇದುಹವ್ಯೈಃ—ಸ್ವಕೀಯವಾದ ಮತ್ತು ಸಮೃದ್ಧವಾದ ಹವಿಸ್ಸುಳ್ಳ । ಯೇಭಿಃ—ಯಾವ ನಮ್ಮಿಂದ । ಆಷ್ಟ—ಸೇವಿಸಲ್ಪಟ್ಟಿತೋ । ತಾಕ್—ಅಂತಹ ನಮ್ಮನ್ನು । ತರಣಿಃ—ಶತ್ರುಭೇದಕನಾದ ಇಂದ್ರನು । ಮಮತ್ತು—ತುಷ್ಟರನ್ನಾಗಿ ಮಾಡಲಿ । ಅಸ್ಯಾಃ—ಈ (ನಮ್ಮಿಂದ ಪರಿದೃಶ್ಯಮಾನವಾದ) । ಉಷಸಃ—ಉಷಸ್ಸಿನ (ಸಮೀಪವರ್ತಿಯಾದ)। ಸೂರೋ ನ—ಸೂರ್ಯನಂತೆ (ಇಂದ್ರನು) । ಪ್ರ ರೋಚಿ-ವಿಶೇಷವಾಗಿ ಪ್ರಕಾಶಿಸುತ್ತಾನೆ.

ಭಾವಾರ್ಥ

ಈಗ (ನಮ್ಮ ಸ್ತುತಿಗಳಿಂದ ಪ್ರೀತನಾದ ಇಂದ್ರನು) ಪ್ರಕಟನಾದನು. ಹವಿಸ್ಸನ್ನು ಸಮೃದ್ಧಿಯಾಗಿ (ಸಿದ್ಧಪಡಿಸಿಟ್ಟುಕೊಂಡಿರುವ) ನಾವು ಶ್ರೇಷ್ಠವಾದ ಸೋಮರಸವನ್ನು (ಆಹವನೀಯಾಗ್ನಿಯ) ಸ್ಥಾನದಲ್ಲಿ ಚುಮುಕಿಸಿ, ಸೇವಿಸಿದ (ನಂತರ), ಉಷಸ್ಸಿನ ಸಮೀಪವರ್ತಿಯಾದ ಸೂರ್ಯನಂತೆ ಪ್ರಕಾಶಿಸುವ ಇಂದ್ರನು ನಮಗೆ ಸಂತೋಷವನ್ನುಂಟುಮಾಡಲಿ.

English Translation

Now is Indra manifested ; may he, the overcomer ( of his foes ), grant us happiness, he, who shines brightly, like the sun of this dawn : may the excellent Soma, being sprinkled upon the place of sacrifice with a ladle, ( exhilarate us ), by whom, presenting the oblations we had prepared, it was imbibed.

ವಿಶೇಷ ವಿಷಯಗಳು

ಸ್ವೇದುಹವ್ಯೈಃ—ಇದೂನಿ ಪ್ರಭೂತಾನಿ ಚ ತಾನಿ ಹವ್ಯಾನಿ ಸ್ವಭೂತಾನಿ ಚ ಹವ್ಯಾನಿ ಯೇಷಾಂ। ಯದ್ವಾ ಞಿಇಂಧೀ ದೀಪ್ತೌ ಸ್ವಾಯತ್ತಾನಿ ಇಂದೂನಿ ಇದ್ಧಾನಿ ಹವ್ಯಾನಿ ಯೇಷಾಂ । ಅಥವಾ ಸ್ವಭೂತಮಿದಂ ಪುರೋವರ್ತಿ ಹವ್ಯಂ ಹವಿಃ ಯೇಷಾಂ ತೇ ತಥೋಕ್ತಾಃ ॥ ಅತಿಶಯವಾಗಿರುವ ಮತ್ತು ಯಜಮಾನ

ರಿಂದ ಆತ್ಮೀಯವಾಗಿರುವ ಹವಿಸ್ಸುಗಳಿಂದ ಎಂದು ಅರ್ಥ | ಅಥವಾ ಪ್ರಕಾಶವೆಂದು ಅರ್ಥವುಳ್ಳ ಇಂಧೀ ಎಂಬ ಧಾತುವಿನಿಂದ ಇಂದು ಶಬ್ದವು ನಿಷ್ಪನ್ನವಾಗಿ ಕಾಂತಿಯುಳ್ಳದ್ದೆಂಬ ಅರ್ಥವನ್ನು ಬೋಧಿಸುವುದು. ಹವಿಸ್ಸುಗಳು ಆಯಾಯು ಯಾಗಗಳಲ್ಲಿ ಆಯಾಯ ಮಂತ್ರಗಳಿಂದ ಸಂಸ್ಕೃತಗಳಾಗಿರುವವು ಎಂದು ಅರ್ಥ. ಅಥವಾ ಯಜ್ಞದಲ್ಲಿ ಯಜ್ಞವೇದಿಯಲ್ಲಿ ಆಯಾಯ ಮಂತ್ರಗಳಿಂದ ಸಂಸ್ಕೃತಗಳಾಗಿ ಆಯಾಯ ದೇವತೆಗಳ ಉದ್ದೇಶವಾಗಿ ಸಿದ್ಧಮಾಡಿ ರುವಕಾರಣ ಹವಿಸ್ಸುಗಳನ್ನು ಉಳ್ಳವರೆಂದು ಅರ್ಥ. ಈ ಪದವನ್ನು (ಋತ್ವಿಜರಿಗೆ) ಯಜ್ಞಮಾಡುವ ಯಜಮಾನರಿಗೆ ವಿಶೇಷಣವಾಗಿ ಸಾಯಣರು ಅನ್ವಯವನ್ನು ಹೇಳಿ ಮೂರುವಿಧವಾದ ಅರ್ಥವನ್ನು ವಿವರಿಸಿರುತ್ತಾರೆ. ಸ್ವಭೂತ ಸಮೃದ್ಧಹವಿಷ್ಕೈಃ ಎಂದು ಅರ್ಥಮಾಡಿರುವರು. ಸ್ವಭೂತ—ದೇವತೆಯ ಉದ್ದೇಶದಿಂದ ಸಿದ್ಧಮಾಡಿದ, ಸಮೃದ್ಧ ವಾದ ಬಹಳವಾದ ಮತ್ತು ಕಾಂತಿಯುಳ್ಳದ್ದಾದ ಹವಿಸ್ಸುಗಳನ್ನು ಯಜಮಾನರು ಹೊಂದಿ ಇರುವರು ಎಂದು ಅರ್ಥ ಸ್ಕಂದಸ್ವಾಮಿಗಳು **ಸ್ವೇದುಹವ್ಯೈಃ—ಸ್ವೇಂದುಹವ್ಯೈಃ ನಕಾರಲೋಪಶ್ಛಾಂದಸಃ ಸ್ವಾ ಇಂದುಹವ್ಯಾ ಯೇಷಾಂ ತೇ ಸ್ವೇಂದುಹವ್ಯಾಃ ಸ್ವೈಃ ಸೋಮೈಃ ದೇವಾನಾಂ ಯಷ್ಟಾರಃ** ಸಾಯಣರು | ಹೇಳಿರುವಂತೆಯೇ ಯಜ್ಞಮಾಡುವ ಯಜಮಾನರಿಗೆ ಈ ಪದವನ್ನು ವಿಶೇಷಣಮಾಡಿ ಸ್ವ, ಇದು, ಹವ್ಯ, ಎಂಬ ಮೂರು ಪದಗಳಲ್ಲಿ ಇದು ಶಬ್ದವು ಇಂದು ಎಂದು ಸೋಮರಸವಾಚಕವಾಗಿರುವುದು. ನಕಾರವು ವೇದಪ್ರಯೋಗದಿಂದ ಲುಪ್ತವಾಗಿರುವುದು. ಸ್ವ ಶಬ್ದಕ್ಕೆ ಉದ್ದಿಷ್ಟನಾಗಿರುವ ಆಯಾಯ ದೇವತೆಗಾಗಿ ಸಿದ್ಧಮಾಡಿರುವುದು ಎಂದು ಅರ್ಥಮಾಡಿ, ಆಯಾಯ ದೇವತೆಗಳ ಉದ್ದೇಶದಿಂದ ಸಿದ್ಧಪಡಿಸಿದ ಸೋಮರಸವನ್ನು ಹವಿಸ್ಸನ್ನಾಗಿ ಹೊಂದಿ ಇರುವ ಯಜಮಾನರು ಅದನ್ನು ಅಗ್ನಿಯಲ್ಲಿ ಹೋಮಮಾಡುವರೆಂದು ಅರ್ಥವನ್ನು ವಿವರಿಸಿರುವರು. ಮತ್ತು **ಇಂದ್ರಸ್ಯ ಸಖಾಯಃ ಅಂಗಿರಸಃ ತೈಃ ಸ್ವೇಂದುಹವ್ಯೈಃ** | ಇಂದ್ರನ ಸ್ನೇಹಿತರಾದ ಅಂಗಿರಸ್ಸುಗಳೆಂತಲೂ ಅವರು ಸೋಮಗಳಿಂದ ಹೋಮ ಮಾಡುವಕಾರಣ ಸ್ವೇಂದುಹವ್ಯರೆಂದೂ ಯಜಮಾನರಿಗೆ ವಿಶೇಷಣವಾಗಿ ವರ್ಣಿಸಿದೆ.

**ತರಣಿಃ--ಶತ್ರೂಣಾಂ ತಾರಕಃ** | ಶತ್ರುಗಳನ್ನು ನಾಶಮಾಡಿ ವಿಪತ್ತುಗಳಿಂದ ರಕ್ಷಿಸುವವನೆಂದು ಅರ್ಥ.

**ಅಸ್ಯಾಃ ಉಷಸೋ ನ ಸೂರಃ--ಅಸ್ಮಾಭಿಃ ದೃಶ್ಯಮಾನಾಯಾಃ ಉಷಸಃ ಸಮೀಪೇ ವರ್ತಮಾನಃ ಸೂರ್ಯ ಇವ** | ನಾವುಗಳು ಪ್ರತ್ಯಕ್ಷವಾಗಿ ಕಾಣುವ ಉಷಸ್ಸನ್ನು ಅನುಸರಿಸಿ ಇರುವ ಸೂರ್ಯನ ಹಾಗೆ ಇಂದ್ರನು ಸೋಮವನ್ನು ಅನುಸರಿಸಿ ಇರುವನು ಎಂದು ಸಾಯಣರು ವಿವರಿಸಿರುವರು. ಸ್ಕಂದಸ್ವಾಮಿಗಳು ಹೀಗೆಯೇ ಉಪಮಾನ ರೀತಿಯಿಂದ ಅರ್ಥವನ್ನು ಹೇಳಿ—**ನಶಬ್ದೋತ್ರ ಪುರಸ್ತಾದುಪಚಾರೋಪಿ ಉಪಮಾರ್ಥೀಯಃ ಸೂರ್ಯಸ್ಯೋಽಷಸಃ ಪುತ್ರತ್ವೇನ ಸಂಬಂಧಃ "ರುಶದ್ವತ್ಸಾರುಶತೀ ಶ್ವೇತ್ಯಾಗಾತ್"** (ಋ.ಸಂ ೧-೧೧೩-೨) **ಇತ್ಯತ್ರೋಕ್ತಃ** ನ ಎಂಬ ಪದವು ಉಪಚಾರದ ರೀತಿಯಿಂದ ಇರುವ ಅರ್ಥವನ್ನು ಬೋಧಿಸುವುದಾದರೂ ಉಪಮಾವಾಚಕ ವಾಗಿ ಇರುವುದು. ಸೂರ್ಯನಿಗೂ ಉಷಸ್ಸಿಗೂ ಜನ್ಯಜನಕರೂಪವಾದ ಸಂಬಂಧವು ಇರುವುದು ಎಂದು " ರುಶದ್ವತ್ಸಾ " ಎಂಬ ಋಕ್ಕಿನಿಂದ ಹೇಳಲ್ಪಡುವುದು ಎಂದು ಅಧಿಕವಾದ ಅಂಶವನ್ನು ವಿವರಿಸಿರುತ್ತಾರೆ.

**ಇಂದುಃ--ಸೋಮಃ** ಸೋಮಲತೆಯರಸವು ಎಂದು ಅರ್ಥ. ಇಂದು ಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) ಯಜ್ಞನಾಮಗಳಲ್ಲಿಯೂ (ನಿ. ೩-೯೮) ಉಕ್ತವಾಗಿದೆ. **ಇಂದು ಇಂಧೇರುನತ್ತೇರ್ವಾ ಇಂಧೇರ್ದೀಪ್ತ್ಯರ್ಥಸ್ಯ ಉನತ್ತೇಃ ಕ್ಲೇದನಾರ್ಥಸ್ಯ.** (ನಿ. ೧೦-೪೨) ಕಾಂತಿ ಎಂಬ ಅರ್ಥವುಳ್ಳ ಇಂಧಿ ಎಂಬ

ಧಾತುವಿನಿಂದಲೂ, ಕ್ಲೇದನಂ ಸ್ರವಿಸುವುದು ಎಂಬ ಅರ್ಥವುಳ್ಳ ಊಞ್ ಧಾತುವಿನಿಂದಲೂ ಇಂದು ಎಂಬ ಶಬ್ದವು ನಿಷ್ಪನ್ನವಾಗಿರುತ್ತದೆ. ಚಂದ್ರ ಅಥವಾ ಸೋಮಲತೆ ಎಂದು ಎರಡುವಿಧವಾದ ಅರ್ಥ. ಸ್ಕಂದ ಸ್ವಾಮಿಗಳು--

> **ಏಕವಾಕ್ಯತಾಪ್ರಸಿದ್ಧ್ಯರ್ಥಂ ಯತ್ತಚ್ಛಬ್ದಾವಧ್ಯಾಹಾರ್ಯೌ--ಯಃ ವೃತ್ರವಧಾದಿಷು ಯಶಸಾ ಶೌರ್ಯೇಣ ಚ ಪರಿವೃದ್ಧಃ ಯಶ್ಚ ಪ್ರಕರ್ಷೇಣ ಅಮಾದ್ಯತ್ ಯಶ್ಚ ಪ್ರಕರ್ಷೇಣ ಯೋಥಾಯೆ ಮಸ್ಯಾ ಉಷಸಃ ಸಂಬಂಧೀ ಸೂರ್ಯಃ ತದ್ವತ್ ದೀಪ್ಯತೇ ಯೈಃ ಅಪ್ತಾ ಯೋಯೈರ್ದೇವೈ-ಸ್ಸಹ ಸೋಮಂ ಪಿಬತಿ ಸ್ತೂಯತೇ ಚ ತೈಃ ಸ್ವಸಖಿಭಿರಂಗಿರೋಭಿಃ ಸಹ ತೃಪ್ಯತು ॥**

ಎಂದು ಹೇಳಿರುವರು. ಎಂದರೆ, ಈ ಋಕ್ಕಿನ ಅರ್ಥವನ್ನು ವಿವರಿಸುವುದಕ್ಕಾಗಿ ಯತ್ ತತ್ ಎಂಬ ಶಬ್ದಗಳನ್ನು ಸೇರಿಸಿ ಕೊಳ್ಳಬೇಕು. ಇಂದ್ರನು ವೃತ್ರನವಧೆಯೇ ಮೊದಲಾದುವುಗಳನ್ನು ಆಚರಿಸಿ ಕೀರ್ತಿ ಪರಾಕ್ರಮ ಇವುಗಳಿಂದ ವೃದ್ಧಿಯನ್ನು ಹೊಂದಿರುವನು. ಯಜ್ಞಗಳಲ್ಲಿ ಹವಿರ್ಭಾಗಗಳಿಂದಲೂ ಬಹಳವಾಗಿ ಮದಿಸಿರುವನು. ಉಷಸ್ಸಿಗೆ ಸಂಬಂಧಪಟ್ಟಿರುವ ಸೂರ್ಯನ ಹಾಗೆ ಸೋಮನ ಸಮೀಪದಲ್ಲಿ ಅತಿಶಯವಾಗಿ ಹೊಳೆಯುತ್ತಿರುವನು. ದೇವತೆ ಗಳೊಡನೆ ಇರುತ್ತಾ ದೇವತೆಗಳೆಲ್ಲರಲ್ಲಿಯೂ ವ್ಯಾಪಿಸಿರುವನು. ಸೋಮರಸವನ್ನು ಆಯಾಯ ದೇವತೆಗಳೊಡನೆ ಪಾನಮಾಡುತ್ತಿರುವನು ಮತ್ತು ಆಯಾಯ ದೇವತೆಗಳಿಂದ ಸ್ತುತಿಸಲ್ಪಡುವನು ಎಂದು ಇಂದ್ರನ ಸ್ವರೂಪ, ಗುಣ, ಕಾರ್ಯ ಇವುಗಳನ್ನು ಇಲ್ಲಿ ವರ್ಣಿಸಿದೆ ಎಂದು ವ್ಯಾಖ್ಯಾನಮಾಡಿ, ಈ ಪ್ರಕಾರವಾಗಿ ಇರುವ ಇಂದ್ರನು ತನ್ನ ಸ್ನೇಹಿತರಾದ (ಅಂಗಿರಾಋಷಿಗಳೊಡನೆ ಸಂತೋಷದಿಂದ ತೃಪ್ತನಾಗಿ) ಅಂಗಿರಸ್ಸುಗಳೊಡನೆ ಹವಿರ್ಭಾಗಗಳನ್ನು ಸ್ವೀಕರಿಸುವುದರಮೂಲಕ ತೃಪ್ತನಾಗಿಯೂ, ಮತ್ತನಾಗಿಯೂ ಇರುತ್ತಾ ಯಜ್ಞಮಾಡುವ ಯಜಮಾನರುಗಳನ್ನು ಮತ್ತರಾಗಿರುವಂತೆ ಅನುಗ್ರಹಿಸಲಿ ಎಂದು ವರ್ಣಿಸಿರುವರು.

### ವ್ಯಾಕರಣಪ್ರಕ್ರಿಯಾ

**ಅಧ**— ಛಂದಸ್ಸಿನಲ್ಲಿ ಥಕಾರಕ್ಕೆ ವ್ಯತ್ಯಯದಿಂದ ಧಕಾರಾದೇಶ ಬಂದಿದೆ.

**ಜಜ್ಞೇ**— ಜನೀ ಪ್ರಾದುರ್ಭಾವೇ ಧಾತು. ಲಿಟ್ ಪ್ರಥಮಪುರುಷಏಕವಚನದಲ್ಲಿ **ಲಿಟಸ್ತಝಯೋರೇಶಿ-ರೇಚ್** ಎಂಬುದರಿಂದ ಏಶಾದೇಶಪ್ರತ್ಯಯನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸದಲ್ಲಿ ಆದಿಹಲ್‌ಶೇಷ. **ಗಮ-ಹನಜನಖನಘಸಾಂ**—(ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ನಕಾರಕ್ಕೆ ಶ್ಚುತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಮತ್ತು**—ಮದೀ ಹರ್ಷೇ ಧಾತು. ಲೋಟ್ ಪ್ರಥಮಪುರುಷಏಕವಚನದಲ್ಲಿ **ಏರುಃ** (ಪಾ. ಸೂ. ೩-೪-೮೬) ಎಂಬುದರಿಂದ ಉತ್ವ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. ಖರಿಚ ಎಂಬುದರಿಂದ ಧಾತು ದಕಾರಕ್ಕೆ ಚರ್ತ್ವ. ತಿಙಂತನಿಘಾತಸ್ವರ ಬರುತ್ತದೆ.

**ರೋಚಿ**—ರುಚ ದೀಪ್ತೌ. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲುಙ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಚ್ಲಿ ವಿಕರಣ ಬಂದಾಗ ಅದಕ್ಕೆ ಚಿಣಾದೇಶ.

**ಚಿಣೋಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದ ತಪ್ರತ್ಯಯಕ್ಕೆ ಲುಕ್. ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಬಹುಲಂ ಛಂದಸ್ಯ—(ಪಾ. ಸೂ. ೬-೪-೭೫)** ಎಂಬುದರಿಂದ ಅಡಾಗಮ ಬರುವುದಿಲ್ಲ.

**ಯೇಭಿಃ—ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ.

**ಆಷ್ಟ—**ಅಶ ಭೋಜನೇ ಧಾತು. ಕರ್ಮಣಿಯಲ್ಲಿ ಲಙ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ವ್ರಶ್ಚಭ್ರಸ್ಜಸೃಜಮೃಜ** (ಪಾ. ಸೂ. ೮-೬-೩೬) ಎಂಬುದರಿಂದ ಶಕಾರಕ್ಕೆ ಷತ್ವ. ಷಕಾರಯೋಗವಿರುವುದರಿಂದ ಪ್ರತ್ಯಯಕ್ಕೆ ಷ್ಟುತ್ವ. **ಆಡಜಾದೀನಾಂ** (ಪಾ. ಸೂ. ೬-೪-೭೨) ಎಂಬುದರಿಂದ ಅಂಗಕ್ಕೆ ಆಡಾಗಮ. ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸ್ವೇದುಹವ್ಯೈಃ—**ಇದಿ ಪರಮೈಶ್ವರ್ಯೇ ಧಾತು. ಇದಕ್ಕೆ ಚಿಣಾದಿಕವಾದ ಉ ಪ್ರತ್ಯಯ. **ಆಗಮಶಾಸ್ತ್ರಮನಿತ್ಯಂ** ಎಂಬುದರಿಂದ ಧಾತುವು ಇದಿತ್ತಾದರೂ ನುಮಾಗಮ ಬರುವುದಿಲ್ಲ. ಇದು ಎಂದು ರೂಪವಾಗುತ್ತದೆ. ಇದೂನಿ ಪ್ರಭೂತಾನಿ ಚ ತಾನಿ ಹವ್ಯಾನಿ, ಸ್ವಭೂತಾನಿ ಚ ಹವ್ಯಾನಿ **ಯೇ**ಷಾಂ ತೇ. ಸ್ವೇದುಹವ್ಯಾಃ ಅಥವಾ ಞಿಇಂಧೀ ದೀಪ್ತೌ ಧಾತು. ಸ್ವಾಯತ್ತಾನಿ ಇಂದೂನಿ ಇದ್ಧಾನಿ ಹವ್ಯಾನಿ ಯೇಷಾಮ್, ಅಥವಾ ಇದಂ ಶಬ್ದ. ಸ್ವಭೂತಂ ಇದಂ ಪುರೋವರ್ತಿ ಹವ್ಯಂ ಯೇಷಾಂ ತೇ ಸ್ವೇದುಹವ್ಯಾಃ ತೈಃ. ಆಗ **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ.

**ಸಿಂಚನ್—**ಷಿಚಿರ್ ಕ್ಷರಣೇ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಕರ್ಮಣಿಯಲ್ಲಿ ಕರ್ತೃಪ್ರತ್ಯಯ ಬರುತ್ತದೆ ಲಡರ್ಥದಲ್ಲಿ ಶತೃಪ್ರತ್ಯಯ. **ಶೇ ಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ಧಾತುವಿಗೆ ಶ ವಿಕರಣ ಬಂದಾಗ ನುಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಶವಿಕರಣಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

**ಜರಣಾ—**ಜ್ಯಾಧಾತುವು ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಕರ್ಮಣಿಯಲ್ಲಿ ಲ್ಯುಟ್‌ಪ್ರತ್ಯಯ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಪ್ರತ್ಯಯ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಪ್ರಾಪ್ತವಾದರೂ ವ್ಯತ್ಯಯದಿಂದ ಇಲ್ಲಿ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. || ೬ ||

ಸಂಹಿತಾಪಾಠಃ

ಸ್ವಿಧ್ಮಾ ಯದ್ವನಧಿತಿರಪಸ್ಯಾತ್ಸೂರೋ ಅಧ್ವರೇ ಪರಿ ರೋಧನಾ ಗೋಃ ।
ಯದ್ಧ ಪ್ರಭಾಸಿ ಕೃತ್ವ್ಯಾಁ ಅನು ದ್ಯೂನನರ್ವಿಶೇ ಪಶ್ವಿಷೇ ತುರಾಯ ॥ ೭ ॥

॥ ಪದಪಾಠಃ ॥

ಸು ಽ ಇಧ್ಮಾ । ಯತ್ । ವನ ಽ ಧಿತಿಃ । ಅಪಸ್ಯಾತ್ । ಸೂರಃ । ಅಧ್ವರೇ । ಪರಿ । ರೋಧನಾ । ಗೋಃ ।
ಯತ್ । ಹ । ಪ್ರ ಽ ಭಾಸಿ । ಕೃತ್ವ್ಯಾನ್ । ಅನು । ದ್ಯೂನ್ । ಅನರ್ವಿಶೇ । ಪಶು ಽ ಇಷೇ । ತುರಾಯ ॥ ೭ ॥

॥ ಸಾಯಣಭಾಷ್ಯಂ ॥

ಯದಿ ಸ್ವಿಧ್ಮಾ ಸುದೀಪ್ತಾಸ್ಯಾ ವನಧಿತಿರ್ವನೇ ಛೇತ್ತವ್ಯೇ ವೃಕ್ಷಸಮೂಹೇ ನಿಧಾತವ್ಯಾ ಶಸ್ತ್ರ್ಯಪಸ್ಯಾತ್ । ಅಪೋ ವಿಶಸನಾತ್ಮಕಂ ಸ್ವಕೀಯಂ ಕರ್ಮ ಕರ್ತುಮಿಚ್ಛೇತ್ ತದಾನೀಂ ಸೂರಃ ಪ್ರೇರಕೋಽಧ್ವರ್ಯುರಧ್ವರೇ ಯಜ್ಞೇ ಗೋಃ ಪಶೋ ರೋಧನಾ ರೋಧನಾಯ ಯೂಪೇ ನಿಯೋಜನಾಯ ಪರಿ ಭವತಿ । ಸಮರ್ಥೋ ಭವತಿ । ಯದ್ವಾ । ಸ್ವಿಧ್ಮಾ ಸೂರ್ಯಕಿರಣೈಃ ಸುದೀಪ್ತಾ ವನಧಿತಿಃ । ವನಮುದಕಮಸ್ಯಾಂ ಧೀಯತೆ ಇತಿ ವನಧಿತಿರ್ಮೇಘಮಾಲಾ । ಸಾ ಯದ್ಯದಾಪಸ್ಯಾತ್ ಅಪಃ ಪ್ರವರ್ಷಣಲಕ್ಷಣಂ ಕರ್ಮ ಕರೋತಿ ತದಾನೀಂ ಸೂರಃ ಪ್ರೇರಕ ಇಂದ್ರೋಽಧ್ವರೇ ಯಜ್ಞಸ್ಯ ನಿಮಿತ್ತಭೂತೇಽಧ್ವರ್ತವ್ಯೇಽಹಿಂಸಿತವ್ಯೇಽಂತರಿಕ್ಷೇ ವರ್ತಮಾನಃ ಸನ್ ಗೋರ್ವೃಷ್ಟ್ಯುದಕಸ್ಯ ರೋಧನಾ ರೋಧನಾನ್ಯಾವರಣಾನಿ ಪರಿ ಪರಿತೋ ನಿವಾರಯತೀತಿ ಶೇಷಃ । ಉತ್ತರಾರ್ಧಃ ಪ್ರತ್ಯಕ್ಷಕೃತಃ । ಹೇ ಇಂದ್ರ ಸೂರ್ಯಾತ್ಮನಾ ವರ್ತಮಾನಸ್ತ್ವಂ ಕೃತ್ವ್ಯಾನ್ । ಕೃತ್ವೀತಿ ಕರ್ಮನಾಮ । ಕರ್ಮಸು ಸಾಧೂನ್ ದ್ಯೂನ್ ದಿವಸಾನನುಲಕ್ಷ್ಯ ಯದ್ಧ ಯದಾ ಖಲು ಪ್ರಭಾಸಿ ಪ್ರಕರ್ಷೇಣ ದೀಪ್ಯಸೇ ತದಾನೀಮನರ್ವಿಶೇಽನಸಾ ಶಕಟೇನೇಂಧನಾ-

**ದ್ಯಾಹರಣಾಯಾರಣ್ಯಂ ಪ್ರವಿಶತೇ । ಯದ್ವಾ । ಗಂತವ್ಯಂ ಸ್ಥಲಂ ಪ್ರತಿ ಗಂತುಮಶಕ್ತಾಯ । ಪುರುಷಾಯ ಪಶ್ವಿಷೇ ಪಶೂನ್ಪ್ರೇರಯತೇ ತುರಾಯ ತ್ವರಮಾಣಾಯ ಗೋಪಾಲಾಯ ಚ ಸಿಧ್ಯೇದಭಿಮತಮಿತಿ ವಾಕ್ಯಶೇಷಃ ॥ ಸ್ವಿಧ್ಮಾ । ಶೋಭನಮಿಧ್ಮಂ ದೀಪ್ತಮಾಸ್ಯಂ ದೀಪ್ತಿರ್ವಾ ಯಸ್ಯಾಃ ಸಾ ತಥೋಕ್ತಾ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅಪಸ್ಯಾತ್ । ಅಪಃಶಬ್ದಾತ್ಸುಪ ಆತ್ಮನಃ ಕ್ಯಚ್ । ಲೇಟ್ಯಾಡಾಗಮಃ । ರೋಧನಾ । ರುಧಿರ್ ಆವರಣೇ । ಲ್ಯುಟ್ಚೇತಿ ಭಾವೇ ಲ್ಯುಟ್ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಅನರ್ವಿಶೇ । ಅನಸಾ ವಿಶತಿ ಸ್ಪ್ರಾಪ್ನೋತೀತ್ಯನರ್ವಿಟ್ । ವಿಶತೇಃ ಕ್ವಿಪ್ । ಅಹರಾದೀನಾಂ ಪತ್ಯಾದಿಷೂಪಸಂಖ್ಯಾನಂ । ಮ. ೮-೨-೭೦-೧ । ಇತಿ ಸಕಾರಸ್ಯ ರೇಫಾದೇಶಃ । ಯದ್ವಾ । ಅರ್ತೇಃ ಕರ್ಮಣಿ ವಿಚ್ । ಅರಂ ಗಂತವ್ಯಂ ಪ್ರತಿ ವಿಶತಿ ಪ್ರಾಪ್ನೋತೀತ್ಯರ್ವಿಟ್ । ನ ಅರ್ವಿಟ್ ಅನರ್ವಿಟ್ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅತ ಏವ ವ್ಯುತ್ಪತ್ತ್ಯನವಧಾರಣಾದನವಗ್ರಹಃ । ಪಶ್ವಿಷೇ । ಇಷ ಗತೌ । ಅಸ್ಮಾದಂತರ್ಭಾವಿತಣ್ಯರ್ಥಾತ್ ಕ್ವಿಪ್ಚೇತಿ ಕ್ವಿಪ್ ॥**

॥ ಪ್ರತಿಪದಾರ್ಥ ॥

**ಸ್ವಿಧ್ಮಾ**— ಹೊಳೆಯುತ್ತಿರುವ ಅಲುಗುಳ್ಳ । **ವನಧಿತಿಃ**—ವನವನ್ನು ಛೇದಿಸುವ ಆಯುಧಧಾರಿಯು । **ಯತ್**—ಯಾವಾಗ । **ಅಪಸ್ಯಾತ್**—(ವಿಶಸನರೂಪ) ಕರ್ಮಮಾಡಲು ಸಿದ್ಧನಾಗುತ್ತಾನೋ । (**ತತ್**—ಆಗ) । **ಸೂರಃ**— ಪ್ರೇರಕನಾದ ಅಧ್ವರ್ಯುವು । **ಅಧ್ವರೇ**— ಯಜ್ಞದಲ್ಲಿ । **ಗೋಃ**— ಪಶುವನ್ನು । **ರೋಧನಾ**— (ಯೂಪಕ್ಕೆ) ಕಟ್ಟುವುದರಲ್ಲಿ । **ಪರಿ** (**ಭವತಿ**)— ಸಮರ್ಥನಾಗುತ್ತಾನೆ ;

ಅಥವಾ

**ಸ್ವಿಧ್ಮಾ**— ಸೂರ್ಯಕಿರಣಗಳಿಂದ ದೀಪ್ತವಾದ । **ವನಧಿತಿಃ**—ನೀರಿಗೆ ಆಶ್ರಯವಾದ ಮೇಘಮಾಲೆಯು । **ಯತ್**—ಯಾವಾಗ । **ಅಪಸ್ಯಾತ್**—ವೃಷ್ಟಿಯನ್ನು ಕರೆಯುತ್ತದೆಯೋ! (**ತತ್**—ಆಗ) । **ಸೂರಃ**—ಪ್ರೇರಕನಾದ ಇಂದ್ರನು । **ಅಧ್ವರೇ**—ಅಂತರಿಕ್ಷದಲ್ಲಿ( ಇದ್ದವನಾಗಿ) । **ಗೋಃ**-ವೃಷ್ಟ್ಯುದಕದ । **ರೋಧನಾ**-ಪ್ರತಿಬಂಧಕಗಳನ್ನು । **ಪರಿ**— ನಿವಾರಿಸುತ್ತಾನೆ ; । (**ಹೇ ಇಂದ್ರ**— ಎಲೈ ಇಂದ್ರನೇ ) । ( ಸೂರ್ಯರೂಪಿಯಾಗಿದ್ದು ನೀನು ) **ಕೃತ್ವ್ಯಾ** (ಯಾಗಾದಿ) ಕರ್ಮಗಳಿಗೆ (ಯೋಗ್ಯವಾದ) । **ದ್ಯೂನ್ ಅನು**— ದಿನಗಳಲ್ಲಿ । **ಯತ್ ಹ**—ಯಾವಾಗ । **ಪ್ರಭಾಸಿ**—ಪ್ರಕಾಶಿಸುತ್ತೀಯೋ । (**ತದಾ**—ಆಗ) । **ಅನರ್ವಿಶೇ** ಗಾಡಿಯಲ್ಲಿ (ಇಂಧನಾದಿಗಳಿಗಾಗಿ ಅರಣ್ಯವನ್ನು ಪ್ರವೇಶಿಸುವ ಉದ್ದಿಷ್ಟ ಪ್ರದೇಶಕ್ಕೆ ಹೋಗಲಸಮರ್ಥನಾದ) । **ತುರಾಯ**—ಆತುರದಿಂದ ಹೋಗುತ್ತಿರುವ । **ಪಶ್ವಿಷೇ**— ಪಶುಗಳನ್ನು ಅಟ್ಟುವ ಇಂಧನಾರ್ಥಿಗೆ (ಗೋಪಾಲನಿಗೆ) (ಇಷ್ಟಾರ್ಥ ಸಿದ್ಧಿಸುತ್ತದೆ) ॥

ಭಾವಾರ್ಥ

(ಚೆನ್ನಾಗಿ) ಹೊಳೆಯುತ್ತಿರುವ ಅಲುಗುಗಳುಳ್ಳ, ವನಗಳನ್ನು ಕತ್ತರಿಸುವ ಆಯುಧವು ಸಿದ್ಧವಾದಮೇಲೆ, (ಯಜ್ಞ) ಪ್ರೇರಕನಾದ ಅಧ್ವರ್ಯುವು ಪಶುವನ್ನು ಯೂಪಕ್ಕೆ ಕಟ್ಟುತ್ತಾನೆ ; (ಸೂರ್ಯಕಿರಣದಿಂದ ದೀಪ್ತವಾದ ಮೇಘಮಾಲೆಯು ಮಳೆಗರೆಯಲು ಸಿದ್ಧವಾದಾಗ ಅಂತರಿಕ್ಷದಲ್ಲಿದ್ದು, ಇಂದ್ರನು ವೃಷ್ಟಿನಿರೋಧಕವಾದುವುಗಳನ್ನು ನಿವಾರಿಸುತ್ತಾನೆ) ; (ಎಲೈ ಇಂದ್ರನೇ, ಸೂರ್ಯರೂಪಿಯಾಗಿದ್ದು, ನೀನು) (ಯಾಗಾದಿ) ಕರ್ಮಗಳಿಗೆ ಶುದ್ಧವಾದ

ದಿನಗಳಲ್ಲಿ ಪ್ರಕಾಶಿಸಿದಾಗ, (ಇಂಧನಾದಿಗಳನ್ನು ತರಲು) ಅರಣ್ಯಕ್ಕೆ ಗಾಡಿಯಲ್ಲಿ ಹೊರಟು (ಉದ್ದಿಷ್ಟ ಪ್ರದೇಶಕ್ಕೆ ಹೋಗಲು ಸಮರ್ಥನಾಗಿ) ಆತುರದಿಂದ ಪಶುಗಳನ್ನು ಅಟ್ಟಿಕೊಂಡು ಹೋಗುತ್ತಿರುವ ಇಂಧನಾರ್ಥಿಗೂ ಗೋಪಾಲಕನಿಗೂ ಇಷ್ಟಸಿದ್ಧಿಯಾಗುತ್ತದೆ.

## English Translation

When the bright-edged hatchet is ready for its work, the directing prieet is able to have the victim bound in the sacrifice: when, Indra, you shine upon the days that are appropriated to sacred rites, then (success attends) upon tha man who goes with his cart (for fuel), the driver (of cattle), or the active (shepherd)

### ವಿಶೇಷವಿಷಯಗಳು

ಸಾಯಣರು ಈ ಋಕ್ಕಿನ ಮೊದಲನೆಯ ಅರ್ಧದಲ್ಲಿ ಎರಡುವಿಧವಾದ ಅರ್ಥವನ್ನು ವಿವರಿಸಿರುವರು. ಮೊದಲನೆಯ ವಿಧವಾದ ಅರ್ಥದಲ್ಲಿ ಯಜ್ಞಮಾಡುವ ಕಾಲವಲ್ಲಿ ವನದಲ್ಲಿ ಇರುವ ವೃಕ್ಷಗಳನ್ನು ಕತ್ತರಿಸಲು ಅರ್ಹವಾದ ಹರಿತವಾದ ಶಸ್ತ್ರವು ಪಶುಗಳನ್ನು ವಿಶಸನಮಾಡುವದಕ್ಕಾಗಿ ಸಿದ್ಧವಾದಾಗ ಅಧ್ವರ್ಯುವು ಪಶುವನ್ನು ಯೂಪಸ್ತಂಭಕ್ಕೆ ಬಂಧಿಸಲು ಸಿದ್ಧನಾಗುವನು ಎಂದು ಯಜ್ಞಕ್ಕೆ ಸಂಬಂಧಿಸಿದ (ಅರ್ಥವು) ವಿಷಯವು ವರ್ಣಿತವಾಗಿರುವುದು. ಸ್ವಿಧ್ಮಾ ಶಬ್ದವು ಸೂರ್ಯಕಿರಣವೆಂದೂ **ವನಂ ಅಸ್ಯಾಂ ಧೀಯತೆ ಇತಿ ವನಧಿತಿಃ ಮೇಘಮಾಲಾ ।** ವನ ಎಂದರೆ ಉದಕವೆಂದೂ, ಉದಕವು ಇರುವ ಕಾರಣ ವನಧಿತಿ ಶಬ್ದವು ಮೇಘಮಾಲೆ ಎಂದೂ ಅರ್ಥವನ್ನು ವಿವರಿಸಿರುವರು.

> **ವನಧಿತಿರ್ಮೇಘಮಾಲಾ ಯದಾ ಅಪಸ್ಯಾತ್ ಅಪಃಪ್ರವರ್ಷಲಕ್ಷಣಂ ಕರ್ಮ ಕರೋತಿ ತದಾನೀಂ ಸೂರಃ ಪ್ರೇರಕಃ ಇಂದ್ರಃ ಅಧ್ವರೇ ಯಜ್ಞಸ್ಯ ನಿಮಿತ್ತಭೂತೇ ಅಧ್ವರ್ತವ್ಯೇ ಅಹಿಂಸಿತವ್ಯೇ ಅಂತರಿಕ್ಷೇ ವರ್ತಮಾನಸ್ಯ ಗೋಃ ವೃಷ್ಟ್ಯುದಕಸ್ಯ ರೋಧನಾ ರೋಧನಾನಿ ಆವರಣಾನಿ ಪರಿ ಪರಿತೋ ನಿವಾರಯತಿ.**

ಸೂರ್ಯಕಿರಣದಿಂದ ಕಾಂತಿಯುಕ್ತವಾದ ಮೇಘಮಾಲೆಯು ವೃಷ್ಟಿಯನ್ನು ವರ್ಷಿಸಲು ಸಿದ್ಧವಾದಾಗ ಪ್ರೇರಕನಾದ ಇಂದ್ರನು ಯಜ್ಞಕ್ಕೆ ನಿಮಿತ್ತವಾದ ಕರ್ಮವು ಸರಿಯಾಗಿ ನಡೆಯುವುದಕ್ಕಾಗಿ ಅಂತರಿಕ್ಷದಲ್ಲಿ ಇರುವವನಾಗಿ ವೃಷ್ಟಿಯ ಉದಕದ ತಡೆಯನ್ನು ತಪ್ಪಿಸುವನು ಎಂದು ಎರಡನೆಯ ವಿಧವಾದ ಅರ್ಥವು. ಈ ಎರಡುವಿಧವಾದ ಅರ್ಥದಲ್ಲಿಯೂ ಇಂದ್ರನು ಆಚರಿಸುವ ಯಜ್ಞರಕ್ಷಣೆಯ ವ್ಯಗ್ರತೆಯೂ ವರ್ಣಿತವಾಗಿರುವುದು. ಮತ್ತು ಇಂದ್ರನು ಸೂರ್ಯರೂಪದಿಂದ ಪ್ರಕಾಶಿಸುತ್ತಿರುವನೆಂದೂ ಕರ್ಮಕಾಲಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಅರಣ್ಯದಲ್ಲಿ ಪ್ರವೇಶಿಸಿ ಗಂತವ ಪ್ರದೇಶವನ್ನು ಹೊಂದಲಶಕ್ತನಾದವನನ್ನು ರಕ್ಷಿಸುವವನೆಂದೂ ವರ್ಣಿಸಿದೆ.

**ತುರಾಯತ್ವೆ—ರಮಾಣಾಯ ।** ತ್ವರೆಮಾಡುವವನೆಂದು ಅರ್ಥ.

**ಸ್ವಿಧ್ಮಾ**—**ಶೋಭನಮಿಧ್ಮಂ ದೀಪ್ತಮಾಸ್ಯಂ ದೀಪ್ತಿರ್ವಾ ಯಸ್ಯಾಸ್ಸಾ** । ಉತ್ತಮವಾದ ಕಾಂತಿಯುಕ್ತ ವಾದ ಮುಖವುಳ್ಳದ್ದೆಂದು ಅರ್ಥ.

ಸ್ಕಂದಸ್ವಾಮಿಗಳು ಈ ಋಕ್ಕಿನ ಅರ್ಥವನ್ನು ಮುಂದಿನ ಋಕ್ಕಿನ ಅರ್ಥದೊಡನೆ ಸೇರಿಸಿ ಒಂದೇ ವಾಕ್ಯವೆಂದು ಅರ್ಥಮಾಡಿರುತ್ತಾರೆ. ಕೆಲವು ಪದಗಳಿಗೆ ಸಾಯಣರ ವ್ಯಾಖ್ಯಾನಕ್ಕೂ ಇವರ ವ್ಯಾಖ್ಯಾನಕ್ಕೂ ವ್ಯತ್ಯಾಸವು ಇರುವುದು.

> **ಅನರ್ವಿಶೇ ಪಶ್ವಿಷೇ ತುರಾಯ**—**ಋು ಗತೌ ಅಗತಾ ವಿಶೋ ಯಸ್ಯ ಸೋಽನರ್ವಿಟ್ । ಯಸ್ಯ ಮಿತ್ರಾದಯೋ ವಾ ಮನುಷ್ಯಾಃ ಯಷ್ಟೃತ್ವಾನ್ನರಕಂ ನ ಗತಾಃ ಪರಿಚಾರಕಾ ವಾ ಸರ್ವೇ ಪಶೂನ್ಯ ಇಚ್ಛತಿ ಸ ಪಶ್ವಿಟ್ । ದೇವಾನ್ ಪರಿಚರಿತುಂ ಯಸ್ತ್ವರತೇ ಸ ತುರಃ** ।

ಯಾಗಶೀಲರಾಗಿರುವ ಮಿತ್ರರೇ ಮೊದಲಾದವರೂ ಕೂಡ ನರಕಗಳನ್ನು ಹೊಂದದೆ, ದೇವತೆಗಳ ಸೇವೆಯಲ್ಲಿ ಆಸಕ್ತ ರಾಗಿರುವ ಮತ್ತು ಗವಾದಿ ಪಶುಕಾಮರಾಗಿರುವ ಮತ್ತು ದೇವಾದಿಗಳನ್ನು ಸೇವಿಸುವುದಕ್ಕೆ ತ್ವರೆಮಾಡುತ್ತಿರುವವರೆಂದ ಅರ್ಥವನ್ನು ಮಾಡಿ ಈ ಪ್ರಕಾರದಿಂದ ಇರುವ ಯಜಮಾನರ ಯಜ್ಞವನ್ನು ನಿರ್ವಿಘ್ನವಾಗಿ ನೆರವೇರಿಸುವುದಕ್ಕಾಗಿ ಇಂದ್ರನು ಸಿದ್ಧನಾಗಿರುವನು ಎಂದು ಅರ್ಥವನ್ನು ವಿವರಿಸಿರುತ್ತಾರೆ. ಸಾಯಣರು—

> **ಅನರ್ವಿಶೇ**—**ಅನಸಾ ಶಕಟೇನ ಇಂಧನಾದ್ಯಾಹರಣಾಯ ಅರಣ್ಯಂಪ್ರವಿಶತೇ ಯದ್ವಾ ಗಂತವ್ಯಂ ಪ್ರತಿ ಗಂತುಮಶಕ್ತಾಯ ಪುರುಷಾಯ** ।

ಗಾಡಿಯಿಂದ ಸೌದೆಯೇ ಮೊದಲಾದವುಗಳನ್ನು ತರುವುದಕ್ಕಾಗಿ ಕಾಡಿಗೆ ಹೋಗುವವನ ಅಥವಾ ತಾನು ಸೇರ ಬೇಕಾದ ಪ್ರದೇಶವನ್ನು ಹೊಂದಲು ಅಶಕ್ತನಾದ ಪುರುಷನಿಗಾಗಿ, ಎಂದೂ, **ಪಶೂನ್ ಪ್ರೇರಯತೇ ತುರಾಯ ತ್ವರಮಾಣಾಯ ಗೋಪಾಲಾಯ** ಪಶುಗಳನ್ನು ಪ್ರೇರಿಸುತ್ತಿರುವ ತ್ವರೆಮಾಡುವ ಗೋಪಾಲಕನಿಗೂ ಕೂಡ ಇಷ್ಟ ವನ್ನು ಇಂದ್ರನು ನೆರವೇರಿಸುವನು ಎಂದು ವರ್ಣಿಸಿರುವರು.

### ವ್ಯಾಕರಣಪ್ರಕ್ರಿಯಾ

**ಸ್ವಿಧ್ಮಾ**—ಶೋಭನಂ ಇಧ್ಮಂ ದೀಪ್ತಂ ಆಸ್ಯಂ ದೀಪ್ತಿರ್ವಾ ಯಸ್ಯಾಃ ಸಾ ಸ್ವಿಧ್ಮಾ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಪಸ್ಯಾತ್**—ಅಪಶಬ್ದದ ಮೇಲೆ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. **ಸನಾದ್ಯಂತಾ ಧಾತವಃ** ಎಂಬುದರಿಂದ ಅಪಸ್ಯ ಎಂಬ ಕ್ಯಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ** (ಪಾ: ಸೂ. ೩-೪-೯೭) ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಯದ್ಯೋಗವಿರುವುದರಿಂದ **ನಿಪಾತೈರ್ಯದ್ಯದಿ** (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ. ಕ್ಯಚ್‌ಸ್ವರದಿಂದ ಅಂತೋದಾತ್ತವಾಗುತ್ತದೆ.

**ರೋಧನಾ**—ರುಧಿರ್ ಆವರಣೇ ಧಾತು. **ಲ್ಯುಟ್ ಚ** ( ಪಾ. ಸೂ. ೩-೩-೧೧೫) ಎಂಬುದರಿಂದ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಪ್ರತ್ಯಯವನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ನಪುಂಸಕಬಹುವಚನದಲ್ಲಿ ರೋಧನಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ ಬರುತ್ತದೆ.

**ಪ್ರಭಾಸಿ**—ಭಾ ದೀಪ್ತೌ ಧಾತು. ಲಟ್ ಮಧ್ಯಮಪುರುಷಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. **ತಿಙ್ಚೋದಾತ್ತವತಿ** ಎಂಬುದರಿಂದ ಗತಿಗೆ ಅನುದಾತ್ತಸ್ವರ ಬರುತ್ತದೆ.

**ಅನರ್ವಿಶೇ**—ಅನಸಾ ವಿಶತಿ ಪ್ರಾಪ್ನೋತಿ ಇತಿ ಅನರ್ವಿಟ್. ವಿಶ ಪ್ರವೇಶನೇ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಅನರ್ವಿಶ್ ಶಬ್ದವಾಗುತ್ತದೆ. **ಅಹರಾದೀನಾಂ ಪತ್ಯಾದಿಷೂಪಸಂಖ್ಯಾನಮ್**—(ಪಾ. ಮ. ೮-೨-೭೦-೧) ಎಂಬ ವಚನದಿಂದ ಅನಸ್ ಎಂಬಲ್ಲಿರುವ ಸಕಾರಕ್ಕೆ ರೇಫಾದೇಶ. ಅಥವಾ ಋ ಗತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ವಿಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ಅರಂ ಗಂತವ್ಯಂ ಪ್ರತಿ ವಿಶತಿ ಪ್ರಾಪ್ನೋತೀತಿ ಅರ್ವಿಟ್. ನ ಅರ್ವಿಟ್ ಅನರ್ವಿಟ್. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ಈ ರೀತಿಯಾದ ವ್ಯುತ್ಪತ್ತಿಯನ್ನು ತಿಳಿಯದಿರುವುದರಿಂದಲೇ ಪದಕಾಲದಲ್ಲಿ ಅವಗ್ರಹಮಾಡಿಲ್ಲ.

**ಪಶ್ವಿಷೇ**—ಇಷ ಗತೌ ಧಾತು. ಪ್ರೇರಣಾರ್ಥರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

———:o:———

ಸಂಹಿತಾಪಾಠಃ

ಅಷ್ಟಾ ಮಹೋ ದಿವ ಆದೋ ಹರೀ ಇಹ ದ್ಯುಮ್ನಾಸಾಹಮಭಿ-
ಯೋಧಾನ ಉತ್ಸಂ ।

ಹರಿಂ ಯತ್ತೇ ಮಂದಿನಂ ದುಕ್ಷನ್ವೃಧೇ ಗೋರಭಸಮದ್ರಿಭಿರ್ವಾ-
ತಾಪ್ಯಂ ॥೮॥

ಪದಪಾಠಃ

ಅಷ್ಟಾ । ಮಹಃ । ದಿವಃ । ಆದಃ । ಹರೀ ಇತಿ । ಇಹ । ದ್ಯುಮ್ನಽಸಹಂ ।
ಅಭಿ । ಯೋಧಾನಃ । ಉತ್ಸಂ ।
ಹರಿಂ । ಯತ್ । ತೇ । ಮಂದಿನಂ । ಧುಕ್ಷನ್ । ವೃಧೇ । ಗೋಽರಭಸಂ ।
ಅದ್ರಿಽಭಿಃ । ವಾತಾಪ್ಯಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಹೋ ಮಹತೋ ದಿವೋ ಮದಕರಸ್ಯ ಸೋಮಸ್ಯಾಷ್ಟಾ ಭೋಕ್ತಾರೌ ಪಾತಾರೌ ಹರೀ ಸ್ವಕೀಯಾವಶ್ವಾವಿಹಾಸ್ಮಿನ್ಕರ್ಮಣ್ಯಾದಃ । ಪೀತಶೇಷಂ ಸೋಮಂ ಪಾಯಯ । ತಥಾ ದ್ಯುಮ್ನಾ-ಸಾಹಂ ದ್ಯುಮ್ನಸ್ಯಾಸ್ಮದೀಯಸ್ಯ ಧನಸ್ಯಾಭಿಭವಿತಾರಮುತ್ಸಮುತ್ಸ್ರಾವಯಿತಾರಂ ಶತ್ರುಂ ಯೋಧಾನೋ ಯೋಧನಶೀಲಸ್ತ್ವಮಭಿ ಭವ । ಯದ್ಯದಾ ತೇ ತವ ವೃಧೇ ವರ್ಧನಾಯ ಹರಿಂ ಮನೋಹರಂ ಮಂದಿನಂ ಮದಕರಂ ಗೋರಭಸಂ । ಅತ್ರ ಗೋಶಬ್ದಃ ಪಯಸಿ ವರ್ತತೇ ಪಯೋ ಬಲಂ । ತದ್ವದ್ವೇಗವಂತಂ । ವೀರ್ಯವಂತಮಿತ್ಯರ್ಥಃ । ವಾತಾಪ್ಯಂ ವಾತೇನ ಪ್ರಾಪ್ತವ್ಯಂ । ವಾತತುಲ್ಯೇನ ಶೀಘ್ರಕಾರಿಣಾ ತ್ವಯಾ ಪಾತವ್ಯಮಿತ್ಯರ್ಥಃ । ಏವಂವಿಧಂ ಸೋಮಮದ್ರಿಭಿರ್ಗ್ರಾವಭಿರ್ಧುಕ್ಷನ್ ದುಹಂತಿ ಋತ್ವಿಜೋಽಭಿಷು-ಣ್ವಂತಿ । ತದಾನೀಮಷ್ಟೇತಿ ಪೂರ್ವತ್ರ ಸಂಬಂಧಃ ॥ ಅಷ್ಟಾ । ಅಶ ಭೋಜನೇ ತೃಚ್ । ಆಗಮಾನು-ಶಾಸನಸ್ಯಾನಿತ್ಯತ್ವಾದಿಡಭಾವಃ । ಧುಕ್ಷನ್ । ಪದಕಾಲೀನೋ ಛಾಂದಸಃ ॥

ಪ್ರತಿಪದಾರ್ಥ

**ಯತ್**—ಯಾವಾಗ । **ತೇ**—ನಿನ್ನ । **ವೃಧೇ**—ವೃದ್ಧಿಗಾಗಿ । **ಹರಿಂ**—ಮನೋಹರವಾದುದೂ ।**ಮಂ-ದಿನಂ**—ಮದಕಾರಿಯೂ । **ಗೋರಭಸಂ**—ಕ್ಷೀರದಂತೆ ಬಲಕಾರಿಯೂ ] **ವಾತಾಪ್ಯಂ**— ವಾಯುವಿನಂತೆ ವೇಗವುಳ್ಳ ನಿನ್ನಿಂದ ಪೀಯಮಾನವಾದುದೂ ಆದ (ಸೋಮರಸವನ್ನು) । **ಅದ್ರಿಭಿಃ**—ಕಲ್ಲುಗಳಿಂದ । **ದುಕ್ಷನ್**—(ಋತ್ವಿಜರು) ಸಿದ್ಧಪಡಿಸಿದರೋ । (**ತತ್**—ಆಗ) । (**ಹೇ ಇಂದ್ರ**—ಎಲೈ ಇಂದ್ರನೇ) । **ಮಹಃ**—ಶ್ರೇಷ್ಠವಾದ ।

**ದಿವಃ**— ಮದವನ್ನುಂಟುಮಾಡುವ (ಸೋಮರಸವನ್ನು) | **ಅಷ್ಟಾ**— ಪಾನಮಾಡುವ | **ಹರೀ**—(ನಿನ್ನ) ಎರಡು ಅಶ್ವಗಳಿಗೂ | **ಇಹ**— ಈ ಯಾಗದಲ್ಲಿ | **ಅದೇಃ**— (ಪೀತಶೇಷವಾದ ಸೋಮರಸವನ್ನು ಪಾನಮಾಡಿಸು); | (**ತಥಾ**— ಹಾಗೆಯೇ) | **ದ್ಯುಮ್ನಾಸಾಹಂ**—( ನಮ್ಮ) ಧನವನ್ನಪಹರಿಸುವ | **ಉತ್ಸಂ**— ಶತ್ರುವನ್ನು | **ಯೋಧಾನಃ**— ಯೋದ್ಧೃವಾದ (ನೀನು) | **ಅಭಿ (ಭವ)**— ಸೋಲಿಸು ||

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ವೃದ್ಧಿಗಾಗಿ ಋತ್ವಿಜರು ಮನೋಹರವೂ ಮದಕರವೂ, ಕ್ಷೀರದಂತೆ ಬಲಿಕಾರಿಯೂ, ವಾಯು(ವೇಗವುಳ್ಳ ನಿನಗೆ) ಪಾನಯೋಗ್ಯವೂ ಆದ ಸೋಮರಸವನ್ನು ಕಲ್ಲುಗಳಿಂದ ಜಜ್ಜಿ (ಋತ್ವಿಜರು) ಸಿದ್ಧಪಡಿಸಿದಾರೆ ; (ಇಂಥ) ಶ್ರೇಷ್ಠವಾದ ಮತ್ತು ಮದಕಾರಕವಾದ ಸೋಮರಸವನ್ನು ನಿನ್ನ ಅಶ್ವಗಳಿಗೆ (ನಿನ್ನ ಪೀತಶೇಷವನ್ನು ) ಪಾನಮಾಡಿಸು ; ಯೋದ್ಧೃವಾದ ನೀನು ನಮ್ಮ ದ್ರವ್ಯಾಪಹಾರಿಯಾದ ( ನಮ್ಮ ) ಶತ್ರುವನ್ನು ಸೋಲಿಸು.

## Englih Translation

Send hither your horses, the quaffers of the exhilarating libation ; overcome, warrior, the adversary plundering us of our treasure ; when they express with stones, for the increase ( of your strength ), the delightful, exhilarating, invigorating ( juice ), to be overtaken by you who are swifter than the wind.

|| ವಿಶೇಷವಿಷಯಗಳು ||

**ಹರೀ— ಸ್ವಕೀಯೌ ಅಶ್ವೌ | ಹರೀ ಇಂದ್ರಸ್ಯ (ನಿ. ೨-೨೮)** ಇಂದ್ರನ (ವಾಹನವಾದ) ರಥದ ಕುದುರೆಗಳಿಗೆ ಹರೀ ಎಂದು ಪ್ರಸಿದ್ಧವಾಗಿರುವ ಕಾರಣ ಇಂದ್ರನು ತಾನು ಪಾನಮಾಡಿದನಂತರ ಉಳಿದ ಸೋಮವನ್ನು ತನ್ನ ಕುದುರೆಗಳಿಗೆ ಪಾನಮಾಡಿಸಲಿ ಎಂದು ಪ್ರಾರ್ಥಿಸಿದೆ.

**ದ್ಯುಮ್ನಾಸಾಹಂ ದ್ಯುಮ್ನಸ್ಯ ಅಸ್ಮದೀಯಸ್ಯ ಧನಸ್ಯ ಅಭಿಭವಿತಾರಂ.** ಮಘಂ, ರೇಕ್ಣಃ ಎಂಬ ಇಪ್ಪತ್ತೆಂಟು ಧನನಾಮಗಳಲ್ಲಿ ದ್ಯುಮ್ನ ಶಬ್ದವು (ನಿ. ೩-೯) ಉಕ್ತವಾಗಿದೆ. ನಮ್ಮ ಧನವನ್ನು ನಾಶವಡಿಸುವವನನ್ನು ಇಂದ್ರನು ನಿಗ್ರಹಿಸಲಿ ಎಂದು ವರ್ಣಿಸಿದೆ.

**ಉತ್ಸಂ— ಉತ್ಸಾದಯಿತಾರಂ. ಉತ್ಸ**ಶಬ್ದವು ಕೂಪನಾಮಗಳಲ್ಲಿ (ನಿ. ೩-೧೯) ಉಕ್ತವಾಗಿದೆ. **ಉತ್ಸ ಉತ್ಸರಣಾದ್ವಾ ಉತ್ಸದನಾದ್ವಾ ಉತ್ಸ್ಯಂದನಾದ್ವಾ, ಉನತ್ತೇರ್ವಾ** (ನಿ. ೧೦-೧೦) ಉತ್ಸ ಎಂಬ ಪದವು— ಗತ್ಯರ್ಥವಾದ ಸೃಧಾತುವಿನಿಂದಲಾಗಲಿ ಅಥವಾ ಗತಿ, ಅವಸಾದನ (ನಾಶ) ಎಂಬ ಅರ್ಥವುಳ್ಳ ಸದ್ ಧಾತುವಿನಿಂದಲಾಗಲಿ, ಅಥವಾ, ಸ್ರವಿಸುವುದು ಎಂದು ಅರ್ಥವುಳ್ಳ ಸ್ಯಂದು ಧಾತುವಿನಿಂದಲಾಗಲಿ, ಅಥವಾ ಕ್ಲೇದನ (ಜಿನುಗುವುದು) ಎಂಬ ಅರ್ಥವುಳ್ಳ ಉಂದೀ ಧಾತುವಿನಿಂದಲಾಗಲಿ ನಿಷ್ಪನ್ನವಾಗಿರುವುದು. ಇದರಿಂದ ನಮ್ಮ ಧನಗಳನ್ನು ನಾಶಪಡಿಸುವವರನ್ನು ಇಂದ್ರನು ನಾಶಮಾಡಲಿ ಎಂದು ವಿವರಿಸಿದೆ.

ವಾತಾಪ್ಯಂ—ವಾತೇನ ಪ್ರಾಪ್ತವ್ಯಂ ವಾತತುಲ್ಯಶೀಘ್ರಕಾರಿಣಾ ತ್ವಯಾ ಪಾತವ್ಯಂ. ಇಂದ್ರನಿಗಾಗಿ ಋತ್ವಿಜರು ಸಿದ್ಧಮಾಡಿದ ಸೋಮರಸವನ್ನು ಪಾನಮಾಡಲಿ ಎಂದು ವಿವೃತವಾಗಿದೆ. ಸ್ಕಂದಸ್ವಾಮಿಗಳು ಬೇರೆ ವಿಧವಾಗಿ ಈ ಋಕ್ಕಿನ ಅರ್ಥವನ್ನು ವಿವರಿಸಿರುತ್ತಾರೆ.

**ಮಹಃ ಮಹತಃ ದ್ಯುಲೋಕಸ್ಯ ಆಷ್ಟಾ ವ್ಯಾಪ್ತಾ ಹರೀ ಹರಿಭ್ಯಾಂ ಉತ್ಸಂ ಮೇಘಂ ಅಭಿ-ಯೋಧಾನಃ ದ್ಯುಮ್ನಾಸಾಹಂ ದ್ಯುಮ್ನಮನ್ನಂ ಮಾಂಸಮಂಡಾದಿ ಯದ್ಯತ್ಸ್ವಾದು-ತ್ವೇನಾಭಿಮತಂ ತತ್ಸರ್ವಂ ಏವಾಭಿಭವತಿ । ಆದಃ ಅಭಕ್ಷಯಃ ।**

ಇಂದ್ರನು ಸ್ವರ್ಗಲೋಕ ಮತ್ತು ಅಂತರಿಕ್ಷಗಳನು ವ್ಯಾಪಿಸಿರುವನು. ನಮ್ಮ ಯಜ್ಞದಲ್ಲಿ ರುಚಿಕರವಾದ ಹವಿಸ್ಸನ್ನೂ, ಮಾಂಸ, ಮಂಡ ಇವೇ ಮೊದಲಾದವುಗಳನ್ನು ಭಕ್ಷಿಸುವವನು. ತನ್ನ ಅಶ್ವಗಳಿಂದ ಮೇಘಗಳ ಸಂಗಡ ಯುದ್ಧ ಮಾಡಿ ಮಳೆಯನ್ನು ಹುಯ್ಯುವಂತೆ ಮಾಡುವವನು ಎಂದು ಅರ್ಥವನ್ನು ವಿವರಿಸಿರುವರು. ಮತ್ತು

**ಗೋರಭಸಂ—ಗಾವಃ ಸ್ತುತಯಃ ಅಪೋ ವಾ । ರಭಸ ಇತಿ ಮಹನ್ನಾಮ । ಗಾವೋ ರಭಯಿ-ತ್ರ್ಯೋ ಯಸ್ಯ ಸ ಗೋರಭಸಃ । ಗೋಭಿರದ್ಭಿರ್ವಾ ಮಹತ್ಕೃತ ಇತ್ಯರ್ಥಃ । ವಾತಾಪ್ಯಂ ಉದಕರೂಪಂ ಅಥವಾ ವಾತಂ ಪ್ರಾಣಃ । ತಸ್ಯಾಪ್ಯಾಯಿತಾರಂ ಪ್ರಾಣಕರಂ ।**

ಗೋಶಬ್ದಕ್ಕೆ ಸ್ತುತಿ ಅಥವಾ ಉದಕವೆಂದು ಅರ್ಥ. ರಭಸ ಎಂಬುವುದು ಮಹನ್ನಾಮಗಳಲ್ಲಿ ಉಕ್ತವಾಗಿದೆ (ನಿ. ೩-೧೩) ಹವಿಸ್ಸುಗಳು, ಸ್ತುತಿಗಳಿಂದಲೂ ಸಂಸ್ಕೃತವಾದ ಉದಕಗಳಿಂದಲೂ ಮಹತ್ವಪೂರಿತಗಳಾಗಿರುವವು ಎಂದು ಅರ್ಥವನ್ನು ವಿವರಿಸಿ ವಾತಾಪ್ಯ ಎಂದರೆ ಪ್ರಾಣವನ್ನು ಬಲವುಳ್ಳದ್ದನ್ನಾಗಿ ಮಾಡುವುದು. ಅಥವಾ ಪ್ರಾಣಕ್ಕೆ ಹಿತವನ್ನು ಉಂಟುಮಾಡುವ ಉದಕರೂಪವಾದ ಹವಿಸ್ಸು ಎಂದು ಅರ್ಥವನ್ನು ವರ್ಣಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಷ್ಟಾ**—ಅಶ ಭೋಜನೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ, **ಆಗಮಾನುಶಾಸನಮನಿತ್ಯಮ್** ಎಂಬ ಪರಿಭಾಷೆಯಿಂದ ಇಡಾಗಮ ಬರುವುದಿಲ್ಲ. **ವ್ರಶ್ಚಭ್ರಸ್ಜಸೃಜ**—(ಪಾ. ಸೂ. ೮-೨-೩೬) ಎಂಬುದರಿಂದ ಶಕಾರಕ್ಕೆ ಷತ್ವ- ಅದನ್ನು ನಿಮಿತ್ತೀಕರಿಸಿ ಪ್ರತ್ಯಯ ತಕಾರಕ್ಕೆ ಷ್ಟುತ್ವ. ಪ್ರಥಮಾಏಕವಚನದಲ್ಲಿ ಅಷ್ಟಾ ಎಂದು ರೂಪವಾಗುತ್ತದೆ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ

**ಮಹಃ**— ಮಹತಃ ಎಂದು ರೂಪವಾದಾಗ ಛಾಂದಸವಾಗಿ ತಕಾರ ಲೋಪ ಬರುತ್ತದೆ.

**ದಿವಃ— ಊಡಿದಂ ಪದಾದಿ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವ ಬರುತ್ತದೆ.

**ದ್ಯುಮ್ನಾಸಾಹಮ್—**ಷಹ ಅಭಿಭವೇ ಧಾತು. **ಧಾತ್ವಾದೇಃಷಃ ಸಃ** (ಪಾ. ಸೂ. ೬-೧-೬೪)ಎಂಬುದರಿಂದ ಧಾತ್ವಾದಿಗೆ ಸತ್ವ. ಣ್ವಿ ಪ್ರತ್ಯಯ. ಉಪಧಾವೃದ್ಧಿ. **ಅನ್ಯೇಷಾಮಪಿ ದೃಶ್ಯತೇ** ಎಂಬುದರಿಂದ ಪೂರ್ವ ಪದಕ್ಕೆ ದೀರ್ಘ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಯೋಧಾನಃ**—ಯುಧ ಸಂಪ್ರಹಾರೇ ಧಾತು. ತಚ್ಛೀಲಾರ್ಥ ತೋರುವಾಗ **ತಾಚ್ಛೀಲ್ಯವಯೋವಚನೇಷು ಚಾನಶ್** (ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮಂದಿನಮ್**—ಮದಿ ಹರ್ಷೇ ಧಾತು. **ಇದಿತೋನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ತಾಚ್ಛೀಲ್ಯಾರ್ಥದಲ್ಲಿ ಣಿನಿಪ್ರತ್ಯಯ. ಮಂದಿನ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ.

**ಧುಕ್ಷನ್**—ದುಹ ಪ್ರಪೂರಣೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿಲುಙ್ ಲಙ್ ಲಿಟಃ** (ಪಾ. ಸೂ. ೩-೪.೬) ಎಂಬುದರಿಂದ ಲುಙ್. ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ. **ಝೋಽಂತಃ** ಎಂಬುದರಿಂದ ಅಂತಾದೇಶ. **ಶಲ ಇಗುಪಧಾದನಿಟಃಕ್ಸಃ** (ಪಾ. ಸೂ. ೩-೧-೪೫) ಎಂಬುದರಿಂದ ಚ್ಲಿಗೆ ಕ್ಸಾದೇಶ. ದುಹ್+ಸ+ಅನ್ ಎಂದಿರುವಾಗ **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಷಢೋಃಕಃಸಿ** (ಪಾ. ಸೂ. ೮-೨-೪೧) ಎಂಬುದರಿಂದ ಸಕಾರ ಪರವಾದುದರಿಂದ ಢಕಾರಕ್ಕೆ ಕತ್ವ. ಕಕಾರದ ಪರದಲ್ಲಿ ಸಕಾರ ಬಂದುದರಿಂದ **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಸಕಾರಕ್ಕೆ ಷತ್ವ. **ಅತೋಗುಣೇ** ಎಂಬುದರಿಂದ ಪರರೂಪ. **ಬಹುಲಂ ಛಂದಸ್ಯಮಾಙ್ ಯೋಗ್ಯೇಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಪದಕಾಲದಲ್ಲಿ ಭಷ್‌ಭಾವವು ಛಾಂದಸವಾಗಿ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಕ್ಸ ಪ್ರತ್ಯಯಸ್ವರ ಬರುತ್ತದೆ.

**ಆದಃ**—ಅದ ಭಕ್ಷಣೇ ಧಾತು. ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರ ಲೋಪ. **ಅದಃಸರ್ವೇಷಾಮ್** (ಪಾ. ಸೂ. ೭-೩-೧೦೦) ಎಂಬುದರಿಂದ ಅದಕ್ಕೆ ಅಡಾಗಮ. ಶಪಿಗೆ ಲುಕ್. **ಆಡಜಾದೀನಾಂ** ಎಂಬುದರಿಂದ ಅಂಗಕ್ಕೆ ಆಡಾಗಮ ವೃದ್ಧಿ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ.

ಸಂಹಿತಾಪಾಠಃ

ತ್ವಮಾಯಸಂ ಪ್ರತಿ ವರ್ತಯೋ ಗೋರ್ದಿವೋ ಅಶ್ಮಾನಮುಪನೀತಮೃಭ್ವಾ ।

ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿ-

ಯಾಸಿ ವಧೈಃ ॥ ೯ ॥

ಪದಪಾಠಃ

ತ್ವಂ । ಆಯಸಂ । ಪ್ರತಿ । ವರ್ತಯಃ । ಗೋಃ । ದಿವಃ । ಅಶ್ಮಾನಂ । ಉಪ-

ನೀತಂ । ಋಭ್ವಾ ॥

ಕುತ್ಸಾಯ । ಯತ್ರ । ಪುರುऽಹೂತ । ವನ್ವನ್ । ಶುಷ್ಣಂ । ಅನಂತೈಃ । ಪ-

ರಿऽಯಾಸಿ । ವಧೈಃ ॥ ೯ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಗೋರ್ಗಂತುಃ ಶುಷ್ಣಸ್ಯಾಸುರಸ್ಯ ವಧಾರ್ಥಮಾಯಸಮಯೋಮಯಂ ವಜ್ರಂ ಪ್ರತಿ ವರ್ತಯಃ । ಅಭಿಮುಖ್ಯೇನ ವ್ಯಸೃಜಃ । ಕೀದೃಶಂ ವಜ್ರಂ । ದಿವೋ ದ್ಯುಲೋಕಾದೃಭ್ವಾ ದೀಪ್ತೇನ ತ್ವಷ್ಟ್ರೋಪನೀತಮಾನೀತಂ ಅಶ್ಮಾನಂ ಶೀಘ್ರಂ ಶತ್ರೋರ್ವ್ಯಾಪಕಂ । ಯತ್ರ ಯದಾ ಹೇ ಪುರುಹೂತ ಪುರುಭಿರ್ಬಹುಭಿಃ ಸ್ತೋತೃಭಿರಾಹೂತೇಂದ್ರ ಕುತ್ಸಾಯೈತತ್ಸಂಜ್ಞಾಯರ್ಷಯೇ ಶುಷ್ಣಂ ಶೋಷಕಮಸುರಮನಂತೈರ್ನಿರವಧಿಕೈರ್ವಧೈರ್ಹನನಸಾಧನೈರಾಯುಧೈರ್ವನ್ವನ್ ಹಿಂಸನ್ ಪರಿಯಾಸಿ ಪರಿತೋ ಗಚ್ಛಸಿ । ತದಾನೀಂ ತದ್ವಧಾರ್ಥಂ ವಜ್ರಂ ಪ್ರತ್ಯವರ್ತಯ ಇತ್ಯರ್ಥಃ ॥ ಅಶ್ಮಾನಂ ಅಶೂ ವ್ಯಾಪ್ತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಋಭ್ವಾ । ಜಸಾದಿಷು ಛಂದಸಿ ವಾವಚನಮಿತಿ ನಾಭಾವಸ್ಯ ವಿಕಲ್ಪಿತತ್ವಾದಭಾವೇ ಯಣಾದೇಶಃ । ವನ್ವನ್ । ವನು ಯಾಚನೇ । ಅತ್ರ ಹಿಂಸಾರ್ಥಃ । ತಥಾ ಚ ಯಾಸ್ಕಃ । ವನುಷ್ಯತಿರ್ಹಂತಿಕರ್ಮಾನವಗತಸಂಸ್ಕಾರೋ ಭವತಿ । ನಿ. ೫-೨ । ಇತಿ । ವಧೈಃ । ಹನಶ್ಚ ವಧ ಇತಿ ಹಂತೇಃ ಕರಣೇಽಪ್ । ತತ್ಸಂನಿಯೋಗೇನ ವಧಾದೇಶಶ್ಚ । ಸಚಾದಂತೋಽಂತೋದಾತ್ತಃ । ತಸ್ಯಾತೋ ಲೋಪೇ ಸತ್ಯುದಾತ್ತನಿವೃತ್ತಿಸ್ವರೇಣ ಪ್ರತ್ಯಯಸ್ಯೋದಾತ್ತತ್ವಂ ॥

ಪ್ರತಿಪದಾರ್ಥ

ಯತ್ರ—ಯಾವಾಗ । ಪುರುಹೂತ—ಅನೇಕ (ಸ್ತೋತೃಗಳಿಂದ) ಕರೆಯಲ್ಪಡುವ ಎಲೈ ಇಂದ್ರನೇ । ಕುತ್ಸಾಯ—ಕುತ್ಸ ಎಂಬ ಋಷಿಗೋಸ್ಕರ । ಶುಷ್ಣಂ—ಹಿಂಸಕನಾದ ಅಸುರನನ್ನು (ಎದುರಿಸಿ) । ಅನಂತೈಃ—

ಅಸಂಖ್ಯಾತವಾದ | **ವಧೈಃ**—ವಧಕಾರಿಗಳಾದ ಆಯುಧಗಳೊಡನೆ | **ವನ್ವರ್**—ಹಿಂಸಿಸುತ್ತಾ | **ಪರಿಯಾಸಿ**—ಹೋಗುತ್ತೀಯೋ | ( **ತದಾ**—ಆಗ) | **ತ್ವಂ**—ನೀನು | **ಗೋಃ**—(ವೇಗವಾಗಿ) ಚಲಿಸುತ್ತಿರುವ (ಅಸುರನ ವಧಾರ್ಥವಾಗಿ) | **ದಿವಃ**—ಸ್ವರ್ಗಲೋಕದಿಂದ | **ಋಭ್ವಾ**—ತೇಜಸ್ವಿಯಾದ (ಋಭುವಿನಿಂದ) | **ಉಪನೀತಂ**—ತರಲ್ಪಟ್ಟರೂ| **ಅಶ್ಮಾನಂ**— ಶೀಘ್ರವಾಗಿ (ಶತ್ರುವನ್ನು) ಎದುರಿಸುವುದೂ ಆದ | **ಆಯಸಂ**—ಕಬ್ಬಿಣದಿಂದ ಮಾಡಿದ (ವಜ್ರಾಯುಧವನ್ನು) | **ಪ್ರತಿ ವರ್ತಯಃ**—ಎಸೆದೆ.

ಭಾವಾರ್ಥ

ಅನೇಕರಿಂದ ಕರೆಯಲ್ಪಡುವ ಎಲೈ ಇಂದ್ರನೇ, ಕುತ್ಸಋಷಿಗೋಸ್ಕರ, ಹಿಂಸಕನಾದ ಅಸುರನನ್ನು (ಎದುರಿಸಿ) ಅನೇಕ ಆಯುಧಯುಕ್ತನಾಗಿ ಹೋದಾಗ, ವೇಗವಾಗಿ ಚಲಿಸುತ್ತಿರುವ ಅವನ ಮೇಲೆ, ಸ್ವರ್ಗಲೋಕದಿಂದ ಋಭುವು ತಂದುಕೊಟ್ಟ ಮತ್ತು ಕಬ್ಬಿಣದಿಂದ ಮಾಡಿದ (ನಿನ್ನ) ವಜ್ರಾಯುಧವನ್ನು ಪ್ರಯೋಗಿಸಿದೆ.

English Translation

You hurled your iron bolt upon the quick-moving ( Asura ), the swift destroyer of foes, that was brought ( to you ) by Ribhu from heaven; when you, who are worshipped by many, striking Sushna for the sake of Kutsa, encompassed him with numberless fatal ( weapons ).

ವಿಶೇಷವಿಷಯಗಳು

**ಋಭ್ವಾ—ದೀಪ್ತೇನ ತ್ವಷ್ಟ್ರಾ** | ಋಭು ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿರುತ್ತದೆ **ಉರು ಭಾಂತೀತಿವಾ** (ನಿ. ೧೧-೧೬) ಎಂದು ಯಾಸ್ಕರು ನಿರುಕ್ತಶಬ್ದದ ಅರ್ಥವನ್ನು ನಿರ್ವಚನಮಾಡಿರುವುದರಿಂದ ಬಹಳ ಕಾಂತಿಯುಳ್ಳವನಾದ ತ್ವಷ್ಟೃ ಬ್ರಹ್ಮನೆಂದು ಸಾಯಣರೂ, ಮೇಧಾವಿಯಾದ ಇಂದ್ರನೆಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುತ್ತಾರೆ.

**ವನ್ವರ್ ಪರಿಯಾಸಿ— ಹಿಂಸರ್ ಪರಿತಃ ಗಚ್ಛಸಿ** | ಶುಷ್ಣನೆಂಬ ಅಸುರನನ್ನು ಹಿಂಸೆಮಾಡುವವನಾಗಿ ಅವನ ಸುತ್ತಲೂ ಅವನಿಗೆ ಎದುರಾಗಿಯೂ ಇಂದ್ರನು ಹೋಗಿ ಯುದ್ಧಮಾಡುವನೆಂದು ಸಾಯಣರ ವ್ಯಾಖ್ಯಾನ. **ವನ್ವರ್ ಯಾಚಮಾನಃ ಕುತ್ಸಸ್ಯಾಭಿಮತಂ ಪ್ರಾರ್ಥಯಮಾನಃ ಶುಷ್ಣಂ ನಾಮ ಅಸುರಂ ಪರಿಯಾಸಿ** | **ಪರಿಯಾತಿ ಇತಿ ವಧ ಕರ್ಮಸು ಪಾಠಾತ್ ಯಾತಿರತ್ರ ವಧಾರ್ಥಃ**. ಸ್ಕಂದಸ್ವಾಮಿಗಳು ವನ್ವರ್ ಎಂಬ ಪದಕ್ಕೆ ಯಾಚನೆ ಎಂದು ಅರ್ಥಮಾಡಿ ಕುತ್ಸರುಷಿಯ ಪ್ರಾರ್ಥಿಸುತ್ತಿರುವ ಇಷ್ಟವನ್ನು ಸಾಧಿಸುವುದಕ್ಕಾಗಿ ಇಂದ್ರನು ಶುಷ್ಣನೆಂಬ ಅಸುರನನ್ನು ವಧಿಸಿರುವನು ಎಂದು ವರ್ಣಿಸಿರುವರು. ಮತ್ತು ಪರಿ ಎಂಬ ಉಪಸರ್ಗದಿಂದ ಕೂಡಿರುವ ಯಾಧಾತುವು ವಧ ಎಂಬ ಅರ್ಥವನ್ನು ಬೋಧಿಸುವುದು ಎಂದು ವ್ಯಾಖ್ಯಾನಮಾಡಿ,

**ಯುಯೋ ವಜ್ರಿವಃ ಪರಿಯಾಸ್ಯಂಹೋ ಮ ಘಾಚ ಧೃಷ್ಣೋ ದಯಸೇ ವಿ ಸೂರೀನ್** |

(ಋ. ಸಂ. ೬-೩೭-೪)

ಎಂಬ ಋಕ್ಕನ್ನು ಉದಾಹರಿಸಿ **ವಧೈಃ ಪ್ರಹಾರೈಃ** ವಧ ಎಂದರೆ ಪ್ರಹಾರ ಎಂದು ಅರ್ಥವನ್ನು ಮಾಡಿರುವರು. ವಧೈಃ ಹನನ ಸಾಧನೈರಾಯುಧೈಃ— ಎಂದು ಸಾಯಣರ ವಿವರಣೆ.

ವನ್ವ್ ಎಂಬ ಶಬ್ದವು ಹಿಂಸಾರ್ಥವಾಗಿ ಪ್ರಯುಕ್ತವಾಗಿರುವುದೆಂದು ಯಾಸ್ಕರು **ವನುಷ್ಯತಿರ್ಹಂತಿ ಕರ್ಮಾನವಗತಸಂಸ್ಕಾರೋ ಭವತಿ** (ನಿ. ೫-೨) ವನಧಾತುವು ವಧ ಎಂಬ ಅರ್ಥವನ್ನು ಬೋಧಿಸುವುದು ಎಂದು ಅರ್ಥಮಾಡಿರುವರು.

ವ್ಯಾಕರಣಪ್ರಕ್ರಿಯಾ

**ಆಯಸಮ್**—ಅಯಸಃ ವಿಕಾರಃ ಆಯಸಮ್. ವಿಕಾರಾರ್ಥದಲ್ಲಿ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ**—ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವರ್ತಯಃ**—ವೃತು ವರ್ತನೇ. ಧಾತು. **ಹೇತುಮತಿಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ, ಣಿಜಂತದ ಮೇಲೆ ಲಟ್ ಮಧ್ಯಮ ಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಗೋಃ**—ಗಮ್ಲೃ ಗತೌ. ಧಾತು. **ಗಮೇರ್ಡೋಸ್**—(ಉ. ಸೂ. ೨-೨೨೫) ಎಂಬುದರಿಂದ ಡೋಸ್ ಪ್ರತ್ಯಯ. ಡಿತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಗೋಶಬ್ದವಾಗುತ್ತದೆ. ಷಷ್ಠೀ ಏಕವಚನಾಂತರೂಪ.

**ದಿವಃ**—ದಿವು ಧಾತುವಿಗೆ **ದಿವೇರ್ಡಿವಿಃ**—ಎಂಬುದರಿಂದ ಡಿವಿ ಪ್ರತ್ಯಯ. ಹಿಂದಿನಂತೆ ಟಿಗೆ ಲೋಪ. ದಿವ್‌ಶಬ್ದವಾಗುತ್ತದೆ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಶ್ಮಾನಮ್**—ಅಶೂ ವ್ಯಾಪ್ತೌ. ಧಾತು **ಅನ್ಯೇಭ್ಯೋಽಪಿ ದೃಶ್ಯಂತೇ**—(ಪಾ. ಸೂ. ೩-೨-೭೫) ಎಂಬುದರಿಂದ ಮನಿನ್‌ಪ್ರತ್ಯಯ. ಅಶ್ಮನ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್**—(ಪಾ. ಸೂ. ೬-೧-೧೯೭) ಎಂಬುದರಿಂದ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಉಪನೀತಮ್**—ಣೀಞ್ ಪ್ರಾಪಣೇ. ಧಾತು. **ನಿಷ್ಠಾ**—ಎಂಬುದರಿಂದ ಕ್ತಪ್ರತ್ಯಯ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಋಭ್ವಾ**—ಋಭು+ಆ ಎಂದಿರುವಾಗ, **ಜಸಾದಿಷು ಛಂದಸಿ ವಾ ವಚನಮ್**—ಎಂಬ ವಚನದಿಂದ ನಾಭಾವವು ವಿಕಲ್ಪಿತವಾದುದರಿಂದ ಅದು ಬಾರದಿರುವಾಗ ಯಣಾದೇಶ ಬರುತ್ತದೆ.

**ವನ್ವನ್**—ವನು ಯಾಚನೇ ಧಾತು. ಧಾತುಗಳಿಗೆ ಅನೇಕಾರ್ಥವು ಇರುವುದರಿಂದ ಇಲ್ಲಿ ಹಿಂಸಾರ್ಥದಲ್ಲಿ ಪ್ರಯುಕ್ತವಾಗಿದೆ. ಇದನ್ನು ಯಾಸ್ಕರೂ ಹೇಳಿರುತ್ತಾರೆ. " ವನುಷ್ಯತಿರ್ಹಂತಿಕರ್ಮಾನವಗತಸಂಸ್ಕಾರೋ ಭವತಿ '' (ನಿರು. ೫-೨) ಇತಿ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ.

**ಅನಂತೈಃ**—ನ ವಿದ್ಯತೇ ಅಂತಃ ಯೇಷಾಂ ತೇ ಅನಂತಾಃ ತೈಃ **ನಞ್ಸುಭ್ಯಾಮ್**— (ಪಾ; ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಪರಿಯಾಸಿ**—ಯಾ ಪ್ರಾಪಣೇ ಧಾತು. ಲಟ್ ಮಧ್ಯಮಪುರುಷಏಕವಚನರೂಪ. ಯತ್ರ ಎಂದು ಹಿಂದೆ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. **ತಿಙಿಚೋದಾತ್ತವತಿ**—(ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಪರಿ) ಸರ್ವಾನುದಾತ್ತಸ್ವರ ಬರುತ್ತದೆ.

**ವಧೈಃ**—ಹನ ಹಿಂಸಾಗತ್ಯೋಃ। **ಹನಶ್ಚ ವಧಃ**—(ಪಾ. ಸೂ. ೩ ೩-೭೬) ಎಂಬುದರಿಂದ ಇದಕ್ಕೆ ಕರಣಾರ್ಥದಲ್ಲಿ ಅಪ್ ಪ್ರತ್ಯಯ. ತತ್ಸನ್ನಿಯೋಗದಿಂದ ಪ್ರಕೃತಿಗೆ ವಧಾದೇಶ. ಇದು ಅಂತೋದಾತ್ತವೆಂದು ವ್ಯಾಖ್ಯಾತವಾಗಿದೆ. **ಅತೋಲೋಪಃ**—(ಪಾ. ಸೂ. ೬-೪-೪೮) ಎಂಬುದರಿಂದ ಅದರ ಅಕಾರಕ್ಕೆ ಲೋಪ. **ಅನುದಾತ್ತಸ್ಯ ಯತ್ರೋದಾತ್ತಲೋಪಃ** - (ಪಾ. ಸೂ. ೬-೧-೧೬೧) ಎಂಬುದರಿಂದ ಪ್ರತ್ಯಯಕ್ಕೆ ಉದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ. ॥ ೯ ॥

॥ ಸಂಹಿತಾಪಾಠಃ ॥

ಪುರಾ ಯತ್ಸೂರಸ್ತಮಸೋ ಅಪೀತೇಸ್ತಮದ್ರಿವಃ ಫಲಿಗಂ
ಹೇತಿಮಸ್ಯ ।
ಶುಷ್ಣಸ್ಯ ಚಿತ್ಪರಿಹಿತಂ ಯದೋಜೋ ದಿವಸ್ಪರಿ ಸುಗ್ರಥಿತಂ
ತದಾದಃ । ॥ ೧೦ ॥

ಪದಪಾಠಃ

ಪುರಾ । ಯತ್ । ಸೂರಃ । ತಮಸಃ । ಅಪಿऽಇತೇಃ । ತಂ । ಅದ್ರಿऽವಃ ।
ಫಲಿऽಗಂ । ಹೇತಿಂ । ಅಸ್ಯ ।

ಶುಷ್ಣಸ್ಯ । ಚಿತ್ । ಪರಿಽಹಿತಂ । ಯತ್ । ಓಜಃ । ದಿವಃ । ಪರಿ । ಸುಽ-
ಗ್ರಥಿತಂ । ತತ್ । ಅ । ಅದರಿತ್ಯದಃ ॥ ೧೦ ॥

ಸಾಯಣಭಾಷ್ಯಂ

ಪುರಾ ಯದ್ಯದಾ ಸೂರಃ ಸೂರ್ಯಸ್ತಮಸಸ್ತಮೋರೂಪಸ್ಯ ಶುಷ್ಣಸ್ಯಾಸುರಸ್ಯಾಪೀತೇಃ ಸಂಗ್ರಾ-ಮಾನ್ಮುಕ್ತೋಽಭವದಿತಿ ಶೇಷಃ । ತದಾನೀಂ ಹೇ ಅದ್ರಿವಃ । ಆದೃಣಾತ್ಯನೇನೇತ್ಯದ್ರಿರ್ವಜ್ರಃ । ತದ್ವಾ-ನ್ನಿಂದ್ರ ತಂ ಫಲಿಗಂ । ಮೇಘನಾಮೈತತ್ । ಮೇಘರೂಪೇಣಾವೃಣ್ವಂತಂ ಹೇತಿಂ ಹಂತಾರಂ ಶುಷ್ಣಮ-ಸುರಮಸ್ಯ । ನಿರಸಿತವಾನಸಿ । ಯದ್ವಾ । ಅಸ್ಯ ಶುಷ್ಣಸ್ಯಾಸುರಸ್ಯ ಹೇತಿಂ ಹನನಸಾಧನಮಾಯುಧಂ ಫಲಿಗಂ ಮೇಘಲಕ್ಷಣಂ ಪ್ರಾಭಾಂಕ್ಷೀರಿತಿ ಶೇಷಃ । ತಥಾ ಶುಷ್ಣಸ್ಯ ಚಿತ್ ಶೋಷಯಿತುರಸುರಸ್ಯ ಚ ಯದೋಜ ಆಚ್ಛಾದಕಂ ಬಲಂ ದಿವಸ್ಪರಿ ದ್ಯೋತಮಾನಸ್ಯ ಸೂರ್ಯಸ್ಯೋಪರಿ ಪರಿಹಿತಮಾಚ್ಛಾದಿತಂ ಸುಗ್ರಥಿತಂ ಸುಷ್ಠು ಸೂರ್ಯೇ ಸಕ್ತಂ ತದೋಜಸ್ತಸ್ಮಾತ್ಸೂರ್ಯಾದಾದಃ । ಆದೃಣಾಃ । ವಿಶ್ಲಿಷ್ಟಂ ಕೃತವಾನಸೀತ್ಯರ್ಥಃ ॥ ಅದ್ರಿವಃ । ಛಂದಸೀರ ಇತಿ ಮತುಪೋ ವತ್ವಂ । ಮತುವಸೋರುರಿತಿ ನಕಾರಸ್ಯ ರುತ್ವಂ । ಹೇತಿಂ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾದ್ಧಂತೇಃ ಕರ್ತರಿ ಕ್ತಿನ್ । ಊತಿಯೂ-ತೀತ್ಯಾದೌ ನಿಪಾತನಾದ್ರೂಪಸಿದ್ಧಿರಂತೋದಾತ್ತತ್ವಂ ಚ । ಅಸ್ಯ । ಅಸು ಕ್ಷೇಪಣೇ । ಲಟಃ ಸಿಪ್ । ತಸ್ಯ ವ್ಯತ್ಯಯೇನ ಹ್ಯಾದೇಶಃ । ಅತೋ ಹೇರಿತಿ ಹೇರ್ಲುಕ್ । ದಿವಸ್ಪರಿ । ಪಂಚಮ್ಯಾಃ ಪರಾವಧ್ಯರ್ಥ ಇತಿ ವಿಸರ್ಜನೀಯಸ್ಯ ಸತ್ವಂ । ಆದಃ । ದೄ ವಿದಾರಣೇ । ಲಙಿ ಸಿಪಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಗುಣೇ ಹಲ್ಙ್ಯಾಭ್ಯ ಇತಿ ಸಿಲೋಪಃ ॥

ಪ್ರತಿಪದಾರ್ಥ

**ಪುರಾ**—ಹಿಂದೆ । **ಯತ್**—ಯಾವಾಗ । **ಸೂರಃ**—ಸೂರ್ಯನು । **ತಮಸಃ**—ತಮಸ್ಸಿನೊಡನೆ (ತಮೋರೂಪನಾದ ಅಸುರನೊಡನೆ) । **ಅಪೀತೇಃ**— ಸಂಗ್ರಾಮದಿಂದ (ಮುಕ್ತನಾದನೋ) । (**ತತ್**— ಆಗ) । **ಹೇ ಅದ್ರಿವಃ**—ಅದ್ರಿಗಳನ್ನು ಭೇದಿಸುವ ವಜ್ರಧಾರಿಯಾದ ಎಲೈ ಇಂದ್ರನೇ । **ತಂ ಫಲಿಗಂ**—ಆ ಮೇಘರೂಪದಿಂದ ಆವರಕನಾದ (ಮೇಘರೂಪನಾದ । **ಹೇತಿಂ**—ಹಂತೃವಾದ (ಶುಷ್ಣಾಸುರನನ್ನು) **ಅಸ್ಯ**—ಭೇದಿಸಿದೆ ; ।(**ತಥಾ**—ಹಾಗೆಯೇ) । **ಶುಷ್ಣಸ್ಯ ಚಿತ್**—ಶುಷ್ಣಾಸುರನದೇ (ಆದ) । **ಯತ್ ಓಜಃ**—ಯಾವ ಆಚ್ಛಾದಕವಾದ ಬಲವು । **ದಿವಸ್ಪರಿ**—ದ್ಯೋತಮಾನನಾದ ಸೂರ್ಯನಮೇಲೆ । **ಪರಿಹಿತಂ**—ಹೊದಿಸಲ್ಪಟ್ಟಿತ್ತೋ । **ಸುಗ್ರಥಿತಂ**—ಚೆನ್ನಾಗಿ ಹೊಂದಿಕೊಂಡಿತ್ತೋ । **ತತ್**—ಆ (ಅಸುರನ) ಬಲವನ್ನು । **ಆದಃ**—ಕತ್ತರಿಸಿದೆ.

ಭಾವಾರ್ಥ

ಸೂರ್ಯನು (ಆವರಕವಾದ) ತಮಸ್ಸಿನಿಂದ (ತಮೋರೂಪರಾಕ್ಷಸನೊಡನೆ ಸಂಗ್ರಾಮದಿಂದ ಬಿಡುಗಡೆಹೊಂದಿ ಬಂದಾಗ ಆ ಸೂರ್ಯನಿಗೆ ಅಡ್ಡಿಯಾಗಿದ್ದ ಶುಷ್ಣಾಸುರನ) ಆಯುಧರೂಪವಾದ ಮೇಘವನ್ನು, ವಜ್ರಧಾರಿಯಾದ

ನೀನು ಛೇದಿಸಿದೆ; (ಅದೇರೀತಿ) ಸೂರ್ಯನನ್ನು ಮುಚ್ಚಿಕೊಂಡು (ಅವನನ್ನು) ಬಲವಾಗಿ ಹಿಡಿದುಕೊಂಡಿದ್ದ ಶುಷ್ಣಾಸುರನ (ಆವರಕವಾದ) ಬಲವನ್ನೂ ನಿವಾರಣೆಮಾಡಿದೆ.

## English Translation

When the sun ( had emerged ) from the stuggle with darkness, you broke, wielder of the thunderbolt, the cloud that had been his annoyance, and sunderred the well-fastened covering in which Sushna had enveloped him.

### ವಿಶೇಷವಿಷಯಗಳು

ಈ ಋಕ್ಕಿನ ಅರ್ಥವನ್ನು ವಿವರಿಸುವಾಗ ಸಾಯಣರು ಶುಷ್ಣನೆಂಬುವನು ಒಬ್ಬ ಅಸುರನೆಂದೂ, ಅವನು ವೃತ್ರನ ಹಾಗೆ ಇಂದ್ರನನ್ನು ಎದುರಿಸಿ ಯುದ್ಧಮಾಡಿದನೆಂದೂ ವರ್ಣಿಸಿದೆ. ಫಲಿಗನೆಂಬುವ ಪದವೂ ಶುಷ್ಣಪದದ ಹಾಗೆಯೇ ಅಸುರನ ಹೆಸರೆಂದು ಹೇಳಿದೆ. ಸಾಯಣರು ಈರೀತಿ ಅರ್ಥಮಾಡಿರುವುದಲ್ಲದೆ ಮೇಘರೂಪವಾದ ಅರ್ಥವನ್ನೂ ವಿವರಿಸಿರುತ್ತಾರೆ.

**ಅದ್ರಿವಃ—ಆದೃಣಾತಿ ಅನೇನೇತ್ಯದ್ರಿಃ ವಜ್ರಃ । ತದ್ವನ್ ಇಂದ್ರ ।** ಅದ್ರಿ ಶಬ್ದವು ಮೇಘನಾಮಗಳಲ್ಲಿ (ನಿ. ೨-೨೧) ಉಕ್ತವಾಗಿದೆ. **ಆದೃಣಾತ್ಯನೇ ನೇತಿ (ನಿ. ೪-೪) ಅದ್ರಿಃ ಅದ್ರಿಸಾರಮಯಮೇವ ಹ್ಯಾಯುಧಂ ಭವತೀತಿ ಅದ್ರಿರ್ವಜ್ರ ಉಚ್ಯತೇ । ಅಥವಾ ಸೋಮಾಭಿಷವಗ್ರಾವಭಿಸ್ತದ್ವಾನ್ ಅದ್ರಿವಾನ್ ಸ್ಯಾತ್ । ತೈರಪಿ ಹಿ ಸೋಮ ಆದಾರ್ಯತೆ. ಅಥವಾ ತೇ ಸೋಮಾದ ಇತಿ ಹ ವಿಜ್ಞಾಯತೇ ।**

**ತೇ ಸೋಮಾದೋ ಹರೀ ಇಂದ್ರಸ್ಯ ನಿಂಸತೇಂऽಶುಂ ದುಹಂತೋ ಅಧ್ಯಾಸತೇ ಗವಿ ।**
(ಋ. ಸಂ. ೧೦-೯೪-೯)

**ಅಸ್ಮಿನ್ ಮಂತ್ರೇ ಅತ್ತೇರದ್ರಿಃಸ್ಯಾದಿತಿ ಯಾಸ್ಕೇನ ವ್ಯಾಖ್ಯಾತಃ ।** ಯಾಸ್ಕರು ದೃ ವಿದಾರಣೇ ಸೀಳು ವುದು ಎಂಬ ಅರ್ಥವುಳ್ಳ ದೃಧಾತುವಿಗೆ ಆಙ್ ಉಪಸರ್ಗವು ಸೇರಿ ಅದ್ರಿ ಎಂದು ರೂಪವಾಗಿದೆ. ಬೆಟ್ಟಕ್ಕೆ ಸಮನಾದ ಶಕ್ತಿಯುಳ್ಳದ್ದಾಗಿರುವ ವಜ್ರಾಯುಧವು ಅದ್ರಿ ಶಬ್ದಕ್ಕೆ ಅರ್ಥವಾಗಿರುವುದು ಎಂದು ಅರ್ಥವನ್ನು ವಿವರಿಸಿರುವುದಲ್ಲದೆ ಬೇರೆ ವಿಧವಾಗಿಯೂ ಅದ್ರಿಶಬ್ದದ ಅರ್ಥವನ್ನು ವರ್ಣಿಸಿರುವರು. ಸೋಮರಸವನ್ನು ಕಲ್ಲುಗಳಿಂದ ಜಜ್ಜುವುದರಿಂದ ಕಲ್ಲುಗಳಿಗೆ ಅದ್ರಿ ಎಂದು ಹೆಸರು. ಅಥವಾ **ಸೋಮಾದ** ಎಂದು ಇಂದ್ರನಿಗೆ ಪ್ರಸಿದ್ಧಿಯು ಮಂತ್ರದಲ್ಲಿಯೇ ಉಕ್ತವಾಗಿರುವುದರಿಂದ ಅದ್—ಭಕ್ಷಿಸು ಎಂಬ ಧಾತುವಿನಿಂದಲೂ ಅದ್ರಿ ಎಂದು ರೂಪವಾಗುತ್ತದೆ ಆದ್ದರಿಂದ ಅದ್ರಿಯುಳ್ಳವನು ಅದ್ರಿವ ಎನಿಸಿಕೊಳ್ಳುವನು. ಇಂದ್ರನೆಂದು ಅರ್ಥ.

**ಸೂರಃ—ಸೂರ್ಯಃ। ತಮಸಃ ತಮೋರೂಪಸ್ಯ ಶುಷ್ಣಸ್ಯ ಅಧೀತೇಃ ಸಂಗ್ರಾಮಾತ್ ಮುಕ್ತೋऽಭವದಿತಿ ಶೇಷಃ ।** ಸೂರ್ಯರೂಪದಿಂದ ಇರುವ ಇಂದ್ರನು, ತಮಸ್ಸಿನ ರೂಪದಿಂದ ಸೂರ್ಯನನ್ನು ಆವರಿಸಿ ಲೋಕಕ್ಕೆ ತೊಂದರೆಯನ್ನು ಉಂಟುಮಾಡುತ್ತಿರುವ ಶುಷ್ಣನ ಸಂಗಡ ನಡೆದ ಯುದ್ಧಗಳಲ್ಲಿ ಜಯವನ್ನು ಹೊಂದಿ ಸೂರ್ಯರೂಪದಿಂದ ಪ್ರಕಾಶಿಸಿದನು.

**ತಂ ಫಲಿಗಂ ಹೇತಿಮಸ್ಯ— ಮೇಘನಾಮ್ನೈತತ್-- ಮೇಘರೂಪೇಣಾವೃಣ್ವಂತಂ ಹಂತಾರಂ ಶುಷ್ಣಮಸುರಂ ನಿರಸಿತವಾನಸಿ । ಯದ್ವಾ ಅಸ್ಯ ಶುಷ್ಣಸ್ಯಾಸುರಸ್ಯ ಹೇತಿಂ ಹನನಸಾಧನಮಾಯುಧಂ ಫಲಿಗಂ ಮೇಘಲಕ್ಷಣಂ ಪ್ರಾಭಾಂಕ್ಷೀರಿತಿ ಶೇಷಃ ।** ಫಲಿಗ ಶಬ್ದವು ಮೇಘನಾಮಗಳಲ್ಲಿ (ನಿ. ೨-೨೧) ಉಕ್ತವಾಗಿರುತ್ತದೆ. ಶುಷ್ಣನು ಸೂರ್ಯನನ್ನು ಆವರಿಸುವಾಗ ಅವನಿಗೆ ಸಹಾಯಕನಾಗಿ ಫಲಿಗನೆಂಬುವನು ಮೇಘದ ಆಕಾರವನ್ನು ವಹಿಸಿದ್ದನು. ಆದ್ದರಿಂದ ಶುಷ್ಣನ ಆಯುಧರೂಪದಿಂದ ಇದ್ದ ಫಲಿಗನನ್ನೂ ಇಂದ್ರನು ನಾಶಮಾಡಿದನೆಂದು ಅರ್ಥ.

**ಶುಷ್ಣಸ್ಯ—ಶೋಷಯಿತುರಸುರಸ್ಯ**—ನೀರನ್ನು ಹೀರುವ ಶುಷ್ಣನೆಂಬ ಹೆಸರುಳ್ಳ ಅಸುರನ ಎಂದು ಅರ್ಥ. ಶುಷ್ಣಶಬ್ದವು ಮೇಘನಾಮಗಳಲ್ಲಿ (ನಿ. ೨-೯) ಉಕ್ತವಾಗಿದೆ.

**ನ್ಯಾವಿಧ್ಯದಿಲೀವಿಶಸ್ಯ ದೃಹ್ಳಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ ।**
**ಯಾವತ್ತರೋ ಮಘವನ್ ಯಾವದೋಜೋ ವಜ್ರೇಣ ಶತ್ರುಮವಧೀಃ ಪೃತನ್ಯುಂ ॥**
(ಋ. ಸಂ. ೧-೩೩-೧೨)

ಈ ಋಕ್ಕಿನಲ್ಲಿ (ನಿ ೬-೨೦) ಶುಷ್ಣ ಎಂಬ ಪದವು ಮೇಘವಾಚಿಯಾಗಿರುವುದು.

**ನಿ ಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ।**
(ಋ. ಸಂ. ೧-೫೪-೫)

ಶುಷ್ಣಸ್ಯಾದಿತ್ಯಸ್ಯ ಶೋಷಯಿತುಃ (ನಿ. ೫-೧೬) ನೀರನ್ನು ಶೋಷಣೆಮಾಡುವ ಸೂರ್ಯನ ಎಂದು ಅರ್ಥವನ್ನು ಯಾಸ್ಕರ ವಿವರಿಸಿದ್ದಾರೆ. ಸ್ಕಂದಸ್ವಾಮಿಗಳು, ಸಾಯಣರು ಈ ಋಕ್ಕಿಗೆ ಅರ್ಥವನ್ನು ವಿವರಿಸಿದಂತೆಯೇ ಅರ್ಥವನ್ನು ವಿವರಿಸಿ ಇದಕ್ಕೆ ಸಂಬಂಧಿಸಿದ ಇತಿಹಾಸವನ್ನು ವರ್ಣಿಸಿರುವರು.

**ಅತ್ರೇತಿಹಾಸ ಮಾಚಕ್ಷತೇ । ವೃತ್ರಃ ಕಿಲ ಸೂರ್ಯರೋಧನಸಮರ್ಥಂ ತಮಸ್ತತಾನ । ತಂ ಹತ್ವೇಂದ್ರಃ ತಮಸೋ ಅಪನೋದನಾರ್ಥಂ ಸೂರ್ಯಂ ದಿವಿ ಆರೋಹಯಾಂ ಚಕಾರ । ತದೇತತ್ ಸವ್ಯೇನೋಕ್ತಂ ।**

**ತ್ವಮಪಾಮಪಿಧಾನಾವೃಣೋರಪಾಧಾರಯಃ ಪರ್ವತೇ ದಾನುಮದ್ವಸು ।**
**ವೃತ್ರಂ ಯದಿಂದ್ರ ಶವಸಾವಧೀರಹಿಮಾದಿತ್ಸೂರ್ಯಂ ದಿವ್ಯಾರೋಹಯೋ ದೃಶೇ ॥**
(ಋ. ಸಂ. ೧-೫೧-೪)

**ಇತಿ । ತತ್ರ ತಮಸ್ಯವತೋ ವೃತ್ರಸ್ಯ ಫಲಿಗೋಽಪಿ ಸಹಾಯೋ ಬಭೂವ ತಮಪೀಂದ್ರೋ ಜಘಾನೇತಿ । ಅಥವಾ ಏವಮನ್ಯಥಾ ಅಸ್ಯಾ ಋಚೋ ಅರ್ಥಯೋಜನಾ । ಫಲಿಗ ಇತಿ ಮೇಘನಾಮ । ಯ ಉದಕಂ ನಿರುಧ್ಯ ಸ್ಥಿತಃ ತಂ ಮೇಘಂ ಪ್ರತಿ ಪುರಾ ತತ್ಕೃತಸ್ಯ ಸೂರ್ಯನಿರೋಧಸಮರ್ಥಸ್ಯ ತಮಸಃ ಅಪಗತೇಃ ವಜ್ರಂ ಕ್ಷಿಪ । ಶುಷ್ಣಸ್ಯ ಚ ಶೋಷಯಿತುರಾದಿತ್ಯಸ್ಯ ಸ್ವಭೂತಂ ರಶ್ಮಿಭಿರಾಹೃತಸ್ಯ ಸರ್ವತೋ ನಿಹಿತಂ ಯದೋಜಃ ಓಜ ಇತ್ಯುದಕನಾಮ । ಉದಕಂ ಸುಗ್ರಥಿತಂ । ತಚ್ಛಾದಾರಯ ।**

**ಓಜಃ** ಎಂಬ ಪದವು ಉದಕನಾಮಗಳಲ್ಲಿ (ನಿ ೨-೨೪) ಉಕ್ತವಾಗಿರುವುದರಿಂದ ಉದಕವೆಂಬ ಅರ್ಥವನ್ನು ಬೋಧಿಸುವುದು. ಇಂದ್ರನು ವೃತ್ರನನ್ನು ನಿಗ್ರಹಮಾಡಿದ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳಿರುವರು. ವೃತ್ರಾಸುರನು ಸೂರ್ಯನ ಪ್ರಕಾಶವನ್ನು ತಡದು ಕತ್ತಲೆಯನ್ನುಂಟುಮಾಡುವಂತೆ ಸಾಮರ್ಥ್ಯವುಳ್ಳ ಕಗ್ಗತ್ತಲೆಯನ್ನು ನಿರ್ಮಿಸಿದ್ದನು. ಇಂದ್ರನು ಆ ಕತ್ತಲೆಯನ್ನು ನಾಶಮಾಡಿ ಅವನನ್ನು ಕೊಂದು ಉಳಿದಿರುವ ಕತ್ತಲೆಯ ಸಂಬಂಧವಾದ ಮಲಿನತೆಯನ್ನು ನಾಶಪಡಿಸುವುದಕ್ಕಾಗಿ ಅಂತರಿಕ್ಷದಲ್ಲಿ ಇರುವ ಸೂರ್ಯಮಂಡಲವನ್ನು ಪ್ರವೇಶಿಸಿ ಸೂರ್ಯನ ರೂಪದಿಂದ ಪ್ರಕಾಶಿಸಿದನು. "ವೃತ್ರಂ ಯದಿಂದ್ರ" ಎಂಬ ಅರ್ಥಋಕ್ಕಿನಲ್ಲಿ ಈ ವಿಷಯವು ಉಕ್ತವಾಗಿದೆ. ಹೀಗೆ ಕತ್ತಲೆಯನ್ನು ನಿರ್ಮಿಸಿ ಅದನ್ನು ನಾಶವಾಗದಂತೆ ರಕ್ಷಿಸುತ್ತಿದ್ದ ವೃತ್ರನಿಗೆ ಫಲಿಗನೆಂಬುವನು ಸಹಾಯ ಮಾಡುತ್ತಿದ್ದನು. ಇಂದ್ರನು (ಅವನನ್ನು) ಫಲಿಗನನ್ನೂ ಕೊಂದನೆಂದು ವರ್ಣಿಸಿದೆ. ಅಥವಾ ಎಂಬುದಾಗಿ ಈ ಮಂತ್ರಕ್ಕೆ ಇವರು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳುವರು. ಫಲಿಗ ಎಂಬ ಪದವು ಮೇಘವೆಂಬ ಅರ್ಥವನ್ನು ಹೇಳುವುದು (ಉದಕ) ನೀರನ್ನು ತಡದಿರುವ ಮತ್ತು ಮೇಘರೂಪದಿಂದ ಸೂರ್ಯನನ್ನು ಆವರಿಸಿಕೊಂಡು ಬೆಳಕನ್ನು ಮುಚ್ಚಿ ಕತ್ತಲೆಯನ್ನು ಹೆಚ್ಚಿಸುತ್ತಿರುವ ಮೇಘದ ಮೇಲೆ ವಜ್ರಾಯುಧವನ್ನು ಪ್ರಯೋಗಮಾಡಿ ಇಂದ್ರನು ಕತ್ತಲೆಯನ್ನು ನಾಶಪಡಿಸಿ ಬೆಳಕು ಉಂಟಾಗುವಂತೆ ಮಾಡಿದನು. ಸೂರ್ಯನ ಸಂಬಂಧಿಯಾದ ಕಿರಣಗಳಿಂದ ಹೀರಲ್ಪಟ್ಟ ಉದಕಗಳನ್ನು ಆಯಾಯ ಪ್ರದೇಶಗಳಿಗೆ ಅನುಕೂಲವಾಗುವಂತೆ ವೃಷ್ಟಿಯನ್ನು ಉಂಟುಮಾಡಿ ರಕ್ಷಿಸಿದನು ಎಂದು ಅರ್ಥವನ್ನು ವರ್ಣಿಸಿರುವರು.

ವ್ಯಾಕರಣಪ್ರಕ್ರಿಯಾ

**ಅದ್ರಿವಃ**—ಆದೃಣಾತಿ ಅನೇನ ಇತಿ ಅದ್ರಿಃ (ವಜ್ರಾಯುಧ) ಅದ್ರಿಃ ಅಸ್ಯ ಅಸ್ತಿ ಇತಿ ಅದ್ರಿವಃ ಮತುಪ್ ಪ್ರತ್ಯಯ. **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಅದ್ರಿವತ್ ಶಬ್ದವಾಗುತ್ತದೆ. ಸಂಬುದ್ಧಿಯಲ್ಲಿ **ಮತುವಸೋರುಸ್ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. **ಖರವಸಾನಯೋರ್ವಿ**—ಎಂಬುದರಿಂದ ಅದಕ್ಕೆ ವಿಸರ್ಗ.

**ಹೇತಿಮ್**—ಹನ ಹಿಂಸಾಗತ್ಯೋಃ ಧಾತು. **ಕೃತ್ಯಲ್ಯುಟೋಬಹುಲಮ್** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲಗ್ರಹಣ ಸಾಮರ್ಥ್ಯದಿಂದ ಕರ್ತರಿಯಲ್ಲಿ ಕ್ತಿನ್ ಪ್ರತ್ಯಯ. **ಊತಿಯೂತಿಜೂತಿ**—(ಪಾ. ಸೂ ೩-೩-೯೭) ಎಂಬಲ್ಲಿ ನಿಪಾತಮಾಡಿರುವುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. ಅಂತೋದಾತ್ತಸ್ವರವೂ ಅದರಿಂದಲೇ ನಿಪಾತಿತವಾಗಿದೆ. ದ್ವಿತೀಯಾಏಕವಚನಾಂತರೂಪ.

**ಅಸ್ಯ**—ಅಸು ಕ್ಷೇಪಣೇ ಧಾತು. ಲಟ್ ಮಧ್ಯಮಪುರುಷದ್ವಿವಚನದಲ್ಲಿ ಸಿಪ್ ಪ್ರತ್ಯಯ. **ವ್ಯತ್ಯಯೋಬಹುಲಮ್** ಎಂಬುದರಿಂದ ಅದಕ್ಕೆ ಹಿ ಆದೇಶ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಅತೋಹೇಃ**—(ಪಾ ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಅಸ್ಯ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪರಿಹಿತಮ್**—ಡುಧಾಞ್ ಧಾರಣಪೋಷಣಯೋಃ ಧಾತು. **ನಿಷ್ಠಾ**—ಎಂಬುದರಿಂದ ಕ್ತ ಪ್ರತ್ಯಯ **ದಧಾತೇರ್ಹಿಃ**—(ಪಾ ಸೂ. ೭-೪-೪೨) ಎಂಬುದರಿಂದ ಧಾತುವಿಗೆ ಹಿ ಆದೇಶ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ.

**ದಿವಸ್ಪರಿ**—ದಿವಃ+ಪರಿ ಎಂದಿರುವಾಗ **ಪಂಚಮ್ಯಾಃ ಪರಾವಧ್ಯರ್ಥೇ**—(ಪಾ. ಸೂ. ೮-೩-೫೧) ಎಂಬುದರಿಂದ ವಿಸರ್ಗಕ್ಕೆ ಸತ್ವ ಬರುತ್ತದೆ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅದಃ**—ದೄ ವಿದಾರಣೇ. ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ**—ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ**—ಎಂಬುದರಿಂದ ರಪರವಾಗಿ ಬರುತ್ತದೆ. ಹಲಂತದ ಪರದಲ್ಲಿ ಅಪೃಕ್ತ ಸಿಪ್ ಬಂದುದರಿಂದ **ಹಲ್ಙ್ಯಾ**—ಸೂತ್ರದಿಂದ ಅದಕ್ಕೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ. ॥ ೧೦ ॥

———:O:———

**ಸಂಹಿತಾಪಾಠಃ**

ಅನು ತ್ವಾ ಮಹೀ ಪಾಜಸೀ ಅಚಕ್ರೇ ದ್ಯಾವಾಕ್ಷಾಮಾ ಮದ-
ತಾಮಿಂದ್ರ ಕರ್ಮನ್ ।
ತ್ವಂ ವೃತ್ರಮಾಶಯಾನಂ ಸಿರಾಸು ಮಹೋ ವಜ್ರೇಣ ಸಿಷ್ವ-
ಪೋ ವರಾಹುಂ ॥ ೧೧ ॥

**ಪದಪಾಠಃ**

ಅನು । ತ್ವಾ । ಮಹೀ ಇತಿ । ಪಾಜಸೀ ಇತಿ । ಅಚಕ್ರೇ ಇತಿ । ದ್ಯಾವಾಕ್ಷಾ-
ಮಾ । ಮದತಾಂ । ಇಂದ್ರ । ಕರ್ಮನ್ ।

ತ್ವಂ । ವೃತ್ರಂ । ಆ ऽ ಶಯಾನಂ । ಸಿರಾಸು । ಮಹಃ । ವಜ್ರೇಣ । ಸಿಷ್ವಪಃ ।
ವರಾಹುಂ ॥ ೧೧ ॥

ಸಾಯಣಭಾಷ್ಯಂ

ಹೇ ಇಂದ್ರ ಮಹೀ ಮಹ್ಯೌ ಮಹತ್ಯೌ ಪಾಜಸೀ ಬಲವತ್ಯಾವಚಕ್ರೇ ಅಚಂಕ್ರಮಾಣೇ ಸರ್ವತ್ರ ವ್ಯಾಪ್ಯ ವರ್ತಮಾನೇ ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯೌ ಕರ್ಮನ್ ವೃತ್ರವಧಾದಿಲಕ್ಷಣೇ ಕರ್ಮಣಿ ಪ್ರವೃತ್ತಂ ತ್ವಾಮನುಮದತಾಂ । ಹೃಷ್ಟಮಕುರುತಾಂ । ಅನ್ವಮನ್ಯೇತಾಂ ವಾ । ತಥಾ ಚ ತೈತ್ತಿರೀಯಕಂ । ಸ ಇಭ್ಯಾನೇವ ಪ್ರಸೂತೆ ಇಂದ್ರೋ ವೃತ್ರಮಹನ್ನಿತಿ । ತದನಂತರಂ ತ್ವಮಾಶಯಾನಮಾ ಸಮಂತಾದ್ವ್ಯಾಪ್ಯ ವರ್ತಮಾನಂ ವರಾಹುಂ ವರಾಹಾರಂ ವೃತ್ರಮಸುರಂ ಸಿರಾಸು ಸರಣಶೀಲಾಸ್ವಪ್ಸು ಮಹೋ ಮಹತಾ ವಜ್ರೇಣ ಸಿಷ್ವಪಃ । ಅಸ್ವಾಪಯಃ । ವಜ್ರೇಣ ಹತ್ವಾ ಪಾತಿತವಾನಿತ್ಯರ್ಥಃ ॥ ಮಹೀ । ಸುಪಾಂ ಸುಲುಗಿತಿ ವಿಭಕ್ತೇಃ ಪೂರ್ವಸವರ್ಣದೀರ್ಘಃ । ಪಾಜಸೀ । ಪಾಜಃಶಬ್ದೋ ಬಲವಾಚಕೋ ಲಕ್ಷಣಯಾತ್ರ ತದ್ವತಿ ವರ್ತತೇ । ಇಯಾಡಿಯಾಜೀಕಾರಾಣಾಮುಪಸಂಖ್ಯಾನಮಿತಿ ವಿಭಕ್ತೇರೀಕಾರಾದೇಶಃ । ದ್ಯಾವಾಕ್ಷಾಮಾ । ದ್ಯೌಶ್ಚ ಕ್ಷಾಮಾ ಚ । ದಿವೋ ದ್ಯಾವೇತಿ ದ್ಯಾವಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಮದತಾಂ । ಮದೀ ಹರ್ಷೇ । ವ್ಯತ್ಯಯೇನ ಶಪ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಮಹಃ ಮಹತಃ । ಕರಣೇ ಶೇಷತ್ವೇನ ವಿವಕ್ಷಿತೇ ಷಷ್ಠೀ । ಅಚ್ಛಬ್ದಲೋಪಶ್ಛಾಂದಸಃ । ಸಿಷ್ವಪಃ । ಞಿಷ್ವಪ್ ಶಯೇ । ಅಸ್ಮಾಣ್ಣ್ಯಂತಾಲ್ಲುಙಿ ಚಙಿ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾತ್ ಸ್ವಾಪೇಶ್ಚಙಿ । ಪಾ. ೬-೧-೧೮ । ಇತಿ ಸಂಪ್ರಸಾರಣಂ ನ ಕ್ರಿಯತೇ ॥

ಪ್ರತಿಪದಾರ್ಥ

ಹೇ ಇಂದ್ರ—ಎಲೈ ಇಂದ್ರನೇ । ಮಹೀ— ದೊಡ್ಡವೂ । ಪಾಜಸೀ—ಬಲಯುಕ್ತವೂ । ಅಚಕ್ರೇ—(ಸರ್ವತ್ರ ವ್ಯಾಪ್ತವಾದ) ಚಲನವಿಲ್ಲದವೂ, ಆದ । ದ್ಯಾವಾಕ್ಷಾಮಾ— ಭೂಮ್ಯಾಕಾಶಗಳು । ಕರ್ಮನ್ ಅನು—(ವೃತ್ರವಧ ರೂಪವಾದ) ಕರ್ಮದಲ್ಲಿನಿರತನಾದ। ತ್ವಾ—ನಿನ್ನನ್ನು । ಮದತಾಂ—ತುಷ್ಟಿಪಡಿಸಿದವು, (ಅನಂತರ) । ತ್ವಂ—ನೀನು । ಆಶಯಾನಂ—ಸರ್ವತ್ರವ್ಯಾಪ್ತನಾಗಿದ್ದ ಮತ್ತು । ವರಾಹುಂ—(ನಾಶಕನಾದ) ಒಳ್ಳೆಯ ಆಹಾರ ಯುಕ್ತನಾಗಿದ್ದ । ವೃತ್ರಂ—ವೃತ್ರಾಸುರನನ್ನು। ಸಿರಾಸು—ಹರಿಯುತ್ತಿರುವ (ನೀರಿನಲ್ಲಿ) । ಮಹಃ—ಮಹತ್ತಾದ । ವಜ್ರೇಣ—ವಜ್ರಾಯುಧದಿಂದ । ಸಿಷ್ವಪಃ—ಬೀಳಿಸಿದೆ.

ಭಾವಾರ್ಥ

ಎಲೈ ಇಂದ್ರನೇ (ವೃತ್ರವಧರೂಪ) ಕರ್ಮನಿರತನಾದ ನಿನಗೆ ವಿಸ್ತೃತವೂ, ಬಲಿಷ್ಠವೂ ವ್ಯಾಪಕವೂ ಆದ ಭೂಮ್ಯಾಕಾಶಗಳೆರಡೂ ಸಂತೋಷವನ್ನುಂಟುಮಾಡಿದವು ಅನಂತರ ನೀನು, (ಸರ್ವತ್ರ) ವ್ಯಾಪಿಸಿಕೊಂಡಿದ್ದು, (ಸರ್ವನಾಶಕನೂ)ಉತ್ತಮ ಆಹಾರ ಯುಕ್ತನೂ ಆದ ವೃತ್ರಾಸುರನನ್ನು (ನಿನ್ನ) ಶ್ರೇಷ್ಠವಾದ ವಜ್ರಾಯುಧದಿಂದ (ಕೊಂದು) ನೀರಿನಲ್ಲಿ ಎಸೆದೆ.

## English Translation

Then the vast, powerful, and immoveable earth and heaven animated you, Indra, to glorious deeds, and you hurled down into the waters, with your mighty thunderbolt, the everywhere-spreading and destroying Vritra.

॥ ವಿಶೇಷವಿಷಯಗಳು ॥

**ದ್ಯಾವಾಕ್ಷಾಮಾ ಕರ್ಮನ್ ಅನು ಮದತಾಂ— ದ್ಯಾವಾಪೃಥಿವ್ಯೌ ವೃತ್ರವಧಾದಿಲಕ್ಷಣೇ ಕರ್ಮಣಿ ಪ್ರವೃತ್ತಂ ತ್ವಾಂ ಹೃಷ್ಟಮಕುರುತಾಂ ಅನುಮನ್ಯೇತಾಂ ವಾ। ತಥಾ ಚ ತೈತ್ತಿರೀಯಕಂ—ಸ ಆಭ್ಯಾಮೇವ ಪ್ರಸೂತ ಇಂದ್ರೋ ವೃತ್ರಮಹನ್** (ತೈ. ಸಂ. ೨-೫-೨-೬) ಇತಿ । ಇಂದ್ರನು ವೃತ್ರಾಸುರನ ಸಂಗಡ ಯುದ್ಧ ಮಾಡುವುದರಲ್ಲಿ ಪ್ರವೃತ್ತನಾಗಿ ಅವನನ್ನು ಸಂಹಾರಮಾಡಲು ಉದ್ಯುಕ್ತನಾಗಿರುವುದನ್ನು ಭೂಮ್ಯಂತರಿಕ್ಷಗಳು ಸಂತೋಷದಿಂದ ಅನುಮೋದಿಸಿದವು. ಇದನ್ನು ನೋಡಿ ಇಂದ್ರನೂ ಸಂತೋಷಪಟ್ಟನು ಎಂದು ಅರ್ಥ. ದ್ಯಾವಾಪೃಥಿವಿಗಳಿಂದ ಉತ್ಪನ್ನನಾದ ಇಂದ್ರನು ವೃತ್ರಾಸುರನನ್ನು ನಾಶಮಾಡಿದನು ಎಂದು ತೈತ್ತಿರೀಯಸಂಹಿತೆಯಲ್ಲಿಯೂ ಉಕ್ತವಾಗಿರುತ್ತದೆ ಎಂದು ಸಾಯಣರು ವ್ಯಾಖ್ಯಾನಮಾಡಿರುವುದನ್ನೇ ಸ್ಕಂದಸ್ವಾಮಿಗಳೂ ಹೇಳಿರುತ್ತಾರೆ.

**ಪಾಜಸೀ—ಬಲವತ್ಯೌ । ಪಾಜಶ್ಶಬ್ದೋ ಬಲವಾಚಕೋ ಲಕ್ಷಣಯಾ ಅತ್ರ ತದ್ವತಿ ವರ್ತತೇ ।** ಪಾಜಃ ಎಂಬ ಶಬ್ದವು ಬಲನಾಮಗಳಲ್ಲಿ (ನಿ. ೨-೯) ಉಕ್ತವಾಗಿರುತ್ತದೆ. ಬಲವನ್ನು ಹೊಂದಿರುವ ಎಂದು ಅರ್ಥ.

**ಮಹೀ—ಮಹತ್ಯೌ** ಮಹೀ ಎಂಬ ಶಬ್ದವು ಗೋನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿರುತ್ತದೆ.

**ಸಿರಾಸು ಆಶಯಾನಂ ವರಾಹುಂ ವೃತ್ರಂ ವಜ್ರೇಣ ಸಿಷ್ವಪಃ-ಸರಣಶೀಲಾಸ್ವಪ್ಸು ಆ ಸಮಂತಾತ್ ವ್ಯಾಪ್ಯ ವರ್ತಮಾನಂ ವರಾಹಾರಂ ವೃತ್ರಾಸುರಂ ವಜ್ರೇಣ ಅಸ್ವಾಪಯಃ ವಜ್ರೇಣ ಹತ್ವಾ ಪಾತಿತವಾನಸೀತ್ಯರ್ಥಃ ।** ವೃತ್ರ ಶಬ್ದವು ಧನನಾಮಗಳಲ್ಲಿಯೂ (ನಿ. ೨-೯) ಮತ್ತೂ ಮೇಘನಾಮಗಳಲ್ಲಿಯೂ (ನಿ. ೨-೯) ಉಕ್ತವಾಗಿದೆ. **ತತ್ಕೋ ವೃತ್ರಃ ಮೇಘ ಇತಿ ನೈರುಕ್ತಾಃ । ತ್ವಾಷ್ಟ್ರೋಽಸುರ ಇತಿ ಐತಿಹಾಸಿಕಾಃ** (ನಿ.೨-೧೬) ಎಂದು ಯಾಸ್ಕರು ವೃತ್ರ ಶಬ್ದಾರ್ಥವನ್ನು ವಿವರಿಸಿರುವರು. ನೈರುಕ್ತಾಃ-ವೈದಿಕಾಃ—ವೇದಗಳ ತತ್ವಾರ್ಥವನ್ನು ತಿಳಿದವರು ಮೇಘವು ವೃತ್ರಶಬ್ದಾರ್ಥವೆಂತಲೂ, ಇತಿಹಾಸವನ್ನು ತಿಳಿದವರು ತ್ವಷ್ಟೃಬ್ರಹ್ಮನ ಪುತ್ರನಾದ ಅಸುರನೆಂದೂ ಅರ್ಥವನ್ನು ಹೇಳಿದ್ದಾರೆ. ಹರಿಯುತ್ತಿರುವ ನದಿಗಳಲ್ಲಿಯೂ ವ್ಯಾಪಿಸಿರುವವನೂ ಉತ್ತಮವಾದ ಆಹಾರವುಳ್ಳವನೂ ಆದ ವೃತ್ರಾಸುರನನ್ನು ಇಂದ್ರನು (ಶಕ್ತಿಯುಳ್ಳ) ಬಲವಾದ ವಜ್ರಾಯುಧದಿಂದ ಹೊಡೆದು ಅವನು ಭೂಮಿಗೆ ಬೀಳುವಂತೆ ಮಾಡಿರುವನೆಂದು ಅರ್ಥ. ಸ್ಕಂದಸ್ವಾಮಿಗಳು—

> **ಶೇತಿರತ್ರ ಸ್ಥಾನಾರ್ಥಃ ಆಮಾಶಯೋ ಜಲಾಶಯ ಇತಿ ಯಥಾ । ಸಿರಾ ಇತಿ ನದೀನಾಮ । ನದೀಭಿಶ್ಚ ತದೀಯಾ ಆಪೋ ಲಕ್ಷ್ಯಂತೇ । ಅಂತರಿಕ್ಷೇ ಯಾ ನದ್ಯಃ ತದಪ್ಸು ಗೂಹಿತಂ । ವರಾಹುಂ ವರಾಹಾಕಾರಂ ॥**

ಎಂದು ಹೇಳಿ ಶೀಙ್ ಧಾತುವು ಇಲ್ಲಿ ಪ್ರದೇಶವನ್ನು ನಿರ್ದೇಶಮಾಡುತ್ತದೆ. ಇದರಿಂದ ಜಲಾಶಯ ಆಮಾಶಯ ಎಂಬ ಶಬ್ದಗಳ ಹಾಗೆ ಸಿರಾಸು ಆಶಯಾನಂ ಎಂಬ ಶಬ್ದಕ್ಕೂ ಅರ್ಥವು. ಸಿರಾ ಎಂದರೆ ನದಿಗಳು ಎಂದು ಅರ್ಥ. ನದೀ ಶಬ್ದದಿಂದ ನದಿಯ ಸಂಬಂಧವಾದ ನೀರುಗಳು ಎಂದು ಅರ್ಥ. ವೃತ್ರಾಸುರನು ನದಿಯ ನೀರಿನಲ್ಲಿ ಅವಿತು ಕೊಂಡಿದ್ದನೆಂದು ವಿವರಿಸಿದೆ. ಇವನು ವರಾಹ (ಹಂದಿ) ದ ಆಕಾರವನ್ನೂ ಹೊಂದಿದ್ದನೆಂದು ವರ್ಣಿಸಿದೆ. ಹಿರಣ್ಯ ಸ್ತೂಪ ಋಷಿಯು ಈ ವಿಷಯವನ್ನು ಹೇಳಿರುವನು ಎಂದು ವಿವರಿಸಿ—

**ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ |**
**ವೃತ್ರಸ್ಯ ನಿಣ್ಯಂ ವಿ ಚರಂತ್ಯಾಪೋ ದೀರ್ಘಂ ತಮ ಆಶಯದಿಂದ್ರಶತ್ರುಃ ||**
(ಋ. ಸಂ. ೧-೩೨-೧೦)

ಎಂಬ ಈ ಋಕ್ಕನ್ನು ಉದಹರಿಸಿರುವರು.

|| ವ್ಯಾಕರಣಪ್ರಕ್ರಿಯಾ ||

**ಮಹೀ**—ಮಹತೀ ಎಂದಿರುವಾಗ ಛಾಂದಸವಾಗಿ ತಕಾರಲೋಪ. ಮಹಿ+ಔ ಎಂದಿರುವಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಪಾಜಸೀ**—ಪಾಜಸ್ ಶಬ್ದವು ಬಲವಾಚಕವಾಗಿರುತ್ತದೆ. ಇಲ್ಲಿ ಲಕ್ಷಣೆಯಿಂದ ಅದು ಉಳ್ಳದ್ದು ಎಂಬರ್ಥ ದಲ್ಲಿ ಪ್ರಯುಕ್ತವಾಗಿದೆ. ಇದಕ್ಕೂ ದ್ವಿವಚನ ಔ ಪರವಾದಾಗ **ಇಯಾಡಿಯಾಜೀಕಾರಾಣಾಮುಪಸಂಖ್ಯಾನಮ್**—(ಪಾ. ಸೂ. ೭-೧-೩೯-೨) ಎಂಬುದರಿಂದ ಅದಕ್ಕೆ ಈಕಾರಾದೇಶ ಬರುತ್ತದೆ.

**ಅಚಕ್ರೇ—ನಞ್ಸುಭ್ಯಾಮ್**—(ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ.

**ದ್ಯಾವಾಕ್ಷಾಮಾ**—ದ್ಯೌಶ್ಚ ಕ್ಷಾಮಾ ಚ ದ್ಯಾವಾಕ್ಷಾಮಾ | **ದಿವೋ ದ್ಯಾವಾ**—(ಪಾ. ಸೂ. ೬-೩-೨೯) ಎಂಬುದರಿಂದ ದ್ಯಾವಾದೇಶ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಸೂತ್ರದಿಂದ ಉತ್ತರಪದಪ್ರಕೃತಿ ಸ್ವರ ಬರುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿ ಲುಕ್.

**ಮದತಾಮ್**—ಮದೀ ಹರ್ಷೇ- ಧಾತು. ಲಙ್ ಮಧ್ಯಮಪುರುಷ ದ್ವಿವಚನದಲ್ಲಿ **ತಸ್‌ಥಸ್‌ಥ**—ಸೂತ್ರ ದಿಂದ ತಮಾದೇಶ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧-೮೫) ಎಂಬುದರಿಂದ ಶ್ಯನ್ನಿಗೆ ಬದಲಾಗಿ ಶಪ್ ವಿಕರಣ ಬರುತ್ತದೆ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಮು ಬರುವುದಿಲ್ಲ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಕರ್ಮನ್**—ಸಪ್ತಮೀ ಏಕವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಲುಕ್.

**ಆಶಯಾನನ್**—ಶೀಙ್ ಸ್ವಪ್ನೇ. ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಶೀಙಃ ಸಾರ್ವಧಾತುಕೇ ಗುಣಃ** (ಪಾ. ಸೂ. ೭-೪-೨೧) ಎಂಬುದರಿಂದ ಗುಣ. ಅಯಾದೇಶ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮುಹಃ**—ಮಹತಃ ಎಂದು ರೂಪವಾದಾಗ ಛಾಂದಸವಾಗಿ ಅತಿಗೆ ಲೋಪ. ಅಥವಾ ಮಹ ಪೂಜಾಯಾಂ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. ಪ್ರತ್ಯಯ. ಕರಣಕ್ಕೆ ಶೇಷತ್ವ ವಿವಕ್ಷಾಮಾಡಿದಾಗ **ಷಷ್ಠೀ ಶೇಷೇ** (ಪಾ. ಸೂ. ೨-೩-೫೦) ಎಂಬುದರಿಂದ ಷಷ್ಠೀ.

**ಸಿಷ್ವಪಃ**—ಞಿಷ್ವಪ್ ಶಯೇ. ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಜಂತದ ಮೇಲೆ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಕ್ಕೆ ಲೋಪ. **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** (ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ಪರಿಭಾಷೆಯಿಂದ **ಸ್ವಾಪೇಶ್ಚಙಿ** (ಪಾ. ಸೂ. ೬-೧-೧೮) ಎಂಬುದರಿಂದ ಬರಬೇಕಾದ ಸಂಪ್ರಸಾರಣವು ಇಲ್ಲಿ ಬರುವುದಿಲ್ಲ. **ಚಙಿ** (ಪಾ. ಸೂ. ೬-೧-೧೧) ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್‌ಶೇಷ. **ಸನ್ವಲ್ಲಘುನಿ**—ಎಂಬುದರಿಂದ ಸನ್ವದ್ಭಾವ ಬರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ತ್ವಮಿಂದ್ರ ನರ್ಯೋ೩ ಯಾಁ ಅವೋ೩ ನೄನ್ತಿಷ್ಠಾ ವಾತಸ್ಯ
ಸುಯುಜೋ೩ ವಹಿಷ್ಠಾನ್ ।
ಯಂ ತೇ೩ ಕಾವ್ಯ ಉಶನಾ ಮಂದಿನಂ ದಾದ್ವೃತ್ರಹಣಂ ಪಾರ್ಯಂ
ತತಕ್ಷ ವಜ್ರಂ ॥ ೧೨ ॥

॥ ಪದಪಾಠಃ ॥

ತ್ವಂ । ಇಂದ್ರ । ನರ್ಯಾ॑ಃ । ಯಾನ್ । ಅವ॑ಃ । ನೄನ್ । ತಿಷ್ಠ॑ । ವಾತ॑ಸ್ಯ ।
ಸುಽಯುಜ॑ಃ । ವಹಿ॑ಷ್ಠಾನ್ ।

ಯಂ । ತೇ । ಕಾವ್ಯಃ । ಉಶನಾ॑ । ಮಂದಿನ॑ಂ । ದಾತ್ । ವೃತ್ರಽಹನ॑ಂ ।
ಪಾರ್ಯ॑ಂ । ತತಕ್ಷ॑ । ವಜ್ರ॑ಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನರ್ಯೋ ನೃಭ್ಯೋ ಹಿತಸ್ತ್ವಂ ಯಾನ್ನೄನ್ನೇತೄನಶ್ವಾನವಃ ಅವಸಿ ರಕ್ಷಸಿ ತಾನ್ವಾತಸ್ಯ ತುಲ್ಯಾನ್ ತದ್ವಚ್ಛೀಘ್ರಂ ಗಚ್ಛತಃ ಸುಯುಜಃ ಶೋಭನಂ ರಥೇನ ಯುಜ್ಯಮಾನಾನ್ವಹಿಷ್ಠಾನತಿಶಯೇನ ವೋಢೄನಶ್ವಾಂಸ್ತಿಷ್ಠ । ಆತಿಷ್ಠ । ಆರೋಹೇತ್ಯರ್ಥಃ । ಕಾವ್ಯಃ ಕವೇಃ ಪುತ್ರ ಉಶನಾ ಮಂದಿನಂ ಮದಕರಂ ಯಂ ವಜ್ರಂ ತೇ ತುಭ್ಯಂ ದಾತ್ ದತ್ತವಾನ್ ತಂ ವಜ್ರಂ ವೃತ್ರಹಣಂ ವೃತ್ರಸ್ಯಾಸುರಸ್ಯ ಘಾತಕಂ ಪಾರ್ಯಂ ಶತ್ರೂಣಾಂ ಪಾರಣೇಽತಿಕ್ರಮಣೇ ಸಮರ್ಥಂ ಚ ತತಕ್ಷ । ಕೃತವಾನಸಿ ॥ ಅವಃ । ಅವತೇರ್ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ವಹಿಷ್ಠಾನ್ । ವೋಢೃಶಬ್ದಾತ್ತುಶ್ಛಂದಸೀತೀಷ್ಠನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ಪಾರ್ಯಂ । ಪಾರ ತೀರ ಕರ್ಮಸಮಾಪ್ತೌ ಅಸ್ಮಾಣ್ಣ್ಯಂತಾದಚೋ ಯದಿತಿ ಯತ್ । ತತಕ್ಷ । ತಕ್ಷೂ ತ್ವಕ್ಷೂ ತನೂಕರಣೇ । ಪುರುಷವ್ಯತ್ಯಯಃ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ನರ್ಯಃ**—ಮನುಷ್ಯರಿಗೆ ಹಿತಕರನಾದ । **ತ್ವಂ**—ನೀನು । **ಯಾನ್ ನೄನ್**—ಯಾವ ನೇತೃಗಳಾದ ಅಶ್ವಗಳನ್ನು । **ಅವಃ**—ರಕ್ಷಿಸುತ್ತೀಯೋ । **(ತಾನ್—ಅ)**। **ವಾತಸ್ಯ**—ವಾಯುವಿಗೆ (ವೇಗದಲ್ಲಿ ಸಮನಾದವೂ) । **ಸುಯುಜಃ**—ಸುಲಭವಾಗಿ (ರಥಕ್ಕೆ) ಯೋಜಿಸಲ್ಪಡುವವೂ, । **ವಹಿಷ್ಠಾನ್**—(ಭಾರವನ್ನು) ಹೊರುವುದರಲ್ಲಿ ಅತ್ಯಂತ ಸಮರ್ಥವಾದವೂ ಆದ ಅಶ್ವಗಳನ್ನು । **ತಿಷ್ಠ**—ಆರೋಹಿಸು; । **ಕಾವ್ಯಃ**—ಕವಿಪುತ್ರನಾದ । **ಉಶನಾ**—ಉಶನಸನು । **ಮಂದಿನಂ**—ಮದಕರವಾದ । **ಯಂ**—ಯಾವ ವಜ್ರಾಯುಧವನ್ನು । **ತೇ**—ನಿನಗೆ । **ದಾತ್**—ಕೊಟ್ಟನೋ । **(ತಂ—ಅ)** । **ವಜ್ರಂ**—ವಜ್ರಾಯುಧವನ್ನು । **ವೃತ್ರಹಣಂ**—ವೃತ್ರವಧಕಾರಿಯನ್ನಾಗಿಯೂ । **ಪಾರ್ಯಂ**-ಶತ್ರುಭೇದಕವನ್ನಾಗಿಯೂ (ಶತ್ರುಗಳನ್ನು ಅತಿಕ್ರಮಿಸುವುದರಲ್ಲಿ ಸಮರ್ಥವನ್ನಾಗಿ । **ತತಕ್ಷ**—ಮಾಡಿದೆ.

‖ ಭಾವಾರ್ಥ ‖

ಮನುಷ್ಯರಿಗೆ ಹಿತಕರನಾದ ಎಲೈ ಇಂದ್ರನೇ, ವಾಯುವೇಗವುಳ್ಳವುಗಳೂ, (ರಥಗಳಿಗೆ) ಸುಯೋಜ್ಯಗಳೂ, (ಭಾರವನ್ನು) ವಹಿಸುವುದರಲ್ಲಿ ಸಮರ್ಥಗಳೂ, ನಿನ್ನಿಂದ ರಕ್ಷಿತವೂ ಆದ ಅಶ್ವಗಳನ್ನೇರಿ. ಕವಿಪುತ್ರನಾದ ಉಶನಸನು ಕೊಟ್ಟ ವಜ್ರಾಯುಧವನ್ನು ವೃತ್ರವಧಕಾರಿಯನ್ನಾಗಿಯೂ, ಶತ್ರುಭೇದಕವನ್ನಾಗಿಯೂ ಮಾಡು.

English Translation.

Indra, friend of man, mount the horses whom you cherish, who are fleet as the wind, are easily yoked, and who bear (their burden) well; you have sharpened the foe-destroying thunderbolt, the slayer of vritra, which inspiring (weapon) Usanas, the son of Kavi, gave you.

‖ ವಿಶೇಷವಿಷಯಗಳು ‖

**ಪಾರ್ಯಂ—ಶತ್ರೂಣಾಂ ಪಾರಣೇ ಅತಿಕ್ರಮಣೇ ಸಮರ್ಥಂ ಚ** । ಶತ್ರುಗಳನ್ನು ನಾಶಮಾಡುವುದರಲ್ಲಿ ಅಥವಾ ಶತ್ರುಗಳಿಗಿಂತ ಅತಿಶಯವಾಗಿ ಇರುವುದರಲ್ಲಿ ಸಾಮರ್ಥ್ಯವನ್ನು ಉಂಟುಮಾಡುವುದು ಎಂದು ಸಾಯಣರೂ, **ಪೄ ಪಾಲನ ಪೂರಣಯೋಃ ಪಾಲಯಿತಾರಂ ಸ್ತೋತ್ರೄಣಾಂ** । ಪಾಲನ-ರಕ್ಷಣ, ಪೂರಣ-ತುಂಬಿಸುವಿಕೆ ಎಂಬ ಅರ್ಥವುಳ್ಳ ಪೄ ಧಾತುವಿನಿಂದ ನಿಷ್ಪನ್ನವಾದಕಾರಣ (ಇಂದ್ರನು) ಸ್ತೋತ್ರಮಾಡುವವರನ್ನು ರಕ್ಷಿಸುವುದು ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುತ್ತಾರೆ.

**ಕಾವ್ಯ ಉಶನಾ ವಜ್ರಂ ದಾದ್—ಕವೇಃ ಪುತ್ರಃ ಉಶನಾ ವಜ್ರಂ ದತ್ತವಾನ್** । ಕವಿ-ಭೃಗು ಋಷಿಯ ಪುತ್ರನಾದ ಶುಕ್ರನು ಇಂದ್ರನಿಗೆ ವಜ್ರಾಯುಧವನ್ನು ಕೊಟ್ಟಿರುವನು ಎಂದು ಅರ್ಥ. ಸ್ಕಂದಸ್ವಾಮಿಗಳು—

**ಅತ್ರೇತಿಹಾಸಮಾಚಕ್ಷತೇ । ತ್ವಷ್ಟಾ ಇಂದ್ರಾರ್ಥಂ ವಜ್ರಂ ಚಕಾರೇತಿ ತದ್ಧಿರಣ್ಯಸ್ತೂಪೇನೋಕ್ತಂ ।**

ಎಂಬ ಇತಿಹಾಸವನ್ನು ಉದಹರಿಸಿ ವಜ್ರಾಯುಧವು ಇಂದ್ರನಿಗೆ ದೊರೆತಿರುವ ವಿಷಯದಲ್ಲಿ ಒಂದು ಕಥೆಯನ್ನು ಹೇಳಿರುವರು. ತ್ವಷ್ಟೃ ಬ್ರಹ್ಮನು ಇಂದ್ರನಿಗಾಗಿ ವಜ್ರಾಯುಧವನ್ನು ನಿರ್ಮಿಸಿದನು ಎಂದು ಹಿರಣ್ಯಸ್ತೂಪನು ಹೇಳಿರುತ್ತಾನೆ ಎಂದು ವಿವರಿಸಿ—

**ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ।**
**ವಾಶ್ರಾ ಇವ ಧೇನವಃ ಸ್ಯಂದಮಾನಾ ಅಂಜಃ ಸಮುದ್ರಮವ ಜಗ್ಮುರಾಪಃ ॥**

(ಋ. ಸಂ. ೧-೩೨-೨)

ಎಂಬ ಈ ಋಕ್ಕನ್ನು ಉದಹರಿಸಿ **ತಂ ಕೃತಮಾನೀಯ ಇಂದ್ರಾಯ ಉಶನಾ ದದಾವಿತಿ** । ತ್ವಷ್ಟೃಬ್ರಹ್ಮನು ನಿರ್ಮಿಸಿರುವ ವಜ್ರಾಯುಧವನ್ನು ತಂದು ಶುಕ್ರನು ಇಂದ್ರನಿಗೆ ಕೊಟ್ಟನು. **ತ್ವಷ್ಟ್ರಾ ಕೃತಂ ಸಂತಮಾನೀಯ ದತ್ತವಾನ್** । ಎಂದು ವರ್ಣಿಸಿರುವರು. ಮತ್ತು—

**ತಂ ತತಕ್ಷ—ತಕ್ಷತಿಃ ಕರೋತಿಕರ್ಮಾ । ಲೋಡರ್ಥೇ ಲಿಟ್ ಪ್ರಥಮಪುರುಷಃ ಮಧ್ಯಮಪುರುಷಸ್ಯ ಸ್ಥಾನೇ । ಅಸ್ಮದೀಯಶತ್ರುವಧಾರ್ಥಂ ಸಂಸ್ಕುರು ವಜ್ರಂ ॥**

ತಕ್ಷ ಧಾತುವು (ಕರಣ) ಕೆಲಸಮಾಡುವುದು ಎಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿದೆ. (ಲೋಟ್) ವಿಧ್ಯಾದ್ಯರ್ಥಗಳಿಗೆ ಬದಲಾಗಿ ಭೂತಕಾಲವು ಇಲ್ಲಿ ಉಕ್ತವಾಗಿರುವುದು. ಇದರಿಂದ ಇಂದ್ರನು ವಜ್ರಾಯುಧವನ್ನು ನಮ್ಮ ಶತ್ರುಗಳ ವಧೆಗಾಗಿ ಉಪಯೋಗಿಸಲಿ ಎಂದು ಈ ಮಂತ್ರದಲ್ಲಿ ವರ್ಣಿಸಿದೆ ಎಂದು ಅರ್ಥವನ್ನು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರ—ಆಮಂತ್ರಿತಸ್ಯ ಚ** (ಪಾ. ಸೂ. ೮–೧–೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ನರ್ಯಃ—**ನರಾಯ ಹಿತಃ ನರ್ಯಃ **ತಸ್ಮೈ ಹಿತಮ್** (ಪಾ. ಸೂ. ೫–೧–೫) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. **ಯತೋಽನಾವಃ** (ಪಾ. ಸೂ. ೬–೧–೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಾನ್—**ಯಾನ್+ಅವ ಎಂದಿರುವಾಗ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮–೩–೯) ಎಂಬುದರಿಂದ ರುತ್ವ. **ಆತೋಽಟಿ ನಿತ್ಯಮ್** (ಪಾ. ಸೂ. ೮–೩–೩) ಎಂಬುದರಿಂದ ಪೂರ್ವಕ್ಕೆ ಪೂರ್ವಾಕಾರಕ್ಕೆ ಅನುನಾಸಿಕತ್ವ.

**ಅವಃ—**ಅವ ರಕ್ಷಣೇ. ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ ಲೋಪಃ ಪರ—** (ಪಾ. ಸೂ. ೩–೪–೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** (ಪಾ. ಸೂ. ೩–೪–೯೪) ಎಂಬುದರಿಂದ ಅಡಾಗಮ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮–೧–೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್**—(ಪಾ. ಸೂ. ೬–೧–೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತಿಷ್ಠಾ—**ಷ್ಠಾ **ಗತಿನಿವೃತ್ತೌ.** ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ. ಶಪ್ ವಿಕರಣ. **ಪಾಘ್ರಾಧ್ಮಾ**—(ಪಾ. ಸೂ. ೭–೩–೭೮) ಎಂಬುದರಿಂದ ಪ್ರಕೃತಿಗೆ ತಿಷ್ಠಾದೇಶ. **ಅತೋ ಹೇಃ** (ಪಾ. ಸೂ. ೬–೪–೧೦೫) ಹಿಗೆ ಲುಕ್. ದ್ವ್ಯಚ್ಕವಾದುದರಿಂದ **ದ್ವ್ಯಚೋಽತಸ್ತಿಙಃ** (ಪಾ. ಸೂ. ೬–೩–೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುಯುಜಃ—**ಯುಜಿರ್ ಯೋಗೇ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ವಹಿಷ್ಠಾನ್**—ವಹ ಪ್ರಾಪಣೇ. ಧಾತು. ಇದಕ್ಕೆ ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋ**—ಎಂಬುದರಿಂದ ತಕಾರಕ್ಕೆ ಧತ್ವ. ಅದಕ್ಕೆ ಷ್ಟುತ್ವ. **ಸಹಿವಹೋರೋದ-ವರ್ಣಸ್ಯ** (ಪಾ. ಸೂ. ೬-೩-೧೧೨) ಎಂಬುದರಿಂದ ಧಾತುವಿನ ಅಕಾರಕ್ಕೆ ಓತ್ವ. **ಢೋಢೇ ಲೋಪಃ** ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. ವೋಢೃ ಶಬ್ದವಾಗುತ್ತದೆ. ಇದಕ್ಕೆ ಅತಿಶಯಾರ್ಥ ತೋರುವಾಗ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ತೃಚಿಗೆ ಲೋಪ. ವಹಿಷ್ಠ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಮಂದಿನಮ್**—ಮದಿ ಹರ್ಷೇ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ತಾಚ್ಛೀಲಾರ್ಥದಲ್ಲಿ ಣಿನಿ ಪ್ರತ್ಯಯ. ಪ್ರತ್ಯಯ ಸ್ವರದಿಂದ ಇಕಾರ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ದಾತ್**—ಡುದಾಞ್ ದಾನೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಚ್ಲಿಗೆ ಸಿಚ್ ಬಂದಾಗ **ಗಾತಿಸ್ಥಾಘುಪಾ**—(ಪಾ. ಸೂ. ೨-೪-೭೭) ಎಂಬುದರಿಂದ ಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ವೃತ್ರಹನಮ್**—ಹನ ಹಿಂಸಾಗತ್ಯೋಃ **ಬ್ರಹ್ಮಭ್ರೂಣ**—(ಪಾ. ಸೂ. ೩-೨-೮೭) ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ **ಇನ್‌ಹನ್**—ಸೂತ್ರದಿಂದ ನಿಯಮ ಮಾಡಿರುವುದರಿಂದ ಉಪಧಾದೀರ್ಘ ಬರುವುದಿಲ್ಲ.

**ಪಾರ್ಯಮ್**—ಪಾರ ತೀರ ಕರ್ಮಸಮಾಪ್ತೌ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಬಂದಾಗ **ಅಚೋ ಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ಣಿಚ್ ನಿಮಿತ್ತವಾಗಿ ಉಪಧಾವೃದ್ಧಿ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತತಕ್ಷ**—ತಕ್ಷೂ ತ್ವಕ್ಷೂ ತನೂಕರಣೇ. ಧಾತು. ವ್ಯತ್ಯಯದಿಂದ ಲಿಟ್ಟಿನಲ್ಲಿ ಮಧ್ಯಮ ಏಕವಚನಕ್ಕೆ ಪ್ರಥಮ ಪುರುಷ ಏಕವಚನ ಪ್ರತ್ಯಯ ಬಂದು ರೂಪವಾಗಿದೆ. ತಿಙಂತನಿಘಾತಸ್ವರ ಬರುತ್ತದೆ. ॥ ೧೨ ॥



॥ ಸಂಹಿತಾಪಾಠಃ ॥

ತ್ವಂ ಸೂರೋ ಹರಿತೋ ರಾಮಯೋ ನೄನ್ಭರಚ್ಚಕ್ರಮೇತಶೋ
ನಾಯಮಿಂದ್ರ ।
ಪ್ರಾಸ್ಯ ಪಾರಂ ನವತಿಂ ನಾವ್ಯಾನಾಮಪಿ ಕರ್ತಮವರ್ತಯೋಽ-
ಯಜ್ಯೂನ್ ॥ ೧೩ ॥

॥ ಪದಪಾಠಃ ॥

ತ್ವಂ । ಸೂರಃ । ಹರಿತಃ । ರಮಯಃ । ನೄನ್ । ಭರತ್ । ಚಕ್ರಂ । ಏತಶಃ । ನ ।
ಅಯಂ । ಇಂದ್ರ ।
ಪ್ರ ಽ ಅಸ್ಯ । ಪಾರಂ । ನವತಿಂ । ನಾವ್ಯಾನಾಂ । ಅಪಿ । ಕರ್ತಂ । ಅವರ್ತಯಃ ।
ಅಯಜ್ಯೂನ್ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸೂರಃ ಸೂರ್ಯಾತ್ಮನಾ ವರ್ತಮಾನಸ್ತ್ವಂ ಹರಿತೋ ಹರಿದ್ವರ್ಣಾನ್ನೄನ್ನೇತೄನಶ್ವಾನ್ ಯದ್ವಾ ರಸಹರಣಶೀಲಾನ್ ರಶ್ಮೀನ್ ರಮಯಃ । ಉಪಾರಮಯಃ । ಏತಶೋ ನ । ಏತಶ ಇತಿ ಸೂರ್ಯಾಶ್ವಸ್ಯಾಖ್ಯಾ । ತಥಾ ಚ ಶ್ರೂಯತೇ । ಏತಶೇನತ್ವಾ ಸೂರ್ಯೋ ದೇವತಾಂ ಗಮಯತ್ವಿತಿ । ನಶಬ್ದಶ್ಚಾರ್ಥೇ । ಏತಶಶ್ಚ ರಥಸ್ಯ ಚಕ್ರಂ ಭರತ್ । ಪ್ರಾವಹತ್ । ಅಪಿ ಚ ತ್ವಂ ನಾವ್ಯಾನಾಂ ನಾವಾತಾರ್ಯಾಣಾಂ ನದೀನಾಂ ನವತಿಂ ನವತಿಸಂಖ್ಯಾಮತೀತ್ಯ ವರ್ತಮಾನಂ ಪಾರಂ ತೀರದೇಶಂ । ಸಪ್ತಮ್ಯರ್ಥೇ ದ್ವಿತೀಯಾ । ತೀರದೇಶೇಽಯಜ್ಯೂನಯಜಮಾನಾನ್ ಯಜ್ಞವಿಹೀನಾನಸುರಾದೀನ್ ಪ್ರಾಸ್ಯ ಪ್ರಕ್ಷಿಪ್ಯ ತತ್ರ ಕರ್ತಮವರ್ತಯಃ । ಕರ್ತವ್ಯಮಪಿ ಕೃತ್ವಾ ತಾನಯಜಮಾನಾನವರ್ತಯಃ । ಪ್ರಾಪಯಃ ॥ ರಮಯಃ । ಲಙಿ ಬಹುಳಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕೋ ದೀರ್ಘಃ । ಪ್ರಾಸ್ಯ । ಅಸು ಕ್ಷೇಪಣೇ । ಅಸ್ಮಾಲ್ಲ್ಯಪಿ ರೂಪಂ । ನಾವ್ಯಾನಾಂ । ನೌವಯೋಧರ್ಮೇತ್ಯಾದಿನಾ ಯತ್ । ತಿತ್ಸ್ವರಿತ ಇತಿ ಸ್ವರಿತತ್ವಂ ॥

॥ ಪ್ರತಿಪದಾರ್ಥ ॥

**(ಹೇ) ಇಂದ್ರ**—ಎಲೈ ಇಂದ್ರನೇ । **ಸೂರಃ**—ಸೂರ್ಯರೂಪಿಯಾಗಿರುವ । **ತ್ವಂ**—ನೀನು । **ಹರಿತಃ**—ಹರಿದ್ವರ್ಣವಾದ । **ನ್ಯೂನ್**—ನೇತೃಗಳಾದ ಅಶ್ವಗಳನ್ನು (ರಶ್ಮಿಗಳನ್ನು) । **ರಮಯಃ**—ಉಪರಮಿಸುವಂತೆ ಮಾಡಿದೆ । **ಏತಶಃ ನ**—ಸೂರ್ಯಾಶ್ವವೂ ಕೂಡ । **ಚಕ್ರಂ**—(ರಥ) ಚಕ್ರವನ್ನು । **ಭರತ್**—ಹೊತ್ತಿತು । **(ಅಪಿಚ**—ಮತ್ತೂ) **ನಾವ್ಯಾನಾಂ**—(ನಾವೆಗಳಿಂದ ದಾಟಲ್ಪಡಬೇಕಾದ) ನದಿಗಳ । **ನವತಿಂ**—ತೊಂಭತ್ತನ್ನು (ದಾಟಿ ಇರುವ) । **ಪಾರಂ**—ತೀರ ಪ್ರದೇಶದಲ್ಲಿ । **ಅಯಜ್ಯೂನ್**—ಯಾಗಾದಿಗಳನ್ನು ಮಾಡದೆ ಇರುವ (ಅಸುರರನ್ನು) । **ಪ್ರಾಸ್ಯ**—ಎಸೆದು । **ಕರ್ತಂ**—ಕರ್ತವ್ಯವಾದ (ಯಜ್ಞಾದಿಗಳನ್ನು) । **ಅವರ್ತಯಃ**—ಮಾಡಿಸಿದೆ.

॥ ಭಾವಾರ್ಥ ॥

ಸೂರ್ಯರೂಪಿಯಾದ ಎಲೈ ಇಂದ್ರನೇ, ನೀನು ಹರಿದ್ವರ್ಣದ ಅಶ್ವಗಳನ್ನು (ಕಿರಣಗಳನ್ನು) ಉಪರಮಿಸುವಂತೆ ಮಾಡಿದೆ; ಸೂರ್ಯಾಶ್ವವೂ (ರಥ) ಚಕ್ರವನ್ನು ಹೊತ್ತಿತ್ತು; ನೀನು ಯಾಗಾದಿವಿಹೀನರಾದ ಅಸುರರನ್ನು ತೊಂಭತ್ತಕ್ಕಿಂತ ಹೆಚ್ಚು ನದಿಗಳ ತೀರದಲ್ಲಿ ಬಿಸುಟು, (ಜನರಿಂದ) ಕರ್ತವ್ಯವಾದ ಯಜ್ಞಾದಿಗಳನ್ನು (ಅಲ್ಲಿ) ಮಾಡಿಸಿದೆ.

## English Translation.

Stop, Sura, your yellow horses, for this Etasa, Indra, drags the wheel: having driven those who offer no sacrifices to the opposite bank of the ninety rivers, you compel them (to do) what is to be done.

॥ ವಿಶೇಷವಿಷಯಗಳು ॥

ಇಂದ್ರನು ಸೂರ್ಯರೂಪದಿಂದ (ಸೂರ್ಯನ) ರಥದಲ್ಲಿ ಪ್ರಕಾಶಿಸುತ್ತಾ ಲೋಕೋಪದ್ರವಕಾರಿಗಳಾದ ಅಸುರರೊಡನೆ ಯುದ್ಧ ಮಾಡಿದ ಸಂಗತಿಯು ಇಲ್ಲಿ ವರ್ಣಿತವಾಗಿದೆ.

> **ಹರಿತಃ ನೄನ್ ರಮಯಃ ಏತಶೋ ನ ಭರತ್**—**ಹರಿತವರ್ಣಾನ್ ನೇತೄನ್ ಅಶ್ವಾನ್ ಯದ್ವಾ ರಸಹರಣಶೀಲಾನ್ ರಶ್ಮೀನ್ ಉಪಾರಮಯಃ** । ಏತಶ ಇತಿ **ಸೂರ್ಯಾಶ್ವಸ್ಯಾಖ್ಯಾ ತಥಾ ಚ ಶ್ರೂಯತೇ**—**ಏತಶೇನ ತ್ವಾ ಸೂರ್ಯೋ ದೇವತಾಂ ಗಮಯತು** (ತೈ. ಸಂ. ೧-೬-೪-೬) **ಇತಿ ಏತಶಶ್ಚ ರಥಸ್ಯ ಚಕ್ರಂ ಪ್ರಾವಹತ್** ॥

ಹಸುರು ವರ್ಣಗಳುಳ್ಳದ್ದಾಗಿಯೂ ರಥವನ್ನು ಶೀಘ್ರವಾಗಿ ಒಯ್ಯುವುದೂ ಆದ ಅಥವಾ (ನೀರನ್ನು ಹೀರುವ ಸ್ವಭಾವವುಳ್ಳ) ಕುದುರೆಗಳನ್ನು (ಅಥವಾ ರಶ್ಮಿಗಳನ್ನು) ರಥಕ್ಕೆ ಇಂದ್ರನು ಸೇರಿಸಿರುವನು. ಸೂರ್ಯನ ರಥದ ಕುದುರೆಗೆ ಏತಶ ಎಂದು ಹೆಸರು ಇರುವುದು. ಈ ವಿಷಯವು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿರುತ್ತದೆ. ಎಂದು ಸಾಯಣರು ವಿವರಿಸುತ್ತಾರೆ. ಸ್ಕಂದಸ್ವಾಮಿಗಳು—**ಸೂರ್ಯಸ್ಯ ಸ್ವಭೂತಾನ್ ಹರಿತಃ ಹರಿತವರ್ಣಾಶ್ವಾನ್ ಮನುಷ್ಯಾಣಾ-**

**ಮನುಗ್ರಹಾರ್ಥಂ ಸೂರ್ಯಾಶ್ವಾನ್ ರಥೇ ರತಿಂ ಕಾರಿತವಾನ್** । ಸೂರ್ಯನ ಹರಿತವರ್ಣಗಳಾದ ಕುದುರೆಗಳನ್ನು ಮನುಷ್ಯರ ಹಿತಕ್ಕಾಗಿ ರಥಕ್ಕೆ ಸೇರಿಸಿ ಇಂದ್ರನು ಸೂರ್ಯರೂಪದಿಂದ ಇರುವನು ಎಂದು ಅರ್ಥವನ್ನು ವಿವರಿಸಿರುವರು.

**ಭರತ್—ಅಸುರೈರ್ಭಜ್ಯಮಾನಂ ಧಾರಯನ್ ರಕ್ಷನ್ ಸೂರ್ಯರಥಸ್ಯ ಚಕ್ರಂ ಅಶ್ವಂ ಚಾಸುರೈರಪಹ್ರಿಯಮಾಣಂ** ॥ ಅಸುರರೊಡನೆ ಯುದ್ಧವನ್ನು ಮಾಡುವಾಗ ಸೂರ್ಯರಥದ ಚಕ್ರಗಳು ಮುರಿದು ಹೋಗಿರುವುದನ್ನು ಇಂದ್ರನು ರಕ್ಷಿಸಿರುವನು ಮತ್ತು ಅಸುರರು ಅಪಹರಿಸಿದ ಸೂರ್ಯನ ರಥದ ಕುದುರೆಗಳಿಗೆ ತನ್ನ ರಥದ ಕುದುರೆಗಳನ್ನು ಕಟ್ಟಿದನು ಎಂದು ಅರ್ಥವನ್ನು ವಿವರಿಸಿ—

**ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।**
**ತ್ವಂ ರಥಮೇತಶಂ ಕೃತ್ವ್ಯೇ ಧನೇ ತ್ವಂ ಪುರೋ ನವತಿಂ ದಂಭಯೋ ನವ ॥**

(ಋ. ಸಂ. ೧-೫೪-೬)

**ಅಸ್ಮಾ ಇದು ತ್ಯದನು ದಾಯ್ಯೇಷಾಮೇಕೋ ಯದ್ವವ್ನೇ ಭೂರೇರೀಶಾನಃ ।**
**ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ ಸುಷ್ವಿಮಾವದಿಂದ್ರಃ ॥**

(ಋ. ಸಂ. ೧-೬೧-೧೫)

ಎಂಬ ಋಕ್ಕುಗಳನ್ನು ಉದಹರಿಸಿರುವರು.

**ಅಯಜ್ಯೂನ್—ಅಯಜನಶೀಲಾನ್ ಅಗಾಧಾಪಗಾನಾಂ ನದೀನಾಂ ನವತೇರ್ಗರ್ತೇ ಕೂಪೇ ಪ್ರಾವರ್ತಯಃ** ॥ ಯಜ್ಞಗಳನ್ನು ಮಾಡದಿರುವ ಸ್ವಭಾವವುಳ್ಳವರನ್ನು ಬಹಳ ಆಳವಾದ ನೀರುಗಳುಳ್ಳ ಅನೇಕ ನದಿಗಳ ಮಡುಗಳಲ್ಲಿಯೂ ಬಾವಿಗಳಲ್ಲಿಯೂ ಇಂದ್ರನು ಹಾಕುವನು ಎಂದು ವರ್ಣಿಸಿದೆ ಎಂದು ಅರ್ಥವನ್ನೂ ವಿವರಿಸಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ರಮಯಃ**—ರಮು ಕ್ರೀಡಾಯಾಂ ಧಾತು. ಪ್ರೇರಣಾ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಬಂದಾಗ, ಇದು ಅಮಂತವಾದುದರಿಂದ ಮಿತ್‌ಸಂಜ್ಞೆ ಇರುವುದರಿಂದ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಅದಕ್ಕೆ ಹ್ರಸ್ವ ಬರುತ್ತದೆ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚ್ಚಿಗೆ ಗುಣ ಅಯಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭರತ್**—ಭೃಞ್ ಭರಣೇ. ಧಾತು. ಭ್ವಾದಿ. ಲಙ್‌ಪ್ರಥಮಪುರುಷದಲ್ಲಿ ತಿಪ್ ಬಂದಾಗ ಇಕಾರಲೋಪ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕ್ಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ

ಬರುತ್ತದೆ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪ್ರಾಸ್ಯ**—ಪ್ರ ಉಪಸರ್ಗ. ಅಸು ಕ್ಷೇಪಣೇ. ಧಾತು. ಇದಕ್ಕೆ ಕ್ತ್ವಾ ಪ್ರತ್ಯಯ ಬಂದಾಗ **ಸಮಾಸೇಽನಞ್‌ಪೂರ್ವೇಕ್ತ್ವೋ ಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಅದಕ್ಕೆ ಲ್ಯಬಾದೇಶ. ಇದು ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ನಾವ್ಯಾನಾಮ್**—ನಾವಾ ತಾರ್ಯಂ. ನಾವ್ಯಮ್. **ನೌವಯೋಧರ್ಮ**—(ಪಾ. ಸೂ. ೪-೪-೯೧) ಎಂಬುದರಿಂದ ತಾರ್ಯ ಎಂಬರ್ಥದಲ್ಲಿ ಯತ್ ಪ್ರತ್ಯಯ. **ವಾಂತೋ ಯಿ ಪ್ರತ್ಯಯೇ** (ಪಾ. ಸೂ. ೬-೧-೭೯) ಎಂಬುದರಿಂದ ಅವಾದೇಶ. ಪ್ರತ್ಯಯ ತಿತ್ತಾದುದರಿಂದ **ತಿತ್ ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಷಷ್ಠೀ ಬಹುವಚನಾಂತರೂಪ.

**ಅವರ್ತಯಃ**—ವೃತು ವರ್ತನೇ. ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ರಪರವಾಗಿ ಬರುತ್ತದೆ. ಣಿಜಂತದಮೇಲೆ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರಲೋಪ. ಶಪ್ ವಿಕರಣನಿಮಿತ್ತವಾಗಿ ಣಿಚ್ಚಿಗೆ ಗುಣ, ಅಯಾದೇಶ. ಅಂಗಕ್ಕೆ ಅಡಾಗಮ. ಅತಿಙಂತ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಯುಜ್ಯುನ್**—ಯಜ ದೇವಪೂಜಾಸಂಗತಿಕರಣದಾನೇಷು. ಇದಕ್ಕೆ ಔಣಾದಿಕವಾದ ಯುಸ್ ಪ್ರತ್ಯಯ. ನ ಯಜ್ಯುಃ ಅಯಜ್ಯುಃ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೧೩ ॥



॥ ಸಂಹಿತಾಪಾಠಃ ॥

ತ್ವಂ ನೋ ಅಸ್ಯಾ ಇಂದ್ರ ದುರ್ಹಣಾಯಾಃ ಪಾಹಿ ವಜ್ರಿವೋ
ದುರಿತಾದಭೀಕೇ ।
ಪ್ರ ನೋ ವಾಜಾನ್ರಥ್ಯೋ೩ಅಶ್ವಬುಧ್ಯಾನಿಷೇ ಯಂಧಿ ಶ್ರವಸೇ
ಸೂನೃತಾಯೈ ॥ ೧೪ ॥

॥ ಪದಪಾಠಃ ॥

ತ್ವಂ । ನಃ । ಅಸ್ಯಾಃ । ಇಂದ್ರ । ದುಃಽಹನಾಯಾಃ । ಪಾಹಿ । ವಜ್ರಿವಃ ।

ದುಃಽಇತಾತ್ । ಅಭೀಕೇ ।

ಪ್ರ । ನಃ । ವಾಜಾನ್ । ರಥ್ಯಃ । ಅಶ್ವಽಬುಧ್ಯಾನ್ । ಇಷೇ । ಯಂಧಿ । ಶ್ರವಸೇ ।

ಸೂನೃತಾಯೈ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ವಜ್ರಿವೋ ವಜ್ರವನ್ನಿಂದ್ರ ತ್ವಂ ದುರ್ಹಣಾಯಾ ದುಃಖೇನ ಹಂತವ್ಯಾಯಾ ಅಸ್ಯಾ ಆವೃತ್ತೇರ್ದಾರಿದ್ರ್ಯಾನ್ನೋಽಸ್ಮಾನ್ಪಾಹಿ। ರಕ್ಷ। ತಥಾ ದುರಿತಾತ್ಪಾಪಾದಭೀಕೇಽಭಿಪ್ರಾಪ್ತೇ ಸಮೀಪವರ್ತಿನಿ ಸಂಗ್ರಾಮೇಽಸ್ಮಾನ್ರಕ್ಷ। ಅಪಿ ಚ ನೋಽಸ್ಮಭ್ಯಂ ರಥ್ಯೋ ರಥಯುಕ್ತಾನ್ ಅಶ್ವಬುಧ್ಯಾನಶ್ವಾನಾಂ ಬೋಧಕಾನ್ । ಅಶ್ವಾ ಯಾವದ್ಭಿರ್ಲಭ್ಯಂತೇ ತಾವದಿತ್ಯರ್ಥಃ । ಯದ್ವಾ । ಅಶ್ವಬುಧ್ನಾನ್ । ಛಾಂದಸೋ ವರ್ಣವಿಕಾರಃ । ಅಶ್ವಮೂಲಾನ್ । ಅಶ್ವಪ್ರಮುಖಾನಿತ್ಯರ್ಥಃ । ಸರ್ವಂ ಹಿ ಧನಮಶ್ವಮೂಲಂ ದಾಸಾಪವರ್ಗಂ । ಯಥೋಕ್ತಂ । ದಾಸಪ್ರವರ್ಗಂ ರಯಿಮಶ್ವಬುಧ್ಯಂ । ಋಗ್ವೇ. ೧-೯೨-೮ । ಇತಿ । ಏವಂವಿಧಾನ್ವಾಜಾನ್ ಧನಾನಿ ಪ್ರ ಯಂಧಿ। ಪ್ರಯಚ್ಛ। ಕಿಮರ್ಥಂ। ಇಷ ಅನ್ನಾರ್ಥಂ ಶ್ರವಸೇ ಕೀರ್ತ್ಯರ್ಥಂ ಸೂನೃತಾಯೈ । ಸೂನೃತಾ ಪ್ರಿಯಸತ್ಯಾತ್ಮಿಕಾ ವಾಕ್ । ತದರ್ಥಂ ಚ ॥ ದುರ್ಹಣಾಯಾಃ ಈಷದ್ದುಃಸುಷ್ವಿತಿ ಹಂತೇಃ ಕರ್ಮಣಿ ಖಲ್ । ಪಾಹಿ । ಪಾದಾದಿತ್ವಾನ್ನಿಘಾತಾಭಾವಃ । ವಜ್ರಿವಃ । ವಜ್ರೋಽಸ್ಯಾಸ್ತೀತಿ ವಜ್ರೀ ಹಸ್ತಃ। ತದ್ವಾನ್ ವಜ್ರಿವಾನ್। ಛಂದಸೀರ ಇತಿ ಮತುಪೋ ವತ್ವಂ । ಸಂಬುದ್ಧೌ ಮತುವಸೋ ರುರಿತಿ ನಕಾರಸ್ಯ ರುತ್ವಂ । ರಥ್ಯಃ। ಛಂದಸೀವನಿಪಾವಿತಿ ರಥಶಬ್ದಾನ್ಮತ್ವರ್ಥೀಯ ಈಕಾರಃ । ಯಂಧಿ । ಯಮು ಉಪರಮೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವಾ ಛಂದಸೀತಿ ಹೇಃ ಪಿತ್ತ್ವೇನ ಙಿತ್ತ್ವಾಭಾವಾದಙಿತಶ್ಚ । ಪಾ. ೬-೪-೧೦೩ । ಇತಿ ಹೇರ್ಧಿಃ ॥

॥ ಭಾವಾರ್ಥ ॥

**ವಜ್ರಿವಃ ಇಂದ್ರ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ, । **ತ್ವಂ**—ನೀನು । **ದುರ್ಹಣಾಯಾಃ**—ಕಷ್ಟದಿಂದ ಪರಿಹರ್ತವ್ಯವಾದ । **ಅಸ್ಯಾಃ**—ಈ ದಾರಿದ್ರ್ಯದಿಂದ । **ನಃ**—ನಮ್ಮನ್ನು । **ಪಾಹಿ**—ರಕ್ಷಿಸು ;। **ಅಭೀಕೇ**—ಸಮೀಪವರ್ತಿಯಾದ (ಸಂಗ್ರಾಮದಲ್ಲಿ). । **ದುರಿತಾತ್**—ಪಾಪರೂಪವಾದ (ಅಪಜಯದಿಂದ) । (**ಪಾಹಿ**—ರಕ್ಷಿಸು) । (**ಅಪಿ ಚ**—ಮತ್ತೂ) । **ನಃ**—ನಮಗೆ । **ರಥ್ಯಃ**—ರಥಯುಕ್ತವಾದ ।

**ಅಶ್ವಬುಧ್ಯಾನ್**—ಅಶ್ವಮೂಲವಾದ (ಅಶ್ವವೇ ಆದಿಯಾಗಿ ಉಳ್ಳ ಅಶ್ವಬೋಧಕವಾದ ಅಶ್ವಮೂಲ್ಯದಷ್ಟು) । **ವಾಜಾನ್**—ಧನವನ್ನು । **ಇಷೇ**—ಆಹಾರಕ್ಕೋಸ್ಕರಲೂ, । **ಶ್ರವಸೇ**—ಕೀರ್ತಿಗಾಗಿಯೂ । **ಸೂನೃತಾಯೈ**—ಪ್ರಿಯವಾದ ಮತ್ತು ಸತ್ಯವಾದ ವಾಕ್ಕಿಗೋಸ್ಕರಲೂ । **ಪ್ರ ಯೆಂಧಿ**—ಅನುಗ್ರಹಿಸು.

॥ ಭಾವಾರ್ಥ ॥

ವಜ್ರಧಾರಿಯಾದ ಎಲೈ ಇಂದ್ರನೇ, ನಮ್ಮನ್ನು ದುಷ್ಪರಿಹಾರವಾದ ದಾರಿದ್ರ್ಯದಿಂದಲೂ, ಯುದ್ಧದಲ್ಲಿ ಅಪಜಯದಿಂದಲೂ ಪಾರುಮಾಡು; (ಮತ್ತೂ) ನಮಗೆ, ರಥಗಳು ಮತ್ತು ಅಶ್ವಗಳಿಂದ ಕೂಡಿದ ಐಶ್ವರ್ಯವನ್ನು (ನಮ್ಮ) ಆಹಾರ, ಕೀರ್ತಿ, ಪ್ರಿಯವಾಕ್ಕು ಇವುಗಳಿಗೋಸ್ಕರ ಅನುಗ್ರಹಿಸು.

English Translation.

Indra, bearer of the thunderbolt, preserve us from this (poverty) that is so difficult to be destroyed, and from misfortune in war; grant us riches conspicuous for chariots, remarkable for horses, for the sake of food, of fame, and of truth.

॥ ವಿಶೇಷವಿಷಯಗಳು ॥

**ಅಶ್ವಬುಧ್ಯಾನ್—ಅಶ್ವಾನಾಂ ಬೋಧಕಾನ್ ಅಶ್ವಪ್ರಮುಖಾನ್ ಸರ್ವಂ ಹಿ ಧನಂ ಅಶ್ವಮೂಲಂ ದಾಸಾಪವರ್ಗಂ । ಅಶ್ವಾ ಬುಧ್ಯಾ ಬೋಧ್ಯವ್ಯಾ ಯೇನ ಧನೇನ ತಾದೃಶಂ ।** ಧನಸಂಪಾದನೆಗೆ ಅಶ್ವಗಳೇ ಮುಖ್ಯವಾಗಿರುವವುಗಳೆಂದೂ, ಕೆಲಸಮಾಡುವ ಸೇವಕರನ್ನೂ ಧನವೆಂದು ಪರಿಗಣಿಸುವ ರೂಢಿಯಿರುವುದರಿಂದಲೂ ಸಾಯಣರು—

**ಉಷಸ್ತಮಶ್ಯಾಂ ಯಶಸಂ ಸುವೀರಂ ದಾಸಪ್ರವರ್ಗಂ ರಯಿಮಶ್ವಬುಧ್ಯಂ ॥**

ಎಂಬ ಈ ಋಕ್ಕನ್ನು ಉದಹರಿಸಿರುವರು. (ಋ. ಸಂ. ೧-೯೨-೮)

ಬಹಳ ಶ್ರಮವನ್ನುಂಟುಮಾಡುವುದೂ ನಾಶಪಡಿಸುವುದೂ ಆದ, ದಾರಿದ್ರ್ಯವು ನಮಗೆ ಉಂಟಾಗದಂತೆ ನಮ್ಮನ್ನು ರಕ್ಷಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ. ದುರ್ಗತಿಯನ್ನು ಉಂಟುಮಾಡುವ ಪಾತಕಗಳು ನಮಗೆ ಸಂಭವಿಸದಂತೆಯೂ, ಯುದ್ಧವು ಪ್ರಾಪ್ತವಾದಾಗ ಅವುಗಳಿಂದ ರಕ್ಷಣೆಯು ಆಗಬೇಕೆಂತಲೂ ವರ್ಣಿಸಿ, ಅಶ್ವಗಳೇ ಮುಖ್ಯವಾಗಿರುವ ರಥಗಳಿಂದಲೂ, ಬಹಳವಾದ ಕೆಲಸಗಾರರಿಂದಲೂ ಸಹಿತವಾದ ಐಶ್ವರ್ಯವನ್ನೂ ಇಂದ್ರನು ಅನುಗ್ರಹಿಸಲಿ ಎಂದೂ, ಅನ್ನ, ಧನ, ಕೀರ್ತಿ ಮತ್ತು ಹಿತಕರವಾದ ಮಾತನಾಡುವ ಬುದ್ಧಿಯೂ ಉಂಟಾಗುವಂತೆಯೂ ಇಂದ್ರನನ್ನು ಪ್ರಾರ್ಥಿಸಿದೆ.

**ವಜ್ರಿವಃ—ವಜ್ರೋಽಸ್ಯಾಸ್ತೀತಿ ವಜ್ರೀ ಹಸ್ತಃ । ತೆದ್ವಾನ್ ವಜ್ರಿವಾನ್**—ವಜ್ರಾಯುಧವನ್ನು ಹಿಡಿದಿರುವ ಹಸ್ತವನ್ನು ಹೊಂದಿರುವವನು ಎಂದು ಅರ್ಥ.

**ಶ್ರವಸೇ—ಕೀರ್ತ್ಯರ್ಥಂ ।** ಶ್ರವಃ ಎಂಬಶಬ್ದವು-ಇಪ್ಪತ್ತೆಂಟು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುತ್ತದೆ. ಇದರಿಂದ ಧನವೆಂದು ಅರ್ಥ.

**ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥**

(ಋ. ಸಂ. ೧-೧೨೬-೧)

**ಶ್ರವ ಇಚ್ಛಮಾನಃ ಪ್ರಶಂಸಾಮಿಚ್ಛಮಾನಃ** (ನಿ. ೯-೧೧) ಎಂದು ವ್ಯಾಖ್ಯಾತವಾಗಿರುವುದರಿಂದ ಕೀರ್ತಿ ಎಂದೂ ಅರ್ಥ. **ಶ್ರವ ಇತ್ಯನ್ನನಾಮ** (ನಿ. ೧೦-೩) ಎಂದು ಯಾಸ್ಕರು ಅರ್ಥಮಾಡಿರುವುದರಿಂದ ಅನ್ನ ಎಂದೂ ಅರ್ಥ.

**ವಾಜಾನ್—ಧನಾನಿ ।** ಧನವೆಂದು ಅರ್ಥ. **ವಾಜ:** ಶಬ್ದವು **ಅನ್ನ** ನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. **ಸಂಗ್ರಾಮ** ಎಂಬ ಅರ್ಥದಲ್ಲಿಯೂ (ನಿ. ೩-೯) ಪಠಿತವಾಗಿದೆ. **ವಾಜ** ಎಂದು **ಋಭುವಿನ** ಹೆಸರು. (ನಿ. ೧೧-೧೭) ಎಂದೂ ಹೇಳಿದೆ. ಸಾಯಣರು ಇಲ್ಲಿ ಧನವೆಂದು ಅರ್ಥವನ್ನು ಹೇಳಿರುವರು.

**ಸೂನೃತಾಯೈ—ಪ್ರಿಯಸತ್ಯಾತ್ಮಿಕಾ ವಾಕ್ ತದರ್ಥಂ ಚ ।** ಹಿತವಾಗಿಯೂ ಸತ್ಯವಾಗಿಯೂ ಇರುವ ಮಾತು ಎಂದು ಅರ್ಥ. ಸೂನೃತ್ ಶಬ್ದವು (ನಿ. ೨-೧೯) ಉಷಸ್ಸು ಎಂಬರ್ಥವುಳ್ಳ ಪದಗಳಲ್ಲಿಯೂ ಅನ್ನನಾಮಗಳಲ್ಲಿಯೂ (ನಿ. ೩-೯) ಉಕ್ತವಾಗಿದೆ. ಇಲ್ಲಿ ಸಾಯಣರು ವಾಕ್ಕು ಎಂಬ ಅರ್ಥವೆಂದು ಸ್ವೀಕರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಯಾಃ—ಊಡಿದಂಪದಾದಿ—**(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದುರ್ಹಣಾಯೋಃ—**ಹನ ಹಿಂಸಾಗತ್ಯೋಃ ಧಾತು. ದುಸ್ ಉಪಪದವಾಗಿರುವಾಗ **ಈಷದ್ದುಸ್ಸುಷು—**(ಪಾ. ಸೂ. ೩-೩-೧೨೬) ಎಂಬುದರಿಂದ ಕರ್ಮಣಿಯಲ್ಲಿ ಖಲ್ ಪ್ರತ್ಯಯ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಪಾಹಿ—**ಪಾ ರಕ್ಷಣೇ ಧಾತು. ಅದಾದಿ. ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಹಿ ಆದೇಶ. **ಅದಿಪ್ರಭೃತಿಭ್ಯಃ ಶಪಃ** (ಪಾ. ಸೂ. ೨-೪-೭೨) ಎಂಬುದರಿಂದ ಶಪ್ಪಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ವ ವಿಧಾನಮಾಡಿರುವುದರಿಂದ ಉದಾತ್ತಸ್ವರ ಬರುತ್ತದೆ.

**ವಜ್ರಿವಃ—**ವಜ್ರಃ ಅಸ್ಯ ಅಸ್ತಿ ಇತಿ ವಜ್ರೀ. ಹಸ್ತಃ (ಕೈ) **ಅತಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ವಜ್ರೀ ಅಸ್ಯ ಅಸ್ತಿ ಇತಿ ವಜ್ರಿಮತ್ **ಛಂದಸೀರಃ** (ಪಾ. ಸೂ. ೮-೨-೧೫.) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ ವಜ್ರಿವನ್ ಎಂದು ರೂಪವಾದಾಗ **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. **ಖರವಸಾನಯೋರ್ವಿಸರ್ಜನೀಯಃ** ಎಂಬುದರಿಂದ ಅವಸಾನದಲ್ಲಿ ಅದಕ್ಕೆ ವಿಸರ್ಗ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ದುರಿತಾತ್**—ದುಸ್ ಉಪಸರ್ಗ. ಇಣ್ ಗತೌ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ರಥ್ಯಃ**—ರಥ ಅಸ್ಯ ಅಸ್ತಿ ಇತಿ ರಥೀ. **ಛಂದಸೀವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ಈಕಾರ ಪ್ರತ್ಯಯ. ಬಹುವಚನದಲ್ಲಿ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಅದಕ್ಕೆ ಸ್ವರಿತಸ್ವರ ಬರುತ್ತದೆ.

ಇಷೇ—**ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಯಂಧಿ**—ಯಮ ಉಪರಮೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಅದಕ್ಕೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ವಾ ಛಂದಸಿ** ಎಂಬುದರಿಂದ ಹಿಗೆ ಅಪಿತ್ವ ಬರುವುದಿಲ್ಲ. ಪಿತ್ವವಿರುವುದರಿಂದ **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವ ಬರುವುದಿಲ್ಲ **ಅಙಿತಶ್ಚ** (ಪಾ. ಸೂ. ೬-೪-೧೦೩) ಎಂಬುದರಿಂದ ಹಿಗೆ ಧಿತ್ವ. ಮಕಾರಕ್ಕೆ ಅನುಸ್ವಾರ ಪರಸವರ್ಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶ್ರವಸೇ**—ಶ್ರು ಶ್ರವಣೇ. ಧಾತು. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೧೪ ॥



॥ ಸಂಹಿತಾಪಾಠಃ ॥

ಮಾ ಸಾ ತೇ ಅಸ್ಮತ್ಸುಮತಿರ್ವಿ ದಸದ್ವಾಜಪ್ರಮಹಃ ಸಮಿಷೋ ವರಂತ ।
ಆ ನೋ ಭಜ ಮಘವನ್ಗೋಷ್ವರ್ಯೋ ಮಂಹಿಷ್ಠಾಸ್ತೇ ಸಧಮಾದಃ ಸ್ಯಾಮ ॥ ೧೫ ॥

॥ ಪದಪಾಠಃ ॥

ಮಾ । ಸಾ । ತೇ । ಅಸ್ಮತ್ । ಸುಽಮತಿಃ । ವಿ । ದಸತ್ । ವಾಜಽಪ್ರಮಹಃ ।

ಸಂ । ಇಷಃ । ವರಂತ ।

ಆ । ನಃ । ಭಜ । ಮಘಽವನ್ । ಗೋಽಷು । ಅರ್ಯಃ । ಮಂಹಿಷ್ಠಾಃ । ತೇ ।

ಸಧಽಮಾದಃ । ಸ್ಯಾಮ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ವಾಜಪ್ರಮಹೋ ವಾಜೈರ್ಧನೈಃ ಪ್ರಮಹನೀಯೇಂದ್ರ ತೇ ತ್ವದೀಯಾ ಸಾ ಸುಮತಿಃ ಶೋಭನಾನುಗ್ರಹರೂಪಾ ಬುದ್ಧಿರಸ್ಮದಸ್ಮಾಸು ಮಾ ವಿ ದಸತ್ । ಮಾ ವಿಶುಷ್ಯತು । ತಥೇಷೋಽನ್ನಾನ್ಯಸ್ಮಾನ್ ಸಂ ವರಂತ । ಸಂವೃತಾನ್ಕುರ್ವಂತು । ಹೇ ಮಘವನ್ ಧನವನ್ನಿಂದ್ರ ಅರ್ಯೋ ಧನಪತಿಸ್ತ್ವಂ ನೋಽಸ್ಮಾನ್ ಗೋಷ್ವಾ ಭಜ । ಪ್ರಾಪಯ । ತೇ ತವ ಮಂಹಿಷ್ಠಾ ಅತಿಶಯೇನ ಸ್ತುತಿಭಿಃ ಪ್ರವರ್ಧಯಿತಾರೋ ವಯಂ ಸಧಮಾದಃ ಸ್ಯಾಮ । ಪುತ್ರಪೌತ್ರಾದಿಭಿಃ ಸಹ ಮಾದ್ಯಂತೋ ಭವೇಮ ॥ ಅಸ್ಮತ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ದಸತ್ । ದಸು ಉಪಕ್ಷಯೇ । ಮಾಙಿ ಲುಙಿ ಪುಷಾದಿತ್ವಾದಙ್ । ವಾಜಪ್ರಮಹಃ । ವಾಜೈರ್ಧನೈಃ ಪ್ರಕೃಷ್ಟಂ ಮಹಸ್ತೇಜೋ ಯಸ್ಯ ಸ ತಥೋಕ್ತಃ । ಪಾದಾದಿತ್ವಾದಾಷ್ಟಮಿಕನಿಘಾತಾಭಾವಃ । ಷಾಷ್ಠಿಕಮಾಮಂತ್ರಿದ್ಯುದಾತ್ತತ್ವಂ । ವರಂತ । ವೃಞ್ ವರಣೇ । ವ್ಯತ್ಯಯೇನ ಶಪ್ । ಗೋಷು ಸಾವೇಕಾಚ ಇತಿ ಪ್ರಾಪ್ತಸ್ಯ ವಿಭಕ್ತ್ಯುದಾತ್ತತ್ವಸ್ಯ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಅರ್ಯಃ । ಅರ್ಯಃ ಸ್ವಾಮಿವೈಶ್ಯಯೋರಿತಿ ನಿಪಾತ್ಯತೇ । ಅರ್ಯಃ ಸ್ವಾಮ್ಯಾಖ್ಯಾ ಚೇತ್ । ಫಿ. ೧-೧೮ । ಇತ್ಯಂತೋದಾತ್ತತ್ವಂ । ಮಂಹಿಷ್ಠಾಃ । ಮಹಿ ವೃದ್ಧೌ । ಇದಿತ್ವಾನ್ನುಮ್ । ಅಸ್ಮಾದಂತರ್ಭಾವಿತಣ್ಯರ್ಥಾತ್ತೃಚ್ । ತುಶ್ಛಂದಸೀತೀಷ್ಠನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ಸಧಮಾದಃ । ಮದ ತೃಪ್ತಿಯೋಗೇ । ಚೌರಾದಿಕಃ । ಸಹ ಮಾದಯಂತೇ ತೃಪ್ತಾ ಭವಂತೀತಿ ಸಧಮಾದಃ । ಕ್ವಿಪ್ಚೇತಿ ಕ್ವಿಪ್ । ಜಸ್ । ಸಧಮಾದಸ್ಥಯೋಶ್ಛಂದಸೀತಿ ಸಹಸ್ಯ ಸಧಾದೇಶಃ ॥

॥ ಪ್ರತಿಪದಾರ್ಥ ॥

**ಹೇ ವಾಜಪ್ರಮಹಃ**— ಐಶ್ವರ್ಯದಲ್ಲಿ ಪ್ರಸಿದ್ಧನಾದ ಎಲೈ ಇಂದ್ರನೇ । **ತೇ**—ನಿನ್ನ । **ಸಾ ಸುಮತಿಃ**— ಆ ಅನುಗ್ರಹರೂಪವಾದ ಬುದ್ಧಿಯು । **ಅಸ್ಮತ್**—ನಮ್ಮಲ್ಲಿ । **ಮಾ ವಿ ದಸತ್**—ಶೋಷಿಸದೆ ಇರಲಿ । **ಇಷಃ**—ಆಹಾರವು । **ಸಂ ವರಂತ**—(ನಮಗೆ ಪುಷ್ಟಿಯನ್ನು ಕೊಡಲಿ) ನಮ್ಮನ್ನು ಸಂವೃತರನ್ನಾಗಿ ಮಾಡಲಿ ।

**ಹೇ ಮಘವನ್**—ಎಲೈ ಧನಾಧಿಪತಿಯೇ। **ಅರ್ಯಃ**—ಧನಪತಿಯಾದ (ನೀನು)। **ನಃ**—(ನಮಗೆ) ನಮ್ಮನ್ನು। **ಗೋಷು**— ಗೋವುಗಳಲ್ಲಿ (ಗೋವುಗಳನ್ನು)। **ಆ ಭಜ**—ಪ್ರಾಪ್ತರನ್ನಾಗಿ ಮಾಡು (ಅನುಗ್ರಹಿಸು)। **ತೇ**—ನಿನ್ನನ್ನು। **ಮಂಹಿಷ್ಠಾಃ**—(ಸ್ತುತಿಗಳಿಂದ) ವರ್ಧಿಸುತ್ತಿರುವ (ನಾವು)। **ಸಧಮಾದಃ**—ಪುತ್ರಪೌತ್ರಾದಿಗಳಿಂದ ಸಂತುಷ್ಟರಾಗಿ। **ಸ್ಯಾಮ**—ಆಗೋಣ.

॥ ಭಾವಾರ್ಥ ॥

ಐಶ್ವರ್ಯಕ್ಕೆ ಪ್ರಸಿದ್ಧನಾದ ಎಲೈ ಇಂದ್ರನೇ, ನಮ್ಮಲ್ಲಿ ನಿನ್ನ ಅನುಗ್ರಹವು ಸಂಪೂರ್ಣವಾಗಿರಲಿ; ಧನಾಧಿಪತಿಯಾದ ಎಲೈ ಇಂದ್ರನೇ ನೀನು, ಸ್ತುತಿಗಳಿಂದ ನಿನ್ನನ್ನು ವರ್ಧಿಸುತ್ತಿರುವ ನಮಗೆ ಆಹಾರವನ್ನೂ, ಗೋವುಗಳನ್ನೂ, ಪುತ್ರಪೌತ್ರಾದಿಗಳನ್ನೂ, (ಇವುಗಳಿಂದ ಆಗುವ) ಸಂತೋಷವನ್ನೂ ಅನುಗ್ರಹಿಸು.

English Translation.

Famous for affluence, Indra, never may your favour be withdrawn from us ; may food ever sustain us ; opulent Maghavan, make us possessors of cattle, and may we, most assiduous in your adoration, be happy, together (with our families).

॥ ವಿಶೇಷವಿಷಯಗಳು ॥

**ವಾಜಪ್ರಮಹಃ—ವಾಜೈಃ ಧನೈಃ ಪ್ರಮಹನೀಯ ಇಂದ್ರ**। ವಾಜಃ ಶಬ್ದವು ಧನವಾಚಕವೆಂದೂ ಧನಗಳಿಂದ ಪೂಜ್ಯನಾದವನು ಇಂದ್ರನು ಎಂದೂ ಸಾಯಣರ ವಿವರಣೆ—**ವಾಜಂ ಬಲಂ ಪ್ರಕರ್ಷೇಣ ಮಹದ್ಯಸ್ಯ ಸಃ ವಾಜಪ್ರಮಹಾಃ**—ಅತಿಶಯವಾದ ಬಲದಿಂದ ಪೂಜ್ಯನು ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿದ್ದಾರೆ ಇಂದ್ರನ ಅನುಗ್ರಹ ರೂಪವಾದ ಬುದ್ಧಿಯು ನಮ್ಮಲ್ಲಿ ಉಂಟಾಗುವಂತೆ ಪ್ರಾರ್ಥಿಸಿದೆ. ಧನಪತಿಯಾದ ಇಂದ್ರನು ನಮಗೆ ಗೋವುಗಳನ್ನು ಅನುಗ್ರಹಿಸಲಿ ಎಂದೂ, ಅತಿಶಯವಾದ ಸ್ತುತಿಗಳಿಂದ ಇಂದ್ರನನ್ನು ಸ್ತುತಿಸುವಂತೆ ನಮ್ಮ ಬುದ್ಧಿಯು ಇರಲಿ ಎಂದೂ, ನಾವು ಪುತ್ರಪೌತ್ರಾಗಳಿಂದ ಸಂತೋಷವಾಗಿ ಇರುವಿಕೆಯು ಉಂಟಾಗಲಿ ಎಂದೂ ಇಂದ್ರನನ್ನು ಪ್ರಾರ್ಥಿಸಿದೆ.

**ಅರ್ಯಃ—ಧನಪತಿಃ** । ಅರ್ಯಶಬ್ದವು ಈಶ್ವರ ನಾಮಗಳಲ್ಲಿ (ನಿ. ೨-೧೧) ಉಕ್ತವಾಗಿದೆ. ಈಶ್ವರನೆಂದು ಅರ್ಥ. ಸಾಯಣರು ಧನಗಳಿಗೆ ಅಧಿಪತಿಯು ಎಂದು ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳು ತಮ್ಮ ಭಾಷ್ಯದಲ್ಲಿ ಹೀಗೆ ಹೇಳಿರುವರು—

> **ಗೋಷು ಇತಿ ಸಪ್ತಮೀನಿರ್ದೇಶಾತ್ ಸ್ಥಿತಾ ಇತಿ ವಾಕ್ಯಶೇಷಃ ಅರ್ಯಸ್ತ್ವಮೀಶ್ವರಃ । ಅಥವಾ ಅರ್ಯಶಬ್ದೋಽತ್ರ ಷಷ್ಠ್ಯಂತಃ ಅರೇಃ ಸ್ವಭೂತಾಸು ಗೋಷು ಸ್ಥಿತಾನ್ । ಶತ್ರೋಃ ಯಾಃ ಗಾವಃ ತಾಃ ಅಸ್ಮಭ್ಯಂ ದತ್ವಾ ಅಸ್ಮಾನ್ ಭಜೇತ್ಯರ್ಥಃ ॥**

ಗೋಷು ಎಂದು ಸಪ್ತಮೀ ವಿಭಕ್ತ್ಯಂತವಾಗಿರುವುದರಿಂದ ಗೋವುಗಳ ವಿಷಯದಲ್ಲಿ ಈಶ್ವರನಾಗಿರುವ ಇಂದ್ರನು ನಮ್ಮನ್ನು ರಕ್ಷಿಸಲಿ ಎಂದು ಅರ್ಥ. ಅಥವಾ ಅರ್ಯ ಶಬ್ದವು ಷಷ್ಠೀವಿಭಕ್ತ್ಯಂತವಾಗಿ ಶತ್ರು ಎಂದು ಅರ್ಥವನ್ನು

ಬೋಧಿಸುಸುವುದು. ಶತ್ರುವಿನ ಗೋವುಗಳನ್ನು ನಮಗೆ ಕೊಟ್ಟು ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸಿವೆ ಎಂದು ವಿವರಿಸುವರು.

**ಸಧಮಾದಃ ಸ್ಯಾಮ—ತೇ ತುಭ್ಯಂ ಸಹ ಚ ಮದಿತಾರಃ ಸಹ ಸೋಮಸ್ಯ ಪಾತಾರಃ ನಿತ್ಯಂ ಭವೇಮ ಇತ್ಯಾಶಾಸ್ಮಹೇ**--ಇಂದ್ರನಿಗಾಗಿ ಮದವನ್ನು ಉಂಟುಮಾಡುವ ಸೋಮರಸವನ್ನು ಅರ್ಪಿಸೋಣವೆಂದೂ, ನಿನ್ನ ಸಂಗಡ ಸೋಮರಸವನ್ನು ಪಾನಮಾಡುವ ಸ್ಥಿತಿಯು ನಮಗೆ ಉಂಟಾಗುವ ಹಾಗೆ ನೀನು ಅನುಗ್ರಹಿಸಬೇಕೆಂದೂ ಇಂದ್ರನನ್ನು ನಾವುಗಳು ಪ್ರಾರ್ಥಿಸುತ್ತೇವೆ ಎಂದು ವರ್ಣಿಸುವರು.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಮತ್**—ಸಪ್ತಮೀ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ದಸತ್**—ದಸು ಉಪಕ್ಷಯೇ. ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಪುಷಾದಿಯಲ್ಲಿ ಸೇರಿರುವುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಮಾಙ್ ಸಂಬಂಧವಿರುವುದರಿಂದ **ನಮಾಙ್ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಾಜಪ್ರಮಹಃ**—ವಾಜೈಃ ಧನೈಃ. ಪ್ರಕೃಷ್ಟಂ ಮಹಃ ತೇಜಃ ಯಸ್ಯ ಸಃ ವಾಜಪ್ರಮಹಃ. ಪಾದಾದಿಯಲ್ಲಿ ಪಠಿತವಾದುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ ಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವರಂತ**—ವೃಞ್ ವರಣೇ. ಧಾತು. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಶ್ನಾ ವಿಕರಣಕ್ಕೆ ಬದಲಾಗಿ ಶಪ್ ವಿಕರಣ ಬರುತ್ತದೆ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಝ ಪ್ರತ್ಯಯ ಬಂದಾಗ ಅದಕ್ಕೆ ಅಂತಾದೇಶ. ಶಪ್ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ರಪರವಾಗಿ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಭಜ**—ಭಜ ಸೇವಾಯಾಮ್ ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ತಿಙಂತ ನಿಘಾತ ಸ್ವರ ಬರುತ್ತದೆ.

**ಗೋಷು**—ಏಕಾಚಾದುದರಿಂದ ವಿಭಕ್ತಿಗೆ **ಸಾವೇಕಾಚಃ** (ಪಾ. ಸೂ ೬-೧-೧೬೮) ಎಂಬುದರಿಂದ ಪ್ರಾಪ್ತವಾದ ಉದಾತ್ತಸ್ವರಕ್ಕೆ **ನಗೋಶ್ವನ್ ಸಾವವರ್ಣ**—(ಪಾ. ಸೂ. ೬-೧-೧೮೨) ಎಂಬುದರಿಂದ ಪ್ರತಿಷೇಧ ಬರುತ್ತದೆ.

**ಅರ್ಯಃ**—**ಅರ್ಯಃ ಸ್ವಾಮಿವೈಶ್ಯಯೋಃ** ಎಂಬುದರಿಂದ ಸ್ವಾಮಿ ರೂಪ ಅರ್ಥದಲ್ಲಿ ನಿಪಾತಿತವಾಗಿದೆ. ಆದುದರಿಂದಲೇ **ಅರ್ಯಃ ಸ್ವಾಮ್ಯಾಖ್ಯಾ ಚೇತ್** (ಫಿ. ಸೂ. ೧೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮಂಹಿಷ್ಠಾಃ**—ಮಹಿ ವೃದ್ಧೌ. ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಕರ್ತೃ

ಯಲ್ಲಿ ತೃಚ್ ಪ್ರತ್ಯಯ. ತೃಜಂತದ ಮೇಲೆ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. **ತುರಿಷ್ಠೇ ಮೇಯಃಸು** (ಪಾ. ಸೂ. ೬-೪-೫೪) ಎಂಬುದರಿಂದ ಇಷ್ಠನ್ ಪರವಾದಾಗ ತೃಚಿಗೆ ಲೋಪ. ಮಂಹಿಷ್ಠ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸಧಮಾದಃ**—ಮದ ತೃಪ್ತಿಯೋಗೇ. ಧಾತು. ಚುರಾದಿ. ಸಹ ಮಾದಯಂತೇ ತೃಪ್ತಾ ಭವಂತಿ ಇತಿ ಸಧಮಾದಃ **ಕ್ವಿಪ್ ಚ** (ಪಾ ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಚುರಾದಿಯಾದುದರಿಂದ **ಸತ್ಯಾಪಪಾಶ-** (ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಬಂದಾಗ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ. ಮಾದ್ ಎಂದು ರೂಪವಾಗುತ್ತದೆ. ಇದಕ್ಕೆ ಜಸ್. **ಸಧಮಾದಸ್ಥಯೋಃ ಛಂದಸಿ** (ಪಾ. ಸೂ. ೬-೩-೯೬) ಎಂಬುದರಿಂದ ಛಂದಸ್ಸಿನಲ್ಲಿ ಸಹ ಶಬ್ದಕ್ಕೆ ಸಧ ಎಂಬ ಆದೇಶ ಬರುತ್ತದೆ. **ಸಧಮಾದಃ** ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸ್ಯಾಮ**—ಅಸ ಭುವಿ. ಧಾತು. ವಿಧಿಲಿಙ್ ಉತ್ತಮಪುರುಷ ಏಕವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. ಯಾಸುಟಾಗಮ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೫ ॥

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ**
**ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ**
**ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ**
**ಪ್ರಥಮಾಷ್ಟಕೇಽಷ್ಟಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಎಂಟನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥